ವಿಜ್ಞಾನ ನೇತ್ರಾಂಜನ

# ಶ್ರೀಮದ್ಭಾಗವತ

**(II, III, V)**



**ಅನುವಾದ : ವಿ. ಬಾದರಾಯಣಮೂರ್ತಿ**

**ಪುರಾಣ ವಿಜ್ಞಾನ ಮಂದಿರ**

151/12, ದೇವನಾಥಾಚಾರ್ ಬೀದಿ, ಚಾಮರಾಜಪೇಟೆ,

ಬೆಂಗಳೂರು–560 018.

"**Vijnāna Netranjana**"- **Srimad Bhagavatam**- II, III, V, Extracts by **V. Badarayana Murthy**. First Edition 1997. Published by "**Purana Vijnana Mandira**"-151/12, Devanathachar Street, Chamarajpet, Bangalore-18.

ಮೊದಲನೆ ಮುದ್ರಣ – 1997

**ಬೆಲೆ : ರೂ. 200/–**



ಪ್ರಕಾಶಕರು

**'ಪುರಾಣ ವಿಜ್ಞಾನ ಮಂದಿರ'**

151/12, ದೇವನಾಥಾಚಾರ್ ಬೀದಿ,
ಚಾಮರಾಜಪೇಟೆ, ಬೆಂಗಳೂರು–560 018.

ಮುದ್ರಕರು

**ಶ್ರೀರಂಗ ಪ್ರಿಂಟರ್ಸ್ ಅಂಡ್ ಬೈಂಡರ್ಸ್**

242, 10ನೇ ಮುಖ್ಯರಸ್ತೆ, 7ನೇ ಅಡ್ಡರಸ್ತೆ,
ಶ್ರೀರಾಮಾಂಜನೇಯ ರಸ್ತೆ
ಹನುಮಂತನಗರ, ಬೆಂಗಳೂರು–19.

# ಮುನ್ನುಡಿ

ಪುರಾತನ ಶಾಸ್ತ್ರಪದ್ಧತಿಗಳಲ್ಲಿ ನಂಬಿಕೆ ತಪ್ಪಿ ಹೋಗಲು ಕಲಿಯುಗದ ಆರಂಭವೇ ಕಾರಣವೆಂಬುದನ್ನು ಒಪ್ಪದಿದ್ದರೆ ವಿಧಿಯಿಲ್ಲ. ಸುಮಾರು ಕ್ರಿ.ಶ.1000ದ ವೇಳೆಗೆ ಕ್ರೈಸ್ತ ಪಾಂಡಿತ್ಯ, ತತ್ತ್ವವನ್ನು ಮರೆತು, ಕೇವಲ ಆಡಂಬರವಾಗಿ ಪರಿಣಮಿಸಿತು. 16ನೇ ಶತಮಾನದ ನೂತನ ವಿಚಾರಪರರಿಗೆ ಪಂಡಿತರು ಸರಿಯಾದ ಉತ್ತರಗಳನ್ನು ಕೊಡಲು ಅಸಮರ್ಥರಾದರು. ನವೀನ ಪಂಡಿತರು ಹುಟ್ಟಿಕೊಂಡು ಆಧುನಿಕ ವಿಜ್ಞಾನಮಾರ್ಗವನ್ನು ಹಿಡಿಯಬೇಕಾಯಿತು.

ಡಾರ್ವಿನ್ನನ ವಿಕಾಸವಾದಕ್ಕೆ ಜೋತುಬಿದ್ದು, ನಾಗರೀಕತೆಯ ಬೆಳವಣಿಗೆ, ತತ್ತ್ವಚಿಂತಕರಿಂದ ವೇದಾದಿ ಪ್ರಾಚೀನಗ್ರಂಥ ರಚನೆ, ಇತ್ಯಾದಿ ವಾದಗಳು ಹುಟ್ಟಿಕೊಂಡವು. ಪ್ರಾಕೃತ ತತ್ತ್ವವಿಜ್ಞಾನಿಗಳು ವಸ್ತುವಿಭಜನೆಯ ಕ್ರಮದಿಂದ ಪ್ರಪಂಚದ ಸೃಷ್ಟಿಯು ಹೇಗೆ ಆಗಿರಬಹುದೆಂದು ಚಿಂತಿಸಲಾರಂಭಿಸಿದರು. ಯಾವುದೋ ಅನಿರ್ದಿಷ್ಟ ವಸ್ತುರಾಶಿಯ ಮಹಾಸ್ಫೋಟದಿಂದ ಈಗಿನ ಪ್ರಪಂಚ ಸೃಷ್ಟಿಯಾಗಿರುವುದೆಂಬ ವಾದವನ್ನು ಮುಂದಿಟ್ಟರು. ಆದರೆ, ಆ ವಿಜ್ಞಾನಿಗಳಲ್ಲಿಯೇ ಒಮ್ಮತವಿಲ್ಲದಿರುವುದರಿಂದ, ಅವರ ಅಭಿಪ್ರಾಯಗಳು ಪೂರ್ಣನಂಬಿಕೆಗೆ ಅರ್ಹವಲ್ಲವೆಂದಾಯಿತು.

ಡಾರ್ವಿನ್ನನೇ ತನ್ನ ಸ್ವಂತ ದಿನಚರಿಯಲ್ಲಿ ತನ್ನ ವಾದದ ಪೊಳ್ಳುತನವನ್ನು ಒಪ್ಪಿಕೊಂಡು, ಪ್ರಪಂಚವು ಪ್ರಗತಿಗೆ ಬದಲಾಗಿ ಅವನತಿಯ ಕಡೆಗೆ ಸಾಗುತ್ತಿರುವುದೆಂದು ಒಪ್ಪಿಕೊಂಡಿರುವುದರಿಂದ, ಕಲಿಯುಗದ ಪ್ರಭಾವವೆಂಬ ಮಾತನ್ನು ಒಪ್ಪಬೇಕಾಗುವುದು. 'ಕಾಳು ಕೋಳಿ ಮೊಟ್ಟೆಯ ಗಾತ್ರ' (Grain as big as a Hen's egg) ಎಂಬ ಪಾಶ್ಚಾತ್ಯ ಸಾಹಿತಿಯ ಕಥೆಯಲ್ಲಿಯೂ ಪ್ರಪಂಚದ ಅವನತಿಯ ವಿಚಾರವೇ ಕಂಡುಬರುತ್ತದೆ.

ಭಗವಂತ, ಇಂತಹ ಕಲಿಯುಗವನ್ನೇಕೆ ಪ್ರವರ್ತಿಸಿದನೆಂದು ಯಾರಾದರೂ ಕೇಳಬಹುದು. ಭಗವದ್ಗೀತೆಯ 16, 17, 18ನೇ ಅಧ್ಯಾಯಗಳನ್ನು ಸರಿಯಾಗಿ ಅರ್ಥಮಾಡಿಕೊಂಡು ಪ್ರಪಂಚದಲ್ಲಿ ಯೋಗ್ಯರು, ಅಯೋಗ್ಯರು, ಮಧ್ಯಮರು ಎಂದು ಜೀವರು ತ್ರಿವಿಧರಾಗಿರುವರೆಂಬುದನ್ನು ನಾವು ಮೊದಲು ಗಮನಿಸಬೇಕು.

ಈ ಪ್ರಪಂಚದಲ್ಲಿ ತ್ರಿವಿಧ ಜೀವರ ಸಂತೆಯನ್ನು ಕೂಡಿಸಿ ಅವರವರಿಗೆ ಯೋಗ್ಯಗತಿಗಳನ್ನು ಹೊಂದಿಸುವ ಪರಮಾತ್ಮನ ಲೀಲೆಯ ರಹಸ್ಯವನ್ನು ನುರಿತ ಗುರುಗಳ ಉಪದೇಶದಿಂದಲೇ ತಿಳಿಯಬೇಕು.

ಕೃತಾದಿ ಯುಗಗಳಲ್ಲಿ ರಾಕ್ಷಸರಾಗಿ ಹಾವಳಿ ಮಾಡುತ್ತಿದ್ದವರು ಈ ಕಲಿಯುಗದಲ್ಲಿ ಜನಸಾಮಾನ್ಯರಂತೆಯೇ ಇದ್ದು ತಮ್ಮ ಕೈವಾಡ ತೋರಿಸುತ್ತಾರೆ. ಸುಜ್ಞಾನವನ್ನು ತಮ್ಮ ಅಜ್ಞಾನ ಜಾಲದಿಂದ ಮುಚ್ಚಲೆತ್ನಿಸುತ್ತಾರೆ. ಆದರೆ, ಸುಜ್ಞಾನವನ್ನು ಬಯಸುವವರಿಗೂ, ಅವರ ಪಕ್ಷ ಹಿಡಿಯುವ ಮಧ್ಯಮ ಜೀವರಿಗೂ ಈಗ ಸುಲಭವಾಗಿ ಸುಜ್ಞಾನ ನಿಧಿಯನ್ನು ಸೂರೆಗೊಳ್ಳಲು ಸುವರ್ಣವಕಾಶವಿದೆ. ಅಂತಹ ಅವಕಾಶ ಕಲ್ಪಿಸುವುದು ಶ್ರೀಮದ್ಭಾಗವತ ಮತ್ತು ಅದನ್ನನುಸರಿಸಿದ, ಮಾತೃಭಾಷೆಗಳಲ್ಲಿಯೇ ದೊರೆಯುವ ಸಂತಸಾಹಿತ್ಯ. ಇವುಗಳನ್ನು ಶ್ರದ್ಧೆಯಿಂದ ಅಭ್ಯಾಸ ಮಾಡುವವರಿಗೆ, ಕೇವಲ ಮಾನವ ಬುದ್ಧಿಯಿಂದ ಪ್ರಪಂಚದ ರಹಸ್ಯವನ್ನು ಭೇದಿಸಲು ಹೊರಟಿರುವ ಆಧುನಿಕ ವಿಜ್ಞಾನಿಗಳ ಅಜ್ಞಾನ, ಮೊಂಡುತನ ಎಂತಹುದೆಂಬುದರ ಅರಿವಾಗುವುದು.

'ವಿಜ್ಞಾನ ನೇತ್ರಾಂಜನ'ವೆಂಬ ಈ ಸಂಪುಟದಲ್ಲಿ ಶ್ರೀಮದ್ಭಾಗವತಾದಿ ಶಾಸ್ತ್ರಗಳಲ್ಲಿ ಖಚಿತವಾಗಿ, ಸಕ್ರಮವಾಗಿ, ಪ್ರಾಮಾಣಿಕವಾಗಿ ಸೃಷ್ಟಿಯ ರಹಸ್ಯ ಲೋಕಗಳ ವಿನ್ಯಾಸ, ಮತ್ತು ಕಾಲಚಕ್ರದ ವೈಭವ–ಇವುಗಳನ್ನು ಚಿತ್ರಿಸಿರುವುದನ್ನು ರೂಪುಗೊಳಿಸಲಾಗಿದೆ. ಈಗಿನ ವಿಜ್ಞಾನಿಗಳು ದುಂದುವೆಚ್ಚದಿಂದ, ಪರಮ ಸಾಹಸದಿಂದ, ಕಂಡುಹಿಡಿದಿರುವ ಅನೇಕ ಸಂಗತಿಗಳು ಭಾಗವತ ಶಾಸ್ತ್ರದಲ್ಲಿ ಹೆಚ್ಚು ಸಮರ್ಪಕವಾಗಿ ನಿರೂಪಿಸಲ್ಪಟ್ಟಿರುವುದನ್ನು ಎತ್ತಿ ತೋರಿಸಲಾಗಿದೆ.

ಭಗವದ್ಭಕ್ತರಾದ ಸುಜ್ಞಾನಮಾರ್ಗದವರು ಇದರ ಪ್ರಯೋಜನವನ್ನು ಪಡೆದು ಕೃತಾರ್ಥರಾಗಲೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

ಶಾಸ್ತ್ರಗಳ ಮರ್ಮಗಳು ಯಥಾಶಕ್ತಿ ಅರ್ಥವಾಗುವಂತೆ ಅನುಗ್ರಹಿಸಿದ, ಶ್ರೀ ಶ್ರೀಪಾದರಾಜಮಠದ ಪರಂಪರೆಯಲ್ಲಿ ವಿರಾಜಮಾನರಾಗಿದ್ದ, ಸುಪ್ರಸಿದ್ಧ ಶ್ರೀ ಶ್ರೀ ದಯಾನಿಧಿತೀರ್ಥ ಶ್ರೀಪಾದಂಗಳವರಿಗೆ ಅನಂತಾನಂತ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

**'ಗುಹಾಶಯಾಯೈವನದೇಹಮಾನಿನೇ', 'ಭಗವಾನ್ ಸ್ವಕೃತೇನ ತುಷ್ಯೇತ್'**

**ವಿ. ಬಾದರಾಯಣ ಮೂರ್ತಿ**

(ಕನಕದಾಸರ ಕಗ್ಗಂಟು–"ನಾನು ಹೋದರೆ ಹೋಗಬಹುದು.")

# ಶ್ರೀಮದ್ಭಾಗವತದಲ್ಲಿ ಸೃಷ್ಟಿರಹಸ್ಯ ಮತ್ತು ವಿಶ್ವಾತ್ಮವೈಭವ

## (ಎರಡು ಮತ್ತು ಮೂರನೇ ಸ್ಕಂಧಗಳ ಸಂಗ್ರಹ)

### ಪೀಠಿಕೆ

ಪರೀಕ್ಷಿದ್ರಾಜರು ಪ್ರಾಯೋಪವೇಶ ದೀಕ್ಷಿತರಾಗಿ ಕುಳಿತಾಗ, ದೇವರ್ಷಿಗಳೂ ಮಹರ್ಷಿಗಳೂ ಅವರ ಬಳಿಸಾರಿ ಕುಳಿತಿರುವಲ್ಲಿ, ಶ್ರೀ ಶುಕಾಚಾರ್ಯರು ತಾವಾಗಿ ಬಂದು ಸೇರಿದರು. ಪರೀಕ್ಷಿದ್ರಾಜನಿಂದ ಪೂಜಿತರಾಗಿ, ಆತನ ಪ್ರಶ್ನೆಗಳಿಗೆ ಉತ್ತರ ಕೊಡಲಾರಂಭಿಸಿದರು. ಆ ರಾಜನ ಪ್ರಶ್ನೆಗಳಲ್ಲಿ ಅತಿಮುಖ್ಯವಾದುದು,

**ಯಚ್ಛ್ರೋತವ್ಯಮಥೋ ಜಾಪ್ಯಂ ಯತ್ಕರ್ತವ್ಯಂ ನೃಭಿಃ ಸದಾ ।**
**ಸ್ಮರ್ತವ್ಯಂ ಭಜನೀಯಂ ವಾ ಬ್ರೂಹಿ ಯದ್ವಾ**
**ವಿಪರ್ಯಯಂ ॥ (೧–೨೦–೧೪) ॥**

ನೃಭಿಃ = ಶ್ರೇಷ್ಠವಾದ ನರಜನ್ಮವೆತ್ತಿ ಬಂದವರಿಂದ; ಸದಾ = ಎಲ್ಲಾ ಕಾಲಗಳಲ್ಲಿಯೂ; ಶ್ರೋತವ್ಯಂ = ಗಮನಿಸಿ ಕೇಳಬೇಕಾದುದು; ಅಥ = ಅಲ್ಲದೆ; ಜಾಪ್ಯಂ = ನಿರಂತರ ಜಪಿಸಬೇಕಾದುದು; ಯತ್ = ಯಾವುದೋ; ಯತ್ ಕರ್ತವ್ಯಂ = ಆಚರಿಸಬೇಕಾದ ಕರ್ಮ ಯಾವುದೋ; ವಾ = ಮತ್ತು; ಸ್ಮರ್ತವ್ಯಂ = ಸ್ಮರಿಸುತ್ತಿರಬೇಕಾದುದು; ಭಜನೀಯಂ = ಸೇವಿಸಲ್ಪಡಬೇಕಾದುದು; (ಯತ್ = ಯವುದೋ); ಯತ್ ವಾ ವಿಪರ್ಯಂ = ಮತ್ತು ಧರ್ಮವಿರುದ್ಧವೆಂದು ತ್ಯಜಿಸಬೇಕಾದುದು ಯಾವುದೋ; (ತತ್ = ಅದನ್ನು ಕುರಿತು); ಬ್ರೂಹಿ = ಉಪದೇಶ ಮಾಡಿರಿ.

ಭಾರತ ಭೂಮಿಯಲ್ಲಿ ಜನ್ಮವೆತ್ತಿ ಬಂದಿರುವುದು ಸಾರ್ಥಕ ಜೀವನವನ್ನು ನಡೆಸಿ ನಿತ್ಯಸುಖಪ್ರದವಾದ ಮುಕ್ತಿಯ ಕಡೆಗೆ ಸಾಗುವುದಕ್ಕಾಗಿಯೇ ಹೊರತು, ಅಲ್ಪಸುಖತೃಪ್ತರಾಗಿ ಕಾಲ ಕಳೆಯುವುದಕ್ಕಲ್ಲ ಎಂಬುದನ್ನು ಗಮನದಲ್ಲಿಟ್ಟುಕೊಂಡು ಪರೀಕ್ಷಿದ್ರಾಜರು ಇಂತಹ ಪ್ರಶ್ನೆಯನ್ನು ಮಾಡಿದ್ದಾರೆ. ಇಂತಹ ಉತ್ತಮವಾದ ಪ್ರಶ್ನೆಗೆ ಶ್ರೀಶುಕಾಚಾರ್ಯರು ಉತ್ತರ ನೀಡುತ್ತಾರೆ.

# ಶ್ರೀಮದ್ಭಾಗವತ ದ್ವಿತೀಯಸ್ಕಂಧ ಪ್ರಾರಂಭ

# ಮೊದಲನೆಯ ಅಧ್ಯಾಯ

**ಶ್ರೀಶುಕ ಉವಾಚ** :- ಶ್ರೀಶುಕಾಚಾರ್ಯರು ನುಡಿದರು.

**ವರೀಯಾನೇಷ ತೇ ಪ್ರಶ್ನಃ ಕೃತೋ ಲೋಕಹಿತಂ ನೃಪ ।**
**ಆತ್ಮವಿತ್ಸಂಮತಃ ಪುಂಸಾಂ ಶ್ರೋತವ್ಯಾದಿಷು ಯಃ ಪರಃ ॥ ೧ ॥**

ನೃಪ = ಎಲೈ ರಾಜನೇ; ತೇ ಕೃತಃ = ನಿನ್ನಿಂದ ಉಕ್ತವಾದ; ಏಷಃ ಪ್ರಶ್ನಃ = ಈ ಪ್ರಶ್ನೆಯು; ಲೋಕಹಿತಂ = ಕೇವಲ ನಿನಗೆ ಮಾತ್ರವಲ್ಲದೆ, ಲೋಕಮಂಗಳದಾಯಕವಾಗಿರುವುದು; (ಆದುದರಿಂದ) ವರೀಯಾನ್ = ಇದು ಬಹುಶ್ರೇಷ್ಠವಾದ ಪ್ರಶ್ನೆ; ಶ್ರೋತವ್ಯಾದಿಷು = ಯಾವುದನ್ನು ಕೇಳಬೇಕು, ಯಾವುದನ್ನು ಜಪಿಸಬೇಕು ಇತ್ಯಾದಿಯಾಗಿ ನೀನು ಕೇಳಿದ ಪ್ರಶ್ನೆಗಳಲ್ಲಿ; ಪುಂಸಾಂ = ಮಾನವರಿಗೆ; ಯಃ ಪರಃ = ಯಾವ ಭಗವಂತ, ಪುರುಷೋತ್ತಮನಾಗಿ ಲೋಕಬಂಧುವಾಗಿರುವನೋ ಅವನ ವಿಷಯಕವಾದ ಪ್ರಶ್ನೆಯು; ಆತ್ಮವಿತ್ ಸಂಮತಃ = ಜ್ಞಾನಿವರೇಣ್ಯರಾದ ಬ್ರಹ್ಮಾದಿಗಳಿಗೆ ಸಂಮತವಾದುದು.

ಪರೀಕ್ಷಿದ್ರಾಜನ ಪ್ರಶ್ನೆಗಳಿಗೆ ಉತ್ತರರೂಪವಾಗಿ ಶ್ರೀಶುಕಾಚಾರ್ಯರ ಮುಖದಿಂದ ಪ್ರೋಕ್ತವಾದ ಶ್ರೀಮದ್ಭಾಗವತಶಾಸ್ತ್ರವು ನಿಜವಾಗಿ ಲೋಕಹಿತಕರವಾದುದರಿಂದ, ಪರೀಕ್ಷಿದ್ರಾಜರ ಪ್ರಶ್ನೆಯನ್ನು ಶುಕಾಚಾರ್ಯರು ಪ್ರಶಂಸಿಸಿದ್ದಾರೆ.

**ಶ್ರೋತವ್ಯಾನೀಹ ರಾಜೇಂದ್ರ ನೃಣಾಂ ಸಂತಿ ಸಹಸ್ರಶಃ ।**
**ಅಪಶ್ಯತಾಮಾತ್ಮ ತತ್ವಂ ಗೃಹೇಷು ಗೃಹಮೇಧಿನಾಂ ॥ ೨ ॥**

ರಾಜೇಂದ್ರ = ಎಲೈ ಪರೀಕ್ಷಿದ್ರಾಜಾ; ಆತ್ಮತತ್ವಮ್‌ಅಪಶ್ಯತಾಂ = ಪರಮಾತ್ಮನ ಸರ್ವೋತ್ತಮತ್ವವನ್ನೂ, ಲಕ್ಷ್ಮೀಬ್ರಹ್ಮಾದಿಗಳ ತಾರತಮ್ಯವನ್ನೂ ತಿಳಿಯಲು ಪ್ರಯತ್ನಿಸದ; ಗೃಹೇಷು ಗೃಹಮೇಧಿನಾಂ = ವೇದೋಕ್ತ ಪಂಚಮಹಾ ಯಜ್ಞಗಳಲ್ಲಿಯೂ, ಕೇವಲ ಗೃಹ ಕೃತ್ಯಗಳಲ್ಲಿಯೂ ಆಸಕ್ತರಾದ, ನೃಣಾಂ = ಮಾನವರಿಗೆ; ಇಹ = ಈ ಲೋಕದ ವಿಷಯವಾಗಿ; ಶ್ರೋತವ್ಯಾನಿ = ಹೇಳಿಕೇಳಬೇಕಾದಂತಹ ವಿಷಯಗಳು; ಸಹಸ್ರಶಃ ಸಂತಿ = ಅನೇಕಾನೇಕವಾಗಿವೆ.

ಯಜ್ಞಗಳನ್ನು ವಿವರಿಸುವ ಕರ್ಮಕಾಂಡವೇ ಅರಣ್ಯದಂತೆ ವಿಸ್ತಾರವೂ, ಗಹನವೂ ಆದುದು. ಅದರ ಜೊತೆಗೆ ಲೌಕಿಕ ವಿಚಾರಗಳೂ ಸೇರಿಕೊಂಡುಬಿಟ್ಟರೆ ಅವುಗಳನ್ನು ಕುರಿತು ತಿಳಿಯಬೇಕಾದ ವಿಷಯಗಳಿಗೆ ಕೊನೆಮೊದಲಿಲ್ಲ. ಆದರೆ, ಮುಖ್ಯವಾಗಿ ತಿಳಿಯಬೇಕಾಗಿರುವುದು, ಪರತತ್ವ.

**ನಿದ್ರಯಾ ಹ್ರಿಯತೇ ನಕ್ತಂ ವ್ಯವಾಯೇನ ನವಂ ವಯಃ ।**
**ದಿವಾಚಾರ್ಥೇಹಯಾ ರಾಜನ್ಕುಟುಂಬ ಭರಣೇನವಾ ॥೩ ॥**

**ದೇಹಾಪತ್ಯ ಕಳತ್ರಾದಿಷ್ವಾತ್ಮದೈನ್ಯೇಷ್ವಸತ್ಸ್ವಪಿ ।**
**ತೇಷು ಪ್ರಸಕ್ತೋ ನಿಧನಂ ಪಶ್ಯನ್ನಪಿ ನ ಪಶ್ಯತಿ ॥ ೪ ॥**

ನಕ್ತಂ = ರಾತ್ರಿಯ ಕಾಲವು; ನಿದ್ರಯಾ = ನಿದ್ದೆಯಿಂದಲೂ; ನವಂ ವಯಃ = ಪ್ರಾಯ ವಯಸ್ಸಿನ ಕಾಲವು; ವ್ಯವಾಯೇನ = ಕಾಮೋಪಭೋಗದಿಂದಲೂ; ಹ್ರಿಯತೇ = ಕಳೆದು ಹೋಗುತ್ತದೆ; ದಿವಾಚ = ಹಗಲು ಹೊತ್ತಾದರೋ; ಅರ್ಥಈಹಯಾ = ಭಗವತ್ಪೂಜಾರ್ಥವಲ್ಲದ ಸಂಪತ್ತಿನ ಗಳಿಕೆಯಿಂದಲೂ; ವಾ = ಅಥವ; ಕುಟುಂಬ ಭರಣೇನ = ಸಂಸಾರದ ನಿರ್ವಹಣೆಯಿಂದಲೂ; ಹ್ರಿಯತೇ = ಕಳೆದು ಹೋಗುತ್ತದೆ; ದೇಹ ಅಪತ್ಯ ಕಳತ್ರಾದಿಷು = ಸ್ವದೇಹ ಪೋಷಣೆ ಮತ್ತು ಹೆಂಡತಿಮಕ್ಕಳ ಯೋಗಕ್ಷೇಮ ನಿರ್ವಾಹದಲ್ಲಿಯೂ; ಅಪಿ = ಇನ್ನೂ; ಆತ್ಮದೈನ್ಯೇಷು ಅಸತ್ಸು = ಗೌರವ ಹಾನಿಕರಗಳಾದ ಅಸಾಧುಕಾರ್ಯಗಳಲ್ಲಿಯೂ; ತೇಷು ಪ್ರಸಕ್ತಃ = ಅಂತಹ ಕಾರ್ಯಗಳಲ್ಲಿಯೇ ಆಸಕ್ತಿಹೊಂದಿದವನು; ನಿಧನಂ = ಎಲ್ಲರಿಗೂ ಮರಣ ಉಂಟಾಗುವುದನ್ನು; ಪಶ್ಯನ್ ಅಪಿ = ನೋಡುತ್ತಿದ್ದರೂ ಕೂಡ; ನ ಪಶ್ಯತಿ = ತನಗೂ ಅದು ಸಂಭವಿಸುವುದೆಂಬುದನ್ನು ಕಾಣುವುದಿಲ್ಲ, ಮನಸ್ಸಿಗೆ ತಂದುಕೊಳ್ಳುವುದಿಲ್ಲ.

ಮಾನವರ ಆಯುರ್ಮಾನಕ್ಕೆ ಮಿತಿಯುಂಟೆಂಬುದನ್ನೂ, ತಿಳಿಯಲೇ ಬೇಕಾದ ಪರತತ್ವ ಉಂಟೆಂಬುದನ್ನೂ ಗಮನಕ್ಕೆ ತಂದು ಕೊಳ್ಳದವರ ಜೀವನ ವ್ಯರ್ಥವಾಗಿ ಹೋಗುವುದು, ಮತ್ತೆ ಮತ್ತೆ ಸಂಸಾರಕ್ಕೆ ಕಾರಣವಾಗುವುದು, ಪರಗತಿ ಸಾಧನೆಯು ಇಲ್ಲವಾಗುವುದು. ಅಂತಹ ಸಾಧನೆಯನ್ನು ಮಾಡಿಕೊಳ್ಳದಿದ್ದರೆ ನಿರ್ದುಃಖ ನಿತ್ಯಸುಖ ಹೇಗೆ ದೊರಕೀತು ?

**ತಸ್ಮಾದ್ಭಾರತ ಸರ್ವಾತ್ಮಾ ಭಗವಾನ್ಹರಿರೀಶ್ವರಃ ।**
**ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾಭಯಂ ॥ ೫ ॥**

ಭಾರತ = ಅಯ್ಯಾ ಪರೀಕ್ಷಿದ್ರಾಜಾ; ತಸ್ಮಾತ್ = ಈ ಹಿಂದೆ ಹೇಳಿದ ಕಾರಣದಿಂದ; ಅಭಯಂ ಇಚ್ಛತಾ = ಸಂಸಾರ ಭಯದಿಂದ ಮುಕ್ತಿ ಹೊಂದಿ, ನಿತ್ಯಸುಖ ಸ್ಥಾನವಾದ ವೈಕುಂಠ ಪ್ರಾಪ್ತಿಯಾಗಬೇಕಾದರೆ; ಸರ್ವಾತ್ಮಾ = ಸರ್ವರಿಗೂ ಆತ್ಮಸ್ವರೂಪನಾದ; ಭಗವಾನ್ = ಸರ್ವಗುಣ ಪೂರ್ಣನೂ, ಬ್ರಹ್ಮಾದಿ ಸರ್ವರಿಂದ ಪೂಜ್ಯನೂ ಆದ; ಈಶ್ವರಃ = ಸರ್ವರಿಗೂ ಸ್ವಾಮಿಯಾದ; ಹರಿಃ = ಸಕಲಪಾಪಹರನೂ, ಸರ್ವಶ್ರೇಷ್ಠನೂ ಆದ ಶ್ರೀಹರಿಯು; ಶ್ರೋತವ್ಯಃ = ಕಥಾಶ್ರವಣಕ್ಕೆ ಯೋಗ್ಯನಾದವನು; ಚ = ಮತ್ತು; ಸ್ಮರ್ತವ್ಯಃ = ಸತತವಾಗಿ ಸ್ಮರಿಸಲ್ಪಡಬೇಕಾದವನು; ಚ = ಮತ್ತು, ಕೀರ್ತಿತವ್ಯಃ = ಸ್ತುತಿಸಲ್ಪಡಬೇಕಾದವನು.

ಕೀರ್ತನವೆಂಬುದು ಮನನವೇ. ಶ್ರವಣ, ಮನನ, ಸ್ಮರಣ(ಧ್ಯಾನ)ಗಳು ಅಜ್ಞಾನ ಸಂಶಯಾದಿಗಳನ್ನು ಕಳೆದು, ಭಗವದಪರೋಕ್ಷಕ್ಕೆ ಕಾರಣಗಳಾಗಿ, ತತ್ವನಿಶ್ಚಯವನ್ನುಂಟು ಮಾಡುವುವು. ತತ್ವನಿಶ್ಚಯವು ದೃಢಭಕ್ತಿಗೆ ಆಧಾರವಾಗುವುದು. ಆದರಿಂದ ಮೋಕ್ಷ ಲಭಿಸುವುದು.

ಜೀವರು ಜಡಭಿನ್ನರಾಗಿ, ಜ್ಞಾನಾನಂದ ಸ್ವರೂಪ ಉಳ್ಳವರಾದರೂ, ಅವರ ಜ್ಞಾನಾನಂದಗಳ ಅಭಿವ್ಯಕ್ತಿಯು ಜೀವರಿಗೆ ಜೀವನಾಗಿ, ಅನಾದಿ ನಿತ್ಯಬಂಧುವಾಗಿರುವ ಅಂತರಾತ್ಮನಿಂದಲೇ ಆಗಬೇಕು. ಭಿನ್ನ ಜೀವರ ಸಾರ್ವಾಶಯಗಳಲ್ಲಿಯೂ ಅವನು ಏಕಾತ್ಮಾ, ಸರ್ವಾತ್ಮಾ. ಶ್ರೀಶಂಕರಾಚಾರ್ಯರೂ ಕೂಡ "ತ್ವಯಿ ಮಯಿ ಸರ್ವತ್ರೈಕೋ ವಿಷ್ಣುಃ" ಎಂದು ದ್ವೈತಭಾವವನ್ನೇ ಎತ್ತಿ ಹಿಡಿದಿರುವರು. ಅವರ ಮಾತುಗಳಲ್ಲಿ ಕೆಲವು ಉದ್ದೇಶ ಪೂರ್ವಕವಾಗಿ ಮೋಹಕಗಳಾಗಿರುವುದರಿಂದ ಜೀವ ಬ್ರಹ್ಮರು ಒಂದೇ ಎಂಬ ಅದ್ವೈತವಾದವು ಎದ್ದು ನಿಲ್ಲಲು ಕಾರಣವಾಗಿದೆ. ಅದು ಸಾಧಕವೇ ಭಾಧಕವೇ ಎಂಬುದನ್ನು ಬುದ್ಧಿವಂತರಾದ ಓದುಗರು ನಿಶ್ಚಯಿಸಿಕೊಳ್ಳಬಹುದು.

'ಹರ'ನೆಂದರೆ ವಿಶ್ವಹರ, ಪಾತಕ ಹರ, 'ಹರಿ' ಎಂದರೆ ಹರನಲ್ಲಿ ಹರ ಮತ್ತು ಸಿಂಹದಂತೆ ಸರ್ವೇಶ್ವರ. ಆದುದರಿಂದ ಮುಕ್ತಿ ಪ್ರದನಾದವನು ಶ್ರೀಹರಿ.

**ಏತಾವಾನ್ ಸಾಂಖ್ಯಯೋಗಾಭ್ಯಾಂ ಸ್ವಧರ್ಮಪರಿನಿಷ್ಠಯಾ ।**
**ಜನ್ಮಲಾಭಃ ಪರಃ ಪುಂಸಾಮಂತೇ ನಾರಾಯಣ ಸ್ಮೃತಿಃ ॥ ೬ ॥**

ಸಾಂಖ್ಯ ಯೋಗಾಭ್ಯಾಂ = ವೇದಾದಿ ಶಾಸ್ತ್ರಜನ್ಯವಾದ ತತ್ವಜ್ಞಾನದಿಂದಲೂ, ಪೂಜಾ ಮತ್ತು ಯೋಗಾಭ್ಯಾಸಾದಿಗಳಿಂದಲೂ; ಸ್ವಧರ್ಮಪರಿನಿಷ್ಠಯಾ = ವರ್ಣಾಶ್ರಮಾಚಾರಗಳ ಅನುಸರಣೆಯಿಂದಲೂ; ಅಂತೇ = ಮರಣ ಸಮಯದಲ್ಲಿ;

ನಾರಾಯಣಸ್ಮೃತಿಃ = ಶ್ರೀಮನ್ನಾರಾಯಣನ ಸ್ಮರಣೆಯೆಂಬುದು; ಏತಾವಾನ್ = ಇದೇನೇ; ಪುಂಸಾಂ = ಜನ್ಮವೆತ್ತಿದ ಜೀವರಿಗೆ; ಪರಃ = ಸರ್ವೋತ್ತಮವಾದ; ಜನ್ಮಲಾಭಃ = ಹುಟ್ಟಿದುದರ ಸಾರ್ಥಕ ಲಾಭವು.

ಪರೀಕ್ಷಿದ್ರಾಜರ ಪ್ರಶ್ನೆಗೆ ಇದು ಉತ್ತರ. ವರ್ಣಾಶ್ರಮಾಚಾರ, ಭಗವತ್ಪೂಜಾ ಮತ್ತು ಯೋಗಾಭ್ಯಾಸ, ಜ್ಞಾನಸಂಪಾದನೆ ಮತ್ತು ಜ್ಞಾನ ಮಾರ್ಗಾನುಸರಣೆ, ಇವು ಜೀವರಿಗೆ ಕಾಲಾನುಸಾರ, ಸಾಧನೆಯ ಹಂತಗಳಿಗೆ ಅನುಸಾರ ಅಗತ್ಯವಾದುವು. ವರ್ಣಾಶ್ರಮಾಚಾರಪಾಲನೆಯೂ, ಭಗವತ್ಪೂಜಾದಿ ಕರ್ಮಗಳೂ, ತತ್ವಜ್ಞಾನಕ್ಕೆ ಸಹಕಾರಿಗಳಾದುವು; ಜ್ಞಾನವನ್ನೇ ಪ್ರಧಾನವಾಗಿ ಮಾಡಿಕೊಂಡು ಕರ್ಮವನ್ನು ಬಿಡದೆ ಯಥೋಚಿತವಾಗಿ ಆಚರಿಸಿಕೊಂಡು ಜೀವನವನ್ನು ನಾಗಿಸುವುದು ಕಡೆಯ ಹಂತ. "ನಿಯತಸ್ಯ ತು ಸನ್ಯಾಸಃ ಕರ್ಮಣೋ ನೋಪಪದ್ಯತೇ" ಎಂಬ ಗೀತಾಚಾರ್ಯನ ಮಾತು ಮನನೀಯವಾದುದು. ಕಡೆಕಡೆಯ ಹಂತಗಳಲ್ಲಿ ಯೋಗಾಭ್ಯಾಸದ ಅವಶ್ಯಕತೆ ಇಲ್ಲ. ಜನ್ಮಾಂತರಗಳ ಅಭ್ಯಾಸಬಲದಿಂದ ಧ್ಯಾನ ಸಹಜವಾಗಿ ಒದಗಿ ಬರುವುದು. ಲೋಕಶಿಕ್ಷಾರ್ಥವಾಗಿ ವರ್ಣಾಶ್ರಮೋಚಿತ ಕರ್ಮಗಳನ್ನು ಸಂಕುಚಿತ ರೀತಿಯಲ್ಲಾದರೂ ಆಚರಿಸಲೇಬೇಕು. ಅವಧೂತರಿಗೆ ಮಾತ್ರ ಈ ನಿಯಮವಿಲ್ಲ. ನಿಯತ ಕರ್ಮವೆಂದರೆ, ಭಗವತ್ಸಂಕಲ್ಪಾನುಸಾರ ಆಯಾ ವ್ಯಕ್ತಿಯು ಕಡೆಯತನಕ ಮಾಡಲೇಬೇಕಾದ ಸಕಲ ವೈದಿಕ ಲೌಕಿಕ ಕರ್ಮಗಳೂ ಗ್ರಾಹ್ಯ. ಅಂತ್ಯಕಾಲದಲ್ಲಿ ನಾರಾಯಣ ಸ್ಮರಣೆ ಎಂಬುದು ಅಂತರಾತ್ಮನ ಧ್ಯಾನರೂಪವಾಗಿರಬೇಕು. ಮೋಕ್ಷ ಸಿಗುವುದೆಂಬ ಆಸೆಯಿಂದ, ಸಾಯುವಾಗ 'ನಾರಾಯಣಾ' ಎಂದು ಗಟ್ಟಿಯಾಗಿ ಕೂಗುವುದಾಗಲೀ, ಯಾರಾದರೂ ಸಾಯುವವರ ಕಿವಿಯಲ್ಲಿ ನಾರಾಯಣಾ ಎಂದು ಕೂಗಿ ಹೇಳುವುದಾಗಲೀ ಪ್ರಯೋಜನಕಾರಿಯಲ್ಲ. ಹಾಗೆ ಕೂಗಿ ಹೇಳಿದಾಗ, ಮರಣೋನ್ಮುಖನಾದ ವ್ಯಕ್ತಿಗೆ ಅಂತರಾತ್ಮನ ಸ್ಮರಣೆ ಬಂದರೆ ಅದು ಸಾರ್ಥಕವೇಸರಿ.

**ಪ್ರಾಯೇಣ ಮುನಯೋ ರಾಜನ್ನಿವೃತ್ತಾ ವಿಧಿ ನಿಷೇಧತಃ ।**
**ನೈರ್ಗುಣ್ಯಸ್ಥಾರಮಂತೇಸ್ಮಗುಣಾನು ಕಥನೇ ಹರೇಃ ॥ ೭ ॥ ।**

ರಾಜನ್ = ಎಲೈ ಪರೀಕ್ಷಿದ್ರಾಜಾ; ಮುನಯಃ = ಮನನಶೀಲರಾದ ಜ್ಞಾನಿಗಳು; ಪ್ರಾಯೇಣ = ಬಹಳ ಮಟ್ಟಿಗೆ; ವಿಧಿನಿಷೇಧತಃ ನಿವೃತ್ತಾಃ = ವಿಧಿನಿಷೇಧಗಳಿಗೆ ಒಳಪಟ್ಟ ವರ್ಣಾಶ್ರಮವಿಹಿತ ಕರ್ಮಗಳ ನಿರ್ಬಂಧವಿಲ್ಲದವರಾಗಿ; ನೈರ್ಗುಣ್ಯಸ್ಥಾಃ = ಗುಣಾತೀತನಾದ ಭಗವಂತನ ಧ್ಯಾನದಲ್ಲಿಯೇ ನಿರತರಾಗಿ; ಹರೇಃ = ಶ್ರೀಹರಿಯ; ಗುಣಾನುಕಥನೇ = ಮಹಿಮೆಗಳನ್ನು ಹೇಳಿ ಕೇಳುವುದರಲ್ಲಿ; ರಮಂತೇ ಸ್ಮ = ಬಾರಿಬಾರಿಗೂ ಸಂತೋಷ ಹೊಂದಿರುತ್ತಾರೆ.

“ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತು ಚಿತ್।
ಸರ್ವೇವಿಧಿನಿಷೇಧಾಸ್ಯುಃ ಏತಯೋರೇವ ಕಿಂಕರಾಃ ॥ ಎಂಬ ಪುರಾಣೋಕ್ತಿಯನ್ನು ಶ್ರೀಮದಾನಂದತೀರ್ಥರು ತಮ್ಮ ಸದಾಚಾರಸ್ಮೃತಿಯಲ್ಲಿ ಎತ್ತಿ ಹೇಳಿದ್ದಾರೆ. ಕರ್ಮಗಳಿಂದ ಸಾಧಿಸಬೇಕಾದುದು ಜ್ಞಾನ. ಜ್ಞಾನದ ಪರಿಣಾಮ ಧ್ಯಾನ. ಧ್ಯಾನದಿಂದ ಮೈಮರೆತಾಗ ಅಥವಾ ಶ್ರೀಹರಿಗುಣಾನುಕಥನದಲ್ಲಿಯೇ ತಲ್ಲೀನರಾಗಿರುವಾಗ ವರ್ಣಾಶ್ರಮಾಚಾರ ವಿಹಿತಗಳಾದ ಎಲ್ಲಾ ಕರ್ಮಗಳನ್ನೂ ಮಾಡಬೇಕೆಂಬ ನಿಯಮವಿಲ್ಲ. ಅವುಗಳನ್ನು ಸಂಕ್ಷೇಪಿಸಿ, ಅಗತ್ಯವಾದಷ್ಟನ್ನು ಮಾತ್ರ ಆಚರಿಸಬಹುದು.

**ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಂಮಿತಂ ।**
**ಅಧೀತವಾನ್ ದ್ವಾಪರಾದೌ ಪಿತುರ್ದ್ವೈಪಾಯನಾದಹಂ ॥ ೮ ॥**

ಇದಂ = ಈಗ ನಾನು ಹೇಳಬಯಸುವ; ಬ್ರಹ್ಮಸಂಮಿತಂ = ವೇದಾರ್ಥ ಪ್ರತಿಪಾದಕವಾಗಿ, ವೇದ ಸಮ್ಮತವಾಗಿರುವ; ಭಾಗವತಂ ನಾಮ ಪುರಾಣಂ = ಶ್ರೀಮದ್ಭಾಗವತವೆಂಬ ಪುರಾಣವನ್ನು; ಅಹಂ = ನಾನು; ಪಿತುಃ = ನನ್ನ ತಂದೆಯಾದ; ದ್ವೈಪಾಯನಾತ್ = ಶ್ರೀವೇದವ್ಯಾಸ ಮಹರ್ಷಿಗಳಿಂದ; ದ್ವಾಪರಾದೌ = ದ್ವಾಪರ ಯುಗದಲ್ಲಿ ಹಿಂದೆಯೇ; ಅಧೀತವಾನ್ = ಅಭ್ಯಾಸಮಾಡಿದೆನು.

ಪರೀಕ್ಷಿಗದ್ರಾಜರ ಪ್ರಶ್ನೆಗೆ ಉತ್ತರವಾಗಿ ಶ್ರೀಶುಕಾಚಾರ್ಯರು ಭಾಗವತ ಶಾಸ್ತ್ರವನ್ನು ಉಪದೇಶ ಮಾಡಿದರು ಎನ್ನುವುದರಿಂದ ಅಗತ್ಯವಾದ ಅಂತ್ಯಕಾಲದ ನಾರಾಯಣ ಸ್ಮರಣೆಗೆ ಭಾಗವತಶಾಸ್ತ್ರವು ಅತ್ಯಂತ ಉಪಯುಕ್ತವಾದುದು ಎಂದಹಾಗಾಯಿತು.

ಶ್ರೀಕೃಷ್ಣಾವತಾರದ ವೇಳೆಗೆ ಶ್ರೀವೇದವ್ಯಾಸರಿಗೆ ಆರುನೂರು ವರ್ಷಗಳಾಗಿತ್ತು ಎಂಬ ಪುರಾಣವಚನವನ್ನು ಗಮನಿಸಿದರೆ, ದ್ವಾಪರ ಯುಗದ ಕಡೆಕಡೆಯಲ್ಲಿ, ಆದರೆ ಮಹಾಭಾರತಯುದ್ಧಕ್ಕೆ ಬಹಳ ಮೊದಲೇ ಶ್ರೀವೇದವ್ಯಾಸರು ವೇದಗಳ ವಿಂಗಡ, ಬ್ರಹ್ಮಸೂತ್ರಗಳ ರಚನೆ; ಮಹಾಭಾರತದ ಇತಿಹಾಸ ಮತ್ತು ಶ್ರೀಮದ್ಭಾಗವತ ಪುರಾಣರಚನೆ, ಇವುಗಳನ್ನು ಮಾಡಿಮುಗಿಸಿದ್ದರೆಂಬುದು ತಿಳಿದುಬರುತ್ತದೆ.

ಚತುರ್ಮುಖ ಬ್ರಹ್ಮರ ಪ್ರತಿ ಹಗಲಿನಲ್ಲಿಯೂ ದಶಾವತಾರಗಳೂ, ರಾಮಾಯಣ ಮಹಾಭಾರತಗಳೂ ನಡೆಯುವುದರಿಂದ ತ್ರಿಕಾಲಜ್ಞಾನಿಗಳೂ, ಶ್ರೀಮನ್ನಾರಾಯಣಾವತಾರರೂ ಆದ ಶ್ರೀವೇದವ್ಯಾಸರಿಗೆ ಭಾರತ, ಭಾಗವತಗಳ ರಚನೆಯು ಅಸಾಧ್ಯವಾದುದಲ್ಲ.

**ಪರಿನಿಷ್ಠಿತೋಽಪಿ ನೈರ್ಗುಣ್ಯ ಉತ್ತಮಶ್ಲೋಕ ಲೀಲಯಾ ।**
**ಗೃಹೀತ ಚೇತೋ ರಾಜರ್ಷೇ ಆಖ್ಯಾನಂ ಯದಧೀತವಾನ್ ॥ ೯ ॥**

**ತದಹಂ ತೇಽಭಿಧಾಸ್ಯಾಮಿ ಮಹಾಪುರುಷಿಕೋ ಭವಾನ್ ।**
**ಯತ್ರ ಶ್ರದ್ಧಧತಾಮಾಶು ಸ್ಯಾನ್ಮುಕುಂದೇ ಮತಿಃ ಸತೀ ॥ ೧೦ ॥**

ರಾಜರ್ಷೇ = ಋಷಿಸದೃಶನಾದ ಪರೀಕ್ಷಿದ್ರಾಜಾ; ಭವಾನ್ = ನೀನು; ಮಹಾಪುರುಷಿಕಃ = ಪುರುಷೋತ್ತಮನ ಭಕ್ತರಲ್ಲಿ ಶ್ರೇಷ್ಠನಾದವನು; (ಅದುದರಿಂದ); ನೈರ್ಗುಣ್ಯೇ ಪರಿನಿಷ್ಠಿತಃ ಅಪಿ = ಗುಣಾತೀತನಾಗಿ ಸ್ಥಿತಪ್ರಜ್ಞನಾಗಿದ್ದರೂ ಕೂಡ; ಉತ್ತಮ ಶ್ಲೋಕಲೀಲಯಾ = ಭಗವಂತನ ಮಹಾತ್ಮ್ಯವರ್ಣನೆಯಿಂದ ಆಕರ್ಷಿತನಾಗಿ; ಗೃಹೀತಚೇತಃ = ಏಕಾಗ್ರಚಿತ್ತದಿಂದ; ಯತ್ ಆಖ್ಯಾನಂ = ಯಾವ ಭಾಗವತ ಕಥೆಯನ್ನು; ಅಧೀತವಾನ್ = ನಾನು ಅಭ್ಯಾಸಮಾಡಿದೆನೋ; ಯತ್ರ = ಯಾವ ಭಾಗವತ ಶಾಸ್ತ್ರದಲ್ಲಿ; ಶ್ರದ್ಧಧತಾಂ = ಶ್ರದ್ಧೆ ಇಟ್ಟು ಕೇಳತಕ್ಕವರಿಗೆ; ಮುಕುಂದೇ = ಮುಕ್ತಿಪ್ರದನಾದ ಭಗವಂತನಲ್ಲಿ; ಸತೀ ಮತಿಃ = ಸದ್ಭಕ್ತಿಯು; ಆಶು = ಶೀಘ್ರವಾಗಿ; ಸ್ಯಾತ್ = ಉಂಟಾಗುವುದೋ; ತತ್ = ಅಂತಹ ಭಾಗವತ ಪುರಾಣವನ್ನು; ಅಹಂ = ನಾನು; ತೇ = ನಿನಗೆ; ಅಭಿಧಾಸ್ಯಾಮಿ = ಉಪದೇಶ ಮಾಡುತ್ತೇನೆ.

ಸ್ಥಿತಪ್ರಜ್ಞರಿಗೆ ಲೌಕಿಕವಾದ ಯಾವ ಆಕರ್ಷಣೆಯೂ ಇರುವುದಿಲ್ಲ. ಆದರೆ ಭಗವಂತನ ಮಹಿಮೆಯ ವಿಷಯಕವಾದ ಆಕರ್ಷಣೆಯು ಇದ್ದೇ ಇರುತ್ತದೆ. ಏಕೆಂದರೆ ಅದಕ್ಕೆ ಮಿತಿ ಎಂಬುದಿಲ್ಲ. ಮುಕ್ತರಿಗೆ ಯಾವ ಕಾಮನೆಗಳೂ ಇಲ್ಲ. ಆದರೂ ಭಗವತ್ಸ್ಮರಣ ಪೂರ್ವಕವಾಗಿ ಅಲ್ಲಿ ನಿರಂತರವೂ ವಿವಿಧ ಸುಖಭೋಗಗಳನ್ನು ಅನುಭವಿಸುತ್ತಾರೆ. ಅದಕ್ಕಿಂತಲೂ ಹೆಚ್ಚಾಗಿ ಅಲ್ಲಿಯೂ ಭಗವತ್ಪೂಜಾ, ಭಗವಂತನ ಕಥಾಶ್ರವಣ ಮತ್ತು ಭಗವದ್ದರ್ಶನದಲ್ಲಿ ಹೆಚ್ಚು ಆಸಕ್ತಿಯುಳ್ಳವರಾಗಿರುತ್ತಾರೆ. ಆದರ ಪ್ರಯೋಜನ ಭಗವಂತನಲ್ಲಿ ಅನುರಕ್ತಿ; ಅದೇ ನಿಜವಾದ ಮುಕ್ತಿ. ಇಂತಹ ಭಗವಂತನ ಸಾಮೀಪ್ಯ ಸಾಯುಜ್ಯಗಳೇ ಭಕ್ತಿಯ ನಿಜ ಸ್ವರೂಪ. ಇದೇ ಐಕ್ಯ, ಎಂದರೆ ಏಕತ್ರ, ಚೆನ್ನಾಗಿ ಒಂದು ಗೂಡಿ ಇರುವುದು; ಒಂದೇ ಆಗಿಬಿಡುವುದಲ್ಲ.

**ಏತನ್ನಿರ್ವಿದ್ಯಮಾನಾನಾಮಿಚ್ಛತಾಮಕುತೋಭಯಂ ।**
**ಯೋಗಿನಾಂ ನೃಪ ನಿರ್ಣೀತಂ ಹರೇರ್ನಾಮಾನುಕೀರ್ತನಂ ॥ ೧೧ ॥**

ನೃಪ = ಪರೀಕ್ಷಿದ್ರಾಜಾ; ನಿರ್ವಿದ್ಯಮಾನಾನಾಂ = ಸಾಂಸಾರಿಕ ಕ್ಲೇಶಗಳಿಂದ ಪಾರುಮಾಡುವ ವೈರಾಗ್ಯ ಸಂಪಾದಿಸಿದ; ಅಕುತೋಭಯಂ = ಮೋಕ್ಷವನ್ನು;

ಇಚ್ಛತಾಂ = ಬಯಸುವ; ಯೋಗಿನಾಂ = ಭಗವಂತನಲ್ಲಿ ಆಸಕ್ತರಾದವರಿಗೆ; ಏತತ್ = ಈ; ಹರೇಃ ನಾಮಾನುಕೀರ್ತನಂ = ಮಹಿಮಾಸ್ಮರಣಪೂರ್ವಕವಾದ ಶ್ರೀಹರಿಯ ನಾಮಸಂಕೀರ್ತನೆಯು; ನಿರ್ಣೀತಂ = ಯುಕ್ತವಾದುದೆಂದು ನಿರ್ಣಯವಾಗಿದೆ.

ಇಂತಹ ಹರಿನಾಮಸಂಕೀರ್ತನೆಯು ಅಂತ್ಯಕಾಲದಲ್ಲಿ ಅಂತರ್ಯಾಮಿಯ ಸ್ಮರಣೆಗೆ ಸಹಕಾರಿಯಾಗುತ್ತದೆ.

**ಕಿಂಪ್ರಮತ್ತಸ್ಯ ಬಹುಭಿಃ ಪರೋಕ್ಷೈರ್ಹಾಯನೈರಿಹ ।**
**ಏಕಂ ಮುಹೂರ್ತಂ ವಿದಿತಂ ಘಟತೇ ಶ್ರೇಯಸೇ ಯತಃ ॥ ೧೨ ॥**

ಇಹ = ಈ ಪ್ರಪಂಚದಲ್ಲಿ; ಬಹುಭಿಃ = ಅನೇಕ; ಪರೋಕ್ಷೈಃ = ವ್ಯರ್ಥವಾಗಿ ಬಂದು ಹೋಗುವ; ಅಯನೈಃ = ವಯೋಮಾನದ ವರ್ಷಗಳಿಂದ; ಪ್ರಮತ್ತಸ್ಯ = ಸಂಸಾರದ ವಿಷಯಗಳಲ್ಲಿಯೇ ಮೈಮರೆತವನಿಗೆ; ಹ = ನಿಜವಾಗಿ; ಕಿಂ = ಏನು ಪ್ರಯೋಜನ ? ಯತಃ = ಏಕೆಂದರೆ; ಏಕಂ ಮುಹೂರ್ತಂ = ಎರಡೇ ಘಳಿಗೆಯಷ್ಟು ಕಾಲದಲ್ಲಿ; ವಿದಿತಂ = ತಿಳಿಯಲ್ಪಟ್ಟ ಭಗವನ್ಮಹಿಮೆಯು; ಶ್ರೇಯಸೇ ಘಟತೇ = ಮುಕ್ತಿಗೆ ಸಾಧನವಾಗುತ್ತದೆ.

ಶ್ರೀಮದ್ಭಾಗವತ ಕಥಾಶ್ರವಣದ ಆವಶ್ಯಕತೆಯೂ ಮಹಿಮೆಯೂ ಇದರಿಂದ ವಿದಿತವಾಗುತ್ತದೆ.

**ಖಟ್ವಾಂಗೋನಾಮ ರಾಜರ್ಷಿರ್ಜ್ಞಾತ್ವೇಯತ್ತಾಮಿಹಾಯುಷಃ ।**
**ಮುಹೂರ್ತಾತ್ಸಂಗಮುತ್ಸೃಜ್ಯ ಗತವಾನಭಯಂ ಹರಿಂ ॥ ೧೩ ॥**

ಖಟ್ವಾಂಗಃ ನಾಮ ರಾಜರ್ಷಿಃ = ಖಟ್ವಾಂಗನೆಂದು ಪ್ರಸಿದ್ಧನಾದ ರಾಜರ್ಷಿಯು; ಇಹ = ಈ ಲೋಕದಲ್ಲಿ; ಆಯುಷಃ ಇಯತ್ತಾಂ = ತನ್ನ ಆಯುಷ್ಯದ ಪರಿಮಿತಿಯನ್ನು; ಜ್ಞಾತ್ವಾ = ಯುದ್ಧದಲ್ಲಿ ತನ್ನಿಂದ ಉಪಕೃತರಾದ ದೇವತೆಗಳಿಂದ ತಿಳಿದು; ಮುಹೂರ್ತಾತ್ = ಎರಡೇ ಘಳಿಘೆಯಷ್ಟು ಕಾಲದಲ್ಲಿ; ಸಂಗಂ ಉತ್ಸೃಜ್ಯ = ರಾಜ್ಯ, ಕೋಶ, ಬಂಧು–ಬಾಂಧವರಲ್ಲಿ ಸಂಬಂಧವನ್ನು ತ್ಯಾಗಮಾಡಿ; ಅಭಯಂ ಹರಿಂ = ಮುಕ್ತಿದಾಯಕನೂ ಮುಕ್ತಿಸ್ವರೂಪನೂ ಆದ ಶ್ರೀಹರಿಯನ್ನು; ಗತವಾನ್ = ಹೊಂದಿದವನಾದನು.

ಸಂಸಾರದಲ್ಲಿ ಆಸಕ್ತವಾದ ಮನಸ್ಸನ್ನು ಅಲ್ಲಿಂದ ವಿಮುಖ ಮಾಡಿ ಶ್ರೀಹರಿಯಲ್ಲಿ ನಿಲ್ಲುವಂತೆ ಮಾಡುವುದು ತ್ಯಾಗ. ಮನಸ್ಸು ಶ್ರೀಹರಿಧ್ಯಾನದಲ್ಲಿ ಸ್ಥಿರವಾಗಬೇಕಾದರೆ, ಆ ಸ್ವಾಮಿಯ ಮಹಿಮಾದ್ಯೋತಕಗಳಾದ ಕಥೆಗಳನ್ನು ಕೇಳುತ್ತಿರಬೇಕು.




ಪ್ರಣವದ ವಿಸ್ತಾರ – Expansion of 'OM'

**ತವಾಪ್ಯೇತರ್ಹಿಕೌರವ್ಯ ಸಪ್ತಾಹಂ ಜೀವಿತಾವಧಿಃ ।**
**ಉಪಕಲ್ಪಯ ತತ್ಸರ್ವಂ ಯತ್ತಾವತ್ಸಾಂ ಪರಾಯಿಕಂ || ೧೪ ||**

ಕೌರವ್ಯ = ಕುರುವಂಶೀಯನಾದ ರಾಜಾ; ತವ ಅಪಿ = ನಿನಗಾದರೋ; ಜೀವಿತಾವಧಿಃ = ಬದುಕಿರುವ ಅವಧಿಯು; ಸಪ್ತಾಹಂ = ಏಳುದಿವಸಗಳಷ್ಟು ಕಾಲವಾಗಿದೆ; ಯತ್ ತಾವತ್ = ನಿರ್ದಿಷ್ಟವಾದ; ತತ್ಸರ್ವಂ = ಆ ಪೂರ್ಣಕಾಲಾವಧಿಯನ್ನು; ಸಾಂಪರಾಯಿಕಂ = ಮುಕ್ತಿಯಲ್ಲಿ ಪರ್ಯವಸಾನವಾಗುವ ರೀತಿಯಲ್ಲಿ; ಉಪಕಲ್ಪಯ = ವಿನಿಯೋಗಿಸು.

ಶ್ರೀಮದ್ಭಾಗವತವನ್ನು ಮನಸ್ಸಿಟ್ಟು ಕೇಳುವುದರಿಂದ ಮರಣಕಾಲವು ಮುಕ್ತಿಗೆ ಸಾಧನವಾಗುವುದು ಎಂಬುದು ತಾತ್ಪರ್ಯ.

**ಅಂತಕಾಲೇ ತು ಪುರುಷ ಆಗತೇ ಗತ ಸಾಧ್ವಸಃ ।**
**ಛಿಂದ್ಯಾದಸಂಗ ಶಸ್ತ್ರೇಣ ಸ್ಪೃಹಾಂ ದೇಹೇನುಯೇಚತಂ || ೧೫ ||**

ಅಂತಕಾಲೇ ಅಗತೇ ತು = ಮರಣಕಾಲವು ಸಮೀಪಿಸಿತೆಂದು ತಿಳಿದು ಬಂದಾಗ; ಗತ ಸಾಧ್ವಸಃ = ಮರಣಭೀತಿ ಇಲ್ಲದವನಾಗಿ; ಪುರುಷಃ = ಜೀವಿಯು; ಅಸಂಗಶಸ್ತ್ರೇಣ = ಸಂಗದೋಷವನ್ನರಿಯಬಲ್ಲ ವಿವೇಕವೆಂಬ ಶಸ್ತ್ರದಿಂದ; ದೇಹೇ ಅನು ಯೇ = ದೇಹ ಮತ್ತು ಸಂಬಂಧಿಗಳಾದ ಪತ್ನೀಪುತ್ರಾದಿಗಳಲ್ಲಿ; ತಂ ಸ್ಪೃಹಾಂ ಚ = ಉಂಟಾಗಿದ್ದ ಆ ಸ್ನೇಹವನ್ನು; ಛಿಂದ್ಯಾತ್ = ಕಡಿದು ಹಾಕಬೇಕು.

ದೇಹಾನುಬಂಧಿಗಳು ಆಯಾ ಜನ್ಮಗಳಲ್ಲಿ ಸಂಬಂಧ ಪಡೆದವರೇ ಹೊರತು ಪ್ರೀತಿಪೂರ್ವಕವಾಗಿ ನಿತ್ಯಸಂಬಂಧ ಉಳ್ಳವರಲ್ಲ ಎಂದು ತಿಳಿದು ನಿತ್ಯಬಂಧುವಾದವನು ಪರಮಾತ್ಮನೇ ಹೊರತು ಬೇರೆ ಯಾರೂ ಅಲ್ಲ ಎಂದು ತಿಳಿಯುವುದು ವಿವೇಕ. ಅಂತಹ ವಿವೇಕದಿಂದ ವೈರಾಗ್ಯವೂ, ತದ್ವಾರಾ ಭಗವಂತನಲ್ಲಿ ಭಕ್ತಿಯೂ ಉಂಟಾಗುವುದು.

**ಗೃಹಾತ್ಪ್ರವ್ರಜಿತೋ ಧೀರಃ ಪುಣ್ಯತೀರ್ಥಜಲಾಪ್ಲುತಃ ।**
**ಶುಚಾ ವಿವಿಕ್ತ ಆಸೀನೋ ವಿಧಿವತ್ಕಲ್ಪಿತಾಸನೇ || ೧೬ ||**

**ಅಭ್ಯಸೇನ್ಮನಸಾ ಶುದ್ಧಂ ತ್ರಿವೃತ್ ಬ್ರಹ್ಮಾಕ್ಷರಂ ಪರಂ ।**
**ಮನೋಯಚ್ಛೇಜ್ಜಿತ ಶ್ವಾಸೋ ಬ್ರಹ್ಮಬೀಜಮನುಸ್ಮರನ್ || ೧೭ ||**

ಗೃಹಾತ್ ಪ್ರವ್ರಜಿತಃ = ಮನೆಯನ್ನು ಬಿಟ್ಟು ಪರಿವ್ರಾಜಕನಾಗಿ (ಸಂನ್ಯಾಸಯುಕ್ತನಾಗಿ); ಧೀರಃ = ಅಡ್ಡಿ ಆತಂಕಗಳನ್ನು ಜಯಿಸುವ

ಸಾಮರ್ಥ್ಯವುಳ್ಳವನಾಗಿ; ಪುಣ್ಯತೀರ್ಥಜಲ ಅಪ್ಲುತಃ = ಗಂಗಾದಿ ಪುಣ್ಯತೀರ್ಥಗಳಲ್ಲಿ ಮಿಂದು ದೇಹಶುದ್ಧಿ-ಮನಶ್ಶುದ್ಧಿಗಳನ್ನೂ, ಭಾಗವತ ಶಾಸ್ತ್ರ ಶ್ರವಣವೆಂಬ ತೀರ್ಥಸ್ನಾನದಿಂದ ನಿತರಾಂ ಅಂತಶ್ಶುದ್ಧಿಯನ್ನೂ ಪಡೆದುಕೊಂಡು; ಶುಚಾ = ನಿರ್ಮಲಪ್ರದೇಶವಲ್ಲಿ; ವಿವಿಕ್ತಃ = ದುಷ್ಟಸಹವಾಸಗಳಿಂದ ದೂರನಾಗಿ; ವಿಧಿವತ್ ಕಲ್ಪಿತ ಆಸನೇ ಆಸೀನಃ = ಸ್ಥಿರಾಸನದರೀತಿಯಲ್ಲಿ ಕುಳಿತು; ಶುದ್ಧಂ = ಪರಿಶುದ್ಧವಾದ; ತ್ರಿವೃತ್ = ಮೂರು ವರ್ಣಗಳಿಂದ ಯುಕ್ತವಾದ; ಪರಂ = ಸರ್ವೋತ್ಕೃಷ್ಟವಾದ; ಬ್ರಹ್ಮಾಕ್ಷರಂ = ಬ್ರಹ್ಮಜ್ಞಾನದಾಯಕವಾದ ಓಂ ಎಂಬ ಅಕ್ಷರವನ್ನು; ಮನಸಾ = ಮನಸ್ಸಿನ ಪ್ರಯತ್ನದಿಂದ; ಅಭ್ಯಸೇತ್ = ಉಚ್ಚಾರ ಮಾಡಬೇಕು; ಜಿತಶ್ವಾಸಃ = ರೇಚಕ ಪೂರಕ ಕುಂಭಕ ವಿಧಾನದಿಂದ ಪ್ರಾಣಾಯಾಮ ಮಾಡಿ ಪ್ರಾಣದೇವರ ದಯಾಪಾತ್ರನಾಗಿ, ಬ್ರಹ್ಮಬೀಜಂ = ಬ್ರಹ್ಮತತ್ವವನ್ನು ವಿಸ್ತರಿಸುವ ಸಾಮರ್ಥ್ಯವುಳ್ಳ ಓಂಕಾರ ಮಂತ್ರವನ್ನು; ಅನುಸ್ಮರನ್ = ಜಪಿಸುತ್ತಾ; ಮನಃ = ಮನಸ್ಸನ್ನು; ಯಚ್ಛೇತ್= ವಶಪಡಿಸಿಕೊಳ್ಳಬೇಕು.

ಸ್ಥಿರಾಸನವೆಂದರೆ, ಪದ್ಮಾಸನ ಅಥವ ಸುಖಾಸನಕ್ಕೆ ತಕ್ಕಂತೆ ಕಾಲುಗಳನ್ನು ಮಡಿಚಿ, ಬೆನ್ನುಬಾಗದೆ, ಸಮವಾದ ರೀತಿಯಲ್ಲಿ ತಲೆಯೆತ್ತಿ ಕುಳಿತು, ಅರೆಮುಚ್ಚಿದ ಕಣ್ಣುಗಳಿಂದ ಧ್ಯಾನಕ್ಕೆ ಸಿದ್ಧವಾಗುವುದು.

ಓಂಕಾರದ ಅವಯವಗಳಾದ ಅಕಾರ, ಉಕಾರ, ಮಕಾರಗಳಿಂದ ಐವತ್ತು ವರ್ಣಗಳೂ, ಅವುಗಳ ವ್ಯಂಜನಾದಿಗಳೂ ಉತ್ಪನ್ನವಾಗುವುವು. ಪ್ರತಿಯೊಂದು ವರ್ಣವೂ ಅರ್ಥವತ್ತಾಗಿರುವುದಲ್ಲದೆ, ವರ್ಣಗಳ ಸಂಯೋಜನೆಯಿಂದಾದ ಪದಗಳೂ, ವಾಕ್ಯಗಳೂ ಪರಬ್ರಹ್ಮನನ್ನು ತಿಳಿಯಲು ಸಹಕಾರಿಗಳಾಗುವುವು. ಈ ವಿವರವನ್ನು ಮನಸ್ಸಿನಲ್ಲಿಟ್ಟುಕೊಂಡು ಓಂಕಾರ ಮಂತ್ರ ಜಪಮಾಡುವಾಗ, ಪರಮಾತ್ಮನ ಪ್ರಸಾದದಿಂದ ಆ ಮಂತ್ರಾಕ್ಷರಗಳು ವಿವಿಧ ರೂಪಗಳಿಂದ ಅರ್ಥವತ್ತಾಗಿ ಆವಿರ್ಭವಿಸಿ ಬ್ರಹ್ಮಸಾಕ್ಷಾತ್ಕಾರಕ್ಕೆ ಸಹಾಯಕವಾಗುವುವು. ಋಷಿಗಳಿಗೆ ವೇದಮಂತ್ರಗಳ ಗೋಚರವಾದುದು ಇದೇ ರೀತಿಯಿಂದ.

ಅಹಂಕಾರ ತತ್ವದ ವಿಶೇಷಾಂಶವಾದ ಮನಸ್ಸು ದೈವದತ್ತವಾದ ಅಮೂಲ್ಯ ಸಾಧನ. ಬುದ್ಧಿವಂತರು ಅದರ ಸದುಪಯೋಗದಿಂದ ಪ್ರಪಂಚದ ವಿಷಯವನ್ನರಿತು, ಪ್ರಪಂಚದ ಸೃಷ್ಟಿಕರ್ತನ ಸಂಕಲ್ಪವನ್ನು ಅರ್ಥಮಾಡಿಕೊಂಡು, ಮುಕ್ತಿಪ್ರದನಾದ ಆ ಭಗವಂತನ ಕಡೆಗೆ ಮನಸ್ಸು ಹೊರಳಿ ನಿಲ್ಲುವಂತೆ ಮಾಡಿಕೊಳ್ಳುತ್ತಾರೆ. ಅದಕ್ಕಾಗಿ ಯೋಗಾಭ್ಯಾಸ; ಪ್ರಾಣಾಯಾಮ; ಮತ್ತು ಧ್ಯಾನಧಾರಣಗಳು.

**ನಿಯಚ್ಛೇದ್ವಿಷಯೇಭ್ಯೋಽಕ್ಷಾನ್ಮನಸಾ ಬುದ್ಧಿಸಾರಥಿಃ ।**
**ಮನಃ ಕರ್ಮಭಿರಾಕ್ಷಿಪ್ತಂ ಶುಭಾರ್ಥೇ ಧಾರಯೇದ್ಧಿಯಾ ॥ ೧೮ ॥**

ಬುದ್ಧಿಸಾರಥಿಃ = ಬುದ್ಧಿತತ್ತ್ವಕ್ಕೆ ಯಜಮಾನರಾದ ಮುಖ್ಯಪ್ರಾಣದೇವರ ದಯಾಪಾತ್ರನಾಗಿ; ಮನಸಾ = ಬುದ್ಧಿಯಿಂದ ತಿದ್ದಿದ ಮನಸ್ಸಿನಿಂದ; ಅಕ್ಷಾನ್ = ಬಹಿರ್ಮುಖಿಗಳಾದ ಇಂದ್ರಿಯಗಳನ್ನು; ವಿಷಯೇಭ್ಯಃ = ಮನಸ್ಸನ್ನು ಸೆಳೆಯುವ ಬಾಹ್ಯವಸ್ತುಗಳ ಕಡೆಯಿಂದ ವಿಮುಖಿಮಾಡಿ; ನಿಯಚ್ಛೇತ್ = ವಶಪಡಿಸಿಕೊಳ್ಳಬೇಕು; ಕರ್ಮಭಿಃ ಆಕ್ಷಿಪ್ತಂ = ಸಂಸಾರಕ್ಕೆ ಕಾರಣವಾಗುವ ಕರ್ಮಗಳಿಗೆ ವಶವಾದ; ಮನಃ = ಮನಸ್ಸನ್ನು; ಧಿಯಾ = ಬುದ್ಧಿಯ ಬಲದಿಂದ; ಶುಭಾರ್ಥೇ = ಭಗವತ್ಪ್ರಸಾದಕ್ಕೆ ಕಾರಣವಾಗುವ ರೀತಿಯಲ್ಲಿ; ಧಾರಯೇತ್ = ಹಿಡಿದು ನಿಲ್ಲಿಸಬೇಕು.

ಮನಸ್ಸೇ ಬಂಧನಕ್ಕೆ ಕಾರಣ. ಸರಿಯಾಗಿ ಬಳಸಿಕೊಂಡರೆ ಅದೇ ಮುಕ್ತಿಗೆ ಸಾಧನ. ''ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ''. ಇಲ್ಲಿ ಆಧುನಿಕರು ಗಮನವಿಟ್ಟು ಗ್ರಹಿಸಬೇಕಾದ ತತ್ತ್ವವುಂಟು. ಮನಸ್ಸು ಒಂದು ಜಡಸಾಧನ; ಅದನ್ನು ನಿಯಂತ್ರಿಸಬಲ್ಲ ಬುದ್ಧಿ ಎಂಬ ಮೇಲ್ಮಟ್ಟದ ಇನ್ನೊಂದು ಸಾಧನವಿರುವುದನ್ನು ತಿಳಿಯುವುದು ಅಗತ್ಯ. ಈ ಎರಡೂ ಇರುವುದು ದೇಹದ ಹೃತ್ಕಮಲದಲ್ಲಿ ನೆಲೆಸಿರುವ ಜ್ಞಾನಸ್ವರೂಪಿಯಾದ ಜೀವಾತ್ಮನ ಉಪಯೋಗಕ್ಕಾಗಿ. ಜೀವನು ಮನಸ್ಸಿಗೆ ವಶನಾಗಿ ಸಂಸಾರದಲ್ಲಿ ಹೊರಳಿ ನರಳುವುದು, ಆ ಮನಸ್ಸನ್ನು ವಶಪಡಿಸಿಕೊಂಡು ಮುಕ್ತಿಯ ಕಡೆಗೆ ಸಾಗುವುದು ಎರಡೂ ಅವನ ಕೈಯಲ್ಲೇ ಉಂಟು. ಆದರೆ, ಜೀವ ಅಸ್ವತಂತ್ರನಾದುದರಿಂದ, ಸ್ವತಂತ್ರನೂ, ಅನಾದಿ ಬಂಧುವೂ ಆದ ಭಗವಂತ, ಜೀವರಲ್ಲಿ ಜೀವನಂತೆ ಬಿಂಬನೆಂದೆನಿಸಿಕೊಂಡಿದ್ದು, ಜೀವನ ಬಂಧಮುಕ್ತಿಗಳಿಗೆ ಕಾರಣನಾಗಿದ್ದಾನೆ ಎಂಬುದು ಸ್ಪಷ್ಟವಾಗಿ ತಿಳಿದು ಬರಬೇಕು. ಇದರ ವಿಚಾರ ಅತ್ಯಂತ ಗಹನವಾದುದು; ಗುರುಮುಖೇನ ತಿಳಿಯಬೇಕಾದುದು.

**ತತ್ರೈಕಾವಯವಂ ಧ್ಯಾಯೇದವ್ಯುಚ್ಛಿನ್ನೇನ ಚೇತಸಾ ।**
**ಮನೋನಿರ್ವಿಷಯಂ ಯುಕ್ತ್ವಾ ತತಃ ಕಿಂಚನ್ನಸಂಸ್ಮರೇತ್ ॥**
**ಪದಂ ತತ್ಪರಮಂ ವಿಷ್ಣೋರ್ಮನೋ ಯತ್ರ ಪ್ರಸೀದತಿ ॥ ೧೯ ॥**

ತತ್ರ = ಧ್ಯಾನಾಭ್ಯಾಸಕಾಲದಲ್ಲಿ; ಅವ್ಯುಚ್ಛಿನ್ನೇನ ಚೇತಸಾ = ಏಕಾಗ್ರ ಮನಸ್ಸಿನಿಂದ; ಏಕೈಕ ಅವಯವಂ = ಭಗವದ್ರೂಪದ ಒಂದೊಂದೇ ಅವಯವವನ್ನು; ಧ್ಯಾಯೇತ್ = ಧ್ಯಾನ ವಿಷಯವನ್ನಾಗಿ ಮಾಡಿಕೊಳ್ಳಬೇಕು; ಮನಃ = ಮನಸ್ಸನ್ನು; ನಿರ್ವಿಷಯಂ = ಅನ್ಯವಿಷಯಗಳ ಕಡೆಗೆ ಧಾವಿಸದಂತೆ; ಯುಂಕ್ತ್ವಾ =

ಹಿಡಿದಿಟ್ಟುಕೊಂಡು; ತತಃ = ಆಗ; ಕಿಂಚಿತ್ = ಬೇರೆ ಯಾವುದನ್ನೂ; ನ ಸಂಸ್ಮರೇತ್= ಸ್ಮರಣೆಗೆ ತಂದುಕೊಳ್ಳಬಾರದು; ಯತ್ರ = ಯಾವ ಧ್ಯಾನ ವಿಧಾನದಿಂದ; ಮನಃ = ಮನಸ್ಸು; ಪ್ರಸೀದತಿ = ಪ್ರಶಾಂತವಾಗಿ ಪ್ರಫುಲ್ಲವಾಗುವುದೋ; ತತ್ = ಅಂತಹ ಸ್ಥಿತಿಯು; ವಿಷ್ಣೋಃ = ಶ್ರೀಮಹಾ ವಿಷ್ಣುವಿನ; ಪರಮಂ ಪದಂ = ನಿರ್ಬಾಧವಾದ ಅತ್ಯುತ್ತಮ ಸ್ಥಾನವು (ಮುಕ್ತಿಯ ಲಕ್ಷಣ).

ಸಾಮಾನ್ಯವಾಗಿ ಧ್ಯಾನದ ವಿಷಯವನ್ನು ಕುರಿತು ಹೇಳುವವರು ನಿಶ್ಚಲವೂ, ಪ್ರಶಾಂತವೂ ಆದ ಮನಸ್ಸಿನ ಸ್ಥಿತಿಯನ್ನು ಪಡೆಯುವುದೇ ಅಭ್ಯಾಸದ ಗುರಿ ಎಂದು ಹೇಳುವರು. ಮನಸ್ಸು ಜಡ ಸಾಧನ. ಅದು ತನ್ನಷ್ಟಕ್ಕೆ ತಾನೆ ಗೊಂದಲವನ್ನುಂಟುಮಾಡಲಾರದು; ಪ್ರಶಾಂತ ಸ್ಥಿತಿಯನ್ನೂ ಪಡೆಯಲಾರದು. ಅಂತಹ ಸ್ಥಿತಿಯು ಬರುವವರೆಗೆ ಆ ಸ್ಥಿತಿಯ ಅನುಭವದಿಂದ ತನ್ನತನವನ್ನು ಕಂಡುಕೊಳ್ಳುವ ಆತ್ಮ, ಮನಸ್ಸಿನ ಅಧೀನ. ಮನಸ್ಸಿನ ಹತೋಟಿಗೆ ಒಳಪಟ್ಟವನೇ ಆ ಮನಸ್ಸನ್ನು ತನ್ನ ವಶಪಡಿಸಿಕೊಳ್ಳುವ ಪ್ರಯತ್ನ ಮಾಡುವನೆಂದು ಹೇಳುವುದು ಯುಕ್ತವಲ್ಲ. ಆದುದರಿಂದ, ಮನಸ್ಸನ್ನು ಚಂಚಲಗೊಳಿಸುವ ಚೇತನರ ಗುಂಪೊಂದು ದೇಹೇಂದ್ರಿಯಗಳಲ್ಲಿ ತುಂಬಿಕೊಂಡಿರಬೇಕು. ಅದನ್ನೇ ''ಕಾಮ ಏಷಃ ಕ್ರೋಧ ಏಷಃ'' ಎಂಬ ಮಾತುಗಳಿಂದ ಹೇಳಿ, ಶ್ರೀಕೃಷ್ಣನು ಅರಿಷಡ್ವರ್ಗಗಳ ಯಜಮಾನರಾದ ಕಾಲನೇಮಿ ಮೊದಲಾದ ದುಷ್ಟಪ್ರೇರಕರ ವಿಚಾರವನ್ನು ತಿಳಿಸಿಕೊಟ್ಟಿದ್ದಾನೆ. ಆ ಪ್ರಭುವೇ, ''ಇಂದ್ರಿಯಾಣಿ ಪರಾಣ್ಯಾಹುಃ'' ಇತ್ಯಾದಿ ಮಾತುಗಳಿಂದ ಇಂದ್ರಿಯಾಭಿಮಾನಿಗಳು, ಮನೋಭಿಮಾನಿಗಳು, ಬುದ್ಧಿಯ ಅಭಿಮಾನಿಗಳು ಆದ ದೇವತೆಗಳು ಶರೀರಗಳಲ್ಲಿ ಪ್ರೇರಕರಾಗಿರುವರೆಂದೂ, ಅವರ ಬಲದಿಂದ ಅರಿಷಡ್ವರ್ಗದ ಶತ್ರುಗಳನ್ನು ಜಯಿಸಬೇಕೆಂದೂ ತಿಳಿಸಿಕೊಟ್ಟಿದ್ದಾನೆ. ಮನಸ್ಸಿನಲ್ಲಿ ದೇವ–ದಾನವರ ಹೋರಾಟ ನಡೆಯುವಾಗ ದೇವತಾಪಕ್ಷದ ಬಲವು ಕಡಿಮೆಯೆಂದು ತೋರಿದಾಗ ''ಯೋ ಬುದ್ಧೇಃ ಪರತಸ್ತು ಸಃ'' ಎಂಬುದನ್ನು ಸ್ಮರಿಸಿಕೊಂಡು, ಆ ಭಗವಂತನ ಕೃಪೆಯಿಂದ ಮನೋಜಯವನ್ನು ಸಾಧಿಸಬೇಕೆಂದೂ ಸೂಚಿಸಿದ್ದಾನೆ.

ಒಟ್ಟಿನಲ್ಲಿ ಹೇಳುವುದಾದರೆ, ಭಗವಂತನ ಪ್ರೇರಣೆಯಿಂದ, ಭಗವದನುಚರರಾದ ದೇವತೆಗಳ ಬಲದಿಂದ, ಜೀವಿಯು ಮನೋಜಯಕ್ಕೆ ಪ್ರಯತ್ನಿಸ ಬೇಕು. ಆದುದರಿಂದ ಈ ಯೋಗಸಾಧನೆಯು ಕೇವಲ ಜಡಮನಸ್ಸಿನ ಮತ್ತು ಅದರ ಪ್ರಭಾವದಿಂದ ಕುಂಠಿತನಾದ ಜೀವಿಯ ಪ್ರಯತ್ನವಷ್ಟೇ ಅಲ್ಲ; ಅದು ಭಗವಂತನ ಪ್ರೇರಣೆಯಿಂದ ಅವನ ಬಲದಿಂದ ಸಾಧಿಸಬೇಕಾದುದು. ಧ್ಯಾನದ ಮುಖ್ಯವಾದ ಗುರಿ, ಸರ್ವೇಶ್ವರನಾದ ಭಗವಂತನ ಧ್ಯಾನ ಮತ್ತು ಅವನ ಪ್ರಸನ್ನತೆಯ ಲಾಭ. ಆ ಭಗವಂತ ಸಾಕಾರನೆಂದೂ, ಅವನ ಆಕಾರವನ್ನು ಮನಸ್ಸಿಗೆ ತಂದುಕೊಳ್ಳಬೇಕೆಂದೂ ಹತ್ತೊಂಭತ್ತನೆಯ ಶ್ಲೋಕವು ಭೋಧಿಸುತ್ತಿದೆ.

ಭಗವಂತನ ಪೂರ್ಣ ಆಕಾರವನ್ನು ಒಂದೇ ಬಾರಿಗೆ ಧ್ಯಾನಕ್ಕೆ ತಂದುಕೊಳ್ಳುವುದು ಕಷ್ಟವಾದುದರಿಂದ ಕ್ರಮಕ್ರಮವಾಗಿ ಅದನ್ನು ಸಾಧಿಸಬೇಕೆಂದು ಇಲ್ಲಿ ತಿಳಿಸಿದ್ದಾರೆ. ದೇವತಾರೂಪಗಳನ್ನು ಮನೋಗತಮಾಡಿಕೊಳ್ಳಬೇಕಾದರೆ, ಪಾದಗಳಿಂದ ಪ್ರಾರಂಭಿಸಿ, ಕ್ರಮವಾಗಿ ಶಿರಸ್ಸಿನವರೆಗೆ ಒಂದೊಂದಾಗಿ ಅವಯವಗಳನ್ನು ಧ್ಯಾನಂಗತವಾಗಿ ಮಾಡಿಕೊಳ್ಳುತ್ತಾ ಅವುಗಳ ಸಮಗ್ರತೆಯನ್ನೂ ಕ್ರಮಕ್ರಮವಾಗಿ ಸಾಧಿಸಬೇಕೆಂದು ಶಾಸ್ತ್ರಗಳು ತಿಳಿಸುತ್ತವೆ.

ಇದಕ್ಕೆ ಬೇಕಾದ ಉತ್ತಮವಾದ ಪಾಠ ಶ್ರೀಮದಾನಂದತೀರ್ಥರ ದ್ವಾದಶಸ್ತೋತ್ರದ ಪ್ರಥಮಾಧ್ಯಾಯದಲ್ಲಿದೆ. ಕಡೆಕಡೆಗೆ, ಆ ಭಗವಂತನ ಮುಖ ಕಮಲ, ಮುಗುಳ್ನಗೆ, ಕಟಾಕ್ಷ ವೀಕ್ಷಣ, ಹುಬ್ಬಿನ ಚಲನೆ ಇವುಗಳನ್ನು ಧ್ಯಾನಕ್ಕೆ ತಂದು ಕೊಳ್ಳಬೇಕೆಂದು ಆಚಾರ್ಯರು ಹೇಳಿದ್ದಾರೆ. ಇದಿಷ್ಟನ್ನು ಸಾಧಿಸುವ ವೇಳೆಗೆ, ಸಾಧನೆಗೆ ಪ್ರೇರಕನೂ ಬಲಪ್ರದನೂ ಆದ ಆ ಭಗವಂತನ ಸಾಕ್ಷಾತ್ಕಾರವೇ ಆಗಿಬಿಡುವುದು; ಜಡ ಸಂಬಂಧ ಬಿಟ್ಟು ಹೋಗುವುದು; ಜೀವಾತ್ಮ ಪರಮಾತ್ಮರ ಸಂಬಂಧವು ನಿರಾತಂಕವಾಗಿ ಕುದುರಿಕೊಳ್ಳುವುದು.

ಇದುವರೆಗೆ ವಿವರಿಸಿದ ಅಂಶಗಳನ್ನು ೨೦,೨೧ನೇ ಶ್ಲೋಕಗಳಲ್ಲಿ ನೋಡಬಹುದು.

**ರಜಸ್ತಮೋಭ್ಯಾಮಾಕ್ಷಿಪ್ತಂ ವಿಮೂಢಂ ಮನ ಆತ್ಮನಃ ।**
**ಯಚ್ಛೇದ್ಧಾರಣಯಾ ಧೀರೋ ಹಂತಿ ಯಾ ತತ್ಕೃತಂ ಮಲಂ ॥ ೨೦ ॥**

ರಜಸ್ತಮೋಭ್ಯಾಂ = ರಜೋಗುಣ ತಮೋಗುಣಗಳ ಅಭಿಮಾನಿಗಳಿಂದ; ಆಕ್ಷಿಪ್ತಂ = ವಶಪಡಿಸಿಕೊಳ್ಳಲ್ಪಟ್ಟ; ವಿಮೂಢಂ = ಅಜ್ಞಾನಾವೃತವಾದ; ಆತ್ಮನಃ = ತನ್ನ; ಮನಃ = ಮನಸ್ಸನ್ನು; ಯಾ = ಯಾವ ಧಾರಣಾಯೋಗವು; ತತ್ಕೃತಂ ಮಲಂ = ರಜೋಗುಣ ತಮೋಗುಣಗಳ ಪ್ರಭಾವದಿಂದುಂಟಾದ ಅಜ್ಞಾನವೆಂಬ ಕಶ್ಮಲವನ್ನು; ಹಂತಿ = ನಾಶಪಡಿಸುವುದೋ (ಅಂತಹ); ಧಾರಣಯಾ = ಭಗವದ್ರೂಪವನ್ನು ಮನಸ್ಸಿನಲ್ಲಿ ನಿಲ್ಲಿಸಿಕೊಳ್ಳುವ ಪ್ರಯತ್ನದಿಂದ; ಧೀರಃ = ಬುದ್ಧಿಗೆ ಯಜಮಾನರಾದ ಪ್ರಾಣದೇವರ ದಯಾ ಪಾತ್ರನಾದವನು; ಯಚ್ಛೇತ್ = ವಿಷಯಗಳ ಕಡೆಗೆ ಧಾವಿಸುವ ಮನಸ್ಸನ್ನು ನಿಗ್ರಹಿಸಬೇಕು.

ದುಷ್ಕರ್ಮ ಪ್ರೇರಕರಲ್ಲಿ ದ್ವೇಷ, ತಾತ್ವಿಕ ದೇವತೆಗಳ ಸ್ನೇಹ ಸಂಪಾದನೆ, ಈ ಎರಡೂ ಧ್ಯಾನಯೋಗಕ್ಕೆ ಸಹಕಾರಿಗಳಾದವು. ದೇವತೆಗಳ ಬಲದಿಂದ ಧ್ಯಾನಯೋಗವು

ಸಿದ್ಧಿಸಿದಂತೆಲ್ಲಾ ವಿಷಯಗಳ ಕಡೆಗೆ ಮನಸ್ಸನ್ನೆಳೆಯುವ ದೈತ್ಯರ ಕಾಟ ಕಡಿಮೆಯಾಗುತ್ತಾ ಹೋಗುವುದು; ಕಡೆಗೆ ಬಿಟ್ಟುಹೋಗುವುದು.

**ಯಸ್ಯಾಂ ಸಂಧಾರ್ಯಮಾಣಾಯಾಂ ಯೋಗಿನೋ ಭಕ್ತಿಲಕ್ಷಣಃ ।**
**ಆಶುಸಂಪದ್ಯತೇ ಯೋಗ ಆಶ್ರಯಂ ಭದ್ರಮೀಕ್ಷತಃ ॥ ೨೧ ॥**

ಸಂಧಾರ್ಯ ಮಾಣಾಯಾಂ ಯಸ್ಯಾಂ = ಚೆನ್ನಾಗಿ ಅಭ್ಯಾಸಕ್ಕೆ ತಂದುಕೊಳ್ಳುವ ಈ ಧ್ಯಾನಯೋಗದಿಂದ, ಭದ್ರಂ = ಮಂಗಲಸ್ವರೂಪನಾದ ಮಹಾವಿಷ್ಣುವನ್ನು; ಈಕ್ಷತಃ = ಧ್ಯಾನದಿಂದ ಕಾಣುವ; ಯೋಗಿನಃ = ಯೋಗಿಯಾದವನ; ಭಕ್ತಿಲಕ್ಷಣಃ = ಭಕ್ತಿಭಾವವು; ಆಶು = ಶೀಘ್ರವಾಗಿ; ಸಂಪದ್ಯತೇ = ಉಂಟಾಗುತ್ತದೆ.

ಭಕ್ತಿಯೆಂದರೆ, ಸಂಸಾರ ಬಂಧನದಿಂದ ಬಿಡಿಸಿಕೊಂಡು ಭಗವಂತನಲ್ಲಿ ಸ್ನೇಹವನ್ನು ಭದ್ರಪಡಿಸಿಕೊಳ್ಳುವುದು. ಅದು ಧ್ಯಾನಯೋಗದಿಂದ ಸಾಧ್ಯವಾಗುವುದು.

**ರಾಜೋವಾಚ :–** ಪರೀಕ್ಷಿದ್ರಾಜರು ಕೇಳಿದರು.

**ಯಥಾ ಸಂಧಾರ್ಯತೇ ಬ್ರಹ್ಮನ್ ಧಾರಣಾ ಯತ್ರಸಂಮತಾ ।**
**ಯಾದೃಶೀವಾ ಹರೇದಾಶು ಪುರುಷಸ್ಯ ಮನೋಮಲಂ ॥ ೨೨ ॥**

ಬ್ರಹ್ಮನ್ = ಬ್ರಹ್ಮಜ್ಞಾನಪೂರ್ಣರೇ; ಬ್ರಹ್ಮನ್ = ಬ್ರಹ್ಮವಸ್ತುವು; ಯಥಾ = ಯಾವ ಪ್ರಕಾರದಿಂದ; ಸಂಧಾರ್ಯತೇ = ಸ್ಥಿರವಾಗಿ ಹೃದಯದಲ್ಲಿ ನಿಲ್ಲುತ್ತದೆ ? ಧಾರಣಾ = ಆ ನಿಲ್ಲುವಿಕೆಯು; ಯತ್ರ = ಯಾವಸ್ಥಾನದಲ್ಲಿ ? ವಾ = ಅಲ್ಲದೆ; ಪುರುಷಸ್ಯ = ಸಾಧಕನ; ಮನೋಮಲಂ = ಮನಸ್ಸಿನ ಅಜ್ಞಾನವನ್ನು; ಆಶು = ಬೇಗನೇ; ಯಾದೃಶೀ = ಯಾವಬಗೆಯ ಧಾರಣೆಯು; ಹರೇತ್ = ಕಳೆಯಬಲ್ಲುದು ?

ಧ್ಯಾನಧಾರಣೆಗಳ ಕ್ರಮವನ್ನೂ ಪ್ರಯೋಜನವನ್ನೂ ಕುರಿತು ಪರೀಕ್ಷಿದ್ರಾಜರು ಪ್ರಶ್ನೆ ಮಾಡಿದ್ದಾರೆ.

**ಶ್ರೀ ಶುಕ ಉವಾಚ :–** ಶ್ರೀಶುಕಾಚಾರ್ಯರು ನುಡಿದರು.

**ಜಿತಾಸನೋ ಜಿತಶ್ವಾಸೋ ಜಿತಸಂಗೋ ಜಿತೇಂದ್ರಿಯಃ ।**
**ಸ್ಥೂಲೇ ಭಗವತೋ ರೂಪೇ ಮನಃ ಸಂಧಾರಯೇದ್ಧಿಯಾ ॥ ೨೩ ॥**

ಜಿತಾಸನಃ = ನೆಟ್ಟಗೆ, ಸ್ಥಿರವಾಗಿ ಕುಳಿತುಕೊಳ್ಳುವ ಅಭ್ಯಾಸಮಾಡಿ; ಜಿತಶ್ವಾಸಃ = ಪ್ರಾಣಾಯಾಮ ಪರನಾಗಿ; ಜಿತಸಂಗಃ = ಏಕಾಕಿಯಾಗಿರುವುದನ್ನ ಭ್ಯಾಸಮಾಡಿ; ಜಿತೇಂದ್ರಿಯಃ = ಇಂದ್ರಿಯಗಳು ವಿಷಯಗಳ ಕಡೆಗೆ ಧಾವಿಸದಂತೆ ತಡೆಹಿಡಿದು; ಸ್ಥೂಲೇ = ಪ್ರಪಂಚದ ವಸ್ತುಗಳಲ್ಲಿಯೂ, ಪ್ರಪಂಚದಲ್ಲಿಯೂ, ಅಂತೆಯೇ ಭಗವನ್ಮೂರ್ತಿಗಳಲ್ಲಿಯೂ ಅಂತರ್ಗತವಾಗಿರುವ ಭಗವಂತನ ರೂಪದಲ್ಲಿ; ಧಿಯಾ = ಬುದ್ಧಿಯ ಸಹಾಯದಿಂದ; ಮನಃ = ಮನಸ್ಸನ್ನು; ಸಂಧಾರಯೇತ್ ಹಿಡಿದು ನಿಲ್ಲಿಸಬೇಕು.

ಧ್ಯಾನಕ್ಕೆ ಅವಶ್ಯಕವಾದ ಅಭ್ಯಾಸಗಳ ವಿಚಾರವನ್ನಿಲ್ಲಿ ತಿಳಿಸಿದ್ದಾರೆ. ಇದು ಪರೀಕ್ಷಿದ್ರಾಜರ 'ಯಥಾ' ಮತ್ತು 'ಯತ್ರ' ಎಂಬ ಪ್ರಶ್ನೆಗಳಿಗೆ ಉತ್ತರ.

**ವಿಶೇಷಸ್ತಸ್ಯ ದೇಹೋಯಂ ಸ್ಥವಿಷ್ಠಶ್ಚ ಸ್ಥವೀಯಸಾಂ ।**
**ಯತ್ರೇದಂ ದೃಶ್ಯತೇ ವಿಶ್ವಂ ಭೂತಂ ಭವ್ಯಂ ಭವಚ್ಚಯತ್ ॥ ೨೪ ॥**

ಯತ್ರ = ಯಾವ ಬ್ರಹ್ಮಾಂಡದಲ್ಲಿ; ಇದಂ = ಈ; ಭೂತಂ = ಗತಿಸಿದ; ಭವ್ಯಂ = ಕಂಡುಬರತಕ್ಕ; ಚ = ಮತ್ತು; ಭವತ್ = ಮುಂದೆ ಸೃಷ್ಟಿಯಾಗುವ; ಯತ್ ವಿಶ್ವಂ = ಯಾವ ಚರಾಚರಾತ್ಮಕವಾದ ಪ್ರಪಂಚವೋ; ಅಯಂ = ಅಂತಹ ಇದು; ಸ್ಥವೀಯಸಾಂ ಚ ಸ್ಥವಿಷ್ಠಃ = ಮಹತೋಮಹೀಯವಾದ; ತಸ್ಯ = ಆ ಪರಬ್ರಹ್ಮನ; ವಿಶೇಷಃ ದೇಹಃ = ದೇಹದಂತೆ ಧರಿಸಲ್ಪಟ್ಟಿರುವುದು ಆಗಿದೆ.

ಬ್ರಹ್ಮಾಂಡವೂ, ಅದರೊಳಗಿನ ವಿಶ್ವವೂ, ತತ್ತದಾಕಾರನಾಗಿ ಅಂತರ್ಯಾಮಿಯಾಗಿರುವ ಪರಬ್ರಹ್ಮನಿಗೆ ಶರೀರದಂತಿದೆಯೇ ಹೊರತು ಅದು ಅವನ ಶರೀರವೇ ಅಲ್ಲ. ಆದರೆ ಬ್ರಹ್ಮಾಂಡಗತ ವಿಶ್ವದ ವಸ್ತುವಿನ ಆಕಾರಗಳ ಮೊತ್ತದಿಂದ ಅಂತರ್ಯಾಮಿಯ ದೈವೀರೂಪವನ್ನು ಮನಸ್ಸಿಗೆ ತಂದುಕೊಳ್ಳಬಹುದು. ಅಂತಹ ಅವನ ರೂಪದಲ್ಲಿ ಹಿಂದೆ ಆಗಿಹೊದ ಈಗದೃಶ್ಯಮಾನ್ಯವಾಗಿರುವ ಮತ್ತು ಮುಂದೆ ಆಗಲಿರುವ ಎಲ್ಲಾ ಬ್ರಹ್ಮಾಂಡ ವಿಶ್ವಗಳ ಕಲ್ಪನೆಗಳೂ ಅಡಕವಾಗಿವೆ. ಅದು ಈಗಿನ ಒಂದು ವಿಶ್ವಕ್ಕೆ ಸೀಮಿತವಾದುದಲ್ಲ. ನಾವು ಯಾವುದನ್ನು ಅತಿ ದೊಡ್ಡದೆನ್ನಬಹುದೋ ಅದನ್ನೂ ಮೀರಿ ದೊಡ್ಡವಾಗಿರುವುದು ಬ್ರಹ್ಮಸ್ವರೂಪ. ಆದುದರಿಂದ ಅವನು ಮಹತೋ ಮಹೀಯಾನ್.

**ಅಂಡಕೋಶೇ ಶರೀರೇಸ್ಮಿನ್ನಸಪ್ತಾವರಣ ಸಂಯುತೇ ।**
**ವೈರಾಜಃ ಪುರುಷೋಯೋಽಸೌ ಭಗವಾನ್ ಧಾರಣಾಶ್ರಯಃ ॥ ೨೫ ॥**

ಸಪ್ತಾವರಣ ಸಂಯುತೇ = ಪೃಥ್ವೀತತ್ತ್ವಾದಿ ಪಂಚ ಆವರಣಗಳಿಂದಲೂ ಅಹಂಕಾರ ತತ್ತ್ವ, ಮಹತ್ತತ್ತ್ವ ಆವರಣಗಳಿಂದಲೂ ಯುಕ್ತವಾದ; ಅಸ್ಮಿನ್ = ಈ; ಅಂಡಕೋಶೇ ಶರೀರೇ = ಬ್ರಹಾಂಡ ಖರ್ಪರವೆಂಬ ಶರೀರದಲ್ಲಿ; ಯಃ = ಯಾರು; ವೈರಾಜಃ ಪುರುಷಃ = ಪ್ರಕಾಶಮಾನ ಪುರುಷನಾಗಿರುವನೋ; ಅಸೌ ಭಗವಾನ್ = ಈ ಪರಬ್ರಹ್ಮನು; ಧಾರಣಾಶ್ರಯಃ = ಮನಸ್ಸಿನಲ್ಲಿ ಸ್ಥಿರವಾಗಿ ಚಿಂತಿಸಬೇಕಾದವನು.

ವಿಶೇಷ ರೀತಿಯಿಂದ ಅಂತರ್ಯಾಮಿಯಾಗಿ ಪ್ರಕಾಶಿಸುತ್ತಿರುವುದರಿಂದ 'ವೈರಾಜಃ' (ವಿರಾಟ್ಪುರುಷ) ಎಂಬ ಹೆಸರು. ಪುರು = ಅನೇಕ ಬಗೆಯಾಗಿ ಕರ್ಮಫಲಗಳನ್ನು; ಸನೋತಿ = ಹಂಚಿಕೊಡುತ್ತಾನೆ; ಆದುದರಿಂದ, ಪುರುಷ ಎಂಬ ಹೆಸರು. ಇಂತಹ ಪ್ರಭುವನ್ನು ಮನಸ್ಸಿನಲ್ಲಿ ಚಿಂತಿಸುವುದರಿಂದ ಅಜ್ಞಾನರೂಪವಾದ ಕಶ್ಮಲವು ನಾಶವಾಗಿ ಹೋಗುತ್ತದೆ ಎಂದು ಪರೀಕ್ಷಿದ್ರಾಜರ ಮೂರನೇ ಪ್ರಶ್ನೆಗೆ ಉತ್ತರ.

**ಪಾತಾಲ ಮೇತಸ್ಯಹಿ ಪಾದಮೂಲಂ ಪಠಂತಿ ಪಾರ್ಷ್ಣಿಪ್ರಪದೇ**
**ರಸಾತಲಂ ।**
**ಮಹಾತಲಂ ವಿಶ್ವ ಸೃಜಃ ಸುಗುಲ್ಫೌ ತಲಾತಲಂ**
**ವೈ ಪುರುಷಸ್ಯ ಜಂಘೇ ॥ ೨೬ ॥**

ಪಾತಾಲಂ = ಪಾತಾಳಲೋಕವನ್ನು; ಏತಸ್ಯ = ಈ ವಿರಾಟ್ ಪುರುಷನ; ಪಾದಮೂಲಂ = ಪಾದತಲವೆಂದು; ಪಠಂತಿ ಹಿ = ಜ್ಞಾನಿಗಳು ವರ್ಣಿಸುತ್ತಾರೆ; ಪಾರ್ಷ್ಣಿಪ್ರಪದೇ = ಮುಂಗಾಲುಗಳನ್ನು; ರಸಾತಲಂ = ರಸಾತಲವೆಂದೂ; ವಿಶ್ವಸೃಜಃ = ವಿಶ್ವದ ಸೃಷ್ಟಿಕರ್ತನ; ಸುಗುಲ್ಫೌ = ಅಂದವಾದ ಹಿಮ್ಮಡಿಗಳನ್ನು; ಮಹಾತಲಂ = ಮಹಾತಲವೆಂದೂ; ಪುರುಷಸ್ಯ = ಅಂತರ್ಯಾಮಿ ಪುರುಷನ; ಜಂಘೇ = ಹಿಮ್ಮಡಿಯಿಂದ ಮೇಲಿರುವ ಮೊಳಕಾಲಿನ ಪ್ರದೇಶವನ್ನು; ತಲಾತಲಂ = ತಳಾತಳವೆಂದೂ; ಪಠಂತಿ ವೈ = ವರ್ಣಿಸುವರೆಂಬುದು ಪ್ರಸಿದ್ಧವಾಗಿದೆ.

ಇವು ಅಂತರ್ಯಾಮಿ ರೂಪದ ಅವಯವಗಳೆಂದು ತಿಳಿಯಬಾರದು. ಉಕ್ತವಾದ ಲೋಕಗಳು ಭಗವತ್ಸ್ವರೂಪದ ಆಯಾ ಅವಯವಗಳ ಅಂಶಗಳಿಂದ ಉತ್ಪನ್ನವಾಗಿ ಸುರಕ್ಷಿತವಾಗಿವೆ ಎಂದು ತಿಳಿಯಬೇಕು.

**ದ್ವೇಜಾನುನೀ ಸುತಲಂ ವಿಶ್ವಮೂರ್ತೇರೂರುದ್ವಯಂ**
**ವಿತಲಂಚಾತಲಂ ಚ ।**
**ಮಹೀತಲಂ ತಜ್ಜಘನಂ ಮಹೀಪತೇ ನಭಸ್ಥಲಂ ನಾಭಿಸರೋ**
**ಗೃಣಂತಿ ॥ ೨೭ ॥**

ವಿಶ್ವಮೂರ್ತೇಃ = ವಿರಾಟ್ಪುರುಷನ; ದ್ವೇಜಾನುನೀ = ಎರಡು ಮೊಳಕಾಲು ಚಿಪ್ಪುಗಳು; ಸುತಲಂ = ಸುತಲಲೋಕಕ್ಕೆ ಆಶ್ರಯಭೂತವಾದುವು; ಊರುದ್ವಯಂ = ಎರಡು ತೊಡೆಗಳ ಕೆಳಭಾಗ ಮೇಲ್ಭಾಗಗಳು; ವಿತಲಂ = ವಿತಲಲೋಕ; ಚ = ಮತ್ತು; ಅತಲಂ = ಅತಲಲೋಕ; ತತ್ ಜಘನಂ = ಆ ಪುರುಷನ ಕಟಿ ಪ್ರದೇಶವು (ಸೊಂಟವು); ಮಹೀತಲಂ = ಭೂಲೋಕವು; ನಭಸ್ಥಲಂ = ಅಂತರಿಕ್ಷ ಅಥವ ಭುವರ್ಲೋಕವು; ನಾಭಿಸರಃ = ಪರಮಾತ್ಮನ ನಾಭಿ ಎಂಬ ಸರೋವರ ಎಂಬುದಾಗಿ; ಗೃಣಂತಿ = ತಿಳಿಯುತ್ತಾರೆ; ಮಹೀಪತೇ = ಎಲೈ ರಾಜನೇ, ಈ ರೀತಿಯಾಗಿ ಚಿಂತನೆಯನ್ನು ಮಾಡು.

ಪರಮಾತ್ಮನ ನಾಭಿಯಿಂದ ಬ್ರಹ್ಮನಿಗೆ ಜನ್ಮಸ್ಥಾನವಾದ ಕಮಲವು ಹುಟ್ಟಿದುದರಿಂದ ಆ ನಾಭಿಪ್ರದೇಶವನ್ನು ಸರೋವರವೆಂದು ಕರೆದಿದ್ದಾರೆ.

**ಉರಸ್ಥಲಂ ಜ್ಯೋತಿರನೀಕಮಸ್ಯ ಗ್ರೀವಾ ಮಹರ್ವದನಂ ವೈ ಜನೋಽಸ್ಯ ।**
**ತಪೋರರಾಟಿಂ ವಿದುರಾದಿಪುಂಸಃ ಸತ್ಯಂತು ಶೀರ್ಷಾಣಿ ಸಹಸ್ರ ಶೀರ್ಷ್ಣಃ ॥ ೨೮ ॥**

ಉರಸ್ಥಲಂ = ಎದೆಯ ಪ್ರದೇಶವು; ಅಸ್ಯ = ಈ ವಿರಾಟ್ ಪುರುಷನ; ಜೋತಿರನೀಕಂ = ಕಾಲಚಕ್ರದ ಆರಂಭಸ್ಥಾನವಾದ ಸ್ವರ್ಗಲೋಕವು; ಗ್ರೀವಾ = ಕಂಠಪ್ರದೇಶವು; ಮಹಃ = ಮಹರ್ಲೋಕವು; ವದನಂ ವೈ = ಮುಖವೇ; ಜನಃ = ಜನಲೋಕವು; (ಅಸ್ಯ = ಈ ಮಹಾನುಭಾವನ;) ಆದಿಪುಂಸಃ = ಆದಿಪುರುಷನಾದ ಇವನ; ರರಾಟಿಂ = ಹಣೆಯ ಪ್ರದೇಶವನ್ನು; ತಪಃ = ತಪೋಲೋಕವೆಂದು; ವಿದುಃ = ಜ್ಞಾನಿಗಳು ತಿಳಿದಿದ್ದಾರೆ; ಸತ್ಯಂ ತು = ಸತ್ಯಲೋಕವಾದರೋ; ಸಹಸ್ರಶೀರ್ಷ್ಣಃ = ಸಹಸ್ರಾರು ತಲೆಗಳುಳ್ಳ ಇವನ; ಶೀರ್ಷಾಣಿ = ತಲೆಗಳು.

ಹಿಂದೆಯೇ ಹೇಳಿದಂತೆ, ಉಕ್ತವಾದ ಲೋಕಗಳು ಆಯಾ ಸಂಬಂಧಪಟ್ಟ ಪುರುಷನ ಅವಯವಗಳ ಅಂಶಗಳನ್ನು ಹೊಂದಿ, ಪೋಷಿತವಾಗಿವೆ ಎಂದು ತಿಳಿಯಬೇಕು. ಕಾಲಚಕ್ರವನ್ನು ವಾಯುಪಾಶಗಳಿಂದ ನಿಯಂತ್ರಿಸುವ ಧ್ರುವಸ್ಥಾನವೂ, ಮೇಲಿನ ಇಂದ್ರಲೋಕವೂ ಸ್ವರ್ಗವೆಂದು ಗಣಿಸಲ್ಪಟ್ಟಿವೆ. ಸಹಸ್ರ ಶಬ್ದಕ್ಕೆ ಅನೇಕ ಎಂದರ್ಥ. ಸತ್ಯಲೋಕದಲ್ಲಿ ಭಗವಂತನ ಸಹಸ್ರಾರು ಬಗೆಯ ತಲೆಗಳ ಅಂಶಗಳು ಸಂಘಟಿಸಿಕೊಂಡಿರುವಂತೆ ನಮ್ಮ ತಲೆಗಳಲ್ಲಿಯೂ ಮೆದುಳು ಸಹಸ್ರಾರ

ಕಮಲವೆನಿಸಿಕೊಂಡು ಸಹಸ್ರಾರು ಕಾರ್ಯಗಳನ್ನು ನಿರ್ವಹಿಸುವದೆಂಬುದನ್ನು ನಾವು ಬಲ್ಲೆವು.

**ಇಂದ್ರಾದಯೋ ಬಾಹವ ಆಹುರಸ್ಯ ಕರ್ಣೌ ದಿಶಃ ಶ್ರೋತ್ರ**
**ಮಮುಷ್ಯ ಶಬ್ದಃ ।**
**ನಾಸತ್ಯದಸ್ರೌ ಪರಮಸ್ಯ ನಾಸೇ ಘ್ರಾಣಂ ಚ ಗಂಧೋ**
**ಮುಖಮಗ್ನಿರಿದ್ಧಃ ॥ ೨೯ ॥**

ಅಸ್ಯ = ಈ ಪುರುಷನ; ಬಾಹವಃ = ಸಹಸ್ರಾರು ತೋಳುಗಳು; ಇಂದ್ರಾದಯಃ = ಇಂದ್ರನೇ ಮೊದಲಾದ ದೇವತೆಗಳು; ಕರ್ಣೌ = ಎರಡು ಕಿವಿಗಳು; ದಿಶಃ = ದಿಕ್ಕುಗಳು; ಅಮುಷ್ಯ = ಈ ಪುರುಷನ; ಶ್ರೋತ್ರಃ = ಕಿವಿಯು; ಶಬ್ದಃ = ಶಬ್ದದ ಉತ್ಪತ್ತಿಸ್ಥಾನವು; ಪರಮಸ್ಯ = ಪರಮಪುರುಷನಾದ ಇವನ; ನಾಸೇ = ಮೂಗುಗಳು; ಘ್ರಾಣಂ = ವಾಸನೆಯ ಸ್ಥಾನವು; ಇದ್ಧಃ ಅಗ್ನಿಃ = ಜ್ವಲಿಸುವ ಅಗ್ನಿಯು; ಮುಖಂ = ಬಾಯಿಯಾಗಿದೆ.

ಕ್ಷತ್ರಿಯಕುಲ ರಕ್ಷಕರಾದ ಇಂದ್ರಾದಿ ದೇವತೆಗಳು ಬಲಪರಾಕ್ರಮಗಳಲ್ಲಿ ವಿರಾಟ್ಪುರುಷನ ಬಾಹುಗಳ ಅಂಶವೆಂದು ತಿಳಿಯಬೇಕು. ದಿಕ್ಕುದಿಕ್ಕುಗಳಲ್ಲಿ ಪರಮಾತ್ಮನ ಕಿವಿಯ ಅಂಶಗಳಿರುವುದರಿಂದ ನಮ್ಮ ಕಿವಿಗಳಿಗೂ ದಿಕ್ಕುದಿಕ್ಕುಗಳಿಂದ ಬರುವ ಶಬ್ದತರಂಗಗಳಿಗೂ ಸಂಬಂಧವು ಕಲ್ಪಿತವಾಗಿದೆ. ಕಿವಿಯೆಂಬುದು ಹೊರಗಿನ ಅವಯವದ ಆಕಾರ. ಶ್ರೋತ್ರೇಂದ್ರಿಯವೆಂಬುದು ಕಿವಿಯ ನರಗಳಲ್ಲಿರುವ ಶಬ್ದಗ್ರಹಣ ಶಕ್ತಿ. ಆ ಶಕ್ತಿಗೆ ಕಾರಣವಾಗಿರುವುದು ವಿರಾಟ್ ಪುರುಷನ ಶ್ರೋತ್ರೇಂದ್ರಿಯದ ಸನ್ನಿಧಾನ. ಇದರಂತೆ ಮೂಗಿನ ಹೊಳ್ಳೆಗಳು ಮತ್ತು ಘ್ರಾಣೇಂದ್ರಿಯ ಶಕ್ತಿ. ಇದಕ್ಕೆ ಅಭಿಮಾನಿಗಳಾಗಿರುವವರು ನಾಸತ್ಯ ದಸ್ರರೆಂಬ ಅಶ್ವಿನೀ ದೇವತೆಗಳು. ಅವರ ಮುಖಾಂತರ ಪರಮಾತ್ಮ ಘ್ರಾಣೇಂದ್ರಿಯದ ಶಕ್ತಿಯನ್ನು ವ್ಯಕ್ತಪಡಿಸುತ್ತಾನೆ. ಜೀರ್ಣಾಂಗಳ ಪ್ರಥಮ ಅವಯವ ಬಾಯಿ. ಜಠರಾಗ್ನಿಯೆಂಬುದು ಇಲ್ಲಿಂದಲೇ ಪ್ರಾರಂಭವಾಗುವುದು. ನಾವು ಊಟಮಾಡುವುದೆಂದರೆ ಆಹಾರ ಪದಾರ್ಥಗಳನ್ನು ಈ ಅಗ್ನಿಯಲ್ಲಿ ಹೋಮಮಾಡಿ ಭಗವಂತನಿಗರ್ಪಿಸುವುದು. ನಮ್ಮ ಬಾಯಿಂದ ಹೊರಡುವ ಶಬ್ದಗಳಿಗೂ ಈ ಅಗ್ನಿಯು ಸಹಕಾರಿ ಇಲ್ಲಿನ ಅಗ್ನಿಯಲ್ಲಿ ಪರಶುರಾಮ ರೂಪದಿಂದ ಭಗವಂತನಿದ್ದಾನೆ.

**ದ್ಯೌರಕ್ಷಿಣೀ ಚಕ್ಷುರಭೂತ್ಪತಂಗಃ ಪಕ್ಷ್ಮಾಣಿ ವಿಷ್ಣೋರಹನೀ**
**ಉಭೇ ಚ ।**
**ತದ್ಭ್ರೂವಿಜೃಂಭಃ ಪರಮೇಷ್ಠಿಧಿಷ್ಣ್ಯಮಾಪೋಽಸ್ಯ ತಾಲೂರಸಮೇವ**
**ಜಿಹ್ವಾ ॥ ೩೦ ॥**

ಅಕ್ಷಿಣೀ = ಈ ಪುರುಷನ ಕಣ್ಣುಗಳು; ದ್ಯೌಃ = ತೇಜೋಲೋಕವು; ಚಕ್ಷುಃ = ಕಣ್ಣು; ಪತಂಗಃ ಅಭೂತ್ = ಸೂರ್ಯನ ಉತ್ಪತ್ತಿಗೆ ಕಾರಣವಾಯಿತು; ವಿಷ್ಣೋಃ = ವ್ಯಾಪ್ತವಾದ ಈ ಪುರುಷನ; ಪಕ್ಷ್ಮಾಣಿ = ಕಣ್ಣುಗಳ ರೆಪ್ಪೆಗಳು; ಉಭೇ ಚ ಅಹನೀ = ಮನುಷ್ಯರ ಮತ್ತು ದೇವತೆಗಳ ಹಗಲುಗಳನ್ನು ಕಲ್ಪಿಸತಕ್ಕವುಗಳಾಗಿರುವುವು; ತತ್ ಭ್ರೂ ವಿಜೃಂಭಃ = ಅವನ ಹುಬ್ಬುಗಳ ಸಂಕೇತಗಳು; ಪರಮೇಷ್ಠಿಧಿಷ್ಣ್ಯಂ = ಬ್ರಹ್ಮನ ಸತ್ಯಲೋಕದ ಸ್ಥಿತಿಗೆ ಕಾರಣವಾಗಿರುವುವು; ಅಸ್ಯ = ಇವನ; ತಾಲೂ = ಬಾಯೊಳಗೆ ಮೇಲೆ ಕೆಳಗೆ ಇರುವ ಅಂಗಳಿನ ಪ್ರದೇಶಗಳು; ಆಪಃ = ನೀರಿನ ಉತ್ಪತ್ತಿಗೆ ಕಾರಣವಾದವು; ಜಿಹ್ವಾ ಏವ = ಅವನ ನಾಲಿಗೆಯೇ; ರಸಃ = ಷಡ್ರಸಗಳ ಉತ್ಪತ್ತಿಗೆ ಕಾರಣವಾದುದು.

ಇಂದ್ರಿಯಗ್ರಾಹ್ಯ ವಸ್ತುಗಳಲ್ಲಿಯೂ, ಇಂದ್ರಿಯಗಳಲ್ಲಿಯೂ ಅವುಗಳಿಗೆ ಯಜಮಾನರೆನಿಸುವ ದೇವತೆಗಳಿನ್ನಿಟ್ಟು, ಆ ಎಲ್ಲವರಲ್ಲಿಯೂ ಎಲ್ಲರಲ್ಲಿಯೂ ವಿರಾಟ್ಪುರುಷನೇ ಇದ್ದು ವ್ಯಾಪಾರಗಳನ್ನು ನಡೆಸುವುದರಿಂದ ಪರಸ್ಪರ ಸಂಬಂಧ ಕಲ್ಪನೆಗಳಾಗಿವೆ. ಇದನ್ನು ಇಂಗ್ಲೀಷಿನಲ್ಲಿ Co-ordinating factor ಎನ್ನುತ್ತಾರೆ. ಅಂತಹದೊಂದು ಇರಬೇಕು, ಅದನ್ನು ನಾವಿನ್ನೂ ಕಂಡಿಲ್ಲ ಎಂದು ಈಗಿನ ವಿಜ್ಞಾನಿಗಳು ಹೇಳುತ್ತಾರೆ. ಈ ಅಂಶವನ್ನು ಕನಕದಾಸರು 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ' ಎಂಬ ಪದದಲ್ಲಿ ಚೆನ್ನಾಗಿ ಚಿತ್ರಿಸಿದ್ದಾರೆ.

**ಛಂದಾಂಸ್ಯನಂತಸ್ಯ ಗಿರೋ ಗೃಣಂತಿ ದಂಷ್ಟ್ರಾರ್ಯಮೇಂದೂಡು**
**ಗಣಾದ್ವಿಜಾನಿ ।**
**ಹಾಸೋಜನೋನ್ಮಾದ ಕರೀಚ ಮಾಯಾ ದುರಂತ ಸರ್ಗೋ**
**ಯದಪಾಂಗ ಮೋಕ್ಷಃ ॥ ೩೧ ॥**

ಛಂದಾಂಸಿ = ಗಾಯತ್ರ್ಯಾದಿ ಛಂದಸ್ಸುಗಳಲ್ಲಿ ಮೂಡಿಬಂದಿರುವ ವೇದವಾಕ್ಯಗಳು; ಅನಂತಸ್ಯ = ಅಗಣಿತರೂಪಗಳುಳ್ಳ ಇವನ; ಗಿರಃ = ಮಾತುಗಳು; (ಎಂದು); ಗೃಣಂತಿ = ತಿಳಿಯುತ್ತಾರೆ; ದಂಷ್ಟ್ರಾಃ = ಅನೇಕ ಮುಖಗಳಲ್ಲಿರುವ ಕೋರೆದಾಡೆಗಳ ಅಂಶಗಳಿಂದ ಹುಟ್ಟಿದವರು; ಅರ್ಯಮಾ ಇಂದೂ = ಸೂರ್ಯಚಂದ್ರರು; ದ್ವಿಜಾನಿ = ಹಲ್ಲುಗಳು; ಉಡುಗಣಾಃ = ನಕ್ಷತ್ರ ಸಮೂಹಗಳ ಉಗಮ ಸ್ಥಾನಗಳು; ಜನ ಉನ್ಮಾದಕರೀ ಹಾಸಃ ಚ = ಜನರಿಗೆ ಮಂಕುಕವಿಸುವ ಅವನ ನಗುವಿಕೆಯಾದರೋ; ಮಾಯಾ = ಮಾಯಾನಾಮಕಳಾದ ಲಕ್ಷ್ಮೀದೇವಿಯಲ್ಲಿ ನಿಂತು ಜಡಮಾಯೆಯನ್ನು ರೂಪಾಂತರಗೊಳಿಸಿ; ದುರಂತಸರ್ಗಃ = ಕೊನೆಯಿಲ್ಲದೆ ಸಾಗುವ

ಜಗತ್ಸೃಷ್ಟಿಗೆ ಕಾರಣವಾದ; ಮಾಯಾ = ಅವನ ಶಕ್ತಿವಿಶೇಷವು; ಅಪಾಂಗಃ = ಅವನ ಕೃಪಾಕಟಾಕ್ಷವು; ಮೋಕ್ಷಃ = ಮುಕ್ತಿಪ್ರದವಾದುದು.

ವೇದವಾಕ್ಯಗಳು ಜಡಗಳ ಗುಂಪಿಗೆ ಸೇರಿದುವು. ಅವುಗಳ ಭಾವವು ಭಗವಂತನ ಮಹಿಮೆಯನ್ನು ತಿಳಿಸುವ ಭಗವತ್ಸ್ವರೂಪವೇ ಆಗಿರುವುದು. ಆ ಭಗವತ್ಸ್ವರೂಪವು ವೇದಗಳನ್ನು ವ್ಯಕ್ತಗೊಳಿಸುವುದರಿಂದ ಅವು ಅವನ ಮಾತುಗಳೇ ಸರಿ. ಹಾಗೆಂದ ಮಾತ್ರಕ್ಕೆ, ವೇದಗಳು ಪರಬ್ರಹ್ಮನ ಕಲ್ಪನೆಗಳೆಂದು ತಿಳಿಯಬಾರದು. ಅವನ ಮಹಿಮೆಯಂತೆ ಆ ಮಹಿಮಾಜ್ಞಾನವೂ ನಿತ್ಯವಾಗಿರುವುದು. ಅದು ಅವನಿಂದ ಅಭಿನ್ನವೂ ಆಗಿರುವುದು. ಜಗತ್ತಿನಲ್ಲಿ ಪ್ರಕಟವಾಗುವ ಅದರ ಜಡರೂಪವು ಮಾತ್ರ ಅವನಿಂದ ಭಿನ್ನವಾದುದೇ ಸರಿ. ಅದೂ ಅವನನ್ನು ಆಶ್ರಯಿಸಿಕೊಂಡೇ ಇರುವುದು. 'ಮಾಯಾ' ಎಂಬ ಪದವನ್ನು ಜಡಮಾಯೆ, ಚಿನ್ಮಾಯೆ, ಭಗವನ್ಮಾಯೆ (ಅವ್ಯಕ್ತ, ಅದರ ಯಜಮಾನಿ ಲಕ್ಷ್ಮೀದೇವಿ, ಈ ಎರಡಕ್ಕೂ ಆಶ್ರಯವಾದ ಭಗವಂತನ ಶಕ್ತಿ) ಎಂದು ಮೂರು ಬಗೆಯಾಗಿ ತಿಳಿಯಬೇಕು.

**ವ್ರೀಡೋತ್ತರೋಷ್ಠೋಽಧರ ಏವ ಲೋಭೋ ಧರ್ಮಸ್ತನೋಽಧರ್ಮ ಪಥಶ್ಚ ಪೃಷ್ಠಂ ।**
**ಕಸ್ತಸ್ಯಮೇಢ್ರಂ ವೃಷಣೌ ಚ ಮಿತ್ರಃ ಕುಕ್ಷಿಃ ಸಮುದ್ರಾ ಗಿರಯೋಽಸ್ಥಿ ಸಂಘಾಃ ॥ ೩೨ ॥**

ತಸ್ಯ = ಆ ಪುರುಷನ; ಉತ್ತರೋಷ್ಠಃ = ಮೇಲಿನ ತುಟಿಯು; ವ್ರೀಡಾ = ಲಜ್ಜೆಯೆಂಬ ಗುಣಕ್ಕೆ ಉಗಮಸ್ಥಾನವಾಗಿದೆ; ಅಧರಃ ಏವ = ಕೆಳಗಿನ ತುಟಿಯೇ; ಲೋಭಃ = ಲೋಭದ ಉಗಮಸ್ಥಾನ; ಸ್ತನಃ = ಎದೆಯ ಭಾಗವು; ಧರ್ಮಃ = ಧರ್ಮಾಶ್ರಯವು; ಚ = ಮತ್ತು; ಪೃಷ್ಠಂ = ಬೆನ್ನಿನ ಭಾಗವು; ಅಧರ್ಮ ಪಥಃ = ಅಧರ್ಮಕ್ಕೆ ಕಾರಣವು; ತಸ್ಯ = ಅವನ; ಮೇಢ್ರಂ = ಜನನಾಂಗವು; ಕಃ = ಪ್ರಜಾಪತಿಯ ಸ್ಥಾನವು; ಚ = ಹಾಗೆಯೇ; ವೃಷಣೌ = ಬೀಜಾಂಗಗಳು; ಮಿತ್ರಃ = ಮಿತ್ರ ಮತ್ತು ವರುಣರ ಸ್ಥಾನವು; ಕುಕ್ಷಿಃ = ಉದರವು; ಸಮುದ್ರಾಃ = ಸಮುದ್ರಗಳು; ಅಸ್ಥಿಸಂಘಾಃ = ಮೂಳೆಗಳ ಸಮೂಹಗಳು; ಗಿರಯಃ = ಪರ್ವತಗಳು.

ಭಗವಂತನಿಗೆ ನಮ್ಮಂತೆ ಅವಯವ ವಸ್ತುಗಳೂ, ಅವಯವಗಳೂ ಇವೆಯೆ ಎಂದು ಕೇಳಬಹುದು. ಇವೆ. ಆದರವು ಪ್ರಾಕೃತಗಳಲ್ಲ; ಸ್ವರೂಪಭೂತವಾದ ಚಿದಾನಂದಾತ್ಮಕವಾದವು; ದೋಷರಹಿತವಾದುವು, ಅಷ್ಟೇ ಅಲ್ಲ. ಇತರ ಜೀವಿಗಳ ಸ್ವರೂಪಾವಯವಗಳು ತಮ್ಮ ತಮ್ಮ ಕೆಲಸಗಳನ್ನು ಮಾತ್ರ ನಿರ್ವಹಿಸಬಲ್ಲವು, ಆದರೆ ಭಗವಂತನ ಒಂದೊಂದು ಅವಯವವೂ ಬೇರೆ ಎಲ್ಲಾ ಅವಯವಗಳ ಕೆಲಸಗಳನ್ನೂ

ನಿರ್ವಹಿಸಬಲ್ಲದು; ಒಂದೊಂದೂ ಸರ್ವವಿಧದಲ್ಲಿಯೂ ಪೂರ್ಣವಾದುದು. ಆದುದರಿಂದ ಪರಮಾತ್ಮನ ಅವಯವಗಳಲ್ಲಿ, ಗುಣಗಳಲ್ಲಿ, ಕಾರ್ಯಗಳಲ್ಲಿ ಅಭೇದವನ್ನು ಚಿಂತಿಸಬೇಕು. ಇದು ನಿಜವಾದ ಅದ್ವೈತ. ''ನೇಹ ನಾನಾಸ್ತಿ ಕಿಂಚನ'' ಎಂಬುದರ ಅರ್ಥ ಇದೇ. (ಇಹ = ಈ ಭಗವಂತನಲ್ಲಿ; ನಾನಾ = ಬೇರೆ ಬೇರೆಯೆಂಬುದು; ಕಿಂಚನ = ಯಾವುದೂ; ನಾಸ್ತಿ = ಇಲ್ಲ)

ಹಿಂದೆಯೇ ಹೇಳಿದಂತೆ, ವಿರಾಟ್‌ಪುರುಷನ ದೇಹಾವಯವಗಳು ವಿಶ್ವದ ಸ್ಥಿತಿಗಳಿಗೆ ಉಗಮಸ್ಥಾನಗಳೂ, ಆಶ್ರಯಗಳೂ, ರಕ್ಷಕಗಳೂ ಆಗಿವೆಯೆಂದು ತಿಳಿಯಬೇಕು. ಉಗಮ ಎಂದರೆ ಭಗವಂತನ ಸಂಕಲ್ಪಮಾತ್ರದಿಂದ ಉತ್ಪನ್ನವಾಗುವುದು ಎಂದರ್ಥ.

**ನದ್ಯೋಽಸ್ಯನಾಡ್ಯೋಽಥ ತನೂರುಹಾಣಿ**
**ಮಹೀರುಹಾವಿಶ್ವತನೋರ್ನೃಪೇಂದ್ರ ।**
**ಅನ್ನಂ ಚ ವೀರ್ಯಂ ಶ್ವಸಿತಂ ಮಾತರಿಶ್ವಾ**
**ಗತಿರ್ವಯಃ ಕರ್ಮಗುಣ ಪ್ರವಾಹಃ** ॥ ೩೩ ॥

ನೃಪೇಂದ್ರ = ಎಲೈ ರಾಜನೇ; ಅಸ್ಯ = ಈ; ವಿಶ್ವತನೋಃ = ವಿಶ್ವದಲ್ಲಿ ಪ್ರವಿಷ್ಟನಾಗಿ, ವಿಶ್ವವನ್ನು ದೇಹದಂತೆ ಧರಿಸಿರುವ ಭಗವಂತನ; ನಾಡ್ಯಃ = ನರಗಳು; ನದ್ಯಃ = ನದಿಗಳು; ತನೂರುಹಾಣಿ = ಮೈಮೇಲಿನ ಕೂದಲುಗಳು; ಮಹೀರುಹಾಃ = ವೃಕ್ಷಜಾತಿಗಳು; ಚ = ಮತ್ತು; ವೀರ್ಯಂ = ರೇತಸ್ಸು; ಅನ್ನಂ = ಆಹಾರಯೋಗ್ಯ ಪದಾರ್ಥಗಳು; ಶ್ವಸಿತಂ = ಶ್ವಾಸೋಚ್ಛ್ವಾಸವು; ಮಾತರಿಶ್ವಾ = ಮುಖ್ಯಪ್ರಾಣನಿಂದ ಪ್ರೇರಿತವಾಗುವ ವಾಯುವು; ಗತಿಃ = ವಿಶ್ವದ ಕಾರ್ಯಗಳನ್ನು ಮುಂದುವರಿಸುವ ಕಾರ್ಯವು; ವಯಃ = ಕಾಲಮಾನವು; ಕರ್ಮ = ಅವನು ನಡೆಸುವ ವಿವಿಧ ವ್ಯಾಪಾರಗಳು; ಗುಣಪ್ರವಾಹಃ = ಸತ್ವಾದಿ ಗುಣಕಾರ್ಯಗಳ ವಿಸ್ತಾರ.

ವಿಶ್ವದಲ್ಲಿ ಕಂಡುಬರುವ ಭಗವಂತನ ಸ್ಥಿತಿಗತಿಗಳು ಕೇವಲ ಅವನ ಸಂಕಲ್ಪರೂಪವಾದುವೆಂಬುದನ್ನು ಸದಾ ನೆನಪಿನಲ್ಲಿಡಬೇಕು. ಅವನು ಇತರರಂತೆ ಶ್ರಮಪಡಬೇಕಾಗಿಲ್ಲ. ನರಗಳನ್ನು ನದಿಗಳೆಂದಾಗ ನದಿಗಳಲ್ಲಿ ನದ್ಯಭಿಮಾನಿ ದೇವತೆಗಳೂ, ಅವರಲ್ಲಿ ವಿರಾಟ್ಪುರುಷನ ನದೀರೂಪಕಲ್ಪನೆಯ ಸಂಕಲ್ಪವೂ, ಅದರಂತೆ ನಮ್ಮ ದೇಹಗಳಲ್ಲಿನ ನರಗಳಲ್ಲಿ ನದ್ಯಭಿಮಾನಿ ದೇವತೆಗಳೂ, ಅವರಲ್ಲಿ ವಿಶ್ವರೂಪೀ ಭಗವಂತನೂ ಇರುವುದನ್ನು ಚಿಂತಿಸಿ, ಭಕ್ತಿಯಿಂದ ಹೊರಗೂ ಒಳಗೂ ನಮಿಸಿ ಕೃತಾರ್ಥರಾಗಬೇಕು.

ಇದರಂತೆ ವೃಕ್ಷಗಳು ಮನಸ್ಸನ್ನು ಆಕರ್ಷಿಸಿದಾಗ ಅವುಗಳಲ್ಲಿ ಭಗವಂತನ ರೋಮಗಳ ಅಂಶಗಳನ್ನು ಚಿಂತಿಸಿ ಧನ್ಯರಾಗಬೇಕು; ಇತ್ಯಾದಿ ಇತ್ಯಾದಿ. ಹೀಗೆ ಚಿಂತಿಸುವುದನ್ನೇ ವಿಶ್ವರೂಪೋಪಾಸನೆ ಎನ್ನುವರು.

**ಈಶಸ್ಯ ಕೇಶಾನ್ವಿದುರಂಬುವಾಹಾನ್ವಾಸಸ್ತು**
**ಸಂಧ್ಯೇ ಕುರುವರ್ಯ ಭೂಮ್ನಃ ।**
**ಅವ್ಯಕ್ತಮಾಹುರ್ಹೃದಯಂ ಮನಸ್ತು ಸ**
**ಚಂದ್ರಮಾಃ ಸರ್ವ ವಿಕಾರಕೋಶಃ** ॥ ೩೪ ॥

ಕುರುವರ್ಯ = ಅಯ್ಯಾ, ಪರೀಕ್ಷಿದ್ರಾಜಾ; ಈಶಸ್ಯ = ಜಗದೊಡೆಯನ; ಕೇಶಾನ್ = ತಲೆಕೂದಲುಗಳನ್ನು; ಅಂಬುವಾಹಾನ್ = ಮೇಘಗಳೆಂದು; ವಿದುಃ = ಬಲ್ಲವರು ತಿಳಿದಿದ್ದಾರೆ; ಭೂಮ್ನಃ = ಭಗವಂತನ; ವಾಸಃ ತು = ಆಚ್ಛಾದಕ ವಸ್ತುಗಳಾದರೋ; ಸಂಧ್ಯೇ = ಪ್ರಾತಃಕಾಲ ಸಾಯಂಕಾಲಗಳೆಂಬ ಸಂಧ್ಯಾಕಾಲಗಳು, ಅವ್ಯಕ್ತಂ = ಮೂಲಪ್ರಕೃತಿಯನ್ನು; ಹೃದಯಂ = ಅವನ ಹೃದಯವೆಂದು; ಆಹುಃ = ಹೇಳುತ್ತಾರೆ; ಸರ್ವವಿಕಾರ ಕೋಶಃ = ಕಾಮಾದಿ ನಾನಾ ಭಾವನೆಗಳ ಸ್ಥಾನವಾದ; ಮನಃ ತು = ಮನಸ್ಸು ಎಂಬ ಇಂದ್ರಿಯವಾದರೋ; ಚಂದ್ರಾಮಾಃ = ಚಂದ್ರನು.

ಮಳೆಯ ಧಾರೆಗಳಂತಿರುವ ಜಗದೀಶ್ವರನ ತಲೆಗೂದಲುಗಳ ಅಂಶವು ಆಕಾಶದಲ್ಲಿ ತೇಲುವ ಮೋಡಗಳಲ್ಲಿರುವುದು. ಕೇಶ ಎಂಬ ಹೆಸರು ವರುಣನಿಗೂ ಅನ್ವಯಿಸುವುದು. ಆದುದರಿಂದ ಮಳೆಗೆ ಯಜಮಾನನಾದ ವರುಣನಲ್ಲಿದ್ದು ಆ ದೇವೋತ್ತಮನು ಮಳೆಗೆ ಕಾರಣನಾಗಿರುವನು. ಅವ್ಯಕ್ತ ತತ್ವವು ವಿಶ್ವದ ಮೂಲ ಕಾರಣವಾದ ಹೃದಯದಂತಿರುವುದು. ಅದಕ್ಕೆ ಯಜಮಾನಿ ಚಿತ್ಪ್ರಕೃತಿ ನಾಮಕಳಾದ ರಮಾದೇವಿ. ಸೃಷ್ಟಿಯ ರಹಸ್ಯಗಳನ್ನೆಲ್ಲಾ ಭಗವಂತನ ದಯೆಯಿಂದ ಬಲ್ಲವಳು ಆ ಜಗನ್ಮಾತೆ. ಆ ಮಹಾನುಭಾವನ ಹೃದಯವು ವ್ಯಕ್ತವಾಗಿ ನಮಗೆ ಕಂಡು ಬರುವುದು ಅವ್ಯಕ್ತದ ವ್ಯಕ್ತ ರೂಪವಾದ ಜಗತ್ತಿನ ಮೂಲಕ. ಆದುದರಿಂದ ಅವ್ಯಕ್ತದಲ್ಲಿ ಭಗವಂತನ ಹೃದಯದ ಅಂಶ. ಆ ಹೃದಯವೇ ರಮಾದೇವಿಗೆ ಮನೆ. ಉಡುವ ವಸ್ತ್ರ ಪ್ರಾತಃಕಾಲದ ಸಂಕೇತ; ಉತ್ತರೀಯಾದಿ ಹೊದಿಕೆಗಳು ಸಂಜೆಯ ಸಂಕೇತ; ಸುಷುಮ್ನಾ ನಾಡಿಯೊಳಗಿನ ಹೃದಯಕಮಲದ ರೂಪದಲ್ಲಿ ವ್ಯಕ್ತವಾಗಿ ನರಮಂಡಲದಲ್ಲಿ ವಿಸ್ತೃತವಾಗಿರುವುದು ಮನಸ್ಸು. ಆ ಕಮಲದ ಅಷ್ಟದಳಗಳಲ್ಲಿ ಅಷ್ಟದಿಕ್ಪಾಲಕರ ಅಂಶಗಳನ್ನಿಟ್ಟು ಅವರಿಗೆ ಭಗವಂತ ಪ್ರೇರಕನಾಗಿ ವಿವಿಧ ಭಾವನೆಗಳನ್ನುಂಟುಮಾಡುವನು. ದಶೇಂದ್ರಿಯಗಳು, ಪಂಚತನ್ಮಾತ್ರಗಳು ಮತ್ತು ಇವುಗಳಿಗೆ ಆಶ್ರಯವಾಗಿರುವ ಮನಸ್ಸೆಂಬ ಇಂದ್ರಿಯ– ಈ

ಹದಿನಾರು ಸೂಕ್ಷ್ಮಪ್ರಕೃತಿಯ ಅಂಶಗಳನ್ನು ಹದಿನಾರು ಕಳೆಗಳೆನ್ನುವರು. ಇವುಗಳ ಪೋಷಣೆಯು ಷೋಡಶಕಳಾಯುಕ್ತನಾದ ಚಂದ್ರನಿಂದ. ಆದುದರಿಂದ ಮನಸ್ಸು ಭಗವಂತನ ಮನಸ್ಸಿನ ಅಂಶದಿಂದ ಕೂಡಿ, ಚಂದ್ರನ ಮುಖಾಂತರ ಸ್ಥಿತಿಗತಿಗಳನ್ನು ಹೊಂದಿದೆ.

**ವಿಜ್ಞಾನ ಶಕ್ತಿಂ ಮತಿ ಮಾಮನಂತಿ**
**ಸರ್ವಾತ್ಮನೋಂತಃ ಕರಣಂ ಗಿರಿತ್ರಃ ।**
**ಅಶ್ವಾಶ್ವತರ್ಯುಷ್ಟ್ರ ಗಜಾನಖಾನಿ ಸರ್ವೇ**
**ಮೃಗಾಃ ಪಶವಃ ಶ್ರೋಣಿದೇಶೇ** ॥ ೩೫ ॥

ವಿಜ್ಞಾನಶಕ್ತಿಂ = ಮಹತ್ತತ್ತ್ವದಲ್ಲಿ ಕಂಡುಬರುವ, ಬ್ರಹ್ಮವಾಯುಗಳ ವಶವಾದ, ತತ್ತ್ವನಿರ್ಣಾಯಕ ಬುದ್ಧಿಯನ್ನು; ಮತಿಂ = ಭಗವಂತನ ಬುದ್ಧಿಯ ಅಂಶವೆಂದು; ಆಮನಂತಿ = ತಿಳಿದಿರುತ್ತಾರೆ; ಸರ್ವಾತ್ಮನಃ = ಸರ್ವಾಂತರ್ಯಾಮಿಯಾದ ವಿರಾಟ್ಪುರುಷನ; ಅಂತಃ ಕರಣಂ = ನಾನು, ನನ್ನದು ಎನಿಸುವ ಶಕ್ತಿಯ ಅಂಶವು; ಗಿರಿತ್ರಃ = ರುದ್ರದೇವರ ಅಧೀನವಾದ ಅಹಂಕಾರ ತತ್ತ್ವದಲ್ಲಿರುವುದು; ಅಶ್ವ, ಅಶ್ವತರೀ, ಉಷ್ಟ್ರ, ಗಜಾಃ = ಕುದುರೆ, ಹೇಸರಕತ್ತೆ, ಒಂಟೆ, ಆನೆ ಮೊದಲಾದವು; ನಖಾನಿ = ವಿರಾಟ್ಪುರುಷನ ಉಗುರುಗಳ ಅಂಶಗಳನ್ನು ಹೊಂದಿವೆ; ಪಶವಃ = ಹಾಲುಕರೆಯುವ ಪ್ರಾಣಿಗಳು; ಶ್ರೋಣೀದೇಶೇ = ಅವನ ಸೊಂಟದ ಮೇಲಿನ ಪೃಷ್ಠಭಾಗವನ್ನು ಆಶ್ರಯಿಸಿರುವುವು.

ಕೈಲಾಸಗಿರಿಯ ರಕ್ಷನಾದವನು ಗಿರಿತ್ರ; ಅಥವ ವಾಯುದೇವನಿಂದ ರಕ್ಷಿತನಾದವನು ಗಿರಿತ್ರ. ವಿಜ್ಞಾನ ತತ್ತ್ವವೆಂಬುದು ಮುಮ್ಮೆದುಳಿನ ಕಾರ್ಯ. ಅದಕ್ಕೆ ಪ್ರೇರಕನಾದವನು ಬ್ರಹ್ಮವಾಯುಗಳ ಅಂತರ್ಯಾಮಿಯಾದ ವಾಸುದೇವಮೂರ್ತಿ.

**ವಚಾಂಸಿ ತದ್ವ್ಯಾಹರಣಂ ವಿಚಿತ್ರಂ**
**ಮನುರ್ಮನೀಷಾ ಮನುಜೋ ನಿವಾಸಃ ।**
**ಗಂಧರ್ವ ವಿದ್ಯಾಧರ ಚಾರಣಾಪ್ಸರಃ**
**ಸ್ವರಸ್ಮೃತೀರಸುರಾನೀಕವೀರ್ಯಃ** ॥ ೩೬ ॥

ವಚಾಂಸಿ = ನಾವು ಆಡುವ ಲೌಕಿಕ ವೈದಿಕ ಮಾತುಗಳು; ತತ್ = ಆ ಮಹಾಪುರುಷನ; ವಿಚಿತ್ರಂ ವ್ಯಾಹರಣಂ = ಚಿತ್ರವಿಚಿತ್ರವಾದ ಶಬ್ದಪ್ರಯೋಗಗಳಿಂದ ಜನಿತವಾಗುವುವು; ಮನಃ = ತಿಳಿವಳಿಕೆಯ ಅಂಶವು; ಮನೀಷಾ = ನಮ್ಮ ತಿಳುವಳಿಕೆಗೆ

ಆಧಾರವಾದುದು; ಮನುಜಃ = ಮಾನವ ಪ್ರಾಣಿಯು; ನಿವಾಸಃ = ಅಂತಹ ತಿಳಿವಳಿಕೆಯ ಅಂಶವನ್ನುಳ್ಳವನು; ಗಂಧರ್ವ ವಿದ್ಯಾಧರ ಚಾರಣ ಅಪ್ಸರಃ = ಗಂಧರ್ವರೇ ಮೊದಲಾದ ಈ ದೇವತಾಗಣಗಳವರು; ಸ್ವರ ಸ್ಮೃತೀ = ಭಗವಂತನ ಸಂಗೀತದ ಸ್ವರಾದಿ ಅಂಶಗಳಿಂದಲೂ, ಸ್ಮರಣಶಕ್ತಿಯ ಅಂಶದಿಂದಲೂ ಪ್ರೋಷಿತರಾಗಿ, ಮಾನವಾದಿಗಳಲ್ಲಿ ಅವುಗಳನ್ನು ಪ್ರಕಟಿಸುವರು; ಅಸುರಾನೀಕಃ = ಅಸುರ ಪಕ್ಷದ ಜೀವಿಗಳು; ವೀರ್ಯಃ = ಅವನ ಸಾಮರ್ಥ್ಯ ವಿಶೇಷದಿಂದಲೇ ಇರತಕ್ಕವರು.

ಎಲ್ಲವೂ, ಎಲ್ಲರೂ ಅಸ್ವತಂತ್ರವಾದುದರಿಂದ, ಸ್ವತಂತ್ರನಾದ ವಿಶ್ವಪುರುಷನೇ ಎಲ್ಲವನ್ನೂ ಮಾಡಿ, ಮಾಡಿಸುವವನು ಎಂಬ ತತ್ವವು ಇಲ್ಲಿ ಸ್ಪಷ್ಟವಾಗಿದೆ.

**ಬ್ರಹ್ಮಾನನಃ ಕ್ಷತ್ರ ಭುಜೋ ಮಹಾತ್ಮಾವಿಡೂರುರಂಘ್ರಿಶ್ರಿತ**
**ಕೃಷ್ಣವರ್ಣಃ ।**
**ಸ್ವಾಹಾ ಸ್ವಧಾ ವೀರ್ಯಗುಣೋಪಪನ್ನೋ ಹವ್ಯಾತ್ಮಕಃ**
**ಕರ್ಮವಿತಾನ ಯೋಗಃ ॥ ೩೭ ॥**

ಮಹಾತ್ಮಾ = ಈ ವಿರಾಟ್ಪುರುಷನು; ಬ್ರಹ್ಮಾನನಃ = ಬ್ರಹ್ಮನನ್ನು (ಬ್ರಾಹ್ಮಣರನ್ನು) ಮುಖವಾಗಿ ಉಳ್ಳವನು; ಕ್ಷತ್ರಭುಜಃ = ಕ್ಷತ್ರಿಯರನ್ನು ಬಾಹುವಾಗಿ ಉಳ್ಳವನು; ವಿಡೂರುಃ = ವೈಶ್ಯರನ್ನು ತೊಡೆಗಳಾಗಿ ಉಳ್ಳವನು; ಅಂಘ್ರಿಶ್ರಿತ ಕೃಷ್ಣವರ್ಣಃ = ಶೂದ್ರಜಾತಿಯನ್ನು ಪಾದಸ್ಥಾನದಲ್ಲಿ ಉಳ್ಳವನು; ಸ್ವಾಹಾ ಸ್ವಧಾ ವೀರ್ಯಗುಣೋಪಪನ್ನಃ = ದೇವತೆಗಳಿಗೆ ಹವಿರ್ಭಾಗವನ್ನು ಮುಟ್ಟಿಸುವ 'ಸ್ವಾಹಾ' ಮತ್ತು ಪಿತೃಗಳಿಗೆ ಅವರ ಭಾಗವನ್ನು ಮುಟ್ಟಿಸುವ 'ಸ್ವಧಾ' ಕರ್ಮಗಳಿಗೆ ಜನಕನಾದವನು; ಹವ್ಯಾತ್ಮಕಃ = ದೇವತೆಗಳಿಗೆ ಹವ್ಯವಾಹಕವಾದ ಆತ್ಮಸ್ವರೂಪ ಉಳ್ಳವನು; ಕರ್ಮವಿತಾನಯೋಗಃ = ಹವ್ಯ ಕವ್ಯಕರ್ಮಗಳ ವಿಸ್ತಾರದಿಂದ ಆಗಬೇಕಾದ ಪ್ರಯೋಜನಗಳನ್ನು ಉಂಟುಮಾಡುವವನು.

ಬ್ರಾಹ್ಮಣಾದಿ ನಾಲ್ಕುವರ್ಣಗಳಿಗೆ ಉತ್ಪತ್ತಿಸ್ಥಾನೀಯನೂ ಅವುಗಳನ್ನು ನಡೆಸಿಕೊಟ್ಟು ಸಮಾಜದ ಹಿತವನ್ನುಂಟುಮಾಡುವವನೂ ವಿಶ್ವಾತ್ಮಕನಾದ ಪರಮ ಪುರುಷನೇ ಆಗಿದ್ದಾನೆ. (ಜೀವರ ಸಾಧನೆಗಳ ವಿಧಾನಗಳನ್ನೂ ಜನ್ಮಾಂತರಗಳ ಪ್ರಯೋಜನವನ್ನೂ ಈ ವಿಷಯದಲ್ಲಿ ಭಗವಂತನ ಸತ್ಸಂಕಲ್ಪವನ್ನೂ ಅರಿಯದ ಮೂಢರು ಜಾತಿಗಳು ಮಾನವ ಕೃತವೆಂದು ಹೇಳಿ ಬೊಬ್ಬೆ ಹಾಕುವರು. ಜೀವರ ಅಜ್ಞಾನಾವರಕ ನಿಮಿತ್ತವಾದ ಗುಣಕರ್ಮಗಳಲ್ಲಿ ವಿರಾಟ್ಪುರುಷನು ತನ್ನ

ಸ್ವರೂಪಭೂತವೂ ಸಂಕಲ್ಪರೂಪವೂ ಆದ ಗುಣಕರ್ಮಗಳ ಅಂಶಗಳನ್ನು ಪ್ರವೇಶಗೊಳಿಸಿ, ಜೀವರ ಉದ್ಧಾರಕರ್ತನಾಗಿದ್ದಾನೆ.

**ಇಯಾನಸಾವೀಶ್ವರ ವಿಗ್ರಹಸ್ಯ ಯಃಸನ್ನಿವೇಶಃ ಕಥಿತೋ ಮಯಾ ತೇ ॥**
**ಸಂಧಾರ್ಯತೇಽಸ್ಮಿನ್ವಪುಷಿಸ್ಥವಿಷ್ಠೇ ಮನಃ ಸ್ವಬುದ್ಧ್ಯಾನಯತೋಽಸ್ತಿ ಕಿಂಚಿತ್ ॥ ೩೮ ॥**

ಈಶ್ವರ ವಿಗ್ರಹಸ್ಯ = ವಿರಾಟ್ಪುರುಷನ ಶರೀರದ; ಯಃ ಅಸೌ ಸನ್ನಿವೇಶಃ = ಯಾವ ಈ ಸನ್ನಿಧಾನಗಳ ಪ್ರಭಾವಗಳುಂಟೋ; ಇಯಾನ್ = ಈ ಪ್ರಕಾರವಾದುದು; ತೇ ಮಯಾ ಕಥಿತಃ = ನಿನಗಾಗಿ ಅದು ನನ್ನಿಂದ ವರ್ಣಿಸಲ್ಪಟ್ಟಿತು; ಯತಃ ಕಿಂಚಿತ್‌ನಾಸ್ತಿ = ತನ್ನನ್ನು ಮೀರಿದ ಯಾವುದೂ ಇಲ್ಲದಿರುವ; ಅಸ್ಮಿನ್ = ಈ; ಸ್ಥವಿಷ್ಠೇ ವಪುಷಿ = ಸರ್ವೋತ್ತಮವಾದ ವಿರಾಟ್ಪುರುಷನ ಶರೀರದ ಸನ್ನಿಧಾನ ವಿಶೇಷಗಳಲ್ಲಿ; ಸ್ವಬುದ್ಧ್ಯಾ = ತಮ್ಮಬುದ್ಧಿಯ ನೆರವಿನಿಂದ; ಮನಃ = ಯೋಗಿಗಳ ಮನಸ್ಸು; ಸಂಧಾರ್ಯತೇ = ಸ್ಥಿರವಾಗಿ ಇರಿಸಲ್ಪಡುತ್ತದೆ.

'ನನ್ನಿಂದ ವರ್ಣಿತವಾಯಿತು' ಎಂದು ಶುಕಾಚಾರ್ಯರು ಹೇಳುವಾಗ, ತಮ್ಮ ವಾಣಿ ಎಂಬುದರಲ್ಲಿ ಆ ವೈರಾಜ ಪುರುಷನ 'ವ್ಯಾಹರಣಂ' ಅಥವ ಚಿತ್ರವಿಚಿತ್ರವಾದ ಧ್ವನಿಪ್ರಯೋಗವು ನಡೆಯುತ್ತಿರುವುದೆಂಬುದನ್ನು ಚೆನ್ನಾಗಿ ಸ್ಮರಿಸಿಕೊಂಡೇ ಹೇಳುತ್ತಿರುವುದರಿಂದ ಅದು ಲೌಕಿಕ ಅಹಂಕಾರವನ್ನು ಮೀರಿನಿಂತ ಅವರ ನಿಜಸ್ಥಿತಿಯನ್ನು ತೋರಿಸುವುದು. ಪರೀಕ್ಷಿದ್ರಾಜರಿಗೆ ಅವರು ಈಗ ಮಾಡಿದ ಉಪದೇಶ ವಾಣಿಯೂ ಅದೇ ಅರ್ಥವನ್ನು ಸೂಚಿಸುವುದಾಗಿದೆ. 'ನಾನು ವೈರಾಜ ಪುರುಷನಲ್ಲಿ ಬುದ್ಧಿಪೂರ್ವಕವಾಗಿ ಮನಸ್ಸನ್ನು ನಿಲ್ಲಿಸುತ್ತೇನೆ' ಎಂಬ ಸಂಕಲ್ಪವನ್ನು ಪರೀಕ್ಷಿದ್ರಾಜರು ಮಾಡುವಾಗ, ಆ ರೀತಿಯಾದ ಸಂಕಲ್ಪವನ್ನೂ ತನ್ನ ಅಂತರ್ಯಾಮಿಯಾದವನೇ ಮಾಡಿ ಅದರ ಫಲವನ್ನು ತನಗೆ ಕೊಡುವುದರಿಂದ ಆ ಸಂಕಲ್ಪವನ್ನು ತಾನೇ ಮಾಡಿದಂತೆ ಅನುಭವಕ್ಕೆ ಬರುತ್ತಿರುವುದೆಂದು ತಿಳಿಯುವುದು ತತ್ವಜ್ಞಾನದ ಅನುಸಂಧಾನದ ಪರಮಾವಧಿ.

ಇಲ್ಲಿಗೆ ದ್ವಿತೀಯಸ್ಕಂಧ ಪ್ರಥಮಾಧ್ಯಾಯ ಮುಗಿಯಿತು

---

# ದ್ವಿತೀಯ ಸ್ಕಂಧ ದ್ವಿತೀಯಾಧ್ಯಾಯ ಪ್ರಾರಂಭ

**ಶ್ರೀಶುಕಉವಾಚ** :– ಶ್ರೀ ಶುಕಾಚಾರ್ಯರು ನುಡಿದರು.

**ಏವಂ ಪುರಾಧಾರಯಣಯಾತ್ಮಯೋನಿರ್ನಷ್ಟಾಂ ಸ್ಮೃತಿಂ**
**ಪ್ರತ್ಯವರುಹ್ಯತುಷ್ಯನ್ ।**
**ತಥಾ ಸಸರ್ಜೇದಮಮೋಘದೃಷ್ಟಿರ್ಯಥಾಪ್ಯಯಾತ್ಪ್ರಾಗ್ವ್ಯವಸಾಯ**
**ಬುದ್ಧಿಃ ॥ ೧ ॥**

ಏವಂ = ಈ ಹಿಂದೆ ಹೇಳಿದ ಧಾರಣಾಕ್ರಮದಿಂದ; ಪುರಾ = ಹಿಂದೆ; ಆತ್ಮಯೋನಿಃ = ಪರಮಾತ್ಮನಿಂದ ಜನ್ಮಪಡೆದ ಬ್ರಹ್ಮದೇವರು; ಧಾರಣಯಾ = ಸ್ಥಿರಧ್ಯಾನದಿಂದ; ನಷ್ಟಾಂ ಸ್ಮೃತಿಂ = ಮರೆತಿದ್ದ ವಿಷಯಜ್ಞಾನವನ್ನು; ಪ್ರತ್ಯವರುಹ್ಯ = ಪುನಃ ಪಡೆದು; ತುಷ್ಯನ್ = ಸಂತುಷ್ಟರಾಗಿ; ವ್ಯವಸಾಯಬುದ್ಧಿಃ = ಪ್ರಯತ್ನಶೀಲರಾಗಿ; ಅಮೋಘದೃಷ್ಟಿಃ = ಸ್ಪಷ್ಟಜ್ಞಾನದಿಂದ, ಅಪ್ಯಯಾತ್ಪ್ರಾಕ್ = ಪ್ರಳಯಕಾಲಕ್ಕೆ ಪೂರ್ವದಲ್ಲಿ; ಯಥಾ ತಥಾ = ಹೇಗಿದ್ದಿತೋ ಹಾಗೆ; ಇದಂ = ಈ ವಿಶ್ವವನ್ನು; ಸಸರ್ಜ = ಸೃಷ್ಟಿಮಾಡಿದರು.

ವಿರಾಟ್ ಪುರುಷನ ಧ್ಯಾನದಿಂದ ಚತುರ್ಮುಖ ಬ್ರಹ್ಮರು ನಷ್ಟವಾದ ಸ್ಮೃತಿಯನ್ನು ಪುನಃ ಹೊಂದಿ ಸೃಷ್ಟಿಕಾರ್ಯದಲ್ಲಿ ಸಮರ್ಥರಾದರು ಎಂಬ ಉದಾಹರಣೆಯಿಂದ ಧಾರಣಾಯೋಗದ ಸಾರ್ಥಕ್ಯವನ್ನು ತಿಳಿಸಿದ್ದಾರೆ. ಇತರ ಜೀವರ ದೃಷ್ಟಿಯಿಂದ ಬ್ರಹ್ಮವಾಯುಗಳು ಸರ್ವಜ್ಞರು. ಆದರೆ ಅವರು "ಆಲೋಚನಯಾ ಸರ್ವವಿಷಯಕ ಜ್ಞಾನಂ" ಎಂದಂತೆ, ಆಲೋಚನೆಯಿಂದ ಎಲ್ಲವನ್ನೂ ಯಥಾವತ್ತಾಗಿ ತಿಳಿಯಬಲ್ಲರು; ಇಂತಹ ಆಲೋಚನೆಯಿಲ್ಲದೆಯೇ ಸಕಲ ಜಗದ್ವಿಷಯಗಳನ್ನು ಬಲ್ಲವರು ರಮಾದೇವಿಯರು. ಪ್ರತಿಯೊಂದು ಬ್ರಹ್ಮಕಲ್ಪದಲ್ಲಿಯೂ ಅಲ್ಪ ಸ್ವಲ್ಪ ವ್ಯತ್ಯಾಸಗಳಿದ್ದರೂ ಸೃಷ್ಟಿಯು ಏಕಪ್ರಕಾರವಾಗಿ ನಡೆಯುವುದೆಂಬುದು ಗಮನಾರ್ಹ. ಆಪ್ತ ಕಾಮನಾದ ಬ್ರಹ್ಮನ ಹೊರತು ಬೇರೆ ಏನೂ, ಯಾರೂ ಇಲ್ಲದಿದ್ದಿದ್ದರೆ ಅವನು ಸೃಷ್ಟಿಯನ್ನು ಕೈಗೊಳ್ಳಬೇಕಾದ ಆವಶ್ಯಕತೆಯೇ ಇರುತ್ತಿರಲಿಲ್ಲ. ಅದೂ ಪ್ರತಿಸಲವೂ ಒಂದೇ ರೀತಿಯಾಗಿ. ಅಲ್ಲದೆ, ಬ್ರಹ್ಮ ಪದವಿಗೆ ಬರುವ ಬೇರೆ ಬೇರೆ ಜೀವರು ಇರದಿದ್ದ ಪಕ್ಷದಲ್ಲಿ ಏಕೈಕ ಸರ್ವಜ್ಞನು ತನ್ನ ಕೃತಿಯನ್ನು ತಾನೇ ಮರೆತು, ಯೋಗ ಧಾರಣೆಯಿಂದ ಮತ್ತೆ ಸ್ಮೃತಿಯನ್ನು ಪಡೆಯುವನೆಂದು ಹೇಳುವುದು ಯುಕ್ತವಾಗಲಾರದು. ಇದರಿಂದ ಪ್ರಚಲಿತವಾದ ಅದ್ವೈತವಾದವು ನಿರಸ್ತವಾಯಿತು.

**ಶಬ್ದಸ್ಯ ಹಿ ಬ್ರಹ್ಮಣ ಏಷ ಪಂಥಾಯನ್ನಾಮಭಿರ್ಧ್ಯಾಯತಿ ಧೀರಪಾರ್ಥೈಃ ।**
**ಪರಿಭ್ರಮಂಸ್ತತ್ರ ನವಿಂದತೇರ್ಥಾನ್ಮಾಯಾಮಯೇ ವಾಸನಯಾ ಶಯಾನಃ ॥ ೨ ॥**

ಶಬ್ದಸ್ಯ ಬ್ರಹ್ಮಣಃ = ವೇದಾದಿ ಸಕಲ ಶಬ್ದಗಳಿಂದಲೂ; ಏಷಃ ಹಿ = ಬ್ರಹ್ಮಾದಿ ಸಕಲಜಗತ್ಸೃಷ್ಟಿಕರ್ತನೂ, ಸರ್ವೇಶ್ವರನೂ, ಸರ್ವಾಂತರ್ಯಾಮಿಯೂ, ಸರ್ವಗುಣಸಂಪೂರ್ಣನೂ ಆದ ಶ್ರೀಹರಿಯೇ; ಪಂಥಾ = ಗಮ್ಯವಾದ, (ಮುಖ್ಯವಾಗಿ ತಿಳಿಯಬೇಕಾದ) ವಸ್ತುವು; (ಏಕೆಂದರೆ); ವಾಸನಯಾ = ಕರ್ಮಸಂಬಂಧದಿಂದ, ಮಾಯಾಮಯೇ = ಭಗವಂತನ ಅದ್ಭುತ ಸೃಷ್ಟಿಯಾದ ಪ್ರಪಂಚದಲ್ಲಿ, ಶಯಾನಃ = ಅಜ್ಞಾನದಿಂದ ಮೈಮರೆತು; ತತ್ರ ಪರಿಭ್ರಮನ್ = ಪ್ರಪಂಚದ ಸಂದುಗೊಂದುಗಳಲ್ಲಿ ಸುಳಿದಾಡುತ್ತಾ; ಯನ್ನಾಮಭಿಃ = ಯಾವ ಇಂದ್ರಾದಿ ಹೆಸರುಗಳಿಂದಲೇ; ಧೀಃ = ಜೀವನ ಬುದ್ಧಿಯು; ಅಪಾರ್ಥೈಃ = ಅಮುಖ್ಯವೃತ್ತಿಯಿಂದ ಮಾತ್ರ ಅದೇ ಹೆಸರುಗಳಿಂದ ಕರೆಯಲ್ಪಡುವ ಇಂದ್ರಾದಿಗಳಿಂದ; ಅರ್ಥಾನ್ = ನಿಜವಾದ ಪ್ರಯೋಜನಗಳನ್ನು, ಪುರುಷಾರ್ಥಗಳನ್ನೂ; ನ ವಿಂದತೇ = ಪಡೆಯುವುದಿಲ್ಲ.

ಜೀವ ಬ್ರಹ್ಮರ ಸಂಬಂಧ ಅತಿ ವಿಚಿತ್ರವಾದುದು. ಬ್ರಹ್ಮನನ್ನು ಬಿಟ್ಟು ಜೀವನಿಲ್ಲ. ಆದರೆ ಬ್ರಹ್ಮನೇ ಜೀವರಾಶಿಯಲ್ಲ. ಅನಾದ್ಯನಂತ ಕಾಲಗಳಲ್ಲಿ ಜೀವರಾಶಿಗಳನ್ನು ಗುಂಪು ಗುಂಪಾಗಿ ಸೃಷ್ಟಿಯಲ್ಲಿ ತಂದು, ಸಾಧನೆ ಮಾಡಿ ಮಾಡಿಸಿ, ಅವರನ್ನು ತನ್ನ ಮುಕ್ತಿ ಸಾಮ್ರಾಜ್ಯದಲ್ಲಿಟ್ಟುಕೊಳ್ಳುವುದು ಬ್ರಹ್ಮನ ಕರುಣಾಲೀಲೆ. ಅವರವರಲ್ಲಿ, ಅವರವರಂತೆ ಅಂತರ್ಯಾಮಿಯಾಗಿದ್ದು ಅವನು ಆಡುವುದರಿಂದಲೇ ಆ ಜೀವರ ಸ್ಥಿತಿಗತಿಗಳು. ಅವನ ಸಂಕಲ್ಪಾನುಸಾರವೇ ಅವರ ನಾಮರೂಪಗಳು. ಆದುದರಿಂದ ಇಂದ್ರ ಎಂದರೆ ಇಂದ್ರನಲ್ಲಿ ಇಂದ್ರನಂತೆ ಇಂದ್ರನಾಮಕನಾಗಿರುವ ಪರಬ್ರಹ್ಮ ಎಂಬುದು ನಿಜವಾದ ಅರ್ಥ. ಇಂದ್ರನೆಂಬ ಜೀವನಿಗೆ ಆ ಹೆಸರು ದತ್ತವಾದುದಷ್ಟೇ. ಕೇವಲ ಆ ಜೀವನನ್ನೇ ಇಂದ್ರನೆಂಬ ಹೆಸರಿನಿಂದ ಆರಾಧಿಸಿದವರಿಗೆ ನಿಜವಾದ ಪುರುಷಾರ್ಥಗಳು ಕೈಗೂಡುವುದಿಲ್ಲ. ಇದರಂತೆ ಇತರ ದೇವತೆಗಳ ವಿಷಯವನ್ನೂ ತಿಳಿಯಬೇಕು. ಆದುದರಿಂದ ಸಕಲ ಶಬ್ದಗಳಿಂದಲೂ ವಾಚ್ಯನಾದವನು, ತಿಳಿಯಬೇಕಾದವನು ಧಾರಣಾಶ್ರಯನಾದವನು ಶ್ರೀಹರಿ.

**ಅತಃ ಕವಿರ್ನಾಮಸು ಯಾವದರ್ಥಃ**
**ಸ್ಯಾದಪ್ರಮತ್ತೋವ್ಯವಸಾಯಬುದ್ಧಿಃ ।**
**ಸಿದ್ಧೇನ್ಯಥಾರ್ಥೇ ನಯತೇತ (ತತ್ತತ್ಪರಿಶ್ರಮಂ)**
**ತತ್ರ ಸಮೀಕ್ಷಮಾಣಃ ॥ ೩ ॥**

ನಾಮಸು = ಹರಿನಾಮಾಂತರಗಳನ್ನೇ ಹೊತ್ತ ಇತರರಿಂದ; ಯಾವದರ್ಥಃ = ಅವರವರ ಮಿತಿಯಷ್ಟೇ ಪ್ರಯೋಜನಲಾಭವಾಗುವುದು; ಅತಃ = ಆದುದರಿಂದ; ತತ್ತತ್ ಪರಿಶ್ರಮಂ = ಆಯಾ ಅನ್ಯೋಪಾಸನೆಯ ಕಷ್ಟಸಾಧ್ಯತೆಯನ್ನು; ತತ್ರ = ಅಲ್ಲಿ; ಸಮೀಕ್ಷಮಾಣಃ = ಚೆನ್ನಾಗಿ ಪರೀಕ್ಷೆಮಾಡಿ ನೋಡಿ; ಕವಿಃ = ಬುದ್ಧಿವಂತನಾದವನು; ಅಪ್ರಮತ್ತಃ = ಶ್ರೀಹರಿಯೇ ಮುಖ್ಯವಾಗಿ ಸಕಲಶಬ್ದ ವಾಚ್ಯನೆಂಬುದನ್ನು ಮರೆಯದೇ; ವ್ಯವಸಾಯ ಬುದ್ಧಿಃ = ನಿಶ್ಚಿತಮಾರ್ಗ ಹಿಡಿದವನಾಗಿ; ಸಿದ್ಧೇ = ಪ್ರಯೋಜನ ಪಡೆಯುತ್ತಿರಲು; ಅನ್ಯಥಾರ್ಥೇ = ಔಪಚಾರಿಕವಾಗಿ ಹೆಸರುಳ್ಳ ವಸ್ತುಗಳಿಂದ ಅಥವ ವ್ಯಕ್ತಿಗಳಿಂದ ಪ್ರಯೋಜನ ಹೊಂದಲು; ನಯತೇತ = ಪ್ರಯತ್ನಿಸಬಾರದು.

ಶ್ರೀಹರಿಯನ್ನೇ ಆಶ್ರಯಿಸಿದವರಿಗೆ ಆಯಾ ಕಾಲಾನುಗುಣವಾಗಿ ಅವಶ್ಯಕವಾದ ಪ್ರಯೋಜನಗಳು ಸಿದ್ಧಿಸುತ್ತಿರಲು ಪ್ರಯೋಜನಾಪೇಕ್ಷಿಯಾಗಿ ಅನ್ಯರೀತಿಗಳಿಂದ ಪ್ರಯತ್ನಿಸುವುದು ಅವಿವೇಕವೆಂದು ತಿಳಿಯಬೇಕು. ಅಜ್ಞರೂ, ಸಾಧನೆಯ ಮೊದಮೊದಲ ಹಂತಗಳಲ್ಲಿರುವ ಸುಜನರೂ ವಸ್ತು ಸಂಗ್ರಹದಿಂದ ಸುಖವೆಂದು ಸಂಗ್ರಹಿಸುತ್ತಾ ಅವುಗಳ ಪ್ರಾಪ್ತಿಗಾಗಿ ಅನ್ಯದೇವತಾ ಪೂಜೆಯಿಂದ ಬಳಲುವರು. ಸಾಧನೆಯಲ್ಲಿ ಮುಂದುವರೆದವರು, ಅನ್ಯದೇವತೆಗಳಲ್ಲಿ ಅಂತರ್ಯಾಮಿಯೆಂದು ಅವರ ಮುಖಾಂತರ ಶ್ರೀಹರಿಯನ್ನು ಆರಾಧಿಸುತ್ತಾ, ದೊರಕಿದಷ್ಟರಿಂದಲೇ ತೃಪ್ತರಾಗುವರು, ಸಿದ್ಧಪುರುಷರು ವಸ್ತುಸಂಗ್ರಹದ ಯೋಚನೆಯೇ ಇಲ್ಲದೆ, ಅನ್ಯದೇವತೆಗಳನ್ನು ಪುರುಷೋತ್ತಮನ ಅಧೀನರೆಂದರಿತು, ಬ್ರಹ್ಮಾದಿಗಳಿಗೂ ವರಪ್ರದನಾದ ಪರಬ್ರಹ್ಮನನ್ನೇ ಚಿಂತಿಸುತ್ತಾ ಆತ್ಮಾರಾಮರಾಗಿರುವರು.

**ಸತ್ಯಾಂ ಕ್ಷಿತೌ ಕಿಂ ಕಶಿಪೋಃ**
**ಪ್ರಯಾಸೈರ್ಬಾಹೌ ಸ್ವಸಿದ್ಧೇ ಹ್ಯುಪಬರ್ಹಣೈಃ ಕಿಂ ।**
**ಸತ್ಯಂಜಲೌ ಕಿಂ ಪುರುಧಾನ್ನಪಾತ್ರ್ಯಾ ದಿಗ್ವಲ್ಕಲಾದೌ**
**ಸತಿ ಕಿಂ ದುಕೂಲೈಃ ॥ ೪ ॥**

ಕ್ಷಿತೌ ಸತ್ಯಾಂ = ಭೂಮಿಯು (ನೆಲವು) ಸಿದ್ಧವಾಗಿರಲು; ಕಶಿಪೋಃ ಪ್ರಯಾಸೈಃ ಕಿಂ = ಮಲಗಲು ಹಾಸಿಗೆಯನ್ನು ಸಂಪಾದಿಸುವ ಕಷ್ಟವೇಕೆ ? ಬಾಹೌ ಸ್ವಸಿದ್ಧೇ = ತಮ್ಮದೇ ಆದ ತೋಳುಗಳು ಇರುವಾಗ; ಉಪಬರ್ಹಣೈಃ ಕಿಂ = ದಿಂಬುಗಳಿಂದ ಆಗಬೇಕಾದ ಪ್ರಯೋಜನವಾದರೂ ಏನು ? ಅಂಜಲೌಸತಿ = ಹಸ್ತಗಳ ಬೊಗಸೆ ಇರುವಾಗ; ಪುರುಪರ್ಣಪಾತ್ರ್ಯೈಃ = ದೊಡ್ಡ ದೊನ್ನೆ ಮೊದಲಾದ ಪಾತ್ರೆಗಳೇಕೆ ಬೇಕು ? ದಿಕ್ ವಸ್ತ್ರಲಾಭೇ = ಆಕಾಶವೇ ಉಡುಗೆಯಾಗಿರುವಾಗ; ದುಕೂಲೈಃ ಕಿಂ = ಪಟ್ಟೆವಸ್ತ್ರ ಮೊದಲಾದ ಆಚ್ಛಾದನೆಗಳ ಅವಶ್ಯಕತೆ ಏನಿದೆ ?

ಅವಧೂತರಾದ ಆತ್ಮಾರಾಮರು ಹೀಗೆಯೇ ಜೀವನವನ್ನು ಸಾಗಿಸುತ್ತಾ, ಸದಾ ಭಗವನ್ಮಹಿಮೆಯನ್ನು ಚಿಂತಿಸುವ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಹಾಸಿಗೆ, ದಿಂಬು ಇಲ್ಲದಿದ್ದರೆ ನಿದ್ದೆ ಬರುವುದು ಕಷ್ಟ ಎಂಬುದು ಲೋಕಾನುಭವ. ಆದರೆ ಅವರ ಕದಡಿದ ಮನಸ್ಸೇ ಅವರಿಗೆ ಸುಲಭವಾಗಿ ನಿದ್ದೆ ಬಾರದಿರುವುದಕ್ಕೆ ಕಾರಣ. 'ನಿಶ್ಚಿಂತರಾದವರಿಗೆ ಸಂತೆಯಲ್ಲೂ ನಿದ್ದೆ' ಎಂಬ ಗಾದೆಯೇ ಇದಕ್ಕೆ ಸಾಕ್ಷಿ. ಇನ್ನೊಂದು ವಿಷಯವನ್ನು ನಾವು ನೆನಪಿನಲ್ಲಿಡಬೇಕು. ವೇಳೆವೇಳೆಗೆ ಸರಿಯಾಗಿ ಮಲಗಿ ನಿದ್ರಿಸಬೇಕೆಂಬ ನಮ್ಮ ವೇಳಾಪಟ್ಟಿಯೊಂದು ನಮಗೆ ತೊಡುಕು. ಲೌಕಿಕವ್ಯವಹಾರದಲ್ಲಿರುವವರಿಗೆ ಅದು ಅವಶ್ಯಕವೆಂಬುದು ನಿಜವೇ. ಆದರೆ ತಾನಾಗಿ ನಿದ್ದೆ ಬರುವವರೆಗೂ ಏನಾದರೊಂದು ಕೆಲಸ ಮಾಡುತ್ತಾ ಅಥವ ಅಡ್ಡಾಡುತ್ತಾ ಇದ್ದರೆ, ಹಾಸಿಗೆ ಇರಲಿ ಇಲ್ಲದಿರಲಿ, ನೆಲಕ್ಕೆ ತಲೆ ಇಟ್ಟಕೂಡಲೇ ನಿದ್ದೆ ಬಂದೇ ಬಿಡುತ್ತದೆ. ಅದು ಸಾಕೆನಿಸಿದಾಗ ತಾನಾಗಿ ಎಚ್ಚರವಾಗುತ್ತದೆ. ಇಂತಹ ಚರ್ಯೆಯನ್ನು ಸಾಧಕರು ಅಭ್ಯಾಸಮಾಡಬೇಕು. ಸಿದ್ಧಪುರುಷರಿಗೆ ಅದು ಸಹಜ.

**ಚೀರಾಣಿ ಕಿಂ ಪಥಿ ನ ಸಂತಿ ದಿಶಂತಿ ಭಿಕ್ಷಾಂ**
**ನೋವಾಂಘ್ರಿಪಾಃ ಪರಭೃತಃ ಸರಿತೋಽಪ್ಯಶುಷ್ಯನ್ ।**
**ರುದ್ಧಾಗುಹಾಃ ಕಿಮವಧೂತ ಸುಹೃನ್ನಕೃಷ್ಣಃ**
**ಕಸ್ಮಾದ್ಭಜಂತಿ ಕವಯೋ ಧನದುರ್ಮದಾಂಧಾನ್** ॥ ೫ ॥

ಚೀರಾಣಿ = ಹರಕುವಸ್ತ್ರಗಳು; ಪಥಿ = (ಗೃಹಸ್ಥರು ಉಪಯೋಗಿಸದೆ ಎಸೆದ ಕಾರಣದಿಂದ) ದಾರಿಯಲ್ಲಿ; ನ ಸಂತಿ ಕಿಂ = ಬಿದ್ದಿರುವುದಿಲ್ಲವೆ? ಪರಭೃತಃ = ಫಲಾಹಾರಗಳನ್ನು ತಯಾರಿಸಿಟ್ಟಿರುವ; ಅಂಘ್ರಿಪಾಃ = ವೃಕ್ಷಗಳು; ಭಿಕ್ಷಾಂ ದಿಶಂತಿ ನ ವಾ = ಆಹಾರಾರ್ಥವಾಗಿ ಭಿಕ್ಷೆಯನ್ನು ನೀಡದೆ ಇರುವುದಿಲ್ಲವಷ್ಟೆ? ಸರಿತಃ = ನೀರಿನ ಹೊಳೆ ಮೊದಲಾದವು; ಅಪಿ ಶುಷ್ಯನ್ = ಕುಡಿಯಲು ನೀರಿಲ್ಲದಂತೆ ಒಣಗಿ ಹೋಗಿವೆಯೆ? (ಇರಲು ಅಥವ ಮಲಗಲು ಬೇಕೆಂದರೆ) ಗುಹಾಃ = ಗುಹೆ, ಮರದ ಪೊಟರೆ ಮೊದಲಾದವು; ರುದ್ಧಾಃ ಕಿಂ = ಯಾರ ಅಡ್ಡಿ ಆತಂಕಗಳಿಗಾದರೂ ಒಳಪಟ್ಟಿವೆಯೆ? ಕೃಷ್ಣಃ = ಶ್ರೀಕೃಷ್ಣಭಗವಂತನು; ಅವಧೂತ ಸುಹೃತ್ ನ ಕಿಂ = ಅವಧೂತ ಚರ್ಯೆಯಲ್ಲಿರುವವರ ಬಂಧುವಾಗಿರುವುದು ನಿಜವಲ್ಲವೆ? (ಆದುದರಿಂದ); ಕವಯಃ = ಜ್ಞಾನಿಗಳಾದವರು; ಧನದುರ್ಮದಾಂಧಾನ್ = ದ್ರವ್ಯಮದದಿಂದ ವಿವೇಕಶೂನ್ಯರಾದವರನ್ನು; ಕಸ್ಮಾತ್ ಭಜಂತಿ = ಏಕೆತಾನೇ ಆಶ್ರಯಿಸುವರು?

ಸಿದ್ಧರಾಗಲು ಹವಣಿಸುತ್ತಿರುವ ಸಾಧಕರನ್ನು ಕಂಡು ಹೇಳುವ ಮಾತುಗಳು ಇವು. ಒಂದು ವೇಳೆ, ದಿಗಂಬರರಾಗಿರಲು ಅವರಿನ್ನೂ ಸಿದ್ಧರಾಗಿರದಿದ್ದರೆ, ಉದಾರಿಗಳಾದ ಗೃಹಸ್ಥರು ಭಿಕ್ಷುಕರಿಗಾಗಿ ಮನೆಯ ಮುಂದಿಟ್ಟ ಅಥವ ಇತರರು ತೊರಗೆಸೆದ ಚಿಂದಿ ಬಟ್ಟೆಗಳು ಅನಾಯಾಸವಾಗಿ ಸಿಗುತ್ತವೆ. ಅವರು ಮರವನ್ನೇರಿ ಹಣ್ಣುಗಳನ್ನು ಸಂಗ್ರಹಿಸುವುದೂ ಇಲ್ಲ. ಗೃಹಸ್ಥರು ಬಿಕ್ಷೆನೀಡುವಂತೆ, ವೃಕ್ಷಗಳು ಕೆಳಗುದುರಿಸಿದ ಪಕ್ವಫಲಗಳನ್ನು ಮಾತ್ರ ಸ್ವೀಕರಿಸುತ್ತಾರೆ. ಅವರಿಗೆ ಯಾವ ಆತಂಕವೂ ಇಲ್ಲ, ಭಯವೂ ಇಲ್ಲ. ಗುಹೆಯಲ್ಲಿ ಮಲಗಿದಾಗ ಸಿಂಹ ಶಾರ್ದೂಲಾದಿಗಳು ತಿಂದು ಹಾಕಬಹುದೆಂಬ ಭಯ ಅವರಿಗಿಲ್ಲ. ಶ್ರೀಕೃಷ್ಣನ ರಕ್ಷಣೆಯು ಸದಾ ಇರುವುದನ್ನು ಅವರು ನಂಬಿರುತ್ತಾರೆ.

**ಏವಂ ಸ್ವಚಿತ್ತೇ ಸ್ವತ ಏವ ಸಿದ್ಧ ಆತ್ಮಾಪ್ರಿಯೋರ್ಥೋ**
**ಭಗವಾನನಂತಃ ।**
**ತಂ ನಿರ್ವೃತೋ ನಿಯತಾರ್ಥೋ ಭಜೇತ ಸಂಸಾರ ಹೇತೂ**
**ಪರಮಶ್ಚ ಯತ್ರ ॥ ೬ ॥**

ಏವಂ = ಈ ಪ್ರಕಾರವಾಗಿ; ಸ್ವಚಿತ್ತೇ = ಸ್ವಸ್ಥವಾದ ಮನಸ್ಸಿನಲ್ಲಿ; ಸ್ವತಃ = ಸ್ವತಂತ್ರನಾದ; ಆತ್ಮಾ = ಬಂಧುಗಳಿಗೂ ತನಗೂ ಆತ್ಮಪ್ರಾಯನಾದ (ಅತ್ಯಂತ ಇಷ್ಟನಾದ); ಪ್ರಿಯಃ ಅರ್ಥಃ = ಅನುಕೂಲವಾದ ಪ್ರಯೋಜನಗಳನ್ನೇ ಒದಗಿಸುವವನಾದ; ಭಗವಾನ್ = ಸಕಲೈಶ್ವರ್ಯ ಪರಿಪೂರ್ಣನಾದ; ಅನಂತಃ = ಅಮಿತ ಪ್ರಭಾವಶಾಲಿಯಾದ; ಯತ್ರ = ಯಾರನ್ನು ಭಕ್ತಿಯಿಂದ ಹೊಂದಿಕೊಳ್ಳುವುದರಿಂದ; ಸಂಸಾರ ಹೇತು ಉಪರಮಃ = ಸಾಂಸಾರಕ್ಕೆ ಕಾರಣವಾದ ಅಜ್ಞಾನ ಬಂಧವ ನಿವೃತ್ತಿಯೋ; ಚ = ಮತ್ತು, ನಿರ್ದುಃಖಾನಂದ ರೂಪವಾದ ಮೋಕ್ಷಪ್ರಾಪ್ತಿಯೋ; ತಂ = ಅಂತಹ (ಪರಮಾತ್ಮನನ್ನು) ಪರಮಾಪ್ತನನ್ನು; ಸ್ವತ ಏವ ಸಿದ್ಧೇ = ತಾನೇ ಪ್ರಸನ್ನನಾಗಿ ಗೋಚರಿಸಿರಲು; ನಿರ್ವೃತಃ = ಆನಂದಪುಲಕಾಂಕಿತನಾಗಿ; ನಿಯತಾರ್ಥಃ = ತಾನಾಗಿ ದೊರಕಿದಷ್ಟರಿಂದ ತೃಪ್ತನಾಗಿ; ಭಜೇತ = ಧ್ಯಾನಿಸಬೇಕು.

ಜೀವಸ್ವರೂಪದ ಅಭಿವ್ಯಕ್ತಿಯಾಗಬೇಕಾದುದರಿಂದ, ಬಿಂಬನಾದ ಅಂತರಾತ್ಮನು, ಬಿಂಬ ಸಾಕ್ಷಾತ್ಕಾರಕ್ಕಾಗಿ ಜೀವನು ಪ್ರಯತ್ನಮಾಡಿದಂತೆ ತಾನೇ ನಟಿಸಿ, ಪ್ರಯತ್ನದ ಭಾವವನ್ನು ಜೀವಸ್ವರೂಪದಲ್ಲಿ ಮೂಡಿಸಿ, ತಾನೇ ಪ್ರಸನ್ನನಾಗಿ ಜೀವ ಹೃದಯದಲ್ಲಿ ತೋರಿಕೊಳ್ಳುತ್ತಾನೆ. ಇಂತಹ ಸ್ಥಿತಿಯನ್ನು ಮುಟ್ಟಿದ ಸಿದ್ಧಪುರುಷನು ಅವಧೂತ ಚರ್ಯೆಯಿಂದ ಜೀವನವನ್ನು ಸಾಗಿಸುತ್ತಾ ತನ್ನ ಪ್ರಿಯತಮನಾದ ಭಗವಂತನನ್ನು ಎಡೆಬಿಡದೆ ಧ್ಯಾನಂಗತನನ್ನಾಗಿ ಮಾಡಿಕೊಂಡಿರಬೇಕು. ಈ ಉಪದೇಶ ಯಾರಿಗೆ ಎಂಬ ಪ್ರಶ್ನೆ ಮತ್ತೆ ತಲೆ ಹಾಕಬಹುದು. ಇದೇ ತತ್ವರಹಸ್ಯ. ಭಗವಂತನ ಬಿಂಬ–ಪ್ರತಿಬಿಂಬ

ಭಾವದ ಅರ್ಥವನ್ನು ಕುರಿತು ಚೆನ್ನಾಗಿ ಚಿಂತಿಸಿದಾಗ ಈ ತತ್ತ್ವರಹಸ್ಯದ ಗಂಟು ಬಿಚ್ಚುವುದು. "ಯಮೇವೈಷವೃಣುತೇ ತೇನಲಭ್ಯಃ" ಎಂಬುದರ ಅರ್ಥವನ್ನಿಲ್ಲಿ ಅನ್ವಯಿಸಬೇಕು.

**ಸಸರ್ವವಿದ್ಧೃದ್ಯನುಭೂಶ್ಚ ಸರ್ವ ಆತ್ಮಾ ಯಥಾಸುಪ್ತಜನೇಕ್ಷಿತೈಕಃ ॥**
**ತಂ ಸತ್ಯಮಾನಂದ ನಿಧಿಂ ಭಜೇತ ಸರ್ವಾತ್ಮನಾತೋಽನ್ಯತ**
**ಆತ್ಮಘಾತಃ ॥ ೭ ॥**

ಸಃ = ಪರಮಾಪ್ತನಾದ ಆ ಪರಮಾತ್ಮನು; ಸರ್ವವಿತ್ = ಸರ್ವಜ್ಞಶಿರೋಮಣಿಯು; ಹೃದಿ = ಹೃದಯದಲ್ಲಿ; ಅನುಭೂಃ ಚ = ಆಯಾ ಜೀವರ ಯೋಗ್ಯತಾನುಸಾರ ತೋರಿಕೊಳ್ಳತಕ್ಕವನು; ಯಥಾ = ಹೇಗೆ; ಸುಪ್ತ ಜನೇ = ನಿದ್ರಿಸುತ್ತಿರುವ ಜೀವರಲ್ಲಿ; ಏಕಃ ಈಕ್ಷಿತಾ = ಎಚ್ಚರದಿಂದಿದ್ದು ನೋಡುತ್ತಿರುವವನು ಒಬ್ಬನೇ ಆಗಿರುವನೋ; ಹಾಗೆ; ಸರ್ವಃ = ಸರ್ವತ್ರ ವ್ಯಾಪ್ತನಾಗಿ ಸಕಲವನ್ನೂ ನಿರ್ವಹಿಸತಕ್ಕ; ಆತ್ಮಾ = ಅಂತರಾತ್ಮನಾಗಿದ್ದಾನೆ; ತಂ = ಅಂತಹ, ಸತ್ಯಂ = ಸತ್ಯವಸ್ತುಗಳಿಗೆ ಸತ್ಯತ್ವಪ್ರದನಾದ; ಆನಂದನಿಧಿಂ = ಆನಂದಮಯನೂ ಆನಂದಪ್ರದನೂ ಆದವನನ್ನು; ಸರ್ವಾತ್ಮನಾ = ಯಾವುದೇ ಸ್ಥಿತಿಯಲ್ಲಿದ್ದರೂ; ಭಜೇತ = ಮಹಿಮಾ ಚಿಂತನ ರೂಪವಾಗಿ ಹೊಂದಿಕೊಂಡಿರಬೇಕು; ಅತಃ ಅನ್ಯತಃ = ಅದಕ್ಕೆ ವಿರುದ್ಧವಾದ ವರ್ತನೆಯಿಂದ; ಆತ್ಮಘಾತಃ = ತಮಃ ಪ್ರಾಪ್ತಿಗೆ ಸದೃಶವಾದ ಅನರ್ಥಗಳುಂಟಾಗುವುವು.

ಉತ್ತಮ ಸಾಧಕರಿಗೆ ನೀಡಿದ ಹಿತವಚನಗಳು ಇವು. 'ಸರ್ವಾತ್ಮನಾ' ಎಂಬ ಪದವು, ಆಚಾರಕ್ಕಿಂತ ವಿಚಾರವು ಮುಖ್ಯವೆಂಬುದನ್ನು ತಿಳಿಸುತ್ತದೆ. ಮನಶ್ಶುದ್ಧಿಗೆ ಆಚಾರವು ಅತ್ಯಾವಶ್ಯಕ; ನಿಜ. ಆದರೆ ಮನಶ್ಶುದ್ಧಿಯುಂಟಾಗಿ, ಭಗವಂತನ ಸ್ಮರಣೆಯು ಅವ್ಯಾಹತವಾಗಿ ಬರುತ್ತಿರುವಾಗ, ಬಾಹ್ಯಕಾರಣಗಳಿಂದ ಮನಸ್ಸು ಚಲಿಸುವಂತಾದಾಗ ಅದಕ್ಕೆ ಅವಕಾಶ ನೀಡದೆ ತಡೆಹಿಡಿಯಬೇಕೆಂಬುದು ಉಪದೇಶ ಸಾರ. ಹಾಗೆ ಮಾಡದಿದ್ದರೆ, ಮೇಲಕ್ಕೇರಿದವನು ಕೆಳಕ್ಕೆ ಜಾರಿ ಬೀಳುವಂತಾಗುವುದು.

**ಕಸ್ತಾಂತ್ವನಾದೃತ್ಯ ಪರಾನುಚಿಂತಾಮೃತೇ**
**ಪಶುತ್ವಮಸತೀಂ ನಾಮ ಯುಂಜ್ಯಾತ್ ।**
**ಪಶ್ಯನ್ ಜನಂ ಪತಿತಂ ವೈತರಣ್ಯಾಂ**
**ಸ್ವಕರ್ಮಜಾನ್ಪರಿತಾಪಾನ್ ಜುಷಾಣಂ ॥ ೮ ॥**

ವೈತರಣ್ಯಾಂ = ದಾಟಲಸಾಧ್ಯವಾದುದರಿಂದ ವೈತರಣಿ ಎನಿಸಿಕೊಳ್ಳುವ, ಅಸಹ್ಯಕರವಾದ, ನದಿಯಲ್ಲಿ; ಪತಿತಂ = ಬಿದ್ದಂತಹ; ಸ್ವಕರ್ಮಜಾನ್ = ತಮ್ಮ ದುಷ್ಕರ್ಮಗಳ ದೆಸೆಯಿಂದ ಉಂಟಾದ; ಪರಿತಾಪಂ = ನಾನಾ ಬಗೆಯ ದುಃಖಗಳನ್ನು ಜುಷಾಣಂ = ಅನುಭವಿಸುವ; ಜನಂ = ಜನರನ್ನು; ಪಶ್ಯನ್ = ಗುರುಹಿರಿಯರು ವಿವರಿಸುವ ಶಾಸ್ತ್ರಗಳಿಂದ ತಿಳಿದು ತಿಳಿದೂ; ತಂ = ಉದ್ಧಾರಕರ್ತನಾದ ಭಗವಂತನನ್ನು; ಅನಾದೃತ್ಯ = ತಿರಸ್ಕರಿಸಿ; ಪಶುತ್ವಂ ಋತೇ = ಅವಿವೇಕಿಯನ್ನು ಹೊರತು; ಕಃ = ಯಾವನು ತಾನೇ; ಅಸತೀಂ ನಾಮ = ಅಮಂಗಳಕರವೆನಿಸುವ; ಪರಾನುಚಿಂತಾಂ = ಇತರ ವಿಷಯಗಳನ್ನು ಕುರಿತು; ಯುಂಜ್ಯಾತ್ = ಆಸಕ್ತಿಯನ್ನು ಹೊಂದಿಯಾನು ?

ಶುಭಾಶುಭಗಳ ವ್ಯತ್ಯಾಸಗಳನ್ನೂ, ಅವುಗಳ ಪ್ರಾಪ್ತಿಗೆ ಕಾರಣಗಳನ್ನೂ ತಿಳಿದೂ ಕೂಡ ಯಾವ ಅವಿವೇಕಿಯು ಉದ್ಧಾರಕರ್ತನಾದ ಭಗವಂತನನ್ನು ಭಜಿಸದೆ ಅನ್ಯ ವಿಷಯಗಳಲ್ಲಿ ಆಸಕ್ತಿ ಹೊಂದುವನೋ ಅವನು ಚತುಶ್ಶಾಸ್ತ್ರಪಂಡಿತನಾದರೂ ಕೂಡ ವ್ಯರ್ಥಜೀವಿಯೇ ಸರಿ. ಅವನನ್ನು ವೇದಗಳ ಭಾರವನ್ನು ಹೊತ್ತ ಕತ್ತೆ ಎನ್ನುವರು.

**ಕೇಚಿತ್ಸ್ವದೇಹಾಂತರ್ಹೃದಯಾವಕಾಶೇ**
**ಪ್ರಾದೇಶಮಾತ್ರಂ ಪುರುಷಂ ವಸಂತಂ ।**
**ಚತುರ್ಭುಜಂ ಕಂಜ ರಥಾಂಗ ಶಂಖ**
**ಗಧಾಧರಂ ಧಾರಣಯಾ ಸ್ಮರಂತಿ** ॥ ೮ ॥

ಕೇಚಿತ್ = ವಿರಾಡ್ರೂಪವನ್ನು ಚೆನ್ನಾಗಿ ಗ್ರಹಿಸಿ ಚಿಂತಿಸಲಾರದ ಮಂದಾಧಿಕಾರಿಗಳು; ಸ್ವದೇಹ ಅಂತರ್ಹೃದಯಾವಕಾಶೇ = ತಮ್ಮ ಸ್ಥೂಲದೇಹದ ಹೃತ್ಪದ್ಮದ ಸ್ಥಳದಲ್ಲಿ; ವಸಂತಂ = ನೆಲೆಸಿರುವ; ಚತುರ್ಭುಜಂ = ನಾಲ್ಕು ತೋಳುಗಳುಳ್ಳ; ಕಂಜ = ಕಮಲ; ರಥಾಂಗ = ಚಕ್ರ; ಶಂಖ = ಪಾಂಚಜನ್ಯವೆಂಬ ಶಂಖ; ಗದಾ = ಕೌಮೋದಕಿಯೆಂಬ ಗದೆ; ಧರಂ = ಇವುಗಳನ್ನು ಹಿಡಿದಿರುವ; ಪ್ರಾದೇಶಮಾತ್ರಂ ಪುರುಷಂ = ಚೋಟುದ್ದದ ಆಕಾರವುಳ್ಳ ಪುರುಷಾಕೃತಿಯ ಭಗವಂತನನ್ನು; ಧಾರಣಯಾ = ಏಕಪ್ರಕಾರವಾಗಿ ಧ್ಯಾನಿಸಲನುಕೂಲವಾದ ಯೋಗಮಾರ್ಗದಿಂದ; ಸ್ಮರಂತಿ = ಧ್ಯಾನಮಾಡುತ್ತಾರೆ.

ಇದು ಮನುಷ್ಯೋತ್ತಮರು ಮತ್ತು ಅವರಿಗಿಂತ ಅವರರಾದ ಮುಕ್ತಿಯೋಗ್ಯ ಜೀವರು ಧ್ಯಾನ ಧಾರಣಗಳನ್ನು ಅಭ್ಯಾಸ ಮಾಡುವ ಕ್ರಮ. ಈ ರೀತಿಯಾಗಿ ಕಾಣುವುದು ಸುಷುಮ್ನಾನಾಡಿಯ ಸ್ಥೂಲ ಹೃತ್ಪದ್ಮದಲ್ಲಿ; ಸ್ವರೂಪ ಹೃದಯದಲ್ಲಲ್ಲ. ಈ ರೂಪವು ಸ್ವರೂಪದಲ್ಲಿನ ಆಕಾರಕ್ಕಿಂತ ದೊಡ್ಡದೇ ಸರಿ. ಆದುದರಿಂದ, ಚೋಟುದ್ದ(ವಿಸ್ತರಿಸಿದ

ಹೆಬ್ಬೆರಳು–ತೋರುಬೆರಳುಗಳ ಅಂತರದಷ್ಟು ನೀಳ) ಎಂದರೆ ಸ್ಥೂಲ ರೂಪದ ಚೋಟುದ್ದದಷ್ಟು ಹೃದಯ ಕಮಲದಲ್ಲಿ ಕಾಣುವುದೆಂದು ಹೇಳುವುದು ಸಮಂಜಸವಾಗುವುದು.

**ಪ್ರಸನ್ನವಕ್ತ್ರಂ ನಳಿನಾಯತೇಕ್ಷಣಂ ಕದಂಬ ಕಿಂಜಲ್ಕ ಪಿಶಂಗವಾಸಸಂ ।**
**ಲಸನ್ಮಹಾಹಾರ ಹಿರಣ್ಮಯಾಂಗದಂ ಸ್ಫುರನ್ಮಹಾರತ್ನ ಕಿರೀಟ**
**ಕುಂಡಲಂ ॥ ೧೦ ॥**

**ಉನ್ನಿದ್ರ ಹೃತ್ಪಂಕಜ ಕರ್ಣಿಕಾಲಯೇ**
**ಯೋಗೇಶ್ವರಾಸ್ಥಾಪಿತ ಪಾದಪಲ್ಲವಂ ।**
**ಶ್ರೀಲಕ್ಷಣಂ ಕೌಸ್ತುಭರತ್ನಕಂಧರಮಮ್ಲಾನ**
**ಲಕ್ಷ್ಮ್ಯಾ ವನಮಾಲಯಾಂಚಿತಂ ॥ ೧೧ ॥**

**ವಿಭೂಷಿತಂ ಮೇಖಲಯಾಂಗುಲೀಯಕೈ**
**ರ್ಮಹಾಧನೈರ್ನೂಪುರ ಕಂಕಣಾದಿಭಿಃ ।**
**ಸ್ನಿಗ್ಧಾಮಲೈಃ ಕುಂಚಿತ ನೀಲ**
**ಕುಂತಲೈರ್ವಿರೋಚಮಾನಾನನಹಾಸಪೇಶಲಂ ॥ ೧೨ ॥**

**ಅದೀನ ಲೀಲಾ ಹಸಿತೇಕ್ಷಣೋಲ್ಲಸತ್**
**ಭ್ರೂಭಂಗ ಸಂಸೂಚಿತ ಭೂರ್ಯನುಗ್ರಹಂ ।**
**ಈಕ್ಷೇತ ಚಿಂತಾಮಯಮೇನಮೀಶ್ವರಂ**
**ಯಾವನ್ಮನೋ ಧಾರಣಯಾವತಿಷ್ಠತೇ ॥ ೧೩ ॥**

ಪ್ರಸನ್ನವಕ್ತ್ರಂ = ಅನುಗ್ರಹ ಸೂಚಕವಾಗಿ ತುಷ್ಟಿಕರವಾದ ಮುಖ ಕಮಲವುಳ್ಳ; ನಳಿನ ಆಯತ ಈಕ್ಷಣಂ = ಕಮಲದಳದಂತೆ ವಿಶಾಲವೂ ನೀಳವೂ ಆದ ಕಣ್ಣುಗಳುಳ್ಳ; ಕದಂಬ ಕಿಂಜಲ್ಕ ಪಿಶಂಗ ವಾಸಸಂ = ಕೃಷ್ಣನಿಗೆ ಪ್ರಿಯವಾದ ಕದಂಬ ವೃಕ್ಷದ ಚಿಗುರಿನಂತೆ ಪೀತವರ್ಣವುಳ್ಳ ವಸ್ತ್ರವನ್ನುಟ್ಟಿರುವ; ಲಸತ್ = ಕಾಂತಿಯುಕ್ತವಾದ; ಮಹಾಹಾರ = ಅನರ್ಘವಾದ ಹಾರವನ್ನೂ; ಹಿರಣ್ಮಯ ಅಂಗದಂ = ಶುದ್ಧ ಬಂಗಾರದ ಜರತಾರಿಯ ಕವಚವನ್ನೂ ಧರಿಸಿರುವ; ಸ್ಫುರತ್ = ಹೊಳೆ ಹೊಳೆಯುವ; ಮಹಾರತ್ನ ಕಿರೀಟ ಕುಂಡಲಂ = ಅಸಾಧಾರಾಣ ರತ್ನಖಚಿತವಾದ ಕಿರೀಟದಿಂದಲೂ, ಕರ್ಣಾಭರಣಗಳಿಂದಲೂ ಅಲಂಕೃತನಾಗಿರುವ;

ಉನ್ನಿದ್ರ ಹೃತ್ಪಂಕಜ = ಮೇಲ್ಮುಖವಾಗಿ ನಿಂತು ಅರಳಿದ ಹೃದಯ ಕಮಲಗಳ; ಕರ್ಣಿಕಾಲಯೇ = ಪುಷ್ಪಪೀಠವೆಂಬ ಮಂದಿರಗಳಲ್ಲಿ; ಯೋಗೇಶ್ವರ ಆಸ್ಥಾಪಿತ ಪಾದ ಪಲ್ಲವಂ = ಮಹಾಯೋಗಿಗಳಾದ ಸನಕಾದಿಗಳಿಂದ ನೆಲೆಗೊಳಿಸಲ್ಪಟ್ಟ ಪಲ್ಲವಕೋಮಲ ಪಾದಗಳುಳ್ಳ; ಶ್ರೀಲಕ್ಷಣಂ = ಎದೆಯ ಮೇಲೆ ಶ್ರೀವತ್ಸವೆಂಬ ಚಿಹ್ನೆಯನ್ನುಳ್ಳ; ಕೌಸ್ತುಭ ರತ್ನ ಕಂಧರಂ = ಸಮುದ್ರದಲ್ಲಿ ಉತ್ಪನ್ನವಾದುದರಿಂದ ಕೌಸ್ತುಭವೆಂದು ಕರೆಸಿಕೊಳ್ಳುವ ರತ್ನವಿಶೇಷವನ್ನು ಕೊರಳಲ್ಲಿ ಧರಿಸಿರುವ; ಅಮ್ಲಾನಲ[illegible]ವನಮಾಲಯಾಂಚಿತಂ = ಬಾಡದಿರುವ ದಿವ್ಯಕಾಂತಿಯಿಂದ ಯುಕ್ತವಾದ ತುಳಸೀಮಾಲೆಯನ್ನುಳ್ಳ;

ಮೇಖಲಯಾ = ನಡುವಿನ ಪಟ್ಟಿಯಿಂದಲೂ; ಅಂಗುಲೀಯಕೈಃ = ಬೆರಳುಂಗುರಗಳಿಂದಲೂ; ಮಹಾಘನ್ಯೈಃ = ಅತ್ಯಂತ ಗಟ್ಟಿಮುಟ್ಟಾದ; ನೂಪುರಕಂಕಣ ಆದಿಭಿಃ = ಕಾಲ್ಗಡಗಗಳು, ಕೈಕಡಗಗಳು ಮೊದಲಾದ ಆಭರಣಗಳಿಂದ, ವಿಭೂಷಿತಂ = ಅಲಂಕೃತನಾದ; ಸ್ನಿಗ್ಧ ಅಮಲೈಃ ಕುಂಚಿತ ನೀಲಕುಂತಲೈಃ = ಒತ್ತಾಗಿ, ನಿರ್ಮಲವಾಗಿ, ಕಪ್ಪಾಗಿರುವ ಸುಳಿಸುಳಿಯಾದ ಮುಂಗುರುಳುಗಳಿಂದ; ವಿರೋಚಮಾನ = ಪ್ರಕಾಶಿಸುವ; ಆನನ ಹಾಸ ಪೇಶಲಂ = ಮುಖದ ಮುಗುಳ್ನಗೆಯಿಂದ ಅತಿ ಸುಂದರನಾದ;

ಅದೀನ ಲೀಲಾ ಹಸಿತ ಈಕ್ಷಣ = ಪೂರ್ಣಲೀಲಾ ವಿಲಾಸದಿಂದ ಕಣ್ದೆರೆದು ನೋಡುತ್ತಿರುವ; ವಿಲಸತ್ = ಮಿಂಚಿನಂತೆ ಚಲಿಸುವ; ಭ್ರೂಭಂಗ ಸಂಸೂಚಿತ = ಹುಬ್ಬಿನ ಅರ್ಥಪೂರ್ಣವಾದ ಚಲನೆಯಿಂದ ಚೆನ್ನಾಗಿ ಸೂಚಿಸಲ್ಪಡುವ; ಭೂರ್ಯನುಗ್ರಹಂ = ಮಹಾಪ್ರಸಾದ ಪ್ರದನಾದ; ಚಿಂತಾಮಯಂ = ಮನಸ್ಸಿನಿಂದ ಧ್ಯಾನಕ್ಕೆ ತಂದು ಕೊಳ್ಳಬಹುದಾದ; ಏನಂ = ಈ ಬಗೆಯ; ಈಶ್ವರಂ = ಸರ್ವೇಶ್ವರನನ್ನು; ಯಾವತ್ ಮನೋಧಾರಣಯಾ ಅವತಿಷ್ಠತೇ = ಮನಸ್ಸಿನಲ್ಲಿ ಸ್ಫುಟವಾಗಿ, ದೃಢವಾಗಿ ನಿಲ್ಲುವಂತೆ ಆಗುವವರೆಗೆ; ಈಕ್ಷೇತ = ಮನಸ್ಸಿನ ಕಣ್ಣಿನಿಂದ ನೋಡುವ ಅಭ್ಯಾಸವನ್ನು ಮಾಡಬೇಕು.

ಸೂಕ್ಷ್ಮದರ್ಶಕಕ್ಕೂ ಕಾಣಲಾರದಷ್ಟು ಅತಿಚಿಕ್ಕದಾದ ಹೃತ್ಕಮಲದಲ್ಲಿ ಪೀಠಸ್ಥನಾಗಿ, ಸರ್ವಾಭರಣ ಭೂಷಿತನಾಗಿ ಮೂರ್ತಿಮತ್ತಾಗಿ ಭಗವಂತನಿರುವುದು ಹೇಗೆ ಸಾಧ್ಯ ಎಂದು ಮಂದಮತಿಗಳಿಗೆ ಶಂಕೆ ಮೂಡಬಹುದು. ಈಗಿನ ವಿಜ್ಞಾನಿಗಳೇ ಹೇಳುವಂತೆ ಅತಿಚಿಕ್ಕದಾದ ಪರಮಾಣುವೆಂಬ ವಸ್ತುವಿನಲ್ಲಿ ಕೇಂದ್ರ, ವಿದ್ಯುತ್ ವೃತ್ತಗಳು

ಮತ್ತು ಆವರಣಗಳು ಕ್ರಮವಾಗಿ ಒಂದರ ಮೇಲೊಂದು ಇರುವುದು ಸಾಧ್ಯವೆಂದ ಮೇಲೆ ಅಪ್ರಾಕೃತನೂ ಅದ್ಭುತ ಮಹಿಮನೂ ಆದ ಭಗವಂತನು ಉಕ್ತರೀತಿಯಲ್ಲಿ ಹೃತ್ಕಮಲವಾಸಿಯಾಗಿರುವನೆಂಬ ಮಾತಿನಲ್ಲಿ ಸಂಶಯವೇಕೆ? ಅವನು, "ಅಣೋರಣೀಯಾನ್ ಮಹತೋ ಮಹೀಯಾನ್"

ಇಲ್ಲಿ ವರ್ಣನೆಯಲ್ಲಿ ಕಂಡುಬರುವ ಬಂಗಾರ ರತ್ನಗಳು ಮೊದಲಾದವು ನಮ್ಮ ಬಳಕೆಯಲ್ಲಿರುವ ಸ್ಥೂಲ ವಸ್ತುಗಳೆಂದು ತಿಳಿಯಬಾರದು. ಅವುಗಳಿಗೆಲ್ಲಾ ಜನ್ಮದಾತ್ರಿಯೂ, ಯಜಮಾನಿಯೂ ಆದ ಲಕ್ಷ್ಮೀದೇವಿಯೇ ಭಗವಂತನಿಗೆ ಅಂಬರ ಆಯುಧ ಆಭರಣ ಆಲಯಗಳಾಗಿರುವಳೆಂದು ತಿಳಿಯಬೇಕು.

ಮನಸ್ಸಿನಿಂದ ಭಗವಂತನ ಮೂರ್ತಿಯೆಂದು ಚಿಂತಿಸಿ ಕಾಣುವುದು ಕೇವಲ, "ಯದ್ಭಾವಂ ತದ್ಭವತಿ" ಎಂಬಂತೆ ಮನಸ್ಸಿನ ಭ್ರಾಂತಿಯಾಗಿರಬಾರದೇಕೆ ಎಂಬ ಸಂಶಯವೂ ಮೂಡಬಹುದು. ಯೋಗಿಗಳು ಮಾಡುವ ಅಭ್ಯಾಸ, ಮನಸ್ಸನ್ನು ಅನ್ಯತ್ರ ಧಾವಿಸದಂತೆ ಏಕಾಗ್ರಗೊಳಿಸುವ ಪ್ರಯತ್ನ ಮಾತ್ರ. ಅವರು ಎಷ್ಟೇ ಸ್ಪಷ್ಟವಾಗಿ, ಸಮಗ್ರವಾಗಿ, ಭಗವಂತನ ಚಿತ್ರವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡರೂ, ಅವರು ಚಿಂತನೆಯಿಂದ ಕಾಣುವ ಚಿತ್ರಕ್ಕೂ, ಪ್ರತ್ಯಕ್ಷನಾದಾಗ ಕಾಣುವ ಭಗವದ್ರೂಪಕ್ಕೂ ಅಜಗಜಾಂತರ. ಧ್ಯಾನಧಾರಣಗಳ ಬಲದಿಂದ ನಿಜರೂಪದ ವೈಭವವನ್ನು ಕಂಡ ಧ್ರುವಬಾಲಕನಂತಹ ಮಹಾನುಭಾವರು ಅದನ್ನು ಬಲ್ಲರು.

**ಏಕೈಕಶೋಽಂಗಾನಿಧಿಯಾನುಭಾವಯೇತ್**
**ಪಾದಾದಿ ಯಾವದ್ಧಸಿತಂ ಗದಾಭೃತಃ ।**
**ಜಿತಂ ಜಿತಂ ಸ್ಥಾನಮಪೋಹ್ಯ ಧಾರಯೇತ್ಪರಂ**
**ಪರಂ ಶುದ್ಧ್ಯತಿ ಧೀರ್ಯಥಾ ಯಥಾ** ॥ ೧೪ ॥

ಗಧಾಭೃತಃ = ಗದಾಪಾಣಿಯಾದ ಭಗವಂತನ; ಪಾದಾದಿ ಯಾವತ್ ಹಸಿತಂ = ಪಾದಗಳಿಂದ ಆರಂಭಿಸಿ ಮಂದಸ್ಮಿತ ಸುಂದರವಾದ ಮುಖಕಮಲದ ಪರ್ಯಂತ; ಅಂಗಾನಿ = ಅಲಂಕೃತಗಳಾದ ಅವಯವಗಳನ್ನು; ಏಕೈಕಶಃ = ಒಂದೊಂದನ್ನಾಗಿ; ಧಿಯಾ = ಬುದ್ಧಿಪೂರ್ವಕವಾಗಿ; ಅನುಭಾವಯೇತ್ = ಚಿಂತನೆಗೆ ತಂದುಕೊಳ್ಳಬೇಕು; ಧೀಃ = ಬುದ್ಧಿಯುಕ್ತವಾದ ಮನಸ್ಸು; ಯಥಾ ಯಥಾ ಶುದ್ಧ್ಯತಿ = ಧಾರಣ ಸಾಮರ್ಥ್ಯವನ್ನು ಪಡೆಯುವಂತೆ ನಿಷ್ಕಲ್ಮಷವಾದ ಹಾಗೆಲ್ಲಾ; ಜಿತಂ ಜಿತಂ ಸ್ಥಾನಂ = ಅಭ್ಯಾಸದಿಂದ ಧ್ಯಾನಕ್ಕೆ ಸುಲಭವಾಗಿ ಒದಗುವ ಅವಯವಗಳನ್ನೇ ಚಿಂತಿಸುವುದನ್ನು; ಅಪೋಹ್ಯ = ಬಿಟ್ಟು; ಪರಂ ಪರಂ = ಮೇಲೆಮೇಲಿನ ಅವಯವಸ್ಥಾನಗಳನ್ನು; ಧಾರಯೇತ್ = ಮನಸ್ಸಿನಲ್ಲಿ ನಿಲ್ಲಿಸುವ ಪ್ರಯತ್ನ ಮಾಡಬೇಕು.

ಈ ಅಭ್ಯಾಸ ಕ್ರಮವನ್ನೇ ಶ್ರೀಮದಾನಂದತೀರ್ಥರು ತಮ್ಮ ದ್ವಾದಶ ಸ್ತೋತ್ರದ ಪ್ರಥಮಾಧ್ಯಾಯದಲ್ಲಿ ನಿರೂಪಿಸಿದ್ದಾರೆ. ಧೀಶುದ್ಧಿಯಾಗುವುದೆಂದರೆ, ಧ್ಯಾನಕ್ಕೆ ಅಡ್ಡಿಯನ್ನುಂಟುಮಾಡುವ, ಕಶ್ಮಲರೂಪರಾದ ಅಂತಶ್ಶತ್ರುಗಳನ್ನು ಧೀಶಕ್ತಿಪ್ರದರಾದ ಮುಖ್ಯಪ್ರಾಣ ದೇವರ ಬಲದಿಂದ ಹೊಡೆದೋಡಿಸುವುದು ಎಂದರ್ಥ.

**ಯಾವನ್ನ ಜಾಯೇತ ಪರಾವರೇಸ್ಮಿನ್ವಿಶ್ವೇಶ್ವರೇ ದ್ರಷ್ಟರಿ ಭಕ್ತಿಯೋಗಃ ।**
**ತಾವತ್ಸ್ಥವೀಯಃ ಪುರುಷಸ್ಯ ರೂಪಂ ಕ್ರಿಯಾವಸಾನೇ**
**ಪ್ರಯತಃಸ್ಮರೇತ ॥ ೧೪ ॥**

ಪರಾವರೇ = ಅವರರಾದ ಬ್ರಹ್ಮಾದಿಗಳಿಗಿಂತಲೂ ಪರಮೋತ್ತಮನಾದ; ಅಸ್ಮಿನ್ = ಈ; ವಿಶ್ವೇಶ್ವರೇ = ಸಕಲ ಜಗತ್ತುಗಳಿಗೂ ಒಡೆಯನಾದ; ದ್ರಷ್ಟರಿ = ಸರ್ವ ಸಾಕ್ಷಿಯಾದ ಸ್ವಾಮಿಯಲ್ಲಿ; ಯಾವತ್ = ಎಲ್ಲಿಯತನಕ; ಭಕ್ತಿಯೋಗಃ = ತನಗೆ ಮಹೋಪಕಾರಿಯಾದ ಪರಮಾಪ್ತನೆಂಬ ಮಾಹಾತ್ಮ್ಯಜ್ಞಾನದಿಂದ ನಿರಾತಂಕ ಸ್ನೇಹರೂಪವಾದ ಭಕ್ತಿಯು; ನ ಜಾಯೇತ = ಉಂಟಾಗುವುದಿಲ್ಲವೋ; ತಾವತ್ = ಅಲ್ಲಿಯ ತನಕ; ಪುರುಷಸ್ಯ = ವಿರಾಟ್ಪುರುಷನ; ಸ್ಥವೀಯಃ = ಸ್ಥೂಲವಾದ; ರೂಪಂ = ರೂಪವನ್ನು; ಕ್ರಿಯಾವಸಾನೇ = ನಿತ್ಯಕರ್ಮಗಳು ಮುಗಿದ ನಂತರ; ಪ್ರಯತಃ = ಪ್ರಯತ್ನಪೂರ್ವಕವಾಗಿ; ಸ್ಮರೇತ = ಖಂಡಧ್ಯಾನ ಕ್ರಮದಿಂದ ಧ್ಯಾನಮಾಡಬೇಕು.

ಭಗವದ್ಧ್ಯಾನರೂಪವಾದ ಈ ತಪಸ್ಸು ಎಷ್ಟು ಸುಲಭವಾದುದು ಎಷ್ಟು ಹಿತಕರವಾದುದು ಎಂಬುದನ್ನು ನಾವು ಗ್ರಹಿಸಬೇಕು. ಇದಕ್ಕೆ ಮನೆ ಬಿಟ್ಟು ಕಾಡಿಗೆ ಹೋಗಿ ತಪಸ್ಸು ಮಾಡಬೇಕಾದ ಅಗತ್ಯವಿಲ್ಲ. ಮನೆಯ ವಾತಾವರಣದಲ್ಲಿಯೇ ಮನೋನಿಗ್ರಹದ ಪ್ರಯತ್ನ ಮಾಡುತ್ತಾ ಧ್ಯಾನಕ್ಕೆ ಕೂಡಬಹುದು. ಇತರ ಜೀವನಾವಶ್ಯಕ ಕೆಲಸಗಳನ್ನು ತ್ಯಜಿಸಬೇಕಾಗಿಲ್ಲ. ಆ ಕಲಸಗಳನ್ನೆಲ್ಲಾ ಮುಗಿಸಿ, ವಿರಾಮ ಮಾಡಿಕೊಂಡು ಧ್ಯಾನಕ್ಕೆ ಕೂಡಬಹುದು. ಇಂತಹ ಅಭ್ಯಾಸದಿಂದ ಎಲ್ಲಿದ್ದರೂ ಹೇಗಿದ್ದರೂ ಭಗವಂತನ ಸ್ಮರಣೆ ಸುಲಭವಾಗಿಬಿಡುವುದು. ಇದರ ಪ್ರಯೋಜನ, ಭಗವಂತನೊಡನೆ ಭಕ್ತಿ ಬಾಂಧವ್ಯದ ನಿಕಟ ಸಂಬಂಧ. ಅದರಿಂದ ಮುಕ್ತಿಲಾಭ.

**ಸ್ಥಿರಂ ಸುಖಂಚಾಸನಮಾಸ್ಥಿತೋ ಯತಿಃ**
**ಯದಾಜಿಹಾಸುರ್ಯಿಮಮಂಗ ಲೋಕಂ ।**
**ಕಾಲೇ ಚ ದೇಶೇ ಚ ಮನೋ ನ**
**ಸಜ್ಜೇತ್ಪ್ರಾಣಾನ್ನಿಯಚ್ಛೇನ್ಮನಸಾಜಿತಾಸುಃ ॥ ೧೬ ॥**

ಯತಿಃ = ಪ್ರಯತ್ನಶೀಲನಾಗಿ ಭಗವದಪರೋಕ್ಷವನ್ನು ಹೊಂದಿದ ಜ್ಞಾನಿಯು; ಸ್ಥಿರಂ ಸುಖಂಚ ಆಸನಂ ಆಸ್ಥಿತಃ = ಸ್ಥಿರವೂ, ಸುಲಭವೂ ಆದ ರೀತಿಯಲ್ಲಿ ಕುಳಿತು; ಅಂಗ = ಪ್ರಿಯ ಪರೀಕ್ಷಿದ್ರಾಜಾ; ಯದಾ = ಯಾವಾಗ; ಲೋಕಂ = ಈ ದೇಹವನ್ನು; ಜಿಹಾಸುಃ = ಬಿಡಲು ಇಚ್ಛೆಯುಳ್ಳವನಾಗುವನೋ; ಆಗ; ಕಾಲೇಚ, ದೇಶೇಚ = ಕಾಲಸಂಬಂಧವಾದ ಮತ್ತು ದೇಶ ಸಂಬಂಧವಾದ ವಿಷಯಗಳಲ್ಲಿ; ಮನಃ = ಮನಸ್ಸನ್ನು; ನ ಸಜ್ಜೇತ = ಸಂಬಂಧಗೊಳಿಸಬಾರದು; ಜಿತಾಸುಃ = ಪ್ರಾಣಾಯಾಮ ಕ್ರಮದಿಂದ ಶ್ವಾಸಜಯ ಹೊಂದಿ ಮುಖ್ಯಪ್ರಾಣದೇವರ ಪ್ರಸಾದಕ್ಕೆ ಪಾತ್ರನಾಗಿ; ಪ್ರಾಣಾನ್ = ಇಂದ್ರಿಯಾಭಿಮಾನಿ ದೇವತೆಗಳನ್ನು; ಮನಸಾ = ಮನೋಭಿಮಾನಿಗಳಾದ ಇಂದ್ರ ದೇವರ ಬಲದಿಂದ; ನಿಯಚ್ಛೇತ್ = ಇಂದ್ರದೇವರ ವಶವೆಂದು ಲಯಚಿಂತನೆ ಮಾಡಬೇಕು.

ಯೋಗಾಭ್ಯಾಸಿಗಳು ಕೊಡುವ ಪದ್ಮಾಸನ, ಸ್ವಲ್ಪ ಕಠಿನವಾದದ್ದು. ಪಾದಗಳನ್ನು ತೊಡೆಗಳ ಕೆಳಗಿಟ್ಟು ಕೂಡುವ ಪದ್ಮಾಸನವು ಸುಖಾಸನವೆನಿಸುವುದು; ಆದರೆ ನೆಟ್ಟಗೆ ಕುಳಿತು ಧ್ಯಾನಮಾಡಬೇಕು. ಪ್ರತಿರಾತ್ರಿಯೂ ಮಲಗುವುದಕ್ಕೆ ಮೊದಲು ಲಯಚಿಂತನೆ ಮಾಡಿ ನಿಶ್ಚಿಂತರಾಗುವಂತೆ, ಮರಣ ಕಾಲದಲ್ಲಿಯೂ ಲಯಚಿಂತನೆ ಮಾಡಿ, ಕಾಲಸಂಬಂಧಿಯಾದ ಮತ್ತು ದೇಶಸಂಬಂಧಿಯಾದ ಜನ್ಮಕ್ಕೆ ಹತ್ತಿದ ಎಲ್ಲಾ ಚಿಂತೆಗಳನ್ನೂ ತ್ಯಜಿಸಿಬಿಡಬೇಕು. ಪ್ರಾಣಾಯಾಮದ ಪ್ರಯೋಜನ ಮುಖ್ಯಪ್ರಾಣನ ಪ್ರಸಾದ. ಲಯಚಿಂತನೆಯ ಪ್ರಾರಂಭ, ಇಂದ್ರಿಯಾಭಿಮಾನಿ ದೇವತೆಗಳನ್ನು ಮನೋಭಿಮಾನಿಯಾದ ಇಂದ್ರದೇವರ ವಶವೆಂದು ತಿಳಿದು ನಿಶ್ಚಿಂತರಾಗುವ ಅಭ್ಯಾಸದಿಂದ.

**ಮನಶ್ಚಬುದ್ಧ್ಯಾಮಲಯಾ ನಿಯಮ್ಯ ಕ್ಷೇತ್ರಜ್ಞ ಏತಾಂ**
**ನಿನಯೇತ್ತಮಾತ್ಮನಿ ।**
**ಆತ್ಮಾನಮಾತ್ಮನ್ಯವರುಧ್ಯ ಧೀರೋ ಲಬ್ಧೋಪಶಾಂತಿರ್ವಿರಮೇತ**
**ಕೃತ್ಯಾತ್ ॥ ೧೭ ॥**

ಮನಃ ಚ = ಮನೋಭಿಮಾನಿಯಾದ ಇಂದ್ರ ದೇವರನ್ನು; ಅಮಲಯಾ ಬುದ್ಧ್ಯಾ ನಿಯಮ್ಯ = ಶುದ್ಧಜ್ಞಾನದಾಯಕಳಾದ ಉಮಾದೇವಿಯ ವಶವೆಂದು ಅನುಸಂಧಾನಮಾಡಿ; ಏತಾಂ = ಈ ಉಮಾದೇವಿಯನ್ನು; ಕ್ಷೇತ್ರಜ್ಞೇ = ಜೀವಾಭಿಮಾನಿಯಾದ ಶೇಷಾಂತರ್ಗತ ಶ್ರೀಹರಿಯಲ್ಲಿ; ನಿನಯೇತ್ = ಕ್ರಮವಾಗಿ ಲಯಗೊಳಿಸಬೇಕು; ಆತ್ಮಾನಂ = ಜೀವಾಭಿಮಾನಿ ಹರಿಯನ್ನು; ಆತ್ಮನಿ =

ವಿಶ್ವಾತ್ಮನಾದ ಅವನಲ್ಲಿ; ಅವರುದ್ಧ್ಯ = ಏಕೀಭಾವದಿಂದ ಚಿಂತಿಸಿ; ಧೀರಃ = ದಿಟ್ಟನಾದ ಯೋಗಿಯು; ಲಬ್ಧಉಪಶಾಂತಿಃ = ನಿತ್ಯ ನಿರ್ದುಃಖ ಮಂಗಳದಾಯಕನಾದ ವೈಕುಂಠಪತಿಯನ್ನು ಆಶ್ರಯಿಸಿ; ಕೃತ್ಯಾತ್ = ಸಂಸಾರ ಸಂಬಂಧವಾದ ಕರ್ಮನಿಮಿತ್ತವಾದ, ವಿಧಿನಿಷೇಧ ಕೃತ್ಯಗಳಿಂದ; ವಿರಮೇತ = ಬಿಡುಗಡೆ ಹೊಂದಬೇಕು.

ಲಯಚಿಂತನೆಯ ಕ್ರಮ ಹೀಗೆ– ಆರೋಹಣ ಕ್ರಮದಲ್ಲಿ ಇಂದ್ರಿಯಾಭಿಮಾನಿ ದೇವತೆಗಳು, ಇಂದ್ರದೇವರು ಮತ್ತು ಕಾಮದೇವರು; ಉಮಾದೇವಿ, ರುದ್ರದೇವರು, ಶೇಷದೇವರು, ಸರಸ್ವತಿದೇವಿ, ಬ್ರಹ್ಮದೇವರು, ಲಕ್ಷ್ಮೀದೇವಿ, ಶ್ರೀಮನ್ನಾರಾಯಣ. ಈ ಲಯಚಿಂತನೆಯಲ್ಲಿ ಎರಡು ಪ್ರಕಾರಗಳಿವೆ. ಈಗ ಹೇಳಿದ ಕ್ರಮದಲ್ಲಿ ಇಂದ್ರದೇವರು ಎಂದಾಗ ಮನೋಭಿಮಾನಿಗಳಲ್ಲಿ ಇನ್ನೊಬ್ಬರಾದ ಕಾಮದೇವರನ್ನೂ ಗ್ರಹಿಸಬೇಕು. ಈ ಮೇಲೆ ಹೇಳಿದ ಕ್ರಮದಲ್ಲಿ ಇಂದ್ರದೇವರ ಸ್ಥಾನದಲ್ಲಿ ಕೆಲವರು ಕಾಮದೇವರನ್ನು ಚಿಂತಿಸಬೇಕೆಂಬ ನಿಯಮವಿದೆ; ಅವರು ಶೇಷಮಾರ್ಗದವರು. ಇನ್ನು ಕೆಲವರು ಇಂದ್ರದೇವರನ್ನು ಗರುಡದೇವರಲ್ಲಿಯೂ, ಆ ಗರುಡದೇವರನ್ನು ವಾಣೀ ಬ್ರಹ್ಮರಲ್ಲಿಯೂ ಅಧೀನವೆಂದು ಚಿಂತಿಸಿ ಲಯಗೊಳಿಸಬೇಕು. ಇವರು ಗರುಡಮಾರ್ಗದವರು.

ಹೀಗೆ ಲಯಚಿಂತನೆ ಮಾಡುವಾಗ, ಇಂದ್ರಿಯಾಭಿಮಾನಿಗಳ ಬಿಂಬನಾದ ಶ್ರೀಹರಿಯನ್ನು, ಇಂದ್ರದೇವರ ಬಿಂಬನಾದ ಶ್ರೀಹರಿಯಲ್ಲಿ; ಆ ಬಿಂಬನನ್ನು ಉಮಾದೇವಿಯರ ಬಿಂಬನಾದ ಲಕ್ಷ್ಮೀಬಿಂಬನಲ್ಲಿ; ಇತ್ಯಾದಿಯಾಗಿ ಶ್ರೀಹರಿಯ ರೂಪ ರೂಪಾಂತರಗಳನ್ನು ಮೂಲ ರೂಪದಲ್ಲಿ ಒಂದಾಗಿ ಚಿಂತಿಸಬೇಕೆಂಬುದು ಅಭಿಪ್ರಾಯ. ಈ ಕ್ರಮದಲ್ಲಿ, ದೇವತೆಗಳು ಶ್ರೀಹರಿಯ ಪ್ರತಿಬಿಂಬರೆಂದು ಚಿಂತಿಸಬೇಕು. ಆದರೆ ಎಲ್ಲರಲ್ಲಿಯೂ ಬಿಂಬ ಪ್ರತಿಬಿಂಬ ಭಾವದಿಂದಿರುವ ಬಿಂಬ ಒಬ್ಬನೇ ಎಂದೂ ಚಿಂತಿಸಬೇಕು. ಇದು ಶ್ರೀಮದಾನಂದತೀರ್ಥರಿಗೆ ಸಮ್ಮತವಾದ, ನಿಜವಾದ ಅದ್ವೈತ. ಭಗವಂತನ ರೂಪರೂಪಾಂತರಗಳಲ್ಲಿ ಭಿನ್ನತೆ ಇಲ್ಲವಾದುದರಿಂದ ಅವನು ಅದ್ವಿತೀಯ. ಅದ್ವಿತೀಯದ ಭಾವ, ಅದ್ವೈತ. ಅದು ಅದ್ವೈತಿವಾದಿಗಳು ಹೇಳುವ ಜೀವ ಬ್ರಹ್ಮರ ಏಕೀಭಾವವಲ್ಲ.

**ನ ಯತ್ರ ಕಾಲೋನಿಮಿಷಾಂ ಪರಃ ಪ್ರಭುಃ**
**ಕುತೋನುದೇವಾ ಜಗತಾಂ ಯ ಈಶಿರೇ ।**
**ನ ಯತ್ರ ಸರ್ವಂ ನರಜಸ್ತಮಶ್ಚ**
**ನವೈವಿಕಾರೋ ನ ಮಹಾನ್ಪ್ರಧಾನಃ** ॥ ೧೮ ॥

**ಪರಂ ಪದಂ ವೈಷ್ಣವಮಾಮನಂತಿ ತನ್ನೇತಿ ನೇತೀತ್ಯತದುತ್ಸಿಸೃಕ್ಷವಃ ।**
**ವಿಸೃಜ್ಯ ದೌರಾತ್ಮ್ಯಮನನ್ಯಸೌಹೃದಾ ಹೃದೋಪಗುಹ್ಯಾಪುರಮುಂ**
**ಪದೇಪದೇ ॥ ೧೮ ॥**

ಯತ್ರ = ಯಾವ ಸ್ಥಾನದಲ್ಲಿ; ಅನಿಮಿಷಾಂ ಪರಃ ಪ್ರಭುಃ = ರುದ್ರಾದಿದೇವತೆಗಳಿಗೆಲ್ಲಾ ಶ್ರೇಷ್ಠನೂ, ಯಜಮಾನನೂ ಆದವನೋ, ಅಂತಹ; ಕಾಲಃ = ಲಕ್ಷ್ಮೀನಾರಾಯಣರ ನಂತರ ಮುಖ್ಯ ಕಾಲಾಭಿಮಾನಿಯಾದ ವಾಯುದೇವನು; ನ = ಇರುವುದಿಲ್ಲವೋ; ಅಲ್ಲಿ; ಜಗತಾಂ ಯೇ ಈ ಶಿರೇ = ಯಾರು ಜಗತ್ತಿನ ವಿವಿಧ ಕಾರ್ಯಗಳಿಗೆ ಯಜಮಾನರಾಗಿದ್ದರೋ, ಅಂತಹ; ದೇವಾಃ = ಇತರ ದೊಡ್ಡ ಚಿಕ್ಕ ದೇವತೆಗಳು; ಕುತಃ ನು = ಹೇಗೆ ತಾನೇ ಇದ್ದಾರು ? ಯತ್ರ = ಯಾವಸ್ಥಾನದಲ್ಲಿ; ಸತ್ವಂ, ರಜಃ, ತಮಃ, ಚ, ನ = ಸತ್ವರಜಸ್ತಮಗಳು ಇರುವುದಿಲ್ಲವೋ; ವಿಕಾರಃ ನವೈ= ಆ ಗುಣತ್ರಯಗಳ ವಿಕಾರಗಳಾದ ಪಂಚಭೂತಗಳು, ಇಂದ್ರಿಯಗಳು ಮತ್ತು ಅಹಂಕಾರ ತತ್ವವೂ ಇರುವುದಿಲ್ಲವೋ; ಮಹಾನ್ = ಮಹತ್ತತ್ವವೂ; ಪ್ರಧಾನಂ = ಜಡಪ್ರಕೃತಿಯ ಮೂಲರೂಪವೆನಿಸುವ ಅವ್ಯಕ್ತ ತತ್ವವೂ; ನ = ಇರುವುದಿಲ್ಲವೋ; ಅದನ್ನು;

ವೈಷ್ಣವಂ = ವಿಷ್ಣುಸಂಬಂಧಿಯಾದ; ಪರಂ ಪದಂ = ಉತ್ತಮ ಲೋಕವೆಂದು; ಆಮನಂತಿ = ತಿಳಿದಿರುತ್ತಾರೆ; ಅತತ್ = ಅದಲ್ಲದ; ಸಂಸಾರ ಹೇತುವಾದ ದುಃಖ ಭೂಯಿಷ್ಠವಾದ ಲೋಕವನ್ನು; ಉತ್ಸಿಸೃಕ್ಷವಃ = ಬಿಟ್ಟುಹೋಗಬೇಕೆಂದು ಬಯಸಿದವರು; ತತ್ = ಆ ವಿಷ್ಣುಸಂಬಂಧಿಯಾದ ಲೋಕವು; ನೇತಿ ನೇತಿ = ಇಹಲೋಕದಂತೆ ಜಡ ಸಂಬಂಧಿಯಾದುದಲ್ಲ, ದುಃಖಹೇತುವಲ್ಲ, ಎಂದು; ದೌರಾತ್ಮ್ಯಂ = ಇಹಲೋಕ ಸಂಬಂಧಿಯಾದ ದುಷ್ಟಭಾವಗಳನ್ನೆಲ್ಲಾ; ವಿಸೃಜ್ಯ = ಬಿಟ್ಟು; ಅನನ್ಯಸೌಹೃದಾ = ಅಚಲಭಕ್ತಿಯಿಂದ; ಅಮುಂ = ವೈಕುಂಠಪತಿಯಾದ ವಿಷ್ಣುವನ್ನು; ಪದೇಪದೇ = ನಿರಂತರವೂ; ಹೃದಾ ಉಪಗುಹ್ಯ = ಸ್ವರೂಪ ಹೃದಯ ಮಂದಿರದಲ್ಲಿ ನೆಲೆಗೊಳಿಸಿಕೊಂಡು; ಆಪುಃ = ಹೊಂದಿದರು (ಹೊಂದುತ್ತಾರೆ).

ಇಲ್ಲಿ ವೈಕುಂಠಲೋಕದ ವರ್ಣನೆಯು ಮೂಡಿ ಬಂದಿದೆ. ಮಹಾವಿಷ್ಣುವು ಸರ್ವಥಾ ಜಡ-ಜಡವಿಕಾರಗಳಿಂದ ಭಿನ್ನನಾದುದರಿಂದ, 'ನೇತಿನೇತಿ' ಎಂದು ವರ್ಣಿಸಲ್ಪಡುವ ಅವನಂತೆ ಅವನ ಲೋಕವೂ ಜಡಾತೀತವಾದುದು. ಅಲ್ಲಿ, ಜಡಕಾರ್ಯಗಳ ಅಭಿಮಾನಿಗಳೂ ಇಲ್ಲ; ಜಡಸಂಬಂಧವಾದ ಸುಖದುಃಖಾದಿಗಳು ಇಲ್ಲ. ಅಲ್ಲಿ ಅನುಭವಕ್ಕೆ ಬರುವುದು ವಿಷ್ಣುಭಕ್ತಿಯಿಂದ ಪ್ರಕಾಶಿತವಾಗಿ ಉಕ್ಕಿಬರುವ

ಸ್ವರೂಪಾನಂದ. ಮಹಾವಿಷ್ಣುವನ್ನು ಹೃದಯ ಪೀಠದಲ್ಲಿಟ್ಟುಕೊಂಡು, ಆನಂದಮಯನಾದ ಅವನ ಪ್ರಭಾವದಿಂದ ತಮ್ಮ ಸ್ವರೂಪಾನಂದದ ಅಭಿವ್ಯಕ್ತಿ ಹೊಂದುವರು ಎಂದು ಸ್ಪಷ್ಟವಾಗಿ ಹೇಳಿರುವುದರಿಂದ, ಜೀವಬ್ರಹ್ಮರು ಒಂದೇ ಎಂದು ಹೇಳುವ ಅದ್ವೈತವಾದವು ಬಿದ್ದುಹೋಯಿತು.

ಇಹಲೋಕದಲ್ಲಿ, ಸ್ವರೂಪಕಾರ್ಯವಿಲ್ಲವೆಂದೇ ಹೇಳಬೇಕು. ತತ್ವಾಭಿಮಾನಿ ದೇವದಾನವರ ಕಾರ್ಯಾಚರಣೆಗಳಿಂದ ಲಭಿಸುವ ಸುಖದುಃಖಗಳ ಸ್ಪರ್ಶವಾಗುವುದೆಷ್ಟೋ ಅಷ್ಟೇ. ಜ್ಞಾನಲಾಭವಾಗಿ, ಸ್ವರೂಪೋದ್ಧಾರವಾಗಬೇಕಾಗಿರುವುದರಿಂದ ಈ ಸ್ಪರ್ಶಕಾರ್ಯ. ಇದು ನಡೆಯುವುದು ಅಹಂಕಾರ ತತ್ವದ ಮೂಲಕ. ವಿಷಯೇಂದ್ರಿಯಗಳ ಅಭಿಮಾನಿಗಳು, ಮನೋಭಿಮಾನಿ ರುದ್ರದೇವರು ಕೂಡಿ 'ನಾನು' ಎಂದಾಗ, ಸ್ವರೂಪ ಜೀವನೂ 'ನಾನು' ಎಂದುಕೊಳ್ಳುವ ಹಾಗೆ ಅವರ ಅನುಭವದ ಛಾಯೆ ಸ್ವರೂಪಕ್ಕೆ ಮುಟ್ಟುತ್ತದೆ. ಜ್ಞಾನೋದಯವಾದಾಗ 'ನಾನು' ಎಂಬ ದುರಹಂಕಾರವು ದೂರವಾಗಿ, ಸ್ವರೂಪದ 'ನಾನು' ಎಂಬುವುದಕ್ಕೆ ಅನುಗುಣವಾದ ಸಾತ್ವಿಕ 'ನಾನು' ಉಳಿದಿರುತ್ತದೆ. ಅಲ್ಲಿಯತನಕ ಇಪ್ಪತ್ನಾಲ್ಕು ತತ್ವಗಳ ಯಜಮಾನರಿಂದ ದೇವತೆಗಳೂ ಜೀವರು ಧರಿಸುವ ದೇಹಗಳಲ್ಲಿದ್ದು ಪ್ರೇರಕರಾಗಿರುತ್ತಾರೆ. ವೈಕುಂಠಲೋಕದಲ್ಲಿ ಅವರ ಕಾರ್ಯಾಚರಣೆ ಇರುವುದಿಲ್ಲ. ಸ್ವರೂಪಕಾರ್ಯ ನಡೆಯುವುದು ಹೃದ್ಗುಹಾವಾಸಿಯಾದ ಲಕ್ಷ್ಮೀನಾರಾಯಣನಿಂದ. ಇವನಿಗೆ ಅಲ್ಲಿ ಮಾಯಾವಾಸುದೇವ ಎಂದು ಹೆಸರು. (ಮಾ = ಎಂದರೆ ಜ್ಞಾನ; ಯಾ = ಎಂದರೆ ಗಮನ. ಆದುದರಿಂದ ಸ್ವಚ್ಛಜ್ಞಾನಕಾರ್ಯ ನಡೆಸಿಕೊಡುವವಳು, ಮಾಯಾದೇವಿ. ಮಾ + ಯಾ = ಎಂದರೆ 'ಹೊಂದಬೇಡ' ಎಂದೂ ಅರ್ಥವಾಗುವುದು. ಇಹಲೋಕದಲ್ಲಿ ಜಡಪ್ರಕೃತಿಗೂ, ಜೀವರ ಅಜ್ಞಾನಾವರಣವಾದ ಲಿಂಗಶರೀರಕ್ಕೂ ಯಜಮಾನಿಯಾದ ಲಕ್ಷ್ಮೀದೇವಿಯು ಜಡಮಾಯೆಯ ಮೂಲಕ ಜ್ಞಾನಕಾರ್ಯಕ್ಕೆ ಅಡ್ಡಿಪಡಿಸುವುದರಿಂದ ಇಲ್ಲಿಯೂ ಆಕೆಗೆ ಮಾಯಾ ಎಂದು ಹಸರು. ಮಾಯಾ ಎಂದರೆ, ಬಂಧಕ ಶಕ್ತಿ. ಸ್ವಚ್ಛಸ್ವರೂಪಕ್ಕೂ ಜೀವರ ಅಜ್ಞಾನಾವರಣಕ್ಕೂ ಗಂಟು ಹಾಕಿ, ಸ್ವರೂಪದಲ್ಲಿ ಲೌಕಿಕಸುಖದುಃಖಗಳಿಲ್ಲದಿದ್ದರೂ ಇದ್ದಂತೆ ಅನುಭವಕ್ಕೆ ತಂದುಕೊಡುವ ಯಕ್ಷಿಣೀಗಾರರು ರಮಾನಾರಾಯಣರು. ಅವರ ಈ ಯಕ್ಷಿಣೀ ವಿದ್ಯೆ, ಇಲ್ಲದುದನ್ನು ಇದ್ದಂತೆ ತೋರಿಸುವುದಲ್ಲ; ಲಿಂಗ ಶರೀರದ ಇರುವಿಕೆಯನ್ನು ಅಭ್ಯಾಸಕ್ರಮದಿಂದ ಜೀವರಿಗೆ ಪರಿಚಯ ಮಾಡಿಸುವ ನಟನಾಸಾಮರ್ಥ್ಯ. ಆದುದರಿಂದಲೇ ಅವರನ್ನು ಜಗನ್ನಾಟಕದ ನಟೀ-ಸೂತ್ರಧಾರರೆಂದು ವರ್ಣಿಸುವುದು.

ಶುಕ್ತಿರಜತ ನ್ಯಾಯ, ಸರ್ಪರಜ್ಜುನ್ಯಾಯ, ಜೀವರಿಗೆ ಅನ್ವಯಿಸುವುದೇ ಹೊರತು ರಮಾನಾರಾಯಣರಿಗಲ್ಲ. ಆದರೆ, ಅವರು ತಮಗೆ ಅದನ್ನು ಅನ್ವಯಿಸಿಕೊಂಡಂತೆ ಬಿಂಬಕ್ರಿಯಾ ನಡೆಸದಿದ್ದರೆ, ಜೀವರಿಗೆ ಅದರ ಅನುಭವ ಬರುವುದಿಲ್ಲ.

ಇತ್ಥಂ ಮುನಿಸ್ತೂಪರಮೇದ್ವ್ಯವಸ್ಥಿತೋ ವಿಜ್ಞಾನ
ದೃಗ್ವೀರ್ಯಸುರಂಧಿತಾಶಯಃ ।
ಸ್ವಪಾರ್ಷ್ಣಿನಾಪೀಡ್ಯಗುದಂ ತತೋನಿಲಂ
ಸ್ಥಾನೇಷುಷಟ್ಸೂನ್ನಮಯೋಜ್ಜಿತಕ್ಲಮಃ ॥ ೨೦ ॥

ನಾಭ್ಯಾಂ ಸ್ಥಿತಂ ಹೃದ್ಯಧಿರೋಪ್ಯ
ತಸ್ಮಾದುದಾನಗತ್ಯೋರಸಿತಂ ನಯೇನ್ಮುನಿಃ ।
ತತೋನುಸಂಧಾಯ ಧಿಯಾ ಮನಸ್ವೀ
ಸ್ವತಾಲುಮೂಲಂ ಶನಕೈರ್ನಯೇತ ॥ ೨೧ ॥

ತಸ್ಮಾದ್ಭ್ರುವೋರಂತರಮುನ್ನಯೇತ
ನಿರುದ್ಧಸಪ್ತಾಶ್ವ ಪಥೋನಪೇಕ್ಷಃ ।
ಸ್ಥಿತ್ವಾ ಮುಹೂರ್ತಾರ್ಧಮಕುಂಠ
ದೃಷ್ಟಿರ್ನಿರ್ಭಿದ್ಯ ಮೂರ್ಧನ್ವಿಸೃಜೇತ್ಪರಂ ಗತಃ ॥ ೨೨ ॥

ಇತ್ಥಂ = ಹಿಂದೆ ಹೇಳಿದ ಪ್ರಕಾರ ಇಂದ್ರಿಯಾಭಿಮಾನಿಗಳನ್ನು ಮನೋಭಿಮಾನಿಗಳಲ್ಲಿಯೂ, ಅವರನ್ನು ವಿಜ್ಞಾನ ಬುದ್ಧ್ಯಭಿಮಾನಿ ಮುಖ್ಯ ಪ್ರಾಣರಲ್ಲಿಯೂ (ಬ್ರಹ್ಮದೇವರಲ್ಲಿಯೂ), ಈ ಎಲ್ಲರನ್ನೂ ಪರಮೇಶ್ವರನಲ್ಲಿಯೂ ಲಯಗೊಳಿಸುವ ಕ್ರಮವರಿತು; ಮುನಿಃ = ಬ್ರಹ್ಮಚಿಂತನ ಶೀಲನಾದವನು; ವ್ಯವಸ್ಥಿತಃ = ದೇಹತ್ಯಾಗವಿಷಯದಲ್ಲಿ ಸ್ಥಿರ ಬುದ್ಧಿಯುಳ್ಳವನಾಗಿ; ವಿಜ್ಞಾನ ದೃಕ್ ವೀರ್ಯ ಸುರಂಧಿತ ಆಶಯಃ = ಸ್ವಯೋಗ್ಯ ಬ್ರಹ್ಮಜ್ಞಾನ ಬಲದಿಂದ ಚೆನ್ನಾಗಿ ದಹಿಸಲ್ಪಟ್ಟ ಬಾಹ್ಯಾಂತಃಕರಣ ಉಳ್ಳವನಾಗಿ; (ಇದರ ಕ್ರಮ ಹೇಗೆಂದರೆ;) ಸ್ವಪಾರ್ಷ್ಣಿನಾ = ತನ್ನ ಎರಡು ಹಿಮ್ಮಡಿಗಳಿಂದ; ಗುದಂ ಆಪೀಡ್ಯ = ಗುದದ್ವಾರವನ್ನು ಮುಚ್ಚಿಹಿಡಿದು; ಅನಿಲಂ = ಉದಾನ ವಾಯುವನ್ನು; ಷಟ್ಸುಸ್ಥಾನೇಷು = ಆರು ಸ್ಥಾನಗಳಲ್ಲಿ; ಉನ್ನಮಯೇತ್ = ಮೇಲಕ್ಕೆ ಕೊಂಡೊಯ್ಯಬೇಕು.

ಪ್ರಾಣಾಯಾಮದಲ್ಲಿ, ವಾಯುವನ್ನು ತಡೆಯುವ ಕುಂಭಕದ ಸಮಯದಲ್ಲಿ ಒತ್ತಡವು ಅಪಾನವಾಯುವಿನ ಮೇಲೆಬಿದ್ದು ಅದು ಹೊರಬಿದ್ದರೆ ಕುಂಭಕಪ್ರಾಣಾಯಾಮವು ವ್ಯರ್ಥವಾಗುವುದು ಆದುದರಿಂದ ಹಾಗಾಗದಂತೆ ಹಿಮ್ಮಡಿಗಳಿಂದ ಗುದದ್ವಾರವನ್ನು ಮುಚ್ಚಿಹಿಡಿಯಬೇಕು. ವಿಜ್ಞಾನದೃಕ್ ಎಂಬ ಮಾತು ಇಲ್ಲಿ ಅತ್ಯಂತ ಗಮನಾರ್ಹವಾದುದು. ಅದು ಹಿಂದೆ ಹೇಳಿದ ದೇವತಾ ಲಯಕ್ರಮವನ್ನೂ,

ಸರ್ವಾಧಾರನಾದ ಪರಬ್ರಹ್ಮನ ವಿಷಯಕವಾದ ಜ್ಞಾನವನ್ನೂ ಪ್ರಶಂಸಿಸುತ್ತದೆ. ಕೇವಲ ಯೋಗ ಸಾಧನೆಯು ಶಕ್ತಿಲಾಭದಿಂದ ಲೋಭಗಳಿಗೆ ಈಡುಮಾಡಿ, ಅಧೋಗತಿಗೆ ಒಯ್ಯುವುದು. ಇಲ್ಲಿ ಆರು ಸ್ಥಾನಗಳು ಎಂದರೆ, ಸುಷುಮ್ನಾನಾಡಿಗೆ ಸಂಬಂಧಿಸಿದ ನಾಭಿಯ ಕೆಳಗಿನ ಚತುರ್ದಳಪದ್ಮವಾದ ಮೂಲಾಧಾರದ ಮೇಲಿರುವ ನಾಭಿ, ಹೃದಯ, ಉರ (ಎದೆ), ತಾಲು (ಗಂಟಲು), ಭ್ರೂಮಧ್ಯ (ಹುಬ್ಬಿನ ನಡುವೆ) ಮತ್ತು ಶಿರಸ್ಸು. ಪ್ರಾಣಾಯಾಮದ ಕುಂಭಕದಿಂದ ಮೂಲಾಧಾರದ ಕುಂಡಲಿಯು ಪ್ರಭಾವಿತವಾದಾಗ ಅದು ನಾಭಿಪ್ರದೇಶದಲ್ಲಿನ ಉದಾನವಾಯುವನ್ನು ಎಬ್ಬಿಸಲು ಅನುಕೂಲವಾಗುವುದು. ಆ ಉದಾನವಾಯುವನ್ನು ಮೇಲು ಮೇಲಕ್ಕೆ ಕೊಂಡೊಯ್ಯಬೇಕು. ಉದಾನ ವಾಯು ಎಂದಾಗ ಕೇವಲ ಭೌತವಾಯುವೆಂದು ಸಾಮಾನ್ಯಯೋಗಿಗಳು ಭಾವಿಸುವರು. ಉತ್ಕ್ರಾಂತಿಯ ರಹಸ್ಯವನ್ನು ಬಲ್ಲ ವಿಜ್ಞಾನಯೋಗಿಗಳು ಪ್ರಾಣಾಪಾನಾದಿ ಪಂಚವಾಯುಗಳ ಅಭಿಮಾನಿ ದೇವತೆಗಳನ್ನು ಭಾವಿಸಿ ಅವರ ಸಹಾಯವನ್ನು ಪಡೆಯುವರು. ಮನೋಭಿಮಾನಿ ಮೊದಲಾದ ದೇವತೆಗಳ ಲಯಕ್ರಮದಂತೆ ಇಲ್ಲಿಯೂ ಪಂಚಪ್ರಾಣರ ಲಯ ಕ್ರಮವನ್ನರಿತು ಉತ್ಕ್ರಮಣ ಹೊಂದಬೇಕು.

ನಾಭ್ಯಾಂ = ನಾಭಿಪ್ರದೇಶದ ಷಡ್ದಳ ಕಮಲದಲ್ಲಿ; ಸ್ಥಿತಂ = ಮೂಲಾಧಾರದ ಚತುರ್ದಳ ಕಮಲದ ಉದ್ಬೋಧನೆಯಿಂದ ಮೇಲಕ್ಕೆ ಬಂದು ನಿಂತ ವಾಯುವನ್ನು ಹೃದಿ ಅಧಿರೋಪ್ಯ = ಹೃದಯ ಪ್ರದೇಶದ ದಶದಳ ಕಲಮಕ್ಕೆ ತಂದು; ಮುನಿಃ = ಯೋಗಿಯು; ತಂ = ಆ ವಾಯುವನ್ನು; ಉದಾನ ಗತ್ಯಾ = ಉದಾನ ವಾಯು ಮಾರ್ಗವಾದ ಸುಷುಮ್ನಾ ದ್ವಾರದಿಂದ; ಉರಸಿ ನಯೇತ್ = ಎದೆಯ ದ್ವಾದಶದಳ ಕಮಲಕ್ಕೆ ತರಬೇಕು; ತತಃ = ಅಲ್ಲಿಂದ; ಧಿಯಾ ಅನುಸಂಧಾಯ = ಮುಖ್ಯಪ್ರಾಣರ ಸ್ಮರಣೆಯಿಂದ ಪಂಚಪ್ರಾಣರ ಉತ್ಕ್ರಮಣ ಕ್ರಮವೆಂದು ಚಿಂತಿಸುತ್ತಾ; ಮನಸ್ವೀ = ಮನೋನಿಗ್ರಹ ಉಳ್ಳವನಾಗಿ; ಶನಕೈಃ = ನಿಧಾನವಾಗಿ; ಸ್ವತಾಲುಮೂಲಂ = ಗಂಟಲ ಬಳಿಯ ಷೋಡಶದಳ ಕಮಲಕ್ಕೆ; ನಯೇತ = ತರಬೇಕು.

ಭೌತವಾಯುವು ಮೂಗಿನ ಹೊಳ್ಳೆಗಳ ಅಥವ ಗಂಟಲಿನ ದ್ವಾರಾ ಶ್ವಾಸ ಕೋಶಗಳಿಗೆ ಹೋಗಿ, ಆಮ್ಲಜನಕವನ್ನು ಕೊಟ್ಟು ಇಂಗಾಲಾದಿಗಳನ್ನು ಸಂಗ್ರಹಿಸಿಕೊಂಡು ಹಿಂದಿರುಗುವುದನ್ನು ನಾವು ಬಲ್ಲೆವು. ಮೂಲಾಧಾರ ಮೊದಲಾದವುಗಳಿಗೆ ಇದರ ಸಂಬಂಧವೇನು ಎಂಬ ಪ್ರಶ್ನೆ ಮೂಡುವುದು ಸಹಜ. ನಮ್ಮ ಶರೀರದ ವಸ್ತುಗಳು ಪಂಚಭೂತಗಳಿಂದ ಆಗಿರುವುವಲ್ಲವೆ! ರಕ್ತಪ್ರವಾಹದಲ್ಲಿ ಸೇರಿದ ಆಮ್ಲಜನಕವು ದೇಹದಾದ್ಯಂತ ಇದ್ದು ಕಾರ್ಯೋನ್ಮುಖವಾಗುವ ಪಂಚವಾಯುಗಳ ಸ್ಥಿತಿಗತಿಗಳಿಗೂ ಕಾರಣವಾಗಿರುವುದು. ಅತ್ಯಂತ ಸೂಕ್ಷ್ಮ ಜೀವಕೋಶದಿಂದ ಹಿಡಿದು, ದೇಹದ ಸ್ಥೂಲ ಅವಯವಗಳವರೆಗೂ ಇವುಗಳ ವ್ಯಾಪ್ತಿ. ಆಮ್ಲಜನಕದ ಸಂಯೋಗದಿಂದ ಅದರದರ

ಸ್ಥಾನದಲ್ಲಿ ಈ ಪಂಚವಾಯುಗಳು ಉತ್ಪತ್ತಿಯಾಗುವುವು. ಇವುಗಳನ್ನು ನಿಯಂತ್ರಿಸುವ ಪಂಚಪ್ರಾಣದೇವತೆಗಳು ಸುಷುಮ್ನಾ ನಾಡಿಗೆ ಸಂಬಂಧಿಸಿದ ನಾಡಿಗಳಲ್ಲಿದ್ದು ಕಾರ್ಯಪ್ರವರ್ತಕರಾಗಿರುವರು. ಪಂಚಪ್ರಾಣರಿಗೆ ಯಜಮಾನರಾದ ಮುಖ್ಯಪ್ರಾಣರು ಸುಷುಮ್ನಾ ನಾಡಿಯ ಅಷ್ಟದಳ ಕಮಲವೆಂಬ ಬಿಂಬಮಂದಿರದಲ್ಲಿ, ಆ ಜೀವ ಬಿಂಬನ ಪಾದಮೂಲದಲ್ಲಿ ತಾವಿದ್ದು ತಮ್ಮ ಪಾದ ಮೂಲದಲ್ಲಿ ಅನಿರುದ್ಧ ಲಿಂಗ ಶರೀರ ಸಹಿತನಾದ ಜೀವನನ್ನು ಸುರಕ್ಷಿತವಾಗಿಟ್ಟುಕೊಂಡಿರುತ್ತಾರೆ. ಸುಷುಮ್ನಾನಾಡಿಯಲ್ಲಿ ಬ್ರಹ್ಮದೇವರು ಮತ್ತು ವಾಯುದೇವರು ಮಾತ್ರ ಕಾರ್ಯಪ್ರವರ್ತಕರು. ಅದಕ್ಕೆ ಬ್ರಹ್ಮನಾಡಿ ಎಂದೇ ಹೆಸರು. ಉದಾನವಾಯುವಿನ ಮಾರ್ಗ ಬ್ರಹ್ಮನಾಡಿಯಲ್ಲಿ ಎಂದಾಗ, ಉದಾನನಾಮಕ ವಾಯುದೇವರ ಕಾರ್ಯವೆಂದು ತಿಳಿಯಬೇಕು. ಅದು ಪಂಚಪ್ರಾಣರಲ್ಲಿ ಒಬ್ಬರಾದ ಉದಾನವಾಯುವಿನ ಕಾರ್ಯವಲ್ಲ. ಅವರ ಸ್ಥಾನ ಸುಷುಮ್ನಾ ನಾಡಿಯ ಬಳಿಯ ಇನ್ನೊಂದು ನಾಡಿಯಲ್ಲಿ. ಸುಷುಮ್ನಾನಾಡಿಯ ಸುತ್ತಲೂ ಪಂಚಪ್ರಾಣರಿಗೂ ಪಂಚೇಂದ್ರಿಯಾದಿಗಳಿಗೂ ಸಂಬಂಧಿಸಿದ ಇತರ ಸೂಕ್ಷ್ಮಾತಿಸೂಕ್ಷ್ಮ ನಾಡಿಗಳಿರುವುವು. ಉದಾನವಾಯುವಿನ ಕಾರ್ಯ ಹೃದಯದ ದಶದಳದ ಕಮಲದಲ್ಲಿ ನಡೆಯುವಾಗ, ಪ್ರಾಣದೇವರು ಜೀವನನ್ನು ತಮ್ಮ ಕೈಯಲ್ಲಿಟ್ಟುಕೊಂಡು ಮೇಲೆಮೇಲಕ್ಕೇರುವರು.

'ದಶದಳಕಮಲ' ಎಂದರೆ ದಶೇಂದ್ರಿಯಗಳಿಗೆ ಸಂಬಂಧಪಟ್ಟ ಹತ್ತು ನಾಡೀ ದಾರಗಳ ಗಂಟು. ಇದರಂತೆ 'ಹದಿನಾರು ದಳಗಳ ಕಮಲ' ಎಂದರೆ, ದಶೇಂದ್ರಿಯಗಳು, ಶಬ್ದಾದಿ ಪಂಚತನ್ಮಾತ್ರಗಳು ಮತ್ತು ಮನಸ್ಸು ಎಂಬ ಆರು ಅಂಶಗಳನ್ನು ನಿಯಂತ್ರಿಸುವ ಹದಿನಾರು ನಾಡೀ ಎಳೆಗಳ ಗಂಟು. ಗಂಟಲಿನ ಬಳಿಯ ಹನ್ನೆರಡು ದಳಗಳಲ್ಲಿ ಇಡಾ, ಪಿಂಗಳಾ ನಾಡಿಗಳಿಗೆ ಸಂಬಂಧಿಸಿದ ಎರಡು ದಳಗಳು ದ್ವಿದಳ ಕಮಲವೆಂದು ಪ್ರಸಿದ್ಧವಾಗಿವೆ. ಅಲ್ಲಿ ಮುಖ್ಯಪ್ರಾಣ ಮತ್ತು ಭಾರತೀದೇವಿಯರ ಇನ್ನೊಂದು ಸ್ಥಾನವಿರುವುದು. ಅವರು ಅಲ್ಲಿ ನಿಂತು ನಡೆಸುವ ಹಂಸಮಂತ್ರ ಜಪದಿಂದಲೇ ಶ್ವಾಸೋಚ್ಛ್ವಾಸ ನಡೆಯುವುದು.

ಜೀವನನ್ನು ಎತ್ತಿಕೊಂಡು ಪ್ರಾಣದೇವರು ಕಂಠ ಪ್ರದೇಶಕ್ಕೆ ಬಂದು, ಅಲ್ಲಿಂದ ಭ್ರೂಮಧ್ಯ ಪ್ರದೇಶಕ್ಕೇಕ್ಕೆರುವಾಗಲೇ ಭೌತದೇಹದ ಕಾರ್ಯಗಳೆಲ್ಲಾ ಸ್ಥಗಿತವಾಗಿ ಹೋಗುವುವು. ಸಾಮಾನ್ಯವಾಗಿ ಜೀವಿಗಳು ದೇಹತ್ಯಾಗ ಮಾಡುವಾಗ, ಪ್ರಾಣದೇವರು ಜೀವನನ್ನು ಎತ್ತಿಕೊಂಡು ಕಣ್ಣು, ಮೂಗು, ಕಿವಿ ಅಥವ ಬಾಯಿ, ಇವುಗಳಲ್ಲಿ ಯಾವುದಾದರೊಂದರ ಮುಖಾಂತರ ನಿರ್ಗಮಿಸುತ್ತಾರೆ. ಆದರೆ, ಭಗವದ್ಭಕ್ತನಾದ ಯೋಗಿಯ ಜೀವವನ್ನು ಕರೆದು ಕೊಂಡು, ಭ್ರೂಮಧ್ಯದಿಂದ ವೈಕುಂಠ ವಾಸುದೇವನ ಮಂದಿರವಾದ ಶಿರಸ್ಸಿನ ಸಹಸ್ರದಳ ಕಮಲಕ್ಕೆ ಬಂದು ಆ ಸ್ವಾಮಿಯ ಅಪ್ಪಣೆ ಪಡೆದು ಬ್ರಹ್ಮರಂಧ್ರವನ್ನು ಭೇದಿಸಿ ನಿರ್ಗಮಿಸುತ್ತಾರೆ. ವಾಸುದೇವನು ಅತಂರ್ಧಾನ ಹೊಂದಿ

ಬಿಡುತ್ತಾನೆ. ಅವನ ಜೊತೆಗೆ ಇತರ ತಾತ್ವಿಕರೂ ಬಿಟ್ಟು ಹೋಗುತ್ತಾರೆ. ಆ ಮೇಲೆ ದೇಹದಲ್ಲಿ ಉಳಿದಿರುವುದು ಪಂಚಭೂತಗಳ ಅಭಿಮಾನಿಗಳು ಮಾತ್ರ. ಶವ ಸಂಸ್ಕಾರದ ಹೊತ್ತಿನಲ್ಲಿ ಅವರೂ ಬಿಟ್ಟು ಹೋಗುತ್ತಾರೆ.

ತಸ್ಮಾತ್= ಕಂಠ ಪ್ರದೇಶದಿಂದ; ಭ್ರುವಃ ಅಂತರಂ = ಭ್ರೂಮಧ್ಯ ಪ್ರದೇಶಕ್ಕೆ; ಉನ್ನಯೇತ = ಕೊಂಡೊಯ್ಯಬೇಕು; ನಿರುದ್ಧ ಸಪ್ತಾಶ್ವ ಪಥಃ = ಕುದುರೆಗಳಂತೆ ವಿಷಯಗಳ ಕಡೆಗೆ ಸೆಳೆದೊಯ್ಯುವ ಕಾರ್ಯಕ್ಕೆ ಸಂಬಂಧಿಸಿದ ಏಳು ನಾಡಿಗಳ ಮಾರ್ಗಗಳನ್ನು ನಿರೋಧಿಸಿ; ಅನಪೇಕ್ಷಃ = ಲೌಕಿಕವಾದ ಅಪೇಕ್ಷೆಗಳೊಂದೂ ಇಲ್ಲದೆ; ಮುಹೋರ್ತಾರ್ಧಂ ಸ್ಥಿತ್ವಾ = ಅರ್ಧ ಮುಹೂರ್ತದವರೆಗೆ ಅಲ್ಲಿ ಧ್ಯಾನವನ್ನು ಮಾಡುತ್ತಾ; ಅಕುಂಠ ದೃಷ್ಟಿಃ = ಗುರಿಯಿಂದ ಚಲಿಸದೆ; ಮೂರ್ಧನಿ = ಸಹಸ್ರದಳ ಕಮಲಕ್ಕೆ ಬಂದು; ಪರಂಗತಃ = ಪರ ವಾಸುದೇವನನ್ನು ಹೊಂದಿ; ನಿರ್ಭಿದ್ಯ = ಬ್ರಹ್ಮರಂಧ್ರವನ್ನು ಸೀಳಿಕೊಂಡು; ವಿಸೃಜೇತ್= ದೇಹವನ್ನು ಬಿಟ್ಟು ಬಿಡಬೇಕು.

ಮೂಲಾಧಾರ, ಭೂಲೋಕ; ನಾಭಿ, ಅಂತರಿಕ್ಷ; ಹೃದಯ =, ಸ್ವರ್ಲೋಕ; ಎದೆ, ಮಹರ್ಲೋಕ; ಕಂಠ, ಜನಲೋಕ; ಭ್ರೂಮಧ್ಯ = ತಪೋಲೋಕ; ಶಿರಸ್ಸು, ಸತ್ಯಲೋಕ. ಯೋಗಿಯು ಧ್ಯಾನದಿಂದ ಈ ಒಂದೊಂದು ಲೋಕವನ್ನು ಮುಟ್ಟಿದಾಗಲೂ ಅದ್ಭುತ ಸೌಂದರ್ಯವನ್ನು ಕಾಣುತ್ತಾ, ಶಕ್ತಿಯನ್ನೂ ಗಳಿಸುತ್ತಾನೆ. ಅನಧಿಕಾರಿಗಳೂ, ಅಪಕ್ವಯೋಗಿಗಳೂ ಸಪ್ತಾಶ್ವಗಳಿಗೆ (ಪಂಚೇಂದ್ರಿಯಗಳು, ಮನಸ್ಸು, ಬುದ್ಧಿ ಇವುಗಳ ನಾಡಿಗಳ ಸೆಳೆತಕ್ಕೆ) ಒಳಗಾಗಿ ಜಾರಿ ಬೀಳಬಹುದು. ಆದರೆ, ಮುಖ್ಯಪ್ರಾಣದೇವರ ದಯೆಯನ್ನು ಸಂಪಾದಿಸಿದ ಯೋಗ್ಯ ಜೀವಿಯು ಗುರಿ ತಪ್ಪದೆ ಉತ್ಕ್ರಮಣವನ್ನು ಸಾಧಿಸುವನು.

**ಯದಿಪ್ರಯಾಸ್ಯತ್ಯಥ ಪಾರಮೇಷ್ಠ್ಯಂ**
**ವೈಹಾಯಸಾನಾಮುತಯದ್ವಿಹಾರಂ ।**
**ಅಷ್ಟಾಧಿಪತ್ಯಂ ಗುಣಸನ್ನಿವಾಯೇ**
**ಸಹೈವಗಚ್ಛೇನ್ಮನಸೇಂದ್ರಿಯೈಶ್ಚ** ॥ ೨೩ ॥

ಯದಿ = ಪಕ್ವಭಕ್ತಿಯ ಸಾಧಕನಾದರೆ; ಅಥ = ಉತ್ಕ್ರಮಣಾನಂತರ; ಪಾರಮೇಷ್ಠ್ಯಂ = ಬ್ರಹ್ಮಲೋಕವನ್ನು; ಯಾಸ್ಯತಿ = ಹೊಂದುತ್ತಾನೆ; ಉತ = ಅಪಕ್ವ ಭಕ್ತಿ ಯೋಗಿಯಾದರೆ; ವೈಹಾಯಸಾನಾಂ ಯತ್ ವಿಹಾರಂ = ಸಿದ್ಧಪುರುಷರು ಸಂಚರಿಸುವ ನಕ್ಷತ್ರ ರೂಪ ವಿಹಾರ ಸ್ಥಾನಗಳನ್ನು; ಯಾಸ್ಯತಿ = ಹೊಂದುತ್ತಾನೆ;

ಗುಣಸನ್ನಿವಾಯೇ = ಭಕ್ತ್ಯಾದಿ ಗುಣಗಳು ಕೊರತೆಯಾಗಿದ್ದ ಪಕ್ಷದಲ್ಲಿ; ಮನಸಾ ಇಂದ್ರಿಯೈಶ್ಚ ಸಹ ಏವ= ಮೂಲ ಮನಸ್ಸು ಮತ್ತು ಸೂಕ್ಷ್ಮೇಂದ್ರಿಯಗಳ ವ್ಯಾಪಾರಗಳಿಂದ ಸಹಿತನಾಗಿಯೇ; ಅಷ್ಟಾಧಿಪತ್ಯಂ ಗಚ್ಛೇತ್= ಅಣಿಮಾದಿ ಅಷ್ಟ ಸಿದ್ಧಿಗಳನ್ನು ಪಡೆದು ಫಲ ಭಾಗಿಯಾಗುತ್ತಾನೆ.

ಯೋಗ ಬಲದಿಂದ ಉತ್ಕ್ರಾಂತಿ ಹೊಂದಿದ ಜೀವರಲ್ಲಿ ಪಕ್ವ ಭಕ್ತಿಯ ಯೋಗಿಗಳು ಬ್ರಹ್ಮಲೋಕದಲ್ಲಿ ವಿಷ್ಣುಪರಾಯಣರಾಗಿ ಬ್ರಹ್ಮನ ಜೊತೆಗೆ ಮೋಕ್ಷ ಪಡೆಯುತ್ತಾರೆ. ಇನ್ನೂ ಭಕ್ತಿಪರಿಪಾಕವಾಗಬೇಕಾದವರಲ್ಲಿ ಕೆಲವರು ಪ್ರತೀಕಾಲಂಬನರು, ಎಂದರೆ ಸೂಕ್ಷ್ಮಮನವೇ ಮೊದಲಾದ ಇಂದ್ರಿಯಗಳ ವ್ಯಾಪಾರವಿರುವವರು, ಸಿದ್ಧರ ಲೋಕಗಳಲ್ಲಿದ್ದು ಪರಿಪಾಕ ಹೊಂದುವರು. ಅಪ್ರತೀಕಾಲಂಬನರಾದ ಮತ್ತೆ ಕೆಲವರು ಮುಖ್ಯಪ್ರಾಣರ ವಶವಾಗಿ, ವೈಕುಂಠ ಲೋಕದ ಹೊರವಲಯಗಳಲ್ಲಿ ವಿಹರಿಸುತ್ತಾ ಭಕ್ತಿ ಪರಿಪಾಕವನ್ನು ಹೊಂದುವರು. ಈ ಎಲ್ಲರೂ ಕಡೆಗೆ ಬ್ರಹ್ಮದೇವರ ಸಾನ್ನಿಧ್ಯವನ್ನೇ ಹೊಂದಿ, ಅವರೊಡನೆ ವಿರಜಾ ಸ್ನಾನ ಮಾಡಿ ಲಿಂಗದೇಹಗಳಿಂದ ಮುಕ್ತರಾಗುವರು.

**ಯೋಗೇಶ್ವರಾಣಾಂಗತಿಮಾಮನಂತಿ ಬಹಿಸ್ತ್ರಿಲೋಕ್ಯಾಃ**
**ಪವನಾಂತರಾತ್ಮಾ ।**
**ನಕರ್ಮಭಿಸ್ತಾಂ ಗತಿಮಾಪ್ನುವಂತಿ ವಿದ್ಯಾತಪೋ ಯೋಗ**
**ಸಮಾಧಿ ಭಾಜಾಂ ॥ ೨೪ ॥**

ಯತ್ರ = ಯಾವ ಸ್ಥಾನಗಳಲ್ಲಿ; ಪವನಾಂತರಾತ್ಮಾ = ಮುಖ್ಯ ಪ್ರಾಣಾಂತರ್ಗತನಾಗಿ ಶ್ರೀಹರಿಯು ಇಷ್ಟಪ್ರದನಾಗುವನೋ; ಅಂತಹ; ತ್ರಿಲೋಕ್ಯಾಃ ಬಹಿಃ = ಭೂಮ್ಯಂತರಿಕ್ಷ ಸ್ವರ್ಗಗಳೆಂಬ ಮೂರು ಲೋಕಗಳ ಹೊರಗೆ; ಯೋಗೇಶ್ವರಾಣಾಂ ಗತಿಂ = ಯೋಗಮಾರ್ಗದಿಂದ ಉತ್ಕ್ರಮಣ ಹೊಂದಿದವರ ಸ್ಥಿತಿಗತಿಗಳೆಂದು; ಆಮನಂತಿ = ತಿಳಿದಿರುತ್ತಾರೆ; ವಿದ್ಯಾತಪೋ ಯೋಗ ಸಮಧಿ ಭಾಜಾಂ = ಅಪರೋಕ್ಷ ಜ್ಞಾನ, ಪ್ರಾರಬ್ಧ ಭೋಗ ರೂಪವಾದ ಮತ್ತು ನಿಷ್ಠೆಯಿಂದ ಆಚರಿಸುವ ತಪಸ್ಸು ಮತ್ತು ಯೋಗ ಮಾರ್ಗದಿಂದ ಧ್ಯಾನ ಮಾಡುತ್ತಾ ದೇಹತ್ಯಾಗ ಮಾಡುವುದು, ಇಂತಹ ಸಾಧನ ಸಂಪತ್ತುಳ್ಳವರಿಗೆ ಲಭಿಸುವಂತಹ; ತಾಂ ಗತಿಂ = ಆ ಊರ್ಧ್ವಲೋಕಗಳ ಸಂಚಾರವನ್ನು; ಕರ್ಮಭಿಃ = ಕೇವಲ ಸತ್ಕರ್ಮಾನುಷ್ಠಾನದಿಂದ; ನಾಪ್ನುವಂತಿ = ಪಡೆಯುವುದಿಲ್ಲ.

ಜ್ಞಾನ ಭಕ್ತಿ ವೈರಾಗ್ಯ ಸಂಪನ್ನರಾಗಿ ಯೋಗಮಾರ್ಗದಿಂದ ದೇಹತ್ಯಾಗ ಮಾಡಿದವರು ಮುಕ್ತಿಯ ಪರ್ಯಂತ ಸ್ವರ್ಗಲೋಕಕ್ಕಿಂತ ಮೇಲಿರುವ ಮಹಾರಾದಿ

ಲೋಕಗಳ ವಿಹಾರ ಸ್ಥಾನಗಳಲ್ಲಾಗಲೀ, ವೈಕುಂಠದ ಹೊರವಲಯಗಳಲ್ಲಾಗಲೀ, ಬ್ರಹ್ಮರ ಸತ್ಯಲೋಕದಲ್ಲಾಗಲೀ ಇರುವರೇ ಹೊರತು ಕೆಳಗಿನ ಲೋಕಗಳಿಗೆ ಮತ್ತೆ ಬರುವುದಿಲ್ಲ. ಅವರು ಮುಖ್ಯಪ್ರಾಣರ ವಶದಲ್ಲಿದ್ದು, ಭಕ್ತಿಸಾಧನೆಯನ್ನು ಪೂರ್ತಿ ಮಾಡಿಕೊಳ್ಳುತ್ತಾರೆ.

**ವೈಶ್ವಾನರಂ ಯಾತಿ ವಿಹಾಯಸಾಗತಃ**
**ಸುಷುಮ್ನಾಯಾ ಬ್ರಹ್ಮಪಥೇನ ಶೋಚಿಷಾ ।**
**ವಿಧೂತಕಲ್ಕೋಽಥ ಹರೇರುದಸ್ತಾತ್ಪ್ರಯಾತಿ**
**ಚಕ್ರಂ ನೃಪಶೈಶುಮಾರಂ ॥ ೨೪ ॥**

ಸುಷುಮ್ನಯಾ ವಿಹಾಯಸಾಗತಃ = ಸುಷುಮ್ನಾ ನಾಡಿಯ ಹೃದಯಾಕಾಶ ಮಾರ್ಗದಿಂದ ಪ್ರಯಾಣ ಮಾಡಿದವನು; ಬ್ರಹ್ಮಪಥೇನ ಶೋಚಿಷಾ = ಆ ಬ್ರಹ್ಮನಾಡಿಯ ತೇಜೋ ಮಾರ್ಗದಿಂದ, ವೈಶ್ವಾನರಂ ಯಾತಿ = ಅಗ್ನಿ ಮೂಲವಾದ ಸೂರ್ಯಮಂಡಲವನ್ನು ಸೇರುತ್ತಾನೆ; ವಿಧೂತ ಕಲ್ಕಃ = ಅಲ್ಲಿ ದೋಷಗಳನ್ನೆಲ್ಲಾ ಕಳೆದುಕೊಂಡು; ಅಥ = ಅನಂತರ; ನೃಪ = ಎಲೈ ರಾಜನೇ; ಉದಸ್ತಾತ್ = ಅದಕ್ಕಿಂತ ಮೇಲಿರುವ; ಹರೇಃ ಶೈಶುಮಾರಂ ಚಕ್ರಂ = ಶ್ರೀಹರಿಯ ಶಿಂಶುಮಾರ ಚಕ್ರವೆಂಬ ಸ್ಥಾನವನ್ನು; ಪ್ರಯಾತಿ = ಸೇರುತ್ತಾನೆ.

ದೇಹತ್ಯಾಗ ಮಾಡಿದವರು ಅರ್ಚಿರಾದಿ ಮಾರ್ಗದಿಂದ ಮೇಲೆ ಮೇಲಿನ ಲೋಕಗಳಿಗೆ ಹೋಗಿ, ಕಡೆಗೆ ಪುನರಾವರ್ತಿಯಿಲ್ಲದ ವೈಕುಂಠ ಸ್ಥಾನವನ್ನು ಸೇರುವುದನ್ನೂ, ಧೂಮಮಾರ್ಗದಿಂದ ಮೇಲೆ ಮೇಲಿನ ಲೋಕಗಳಿಗೆ ಹೋದವರು ಮತ್ತೆ ಸಂಸಾರಕ್ಕೆ ಹಿಂದಿರುಗುವುದನ್ನೂ ತಿಳಿಸುತ್ತಾರೆ. ಸುಷುಮ್ನಾ ನಾಡಿಯ ಚಕ್ರಗಳಲ್ಲಿ ಮೇಲೆ ಮೇಲಕ್ಕೆರುತ್ತಾ ಹೋಗುವುದು ಆ ಬ್ರಹ್ಮನಾಡಿಯ ತೇಜೋಮಾರ್ಗ. ಅಲ್ಲಿ ಸಹಸ್ರಾರವನ್ನು ಮುಟ್ಟಿ ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಹೊರಟ ಜೀವಿ, ಮೊದಲು ಸೂರ್ಯಮಂಡಲವನ್ನು ಸೇರಿ, ಅಲ್ಲಿ ಪಾಪಶೇಷಗಳ ಸಂಬಂಧವನ್ನೆಲ್ಲಾ ನೀಗಿಕೊಂಡು, ನಂತರ ಅಂತರಿಕ್ಷದ ಶಿಂಶುಮಾರ ಚಕ್ರ ಅಥವ ಜ್ಯೋತಿ ಶ್ಚಕ್ರವನ್ನು ಸೇರುವನು.

**ಯೋಽಂತಃ ಪಚತಿ ಭೂತಾನಾಂ ಯಸ್ತಪತ್ಯಂಡ ಮಧ್ಯಗಃ ।**
**ಸೋಗ್ನಿರ್ವೈಶ್ವಾನರೋ ಮಾರ್ಗೋಽದೇವಾನಾಂ ಪಿತೃಣಾಂ**
**ಮುನೇಃ ॥ ೨೬ ॥**

ಯಃ = ಯಾರು; ಭೂತಾನಾಂ ಅಂತಃ = ಪ್ರಾಣಿಗಳ ಜೀರ್ಣಾವಯವಗಳಲ್ಲಿದ್ದು; ಪಚತಿ = ಚತುರ್ವಿಧ ಭೋಜನ ಪದಾರ್ಥಗಳು

ಜೀರ್ಣವಾಗುವುದಕ್ಕೆ ಕಾರಣನಾಗಿರುವನೋ; ಯಃ = ಯಾರು; ಅಂಡ ಮಧ್ಯಗಃ = ಬ್ರಹ್ಮಾಂಡದ ಮಧ್ಯಭಾಗದಲ್ಲಿದ್ದು; ತಪತಿ = ತನ್ನ ಶಾಖದಿಂದ ಲೋಕಗಳನ್ನು ರಕ್ಷಿಸುತ್ತಿರುವನೋ; ಸಃ = ಅವನೇ; ವೈಶ್ವಾನರಃ = ವೈಶ್ವಾನರನೆಂದು ಕರೆಸಿಕೊಳ್ಳುವವನು; ಅವನೇ; ಮುನೇಃ = ಯೋಗಿಯಾದವನಿಗೆ; ದೇವಾನಾಂ ಮಾರ್ಗಃ = ದೇವಮಾರ್ಗವೆನಿಸಿಕೊಳ್ಳುವನು; ಪಿತೃಣಾಂ ಮಾರ್ಗಃ = ಪಿತೃಗಳ ಮಾರ್ಗವೆಂತಲೂ ಕರೆಸಿಕೊಳ್ಳುವನು.

ಊರ್ಧ್ವಲೋಕಗಳಿಗೆ ಹೋಗುವವರು, ನಂತರ ವೈಕುಂಠಕ್ಕೆ ತೆರಳುವವರು ಮತ್ತು ಸಂಸಾರಕ್ಕೆ ಮರಳುವವರು (ಕರ್ಮಯೋಗಿಗಳು), ಈ ಎಲ್ಲರೂ ವೈಶ್ವಾನರ ಲೋಕಕ್ಕೆ ಬಂದು, ಅಲ್ಲಿಂದ ಮುಂದೆ ತಮ್ಮ ತಮ್ಮ ಮಾರ್ಗಗಳನ್ನು ಹಿಡಿಯುವರು. ಮೂರನೇ ಗುಂಪಿನವರು ಪಿತೃಮಾರ್ಗದಿಂದ ಸಂಸಾರಕ್ಕೆ ಹಿಂದಿರುಗುವವರು.

**ದೇವಯಾನಂ ಪಿಂಗಳಾಭಿರಹಾನ್ಯೇತಿ ಶತಾಯುಷಾ ।**
**ರಾತ್ರೀರಿಡಾಭಿಃ ಪಿತೃಣಾಂ ವಿಷುವತ್ತಾ ಸುಷುಮ್ನಯಾ ॥ ೨೭ ॥**

ಶತಾಯುಷಾ = ಉತ್ಕ್ರಮಣಾನಂತರ; ಪಿಂಗಳಾಭಿಃ = ಪಿಂಗಳಾನಾಡ್ಯಭಿಮಾನಿ ದೇವತೆಗಳಿಂದ ಕೂಡಿ; ಅಹಾನಿ ದೇವಯಾನಂ = ಹಗಲುಗಳೆಂಬ ಸಂಜ್ಞೆಯುಳ್ಳ ದೇವಯಾನವನ್ನು; ಏತಿ = ಹಿಡಿದು ಹೊರಡುತ್ತಾನೆ; ಇಡಾಭಿಃ = ಇಡಾನಾಡ್ಯಭಿಮಾನಿ ದೇವತೆಗಳಿಂದ ಕೂಡಿ; ರಾತ್ರೀಃ ಪಿತೃಣಾಂ (ಯಾನಂ) = ರಾತ್ರಿಗಳೆಂಬ ಸಂಜ್ಞೆಯುಳ್ಳ ಪಿತೃಯಾನವನ್ನು; ಏತಿ = ಹೊಂದುತ್ತಾನೆ; ಸುಷುಮ್ನಯಾ = ಸುಷುಮ್ನಾ ನಾಡಿಯಲ್ಲಿನ ಮುಖ್ಯಪ್ರಾಣರಿಂದ ಕೂಡಿ; ವಿಷುವತ್ತಾ ಯಾನಂ = ವಿಶೇಷ ಸುಖಪ್ರದವಾದ ವೈಕುಂಠ ಮಾರ್ಗವನ್ನು; ಏತಿ = ಹಿಡಿದು ಪ್ರಯಾಣ ಮಾಡುತ್ತಾನೆ.

ಯೋಗಿಗಳು ಸಾಮಾನ್ಯವಾಗಿ ಶತಾಯುಷಿಗಳು. ಮಾನವರಿಗೆ ನಿಯತವಾಗಿರುವುದು ನೂರು ವರ್ಷ. ದುಷ್ಕರ್ಮದ ಫಲವಾಗಿ ಆಯುಷ್ಯ ಹಾನಿ; ಯೋಗಬಲದಿಂದ ಆಯುರ್ವೃದ್ಧಿ. ದೇಹದ ಬಲಭಾಗದಲ್ಲಿರುವ ನಾಡಿಗಳಿಗೆ ಪಿಂಗಳಾ ನಾಡಿಗಳೆಂದೂ ಎಡಭಾಗದಲ್ಲಿರುವ ನಾಡಿಗಳಿಗೆ ಇಡಾನಾಡಿಗಳೆಂದೂ ಹೆಸರು. ಈ ನಾಡಿಗಳು ಕ್ರಮವಾಗಿ ಸುಷುಮ್ನಾ ನಾಡಿಯ ಬಲಭಾಗದಲ್ಲಿರುವ ಮುಖ್ಯ ಪಿಂಗಳಾ ಅಥವ ಸೂರ್ಯನಾಡಿಗೂ, ಎಡಭಾಗದಲ್ಲಿರುವ ಇಡಾ ಅಥವ ಚಂದ್ರನಾಡಿಗೂ, ಸಂಬಂಧಪಟ್ಟಿವೆ. ಈ ಎರಡರ ಮಧ್ಯದಲ್ಲಿರುವುದು ಸುಷುಮ್ನಾನಾಡಿ. ಪಿಂಗಾಳಾ ಮತ್ತು ಸುಷುಮ್ನಾ ಎಂಬ ಎರಡು ನಾಡಿಗಳಿಗೂ ದೇವಯಾನಗಳೆಂದೇ ಹೆಸರು. ಪಿಂಗಳಾ

ನಾಡಿಗಳನ್ನು ಹಿಡಿದು ಉತ್ಕ್ರಮಣ ಮಾಡಿದ ಕರ್ಮಯೋಗಿಗಳು ಊರ್ಧ್ವಲೋಕಗಳಲ್ಲಿ ವಿಶೇಷ ಸುಖಕ್ಕೆ ಭಾಗಿಗಳಾಗುವರು. ಸುಷುಮ್ನಾ ಮಾರ್ಗದಿಂದ ಹೊರಟವರು ನಿತ್ಯ ಸುಖಭಾಗಿಗಳಾಗುವರು.

**ತದ್ವಿಶ್ವನಾಭಿಂ ಪ್ರತಿಪದ್ಯವಿಷ್ಣೋರಣೀಯಸಾ ವಿರಜೇನಾತ್ಮನೈಕಂ ।**
**ನಮಸ್ಕೃತಂ ಬ್ರಹ್ಮವಿದಾಮುಪೈತಿ ಕಲ್ಪಾಯುಷೋ**
**ಯದ್ವಿಬುಧಾರಮಂತೇ ॥ ೨೮ ॥**

ವಿಷ್ಣೋಃ = ವಿಶ್ವಕರ್ತನೂ, ವಿಶ್ವಾಧಾರನೂ, ವಿಶ್ವವ್ಯಾಪಕನೂ ಆದ ಭಗವಂತನ; ವಿಶ್ವನಾಭಿಂ = ಜಗತ್ತಿನ ಕೇಂದ್ರವಾದ; ತತ್ = ಆ ಶಿಂಶುಮಾರ ಸ್ಥಾನವನ್ನು; ಪ್ರತಿಪದ್ಯ = ಹೊಂದಿ, ಅಣೀಯಸಾ = ಅತಿ ಸೂಕ್ಷ್ಮವಾದ; ವಿರಜೇನ = ಗುಣಕಾರ್ಯಗಳಿಂದ ಮುಕ್ತವಾದ ಕೇವಲ ಲಿಂಗಶರೀರ ಯುಕ್ತನಾಗಿ; ಕಲ್ಪಾಯುಷಃ = ಮನುಕಲ್ಪ ಪರ್ಯಂತವಿರುವ ಪುಣ್ಯಜೀವಿಗಳು; ಯತ್ = ಯಾವ ಲೋಕಗಳಲ್ಲಿದ್ದು ಸುಖಿಸುವರೋ; ಬ್ರಹ್ಮವಿದಾಂ ತತ್ = ಬ್ರಹ್ಮಜ್ಞಾನಿಗಳಿಗೆ ಸಮ್ಮತವಾದ ಅಂತಹ; ಏಕಂ ನಮಸ್ಕೃತಂ= ಸರ್ವರಿಂದಲೂ ನಮಸ್ಕೃತನಾದ ಏಕೈಕ ಸ್ವಾಮಿಯ ಆಶ್ರಯವನ್ನು; ಉಪೈತಿ = ಹೊಂದುವನು.

ಪಿಂಗಳಾ ಮಾರ್ಗದಿಂದ ಉತ್ಕ್ರಮಣ ಮಾಡಿದ ಸಿದ್ಧಪುರುಷನು ಶಿಂಶುಮಾರ ಮೂರ್ತಿಯ ದರ್ಶನ ಪ್ರಸಾದಗಳನ್ನು ಪಡೆದು, ಮಹರಾದಿ ಊರ್ಧ್ವಲೋಕಗಳಲ್ಲಿ ತನಗೆ ಯೋಗ್ಯವಾದ ಸ್ಥಾನದಲ್ಲಿರುತ್ತಾನೆ. ಅಲ್ಲಿ, ಮನುಕಲ್ಪ ಪರ್ಯಂತ ಜೀವಸುವ ಪುಣ್ಯವಂತರು ಅನುಭವಿಸುವ ಸುಖಗಳನ್ನು ವಿಷ್ಣುಪ್ರಸಾದವೆಂದು ಸ್ವೀಕರಿಸುತ್ತಾ ಜ್ಞಾನ ಭಕ್ತಿಗಳ ಅಭಿವೃದ್ಧಿ ಹೊಂದುವನು. ಅಂತಹ ಯೋಗಿಯು ಬ್ರಹ್ಮನ ದಿನ ಕಲ್ಪದ ರಾತ್ರಿಗಳಲ್ಲಿ ಆ ಬ್ರಹ್ಮನ ಉದರದಲ್ಲಿದ್ದು, ಹಗಲು ಪ್ರಾರಂಭವಾದಾಗ ಪುನಃ ತಾನಿದ್ದ ಲೋಕಕ್ಕೆ ಬರುವನು. ಅಲ್ಲಿನ ಅನುಭವ ಪೂರ್ತಿಯಾದ ಮೇಲೆ ಸತ್ಯಲೋಕಕ್ಕೆ ತೆರಳಿ ಅಲ್ಲಿ ವಾಸಮಾಡುವನು.

**ಅಥೋ ಅನಂತಸ್ಯ ಮುಖಾನಲೇನ ದಂದಹ್ಯಮಾನಂ ಸ**
**ನಿರೀಕ್ಷ್ಯವಿಶ್ವಂ ।**
**ನಿರ್ಯಾತಿ ಸಿದ್ಧೇಶ್ವರ ಜುಷ್ಟಧಿಷ್ಣ್ಯಂ ಯದ್ವೈಪರಾರ್ಧ್ಯಂ**
**ತದುಪಾರಮೇಷ್ಠ್ಯಂ ॥ ೨೯ ॥**

ಅಥ = ಮಹಾರಾದಿ ಲೋಕಗಳಲ್ಲಿರುವಾಗ; ಅನಂತಸ್ಯ = ಸಂಕರ್ಷಣ ರೂಪೀ ಭಗವಂತನ; ಮುಖಾನಲೇನ = ಮುಖದಿಂದ ಹೊರಡುವ ಜ್ವಾಲೆಗಳಿಂದ;

ದಂದಹ್ಯಮಾನಂ = ಬೆಂದು ಹೋಗುವ; ವಿಶ್ವಂ = ಸೃಷ್ಟವಾದ ಜಗತ್ತನ್ನು; ಸಃ = ಆ ಯೋಗಿಯು; ನಿರೀಕ್ಷ್ಯ = ಪದೇ ಪದೇ ನೋಡಿ; ಯತ್ ವೈಪರಾರ್ಧ್ಯಂ = ಯಾವುದು ಬ್ರಹ್ಮಕಲ್ಪದ ದ್ವಿತೀಯಾರ್ಧವೆನಿಸಿಕೊಳ್ಳುವುದೋ ಅಲ್ಲಿಯ ಪರ್ಯಂತರ ವಿರುವ; ಸಿದ್ಧೇಶ್ವರ ಜುಷ್ಟ ದಿಷ್ಣ್ಯಂ = ಸಿದ್ಧ ಶ್ರೇಷ್ಠರಿಗೆ ಪ್ರಿಯವಾದ; ತತ್ ಉಪಾರಮೇಷ್ಠ್ಯಂ = ಆ ಬ್ರಹ್ಮನ ಸತ್ಯಲೋಕವನ್ನೇ; ನಿರ್ಯಾತಿ = ಹೊರಟು ಸೇರುತ್ತಾನೆ.

ಪ್ರತಿ ಬ್ರಹ್ಮನ ಹಗಲಿನಲ್ಲಿಯೂ ದಿನ ಪ್ರಳಯವಾಗುವಾಗ, ಸಂಕರ್ಷಣಾಗ್ನಿಯಿಂದ ಲೋಕಗಳು ದಹಿಸಿ ಹೋಗುವುದನ್ನು ಸಿದ್ಧಪುರುಷರು ಮೇಲಿನ ಲೋಕಗಳಲ್ಲಿದ್ದು ನೋಡುತ್ತಾ, ದಹಿಸಿ ಹೋಗದೆ ದ್ವಿತೀಯ ಪರಾರ್ಧದ ಕಡೆಯ ತನಕ ಉಳಿದಿರುವ ಸತ್ಯಲೋಕವನ್ನು ಸೇರಿ ಕಲ್ಪಾಂತದವರೆಗೆ ಅಲ್ಲಿರುತ್ತಾರೆ. ದಿನ ಕಲ್ಪಾವಸಾನಗಳಲ್ಲಿ ದಹಿಸಿ ಹೋಗುವ ಲೋಕಗಳನ್ನು ನೋಡುವುದರಿಂದ ಅವರ ವೈರಾಗ್ಯವು ಸ್ಥಾಯೀಭಾವವನ್ನು ಹೊಂದುವುದು.

**ನಯತ್ರ ಶೋಕೋ ನಜರಾ ನ**
**ಮೃತ್ಯುರ್ನಾರ್ಧಿರ್ನಚೋದ್ವೇಗ ಋತೇಕುತಶ್ಚಿತ್ ।**
**ಯಚ್ಚಿತ್ತತೋದಃ ಕ್ರಿಯಯಾನಿದಂ ವಿದಾಂ**
**ದುರಂತ ದುಃಖ ಪ್ರಭವಾನುದರ್ಶನಾತ್** ॥ ೩೦ ॥

ಅನಿದಂ ವಿದಾಂ = ಬ್ರಹ್ಮಜ್ಞಾನವಿಲ್ಲದವರಿಗೆ; ಕ್ರಿಯೆಯಾ = ಆಚರಿಸುವ ಕರ್ಮಕಲಾಪಗಳಿಂದ; ದುರಂತ ದುಃಖ ಪ್ರಭವ ಅನುದರ್ಶನಾತ್ = ಅಸಹ್ಯ ದುಃಖ ಪ್ರಾಪ್ತಿಯು ಕಂಡುಬರುವುದರಿಂದ; ಯಃ ಚಿತ್ತತೋದಃ = ಯಾವುದು ಮನಸ್ಸಿನ ಗ್ಲಾನಿಗೆ ಕಾರಣವೋ; ಅಂತಹ; ಶೋಕಃ = ದುಃಖವು; ಋತೇ ಯತ್ರ = ಆ ಸತ್ಯ ಲೋಕದಲ್ಲಿ; ಕುತಶ್ಚಿತ್ = ಯಾವ ಕಾರಣದಿಂದಲೂ; ನ = ಇಲ್ಲ; ಜರಾ ನ = ಮುಪ್ಪು ಎಂಬುದು ಇಲ್ಲ; ಮೃತ್ಯುಃ ನ = ಮರಣದ ವಾರ್ತೆ ಇಲ್ಲ; ಆಧಿಃ ನ = ದುಃಖವನ್ನ ಧಿಕರಿಸಿ ಬರುವ ಕಾರಣಗಳಿಲ್ಲ; ಉದ್ವೇಗಃ ನ = ಮನಸ್ಸಿನ ಉದ್ವೇಗವೆಂಬುದೂ ಇಲ್ಲ.

ಸತ್ಯಲೋಕವು ವೈಕುಂಠದ ಸ್ಥಿತಿಯನ್ನು ಬಹಳ ಮಟ್ಟಿಗೆ ಹೋಲುವುದರಿಂದ, ಹದಿನಾಲ್ಕು ಲೋಕಗಳಲ್ಲಿ ಅದೇ ಅತ್ಯುತ್ತಮವಾದುದೆಂದು ತಿಳಿಸುವುದು ಈ ಶ್ಲೋಕದ ಅಭಿಪ್ರಾಯ. ವೈಕುಂಠದಲ್ಲಿ ಸೃಷ್ಟ್ಯಾದಿಗಳ ಹೆಸರೇ ಇಲ್ಲ. ಈ ಸತ್ಯಲೋಕದಲ್ಲಿ ಸೃಷ್ಟ್ಯಾದಿಗಳ ಸೋಂಕು ಇದ್ದರೂ, ಅದರ ಭಯವಿಲ್ಲ. ಪ್ರಕೃತ ಬ್ರಹ್ಮದೇವರ ಜೊತೆಯಲ್ಲಿ ಮುಕ್ತಿಗೆ ಹೋಗುವವರು ಕೆಲವರು. ಉಳಿದವರಲ್ಲಿ ಅನೇಕರು ಮುಂದಿನ ಹಲವಾರು ಬ್ರಹ್ಮಕಲ್ಪಗಳಲ್ಲಿ ಸಾಧನೆ ಮಾಡಿ ಹೆಚ್ಚು ಹೆಚ್ಚಿನ ಪದವಿಗಳಿಗೆ ಅರ್ಹತೆ

ಪಡೆಯಬೇಕಾದವರು. ಅಂತಹ ಹಿರಿಯ ಜೀವಿಗಳು ಈ ಕಲ್ಪಾಂತದವರೆಗೆ ಸತ್ಯಲೋಕದಲ್ಲಿದ್ದು, ಮಹಾಪ್ರಳಯ ಬಂದಾಗ ಹರಿಯುದರವನ್ನು ಹೊಕ್ಕು, ಮುಂದಿನ ಬ್ರಹ್ಮಕಲ್ಪಗಳಲ್ಲಿ ಪುನಃ ಸೃಷ್ಟಿಗೆ ಬರುವರು.

**ತತೋ ವಿಶೇಷಂ ಪ್ರತಿಪದ್ಯ ನಿರ್ಭಯಸ್ತೇನಾತ್ಮನಾ**
**ಪೋನಲ ಮೂರ್ಧ್ನಿ ಚ ತ್ವರನ್ ।**
**ಜ್ಯೋತಿರ್ಮಯೋ ವಾಯುಮುಪೇತ್ಯ ಕಾಲೇ**
**ವಾಯ್ವಾತ್ಮನಾ ಖಂ ಬೃಹದಾತ್ಮಲಿಂಗಂ** ॥ ೩೧ ॥

**ಘ್ರಾಣೇನ ಗಂಧಂ ರಸನೇನ ವೈರಸಂ**
**ರೂಪಂತು ದೃಷ್ಟ್ಯಾ ಸ್ಪರ್ಶಂ ತ್ವ ಚೈವ ।**
**ಶ್ರೋತ್ರೇಣ ಚೋಪೇತ್ಯ ನಭೋಗುಣಂ**
**ತತ್ ಪ್ರಾಯೇಣ ನಾವೃತ್ತಿಮುಪೈತಿ ಯೋಗೀ** ॥ ೩೨ ॥

ತತಃ = ಬ್ರಹ್ಮದೇವರ ಸತ್ಯಲೋಕದಲ್ಲಿದ್ದು; ವಿಶೇಷಂ ಪ್ರತಿಪದ್ಯ = ಬ್ರಹ್ಮಾಂಡ ಕಟಾಹದಲ್ಲಿ ವಿಶೇಷ ಶಬ್ದ ಬೋಧಿತನಾದ ವಿರಾಟ್‌ಪುರುಷನನ್ನು ಆಶ್ರಯಿಸಿ; ನಿರ್ಭಯಃ = ಸಂಸಾರಕ್ಕೆ ಹಿಂದಿರುಗುವ ಭಯವಿಲ್ಲದವನಾಗಿ; ತೇನ ಆತ್ಮನಾ = ಆ ಬ್ರಹ್ಮನೊಡನೆ; ಆಪ ಅನಿಲ ಮೂರ್ಧ್ನಿಚ ತ್ವರನ್ = ಜಲಾವರಣ ತೇಜ ಆವರಣಗಳನ್ನೂ ಬೇಗ ದಾಟಿ; ಜೋತಿರ್ಮಯಃ = ಜ್ಯೋತಿರ್ಮಯ ಶರೀರದಿಂದ; ವಾಯುಂ ಉಪೇತ್ಯ = ವಾಯುಮಂಡಲವನ್ನು ಸೇರಿ; ಕಾಲೇ = ಸಕಾಲದಲ್ಲಿ; ವಾಯ್ವಾತ್ಮನಾ = ವಾಯುತತ್ವ ಶರೀರದಿಂದ; ಬೃಹದಾತ್ಮಲಿಂಗಂ = ವಿಶ್ವವ್ಯಾಪೀ ಹರಿಯ ದೇಹವೆನಿಸುವ; ಖಂ = ಆಕಾಶಾವರಣವನ್ನು; ಪ್ರಪದ್ಯತೇ = ಹೊಂದುತ್ತಾನೆ.

ಸೂಕ್ಷ್ಮ ಶರೀರಗಳ ಲಯಕ್ರಮದಿಂದ ಯೋಗಿಯ ಊರ್ಧ್ವಗಮನ ಕ್ರಮವನ್ನಿಲ್ಲಿ ವಿವರಿಸಿದ್ದಾರೆ. ಲಯದಿಂದ ಆಗಬೇಕಾದ ಪ್ರಯೋಜನ ಜೀವನಿಗೆ. ಆದುದರಿಂದ, ಜಡತತ್ವಗಳೆಂದಾಗ ಅವುಗಳ ಅಭಿಮಾನಿಗಳನ್ನು ಚಿಂತಿಸಬೇಕು. ಇಲ್ಲಿ ಹೇಳಿರುವ ಪೃಥಿವ್ಯಾದಿಗಳು ಬ್ರಹ್ಮಾಂಡದೊಳಗಿನ ಸ್ಥೂಲ ಪಂಚಭೂತಗಳಲ್ಲ; ಅವು ಆ ಭೂತತತ್ವಗಳ ಮೂಲರೂಪಗಳಾದ ತನ್ಮಾತ್ರಗಳು. ಉದಾಹರಣೆ– ನೂರುಕೋಟಿ ಯೋಜನ ವಿಸ್ತಾರವುಳ್ಳ ಬ್ರಹ್ಮಾಂಡ ಖರ್ಪರವು ಭೂತನ್ಮಾತ್ರದಿಂದ ಆಗಿರುವುದು. ಆದರ ಯಜಮಾನ, ವೈರಾಜನಾಮಕನಾದ ಬ್ರಹ್ಮನ ಅಂತರ್ಯಾಮಿಯಾದ ಅನ್ನ ನಾಮಕ ಅನಿರುದ್ಧ.

ಪೃಥ್ವೀತನ್ಮಾತ್ರ ಶರೀರವು ಅಪ್ ತನ್ಮಾತ್ರದಲ್ಲಿ ಲಯ ಹೊಂದುವಾಗ ಅದನ್ನಾಶ್ರಯಿಸಿಕೊಂಡಿದ್ದ ಜೀವಿಯು ಅಪ್ ತನ್ಮಾತ್ರಕ್ಕೆ ಯಜಮಾನನಾದ ಬ್ರಹ್ಮಾಂತರ್ಯಾಮಿ ಅನ್ನನಾಮಕ ಅನಿರುದ್ಧನಲ್ಲಿ ಸೇರಿಕೊಳ್ಳುತ್ತಾನೆ. ಅಲ್ಲಿಂದ ತೇಜ ಮತ್ತು ವಾಯುತನ್ಮಾತ್ರಗಳಲ್ಲಿ ಬ್ರಹ್ಮಾಂತರ್ಯಾಮಿಯಾದ ಪ್ರಾಣನಾಮಕ ಪ್ರದ್ಯುಮ್ನನನ್ನು ಹೊಂದುತ್ತಾನೆ. ವಾಯುತನ್ಮಾತ್ರವು ಆಕಾಶತನ್ಮಾತ್ರದಲ್ಲಿ ಸೇರಿಕೊಳ್ಳುವಾಗ ಬ್ರಹ್ಮಾಂತರ್ಗತ ಪ್ರಾಣನಾಮಕ ಪ್ರದ್ಯುಮ್ನನನ್ನು ಹೊಂದುತ್ತಾನೆ. ತೇಜ, ವಾಯು, ಆಕಾಶತನ್ಮಾತ್ರಗಳಲ್ಲಿ ಪ್ರಾಣಮಯ ಪ್ರದ್ಯುಮ್ನ.

ಬ್ರಹ್ಮನ ಮತ್ತು ತದಂತರ್ಯಾಮಿ ಭಗವಂತನ ರೂಪಗಳು ತಮ್ಮ ತಮ್ಮ ಮೊದಮೊದಲಿನ ರೂಪಗಳಲ್ಲಿ ಏಕೀಭಾವ ಹೊಂದುತ್ತವೆ. ಆ ರೂಪಗಳನ್ನು ಆಶ್ರಯಿಸಿ, ಸೂಕ್ಷ್ಮಜಡರೂಪಗಳನ್ನು ಒಂದೊಂದನ್ನಾಗಿ ತ್ಯಜಿಸುತ್ತಾ ಜೀವನಾದವನು ಬ್ರಹ್ಮಾಂತರ್ಯಾಮಿಯ ವಶನಾಗಿರುವನು.

ಘ್ರಾಣೇನ = ಗಂಧ ಲಕ್ಷಣಯುಕ್ತವಾದ ಪೃಥ್ವೀತನ್ಮಾತ್ರದಿಂದ; ಗಂಧಂ = ಗಂಧ ಗ್ರಹಣ ಸಮರ್ಥವಾದ ಸೂಕ್ಷ್ಮ ಘ್ರಾಣೇಂದ್ರಿಯವನ್ನೂ; ರಸನೇನ = ಅಪ್ ತನ್ಮಾತ್ರದಿಂದ; ರಸಂ ವೈ = ಸೂಕ್ಷ್ಮ ರಸನೇಂದ್ರಿಯವನ್ನೂ; ದೃಷ್ಟ್ಯಾ = ತೇಜಸ್ತನ್ಮಾತ್ರದಿಂದ; ರೂಪಂ ತು = ಸೂಕ್ಷ್ಮ ನೇತ್ರೇಂದ್ರಿಯವನ್ನೂ; ತ್ವಚಾ = ವಾಯುತನ್ಮಾತ್ರದಿಂದ ಸ್ಪರ್ಶಂ ಏವ = ಸೂಕ್ಷ್ಮ ಸ್ಪರ್ಶೇಂದ್ರಿಯವನ್ನೂ; ಶ್ರೋತ್ರೇಣ = ಶಬ್ದ ತನ್ಮಾತ್ರದಿಂದ; ನ ಭೋಗುಣಂ ಚ = ಸೂಕ್ಷ್ಮ ಶ್ರೋತ್ರೇಂದ್ರಿಯ ತತ್ವವನ್ನೂ; ಉಪೇತ್ಯ = ಹೊಂದಿ; ಪ್ರಾಯೇಣ = ನಿಯಮಾನುಸಾರ; ಯೋಗೀ = ಉಕ್ತ ಪ್ರಕಾರ ಲಯಮಾರ್ಗಾನುಗಾಮಿಯಾದವನು; ಆವೃತ್ತಿಂ ನ ಉಪೈತಿ = ಸಂಸಾರಕ್ಕೆ ಹಿಂದಿರುಗುವುದಿಲ್ಲ.

ತೈಜ ಸಾಹಂಕಾರದಿಂದ ಮನೋವೃತ್ತಿ ರೂಪಗಳಾದ ಇಂದ್ರಿಯ ಶಕ್ತಿಗಳ ಮತ್ತು ತದಭಿಮಾನಿ ದೇವತಾ ಶರೀರಗಳ ಉತ್ಪತ್ತಿಯಾದುದರಿಂದ; ತನ್ಮಾತ್ರಗಳು ಇಂದ್ರಿಯ ಶಕ್ತಿಗಳಲ್ಲಿ ಲಯ ಹೊಂದುತ್ತವೆ. ಆ ಇಂದ್ರಿಯಾಭಿಮಾನಿ ದೇವತೆಗಳ ಹೆಸರಿನ ಬ್ರಹ್ಮನಂತರ್ಯಾಮಿ ರೂಪಗಳನ್ನಾಶ್ರಯಿಸಿ, ಜೀವನು ಸೂಕ್ಷ್ಮತರ ದೇಹಿಯಾಗುತ್ತಾನೆ.

**ಸ ಭೂತ ಸೂಕ್ಷ್ಮೇಂದ್ರಿಯ ಸನ್ನಿಕರ್ಷಾತ್ಸನಾತನೋಽಸೌ**
**ಭಗವಾನನಾದಿಃ ।**
**ಮನೋಮಯಂ ದೇವಮಯಂ ವಿಕಾರ್ಯಂ ಸಂಸಾದ್ಯಮತ್ಯಾಸಹ**
**ತೇನ ಯಾತಿ ॥ ೩೩ ॥**

ಭೂತ ಸೂಕ್ಷ್ಮೇಂದ್ರಿಯ ಸನ್ನಿಕರ್ಷಾತ್= ಪಂಚ ಮಹಾಭೂತಗಳನ್ನೂ, ಪಂಚ ತನ್ಮಾತ್ರಗಳನ್ನೂ, ಸೂಕ್ಷ್ಮೇಂದ್ರಿಯ ಶಕ್ತಿಗಳನ್ನೂ, ತತ್ತದಭಿಮಾನಿ ದೇವತಾಂತರ್ಯಾಮಿಯಾದ ಬ್ರಹ್ಮನನ್ನೂ ತನ್ನ ವಶದಲ್ಲಿಟ್ಟುಕೊಂಡು ನಡೆಸುವ; ಸಃ ಅಸೌ ಭಗವಾನ್= ಈ ಭಗವಂತನು; ಸನಾತನಃ = ನಾದ ರೂಪವಾದ ವೇದಗಳಿಂದ ಪ್ರತಿಪಾದ್ಯನಾದವನು; ಅನಾದಿಃ = ಸೃಷ್ಟಿ ಸ್ಥಿತಿ ಲಯಗಳಿಲ್ಲದೆ ಅವುಗಳನ್ನು ನಡೆಸುವವನು; (ಇವನು;) ವಿಕಾರ್ಯಂ= ವೃತ್ತಿರೂಪ ಕ್ರಿಯಾಜನಕವಾದ; ದೇವಮಯಂ= ತತ್ವಾಭಿಮಾನಿ ದೇವತಾಂತರ್ಗತವಾದ; ಮನೋಮಯಂ= ಮನೋಮಯವೆನಿಸಿಕೊಳ್ಳುವ ತನ್ನ ಸಂಕರ್ಷಣ ರೂಪವನ್ನು; ಆಸಾದ್ಯ= ಸೇರಿಕೊಂಡು; ತೇನ = ಆ ರೂಪದಿಂದ; ಮತ್ಯಾ ಸಹ = ಬುದ್ಧಿ ತತ್ವಾಭಿಮಾನಿಯಿಂದ ಕೂಡಿಕೊಂಡು; ಯಾತಿ = ಮುಂದಕ್ಕೆ ಪ್ರಯಾಣ ಮಾಡುತ್ತಾನೆ.

ಭಗವಂತನು ತನ್ನ ರೂಪಗಳನ್ನು ರೂಪಗಳಲ್ಲಿ ಲಯ ಹೊಂದಿಸುತ್ತಾನೆ ಎಂದಾಗ, ಜೊತೆಗೆ ಯೋಗಿ ಜೀವನನ್ನೂ ಕೊಂಡೊಯ್ಯುತ್ತಾನೆ ಎಂದು ತಿಳಿಯಬೇಕು. ಇಂದ್ರಿಯ ಶಕ್ತಿಗಳ ಲಯ ಮನಸ್ತತ್ವದಲ್ಲಿ; ತದಭಿಮಾನಿಗಳಾದ ಉಮಾಶಂಕರರನ್ನೂ ಲಯ ಕಾರ್ಯದಲ್ಲಿ ಭಾಗಿಗಳಾದ ಪದಸ್ಥರಾದ ವಾರುಣೀ ಶೇಷರನ್ನೂ, ಸೌಪರ್ಣೀ ಗರುಡರನ್ನೂ, ಅವರಂತರ್ಯಾಮಿಗಳಾದ ವಾಣೀ ಬ್ರಹ್ಮರನ್ನೂ, ಈ ಎಲ್ಲರಂತರ್ಯಾಮಿಗಳಾದ ಲಕ್ಷ್ಮೀನಾರಾಯಣರನ್ನೂ ಇಲ್ಲಿ ಚಿಂತಿಸಬೇಕು. ವಾರುಣೀ ಎಂದಾಗ ಉಮಾದೇವಿ ಎಂತಲೂ, ಶಂಕರ ಎಂದಾಗ ಶೇಷ ದೇವರೆಂತಲೂ ಗ್ರಹಿಸಬೇಕು. ಏಕೆಂದರೆ, ಶೇಷ ಪದವಿಯ ನಂತರವೇ ಮುಕ್ತಿ. ಬುದ್ಧಿ ತತ್ವ ಎಂಬುದೇ ವಿಜ್ಞಾನ ತತ್ವ. ಅದರ ವಿಚಾರ ಮುಂದಿನ ಶ್ಲೋಕದಲ್ಲಿದೆ.

**ವಿಜ್ಞಾನ ತತ್ವಂ ಗುಣ ಸನ್ನಿರೋಧಂ ತೇನಾತ್ಮನಾತ್ಮಾನ ಮುಪೈತಿ ಶಾಂತಿಂ ।**
**ಆನಂದಮಾನಂದಮಯೇವಸಾನೇ ಸರ್ವಾತ್ಮಕೇ ಬ್ರಹ್ಮಣಿ ವಾಸುದೇವೇ ॥ ೩೪ ॥**

ವಿಜ್ಞಾನ ತತ್ವಂ = ವಿಜ್ಞಾನ ತತ್ವವೆಂದು ಕರೆಸಿಕೊಳ್ಳುವ ಮಹತ್ತತ್ವವು; ಗುಣ ಸನ್ನಿರೋಧಂ= ತ್ರಿಗುಣಕಾರ್ಯಗಳಿಗೆ ವಶವಾಗದೆ ಮುಂದಿನ ತತ್ವಗಳಿಗೆ ಮೂಲ ಕಾರಣವಾದುದು; ತೇನ ಸಹ = ಅದರಿಂದ ಕೂಡಿಕೊಂಡು; ಆನಂದಂ = ಆನಂದಮಯ ನಾಮಕವಾದ; ಆತ್ಮನಾ = ರೂಪದಿಂದ; ಆನಂದಮಯೇ = ಆನಂದಮಯವಾದ; ಸರ್ವಾತ್ಮಕೇ = ಸರ್ವಾಂತರ್ಯಾಮಿಯಾದ; ಬ್ರಹ್ಮಣಿ = ಪೂರ್ಣಾನಂದ

ಸ್ವರೂಪವಾದ; ವಾಸುದೇವೇ = ವಾಸುದೇವ ರೂಪದಿಂದ; ಶಾಂತಿಂ = ಲಕ್ಷ್ಮೀ ಸ್ವರೂಪ ಸ್ಥಾನವಾದ; ಆತ್ಮಾನಂ = ತನ್ನನ್ನು; ಉಪೈತಿ = ಹೊಂದಿಕೊಳ್ಳುತ್ತಾನೆ.

ಭಗವಂತನ ಸಂಕರ್ಷಣ ರೂಪವು ವಾಸುದೇವ ರೂಪದಲ್ಲಿ ಒಂದಾಗುವಾಗ, ಯೋಗ್ಯತಾನುಸಾರ ಸ್ವರೂಪಾನಂದವನ್ನು ಪೂರ್ಣವಾಗಿ ಹೊಂದಿದ ಕಾರಣದಿಂದ ಬ್ರಹ್ಮವೆನಿಸಿಕೊಳ್ಳುವ ಯೋಗಿ ಜೀವನು ಮಹತ್ತತ್ವದ ಪ್ರಭೇದವಾದ ವಿಜ್ಞಾನ ತತ್ವದಲ್ಲಿನ ಮುಖ್ಯಪ್ರಾಣರ ಬಲದಿಂದ, ಪೂರ್ವೋಕ್ತ ಲಯ ಕ್ರಮದಿಂದ, ಮಹತ್ತತ್ವಾಭಿಮಾನಿ ಬ್ರಹ್ಮದೇವರನ್ನು ಹೊಂದುತ್ತಾನೆ; ಎಂದರೆ, ಅಲ್ಲಿ ಅಂತರ್ಯಾಮಿಯಾಗಿರುವ ಮಾಯಾ ವಾಸುದೇವನನ್ನು ಹೊಂದುತ್ತಾನೆ. ಅಲ್ಲಿಗೆ, ಲಿಂಗ ಶರೀರವಿದ್ದರೂ, ಗುಣಕಾರ್ಯಗಳೆಲ್ಲಾ ವಿರಮಿಸಿ, ಕೇವಲಾನಂದಾನುಭವ ಉಳಿಯುತ್ತದೆ.

**ಏತಾಂಗತಿಂ ಭಾಗವತೋ ಗತೋಽಯಃ ಸವೈ ಪುನರ್ನೇಹ ವಿಷಜ್ಜತೇಽಂಗ ।**
**ಏತೇ ಸೃತೀ ತೇ ನೃಪ ವೇದ ಗೀತೇ ತ್ವಯಾಭಿಪೃಷ್ಟೇಽಥ ಸನಾತನೇ ಚ ।**
**ಯೇ ವೈಪುರಾಬ್ರಹ್ಮಣ ಆಹ ಪೃಷ್ಟ ಆರಾಧಿತೋ ಭಗವಾನ್ ವಾಸುದೇವಃ ॥ ೩೫ ॥**

ಅಂಗ = ಪ್ರಿಯ ಪರೀಕ್ಷಿದ್ರಾಜಾ; ಯಃ ಭಾಗವತಃ = ಯಾವ ಏಕಾಂತ ಭಕ್ತನು; ಏತಾಂ ಗತಿಂ = ಈ ಅರ್ಚಿಮಾರ್ಗದಿಂದ ಅನುಕ್ರಮವಾಗಿ ದೇಹತ್ಯಾಗ ಮಾಡುವನೋ; ಸಃ = ಅವನು; ಪುನಃ = ಮತ್ತೇ; ಇಹ = ಈ ಲೋಕದ ಬವಣೆಯಲ್ಲಿ; ನ ವಿಷಜ್ಜತೇ = ಸಿಕ್ಕಿ ಹಾಕಿಕೊಳ್ಳುವುದಿಲ್ಲ; ವೈ = ಸಮುದ್ರದಲ್ಲಿ ನದಿ ಸೇರಿಕೊಳ್ಳುವಂತೆ ಅವನು ಪರಮಾತ್ಮನಲ್ಲಿ ಕೊಡಿಕೊಳ್ಳುವುದರಿಂದ ಇದು ಸತ್ಯ; ಪುರಾ = ಸೃಷ್ಟಿಯ ಆರಂಭದಲ್ಲಿ; ಆರಾಧಿತಃ = ತಪಸ್ಸಿನಿಂದ ಮೆಚ್ಚಿದ; ಭಗವಾನ್ ವಾಸುದೇವಃ = ಭಗವಂತನಾದ ವಾಸುದೇವನು; ಪೃಷ್ಟಃ = ಪ್ರಶ್ನೆ ಮಾಡಲ್ಪಟ್ಟವನಾಗಿ; ಬ್ರಹ್ಮಣೇ ಆಹ = ಬ್ರಹ್ಮನಿಗೆ ಉಪದೇಶ ಮಾಡಿದನೋ; ಯೇ ವೈ = ಪ್ರಾಮಾಣಿಕವಾದ ಯಾವ ಎರಡು; ವೇದಗೀತೇ = ವೇದವಚನಗಳಾಗಿರುವುವೋ; ಚ = ಮತ್ತು; ಸನಾತನೇ = ನಿತ್ಯಾರ್ಥ ದ್ಯೋತಕಗಳಾಗಿರುವುವೂ; ಏತೇ ಸೃತೀ = ಅರ್ಚಿಮಾರ್ಗ, ಧೂಮಮಾರ್ಗಗಳೆಂಬ ಈ ಎರಡು; ನೃಪ = ಎಲೈ ರಾಜನೇ; ತ್ವಯಾ ಅಭಿಪೃಷ್ಟೇ = ನಿನ್ನಿಂದ ಕೇಳಲ್ಪಟ್ಟವುಗಳು; ಅಥ = ಆದುದರಿಂದ; ನನ್ನಿಂದ ವಿವರಿಸಲ್ಪಟ್ಟವು.

ತತ್ತ್ವ ಜ್ಞಾನಿಯಾದ ಭಗವದ್ಭಕ್ತನು, ಸಂಸಾರವನ್ನು ಹೇಯವೆಂದು ಚೆನ್ನಾಗಿ ತಿಳಿದು ಅರ್ಚಿಃಷ ಮಾರ್ಗದಿಂದ ದೇಹತ್ಯಾಗ ಮಾಡಿ ಮುಕ್ತಿಯ ನಿತ್ಯಾನಂದ ಭಾಗಿಯಾಗಲು ಇಚ್ಛಿಸುತ್ತಾನೆಂಬುದು ಸಿದ್ಧ. ವೇದೋಕ್ತವಾಗಿರುವುದರಿಂದ ಇದರ ಪ್ರಾಮಾಣ್ಯವೂ ಸಿದ್ಧವಾಯಿತು. ಈ ಜ್ಞಾನದ ಉಪದೇಶವು ಅತ್ಯಂತ ಪ್ರಾಚೀನವಾದುದು. ಸೃಷ್ಟಿಯ ಪ್ರಥಮ ಹಂತದಲ್ಲಿ ಭಗವಂತನಿಂದ ಬ್ರಹ್ಮಾದಿಗಳಿಗೂ ಅವರ ಪತ್ನಿಯರಿಗೂ ಉಪದಿಷ್ಟವಾದುದು. ಅವರಿಂದ ಉಪದಿಷ್ಟರಾದ ಋಷಿಗಳು ಉತ್ಕ್ರಮಣ ಮಾರ್ಗಗಳ ವಿಷಯವನ್ನು ಚೆನ್ನಾಗಿ ಬಲ್ಲರು. ಪರೀಕ್ಷಿದ್ರಾಜನಂತಹ ಮುಮುಕ್ಷುವಿಗೆ ಇದು ಅತ್ಯಗತ್ಯವಾದುದು.

**ನಹ್ಯತೋಽನ್ಯಃ ಶಿವಃ ಪಂಥಾ ವಿಶತಃ ಸಂಸೃತಾವಿಹ ।**
**ವಾಸುದೇವೇ ಭಗವತಿ ಭಕ್ತಿ ಯೋಗೋ ಯತೋ ಭವೇತ್ ॥ ೩೩ ॥**

ಯತಃ = ಯಾವ ಭಾಗವತ ಕಥಾ ಶ್ರವಣದಿಂದ; ಭಗವತಿ ವಾಸುದೇವೇ = ಭಗವಂತನಾದ ವೈಕುಂಠಪತಿಯಲ್ಲಿ; ಭಕ್ತಿಯೋಗಃ ಭವೇತ್ = ಭಕ್ತಿ ಮಾರ್ಗವು ಚೆನ್ನಾಗಿ ಅಭ್ಯಾಸವಾಗುವುದೋ; ಅತಃ ಅನ್ಯಃ = ಅದಕ್ಕಿಂತ ಬೇರೆಯಾದ; ಶಿವಃ ಪಂಥಾ = ಮಂಗಳದಾಯಕವಾದ ಪದ್ಧತಿಯು; ಇಹ ಸಂಸೃತೌ = ಈ ಜಗತ್ತಿನಲ್ಲಿ; ನ ಹಿ = ಇಲ್ಲವೇ ಇಲ್ಲ.

ಭಾಗವತ ಕಥಾ ಶ್ರವಣವೇ ಮುಕ್ತಿಪ್ರದವೆಂದು ಇಲ್ಲಿ ಹೇಳಿದ್ದಾರೆ. ಆಚಾರ, ಅಧ್ಯಯನ, ತಪಸ್ಸು ಮುಂತಾದ ಅನೇಕ ಮಾರ್ಗಗಳಿದ್ದರೂ, ಭಾಗವತ ಕಥಾ ಶ್ರವಣವೇ ಅತ್ಯಂತ ಶ್ರೇಷ್ಠವಾದುದು. ಏಕೆಂದರೆ, ಕಥೆಯನ್ನು ಕೇಳುವುದು ಸುಲಭ; ರುಚಿಕರ. ಜೊತೆಗೆ, ಅದರಿಂದ ವೈಕುಂಠ ಪದವಿಯೇ ಸಿಗುವುದೆಂದ ಮೇಲೆ, ಅದಕ್ಕಿಂತ ಬೇರೆ ಉತ್ತಮವಾದ ಮಾರ್ಗವು ಖಂಡಿತವಾಗಿಯೂ ಇಲ್ಲ.

**ಭಗವಾನ್ ಬ್ರಹ್ಮಕಾರ್ತ್ಸ್ನ್ಯೇನ ತ್ರಿರನ್ವೀಕ್ಷ್ಯಮನೀಷಯಾ ।**
**ತದಧ್ಯವಸ್ಯತ್ಕೂಟಸ್ಥೋರತಿರಾತ್ಮನ್ಯತೋಭವೇತ್ ॥ ೩೪ ॥**

ಭಗವಾನ್ = ಭಗವಾನ್ ವೇದವ್ಯಾಸರು; ಮನೀಷಯಾ = ಬುದ್ಧಿಪೂರ್ವಕವಾಗಿ; ಬ್ರಹ್ಮ = ವೇದವನ್ನು; ಕಾರ್ತ್ಸ್ನ್ಯೇನ = ಸಮಗ್ರವಾಗಿ; ತ್ರಿಃ ಅನ್ವೀಕ್ಷ್ಯ = ಮೂರುಸಲ ಅನ್ವೀಕ್ಷಿಸಿ; ಯತಃ = ಯಾವುದರಿಂದ; ಕೂಟಸ್ಥೇ ಆತ್ಮನಿ = ನಿರ್ವಿಕಾರ ಸ್ವರೂಪನಾದ

ಶ್ರೀಹರಿಯಲ್ಲಿ; ರತಿಃ ಭವೇತ್= ಅನನ್ಯ ಭಕ್ತಿಯುಂಟಾಗುವುದೋ; ತತ್= ಅದನ್ನು; ಅಪಶ್ಯತ್ ಕಂಡುಕೊಂಡರು.

ಗ್ರಂಥ ಪ್ರಾಮಾಣ್ಯನ್ನು ಈ ಮಾತುಗಳಿಂದ ನಿರ್ಧರಿಸಿ ಹೇಳಿದ್ದಾರೆ.

**ಭಗವಾನ್ ಸರ್ವಭೂತೇಷು ಲಕ್ಷಿತಶ್ಚಾತ್ಮನಾ ಹರಿಃ ।**
**ದೃಶ್ಯೈರ್ಬುದ್ಧ್ಯಾದಿಭಿರ್ದ್ರಷ್ಟಾ ಲಕ್ಷಣೈರನುಮಾಪಕೈಃ ॥ ೩೮ ॥**

ಸರ್ವಭೂತೇಷು = ಸಕಲ ಜೀವರಲ್ಲಿಯೂ; ಆತ್ಮನಾ = ಆ ಜೀವರಿಂದ; ಲಕ್ಷಿತಃ = ಕಾಣಲ್ಪಡುವಂತಹ; ಭಗವಾನ್ ಹರಿಃ = ಭಗವಂತನಾದ ಶ್ರೀಹರಿಯು; ದೃಶ್ಯೈಃ = ಕಾಣಲು ಸಾಧ್ಯವಾದ; ಬುದ್ಧ್ಯಾದಿಭಿಃ = ಬುದ್ಧಿ ಮೊದಲಾದ; ಅನುಮಾಪಕೈಃ ಲಕ್ಷಣೈಃ = ಪ್ರಾಮಾಣ್ಯವನ್ನು ಕಂಡುಕೊಳ್ಳುವ ವಿಧಾನಗಳಿಂದ; ದ್ರಷ್ಟಾ = ನೋಡತಕ್ಕವನಾಗಿದ್ದಾನೆ.

ಮಹಾಜ್ಞಾನಿಗಳು ಭಾಗವತಶಾಸ್ತ್ರದ ಪ್ರಾಮಾಣ್ಯವನ್ನು, ಪ್ರಯೋಜನವನ್ನೂ ಕಾಣಬಲ್ಲರು. ಮಂದಮತಿಗಳಿಗೆ ಅದು ಹೇಗೆ ಸಾಧ್ಯ ಎಂದರೆ, ಹೇಳುತ್ತಾರೆ– ಎಲ್ಲಾ ಜೀವರೂ ಅಸ್ವತಂತ್ರರೇ. ಅವರೊಳಗಿದ್ದು ಶ್ರೀಹರಿ ನೋಡಿದರೇನೇ ಅವರು ನೋಡುವುದು. ಆದುದರಿಂದ ಜೀವರಲ್ಲಿ 'ದ್ರಷ್ಟಾ' ಎನಿಸಿಕೊಂಡು, ಬಿಂಬನಾದ ತನ್ನನ್ನು ಪ್ರತಿಬಿಂಬನಂತೆ ಶ್ರೀಹರಿಯು ನೋಡುವುದರಿಂದ ಜೀವರು ಅವನನ್ನು ನೋಡಿದಂತಾಗುವುದು ಹೀಗೆ ಹೇಳದೇ, ದೃಶ್ಯನೂ ದ್ರಷ್ಟಾರನೂ ಶ್ರೀಹರಿಯೇ ಎಂದುಬಿಟ್ಟರೆ, ಅದು ಅದ್ವೈತಿಗಳು ಹೇಳುವ ಅಪಾರ್ಥವಾಗುವುದು. ಮಂದಾಧಿಕಾರಿಗಳಲ್ಲಿಯೂ ಸ್ವತಂತ್ರ ದ್ರಷ್ಟಾರನ ಕಾರ್ಯದಿಂದ ಫಲ ಸಿದ್ಧಿಯಾಗುವುದು.

**ತಸ್ಮಾತ್ಸರ್ವಾತ್ಮನಾ ರಾಜನ್ ಹರಿಃ ಸರ್ವತ್ರ ಸರ್ವದಾ ।**
**ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯೋ ಭಗವಾನ್ನೃಣಾಂ ॥ ೩೯ ॥**

ರಾಜನ್ = ಪರೀಕ್ಷಿದ್ರಾಜಾ; ತಸ್ಮಾತ್ = ಭಗವಾನ್ ವೇದವ್ಯಾಸರ ವಚನವಾದುದರಿಂದ; ನೃಣಾಂ = ಮರ್ತ್ಯರಾದ ಮಾನವರಿಗೆ; ಸರ್ವಾತ್ಮನಾ = ಸರ್ವ ಪ್ರಕಾರದಿಂದಲೂ; ಸರ್ವತ್ರ = ಸರ್ವ ಸ್ಥಳಗಳಲ್ಲಿಯೂ; ಸರ್ವದಾ = ಸರ್ವ ಕಾಲಗಳಲ್ಲಿಯೂ; ಹರಿಃ = ಶ್ರೀಹರಿಯು; ಶ್ರೋತವ್ಯಃ = ಕೇಳಲ್ಪಡಬೇಕಾದವನು;

ಕೀರ್ತಿತವ್ಯಃ = ಗಾನಮಾಡಲ್ಪಡಬೇಕಾದವನು; ಚ = ಮತ್ತು; ಸ್ಮರ್ತವ್ಯಃ = ಸ್ಮರಿಸಲ್ಪಡಬೇಕಾದವನು ಆಗಿದ್ದಾನೆ.

ಸರ್ವ ಪ್ರಕಾರದಿಂದಲೂ ಎಂದರೆ, ನಾವು ಏನೇ ಕೆಲಸ ಮಾಡುತ್ತಿದ್ದರೂ ಆಯಾ ಕಾರ್ಯಲಕ್ಷಣಕ್ಕೆ ಅನುಗುಣವಾಗಿ ಎಂದರ್ಥ. ಭಗವಂತನ ಸ್ಮರಣೆಗೆ ದೇಶ ಕಾಲಗಳ ಅಡ್ಡಿ ಎಂಬುದಿಲ್ಲ. ಸ್ಮರಣೆ ಎಂಬುದು ಮಾನಸಿಕ ವ್ಯಾಪಾರ. ಆದುದರಿಂದ, ಹೇಸಿಗೆಯ ಸ್ಥಳವೂ ನಿಷಿದ್ಧವೆನಿಸುವುದಿಲ್ಲ. ಅಷ್ಟೇ ಅಲ್ಲ; ಭಗವಂತನ ಸ್ಮರಣೆ ಚೆನ್ನಾಗಿರುವುದು ಒಂದು ಬಗೆಯ ಅವಧೂತ ಲಕ್ಷಣವೇ ಸರಿ. ಆಗ (ಹೇಸಿಗೆಯ) ಜಡಸಂಬಂಧದ ಪರಿಣಾಮವು ಮನಸ್ಸಿಗೆ ಅಂಟುವುದಿಲ್ಲ.

**ಪಿಬಂತಿ ಯೇ ಭಗವತ ಆತ್ಮನಃ ಸತಾಂ ಕಥಾಮೃತಂ**
**ಶ್ರವಣಪುಟೇಷು ಸಂಭೃತಂ ।**
**ಪುನಂತಿತೇ ವಿಷಯ ವಿದೂಷಿತಾಶಯಂ ವ್ರಜಂತಿತೇ**
**ತಚ್ಚರಣಸರೋರುಹಾಂತಿಕಂ ॥ ೪೦ ॥**

ಯೇ = ಯಾರು; ಶ್ರವಣ ಪುಟೇಷು = ಕಿವಿಗಳ ವಿವರಗಳಲ್ಲಿ; ಸಂಭೃತಂ = ತುಂಬಿಕೊಳ್ಳುವಂತೆ; ಆತ್ಮನಃ = ಅಂತರಾತ್ಮನಾದ; ಭಗವತಃ = ಗುಣಪೂರ್ಣನಾದ ಶ್ರೀಹರಿಯ; ಕಥಾಮೃತಂ = ಸತ್ಕಥೆಯೆಂಬ ಅಮೃತವನ್ನು; ಸತಾಂ = ಸತ್ಪುರುಷರಾದ ಭಾಗವತರ ವಚನರೂಪವಾದ ಅನುಗ್ರಹದಿಂದ; ಪಿಬಂತಿ = ಪಾನಮಾಡುವರೋ; ತೇ = ಅವರು; ವಿಷಯ ವಿದೂಷಿತ ಆಶಯಂ = ಲೌಕಿಕ ವಿಷಯಗಳಿಂದ ಕಲುಷಿತವಾದ ಮನಸ್ಸನ್ನು; ಪುನಂತಿ = ಪವಿತ್ರಗೊಳಿಸುತ್ತಾರೆ; ತೇ = ಅವರು; ತತ್ ಚರಣ ಸರೋರುಹಾಂತಿಕಂ = ಆ ಶ್ರೀಹರಿಯ ಚರಣಕಮಲಗಳ ಸಾಮೀಪ್ಯವನ್ನು; ವ್ರಜಂತಿ = ಸೇರುತ್ತಾರೆ.

ಭಾಗವತ ಕಥಾ ಶ್ರವಣದಿಂದ ದೋಷ ಪರಿಹಾರ ಮತ್ತು ಉತ್ತಮ ಫಲಪ್ರಾಪ್ತಿ ಈ ಎರಡೂ ಉಂಟಾಗುವುದು.

ದ್ವಿತೀಯಾಧ್ಯಾಯ ಸಮಾಪ್ತಿ

---

# ದ್ವಿತೀಯ ಸ್ಕಂಧ — ಮೂರನೇ ಅಧ್ಯಾಯ

## ಪ್ರಾರಂಭ

॥ ಶ್ರೀಗುರುಭ್ಯೋ ನಮಃ ॥

**ಶ್ರೀಶುಕ ಉವಾಚ** :– ಶ್ರೀಶುಕಾಚಾರ್ಯರು ನುಡಿದರು.

**ಏವಮೇತನ್ನಿಗದಿತಂ ಪೃಷ್ಟವಾನ್ಯದ್ಭವಾನ್ಮಮ ।**
**ನೃಣಾಂಯನ್ಮ್ರಿಯಮಾಣಾನಾಂ ಮನುಷ್ಯೇಷು ಮನೀಷಿಣಾಂ ॥ ೧ ॥**

ಮ್ರಿಯಮಾಣಾನಾಂ = ಸಾವಿನ ಕಡೆಗೆ ಸಾಗುತ್ತಿರುವ; ಮನುಷ್ಯೇಷು = ಮಾನವರಲ್ಲಿ; ಮನೀಷಿಣಾಂ = ಬುದ್ಧಿವಂತರಾದ; ನೃಣಾಂ = ಮನುಷ್ಯರಿಗೆ; ಯತ್ = ಯಾವುದು ಅಗತ್ಯವಾಗಿ ಮಾಡಬೇಕಾದ ಕಾರ್ಯವೆಂದು; ಭವಾನ್ = ನೀನು; ಯತ್ = ಯಾವಪ್ರಶ್ನೆಗೆ ಉತ್ತರವನ್ನು; ಮಮ = ನನ್ನ ಕಡೆಯಿಂದ; ಪೃಷ್ಟವಾನ್ = ಕೇಳಲಪೇಕ್ಷಿಸಿದೆಯೋ; ಏವಂ ಏತತ್ = ಭಗವತ್ಕಥಾಶ್ರವಣದಿಂದ ಜನಿಸುವ ಭಕ್ತಿಯೇ ಸಾಧಿಸಬೇಕಾದುದೆಂದು; ನಿಗದಿತಂ = ಹೇಳಲ್ಪಟ್ಟಿತು.

ಭಗವದ್ಭಕ್ತಿಯ ವೃದ್ಧಿಗೆ ಬೇಕಾದುದೇ ಬುದ್ಧಿವಂತರು ಮಾಡಬೇಕಾದ ಕೆಲಸ.

**ಬ್ರಹ್ಮವರ್ಚಸಕಾಮಸ್ತು ಯಜೇತಬ್ರಹ್ಮಣಸ್ಪತಿಂ ।**
**ಇಂದ್ರಮಿಂದ್ರಿಯ ಕಾಮಸ್ತು ಪ್ರಜಾ ಕಾಮಃ ಪ್ರಜಾಪತೀನ್ ॥ ೨ ॥**

ಬ್ರಹ್ಮವರ್ಚಸ ಕಾಮಃ ತು = ವೇದಾಧ್ಯಯನಾದಿಗಳಿಂದ ಬ್ರಹ್ಮತೇಜಸ್ವಿಯಾಗಬೇಕೆಂದು ಬಯಸುವುದಾದರೆ; ಬ್ರಹ್ಮಣಸ್ಪತಿಂ = ಬೃಹಸ್ಪತ್ಯಾಚಾರ್ಯರನ್ನು; ಯಜೇತ = ಶಾಸ್ತ್ರೋಕ್ತವಿಧಾನದಿಂದಲೂ, ದ್ರವ್ಯಗಳಿಂದಲೂ ಪೂಜಿಸಬೇಕು; ಇಂದ್ರಿಯ ಕಾಮಃ ತು = ಇಂದ್ರಿಯಗಳ ಪಾಟವವನ್ನೂ ಇಂದ್ರಿಯಜಯವನ್ನೂ ಅಪೇಕ್ಷಿಸುವವನು; ಇಂದ್ರಂ = ದೇವೇಂದ್ರನನ್ನು; ಯಜೇತ = ಪೂಜಿಸಬೇಕು; ಪ್ರಜಾಕಾಮಃ = ಪುತ್ರಾಪೇಕ್ಷೆಯುಳ್ಳವನು; ಪ್ರಜಾಪತೀನ್ = ಕಶ್ಯಪಾದಿಗಳನ್ನು; ಯಜೇತ = ಪೂಜಿಸಬೇಕು.

ಪರೀಕ್ಷಿದ್ರಾಜರು ಕೇಳಿದುದು, ಮರಣೋನ್ಮುಖನಾದವನು ಮಾಡಬೇಕಾದ ಕಾರ್ಯವೇನೆಂದು. ಇತರ ವಿಷಯಗಳು ಇಲ್ಲೇಕೆ ಪ್ರಸಕ್ತವಾಗಿವೆ ಎಂಬ ಪ್ರಶ್ನೆ ತಲೆದೋರಬಹುದು. ಇತರ ಅಪೇಕ್ಷೆಗಳನ್ನು ಪೂರೈಸಿಕೊಳ್ಳುವುದು ಕ್ಷಣಿಕ ಫಲಪ್ರದವೆಂದೂ, ಭಗವದ್ಭಕ್ತಿ ಲಾಭವು ನಿರಂತರ ಫಲಪ್ರದವೆಂದೂ ತಿಳಿಸುವುದಕ್ಕಾಗಿ ಅವುಗಳ ಪ್ರಸ್ತಾಪವಿಲ್ಲಿದೆ.

**ದೇವೀಂ ಮಾಯಾಂತು ಶ್ರೀಕಾಮಸ್ತೇಜಸ್ಕಾಮೋ ವಿಭಾವಸುಂ ।**
**ವಸುಕಾಮೋ ವಸೂನ್ ರುದ್ರಾನ್ ವೀರ್ಯಕಾಮಸ್ತು**
**ವೀರ್ಯದಾನ್ ॥ ૩ ॥**

ಶ್ರೀಕಾಮಃ ತು = ಐಶ್ವರ್ಯಾಪೇಕ್ಷಿಯಾದರೆ; ದೇವೀಂ ಮಾಯಾಂ = ಲಕ್ಷ್ಮೀದೇವಿಯನ್ನು; ಯಜೇತ = ಅರ್ಚಿಸಬೇಕು; ತೇಜಸ್ಕಾಮಃ = ದೈಹಿಕ ತೇಜಸ್ಸನ್ನು ಬಯಸುವವನು; ವಿಭಾವಸುಂ = ಅಗ್ನಿಯನ್ನು; ಯಜೇತ = ಅರ್ಚಿಸಬೇಕು; ವಸುಕಾಮಃ = ಸುವರ್ಣ ಮೊದಲಾದ ಸಂಪತ್ತನ್ನು ಬಯಸುವವನು; ವಸೂನ್ = ಅಷ್ಟವಸುಗಳನ್ನೂ; ರುದ್ರಾನ್ = ದಶರುದ್ರರನ್ನೂ; ಯಜೇತ = ಅರ್ಚಿಸಬೇಕು; ವೀರ್ಯಕಾಮಃ ತು = ಬಲಪರಾಕ್ರಮಗಳು ಬೇಕೆನ್ನುವವನು; ವೀರ್ಯದಾನ್ = ವೀರ್ಯಪ್ರದರಾದ ದೇವತೆಗಳನ್ನು; ಯಜೇತ = ಅರ್ಚಿಸಬೇಕು.

ಸಕಲಪುರುಷಾರ್ಥದಾಯಕನು ಪುರುಷೋತ್ತಮನೇ ಆದರೂ, ವೈಯಕ್ತಿಕ ಬಯಕೆಗಳನ್ನು ಬೇರೆ ಬೇರೆ ದೇವತೆಗಳ ದ್ವಾರಾ ಕೊಡುವನು. ಮೋಕ್ಷದಾತೃತ್ವವು ಆ ಯಾರಿಗೂ ಇಲ್ಲ. ಅದು ಪುರುಷೋತ್ತಮನಿಂದಲೇ ದೊರೆಯಬೇಕು.

**ಅನ್ನಾದ್ಯಕಾಮಸ್ತ್ವದಿತಿಂ ಸ್ವರ್ಗಕಾಮೋದಿತೇಃ ಸುತಾನ್ ।**
**ವಿಶ್ವಾನ್ ದೇವಾನ್ರಾಷ್ಟ್ರಕಾಮಃ ಸಾಧ್ಯಾನ್ಸಂಸಾಧಕೋ ವಿಶಾಂ ॥ ೪ ॥**

ಅನ್ನಾದ್ಯಕಾಮಃ = ಅನ್ನ ಮೊದಲಾದ ಖಾದ್ಯಗಳನ್ನು ಬಯಸುವವರು; ಅದಿತಿಂ = ಅದಿತಿ ದೇವಿಯನ್ನೂ; ಸ್ವರ್ಗಕಾಮಃ = ಸ್ವರ್ಗಸುಖವನ್ನಪೇಕ್ಷಿಸುವವನು; ಅದಿತೇಃ ಸುತಾನ್ = ದೇವತೆಗಳನ್ನೂ; ರಾಷ್ಟ್ರಕಾಮಃ = ರಾಜ್ಯಾಪೇಕ್ಷೆಯುಳ್ಳವನು; ವಿಶ್ವಾನ್‌ದೇವಾನ್ = ವಿಶ್ವೇ ದೇವತೆಗಳನ್ನೂ; ವಿಶಾಂ ಸಂಸಾಧಕಃ = ವೈಶ್ಯವೃತ್ತಿಯಲ್ಲಿ ಅಭಿವೃದ್ಧಿಯನ್ನು ಬಯಸುವವನು; ಸಾಧ್ಯಾನ್ = ಸಾಧ್ಯರೆಂಬ ದೇವತಾಗಣದವರನ್ನೂ; ಯಜೇತ = ಪೂಜಿಸಬೇಕು.

ದೇವಗಣದ ಜೀವರ ಯೋಗ್ಯತಾನುಸಾರ ಜಗದ್ವ್ಯಾಪಾರಗಳಲ್ಲಿ ಅವರಿಗೆ ಭಗವಂತನು ಕಾರ್ಯಕ್ಷೇತ್ರಗಳನ್ನು ಹಂಚಿಕೊಟ್ಟು, ಅವರ ಮುಖಾಂತರ ಫಲಗಳನ್ನು ಕೊಡುವುದರಿಂದ, ಆ ದೇವತೆಗಳ ಸಾಧನೆಗಳ ಮಟ್ಟ ನಿರ್ಧಾರವಾಗುವುದು.

**ಆಯುಷ್ಕಾಮೋಶ್ವಿನೌ ದೇವೌ ಪುಷ್ಟಿಕಾಮ ಇಲಾಂ ಯಜೇತ್ ।**
**ಪ್ರತಿಷ್ಠಾಕಾಮಃ ಪುರುಷೋ ರೋದಸೀ ಲೋಕಮಾತರೌ ॥ ೫ ॥**

ಆಯುಷ್ಕಾಮಃ = ಆಯುಷ್ಯವನ್ನು ವೃದ್ಧಿಪಡಿಸಿಕೊಳ್ಳುವ ಅಪೇಕ್ಷೆಯುಳ್ಳವನು; ಅಶ್ವಿನೌದೇವೌ = ಅಶ್ವಿನೀದೇವತೆಗಳನ್ನೂ; ಪುಷ್ಟಿಕಾಮಃ = ದೇಹಪುಷ್ಟಿಯನ್ನು ಬಯಸುವವನು; ಇಲಾಂ = ಭೂದೇವಿಯನ್ನೂ; ಪ್ರತಿಷ್ಠಾಕಾಮಃ ಪುರುಷಃ = ಸ್ಥಾನಭದ್ರತೆಯನ್ನು ಕೋರುವ ಪುರುಷನು; ಲೋಕಮಾತರೌ = ಲೋಕಕ್ಕೆ ತಂದೆ ತಾಯಿಗಳಾದ; ರೋದಸೀ = ಭೂಮ್ಯಂತರಿಕ್ಷಗಳ ಅಭಿಮಾನಿ ದೇವತೆಗಳನ್ನೂ; ಯಜೇತ = ಪೂಜಿಸಬೇಕು.

ಪುರುಷ ಎಂದರೆ– ಪುರೇ = ದೇಹದಲ್ಲಿ; ಶಯಾನಃ = ಸುಖವಾಗಿ ಇರತಕ್ಕ ಜೀವಿ. ಈ ಮಾತು ಗಂಡಸರಿಗೂ ಹೆಂಗಸರಿಗೂ ಸಮಾನ. ಆದುದರಿಂದ, ಪುರುಷ ಎಂದರೆ ಗಂಡಸರಿಗೆ ಮಾತ್ರ ಅನ್ವಯಿಸುವ ಪದವಲ್ಲ. ಮಳೆಯದ್ವಾರಾ ಬೀಜಗಳನ್ನುದುರಿಸುವುದರಿಂದ ಆಕಾಶಾಭಿಮಾನಿಯು ತಂದೆ; ಬೆಳೆಯುವ ಕ್ಷೇತ್ರವಾದುದರಿಂದ ಭೂಮಿಯು ತಾಯಿ.

**ರೂಪಾದಿಕಾಮೋ ಗಂಧರ್ವಾನ್ ಸ್ತ್ರೀಕಾಮೋಪ್ಸರಊರ್ವಶೀಂ ।**
**ಆಧಿಪತ್ಯಕಾಮಃ ಸರ್ವೇಷಾಂ ಯಜೇತ ಪರಮೇಷ್ಠಿನಂ ॥ ೬ ॥**

ರೂಪಾದಿಕಾಮಃ = ಸ್ಫುರದ್ರೂಪಿಯಾಗಬೇಕೆಂಬುವವನು; ಗಂಧರ್ವಾನ್ = ಗಂಧರ್ವರನ್ನೂ; ಸ್ತ್ರೀಕಾಮಃ = ಉತ್ತಮ ಸ್ತ್ರೀಸಂಗವನ್ನು ಬಯಸುವವನು; ಅಪ್ಸರ ಊರ್ವಶೀಂ = ಅಪ್ಸರಸ್ತ್ರೀಯಾದ ಊರ್ವಶಿಯನ್ನೂ; ಸರ್ವೇಷಾಂ ಆಧಿಪತ್ಯಕಾಮಃ = ಎಲ್ಲರ ಮೇಲೆಯೂ ಅಧಿಕಾರವನ್ನು ಪಡೆಯಲಿಚ್ಛಿಸುವವನು; ಪರಮೇಷ್ಠಿನಂ = ಚತುರ್ಮುಖ ಬ್ರಹ್ಮದೇವರನ್ನೂ; ಯಜೇತ = ಪೂಜಿಸಬೇಕು.

ಈ ಶ್ಲೋಕದ ಎರಡನೇ ಪಾದದಲ್ಲಿ ಹದಿನೇಳು ಅಕ್ಷರಗಳಿರುವುದು ಸರಿಯಾಗಿ ಕಾಣುವುದಿಲ್ಲ. ಹೊಣೆ, ಗ್ರಂಥ ಪ್ರಕಟನಕಾರರದು. ''ಆಧಿಪತ್ಯೇತು ಸರ್ವೇಷಾಂ'' ಎಂದಿದ್ದಿರಬಹುದು.

**ಯಜ್ಞಂ ಯಜೇದ್ಯಶಸ್ಕಾಮಃ ಕೋಶಕಾಮಃ ಪ್ರಚೇತಸಂ ।**
**ವಿದ್ಯಾಕಾಮಸ್ತು ಗಿರಿಶಂ ದಾಂಪತ್ಯಾರ್ಥ ಉಮಾಸತೀಂ ॥ ೭ ॥**

ಯಶಸ್ಕಾಮಃ = ಕೀರ್ತಿಕಾಮಿಯಾದವನು; ಯಜ್ಞಂ = ಇಂದ್ರನನ್ನು; ಯಜೇತ = ಪೂಜಿಸಬೇಕು; ಕೋಶಕಾಮಃ = ನಿಧಿಯನ್ನಪೇಕ್ಷಿಸುವವನು; ಪ್ರಚೇತಸಂ = ವರುಣನನ್ನೂ; ವಿದ್ಯಾಕಾಮಃ = ವಿದ್ಯಾಪೇಕ್ಷಿಯಾದವನು; ಗಿರಿಶಂತು = ದಕ್ಷಿಣಾಮೂರ್ತಿಯನ್ನೂ; ದಾಂಪತ್ಯಾರ್ಥೇ = ದಾಂಪತ್ಯವು ಅನುಕೂಲವಾಗಿರಬೇಕಾದರೆ; ಉಮಾಸತೀಂ = ಉಮಾದೇವಿಯನ್ನೂ; ಯಜೇತ = ಪೂಜಿಸಬೇಕು.

ಇಂದ್ರಿಯ ಪಾಟವಫಲ ಬೇರೆ; ಕೀರ್ತಿ ಎಂಬ ಫಲ ಬೇರೆ; ಆದುದರಿಂದ ಎರಡು ಕಡೆಯೂ ಇಂದ್ರನ ಪೂಜೆ ವಿಧಿಸಲಾಗಿದೆ.

**ಧರ್ಮಾರ್ಥಮುತ್ತಮಶ್ಲೋಕಂ ತಂತುತನ್ವನ್ಪಿತೄನ್ಯಜೇತ್ ।**
**ರಕ್ಷಾಕಾಮಃ ಪುಣ್ಯಜನಾನೋಜಸ್ಕಾಮೋ ಮರುದ್ಗಣಾನ್ ॥ ೮ ॥**

ಧರ್ಮಾರ್ಥಂ = ಉತ್ತಮ ಪುಣ್ಯಫಲಪ್ರಾಪ್ತಿಗಾಗಿ; ಉತ್ತಮಶ್ಲೋಕಂ = ವಿಷ್ಣುವನ್ನೂ; ತಂತುಂ ವಿತನ್ವನ್ = ವಂಶಾಭಿವೃದ್ಧಿಯನ್ನಪೇಕ್ಷಿಸಿ; ಪಿತೄನ್ = ಪಿತೃದೇವತೆಗಳನ್ನೂ; ರಕ್ಷಾಕಾಮಃ = ಸುರಕ್ಷಿತವಾಗಿರಬೇಕೆನ್ನುವವನು; ಪುಣ್ಯಜನಾನ್ = ಮಣಿಭದ್ರನೇ ಮೊದಲಾದ ಯಕ್ಷರನ್ನೂ; ಓಜಸ್ಕಾಮಃ = ಅಂತಸ್ಸತ್ವವನ್ನು ಬಯಸುವವನು; ಮರುದ್ಗಣಾನ್ = ಮರುದ್ಗಣದ ದೇವತೆಗಳನ್ನೂ; ಯಜೇತ್ = ಪೂಜಿಸಬೇಕು.

ದೇವತೆಗಳೆಲ್ಲಾ ಪುಣ್ಯಶ್ಲೋಕರು. ವಿಷ್ಣುವು ಸರ್ವೋತ್ತಮನಾದುದರಿಂದ ಉತ್ತಮಶ್ಲೋಕನೆನಿಸಿದ್ದಾನೆ. ನಲವತ್ತೊಂಭತ್ತು ಮಂದಿ ಮರುತ್ತುಗಳು. ಅವರು ಏಳು ಗುಂಪುಗಳಾಗಿ ವಿಂಗಡಿಸಲ್ಪಟ್ಟು ಏಳು ಬಗೆಯ ಸ್ಥಾನಗಳಲ್ಲಿ ಕಾರ್ಯನಿರತರಾಗಿದ್ದಾರೆ.

**ರಾಜ್ಯಕಾಮೋ ಮನೂನ್ದೇವಾನ್ನಿರ್ಋತಿಂ ತ್ವಭಿಚರನ್ಯಜೇತ್ ।**
**ಕಾಮಕಾಮೋಯಜೇತ್ಸೋಮಮಕಾಮಃ ಪುರುಷಂ ಪುಮಾನ್ ॥ ೯ ॥**

ರಾಜ್ಯಕಾಮಃ = ರಾಜ್ಯಲಾಭವಾಗಬೇಕೆನ್ನುವವನು; ಮನೂನ್ ದೇವಾನ್ = ಮನು ದೇವತೆಗಳನ್ನೂ; ಅಭಿಚರನ್ = ಪರೋಪದ್ರವಕಾರಕವಾದ ಅಭಿಚಾರ ವಿದ್ಯೆಯನ್ನು ಅಭ್ಯಾಸಮಾಡುವವನು; ನಿರ್ಋತಿಂ ತು = ಕೋಣದಿಗಭಿಮಾನಿಯಾದ

ನಿರಾಕುತಿಯನ್ನೂ; ಕಾಮ ಕಾಮಃ = ವಿವಿಧ ಇಚ್ಛೆಗಳನ್ನು ಪೂರೈಸಿಕೊಳ್ಳಬೇಕೆನ್ನುವವನು; ಸೋಮಂ = ಚಂದ್ರನನ್ನೂ; ಅಕಾಮಃ = ನಿಷಿದ್ಧವಾದ ಅಪೇಕ್ಷೆಗಳಿಲ್ಲವನು; ಪುರುಷಂ = ಪೂರ್ಣಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವನ್ನೂ; ಯಜೇತ್ = ಪೂಜಿಸಬೇಕು.

ಅಭಿಚಾರ ವಿದ್ಯೆಯನ್ನು ಅಭ್ಯಾಸಮಾಡುವವರು ಸಾಮಾನ್ಯವಾಗಿ ದುಷ್ಟರು. ಆದರೆ, ಅಂತಹ ದುಷ್ಟರ ಪ್ರಯೋಗವನ್ನು ಎದುರಿಸಲು ಶಿಷ್ಟರಿಗೂ ಅಭಿಚಾರ ವಿದ್ಯೆ ತಿಳಿದಿರಬೇಕು. ಅಕಾಮಃ ಎಂದರೆ ಯಾವ ಅಪೇಕ್ಷೆಯೂ ಇಲ್ಲದವನೆಂದಲ್ಲ. ಅಕಾರವಾಚ್ಯನಾದ ಪರಮಾತ್ಮನ ಪ್ರಸಾದವನ್ನಪೇಕ್ಷಿಸುವುದೂ ಕಾಮವೆಂದೇ ಕರೆಸಿಕೊಳ್ಳುವುದು. ಅದು ನಿಷಿದ್ಧವಲ್ಲ. ಅಂತಹ ಕಾಮ ವಿರಲೇಬೇಕೆಂಬುದು ಭೀಮಸೇನದೇವರ ಮತ. ಈ ಶ್ಲೋಕದ ಮೊದಲನೇ ಪಾದದಲ್ಲಿಯೂ ೧೭ ಅಕ್ಷರಗಳಿವೆ.

**ಅಕಾಮಃ ಸರ್ವಕಾಮೋವಾ ಮೋಕ್ಷಕಾಮ ಉದಾರಧೀಃ ।**
**ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಂ ॥ ೧೦ ॥**

ಅಕಾಮಃ = ನಿಷಿದ್ಧಕಾಮವಲ್ಲದೇ ಭಗವತ್ಪ್ರಸಾದ ಮಾತ್ರ ಕಾಮಿಯಾಗಲೀ; ಸರ್ವಕಾಮಃ ವಾ = ಇತರ ದೇವತೆಗಳಿಂದ ಬಗೆ ಬಗೆಯ ಎಲ್ಲಾ ಫಲಗಳನ್ನೂ ಅಪೇಕ್ಷಿಸುವವನಾಗಲೀ; ಉದಾರಧೀಃ ಮೋಕ್ಷಕಾಮಃ = ನೇರವಾದ ಮುಕ್ತಿಪಥವನ್ನು ಹಿಡಿದವನಾಗಲೀ; ತೀವ್ರೇಣ ಭಕ್ತಿಯೋಗೇನ = ಪ್ರಬಲವಾದ ಭಕ್ತಿಮಾರ್ಗದಿಂದ; ಪರಂ ಪುರುಷಂ = ಪುರುಷೋತ್ತಮನಾದ ವಿಷ್ಣುವನ್ನು; ಯಜೇತ = ಪೂಜಿಸಬೇಕು.

ಅನ್ಯದೇವತೆಗಳಿಂದ ಬೇರೆ ಬೇರೆ ಇಷ್ಟಾರ್ಥಗಳನ್ನು ಬಯಸುವಾಗ, ಅವರಲ್ಲಿದ್ದು ಫಲ ಕೊಡುವವನು ಪುರುಷೋತ್ತಮನೇ ಎಂದು ತಿಳಿದು, ಆ ಫಲಗಳ ವಿನಿಯೋಗವು ಪುರುಷೋತ್ತಮನ ಪ್ರಸಾದ ಪ್ರಾಪ್ತಿಗಾಗಿಯೇ ಎಂಬ ಅನುಸಂಧಾನವಿದ್ದರೆ ಅದು ಸಾರ್ಥಕ.

**ಏತಾವಾನೇವ ಯಜತಾಮಿಹ ನಿಃಶ್ರೇಯಸೋದಯಃ ।**
**ಭಗವತ್ಯಚಲೋ ಭಾವೋ ಯದ್ಭಾಗವತ ಸಂಗತಃ ॥ ೧೧ ॥**

ಯಜತಾಂ = ಕಾಮ್ಯಫಲಸಿದ್ಧಿಗಾಗಿ ವಿವಿಧ ದೇವತೆಗಳನ್ನು ಪೂಜಿಸುವಾಗ; ಯತ್ ಭಾಗವತ ಸಂಗತಃ = ಯಾವುದು ಪುರುಷೋತ್ತಮನಾದ ಭಗವಂತನ ಪೂಜೆಯೇ ಎಂದು ಆಚರಿಸಲ್ಪಡುವುದೋ ಅದು; ಇಹ = ಇಲ್ಲಿ; ನಿಃಶ್ರೇಯಸೋದಯಃ =

ಉತ್ತಮಫಲ ದೊರಕಿಸುವಂತಹುದು; ಭಗವತಿ ಅಚಲಃ ಭಾವಃ = ಭಗವಂತನಲ್ಲಿ ನಿಶ್ಚಲವಾದ ಭಕ್ತಿಯೆಂಬುದು; ಏತಾವಾನ್ ಏವ = ಇದೇ ಆಗಿರುವುದು.

ಸಾಧಕನ ಮೊದ ಮೊದಲ ಹಂತಗಳಲ್ಲಿ ತೀವ್ರ ವೈರಾಗ್ಯವೆಂಬುದು ಸುಲಭಸಾಧ್ಯವಲ್ಲ. ಇಹಜೀವನಕ್ಕೆ ಸಂಬಂಧಿಸಿದ ಆಶೋತ್ತರಗಳು ಇದ್ದೇ ಇರುವುವು. ಆದುದರಿಂದ ಅಂತಹ ಫಲಗಳನ್ನು ಶೀಘ್ರವಾಗಿ ಕೊಡುವ ಅನ್ಯ ದೇವತೆಗಳ ಪೂಜೆಯು ವಿಹಿತವೆಂದೇ ಹೇಳಲಾಗಿದೆ. ಆದರೆ, ಆಯಾ ದೇವತೆಗಳ ಹೆಸರುಗಳಿಂದ ಅವರುಗಳಲ್ಲಿದ್ದು ಫಲ ಕೊಡುವವನೂ ಪುರುಷೋತ್ತಮನೇ ಎಂಬ ತಿಳುವಳಿಕೆಯಿಂದ ಅನ್ಯದೇವತಾ ಪೂಜೆಗಳನ್ನು ಆಚರಿಸಿದರೆ, ಕ್ರಮಕ್ರಮವಾಗಿ ಭಕ್ತಿ ವೈರಾಗ್ಯಗಳು ಉಂಟಾಗುವವು. ಆದುದರಿಂದ ಅಂತಹ ಪೂಜೆಯು ಪ್ರಯೋಜನಕರವೇ ಆಗಿರುವುದು. "ಏತಾವಾನ್ ಏವ" ಎಂಬ ಮಾತಿನ ಅರ್ಥವಿದು.

**ಜ್ಞಾನಂ ಯದಾ ಪ್ರತಿನಿವೃತ್ತ ಗುಣೋರ್ಮಿಚಕ್ರಮಾತ್ಮಪ್ರಸಾದ**
**ಉಭಯತ್ರಗುಣೇಷ್ವಸಂಗಃ ।**
**ಕೈವಲ್ಯ ಸಂಭೃತ ಪಥಸ್ತ್ವಥಭಕ್ತಿಯೋಗಃ ಕೋ**
**ನಿರ್ವೃತೋ ಹರಿಕಥಾಸುರತಿಂ ನ ಕುರ್ಯಾತ್ ॥ ೧೨ ॥**

ಯದಾ = ಯಾವಾಗ, ಕಾಮ್ಯಾರ್ಥಪೂಜಾಕಾಲದಲ್ಲಿ ಭಕ್ತರ ನಡುವೆ ಭಗವತ್ಕಥಾಶ್ರವಣವಾಗುವುದೋ; (ತದಾ = ಆಗ); ಜ್ಞಾನಂ = ಭಗವದ್ಭಕ್ತಿಯಿಂದ ಭಗವಂತನ ಮಾಹಾತ್ಮ್ಯಜ್ಞಾನವುಂಟಾಗುವುದು; ನಿವೃತ್ತ ಗುಣೋರ್ಮಿಚಕ್ರಂ = ಸತ್ವಾದಿಗುಣಕಾರ್ಯಗಳಾದ ಹಸಿವು, ನೀರಡಿಕೆ, ಶೋಕ, ಮೋಹ, ರಾಗ ಮತ್ತು ದ್ವೇಷಗಳೆಂಬ ಪ್ರಾಕೃತ ಪ್ರವಾಹಗಳ ಪರಿಣಾಮವಿಲ್ಲದಂತಾಗಿ; ಉಭಯತ್ರಗುಣೇಷು ಅಸಂಗಃ = ಇಹಲೋಕದಲ್ಲಿಯೂ ಸ್ವರ್ಗಾದಿ ಪರಲೋಕಗಳಲ್ಲಿಯೂ ಭೋಗ ಫಲಾಸಕ್ತಿಯಿಲ್ಲದೆ; ಆತ್ಮಪ್ರಸಾದಃ = ಮನಶ್ಶುದ್ಧಿಯುಂಟಾಗುವುದು; ಅಥ = ಆದರಿಂದ; ಕೈವಲ್ಯಸಂಭೃತಪಥಃ = ಭಗವದಪರೋಕ್ಷ ಉಂಟಾಗಿ, ಮೋಕ್ಷಸಾಧಕ ಮಾರ್ಗವಾದ; ಭಕ್ತಿಯೋಗಃ = ಪರಿಪಕ್ವ ಭಕ್ತಿಯೋಗ ಉಂಟಾಗುವುದು; (ಆದುದರಿಂದ); ನಿರ್ವೃತಃ = ವೈರಾಗ್ಯದಿಂದ ಸಂತುಷ್ಟಚಿತ್ತನಾದ; ಕಃ = ಯಾವನು; ಹರಿಕಥಾಸು = ಭಗವಂತನ ಮಹಿಮಾ ಶ್ರವಣದಲ್ಲಿ; ರತಿಂ = ಆಸಕ್ತಿಯನ್ನು; ನ ಕುರ್ಯಾತ್ = ಹೊಂದಿರುವುದಿಲ್ಲ ?

ಮೋಕ್ಷೋಪಯೋಗಿಯಾದ ಭಕ್ತಿಯೋಗವೆಂಬುದು ಸುಲಭವಾಗಿ ಒದಗುವುದಲ್ಲ. ಅದು ಕ್ರಮ ಕ್ರಮವಾಗಿ ಅಭ್ಯಾಸವಾಗಬೇಕು. ಜ್ಞಾನ ಮತ್ತು

ವೈರಾಗ್ಯಗಳು ಭಕ್ತಿಯೋಗಕ್ಕೆ ಪೋಷಕವಾದವು. ಭಕ್ತಿಯೇ ಪ್ರಧಾನ. ಫಲಾಪೇಕ್ಷೆಯಿಂದ ಪೂಜಾದಿಗಳನ್ನು ಮಾಡುವಾಗ, ಸಜ್ಜನರ ನಡುವೆ ಭಗವತ್ಕಥಾ ಶ್ರವಣದಿಂದ ಭಗವಂತನ ಮಹಿಮಾಜ್ಞಾನ ಉಂಟಾಗುವುದು. ಆದರಿಂದ ಲೌಕಿಕ ವಿಷಯಗಳಲ್ಲಿ ಆಸಕ್ತಿಯು ಕಡಿಮೆಯಾಗಿ, ಭಗವಂತನಲ್ಲಿ ಭಕ್ತಿಯು ಅಂಕುರಿಸುವುದು. ತೀವ್ರ ವೈರಾಗ್ಯದಿಂದ ಆ ಭಕ್ತಿಯು ಪಕ್ವವಾಗಿ ಭಗವದಪರೋಕ್ಷ ಉಂಟಾಗುವುದು. ಅನಂತರ ಜ್ಞಾನ ವೃದ್ಧಿಯಿಂದಲೂ, ಪೂರ್ಣ ವೈರಾಗ್ಯದಿಂದಲೂ, ಅತಿಪರಿಪಕ್ವ ಭಕ್ತಿಯೋಗ ಉಂಟಾಗುವುದು. ಅದರಿಂದಲೇ ಮುಕ್ತಿ.

ಭಕ್ತಿಯೋಗವೆಂಬುದು ಭಗವಂತನಲ್ಲಿ ಕುದುರಿಕೊಳ್ಳುವ ಗಾಢವಾದ ಸ್ನೇಹ. ಅದು ಜೀವ ಸ್ವರೂಪದ ಪೂರ್ಣ ಅಭಿವ್ಯಕ್ತಿಗೆ ಅತ್ಯಾವಶ್ಯಕ.

**ಶೌನಕ ಉವಾಚ** :– ಶೌನಕರು ಕೇಳಿದರು.

**ಇತ್ಯಭಿವ್ಯಾಹೃತಂ ರಾಜಾ ನಿಶಮ್ಯ ಭರತರ್ಷಭಃ ।**
**ಕಿಮನ್ಯತ್ಪೃಷ್ಟವಾನ್ ಭೂಯೋ ವೈಯಾಸಕಿಮೃಷಿಂ ಕವಿಂ** ॥ ೧೩ ॥

ಇತಿ ಅಭಿವ್ಯಾಹೃತಂ = ಈ ರೀತಿಯಾಗಿ ಹೇಳಿದ ಭಗವತ್ಕಥಾಶ್ರವಣದ ಆವಶ್ಯಕತೆಯನ್ನು; ನಿಶಮ್ಯ = ಆಲಿಸಿ; ಭರತರ್ಷಭಃ = ಭರತಕುಲಶ್ರೇಷ್ಠನಾದ; ರಾಜಾ = ಪರೀಕ್ಷಿದ್ರಾಜನು; ಋಷಿಂ = ತ್ರಿಕಾಲಜ್ಞಾನಿಯಾದ; ಕವಿಂ = ಭಗವದಪರೋಕ್ಷಜ್ಞಾನಿಯಾದ; ವೈಯಾಸಕಿಂ = ವ್ಯಾಸಪುತ್ರರಾದ ಶುಕಾಚಾರ್ಯರನ್ನು; ಭೂಯಃ = ಪುನಃ; ಕಿಂ ಅನ್ಯತ್ = ಬೇರೆ ಯಾವ ವಿಷಯವನ್ನು ಕುರಿತು; ಪೃಷ್ಟವಾನ್ = ಪ್ರಶ್ನೆ ಮಾಡಿದನು ?

ಪರೀಕ್ಷಿದ್ರಾಜನಂತಹ ಮುಕ್ತಿಯೋಗ್ಯ ಜೀವಿ, ಶುಕಾಚಾರ್ಯರಂತಹ ಪರಿಪಕ್ವ ಜ್ಞಾನಿಗಳು, ನೆರೆದ ಋಷಿಸಮೂಹ, ಇಂತಹ ಸನ್ನಿವೇಶದಲ್ಲಿ ಏನೇನು ನಡೆಯಿತೋ ಆ ಎಲ್ಲವನ್ನೂ ತಿಳಿಯಬೇಕೆಂದು ಆಕಾಂಕ್ಷೆ, ಶೌನಕಾದಿ ಋಷಿಗಳಿಗೆ.

**ಏತಚ್ಛುಶ್ರೂಷತಾಂ ವಿದ್ವನ್ಸೂತ ನೋಽರ್ಹಸಿಭಾಷಿತುಂ ।**
**ಕಥಾ ಹರಿಗುಣೋದರ್ಕಾಃ ಸತಾಂ ಸ್ಯುಃ ಸದಸಿ ಧ್ರುವಂ** ॥ ೧೪ ॥

ಸತಾಂ ಸದಸಿ = ಭಗವದ್ಭಕ್ತರಾದ ಸಜ್ಜನರ ಸಮೂಹದಲ್ಲಿ; ಹರಿಗುಣೋದರ್ಕಾಃ = ಉದಯ ಸೂರ್ಯನಂತೆ ಜ್ಞಾನದ ಬೆಳಕನ್ನು ಪ್ರಸಾರ ಮಾಡುವ ಶ್ರೀಹರಿಯ ಗುಣಾನುವರ್ಣನೆಯು; ಧ್ರುವಂ = ಇದು ಸಹಜ ನಿಯಮ; ವಿದ್ವನ್ ಸೂತ = ವಿಷಯಗಳನ್ನು ಚೆನ್ನಾಗಿ ಬಲ್ಲವನಾದ, ಎಲೈ ಸೂತಪೌರಾಣಿಕನೇ; ಶುಶ್ರೂಷತಾಂ ನಃ =

ಶ್ರದ್ಧೆಯಿಂದ ಕೇಳಲಿಚ್ಛಿಸುವ ನಮಗೆ; ಏತತ್ = ವಿದ್ವಜ್ಜನರ ಮಾತು ಕಥೆಗಳನ್ನು ಕುರಿತು; ಭಾಷಿತುಂ = ಹೇಳಲು; ಅರ್ಹಸಿ = ನೀನು ಸಮರ್ಥನಾಗಿರುವಿ.

ಭಗವದ್ಭಕ್ತರಾದ ಸಜ್ಜನರ ಸಮೂಹದಲ್ಲಿ ಭಗವಂತನ ಗುಣಗಾನದ ಹೊರತು ಅನ್ಯವಾದ ಲೌಕಿಕ ವಾರ್ತೆಗಳ ಪ್ರಸಂಗವಿರುವುದಿಲ್ಲ ಎಂಬುದು ಸಹಜ ನಿಯಮ. ಅದನ್ನು ಬಲ್ಲವರು ಶೌನಕಾದಿ ಮಹರ್ಷಿಗಳು.

**ಸವೈಭಾಗವತೋರಾಜಾ ಪಾಂಡವೇಯೋ ಮಹಾರಥಃ ।**
**ಬಾಲಕ್ರೀಡನಕೈಃ ಕ್ರೀಡನ್ ಕೃಷ್ಣಕ್ರೀಡಾಂಯ ಆದದೇ ॥ ೧೫ ॥**

ಬಾಲಕ್ರೀಡನಕೈಃ = ಮಕ್ಕಳ ಆಟಿಕೆಗಳನ್ನಿಟ್ಟುಕೊಂಡು; ಕ್ರೀಡನ್ = ಆಟವಾಡುತ್ತಲೇ; ಯಃ = ಯಾವಾತನು; ಕೃಷ್ಣಕ್ರೀಡಾಂ = ಶ್ರೀಕೃಷ್ಣನ ಕ್ರೀಡೆಗಳನ್ನು; ಆದದೇ = ಆದರದಿಂದ ಸ್ವೀಕಾರ ಮಾಡಿದನೋ; ಸಃ ಪಾಂಡವೇಯಃ ರಾಜಾ ವೈ = ಆ ಪಾಂಡವ ವಂಶೀಯನಾದ ರಾಜನಾದರೋ; ಮಹಾರಥಃ = ರಥಿಕರಲ್ಲಿ ಶ್ರೇಷ್ಠನಾದವನು; ಭಾಗವತಃ = ಭಗವದ್ಭಕ್ತನಾದವನು.

ಪರೀಕ್ಷಿದ್ರಾಜನು ಮಕ್ಕಳಂತೆ ಆಟವಾಡುತ್ತಿದ್ದವನೆಂದರೆ, ಲೌಕಿಕ ವ್ಯವಹಾರಗಳಲ್ಲಿ ತೊಡಗಿದ್ದವನು ಎಂದರ್ಥ. ಸಂಸಾರದ ವ್ಯವಹಾರಗಳನ್ನು ಎಷ್ಟೇ ಜಾಣತನದಿಂದ ನಿರ್ವಹಿಸಿದರೂ, ಅದು ಕೇವಲ ಮಕ್ಕಳಾಟದಂತೆ ಇಹ ಸುಖಕ್ಕೆ ಕಾರಣವಾಗಬಲ್ಲುದೇ ಹೊರತು, ಪರಲೋಕಸಾಧನವಾಗಲಾರದು. ಪರೀಕ್ಷಿದ್ರಾಜನು ಮಹಾರಥಿಕನಾಗಿದ್ದನೆಂದರೆ, ಲೌಕಿಕವಾದ ರಾಜಕಾರ್ಯಗಳನ್ನು ಉತ್ತಮರೀತಿಯಲ್ಲಿ ನಡೆಸಿದವನು ಎಂದರ್ಥ. ಆ ರಾಜನು ಮಹಾರಥಿಕನಾದರೂ, ಭಾಗವತನೆಂಬುದು ಗಮನಾರ್ಹ. ಆದುದರಿಂದ, ಆತನು ಋಷಿಸಮೂಹದಲ್ಲಿ ಕುಳಿತು, ಶುಕಾಚಾರ್ಯರಂತಹ ಜ್ಞಾನಿವರೇಣ್ಯರಿಂದ ಭಗವತ್ಕಥಾಶ್ರವಣ ಮಾಡಲು ಅರ್ಹನೇ ಆಗಿದ್ದ. ಆ ಸಭೆಗೆ ಹೊರತಾದವನಾಗಿರಲಿಲ್ಲ.

**ವೈಯಾಸಕಿಶ್ಚ ಭಗವಾನ್ ವಾಸುದೇವ ಪರಾಯಣಃ ।**
**ಉರುಗಾಯ ಗುಣೋದಾರಾಃ ಸತಾಂ ಸ್ಯುರ್ಹಿಸಮಾಗಮೇ ॥ ೧೬ ॥**

ಭಗವಾನ್ = ತಪೋಧನಪೂರ್ಣರಾದ; ವೈಯಾಸಕಿಃ ಚ = ವ್ಯಾಸಪುತ್ರರಾದ ಶುಕಾಚಾರ್ಯರಾದರೋ; ವಾಸುದೇವ ಪರಾಯಣಃ = ಸದಾ ಶ್ರೀಹರಿಯಲ್ಲಿಯೇ ಆಸಕ್ತವಾದ ಮನಸ್ಸುಳ್ಳವರು; ಸತಾಂ ಸಮಾಗಮೇ = ಇಂತಹ ಸಜ್ಜನರು ಕೂಡಿದಲ್ಲಿ; ಉರುಗಾಯ ಗುಣೋದಾರಾಃ = ವೇದವಿದರಾದ ಜ್ಞಾನಿಶ್ರೇಷ್ಠರಿಂದ ವರ್ಣಿಸಲ್ಪಡುವ ಭಗವಂತನ ದಿವ್ಯ ಗುಣಕಥನಗಳೇ; ಸ್ಯುಃ ಹಿ = ಕೇಳಿಬರುವುವು ಎಂಬುದು ನಿಜ.

ಸಜ್ಜನರು ಕೂಡಿದ ಕಡೆಯಲ್ಲಿ ಕೆಲವು ವೇಳೆ ಅಪಕ್ವಬುದ್ಧಿಯ ಸುಜನರೂ ಬಂದು ಸೇರಿರಬಹುದು. ಆಗಿನ ಕಥಾಲಾಪಗಳ ನಡುವೆ ಅವರ ಮಾತುಗಳು ಅಪಶ್ರುತಿಯಂತೆ ಆಗಬಹುದು. ಆದರೆ, ಪರೀಕ್ಷಿದ್ರಾಜರ ಸುಯೋಗದಿಂದ ಅವರಿಗೆ ಉಪದೇಶ ಮಾಡಲು ಬಂದ ಗುರುಗಳು ಶುಕಾಚಾರ್ಯರಂತಹ ವಾಸುದೇವಪರಾಯಣರು; ಅಲ್ಲಿ ಸೇರಿದ್ದ ಋಷಿಗಳೂ ಮಹಾಜ್ಞಾನಿಗಳಾದ ಭಗವದ್ಭಕ್ತರು.

**ಆಯುರ್ಹರತಿ ವೈ ಪುಂಸಾಮುದ್ಯನ್ನಸ್ತಂ ಚಯನ್ನಸೌ ।**
**ತಸ್ಯರ್ತೇಯಃಕ್ಷಣೋನೀತ ಉತ್ತಮ ಶ್ಲೋಕವಾರ್ತಯಾ ॥ ೧೭ ॥**

ತಸ್ಯ ಉತ್ತಮ ಶ್ಲೋಕ ವಾರ್ತಯಾ ಋತೇ = ಆ ಭಗವಂತನ ಪುಣ್ಯಕರವಾದ ಲೀಲಾವಿಲಾಸಗಳನ್ನು ಕೇಳದೇ; ಯಃ ಕ್ಷಣಃ ನೀತಃ = ಯಾವ ಘಳಿಗೆಯಂತಹ ಕಾಲವಿಶೇಷವು ಕಳೆಯುವುದೋ; (ಅದರಿಂದ); ಅಸೌ = ಸೂರ್ಯ ಭಗವಾನನು; ಉದ್ಯನ್ ಅಸ್ತಂ ಚಯನ್ = ತನ್ನ ಉದಯಾಸ್ತಗಳ ಕ್ರಮದಿಂದ; ಪುಂಸಾಂ = ಮಾನವರ; ಆಯುಃ = ಆಯುರ್ಮಾನವನ್ನು; ಹರತಿ = ಕಳೆದು ಬಿಡುತ್ತಾನೆ.

ಭಗವಂತನ ವಿಚಾರವನ್ನು ಚಿಂತಿಸದೆ ಕಳೆದ ಪ್ರತಿಯೊಂದು ಘಳಿಗೆಯೂ ಜೀವನವನ್ನು ವ್ಯರ್ಥವಾಗಿಸುತ್ತದೆ ಎಂಬುದು ತಾತ್ಪರ್ಯ.

**ತರವಃ ಕಿಂ ನ ಜೀವಂತಿ ಭಸ್ತ್ರಾಃ ಕಿಂ ನ ಶ್ವಸಂತ್ಯುತ ।**
**ನಖಾದಂತಿ ನಮೇಹಂತಿ ಕಿಂ ಗ್ರಾಮಪಶವೋಪರೇ ॥ ೧೮ ॥**

ತರವಃ = ವೃಕ್ಷಗಳು; ಕಿಂ ನ ಜೀವಂತಿ = ಜೀವಧಾರಣೆಯನ್ನು ಮಾಡಿರುವುದಿಲ್ಲವೆ ? ಭಸ್ತ್ರಾಃ = ಕುಲುಮೆಯಲ್ಲಿ ಬೆಂಕಿಯನ್ನು ಉಜ್ವಲಗೊಳಿಸುವ ಚರ್ಮದ ತಿತ್ತಿಗಳು; ಉತ = ಕಂಡ ಹಾಗೆ; ಕಿಂ ನ ಶ್ವಸಂತಿ = ಗಾಳಿಯನ್ನು ತೆಗೆದುಕೊಂಡು ಬಿಡುವ ಶ್ವಾಸೋಚ್ಛ್ವಾಸ ಕಾರ್ಯವನ್ನು ನಡೆಸುವುದಿಲ್ಲವೆ ?ಅಪರೇ = ಇತರ ಜೀವಿಗಳಾದ; ಗ್ರಾಮಪಶವಃ = ನಾಯಿಗಳಂತಹ ಪ್ರಾಣಿಗಳು; ನ ಖಾದಂತಿ ಕಿಂ = ಹೊಟ್ಟೆ ತುಂಬಿಕೊಳ್ಳುವುದಿಲ್ಲವೇ ?ನ ಮೇಹಂತಿ ಕಿಂ = ಮೂತ್ರ ರೇತಸ್ಸುಗಳನ್ನು ವಿಸರ್ಜಿಸುವುದಿಲ್ಲವೇ ?

ಜೀವಂತವಾಗಿರುವದು, ಶ್ವಾಸೋಚ್ಛ್ವಾಸ ನಡೆಸುವುದು, ಊಟ ಮಾಡುವುದು, ರೇತೋತ್ಸರ್ಜನ ಮಾಡುವುದು, ಪ್ರಾಣಿ ಮಾತ್ರಗಳಿಗೆ ಸಹಜವಾದುದು. ಕಾರುಕನ ತಿತ್ತಿಯೂ ಶ್ವಾಸೋಚ್ಛ್ವಾಸ ನಡೆಸುವುದು. ಆದುದರಿಂದ, ಭಗವಂತನ ಕಥಾಲಾಪದಲ್ಲಿ

ಆಸಕ್ತಿಯಿಲ್ಲದ ಮಾನವರು ಕೇವಲ ನಾಯಿ ಬೆಕ್ಕುಗಳಿಗೆ ಸಮಾನರೇ ಹೊರತು, ಸಾರ್ಥಕ ಜೀವಿಗಳಲ್ಲ ಎಂದ ಹಾಗಾಯಿತು.

**ಶ್ವವಿಡ್ವರಾಹೋಷ್ಟ್ರಖರೈಃ ಸತುಲ್ಯಃ ಪುರುಷಃ ಪಶುಃ ।**
**ನಯತ್ಕರ್ಣಪಥೋಪೇತೋ ಜಾತು ನಾಮ**
**ಗದಾಗ್ರಜಃ(ಗದಾಭೃತಃ) ॥ ೧೯ ॥**

ಜಾತು = ಯಾವಾಗಲೊಮ್ಮೆಯಾದರೂ; ಗದಾಗ್ರಜಃ(ಇತಿ)ನಾಮ = ಬಲರಾಮನ ತಮ್ಮನೆನಿಸಿದ ಶ್ರೀಕೃಷ್ಣನ; ನಾಮ = ಕೀರ್ತಿಕರವಾದ ಹೆಸರು; (ಗದಾಭೃತಃ = ಗದಾಧರನೆನಿಸಿದ ಶ್ರೀಕೃಷ್ಣನ; ನಾಮ = ಕೀರ್ತಿಕರವಾದ ಹೆಸರು). ನ ಯತ್ ಕರ್ಣಪಥ ಉಪೇತಃ = ಯಾರ ಕಿವಿಯನ್ನು ಮುಟ್ಟುವುದಿಲ್ಲವೋ; ಸಃ ಪಶುಃ ಪುರುಷಃ = ಆ ಪಶುಪ್ರಾಯನಾದ ಮಾನವನು; ಶ್ವಃ = ನಾಯಿ; ವಿಟ್ ವರಾಹಃ = ಅಮೇಧ್ಯ ತಿನ್ನುವ ಹಂದಿ; ಉಷ್ಟ್ರಃ = ಎಮ್ಮೆ; ಖರೈಃ = ಕತ್ತೆ ಮೊದಲಾದ ಪ್ರಾಣಿಗಳಿಗೆ; ತುಲ್ಯಃ = ಸಮನಾದವನು.

ಅಸಹ್ಯವಾದ ಆಹಾರವನ್ನು ತಿನ್ನುತ್ತಾ, ಮೌಢ್ಯದಿಂದ ಕಾಲಕಳೆಯುವ ಜೀವಿಗಳಿಗೆ ಭಗವದ್ಭಕ್ತನಲ್ಲದ ಮಾನವನನ್ನು ಹೋಲಿಸಿ, ಹೀಯಾಳಿಸಿದ್ದಾರೆ.

**ಬಿಲೇಬತೋರುಕ್ರಮ ವಿಕ್ರಮಾನ್ಯೇನಶೃಣ್ವತಃ ಕರ್ಣಪುಟೇ ನರಸ್ಯ ।**
**ಜಿಹ್ವಾಽಸತೀದಾರ್ದುರಿಕೇವ ಸೂತ**
**ನಚೋತ್ಪ್ರಗಾಯತ್ಯುರುಗಾಯಗಾಥಾಂ ॥ ೨೦ ॥**

ಯೇ = ಯಾವ; ನರಸ್ಯ = ಮಾನವನ; ಕರ್ಣಪುಟೇ = ಕಿವಿಯ ವಿವರಗಳು; ಉರುಕ್ರಮ ವಿಕ್ರಮಾನ್ = ಸರ್ವಸಮರ್ಥನಾದ ಶ್ರೀಹರಿಯ ಅಸಾಧಾರಣ ವ್ಯಾಪಾರಗಳ ಕಥೆಯನ್ನು, ನ ಶೃಣ್ವತಃ = ಕೇಳದಿರುವುವೋ, ಅವು; ಬತ = ನಿಜವಾಗಿ; ಬಿಲೇ = ಬೆಟ್ಟದ ಗುಹೆಗಳೇ ಸರಿ; ಸೂತ = ಹೇ, ಸೂತ; ಉರುಗಾಯ ಗಾಥಾಂ = ಮಹಾಕೀರ್ತಿಶಾಲಿಯಾದ ಪರಮಾತ್ಮನ ಮಹಿಮೆಗಳನ್ನು; ಪ್ರಗಾಯತಿ ನ ಚೇತ್ = ಕೀರ್ತಿಸದೆ ಹಾಳು ಹರಟೆಗೆ ಉಪಯೋಗವಾಗುವ; ಜಿಹ್ವಾ = ನಾಲಿಗೆಯು; ಅಸತಿ = ಅಸಭ್ಯವಾದ; ದಾರ್ದುರಿಕ(ಜಿಹ್ವಾ) ಇವ = ಒಟಗುಟ್ಟುವ ಕಪ್ಪೆಯ ನಾಲಿಗೆಯಂತೆ.

ಬುದ್ಧಿವಂತನಾದ ಮಾನವನು ತನ್ನ ಇಂದ್ರಿಯಗಳನ್ನು ಶ್ರೀಹರಿಕಥಾಶ್ರವಣಾದಿಗಳಿಂದ ಸಾರ್ಥಕಪಡಿಸಿಕೊಳ್ಳಬೇಕು.

**ಭಾರಃ ಪರಃ ಪಟ್ಟ ಕಿರೀಟ ಜುಷ್ಟಮಪ್ಯುತ್ತಮಾಂಗಂ ನ**
**ನಮೇನ್ಮುಕುಂದಂ ।**
**ಶಾವೌಕರೌ ನೋಕುರುತಃ ಸಪರ್ಯಾಂ ಹರೇರ್ಲಸತ್ಕಾಂಚನ**
**ಕಂಕಣೌ ವಾ ॥ ೨೧ ॥**

ಪಟ್ಟಕಿರೀಟಜುಷ್ಟಂ ಅಪಿ = ಸುವರ್ಣಮಯಕಿರೀಟದಿಂದ ಅಲಂಕೃತವಾಗಿದ್ದರೂ; ಉತ್ತಮಾಂಗಂ = ಶಿರಸ್ಸು; ಮುಂಕಂದಂ = ಮುಕ್ತಿಪ್ರದನಾದ ಶ್ರೀಹರಿಯನ್ನುದ್ದೇಶಿಸಿ; ನ ನಮೇತ್ = ನಮಸ್ಕಾರ ಮಾಡದಿದ್ದ ಪಕ್ಷದಲ್ಲಿ; ಪರಃ ಭಾರಃ = ಅದು ಕೇವಲ ಅನಾವಶ್ಯಕ ಭಾರವೇ ಸರಿ; ವಾ = ಅಲ್ಲದೆ; ಲಸತ್ ಕಾಂಚನ ಕಂಕಣೌ = ಹೊಳೆಯುವ ಬಂಗಾರದ ಕೈಕಡಗಗಳನ್ನು ಧರಿಸಿದ್ದರೂ; ಸಪರ್ಯಾಂ = ಭಗವತ್ಪೂಜೆಯನ್ನು; ನ ಕುರುತಃ = ಮಾಡದಿರುವಂತಹವು; ಶಾವೌ = ಶವದ ಕರಗಳೇ ಸರಿ.

ಕಿರೀಟ ಧಾರಣೆಯಂತಹ ಪದವಿ ಯಾವ ಭಗವಂತನಿಂದ ಪ್ರಾಪ್ತವಾಯಿತೋ ಆ ಮಹಾನುಭಾವನಿಗೆ ನಮಸ್ಕಾರ ಮಾಡುವುದು ಶ್ರೇಯಸ್ಕರ; ಅವನ ಪೂಜೆ ಅಗತ್ಯವಾಗಿ ಮಾಡಬೇಕಾದುದು. ಇಲ್ಲವಾದರೆ ಜನ್ಮಾಂತರದಲ್ಲಿ ದುಃಖಾನುಭವ ತಪ್ಪಿದ್ದಲ್ಲ.

**ಬರ್ಹಾಯತೇ ತೇ ನಯನೇ ನರಾಣಾಂ ಲಿಂಗಾನಿ**
**ವಿಷ್ಣೋರ್ನನಿರೀಕ್ಷತೋ ಯೇ ।**
**ಪಾದೌ ನೃಣಾಂ ತೌ ದ್ರುಮ ಜನ್ಮಭಾಜೌ ಕ್ಷೇತ್ರಾಣಿ ನಾನುವ್ರಜತೋ**
**ಹರೇರ್ಯೌ ॥ ೨೨ ॥**

ವಿಷ್ಣೋಃ = ಸರ್ವತ್ರವ್ಯಾಪ್ತನಾದ ಪರಮಾತ್ಮನ; ಲಿಂಗಾನಿ = ಇರುವಿಕೆಯನ್ನು ತಿಳಿಸುವ ವಿಗ್ರಹಗಳನ್ನು; ನ ನಿರೀಕ್ಷತಃ = ದರ್ಶನ ಮಾಡದಿರುವ; ಯೇ ನಾರಾಣಾಂ ನಯನೇ = ಮಾನವರ ಯಾವ ಕಣ್ಣುಗಳುಂಟೋ; ತೇ = ಅವು; ಬರ್ಹಾಯತೇ = ನವಿಲುಗರಿಯ ಕಣ್ಣುಗಳಂತೆ; ಹರೇಃ ಕ್ಷೇತ್ರಾಣಿ = ಶ್ರೀಹರಿಯ ದಿವ್ಯ ಸನ್ನಿಧಾನವು ಪ್ರಕಟವಾಗಿರುವ ಪುಣ್ಯಕ್ಷೇತ್ರಗಳಿಗೆ; ನಾನುವ್ರಜತಃ = ಹೋಗದಿರುವ; ನೃಣಾಂ ತೌ ಪಾದೌ = ಮಾನವರ ಆ ಕಾಲುಗಳು; ದ್ರುಮಜನ್ಮಭಾಜೌ = ಮರದ ಕೊರಡುಗಳಿದ್ದಂತೆ.

ಕಣ್ಣಿನ ಪ್ರಯೋಜನ, ಅದು ಅಂದವಾಗಿ ಕಾಣುವುದಲ್ಲ; ವಿಶ್ವದ ಅಂದವು ಯಾರಿಂದಲೋ ಅವನನ್ನು ಕಾಣಿಸಲು ಅದು ಉಪಯೋಗವಾಗಬೇಕು. ಸಾಧಕ ಜೀವರಿಗೆ ತೀರ್ಥಯಾತ್ರೆಯು ಅಗತ್ಯವಾದುದು.

**ಜೀವಂಶ್ಚವೋ ಭಾಗವತಾಂಘ್ರಿರೇಣುಂ**
**ನ ಜಾತುಮರ್ತ್ಯೋಽಭಿಲಷೇತ ಯಸ್ತು ।**
**ಶ್ರೀವಿಷ್ಣುಪದ್ಯಾಮನುಜಸ್ತುಲಸ್ಯಾಃ ಶ್ವಸನ್**
**ಶವೋ ಯಸ್ತು ನವೇದ ಗಂಧಂ** ॥ ೨೩ ॥

ಯಃ ತು ಮರ್ತ್ಯಃ = ಯಾವ ಮಾನವನಾದರೆ; ಜಾತು = ಯಾವಾಗಲಾದರೂ; ಭಾಗವತ ಅಂಘ್ರಿರೇಣುಂ = ಭಗವದ್ಭಕ್ತರ ಪಾದಧೂಳಿಯನ್ನು; ನ ಅಭಿಷೇತ = ಶಿರಸಾ ಧರಿಸಲು ಅಪೇಕ್ಷಿಸುವುದಿಲ್ಲವೋ; (ಅವನು); ಜೀವನ್ ಶವಃ = ಬದುಕಿದ್ದರೂ ಜೀವವಿಲ್ಲದ ಶವದಂತೆ; ಶ್ರೀವಿಷ್ಣುಪದ್ಯಾಃ = ಶ್ರೀವಿಷ್ಣುಪಾದದಲ್ಲಿ ಪರಮಾದರವುಳ್ಳ; ತುಲಸ್ಯಾಃ = ತುಲಸೀಪತ್ರದ; ಗಂಧಂ = ಭಕ್ತಿ ಮುಕ್ತಿಪ್ರದವಾದ ಸುವಾಸನೆಯನ್ನು; ಯಃ ತು ನ ವೇದ = ಯಾವನು ಅರಿತಿಲ್ಲವೋ; (ಅವನು); ಶ್ವಸನ್ ಶವಃ = ಉಸಿರಾಡುತ್ತಿದ್ದರೂ ಶವಸದೃಶನೇ ಸರಿ.

ಶವವೆನಿಸುವ ದೇಹ ಅಮಂಗಳಕರವಾದುದು ತನಗೆ ಮಾತ್ರವಲ್ಲ, ತನ್ನ ಅನುಬಂಧಿಗಳಿಗೂ ಕೂಡ. ಭಗವದ್ಭಕ್ತರ ಪಾದಧೂಳಿಯು ತಕ್ಷಣವೇ ಪವಿತ್ರಗೊಳಿಸುವಂತಹುದು. ಅದನ್ನು ಅಪೇಕ್ಷಿಸದ ಮಾನವನು ಪಾಪರಾಶಿಯನ್ನು ಹೆಚ್ಚಿಸಿಕೊಳ್ಳುವನೇ ಹೊರತು ಇಳಿಸಿಕೊಳ್ಳುವವನಲ್ಲ. ಶ್ರೀತುಳಸಿಯ ಗಂಧವು ದೇಹ ಆತ್ಮಗಳೆರಡನ್ನೂ ಪವಿತ್ರಗೊಳಿಸುವುದೆಂಬುದನ್ನು ಅರಿಯದವನು ಬದುಕಿದ್ದರೂ ಉಸಿರಾಡದ ಶವದಂತೆ; ಎಂದರೆ, ಪ್ರಜ್ಞೆಯಿಲ್ಲದೆ ಬಿದ್ದಿರುವ ದೇಹದಂತೆ.

**ತದಶ್ಮಸಾರಂ ಹೃದಯಂ ಬತೇದಂ**
**ಯದ್ಗೃಹ್ಯಮಾಣೈರ್ಹರಿನಾಮಧೇಯೈಃ।**
**ನವಿಕ್ರಿಯೇತಾಥ ಮುಖೇ ವಿಕಾರೋ**
**ನೇತ್ರೇ ಜಲಂ ಗಾತ್ರರುಹೇಷು ಹರ್ಷಃ** ॥ ೨೪ ॥

ಗೃಹ್ಯಮಾಣೈಃ = ಶ್ರೋತ್ರೇಂದ್ರಿಯದ ಮುಖಾಂತರ ಬಂದು ಮುಟ್ಟುತ್ತಿರುವ; ಹರಿನಾಮಧೇಯೈಃ = ಅರ್ಥಪೂರ್ಣವಾಗಿ ವಿಜೃಂಭಿಸುತ್ತಿರುವ ಶ್ರೀಹರಿಯ ನಾಮಗಳಿಂದ; ಮುಖೇ = ಮುಖದಲ್ಲಿ; ವಿಕಾರಃ = ಅರಳುವಿಕೆಯೂ; ನೇತ್ರೇ = ಕಣ್ಣುಗಳಲ್ಲಿ; ಜಲಂ = ಆನಂದಾಶ್ರುವೂ; ಗಾತ್ರರುಹೇಷು = ಮೈಮೇಲೆ ಹುಟ್ಟಿರುವ ಕೂದಲುಗಳಲ್ಲಿ; ಹರ್ಷಃ = ಸಂತಸದಿಂದ ಎದ್ದು ನಿಲ್ಲುವಿಕೆಯೂ; ನ ವಿಕ್ರಿಯೇತ = ವಿಕಾರಗಳ ರೂಪದಲ್ಲಿ ಪರಿಣಾಮವಾಗುವುದಿಲ್ಲವೋ; (ಅಂತಹ); ಯತ್ ಹೃದಯಂ =

ಯಾವನ ಹೃದಯವುಂಟೋ; ತತ್ = ಅದು; ಅಶ್ಮಸಾರಂ = ಪುಡಿಯಾಗದ ಕಠಿಣ ಶಿಲೆಯೇ ಸರಿ.

ಭಗವನ್ಮಹಿಮೆಯು ನಿಜವಾಗಿ ಹೃದಯಸ್ಪರ್ಶಿಯಾದರೆ ಮೇಲೆ ಹೇಳಿದಂತಹ ಪರಿಣಾಮಗಳುಂಟಾಗುವುವು. ಹಾಗಾಗದಿದ್ದ ಪಕ್ಷದಲ್ಲಿ, ಅಂತಹ ಮಾನವನ ಹೃದಯವು ಗಟ್ಟಿ ಕಲ್ಲಿಗೆ ಸಮಾನ. ಭಗವಂತನಿಂದ ದತ್ತವಾದ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನು ಸಾರ್ಥಕವಾದ ರೀತಿಯಲ್ಲಿ ಉಪಯೋಗಿಸಿಕೊಳ್ಳದ ಮಾನವನು ವ್ಯರ್ಥಜೀವಿ, ಅವನಿಗೆ ಮುಂದೆ ಅನರ್ಥವು ಕಾದಿದೆ ಎಂದು ತಿಳಿಸುವುದು ಮೇಲಿನ ಶ್ಲೋಕಗಳ ಒಟ್ಟು ಅಭಿಪ್ರಾಯ.

**ಅಥಾಭಿದೇಹ್ಯಂಗ ಮನೋನುಕೂಲಂ ಪ್ರಭಾಷಸೇ**
**ಭಾಗವತ ಪ್ರಧಾನಃ ।**
**ಯದಾಹ ವೈಯಾಸಕಿರಾತ್ಮವಿದ್ಯಾ ವಿಶಾರದೋ ನೃಪತಿಂ**
**ಸಾಧು ಪೃಷ್ಟಃ ॥ ೨೫ ॥**

ಅಥ = ಶ್ರೀಹರಿ ಕಥಾಶ್ರವಣಾದಿಗಳಲ್ಲಿ ಆಸಕ್ತಿ ಇಲ್ಲದ ಜನ್ಮವು ವ್ಯರ್ಥವೆಂದು ತಿಳಿದಿರುವುದರಿಂದ; ಸಾಧು ಪೃಷ್ಟಃ = ಪರೀಕ್ಷಿದ್ರಾಜನ ಉತ್ತಮವಾದ ಪ್ರಶ್ನೆಯನ್ನು ಆಲಿಸಿದವರಾಗಿ; ಆತ್ಮವಿದ್ಯಾವಿಶಾರದಃ = ಪರತತ್ವವನ್ನು ತಿಳಿದು ವಿವರಿಸುವುದರಲ್ಲಿ ನಿಪುಣರಾದ; ವೈಯಾಸಕಿಃ = ವ್ಯಾಸಪುತ್ರರಾದ ಶುಕಾಚಾರ್ಯರು; ನೃಪತಿಂ = ಆ ರಾಜನನ್ನು ಕುರಿತು; ಯತ್ ಆಹ = ಏನನ್ನು ಹೇಳಿದರೋ; (ಅದನ್ನು); ಅಭಿದೇಹಿ = ನಮಗೆ ಹೇಳು; ಅಂಗ = ಪ್ರಿಯತಮನಾದ ಸೂತ; (ನೀನು); ಭಾಗವತ ಪ್ರಧಾನಃ = ಭಗವದ್ಭಕ್ತರಲ್ಲಿ ಶ್ರೇಷ್ಠನಾಗಿರುವಿ; ಮನೋನುಕೂಲಂ ಪ್ರಭಾಷಸೇ = ಮನಸ್ಸಿಗೆ ಅರ್ಥವಾಗುವಂತೆ, ಹಿತವಾಗುವಂತೆ ವಿಷಯ ನಿರೂಪಣೆಯ ಸಾಮರ್ಥ್ಯವನ್ನು ಹೊಂದಿರುವಿ.

ಶೌನಕಾದಿ ಋಷಿವರೇಣ್ಯರ ವೈರಾಗ್ಯಪೂರ್ವಕವಾದ ಹರಿಕಥಾಶ್ರವಣದಲ್ಲಿ ಆಸಕ್ತಿಯೂ, ಅವರು ಮೆಚ್ಚುವಂತೆ ನಿರೂಪಿಸುವ ಸೂತ ಪೌರಾಣಿಕರ ಸಾಮರ್ಥ್ಯವೂ ಗಮನಾರ್ಹವಾದುವು. ಸೂತರ ಜನ್ಮಾಂತರ ಸಂಸ್ಕಾರವೂ ಶುಕಾಚಾರ್ಯರಂತಹ ಆತ್ಮತತ್ವಜ್ಞರಿಂದ ಸುಶಿಕ್ಷಿತವಾದ ಅವರ ಪರಿಪಕ್ವತೆಯೂ ಇಲ್ಲಿ ಎದ್ದು ಕಾಣುತ್ತಿವೆ.

॥ ಮೂರನೆಯ ಅಧ್ಯಾಯ ಮುಗಿಯಿತು ॥

---

# ದ್ವಿತೀಯಸ್ಕಂಧ — ನಾಲ್ಕನೆಯ ಅಧ್ಯಾಯ ಪ್ರಾರಂಭ

**ಸೂತ ಉವಾಚ :**– ಸೂತ ಪೌರಾಣಿಕರು ಹೇಳಿದರು

**ವೈಯಾಸಕೇರಿತ ವಚಸ್ತತ್ವನಿಶ್ಚಯಮಾತ್ಮನಃ ।**
**ಉಪಧಾರ್ಯಮತಿಂ ಕೃಷ್ಣೇ ಔತ್ತರೇಯಃ ಸತೀಂ ವ್ಯಧಾತ್ ॥ ೧ ॥**

ಆತ್ಮನಃ = ಗುಣಪರಿಪೂರ್ಣನಾದ ಶ್ರೀಹರಿಯ; ತತ್ವನಿಶ್ಚಯಂ = ತತ್ವವನ್ನು ನಿಶ್ಚಯ ಮಾಡಿಕೊಡತಕ್ಕ; ವೈಯಾಸಕೇರಿತ ವಚಃ = ವ್ಯಾಸ ಪುತ್ರರಾದ ಶುಕಾಚಾರ್ಯರು ಹೇಳಿದ ಮಾತುಗಳನ್ನು; ಉಪಧಾರ್ಯ = ಮನಸ್ಸಿಗೆ ತಂದುಕೊಂಡು; ಔತ್ತರೇಯಃ = ಉತ್ತರಾದೇವಿಯ ಮಗನಾದ ಪರೀಕ್ಷಿದ್ರಾಜನು; ಕೃಷ್ಣೇ = ಶ್ರೀಕೃಷ್ಣನಲ್ಲಿ; 'ಸತೀಂ = ಭಕ್ತಿ ಯಕ್ತವಾದ ಮನಸ್ಸನ್ನು; ವ್ಯಧಾತ್= ಅಳವಡಿಸಿಕೊಂಡನು.

ಸದ್ಗುರುಗಳ ಉಪದೇಶ ವಚನಗಳ ಸತ್ಪರಿಣಾಮವು ಇಲ್ಲಿ ಕಂಡುಬರುವುದು.

**ಆತ್ಮಜಾಯಾ ಸುತಾಗಾರ ಪಶುದ್ರವಿಣ ಬಂಧುಷು ।**
**ರಾಜ್ಯೇಚಾವಿಕಲೇ ನಿತ್ಯಂ ವಿರೂಢಾಂ ಮಮತಾಂ ಜಹೌ ॥ ೨ ॥**

ಆತ್ಮಜಾಯಾ ಸುತ ಆಗಾರ ಪಶುದ್ರವಿಣ ಬಂಧುಷು = ತನ್ನ ದೇಹ, ತನ್ನ ಹೆಂಡತಿ ಮಕ್ಕಳು, ಮನೆ, ಸಾಕುಪ್ರಾಣಿಗಳು, ಐಶ್ವರ್ಯ, ಬಂಧುಗಳು; ಚ = ಮತ್ತು; ಅವಿಕಲೇ = ಸಪ್ತಾಂಗಗಳಿಂದ ಸುಭದ್ರವಾದ; ರಾಜ್ಯೇ = ರಾಜ್ಯದಲ್ಲಿಯೂ; ನಿತ್ಯಂ = ಯಾವಾಗಲೂ; ವಿರೂಢಾಂ = ಚನ್ನಾಗಿ ಬೇರೂರಿರುವ; ಮಮತಾಂ = ತನ್ನದೆಂಬ ದುರ್ಮತಿಯನ್ನು; ಜಹೌ = ಬಿಟ್ಟುಬಿಟ್ಟನು.

ಪರೀಕ್ಷಿದ್ರಾಜನಂತಹ ಬುದ್ಧಿವಂತರು ಮಮಕಾರ ಉಳ್ಳವರಾಗಿರುವುದಿಲ್ಲ. ಆದರೂ ಅದರ ಬೇರುಗಳು ನಿಗೂಢವಾಗಿ ಇದ್ದೇ ಇರುತ್ತವೆ. ಅಂತಹ ಮಮಕಾರವನ್ನು ಸಮೂಲವಾಗಿ ಕಿತ್ತೊಗೆದನೆಂಬುದು ಇಲ್ಲಿ ಅಭಿಪ್ರಾಯ.

**ಪಪ್ರಚ್ಛ ಚೇಮಮೇವಾರ್ಥಂ ಯನ್ಮಾಂ ಪೃಚ್ಛತ ಸತ್ತಮಾಃ ।**
**ಕೃಷ್ಣಾನುಭಾವ ಶ್ರವಣೇ ಶ್ರದ್ದಧಾನೋ ಮಹಾಯಶಾಃ ॥ ೩ ॥**

ಕೃಷ್ಣಾನುಭಾವಶ್ರವಣೇ = ಶ್ರೀಕೃಷ್ಣನ ಸ್ಮರಣೆಗೆ ಅನುಕೂಲವಾದ ಪ್ರಸಂಗಗಳನ್ನು ಕೇಳುವುದರಲ್ಲಿ; ಶ್ರದ್ದಧಾನಃ = ಆಸಕ್ತಿಯನ್ನು ಹೊಂದಿದ; ಮಹಾಯಶಾಃ = ಬಹುಕೀರ್ತಿಶಾಲಿಯಾದ ಪರೀಕ್ಷಿದ್ರಾಜನು; ಸತ್ತಮಾಃ = ಜ್ಞಾನಿಶ್ರೇಷ್ಠರಾದ ಮುನಿವರೇಣ್ಯರೇ; ಯತ್ ಮಾಂ ಪೃಚ್ಛತ = ನೀವು ನನ್ನನ್ನು ಕುರಿತು ಯಾವರೀತಿ ಪ್ರಶ್ನೆ ಮಾಡಿದಿರೋ; ಇಮಮೇವ ಅರ್ಥಂ ಚ = ಅಂತಹ ಇದೇ ವಿಚಾರವನ್ನೇ; ಪಪ್ರಚ್ಛ = ಇಚ್ಛಿಸಿ ಕೇಳಿದನು.

ಮಾನವ ಜನ್ಮವು ವ್ಯರ್ಥವಾಗಿ ಹೋಗಬಾರದು. ಶ್ರೀಕೃಷ್ಣ ಕಥಾಶ್ರವಣದಿಂದ ಅದು ಸಾರ್ಥಕವಾಗಬೇಕು ಎಂದು ಶೌನಕಾದಿಗಳು ಹೇಳಿದುದು ಹಿಂದಿನ ಅಧ್ಯಾಯದಲ್ಲಿ ಕಂಡುಬಂದಿದೆ. ಪರೀಕ್ಷಿದ್ರಾಜನ ವಿಚಾರ ಸರಣಿಯೂ ಅದೇ ರೀತಿಯಾಗಿತ್ತು.

**ಸಂಸ್ಥಾಂ ವಿಜ್ಞಾಯ ಸನ್ನಸ್ಯ ಕರ್ಮತ್ರೈವರ್ಗಿಕಂಚಯತ್ ।**
**ವಾಸುದೇವೇ ಭಗವತಿ ಸ್ವಾತ್ಮಭಾವಂ ದೃಢಂಗತಃ ॥ ೪ ॥**

ಸಂಸ್ಥಾಂ = ಮರಣ ಉಂಟಾಗುವುದನ್ನು; ವಿಜ್ಞಾಯ = ನಿಸ್ಸಂಶಯವಾಗಿ ಮನಸ್ಸಿಗೆ ತಂದುಕೊಂಡು; ಯತ್ = ಯಾವುದು; ತ್ರೈವರ್ಗಿಕಂ ಚ ಕರ್ಮ = ಧರ್ಮ ಅರ್ಥ ಕಾಮಗಳೆಂಬ ಭೂಸ್ವರ್ಗನರಕಗಳಲ್ಲಿ ಸಂಚಾರ ಮಾಡಿಸುವ ಕರ್ಮಗಳಲ್ಲಿ ಅಪೇಕ್ಷೆಯನ್ನು; ಸಂನ್ಯಸ್ಯ = ತ್ಯಜಿಸಿ; ವಾಸುದೇವೇ ಭಗವತಿ = ಸರ್ವಾಂತರ್ಯಾಮಿಯಾದ ಭಗವಂತನಲ್ಲಿ; ಸ್ವಾತ್ಮಭಾವಂ = ತನ್ನ ಅಸ್ವತಂತ್ರ ಸ್ವರೂಪಕ್ಕೂ ಸತ್ತಾಪ್ರದನಾದ ಸ್ವತಂತ್ರ ಪುರುಷನೆಂಬ ಭಾವವನ್ನು; ದೃಢಂ ಗತಃ = ದೃಢವಾಗಿ ತಿಳಿದವನಾದನು.

ತತ್ವಜ್ಞಾನದ ನಿಜವಾದ ಲಕ್ಷಣವೆಂದರೆ, ಜೀವನಾದವನು ತನ್ನ ಅಸ್ವಾತಂತ್ರವನ್ನು ತಿಳಿದುಕೊಂಡು, "ಸರ್ವಸ್ವಾಮೀ ಮಮ ಸ್ವಾಮೀ" ಎಂಬ ಭಾವವನ್ನು ದೃಢಪಡಿಸಿಕೊಳ್ಳಬೇಕಾದುದೇ ಆಗಿದೆ.

**ರಾಜೋವಾಚ** :– ಪರೀಕ್ಷಿದ್ರಾಜನು ನುಡಿದನು.

**ಸಮೀಚೀನಂ ವಚೋಬ್ರಹ್ಮನ್ ಸರ್ವಜ್ಞಸ್ಯ ತವಾನಘ ।**
**ತಮೋವಿಶೀರ್ಯತೇ ಮಹ್ಯಂ ಹರೇಃ ಕಥಯತಃ ಕಥಾಃ ॥ ೫ ॥**

ಬ್ರಹ್ಮನ್= ಬ್ರಹ್ಮಾನುಭವ ಪೂರ್ಣರಾದವರೇ; ಅನಘ= ದೋಷರಹಿತರಾದವರೇ; (ಶುಕಾಚಾರ್ಯರೇ); ಹರೇಃ = ಸರ್ವದೋಷ ಪರಿಹಾರಕನಾದ ಪುರುಷೋತ್ತಮನ; ಕಥಾಃ = ಲೀಲಾವಿಶೇಷಗಳನ್ನು ಕುರಿತು; ಕಥಯತಃ = ಹೇಳುವಂತಹ; ಸರ್ವಜ್ಞಸ್ಯ = ಸಕಲವನ್ನೂ ಬಲ್ಲವರಾದ; ತವ ವಚಃ = ನಿಮ್ಮ ಮಾತು; ಸಮೀಚೀನಂ = ಇಷ್ಟಫಲದಾಯಕವಾದುದು; (ಅದರಿಂದ); ಮಹ್ಯಂ ತಮಃ = ಅಜ್ಞಾನರೂಪವಾದ ನನ್ನ ಅಂತರಂಗದ ಕತ್ತಲೆಯು; ವಿಶೀರ್ಯತೇ = ಕತ್ತರಿಸಿ ಹೋಗುತ್ತದೆ.

ಪರೀಕ್ಷಿದ್ರಾಜರ ಈ ಮಾತುಗಳು ಅವರು ಉಪದೇಶಕ್ಕೆ ಸಿದ್ಧರಾಗಿರುವುದನ್ನು ತಿಳಿಸುತ್ತದೆ.

**ಭೂಯ ಏವ ವಿವಿತ್ಸಾಮಿ ಭಗವಾನಾತ್ಮಮಾಯಯಾ ।**
**ಯಥೇದಂ ಸೃಜತೇ ವಿಶ್ವಂ ದುರ್ವಿಭಾವ್ಯಮಧೀಶ್ವರೈಃ ॥ ೬ ॥**

ಅಧೀಶ್ವರೈಃ = ಮಹದಾದಿ ಪೃಥ್ವೀಪರ್ಯಂತ ಯಾಜಮಾನ್ಯ ಹೊಂದಿರುವ ಅನ್ಯರಾದ ಅನೇಕಾನೇಕ ದೇವತೆಗಳಿಂದ; ದುರ್ವಿಭಾವ್ಯಂ = ಊಹಿಸಲೂ ಅಶಕ್ಯವಾದ; ಇದಂ ವಿಶ್ವಂ = ಈ ಜಗತ್ತನ್ನು; ಭಗವಾನ್= ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಹರಿಯು; ಆತ್ಮಮಾಯಯಾ = ಕೇವಲ ತನ್ನ ಇಚ್ಛಾರೂಪವಾದ ಶಕ್ತಿಯಿಂದಲೇ; ಯಥಾ = ಯಾವ ಪ್ರಕಾರದಿಂದ; ಸೃಜತೇ = ಸೃಷ್ಟಿಸುವನು, ಎಂಬುದನ್ನು; ಭೂಯಃ ಏವ = ಪುನಃ; ವಿವಿತ್ಸಾಮಿ = ಕೇಳಲಿಚ್ಛಿಸುತ್ತೇನೆ.

ತತ್ತ್ವಾಭಿಮಾನಿ ದೇವತೆಗಳಿಗೂ ಭಗವಂತನ ಮಾಯಾಶಕ್ತಿಯನ್ನು ಅರ್ಥಮಾಡಿಕೊಳ್ಳುವುದು ಅಸಾಧ್ಯವೆಂದಿರುವಾಗ, ಕೇವಲ ಜಡಬುದ್ಧಿಯಿಂದ ಜಡಸಾಧನಗಳ ಮೂಲಕ ವಿಶ್ವಸೃಷ್ಟಿಯ ರಹಸ್ಯವನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತಿರುವ ಆಧುನಿಕ ವಿಜ್ಞಾನಿಗಳು ಅತಿ ಮೂರ್ಖರೇ ಸರಿ.

**ಯಥಾಗೋಪಾಯತಿ ವಿಭುಃ ಯಥಾ ಸಂಯಚ್ಛತೇ ಪುನಃ ।**
**ಯಾಂ ಯಾಂ ಶಕ್ತಿಮುಪಾಶ್ರಿತ್ಯ ಪುರುಶಕ್ತಿಃ ಪರಃ ಪುಮಾನ್ ॥ ೭ ॥**

ಪುರುಶಕ್ತಿಃ = ಪರಿಪೂರ್ಣ ಶಕ್ತನಾದ; ಪರಃ ಪುಮಾನ್= ಪುರುಷೋತ್ತಮನಾದ; ವಿಭುಃ = ವ್ಯಾಪ್ತನಾದ ಶ್ರೀಹರಿಯು; ಯಾಂ ಯಾಂ ಶಕ್ತಿಂ = ಯಾವ ಯಾವ ಶಕ್ತಿವಿಶೇಷವನ್ನು; ಉಪಾಶ್ರಿತ್ಯ = ಅವಲಂಬಿಸಿ; ಯಥಾ = ಯಾವ

ಪ್ರಕಾರವಾಗಿ; ಗೋಪಾಯತಿ = ಜಗತ್ತನ್ನು ಸಂರಕ್ಷಿಸುತ್ತಾನೆ? ಯಥಾ = ಯಾವ ಪ್ರಕಾರವಾಗಿ; ಪುನಃ = ಮತ್ತೆ; ಸಂಯಚ್ಛತೇ = ಲಯಗೊಳಿಸುತ್ತಾನೆ?

ಹಿಂದಿನ ಶ್ಲೋಕದಲ್ಲಿ ಸೃಷ್ಟಿ ಹೇಗೆ ನಡೆಯುತ್ತದೆ ಎಂದು ಕೇಳಿ, ಸ್ಥಿತಿ ಲಯಗಳ ವಿಚಾರವನ್ನಿಲ್ಲಿ ಕೇಳಿದ್ದಾರೆ.

**ಆತ್ಮಾನಂ ಕ್ರೀಡಯನ್ ಕ್ರೀಡನ್ ಕರೋತಿ ವಿಕರೋತಿ ಚ ।**
**ನೂನಂ ಭಗವತೋ ಬ್ರಹ್ಮನ್ ಹರೇರದ್ಭುತ ಕರ್ಮಣಃ ॥**
**ದುರ್ವಿಭಾವ್ಯಮಿವಾಭಾತಿ ಕವಿಭಿಶ್ಚಾಪಿ ಚೇಷ್ಟಿತಂ ॥ ೮ ॥**

ಆತ್ಮಾನಂ = ಜೀವಕೋಟಿಯನ್ನು; ಕ್ರೀಡಯನ್ = ಸಂಸಾರದಲ್ಲಿ ಆಡಿಸುತ್ತಾ; ಕ್ರೀಡನ್ = ತನ್ನ ಅವತಾರಾದಿ ಲೀಲೆಗಳಿಂದ ವಿಹರಿಸುತ್ತಾ; ಕರೋತಿ = ಲೋಕಸಾಮಾನ್ಯ ಕಾರ್ಯಗಳನ್ನು ನಡೆಸುತ್ತಾನೆ; ಚ = ಮತ್ತು; ವಿಕರೋತಿ = ವಿಶೇಷ ಲೀಲೆಗಳನ್ನೂ ಪ್ರದರ್ಶಿಸುತ್ತಾನೆ; ನೂನಂ = ನಿಜ ಹೇಳುವುದಾದರೆ; ಬ್ರಹ್ಮನ್ = ಬ್ರಹ್ಮಜ್ಞಾನಪೂರ್ಣರೇ; ಭಗವತಃ = ಸಕಲೈಶ್ವರ್ಯ ಸಂಪೂರ್ಣನಾದ; ಅದ್ಭುತಕರ್ಮಣಃ = ಅತ್ಯಾಶ್ಚರ್ಯಕರ ವ್ಯಾಪಾರಗಳನ್ನು ಮಾಡುವ; ಹರೇಃ = ಶ್ರೀಹರಿಯ; ಚೇಷ್ಟಿತಂ = ವ್ಯಾಪಾರವು; ಕವಿಭಿಃ ಅಪಿ ಚ = ಜ್ಞಾನಿಗಳಿಂದಲೂ ಕೂಡ; ದುರ್ವಿಭಾವ್ಯಂ = ಸರಿಯಾಗಿ ತಿಳಿಯಲು ಸಾಧ್ಯವಾಗುವುದಿಲ್ಲವೆಂದು; ಆಭಾತಿ = ಕಾಣುತ್ತದೆ.

ಜೀವರು ತಾರತಮ್ಯಯುಕ್ತರಾಗಿರುವುದರಿಂದ ಸಾಮಾನ್ಯ ಜ್ಞಾನಿಗಳಿಗೆ ಶ್ರೀಹರಿಯ ಮಹಿಮಾ ವಿಶೇಷಗಳನ್ನು ತಿಳಿಯುವುದು ಸುಲಭವಲ್ಲ; ಅಜ್ಞರಿಗಂತೂ ಅದು ಅತ್ಯಂತ ಗಹನವೇ ಸರಿ. ಆದುದರಿಂದ ಶ್ರೀಶುಕಾಚಾರ್ಯರಂತಹ ಭಗವತ್ಪ್ರಿಯರಾದ ಜ್ಞಾನಿಗಳೇ ಶ್ರೀಹರಿಯ ಮಹಿಮಾನುವರ್ಣನೆಗೆ ಸಮರ್ಥರು ಎಂಬುದು ಪರೀಕ್ಷಿದ್ರಾಜರ ಅಭಿಪ್ರಾಯ.

**ಯಥಾಗುಣಾಂಸ್ತು ಪ್ರಕೃತೇರ್ಯುಗಪತ್ಕ್ರಮಶೋಽಪಿವಾ ।**
**ಬಿಭರ್ತಿಭೂರಿಶಸ್ತ್ವೇಕಃ ಕುರ್ವನ್ಕರ್ಮಾಣಿಜನ್ಮಭಿಃ ॥ ೯ ॥**

ಜನ್ಮಭಿಃ = ವಾಸುದೇವಾದಿ ಅವತಾರಗಳಿಂದ; ಏಕಃ = ಒಬ್ಬನೇ ಆದ ಶ್ರೀಹರಿಯು; ಭೂರಿಶಃ = ಬಹುವಿಧವಾಗಿ; ಕರ್ಮಾಣಿ = ವ್ಯಾಪಾರಗಳನ್ನು; ಕುರ್ವನ್ = ಮಾಡುತ್ತಾ; ಪ್ರಕೃತೇಃ = ಪ್ರಾಕೃತಗಳಾದ; ಗುಣಾನ್ ತು = ಬೇರೆ ಬೇರೆಯಾಗಿರುವ ಬೇರೆ ಬೇರೆ ಸ್ವಭಾವಗಳ ಸತ್ವಾದಿ ಗುಣಕಾರ್ಯಗಳನ್ನು;

ಯುಗಪತ್= ಏಕಕಾಲದಲ್ಲಿ; ವಾ = ಅಥವಾ; ಅಪಿ ಕ್ರಮಶಃ = ಕ್ರಮಕ್ರಮವಾಗಿಯೇ; ಯಥಾ = ಹೇಗೆ; ಬಿಭರ್ತಿ = ತನ್ನ ಧಾರಣಶಕ್ತಿಯಿಂದ ನಡೆಸುವನು ?

ಸಂಕಲ್ಪಮಾತ್ರದಿಂದ ಸಕಲ ವ್ಯಾಪಾರಗಳನ್ನೂ ನಡೆಸುವ ಸಾಮರ್ಥ್ಯವುಳ್ಳ ಭಗವಂತನು ಸೃಷ್ಟ್ಯಾದಿಗಳನ್ನು ಒಮ್ಮಿಂದೊಮ್ಮೆಯೇ ನಡೆಸಿಬಿಡುವನೇ, ಅಥವಾ ಕ್ರಮವಾಗಿಯೇ ಎಂಬುದು ಸ್ವಾರಸ್ಯವಾದ ಪ್ರಶ್ನೆ. ಇದರಲ್ಲಿ ಈಗಿನ ವಿಜ್ಞಾನಿಗಳಿಗೆ ಬೇಕಾದ ಉತ್ತರ ಅಡಗಿದೆ.

**ವಿಚಿಕಿತ್ಸಿತಮೇತನ್ಮೇ ಬ್ರವೀತು ಭಗವಾನ್ಯಥಾ ।**
**ಶಬ್ದಬ್ರಹ್ಮಣಿ ನಿಷ್ಣಾತಃ ಪರಸ್ಮಿಂಶ್ಚ ಭವಾನ್ ಖಲು ॥ ೧೦ ॥**

ಯಥಾ = ಯಾವ ಪ್ರಕಾರವಾಗಿ; ಏತತ್= ಈ ಸೃಷ್ಟ್ಯಾದಿ ವ್ಯಾಪಾರವು; ವಿಚಿಕಿತ್ಸಿತಂ = ಮಾಡಲ್ಪಡುವುದು ಎಂಬ; ಏತತ್= ಇದನ್ನು; ಮೇ = ನನಗೆ; ಭಗವಾನ್= ಜ್ಞಾನೈಶ್ವರ್ಯಸಂಪನ್ನರಾದ ನೀವು; ಬ್ರವೀತು = ದಯಮಾಡಿ ಹೇಳಿರಿ; ಭವಾನ್= ನೀವು; ಪರಸ್ಮಿನ್ ಚ = ಸರ್ವೋತ್ತಮನಾದ; ಶಬ್ದಬ್ರಹ್ಮಣಿ = ವೇದಸ್ವರೂಪನೂ, ವೇದಗೋಚರನೂ ಆದ ಪರಮಾತ್ಮನ ವಿಷಯ ನಿರೂಪಣೆಯಲ್ಲಿ; ನಿಷ್ಣಾತಃ = ಸಮರ್ಥರಾಗಿದ್ದೀರಿ; ಖಲು = ಅದು ನಿಜ.

ಭಗವಂತನ ವ್ಯಾಪಾರಗಳನ್ನು ವೇದಗಳಿಂದಲೇ ತಿಳಿಯಬೇಕು; ಈಗಿನ ವಿಜ್ಞಾನಿಗಳಂತೆಯೇ ಕೇವಲ ಮನುಷ್ಯಬುದ್ಧಿಯಿಂದ ಅದನ್ನು ತಿಳಿಯಲು ಪ್ರಯತ್ನಿಸಿದರೆ ಸಾಧ್ಯವಾಗುವುದಿಲ್ಲ. ಆದರೆ ವೇದಾರ್ಥಗಳನ್ನು ಚೆನ್ನಾಗಿ ಅರಿತವರೂ, ಅದನ್ನು ಯಥಾವತ್ತಾಗಿ ವಿವರಿಸಬಲ್ಲವರೂ ಇದ್ದರೆ ಮಾತ್ರ ಸೃಷ್ಟ್ಯಾದಿ ಭಗವಂತನ ವ್ಯಾಪಾರಗಳನ್ನು ಸರಿಯಾಗಿ ತಿಳಿಯಬಹುದು. ಹಾಗೆ ತಿಳಿಸಬಲ್ಲವರು ಶ್ರೀಶುಕಾಚಾರ್ಯರೆಂದರಿತು ಪರೀಕ್ಷಿದ್ರಾಜರು ಪ್ರಶ್ನೆಮಾಡಿದ್ದಾರೆ.

**ಸೂತ ಉವಾಚ** :– ಸೂತರು ನುಡಿದರು.

**ಇತ್ಯುಪಾಮಂತ್ರಿತೋ ರಾಜ್ಞಾ ಗುಣಾನುಕಥನೇ ವಿಭೋಃ ।**
**ಹೃಷೀಕೇಶಮನುಸ್ಮೃತ್ಯ ಪ್ರತಿವಕ್ತುಂ ಪ್ರಚಕ್ರಮೇ ॥ ೧೧ ॥**

ವಿಭೋಃ = ಸರ್ವತ್ರವ್ಯಾಪ್ತನೂ ಸರ್ವಸಮರ್ಥನೂ ಆದ ಶ್ರೀಹರಿಯ; ಗುಣಾನುಕಥನೇ = ಕಲ್ಯಾಣಗುಣಗಳ ವ್ಯಾಪಾರಗಳನ್ನು ವರ್ಣಿಸಬೇಕೆಂಬ ವಿಷಯದಲ್ಲಿ; ರಾಜ್ಞಾ = ಪರೀಕ್ಷಿದ್ರಾಜನಿಂದ; ಇತಿ = ಈ ಪ್ರಕಾರವಾಗಿ; ಉಪಾಮಂತ್ರಿತಃ = ಪ್ರಾರ್ಥಿಸಲ್ಪಟ್ಟವರಾಗಿ; ಹೃಷೀಕೇಶಂ = ಇಂದ್ರಿಯಗಳ ಪ್ರಬೋಧಕನಾದ

ಪರಮಾತ್ಮನನ್ನು; ಅನುಸ್ಮೃತ್ಯ = ಅಂತರ್ಯಾಮಿತ್ವೇನ ಸ್ಮರಿಸಿ; ಪ್ರತಿವಕ್ತುಂ = ಪರೀಕ್ಷಿದ್ರಾಜನ ಪ್ರಶ್ನೆಗಳಿಗೆ ಉತ್ತರ ಕೊಡಲು; ಪ್ರಚಕ್ರಮೇ = ಪ್ರಾರಂಭಿಸಿದರು.

ನಮ್ಮ ದೇಹಗಳ ಇಂದ್ರಿಯಗಳು ಸರ್ವಸ್ವತಂತ್ರನಾದ ಪರಮಾತ್ಮನ ಪ್ರೇರಣೆಯಿಂದ ಕಾರ್ಯೋನ್ಮುಖವಾಗುತ್ತವೆ. ಬೇರೆ ಬೇರೆ ಇಂದ್ರಿಯಗಳಿಗೆ ಬೇರೆ ಬೇರೆ ಅಭಿಮಾನಿ ದೇವತೆಗಳಿದ್ದಾರೆ. ಕಣ್ಣುಗಳಲ್ಲಿ ಸೂರ್ಯ ಚಂದ್ರರು; ಕಿವಿಗಳಲ್ಲಿ ದಿಗ್ದೇವತೆಗಳು; ಮೂಗಿನಲ್ಲಿ ಅಶ್ವಿನೀ ದೇವತೆಗಳು; ಬಾಯಲ್ಲಿ ವರುಣ; ನಾಲಿಗೆಯಲ್ಲಿ ಅಗ್ನಿ ಇತ್ಯಾದಿ. ಆದರೆ, ಇವರು ಸ್ವತಂತ್ರರಲ್ಲ. ಅವರಲ್ಲಿದ್ದು ವ್ಯಾಪಾರಗಳನ್ನು ನಡೆಸಿ, ಅವರಿಗೆ ಪುಣ್ಯಪ್ರದನಾದವನು ಶ್ರೀ ಹರಿಯೇ. ಆದುದರಿಂದ ಅಂತಹ ಪರಮಾತ್ಮನ ಸ್ಮರಣಪೂರ್ವಕವಾಗಿ ನಡೆಯುವ ಪ್ರವಚನ, ಅನುವಾದ ಮುಂತಾದ ಕಾರ್ಯಗಳು ನಿರ್ವಿಘ್ನವಾಗಿ, ಸಾರ್ಥಕವಾಗಿ ನೆರವೇರುತ್ತವೆ.

**ಶ್ರೀಶುಕ ಉವಾಚ** :- ಶ್ರೀಶುಕಾಚಾರ್ಯರು ಅನುವಾದಮಾಡಲು ಉಪಕ್ರಮಿಸಿದರು.

**ನಮಃ ಪರಸ್ಮೈ ಪುರುಷಾಯ ಭೂಯಸೇ**
**ಸದುದ್ಭವಸ್ಥಾನ ನಿರೋಧಲೀಲಯಾ ।**
**ಗೃಹೀತಶಕ್ತಿ ತ್ರಿತಯಾಯ**
**ದೇಹಿನಾಮಂತರ್ಭವಾಯಾನುಪಲಬ್ಧವರ್ತ್ಮನೇ** ॥ ೧೨ ॥

ಸತ್ ಉದ್ಭವ ಸ್ಥಾನ ನಿರೋಧಲೀಲಯಾ = ಸದ್ರೂಪವಾದ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ನಡೆಸುವ ಕ್ರೀಡೆಯ ಸಲುವಾಗಿ; ಗೃಹೀತ ಶಕ್ತಿ ತ್ರಿತಯಾಯ = ತನ್ನ ಸ್ವರೂಪಭೂತವಾದ ಜ್ಞಾನ ಇಚ್ಛಾ ಪ್ರಯತ್ನಗಳೆಂಬ ಮೂರು ವಿಧ ಶಕ್ತಿಗಳನ್ನು ಪ್ರಕಟಗೊಳಿಸಿರುವ; ದೇಹಿನಾಂ = ದೇಹಧಾರಣ ಮಾಡಿರುವ ಜೀವಿಗಳ; ಅಂತರ್ಭವಾಯ = ಸ್ವರೂಪ ಹೃದಯಗಳಲ್ಲಿ ಬಿಂಬರೂಪನಾಗಿ ನಿತ್ಯಸುಖಿನಾಗಿರುವ; ಅನುಪಲಬ್ಧವರ್ತ್ಮನೇ = ಅಂತರಾತ್ಮನೇ ಆಗಿದ್ದರೂ ವೇದಗಳಿಂದಲ್ಲದೆ ತಿಳಿಯಲಸಾಧ್ಯವಾದ ಮಹಿಮಾಸ್ಪದನಾದ; ಭೂಯಸೇ = ಪರಿಪೂರ್ಣನಾದ;ಪರಸ್ಮೈ ಪುರುಷಾಯ = ಸರ್ವೋತ್ತಮ ಪುರುಷನಾದವನಿಗೆ; ನಮಃ = ನಮಸ್ಕಾರ.

ಸಂಪ್ರದಾಯಾನುಸಾರವಾಗಿ, ಶ್ರೀಶುಕಾಚಾರ್ಯರು ಭಾಗವತಕಥಾರಂಭದಲ್ಲಿ ಮಂಗಳಪ್ರದಗಳಾದ ಶ್ರೀಹರಿಯ ಮಹಿಮೆಗಳನ್ನು ಕೆಲವು ಶ್ಲೋಕಗಳಿಂದ ವರ್ಣಿಸಿದ್ದಾರೆ. ಜಗತ್ಸೃಷ್ಟ್ಯಾದಿ ಕಾರ್ಯಗಳು ಸದ್ರೂಪವಾದುವೆಂದು ಹೇಳಿರುವುದರಿಂದ ಜಗತ್ತು

ಮಾಯಾಕಲ್ಪಿತವಾದ ಭ್ರಾಂತಿ ಎಂಬ ವಾದ ನಿರಸ್ತವಾಯಿತು. ಜೀವರಿಗೆ ಭಗವಂತನು ನಿತ್ಯಸಖನಾಗಿ ಹೃದಯಮಂದಿರದಲ್ಲಿಯೇ ಇದ್ದರೂ, ಸಂಸಾರದಲ್ಲಿ ಸುಖದುಃಖಗಳನ್ನು ಅನುಭವಿಸಿ, ಕೇವಲ ಸುಖಪ್ರಾಪ್ತಿಗಾಗಿ ಹಂಬಲಿಸಿ ತತ್ತ್ವಾನ್ವೇಷಿಯಾಗಿ ವೇದಗಳನ್ನು ಆಶ್ರಯಿಸುವವರೆಗೆ ಆ ಮಹಾಮಹಿಮನ ಇರುವಿಕೆಯು ಕಂಡುಬರುವುದಿಲ್ಲ.

**ಭೂಯೋ ನಮಃ ಸದ್ವೃಜಿನಚ್ಛಿದೇಸತಾಮಸಂಭವಾಯಾಖಿಲ**
**ಸತ್ತ್ವಮೂರ್ತಯೇ ।**
**ಪುಂಸಾಂ ಪುನಃ ಪಾರಮಹಂಸ್ಯ ಆಶ್ರಮೇ**
**ವ್ಯವಸ್ಥಿತಾನಾಮನುಮೃಗ್ಯದಾಶುಷೇ ॥ ೧೩ ॥**

ಸದ್ವೃಜಿನಚ್ಛಿದೇ= ಭಕ್ತಿಪೂರ್ವಕ ನಮಸ್ಕರಿಸುವ ಸುಜನರ ದುಃಖಗಳಿಗೆ ಕಾರಣವಾಗುವ ಪಾಪಗಳನ್ನು, ನಾಶಮಾಡುವ; ಅಸತಾಂ = ದುರ್ಜನರ; ಅಸಂಭವಾಯ = ನಾಶಕ್ಕೆ ಕಾರಣನಾದ; ಅಖಿಲಸತ್ತ್ವಮೂರ್ತಯೇ = ಸಮಸ್ತಕಲ್ಯಾಣಗುಣಪೂರ್ಣನಾದ; ಪುನಃ = ಮತ್ತೆಯೂ; ಪಾರಮಹಂಸ್ಯ ಆಶ್ರಮೇಷು ಅವಸ್ಥಿತಾನಾಂ ಪುಂಸಾಂ = ಸನ್ಯಾಸಧರ್ಮಗಳನ್ನು ಚೆನ್ನಾಗಿ ಆಚರಿಸುವವರಿಗೆ; ಅನುಮೃಗ್ಯದಾಶುಷೇ = ಅಪೇಕ್ಷಿತವಾದ ಮುಕ್ತಿಯನ್ನು ದಯಪಾಲಿಸುವವನಾದ ಪರಮಪುರುಷನಿಗೆ; ಭೂಯಃ = ಪುನಃ ಪುನಃ; ನಮಃ = ನಮಸ್ಕಾರ.

ಪರಮಾತ್ಮನ ಪ್ರಸಾದ ಸಂಪಾದನೆಗೆ ಭಕ್ತಿಯಿಂದ ಪುನಃ ಪುನಃ ನಮಸ್ಕರಿಸಿ ಶರಣಾಗತ ಭಾವವನ್ನು ವ್ಯಕ್ತಪಡಿಸುವುದೇ ಅತ್ಯುತ್ತಮವಾದ ಮಾರ್ಗವೆಂಬುದು ಇದರಿಂದ ವ್ಯಕ್ತವಾಗುತ್ತದೆ.

**ನಮೋ ನಮಸ್ತೇಸ್ತ್ವೃಷಭಾಯ ಸಾತ್ವತಾಂ ವಿದೂರಕಾಷ್ಠಾಯ**
**ಮುಹುಃ ಕುಯೋಗಿನಾಂ ।**
**ನಿರಸ್ತ ಸಾಮ್ಯಾತಿಶಯೇನ ರಾಧಸಾ ಸ್ವಧಾಮನಿಬ್ರಹ್ಮಣಿ ರಂಸ್ಯತೇ**
**ನಮಃ ॥ ೧೪ ॥**

ಸಾತ್ವತಾಂ = ಭಗವದ್ಭಕ್ತರಿಗೆ; ಋಷಭಾಯ = ಜ್ಞಾನವನ್ನೂ, ತದ್ವಾರಾ ಮುಕ್ತಿಯನ್ನೂ ಕೊಡುವ; ಮುಹುಃ = ಮತ್ತೆಮತ್ತೆಯೂ; ಕುಯೋಗಿನಾಂ = ಶಾಸ್ತ್ರವಿರುದ್ಧವಾದ ರೀತಿಯಲ್ಲಿ ಯೋಗಾಭ್ಯಾಸ ಮಾಡುವವರಿಗೆ; ವಿದೂರ ಕಾಷ್ಠಾಯ = ದಿಗ್ದರ್ಶನ ದೂರನಾದ; ನಿರಸ್ತ ಸಾಮ್ಯ ಅತಿಶಯೇನ = ಅಸಮಾನವೂ ಅತಿಶಯವೂ ಆದ; ರಾಧಸಾ = ಸಂಸಿದ್ಧಿಯಿಂದ; ಸ್ವಧಾಮನಿ ಬ್ರಹ್ಮಣಿ = ಸ್ವಕೀಯ

ಸ್ವರೂಪವೇ ಆದ ಆನಂದ ಸ್ಥಿತಿಯಲ್ಲಿ; ರಂಸ್ಯತೇ = ಮಗ್ನನಾಗಿರುವ; ತೇ = ನಿನಗೆ; ನಮಃ = ನಮಸ್ಕಾರ; ನಮಃ ನಮಃ ಅಸ್ತು = ಮತ್ತೆ ಮತ್ತೆ ನಮಸ್ಕಾರಮಾಡುವ ಬುದ್ಧಿಯುಂಟಾಗಲಿ.

ಸಾತ್ವತರು ಎಂದರೆ ಸಾತ್ವಿಕ ಸ್ವರೂಪರಾದ ಭಗವದ್ಭಕ್ತರು. ಜೀವರು ಅಸ್ವತಂತ್ರರಾದುದರಿಂದ ಪರಮಕರುಣಾಸಿಂಧುವಾದ ಭಗವಂತ ಅವರಲ್ಲಿ ಭಕ್ತಿಭಾವವನ್ನು ಉದ್ಬೋಧಗೊಳಿಸಿ, ತನ್ನ ಮಹಿಮಾಜ್ಞಾನವನ್ನು ಕೊಟ್ಟು ಭಕ್ತಿಯನ್ನು ಪರಿಪಕ್ವಗೊಳಿಸಿ, ಅವರಿಗೆ ಮುಕ್ತಿಯನ್ನೂ ಕೊಡುತ್ತಾನೆ. ಸಕಲಶಾಸ್ತ್ರಗಳ ಸಾರ, ಹರಿಸರ್ವೋತ್ತಮತ್ವ. ಅದನ್ನು ಅಲ್ಲಗಳೆದು, ಭಕ್ತಿಮಾರ್ಗವು ಜ್ಞಾನಮಾರ್ಗಕ್ಕೆ ಸಾಧಕವೆಂದು ತಿಳಿದು, ತನ್ನನ್ನು ತಾನು ಬ್ರಹ್ಮವೆಂದು ತಿಳಿಯುವುದೇ ಮುಕ್ತಿಯೆಂದು ಭಾವಿಸಿ, ದೇಹದಂಡನೆಯ ರೂಪವಾದ ಯೋಗಾಭ್ಯಾಸ ಮಾಡುವವರಿಗೆ ಭಗವತ್ಸ್ವರೂಪದ ದಿಕ್ಕುದೆಸೆಗಳ ಅರಿವು ಉಂಟಾಗುವುದಿಲ್ಲ. ಆದರಿಂದ 'ನಾನೇ ಬ್ರಹ್ಮ' ಎಂಬ ದುರ್ಮತಿಯು ಸ್ಥಿರವಾಗಿ, ಅದು ಅವರನ್ನು ತಮಸ್ಸಿಗೆ ಕೊಂಡೊಯ್ಯುವುದು. ಭಗವಂತನು ಸ್ವತಂತ್ರನೂ, ಸಮಾಧಿಕರಹಿತನೂ ಆದುದರಿಂದ ತನ್ನ ಆನಂದಾತಿಶಯ ಸ್ವರೂಪದಲ್ಲಿ ರಮಿಸತಕ್ಕವನು; ಭಕ್ತಜನರಿಗೆ ಆನಂದದಾಯಕನಾದವನು.

**ಯತ್ಕೀರ್ತನಂ ಯಚ್ಛ್ರವಣಂ ಯದೀಕ್ಷಣಂ ಯದ್ವಂದನಂ**
**ಯತ್ಸ್ಮರಣಂ ಯದರ್ಹಣಂ ।**
**ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಂ ತಸ್ಮೈ ಸುಭದ್ರ ಶ್ರವಸೇ**
**ನಮೋ ನಮಃ ॥ ೧೫ ॥**

ಯತ್ ಕೀರ್ತನಂ = ಯಾರ ಮಹಿಮಾನುವರ್ಣನೆಯು; ಯತ್ ಶ್ರವಣಂ = ಯಾರ ಕಥಾಶ್ರವಣವು; ಯತ್ ಈಕ್ಷಣಂ = ಯಾರ ದರ್ಶನವು; ಯತ್ ವಂದನಂ = ಯಾರಿಗೆ ನಮಸ್ಕಾರ ಮಾಡುವುದು; ಯತ್ ಸ್ಮರಣಂ = ಯಾರನ್ನು ಧ್ಯಾನಿಸುವುದು; ಯತ್ ಅರ್ಹಣಂ = ಯಾರನ್ನು ಪೂಜಿಸುವುದು; ಲೋಕಸ್ಯ = ಭಕ್ತಜನರ; ಕಲ್ಮಷಂ = ದೋಷರಾಶಿಯನ್ನು; ಸದ್ಯಃ = ಕೂಡಲೇ; ವಿಧುನೋತಿ = ಚೆನ್ನಾಗಿ ಕಳೆದುಬಿಡುವುದೋ; ತಸ್ಮೈ = ಆ; ಭದ್ರಶ್ರವಸೇ = ಪುಣ್ಯಕೀರ್ತಿಯಾದ ಭಗವಂತನಿಗೆ; ನಮೋ ನಮಃ = ನಮಸ್ಕಾರ ನಮಸ್ಕಾರ.

ಅನಾದಿ ಅಜ್ಞಾನಾವರಣಬದ್ಧರಾದ ಜೀವರು ಅಜ್ಞಾನ ನಿಮಿತ್ತವಾದ ದೋಷಗಳನ್ನು ಪರಿಹರಿಸಿಕೊಂಡರೆ ಮಾತ್ರ ತಮ್ಮ ಸ್ವರೂಪಾನಂದ ಲಾಭವಾಗುವುದು.

ಜೀವರು ಅಸ್ವತಂತ್ರರಾದುದರಿಂದ, ಅವರಿಗೆ ಸ್ವತಂತ್ರನೂ ನಿತ್ಯಾನಂದ ಪರಿಪೂರ್ಣನೂ, ನಿತ್ಯಬಂಧುವೂ ಆದ ಭಗವಂತನಲ್ಲಿ ಸ್ನೇಹ ಉಂಟಾಗಬೇಕು. ಅದು ಆ ಪರಮಪುರುಷನ ನಾಮೋಚ್ಚಾರಣೆ, ಮಹಿಮಾಶ್ರವಣ, ಆಹಿತ ಪ್ರತಿಮಾ ದರ್ಶನ, ಪ್ರದಕ್ಷಿಣೆ–ನಮಸ್ಕಾರ, ಪೂಜೆ ಮತ್ತು ಧ್ಯಾನಗಳಿಂದ ಲಭಿಸುವುದು; ಕಲ್ಮಲರೂಪವಾದ ದೋಷಗಳು ನೀಗಿ ಹೋಗಿ, ಸ್ನೇಹಕ್ಕೆ ಅನುಕೂಲವಾದ ವಿನಮ್ರ ಭಾವವುಂಟಾಗುವುದು. ತಲೆಬಾಗಿ, ತನುವನ್ನು ನೆಲದ ಮೇಲೆ ಈಡಾಡಿ, ಪುನಃ ಪುನಃ ನಮಸ್ಕರಿಸುವುದು ಆ ವಿನಮ್ರಭಾವದ ಲಕ್ಷಣ. ಇದು ಭಗವದ್ಭಕ್ತ ಜೀವರಿಗೆ ಸಹಜವಾದುದು. ಅಯೋಗ್ಯ ಜೀವರಿಗೆ ಇಂತಹ ವಿನಮ್ರಭಾವವು ಅಸಹ್ಯವೆನಿಸಿ, ಅವರು ಭಗವಂತನಿಗೆ ವಿಮುಖರಾಗಿ, ತಮ್ಮ ಸ್ವಭಾವಕ್ಕೆ ಅನುಗುಣವಾಗಿ ತಮಸ್ಸಿನ ಹಳ್ಳದಲ್ಲಿ ಬೀಳುವರು.

**ವಿಚಕ್ಷಣಾ ಯಚ್ಚರಣೋಪಸಾದನಾತ್ಸಂಗಂವ್ಯುದ-**
**ಸ್ಯೋಭಯತೋಂತರಾತ್ಮನಃ ।**
**ವಿಂದಂತಿ ಹಿ ಬ್ರಹ್ಮಗತಿಂ ಗತಕ್ಲಮಾಸ್ತಸ್ಮೈ ಸುಭದ್ರಶ್ರವಸೇ ನಮೋ**
**ನಮಃ ॥ ೧೬ ॥**

ವಿಚಕ್ಷಣಾಃ = ಬುದ್ಧಿವಂತರಾದ ಭಗವದ್ಭಕ್ತರು; ಯತ್ ಚರಣ ಉಪಸಾದನಾತ್= ಯಾರ ಚರಣಕಮಲಗಳನ್ನು ಆಶ್ರಯಿಸುವುದರಿಂದ, ಉಭಯತಃ = ಇಹಲೋಕದ ಸುಖ, ಪರಲೋಕದ ಸುಖ ಎಂಬ ಎರಡರ; ಅಂತರಾತ್ಮನಃ = ಮನಸ್ಸಿನ; ಸಂಗಂ = ಕಾಮನೆಯನ್ನು; ವ್ಯುದಸ್ಯ = ಹೋಗಲಾಡಿಸಿಕೊಂಡು; ಗತ ಕ್ಲಮಾಃ = ಅಜ್ಞಾನ ನಿಮಿತ್ತವಾದ ದುಃಖಗಳನ್ನು ದೂರಮಾಡಿ; ಬ್ರಹ್ಮಗತಿಂ = ಬ್ರಹ್ಮನನ್ನು ಹೊಂದಿಕೊಂಡು ಸುಖಿಸುವ ವೈಕುಂಠ ಪದವಿಯನ್ನು; ವಿಂದಂತಿ = ಪಡೆಯುವರೋ; ತಸ್ಮೈಃ = ಅಂತಹ; ಸುಭದ್ರ ಶ್ರವಸೇ = ಮಂಗಳಪ್ರದವಾದ ಕೀರ್ತಿಶಾಲಿಗೆ; ನಮಃ ನಮಃ = ಪುನಃ ಪುನಃ ನಮಸ್ಕಾರ.

ಜ್ಞಾನ, ಭಕ್ತಿ, ವೈರಾಗ್ಯ– ಎಲ್ಲದರ ಸಾರಭೂತವಾದುದು ಭಗವಂತನಿಗೆ ಹೃತ್ಪೂರ್ವಕವಾಗಿ ಮಾಡುವ ನಮಸ್ಕಾರ. ಅದು, ಶಾಸ್ತ್ರಾರ್ಥಗಳನ್ನೆಲ್ಲಾ ತನ್ನಲ್ಲಿ ಅಡಗಿಸಿಟ್ಟುಕೊಂಡಿರುವ ಓಂಕಾರದಂತೆ! ಸಾಮಾನ್ಯ ಭಕ್ತರು, ಸಾಂಸಾರಿಕ ಮತ್ತು ಸ್ವರ್ಗಾದಿ ಭೋಗಗಳನ್ನು ನಿರಾಕರಿಸಿದರೂ, ಮುಕ್ತಿಸುಖವನ್ನು ಅಪೇಕ್ಷಿಸುವರು. ಮಹಾಭಕ್ತರು ಮುಕ್ತಿಸುಖವನ್ನೂ ಬಯಸುವುದಿಲ್ಲ. ಎರಡು ಬಗೆಯ ಸಂಬಂಧಗಳನ್ನೂ ತೊರೆದವರು ಆ ಏಕಾಂತಭಕ್ತರು. ಭಗವಂತನಲ್ಲಿ ಮಾಡುವ ಭಕ್ತಿಯೇ ಅವರ ಆನಂದ.

ಅವರಿಗೆ ಮುಕ್ತಿಯಲ್ಲಿ ಬಗೆ ಬಗೆಯ ಸುಖಗಳು ನಿತ್ಯವಾಗಿ ಲಭಿಸುವುದು ನಿಜ. ಆದರೆ, ಆ ಸುಖಗಳಲ್ಲಿ ಭಗವತ್ಸ್ವರೂಪವನ್ನು ಕಂಡು ಮೋದಿಸುವುದು ಅವರ ಸ್ವಭಾವ.

**ತಪಸ್ವಿನೋ ದಾನಪರಾ ಯಶಸ್ವಿನೋ ಮನಸ್ವಿನೋ ಮಂತ್ರ ವಿದಃ ಸುಮಂಗಲಾಃ ।**
**ಕ್ಷೇಮಂ ನ ವಿಂದಂತಿ ವಿನಾಯದರ್ಪಣಂ ತಸ್ಮೈ ಸುಭದ್ರ ಶ್ರವಸೇ ನಮೋ ನಮಃ ॥ ೧೭ ॥**

ತಪಸ್ವಿನಃ = ದೇಹದಂಡನೆಯ ಅಭ್ಯಾಸಿಗಳು; ದಾನಪರಾಃ = ದಾನಶೀಲರು; ಯಶಸ್ವಿನಃ = ಕೀರ್ತಿಲಾಭ ಉಳ್ಳವರು; ಮನಸ್ವಿನಃ = ಮನೋನಿಗ್ರಹ ಉಳ್ಳವರು; ಮಂತ್ರವಿದಃ = ಮಂತ್ರಜಪಸಿದ್ಧರು; ಸುಮಂಗಲಾಃ = ಮಂಗಳಪ್ರದಗಳಾದ ಸತ್ಕರ್ಮಗಳಲ್ಲಿ ನಿರತರಾದವರು; ಯದರ್ಪಣಂ ವಿನಾ = ತಮ್ಮ ಪ್ರಾಪ್ತಿಗಳು ಭಗವಂತನಿಂದಲೇ ಎಂದು ತಿಳಿದು ತಮ್ಮ ಕೃತ್ಯಗಳನ್ನು ಭಗವಂತನಿಗೆ ಸಮರ್ಪಣ ಮಾಡದ ಹೊರತು; ಕ್ಷೇಮಂ = ಸುಖಶಾಂತಿಗಳನ್ನು; ನ ವಿಂದಂತಿ = ಹೊಂದುವುದಿಲ್ಲವೋ; ತಸ್ಮೈ = ಅಂತಹ ಮಹಾಮಹಿಮನಿಗೆ; ನಮಃ ನಮಃ = ನಮಸ್ಕಾರ, ನಮಸ್ಕಾರ.

ಭಗವಂತನ ಕೀರ್ತಿಯನ್ನು ಸಾರುವ ಕಥಾಶ್ರವಣವು ಜ್ಞಾನ ಭಕ್ತಿ ವೈರಾಗ್ಯಗಳನ್ನು ಉಂಟುಮಾಡುವುದರಲ್ಲಿ ಅತಿ ಮುಖ್ಯವಾದ ಸಾಧನ. ಕಥಾಶ್ರವಣದಿಂದ ಹದವಾದ ಮನಸ್ಸು, ಯಥೋಚಿತ ಸತ್ಕರ್ಮಾನುಷ್ಠಾನಕ್ಕೆ ಸಹಾಯಕವಾಗುವುದಲ್ಲದೆ, ಜ್ಞಾನ ಸಂಪಾದನೆ ಮತ್ತು ವೈರಾಗ್ಯ ಬುದ್ಧಿಗೂ ಅನುವಾಗುವುದು; ಸದ್ಭಕ್ತಿಗೆ ಕಾರಣವಾಗುವುದು. ಆದುದರಿಂದ 'ಸುಭದ್ರಶ್ರವಸೇ' ಪರಮಮಂಗಳವನ್ನುಂಟುಮಾಡುವ ಕೀರ್ತಿಶಾಲಿಗೆ ನಮಸ್ಕಾರ, ನಮಸ್ಕಾರ ಎಂದು ಅಡಿಗಡಿಗೆ ಹೇಳುತ್ತಿರುವರು.

**ಕಿರಾತ ಹೂಣಾಂಧ್ರ ಪುಲಿಂದ ಪುಲ್ಕಸಾ ಆಭೀರ ಕಂಕಾಯವನಾಃ ಶಕಾದಯಃ ।**
**ಯೇನ್ಯೇಚಪಾಪಾ ಯದಪಾಶ್ರಯಾಶ್ರಯಾಚ್ಛುದ್ಧ್ಯಂತಿ ತಸ್ಮೈ ಪ್ರಭವಿಷ್ಣವೇ ನಮಃ ॥ ೧೮ ॥**

ಅಪಾಶ್ರಯಾಃ = ಪರಬ್ರಹ್ಮನ ಹೊರತು ಬೇರೆ ಆಶ್ರಯವಿಲ್ಲವೆಂದು ನಂಬಿರುವ ಯಾವ ಬ್ರಾಹ್ಮಣರೋ, ಅವರನ್ನು; ಆಶ್ರಯಾಃ = ಆಶ್ರಯಿಸಿದಂತಹ; ಕಿರಾತ, ಹೂಣ,

ಆಂಧ್ರ, ಪುಲಿಂದ, ಪುಲ್ಕಸ, ಆಭೀರ, ಕಂಕ, ಯವನ, ಶಕ; ಆದಯಃ = ಇವರೇ ಮೊದಲಾದವರು; ಚ = ಮತ್ತು; ಅನ್ಯೇ ಪಾಪಾಃ = ಪಾಪಯೋನಿಗಳಲ್ಲಿ ಜನ್ಮತಾಳಿದ ಇತರರು; ಯತ್= ಯಾರ ಬಲದಿಂದ; ಶುಧ್ಯಂತಿ = ಪವಿತ್ರರಾಗುವರೋ;ತಸ್ಮೈ = ಅಂತಹ; ಪ್ರಭವಿಷ್ಣವೇ = ಪ್ರಭಾವಶಾಲಿಯಾದ ಪರಮಾತ್ಮನಿಗೆ; ನಮಃ = ನಮಸ್ಕಾರ.

ಪರ್ವತನಿವಾಸಿ ದಂಪತಿಗಳಿಂದ ಜನಿಸಿದವರು ಕಿರಾತರು, ಬೇಟೆಯಿಂದ ಜೀವಿಸಲಾರಂಭಿಸಿದವರು. ವೈಶ್ಯಪುರುಷನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವರು ವೈದೇಹಕರು; ಶೂದ್ರಪುರುಷನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವರು ಚಂಡಾಲರು; ಚಂಡಾಲನಿಂದ ಜನಿಸಿದವರು ಪುಲ್ಕಸರು. ವೈದೇಹಪುರುಷನಿಂದ ಪುಲ್ಕಸಿಯಲ್ಲಿ ಜನಿಸಿದವರು ಹೂಣರು. ವೈದೇಹಕರಿಂದ ಜನಿಸಿದವರು ಆಂಧ್ರರು. ಬ್ರಾಹ್ಮಣನಿಂದ ವೈಶ್ಯಸ್ತ್ರೀಯಲ್ಲಿ ಜನಿಸಿದವರು ಅಂಬಷ್ಠರು. ಬ್ರಾಹ್ಮಣನಿಂದ ಅಂಬಷ್ಠಕನ್ಯೆಯಲ್ಲಿ ಜನಿಸಿದವರು ಆಭೀರರು. ಕ್ಷತ್ರಿಯನಿಂದ ವೈಶ್ಯಸ್ತ್ರೀಯಲ್ಲಿ ಜನಿಸಿದವರು ಯವನರು. ಗಡ್ಡಮೀಸೆಗಳ ಪ್ರಾಬಲ್ಯವುಳ್ಳವರು ಶಕರು, ತುರುಷ್ಕರು. ಹೀಗೆ ಅನುಲೋಮ ವಿಲೋಮಗಳಿಂದ ಉತ್ಪನ್ನವಾದ ಜಾತಿಗಳು ಮುಖ್ಯವಾಗಿ ಅರವತ್ನಾಲ್ಕು. ಇವರುಗಳು ನೇರವಾಗಿ ವೇದಾಧ್ಯಯನಾದಿಗಳಿಂದ ಜ್ಞಾನ ಸಂಪನ್ನರಾಗಲು ಅನರ್ಹರಾದುದರಿಂದ ಬ್ರಾಹ್ಮಣರಿಂದ ಉಪದೇಶಪಡೆದು, ಜ್ಞಾನ ಭಕ್ತಿ ವೈರಾಗ್ಯಗಳಿಂದ ಪಾಪದೂರರಾಗಿ ಉತ್ತಮಗುಣಶೀಲರಾಗಬಹುದು. ಅಂತಹ ಗುಣಶೀಲಗಳಿಂದ ಅವರು ಪರಮಾತ್ಮನ ಪ್ರಸಾದಕ್ಕೆ ಭಾಗಿಗಳಾಗುವರು. ಆದುದರಿಂದ ಸಕಲಭಕ್ತ ಜನರನ್ನೂ ಉದ್ಧರಿಸುವ ಭಗವಂತ, ಸಕಲರಿಂದಲೂ ನಮಸ್ಕಾರಾರ್ಹನಾಗಿದ್ದಾನೆ. [ಮಿಶ್ರಜಾತಿಗಳವರೂ, ಇವರು ಆಶ್ರಯಿಸಬಹುದಾದ ಬ್ರಾಹ್ಮಣರೂ ಭಾರತದ ಹೊರಗಿನ ದೇಶಗಳಲ್ಲಿಯೂ ಇದ್ದರೆಂಬುದು ಇದರಿಂದ ಸ್ಪಷ್ಟವಾಗುತ್ತದೆ.]

**ಸ ಏಷ ಆತ್ಮಾತ್ಮವತಾಮಧೀಶ್ವರ ಸ್ತ್ರಯೀಮಯೋ**
**ಧರ್ಮಮಯಸ್ತಪೋಮಯಃ ।**
**ಗತವ್ಯಲೀಕೈರಜಶಂಕರಾದಿಭಿರ್ವಿತರ್ಕ್ಯಲಿಂಗೋ**
**ಭಗವಾನ್ಪ್ರಸೀದತಾಂ ॥ ೧೯ ॥**

ಸಃ ಏಷಃ = ಇಂತಹ ಮಹಿಮಾ ಪುರುಷನು; ಆತ್ಮವತಾಂ = ಭಕ್ತ ಜನರ; ಆತ್ಮಾ ಅಧೀಶ್ವರಃ = ಅಂತರಾತ್ಮನಾಗಿ ನಿಯಾಮಕನಾಗಿರುವನು; ತ್ರಯೀಮಯಃ = ವೇದ ವೇದ್ಯನಾಗಿ ವೇದಸ್ವರೂಪನಾಗಿರುವನು; ಧರ್ಮಮಯಃ = ವೈದಿಕ ಧರ್ಮಾನುಷ್ಠಾನ

ಮಾಡಿಸಿ ಪುಣ್ಯವನ್ನು ಸಂಪಾದಿಸಿಕೊಡುವ ಧರ್ಮಸ್ವರೂಪನಾಗಿದ್ದಾನೆ; ತಪೋಮಯಃ = ನಿಯಮ ನಿಷ್ಠೆಗಳಿಂದ ಧ್ಯಾನಮಾಡುವವರಲ್ಲಿ ಧ್ಯಾನಂಗತನಾಗಿ ಬಿಂಬರೂಪದಿಂದಿದ್ದಾನೆ; ಗತವ್ಯಲೀಕೈಃ = ಸಾಂಸಾರಿಕ ಕ್ಲೇಶ ದೂರರಾದ; ಅಜ ಶಂಕರಾದಿಭಿಃ = ಬ್ರಹ್ಮರುದ್ರೇಂದ್ರಾದಿಳಿಂದ; ವಿತರ್ಕ್ಯಲಿಂಗಃ = ವಿಶೇಷವಾಗಿ ತಿಳಿಯಲ್ಪಡುವ ಸೃಷ್ಟ್ಯಾದಿ ಗುಣಶೀಲನಾದ; ಭಗವಾನ್= ಷಡ್ಗುಣೈಶ್ವರ್ಯ ಪರಿಪೂರ್ಣನಾದ ಜಗತ್ಪತಿಯು; ಪ್ರಸೀದತಾಂ = ಸುಪ್ರಸನ್ನನಾಗಲಿ.

ವೇದಮಯನೂ, ಧರ್ಮಮಯನೂ, ತಪೋಮಯನೂ ಆದ ಭಗವಂತನ ಗುಣಾತಿಶಯಗಳನ್ನು ಬ್ರಹ್ಮರುದ್ರಾದಿಗಳು ಅವರವರ ಯೋಗ್ಯತಾನುಸಾರ, ಇತರರಿಗಿಂತ ಅತಿಶಯವಾಗಿ ಆಲೋಚಿಸಿ ತಿಳಿಯುವರು. ಅಂತಹ ದೇವೋತ್ತಮರ ಅಂತರ್ಯಾಮಿಯಾದ ಭಗವಂತನು ಈ ಭಾಗವತ ಕಥಾಪ್ರಸಂಗವನ್ನು ಸಾಂಗವಾಗಿ, ಸಾರ್ಥಕಗೊಳಿಸಲೆಂದು ಶ್ರೀಶುಕಾಚಾರ್ಯರು ಪ್ರಾರ್ಥಿಸಿದ್ದಾರೆ.

**ಶ್ರೀಯಃಪತಿರ್ಯಜ್ಞಪತಿಃ ಪ್ರಜಾಪತಿರ್ಧಿಯಾಂ**
**ಪತಿರ್ಲೋಕಪತಿರ್ಧರಾಪತಿಃ ।**
**ಪತಿರ್ಗತಿಶ್ಚಾಂಧಕ ವೃಷ್ಣಿಸಾತ್ವತಾಂ**
**ಪ್ರಸೀದತಾಂ ಮೇ ಭಗವಾನ್ಸತಾಂಪತಿಃ ॥ ೨೦ ॥**

ಶ್ರೀಯಃಪತಿಃ = ಲಕ್ಷ್ಮೀಪತಿಯು; ಯಜ್ಞಪತಿಃ = ಯಜ್ಞಫಲದಾಯಕನಾದವನು; ಪ್ರಜಾಪತಿಃ = ಪ್ರಜಾಪಾಲಕನಾದವನು; ಧಿಯಾಂಪತಿಃ = ಕರ್ಮಾನುಷ್ಠಾನ ಪರರಾದವರಿಗೆ ಬುದ್ಧಿಪ್ರದನಾದವನು; ಲೋಕಪತಿಃ = ಲೋಕಪಾಲಕರಿಗೆಲ್ಲಾ ಯಜಮಾನನಾದವನು; ಧರಾಪತಿಃ = ಸಕಲೈಶ್ವರ್ಯನಿಧಿಯಾದ ಭೂದೇವಿಗೆ ಪತಿಯಾದವನು; ಅಂಧಕವೃಷ್ಣಿಸಾತ್ವತಾಂ = ತನ್ನ ವಂಶೀಕರಾದ ಅಂಧಕರು, ವೃಷ್ಣಿಗಳು ಮತ್ತು ಸಾತ್ವತರಿಗೆ; ಪತಿಃ = ಗತಿದಾಯಕನಾದವನು; ಸತಾಂಪತಿಃ = ಅಂತೆಯೇ ಸಕಲ ಸಜ್ಜನರಿಗೂ ಸದ್ಗತಿಪ್ರದನಾದವನು; ಅಂತಹ; ಭಗವಾನ್= ಸರ್ವಸ್ವಾಮಿಯು; ಪ್ರಸೀದತಾಂ= ಪ್ರಸನ್ನನಾಗಲಿ.

ಜಗತ್ತಿನ ವಸ್ತುಕ್ರಿಯೆಗಳಿಗೆ ಅಭಿಮಾನಿಗಳಾದ ದೇವತೆಗಳ ಪ್ರಸಾದವೂ ಅಗತ್ಯ. ಆದರೆ, ಅವರ ಮುಖಾಂತರ ಪರಮಾತ್ಮನ ಪ್ರಸಾದವನ್ನು ಬೇಡಬೇಕೆಂಬುದು ನಿಯಮ. ಏಕೆಂದರೆ, ಎಲ್ಲರೂ ಅಸ್ವತಂತ್ರರು; ಪರಮಾತ್ಮನೊಬ್ಬನೇ ಸ್ವತಂತ್ರ. ದೇವತಾ ಪ್ರಪಂಚದವರು ನಮ್ಮ ಸಮೀಪದ ಬಂಧುಗಳು. ಅವರನ್ನು ಆಶ್ರಯಿಸಿದರೆ, ಅವರು

ಭಗವತ್ಪ್ರಸಾದವನ್ನು ನಮಗೆ ಸುಲಭವಾಗಿ ದೊರಕಿಸಿಕೊಡುವರು; ಭಗವಂತನ ಸ್ವಾತಂತ್ರ್ಯ ಜ್ಞಾನವನ್ನು ಕರುಣಿಸುವರು. ಅಂತಹ ಜ್ಞಾನಲಾಭವೇ ಮುಖ್ಯ ಪ್ರಸಾದ.

**ಯದಂಘ್ರ್ಯಭಿಧ್ಯಾನ ಸಮಾಧಿ ಧೌತಯಾಧಿಯಾನುಪಶ್ಯಂತಿ ಹಿ**
**ತತ್ತ್ವಮಾತ್ಮನಃ ।**
**ವದಂತಿ ಚೈತತ್ಕವಯೋ ಯಥಾರುಚಂ ಸಮೇ ಮುಕುಂದೋ**
**ಭಗವಾನ್ಪ್ರಸೀದತಾಂ ॥ ೨೧ ॥**

ಯತ್ ಅಂಘ್ರಿ ಅಭಿಧ್ಯಾನ = ಯಾವ ಪರಮಪುರುಷನ ಪಾದಕಮಲಗಳ ಧ್ಯಾನರೂಪವಾದ; ಸಮಾಧಿ = ಬಾಹ್ಯವನ್ನೆಲ್ಲಾ ಮರೆತು ತದೇಕಚಿತ್ತರನ್ನಾಗಿ ಮಾಡುವ ಅಸಂಪ್ರಜ್ಞಾತ ಸಮಾಧಿಯೋಗದಿಂದ; ಧೌತಧಿಯಾ = ಅವಿದ್ಯಾಕಾಮಗಳೆಂಬ ಮಲಗಳನ್ನೆಲ್ಲಾ ಕಳೆದುಕೊಂಡು ನಿರ್ಮಲವಾದ ಚಿತ್ತದಿಂದ; ಕವಯಃ = ಜ್ಞಾನಿಗಳು; ಆತ್ಮನಃ ತತ್ತ್ವಂ = ಪರಮಾತ್ಮ ತತ್ತ್ವವನ್ನು; ಪಶ್ಯಂತಿ ಹಿ = ಕಂಡುಕೊಳ್ಳುತ್ತಾರೆ; ತತ್= ತಾವು ಕಂಡ ಬಗೆಯನ್ನು; ಯಥಾರುಚಂ = ಶಿಷ್ಯರ ಅಭಿರುಚಿಗಳಿಗೆ ತಕ್ಕಂತೆ; ವದಂತಿ ಚ = ವರ್ಣಿಸಿ ಉಪದೇಶವನ್ನೂ ಮಾಡುತ್ತಾರೆ; ಸಃ = ಅಂತಹ; ಭಗವಾನ್= ಸರ್ವೋತ್ತಮನಾದ; ಮುಕುಂದಃ = ಮೋಕ್ಷಪ್ರದನಾದ ಮುಕುಂದನಾಮಕ ಪರಮಾತ್ಮನು; ಮೇ = ನನ್ನ ವಿಷಯದಲ್ಲಿ; ಪ್ರಸೀದತಾಂ = ಪ್ರಸನ್ನನಾಗಲಿ.

ಭಗವತ್ತತ್ತ್ವದರ್ಶನ ವಿಷಯದಲ್ಲಿ ಆಪ್ತವಾಕ್ಯಪ್ರಾಮಾಣ್ಯವನ್ನು ಇಲ್ಲಿ ತಿಳಿಸಿದ್ದಾರೆ. ಭಗವತ್ತತ್ತ್ವವನ್ನು ಯೋಗಬಲದಿಂದ ಪ್ರತ್ಯಕ್ಷೀಕರಿಸಿಕೊಂಡವರು ಅಂತಹ ಆಪ್ತರು. ಅವರ ಬಲದಿಂದ, ತಮ್ಮ ಅಂತರಂಗದಲ್ಲಿ ಪ್ರತ್ಯಕ್ಷನಾಗಿರುವ ಅಂತರಾತ್ಮನು ಭಾಗವತ ಕಥಾನಿರೂಪಣೆಗೆ ಪ್ರೇರಕನಾಗಿರುವನೆಂದು ಶ್ರೀಶುಕಾಚಾರ್ಯರು ಇಲ್ಲಿ ಸ್ಮರಿಸಿದ್ದಾರೆ. ಶ್ರೀವೇದವ್ಯಾಸರೇ ಅವರ ಆಪ್ತ ಗುರುಗಳು.

**ಪ್ರಚೋದಿತಾ ಯೇನ ಪುರಾ ಸರಸ್ವತೀ ವಿತನ್ವತಾಜಸ್ಯ ಸತೀಂ**
**ಸ್ಮೃತಿಂ ಹೃದಿ ।**
**ಸಲಕ್ಷಣಾ ಪ್ರಾದುರಭೂತ್ಕಿಲಾಸ್ಯತಃ ಸಮೇ ಋಷೀಣಾಮೃಷಭಃ**
**ಪ್ರಸೀದತಾಂ ॥ ೨೨ ॥**

(೧) ಪುರಾ = ಸೃಷ್ಟಿಯ ಆರಂಭಕಾಲದಲ್ಲಿ; ಅಜಸ್ಯ = ಅಕಾರವಾಚ್ಯನಾದ ಪರಬ್ರಹ್ಮನಿಂದ ಜಾತನಾದ ಚತುರ್ಮುಖಬ್ರಹ್ಮನ; ಹೃದಿ ಸತೀಂ = ಹೃದಯಸ್ಥವಾದ

ಜೀವೋತ್ತಮಲಕ್ಷಣವುಳ್ಳ; ಸ್ಥಿತಿಂ = ಇರುವಿಕೆಯನ್ನು; ವಿತನ್ವತಾ = ಪ್ರಕಟಪಡಿಸುವ; ಸಲಕ್ಷಣಾ = ತನ್ನ ಸ್ವರೂಪಭೂತಸಲ್ಲಕ್ಷಣಗಳಿಂದ ಯುಕ್ತಳಾದ; ಸರಸ್ವತೀ = ಸರಸ್ವತೀದೇವಿಯು(ವೇದಾಭಿಮಾನಿ ದೇವಿಯು); ಯೇನ = ಯಾವ ಬ್ರಹ್ಮನಿಂದ ಪ್ರೇರಿತಳಾಗಿ; ಆಸ್ಯತಃ = ಅವನ ಮುಖ ಚತುಷ್ಟಯದಿಂದ; ಪ್ರಾದುರಭೂತ್ ಕಿಲ = ಆವಿರ್ಭವಿಸಿದಳೋ; ಸಃ ಋಷೀಣಾಂ ಋಷಭಃ = ಆ ಋಷಿಕುಲಶ್ರೇಷ್ಠನಾದ ಪರಮೇಷ್ಠಿಯು; ಮೇ = ನನ್ನ ವಿಷಯದಲ್ಲಿ; ಪ್ರಸೀದತಾಂ = ಪ್ರಸನ್ನನಾಗಲಿ.

(೨) ಋಷೀಣಾಂ ಋಷಭಃ = ಬ್ರಹ್ಮಜ್ಞಾನಿಗಳಿಗೆ ಜ್ಞಾನಪ್ರದನಾದ, ಪರಮ ವಾಗೀಶ್ವರಿಯೂ, ವೇದಗಳಿಗೆ ಮುಖ್ಯಾಭಿಮಾನಿನಿಯೂ ಆದ ಲಕ್ಷ್ಮೀದೇವಿಯ ಪತಿಯು; ಮೇ ಪ್ರಸೀದತಾಂ = ನನ್ನಲ್ಲಿ ಪ್ರಸನ್ನನಾಗಲಿ.

(೩) ಅಜಸ್ಯ = ನನ್ನ ಪಿತಾಮಹನಾದ ಪರಾಶರ ಮಹರ್ಷಿಯ; ಆಸ್ಯತಃ ಪ್ರಚೋದಿತಃ = ಉಪದೇಶವಾಣಿಯಿಂದ ಪ್ರಚೋದಿತನಾಗಿ; ಪ್ರಾದುರಭೂತ್ = ಪ್ರಕಟನಾದಂತಹ; ಋಷೀಣಾಂ ಋಷಭಃ = ಋಷಿಗಣಶ್ರೇಷ್ಠನೆನಿಸಿದ ವೇದವ್ಯಾಸದೇವನು; ಮೇ ಪ್ರಸೀದತಾಂ = ನನ್ನಲ್ಲಿ ಪ್ರಸನ್ನನಾಗಲಿ.

ಹರಿಗುರುಸ್ತವನವು ಗ್ರಂಥಾರಂಭದಲ್ಲಿ ಅವಶ್ಯಕವಾದುದು. ಆದುದರಿಂದ ವಾಣೀಚತುರ್ಮುಖರನ್ನು ಪ್ರಾರ್ಥಿಸಿದ್ದಾರೆ. ಗುರುಗಳಾದ ವೇದವ್ಯಾಸದೇವರನ್ನೂ ಸ್ಮರಿಸಿದ್ದಾರೆ. ವಾಣೀಬ್ರಹ್ಮರಲ್ಲಿ ಬಿಂಬರೂಪರಾಗಿ, ಆ ಹೆಸರುಗಳಿಂದ ಮುಖ್ಯವಾಚ್ಯನಾಗಿರುವ ಲಕ್ಷ್ಮೀನಾರಾಯಣರನ್ನೂ ಸ್ತುತಿಸಿದ್ದಾರೆ.

ವೇದಹೃದಯರಾದ ಬ್ರಹ್ಮದೇವರ ನಿಜಸ್ಥಿತಿಯನ್ನು ಪ್ರಕಟಿಸುವ ಸಾಮರ್ಥ್ಯವುಳ್ಳ ಸರಸ್ವತೀದೇವಿಯು ತನ್ನ ಸ್ವಚ್ಛ ಸ್ವರೂಪಲಕ್ಷಣಗಳಿಂದ ವೇದಾಭಿಮಾನಿಯಾಗಿರುವುದರಿಂದ ಆಕೆಯ ಸ್ಮರಣೆಯಿಂದ ವೇದಹೃದಯವು ಸಮೀಚೀನವಾದ ರೀತಿಯಲ್ಲಿ ಗೋಚರಿಸುವುದು.

**ಭೂತೈರ್ಮಹದ್ಭಿರ್ಯ ಇಮಾಃ ಪುರೋ**
**ವಿಭುರ್ನಿರ್ಮಾಯ ಶೇತೇ ಯದಮೂಷು ಪೂರುಷಃ ।**
**ಭುಂಕ್ತೇ ಗುಣಾನ್ ಷೋಡಶ ಷೋಡಶಾತ್ಮಕಃ**
**ಸೋಽಲಂಕೃಷೀಷ್ಟಭಗವಾನ್ವಚಾಂಸಿಮೇ** ॥ ೨೩ ॥

ಯಃ ವಿಭುಃ = ಯಾವ ಭಗವಂತನು; ಮಹದ್ಭಿಃ ಭೂತೈಃ = ಸರ್ವತ್ರ ತುಂಬಿರುವ ಪ್ರಕೃತಿ ವಿಕಾರಗಳಿಂದ; ಇಮಾಃ = ಈ ದೃಶ್ಯಮಾನಗಳಾದ; ಪುರಾಃ = ದೇಹಾದಿಗಳನ್ನು; ನಿರ್ಮಾಯ = ಸೃಷ್ಟಿಸಿ; ಯತ್ ಅಮೂಷು = ಯಾವ ಈ ಶರೀರಗಳಲ್ಲಿ; ಪೂರುಷಃ = ಶರೀರಗಳಲ್ಲಿರುವುದರಿಂದ ಪುರುಷನಾಮಕನಾದವನು; ಶೇತೇ = ಆತ್ಮಾದಿ ರೂಪಗಳಿಂದ ಸುಖವಾಗಿ ನೆಲೆಸಿರುವನೋ; ಷೋಡಶಾತ್ಮಕಃ = ಪಂಚಭೂತಗಳ ಮತ್ತು ಏಕಾದಶೇಂದ್ರಿಯಗಳ ಶಕ್ತಿಗಳಲ್ಲಿ ಶಕ್ತಿಪ್ರದನಾಗಿದ್ದು; ಷೋಡಶಗುಣಾನ್ = ಇವುಗಳ ಹದಿನಾರು ಗುಣಲಕ್ಷಣಗಳನ್ನು; ಭುಂಕ್ತೇ = ನಡೆಸಿ ಅನುಭವಕ್ಕೆ ತಂದುಕೊಡುವನೋ; ಸಃ ಭಗವಾನ್ = ಸರ್ವೇಂದ್ರಿಯ ಪ್ರೇರಕನಾದ ಆ ಪರಮಪುರುಷನು; ಮೇ = ನನ್ನ; ವಚಾಂಸಿ = ಪುರಾಣವನ್ನು ವಿವರಿಸುವ ಮಾತುಗಳನ್ನು; ಅಲಂಕೃಷೀಷ್ಟ = ತನಗೆ ಪ್ರಿಯವಾಗುವಂತೆ ಪ್ರಚೋದಿಸಲಿ.

ಜೀವರ ಜ್ಞಾನವು ಭಗವದಪರೋಕ್ಷದಿಂದ ಸತ್ವಾತಿಶಯಯುಕ್ತವಾಗಿದ್ದಾಗ, ಭ್ರಾಂತಿಯ 'ನಾನು' ಎಂಬುದು ಇಲ್ಲವಾಗಿ, ಸ್ವರೂಪಭೂತವಾದ 'ನಾನು' ಎಂಬುದು ಉಳಿದಿದ್ದು, ಭೂತೇಂದ್ರಿಯಗಳಿಗೂ, ಸ್ವರೂಪೇಂದ್ರಿಯಗಳಿಗೂ ನಿಯಾಮಕನಾದವನು ಶ್ರೀಹರಿಯೇ ಎಂಬ ಜ್ಞಾನ ಅಭಿವ್ಯಕ್ತವಾಗಿರುತ್ತದೆ. ಸಕಲ ವ್ಯಾಪಾರಗಳನ್ನೂ ಅವನೇ ಮಾಡಿ ನಮಗೆ ಫಲ ಕೊಡುತ್ತಾನೆ ಎಂಬ ತಿಳಿವಳಿಕೆ ಇರುತ್ತದೆ. ಅದು ಜೀವನ್ಮುಕ್ತಾವಸ್ಥೆಯಾಗಿ, ಪ್ರಾರಬ್ಧಕರ್ಮಗಳು ಭೌತಿಕವಾಗಿ ಇನ್ನೂ ನಡೆಯುತ್ತಿರುವುದರಿಂದ, "ನೀನೇ ಪ್ರೇರಕನೆಂಬ ಜ್ಞಾನವನ್ನು ಸ್ಥಿರವಾಗಿ ಕೊಡು, ನನ್ನ ಹೆಸರಿನಲ್ಲಿ ನೀನು ನಡೆಸುವ ಕಾರ್ಯಗಳು ನಿನಗೆ ಪ್ರಿಯವಾದವುಗಳಾಗಲಿ" ಎಂಬ ಪ್ರಾರ್ಥನೆಯೂ ಹೊರ ಹೊಮ್ಮುತ್ತದೆ. ಅದು ಸ್ವರೂಪಕ್ಕೆ ಅನುಗುಣವಾದ ಸತ್ವಗುಣದ ಕಾರ್ಯ. ಅದು ಶ್ಲಾಘ್ಯವೇ ಹೊರತು ನಿಂದ್ಯವಾದ ಗುಣಕಾರ್ಯವಲ್ಲ.

**ನಮಸ್ತಸ್ಮೈ ಭಗವತೇ ವಾಸುದೇವಾಯ ವೇಧಸೇ ।**
**ಪಪುರ್ಜ್ಞಾನಮಯಂ ಸೌಮ್ಯಾಯನ್ಮುಖಾಂಭೋರುಹಾಸವಂ ॥ ೨೪ ॥**

ಸೌಮ್ಯಾಃ = ಜ್ಞಾನವೆಂಬ ಸೋಮಪಾನಾರ್ಹರಾದ ಭಗವದ್ಭಕ್ತರು; ಜ್ಞಾನಮಯಂ = ಜ್ಞಾನಾನಂದರೂಪವಾದ; ಯತ್ ಮುಖಾಂಭೋರುಹ ಆಸವಂ = ಯಾರ ಮುಖಕಮಲಸ್ಥಿತವಾದ ಮಧುವನ್ನು (ಸೌಂದರ್ಯ ರಾಶಿಯನ್ನು); ಪಪುಃ = ಪಾನಮಾಡಿದರೋ;(ಕಂಡು ಹರ್ಷಿತರಾದರೋ); ತಸ್ಮೈ = ಅಂತಹ ಗುಣವಿಶಿಷ್ಟನಾದ;

ವೇಧಸೇ = ಸೃಷ್ಟಿಕರ್ತನಾದ; ಭಗವತೇ ವಾಸುದೇವಾಯ = ವಸುದೇವಪುತ್ರನೆನಿಸಿದ ಭಗವಾನ್ ಶ್ರೀಕೃಷ್ಣನಿಗೆ; ನಮಃ = ನಮಸ್ಕಾರವು.

ಮಂಗಳಪರಸ್ತುತಿಯಿಂದ ಸುಪ್ರಸನ್ನನಾದ ಶ್ರೀಕೃಷ್ಣನನ್ನು ಹೃತ್ಕಮಲದಲ್ಲಿ ಕಂಡು ಶ್ರೀಶುಕಾಚಾರ್ಯರು ಆ ಜ್ಞಾನಾನಂದಮಯ ಪುರುಷನ ಮುಖಕಮಲದ ಸೌಂದರ್ಯಪ್ರಭಾವವನ್ನು ಇಲ್ಲಿ ವರ್ಣಿಸಿದ್ದಾರೆ. 'ವೇಧಸೇ' ಎಂಬ ಮಾತಿನಿಂದ ಸೃಷ್ಟಿಕರ್ತನೆನಿಸಿದ ಚತುರ್ಮುಖನಂತರ್ಯಾಮಿಯೆಂದೂ, ಸೃಷ್ಟಿಕರ್ತನ ಅವತಾರವೇ ಆದ ವೇದವ್ಯಾಸದೇವರೆಂದೂ ಗ್ರಹಿಸಿ ಚಿಂತಿಸಬೇಕು. ಶ್ರೀಹಂಸನಾಮಕನಿಂದ ಬ್ರಹ್ಮದೇವರಿಗೆ ನೇರವಾಗಿ ಜ್ಞಾನೋಪದೇಶ; ಆ ಬ್ರಹ್ಮದೇವರಿಂದ ನಾರದಾದಿಗಳಿಗೆ ಉಪದೇಶ; ವೇದವ್ಯಾಸರಿಂದ ವೈಶಂಪಾಯನಾದಿಗಳಿಗೆ ಉಪದೇಶ. ಅಂತಹ ಉಪದೇಶವಾಣಿಯೇ ಮುಖಕಮಲ ಮಧು.

**ಏತದೇವಾತ್ಮಭೂರಾಜನ್ನಾರದಾಯೇತಿ ಪೃಚ್ಛತೇ ।**
**ವೇದಗರ್ಭೋಽಭ್ಯಧಾತ್ಸಾಕ್ಷಾದ್ಯದಾಹ ಹರಿರಾತ್ಮನಃ** ॥ ೨೫ ॥

ರಾಜನ್= ಪರೀಕ್ಷಿದ್ರಾಜಾ; ಹರಿಃ = ಶ್ರೀಹರಿಯು; ಆತ್ಮನಃ = ಪುತ್ರನಾದ ಬ್ರಹ್ಮನಿಗೆ; ಯತ್= ಯಾವುದನ್ನು; ಸಾಕ್ಷಾತ್= ನೇರವಾಗಿ; ಆಹ = ಹೇಳಿದನೋ; ಏತತ್ ಏವ = ಈಗ ನಾನು ಯಾವುದನ್ನು ಹೇಳಲು ಉಪಕ್ರಮಿಸಿರುವೆನೋ ಅದನ್ನೇ; ಇತಿ ಪೃಚ್ಛತೇ = ಮುಂದೆ ಹೇಳುವ ರೀತಿಯಲ್ಲಿ ಪ್ರಶ್ನೆಮಾಡಿದ; ನಾರದಾಯ = ನಾರದರನ್ನು ಕುರಿತು; ವೇದಗರ್ಭಃ = ವೇದಾರ್ಥಗಳನ್ನು ಹೃದಯದಲ್ಲಿ ಧರಿಸಿರುವ; ಆತ್ಮಭೂಃ = ಪರಮಾತ್ಮನ ಪುತ್ರರಾದ ಬ್ರಹ್ಮದೇವರು; ಅಭ್ಯಧಾತ್= ಉಪದೇಶ ಮಾಡಿದರು.

'ಅದನ್ನೇ ಹೇಳುತ್ತಿರುವೆನು' ಎಂದುದರಿಂದ ಪರಂಪರಾಗತವಾದ ಪುರಾಣವನ್ನೇ ಅರ್ಥವ್ಯತ್ಯಾಸವಿಲ್ಲದೆ ಶುಕಾಚಾರ್ಯರು ಉಪದೇಶಿಸಿದರೆಂಬುದು ಇದರ ಭಾವ.

ನಾಲ್ಕನೆಯ ಅಧ್ಯಾಯ ಸಮಾಪ್ತಿ.

---

# ದ್ವಿತೀಯಸ್ಕಂಧ—ಐದನೆಯ ಅಧ್ಯಾಯ ಪ್ರಾರಂಭ

**ನಾರದ ಉವಾಚ:**– ನಾರದರು ಮಾತನಾಡಿದರು.

**ದೇವದೇವನಮಸ್ತೇಸ್ತು ಭೂತಭಾವನ ಪೂರ್ವಜ ।**
**ತದ್ವಿಜಾನೀಹಿ ಯಜ್ಞಾನಂ ಆತ್ಮತತ್ವನಿದರ್ಶನಂ** ॥ ೧ ॥

(ತಂದೆ ಮಕ್ಕಳಾದ ಬ್ರಹ್ಮ–ನಾರದರ ಸಂವಾದ ನೆವದಿಂದ ಭಗವಂತನ ಜಗಜ್ಜನ್ಮಾದಿಕರ್ತೃತ್ವ ವಿಚಾರವನ್ನು ಈ ಅಧ್ಯಾಯದಲ್ಲಿ ನಿರೂಪಿಸುತ್ತಾರೆ.)

ಭೂತಭಾವನ = ಜೀವಪ್ರಪಂಚ ಸೃಷ್ಟಿಯಲ್ಲಿ; ಪೂರ್ವಜ = ಪ್ರಥಮದಲ್ಲಿ ಜನ್ಮಪಡೆದ; ದೇವದೇವ = ದೇವತೆಗಳಲ್ಲೆಲ್ಲಾ ಉತ್ತಮನಾದವನೇ; ತೇ ನಮಃ ಅಸ್ತು = ನಿನಗೆ ನಮಸ್ಕಾರ; ಆತ್ಮ ತತ್ವ ನಿದರ್ಶನಂ = ಜೀವಾತ್ಮ ಪರಮಾತ್ಮ ವಿಚಾರವನ್ನು ಮನದಟ್ಟು ಮಾಡಿಕೊಡುವ; ಯತ್ ಜ್ಞಾನಂ = ಜ್ಞಾನವು ಯಾವುದೋ; ತತ್ = ಅದನ್ನು; ವಿಜಾನೀಹಿ = ಚೆನ್ನಾಗಿ ತಿಳಿಸಿಕೊಡು.

ಪರಮಾತ್ಮನ ಸ್ವತಂತ್ರಕರ್ತೃತ್ವ ವಿಚಾರವನ್ನೂ, ಜೀವರ ಅಸ್ವತಂತ್ರ ಸ್ಥಿತಿಯನ್ನೂ ಅರ್ಥವತ್ತಾಗಿ ತಿಳಿಯಬೇಕೆಂಬುದು ನಾರದರ ಆಶಯ.

**ಯದ್ರೂಪಂ ಯದಧಿಷ್ಠಾನಂ ಯತ: ಸೃಷ್ಟಮಿದಂ ವಿಭೋ ।**
**ಯತ್ಸಂಸ್ಥಂ ಯತ್ಪರಂ ಯಚ್ಚ ತತ್ತತ್ತ್ವಂ ವದ ತತ್ವತ:** ॥ ೨ ॥

ವಿಭೋ = ಸಮರ್ಥನೂ, ವ್ಯಾಪ್ತದರ್ಶಿಯೂ ಆದ ತಂದೆಯೇ; ಇದಂ = ಕಾಣುವ ಈ ಜಗತ್ತು; ಯದ್ರೂಪಂ = ಯಾರ ರೂಪದಂತೆ ರೂಪವುಳ್ಳುದಾಗಿರುವುದೋ; ಯತ್ ಅಧಿಷ್ಠಾನಂ = ಯಾರನ್ನು ಆಶ್ರಯಿಸಿ ಇರುವುದೋ; ಯತಃ ಸೃಷ್ಟಂ = ಯಾರಿಂದ, ಯಾವುದರಿಂದ ಸೃಷ್ಟವಾಗಿರುವುದೋ; ಯತ್ ಸಂಸ್ಥಂ = ಯಾರಲ್ಲಿ ಲಯಹೊಂದಿ ಇರುವುದೋ; ಯತ್ ಪರಂ = ಯಾರಿಂದ ಪಾಲಿತವಾಗಿರುವುದೋ; ಯತ್ ಚ = ಅದು ಯಾವ ರೀತಿಯದೋ; ತತ್ ತತ್ವಂ = ಆ ಪರವಸ್ತುವನ್ನು ಕುರಿತು; ತತ್ವತಃ = ಇದ್ದುದನ್ನು ಇದ್ದಂತೆ; ವದ = ತಿಳಿಸಿಕೊಡು

ಸಾಮಾನ್ಯ ಜ್ಞಾನಿಗಳು ತತ್ವವಿಚಾರವನ್ನು ತಮ್ಮತಮ್ಮ ಮನಸ್ಸಿಗೆ ಬಂದಂತೆ ಹೇಳಬಹುದು. ಜಗತ್ತಿಗೆ ಭಗವಂತನು ಅಧಿಷ್ಠಾನವೆಂದರೆ, ಇಲ್ಲದ ಜಗತ್ತು ಇದ್ದಂತೆ ಕಾಣಲು ಆಶ್ರಯನಾದವನು– 'ಹಾವಿನ ಹಗ್ಗದಂತೆ', ಇತ್ಯಾದಿಯಾಗಿ ಹೇಳಬಹುದು. 'ಯತ್ಪರಂ' ಎಂದರೆ 'ಕೇವಲ ಯಾರ ಲೀಲೆಗೋಸ್ಕರವೋ' ಎಂದುಬಿಡಬಹುದು. ಆದರೆ ಆ ಮಾತುಗಳಲ್ಲಿ ದೋಷಗಳು ಕಂಡುಬರುತ್ತವೆ. ಹಗ್ಗ, ಹಾವು ಈ ಎರಡು ವಸ್ತುಗಳ ಜ್ಞಾನವಿದ್ದರೆ ಹಗ್ಗವನ್ನು ಹಾವೆಂದು ತಪ್ಪಾಗಿ ತಿಳಿಯಬಹುದೇ ಹೊರತು, ಹಗ್ಗವೊಂದೇ ಇರುವುದಾದರೆ ಭ್ರಮೆಗೆ ಅವಕಾಶವೇ ಇರುವುದಿಲ್ಲ. ಅಲ್ಲದೆ ಹಗ್ಗವು, ಜ್ಞಾನವಿದ್ದಿದ್ದರೆ, ತನ್ನನ್ನು ಹಾವೆಂದು ಹೇಗೆ ತಿಳಿಯುತ್ತಿರಲಿಲ್ಲವೋ ಹಾಗೆ, ಬ್ರಹ್ಮವೊಂದೇ ಇದ್ದಿದ್ದರೆ, ಆ ಬ್ರಹ್ಮನೂ ತನ್ನಲ್ಲಿ ಇಲ್ಲದ ಜಗತ್ತನ್ನು ಆರೋಪಿಸಿಕೊಂಡು, ಜೀವಭಾವವನ್ನು ತಾಳಿ, ಸುಖ–ದುಃಖ ಭಾಗಿಯಾಗುತ್ತಿದ್ದನೆಂದು ಹೇಳುವುದಂತೂ ಅತ್ಯಂತ ಹಾಸ್ಯಾಸ್ಪದವಾದ ಮಾತು. ಆದರೂ ಇಂತಹ ವಾದಗಳು ಉಂಟೇ ಉಂಟು. ಆದುದರಿಂದ ಇದ್ದುದನ್ನು ಇದ್ದ ಹಾಗೆ ತಿಳಿಯಬೇಕೆಂದು ನಾರದರು ಅಪೇಕ್ಷಿಸಿದ್ದಾರೆ. ಇದು ಲೋಕೋಪಕಾರದ ದೃಷ್ಟಿಯಿಂದ.

**ಸರ್ವಂ ಹ್ಯೇತದ್ಭವಾನ್ವೇದ ಭೂತಭವ್ಯ ಭವತ್ಪ್ರಭುಃ ।**
**ಕರಾಮಲಕವದ್ವಿಶ್ವಂ ವಿಜ್ಞಾನಾವಸಿತಂ ತವ** ॥ ೩ ॥

ಭೂತಭವ್ಯ ಭವತ್ ಪ್ರಭುಃ= ಇದುವರೆಗೆ ಸೃಷ್ಟಿಯಾಗಿರುವ, ಈಗ ಸೃಷ್ಟಿಯಾಗಿರುವ ಮತ್ತು ಮುಂದೆ ಸೃಷ್ಟಿಯಾಗಲಿರುವ ಜಗತ್ತಿಗೆಲ್ಲಾ ಒಡೆಯನಾದ; ಭವಾನ್= ನೀನು; ಏತತ್ ಸರ್ವಂ ಹಿ = ನಾನು ಕೇಳಿದ ಎಲ್ಲಾ ವಿಚಾರಗಳನ್ನೂ ಕೂಡ; ವೇದ = ತಿಳಿದವನಾಗಿರುವಿ; ಕರಾಮಲಕವತ್= ಅಂಗೈಯೊಳಗಿನ ನೆಲ್ಲಿಕಾಯಿಯಂತೆ; ವಿಶ್ವಂ= ಈ ಜಗತ್ತು; ತವ= ನಿನ್ನ; ವಿಜ್ಞಾನ ಅವಸಿತಂ= ಬಹಿರಂತರ ದೃಷ್ಟಿಗೆ ಗೋಚರಿಸುವುದಾಗಿದೆ.

ಜೀವೋತ್ತಮರಾದ ಬ್ರಹ್ಮದೇವರು ತತ್ವವನ್ನು ಯಥಾವತ್ತಾಗಿ ಬಲ್ಲವರು, ತಿಳಿಸಬಲ್ಲವರು ಎಂಬ ನಾರದರ ವಿಶ್ವಾಸವು ಆದರ್ಶಪ್ರಾಯವಾದುದು. ಈಗಿನ ವಿಜ್ಞಾನಿಗಳೆಂಬುವರಿಗೆ ಹೊರಪ್ರಪಂಚದ ವಿಚಾರವು ತಕ್ಕಮಟ್ಟಿಗೆ ಜ್ಞಾನಗಮ್ಯವೇ ಹೊರತು, ಒಳಹೊಕ್ಕು ನೋಡುವ ವಿಜ್ಞಾನ ದೃಷ್ಟಿ ಅವರಿಗಿಲ್ಲ. ವಿಜ್ಞಾನ ಎಂಬುದು ಜಡಕಾರ್ಯಗಳ ಹಿನ್ನೆಲೆಯಲ್ಲಿರುವ ದೈವೀಪ್ರಪಂಚದ ಜ್ಞಾನ. ಇದನ್ನು ಕುರಿತೇ, ''ಜ್ಞಾನಂ ವಿಜ್ಞಾನಸಹಿತಂ ಪ್ರವಕ್ಷ್ಯಾಮ್ಯನಸೂಯವೇ'' ಎಂದು ಶ್ರೀಕೃಷ್ಣ ಹೇಳಿರುವುದು. ಈ ವಿಜ್ಞಾನವು ಮನುಷ್ಯಬುದ್ಧಿಯಿಂದ ಸಂಪಾದಿಸತಕ್ಕುದಲ್ಲ; ಉಪದೇಶಗಮ್ಯವಾದುದು.

**ಯದ್ವಿಜ್ಞಾನೋ ಯದಾಧಾರೋ ಯತ್ಪರಸ್ತ್ವಂ ಯದಾತ್ಮಕಃ ।**
**ಏಕಃ ಸೃಜಸಿ ಭೂತಾನಿ ಭೂತೈರೇವಾತ್ಮಮಾಯಯಾ ॥ ೪ ॥**

ಯತ್ ವಿಜ್ಞಾನಃ = ಯಾವುದು ವಿಶ್ವದ ರಹಸ್ಯಜ್ಞಾನವು ? ಯತ್ ಆಧಾರಃ = ಅದು ಯಾವುದನ್ನು ಆಶ್ರಯಿಸಿದೆ ? ಯತ್ ಪರಃ = ಯಾರ ವಿಷಯಕವಾದುದಾಗಿದೆ ? ಯದಾತ್ಮಕಃ = ಯಾರ ಸಂಕಲ್ಪಾನುಗುಣವಾಗಿದೆ ? ಈ ಯಾವುದರ ಬಲದಿಂದ, ಅಥವ; ಏಕಃ = ನೀನೇವೇ; ಆತ್ಮಮಾಯಯಾ = ನಿನ್ನ ಸಾಮರ್ಥ್ಯವಿಶೇಷದಿಂದ; ಭೂತೈಃ ಏವ = ಭೂತ ವಸ್ತುಗಳಿಂದಲೇ; ಭೂತಾನಿ = ಜೀವಪ್ರಪಂಚವನ್ನು; ಸೃಜಸಿ = ಸೃಷ್ಟಿಸುವೆಯಾ ?

ಲೋಕದಲ್ಲಿ ಗಣಪತಿ, ಶಿವ, ಶಕ್ತಿ, ಬ್ರಹ್ಮ ಇವರುಗಳನ್ನೇ ಸೃಷ್ಟಿಕರ್ತರೆಂದು ಬೇರೆ ಬೇರೆಯಾಗಿ ತಿಳಿದು ಹೇಳುವುದು ಕಂಡುಬಂದಿದೆ. ಈ ಎಲ್ಲದರ ಹಿನ್ನೆಲೆಯು ಬೇರೆಯೇ ಆಗಿರುವುದನ್ನು ಬಲ್ಲ ನಾರದರು, ಆ ಪರತತ್ವದ ವಿಚಾರವನ್ನು ಸ್ಪಷ್ಟವಾಗಿ ತಿಳಿಯಬೇಕೆನ್ನುವ ಆಶಯದಿಂದ ಪ್ರಶ್ನೆ ಮಾಡಿದ್ದಾರೆ.

**ಆತ್ಮನ್ ಭಾವಯಸೇತಾನಿ ನಪರಾಗ್ಭಾವಯೇಃಸ್ವಯಂ ।**
**ಆತ್ಮಶಕ್ತಿಮವಷ್ಟಭ್ಯ ಸೂತ್ರನಾಭಿರಿವಾಕ್ಲಮಃ ॥ ೫ ॥**

ಆತ್ಮನ್ = ಜ್ಞಾನಸ್ವರೂಪನಾದ ತಂದೆಯೇ; ಆತ್ಮಶಕ್ತಿಂ = ನಿನ್ನ ಸಾಮರ್ಥ್ಯವನ್ನು; ಅವಷ್ಟಭ್ಯ = ಬಳಸಿಕೊಂಡು; ಸೂತ್ರನಾಭಿಃ ಇವ = ಊರ್ಣನಾಭಿ ಅಥವಾ ಜೇಡರ ಹುಳುವಿನಂತೆ; ಅಕ್ಲಮಃ = ನಿರಾಯಾಸವಾಗಿ; ಸ್ವಯಂ = ನೀನೇ; ಏತಾನಿ = ಈ ಎಲ್ಲವನ್ನೂ; ಭಾವಯಸೇ = ಸೃಷ್ಟಿಸುವಿ; ಪರಾಕ್ = ನಿನ್ನಿಂದ ಅನ್ಯವಾದುದನ್ನು; ನ ಭಾವಯೇಃ = ನಾನು ತಿಳಿದಿರುವುದಿಲ್ಲ.

ನಾರದರು ಪರತತ್ವವನ್ನು ಅರಿಯದವರಲ್ಲ. ಆದರೂ ಅದನ್ನು ಸ್ವಯೋಗ್ಯತಾನುಸಾರ ಇನ್ನೂ ಚೆನ್ನಾಗಿ, ಸ್ಪಷ್ಟವಾಗಿ ತಿಳಿಯಬೇಕೆನ್ನುವ ಉದ್ದೇಶದಿಂದ ಪ್ರಶ್ನೆ ಮಾಡಿದ್ದಾರೆ. ಕಂಡದ್ದನ್ನು ಅರಿಯುವುದು ಕಷ್ಟವಲ್ಲ. ಕಾಣುವುವರ ಹಿನ್ನೆಲೆಯನ್ನರಿಯುವುದು ಶ್ರಮಸಾಧ್ಯ; ಉಪದೇಶಗಮ್ಯ.

**ನಾಹಂ ವೇದ ಪರಂ ತ್ವಸ್ಮಾನ್ನಾವರಂ ನ ಸಮಂ ವಿಭೋ ।**
**ನಾಮರೂಪಗುಣೈರ್ಭಾವ್ಯಂ ಸದಸತ್ಕಿಂಚಿದನ್ಯತಃ ॥ ೬ ॥**

ನಾಮರೂಪಗುಣೈಃ ಭಾವ್ಯಂ = ಹೆಸರು, ಆಕಾರ, ಗುಣಗಳು ಇವುಗಳಿಂದ ನಮ್ಮ ಗಮನಕ್ಕೆ ಬರುವ; ಸದಸತ್ ಕಿಂಚಿತ್ = ಸ್ಥೂಲ ಸೂಕ್ಷ್ಮವಸ್ತುಗಳು ವಿಶ್ವದಲ್ಲಿ ಯಾವುವು ಇರುವವೋ; ಅವು; ಅನ್ಯತಃ = ಬೇರೆ ಯಾರಿಂದ ಅಥವ ಯಾವ ಶಕ್ತಿಯಿಂದ ಆಗಿರಬಹುದೋ ಅಂತಹ; ತ್ವಸ್ಮಾತ್ ಪರಂ ಅವರಂ ಸಮಂ = ನಿನಗಿಂತ ಉತ್ತಮ, ಸಮ ಅಥವ ನೀಚವಾದ ಕಾರಣ ವಸ್ತುವನ್ನು; ಅಹಂ ನ ವೇದ = ನಾನು ತಿಳಿದಿಲ್ಲ ಚೆನ್ನಾಗಿ ತಿಳಿದಿಲ್ಲ.

ಊಹಿಸಿ ತಿಳಿಯುವುದೆಲ್ಲಾ ನಿಜವಾಗಿರಲಾರದು. ಆದುದರಿಂದ ಪ್ರತ್ಯಕ್ಷೀಕರಿಸಿಕೊಂಡವರಿಂದ ಕೇಳಿ ತಿಳಿಯುವುದೇ ತತ್ವಜ್ಞಾನ ಸಂಪಾದನೆಗೆ ಸರಿಯಾದ ಮಾರ್ಗ. ಈ ಕಾರಣದಿಂದಲೇ ವೇದಪ್ರಾಮಾಣ್ಯದ ಆವಶ್ಯಕತೆಯೂ ಕೂಡ. ಆ ವೇದ ವಿದ್ಯೆಯೂ ಉಪದೇಶದಿಂದಲೇ ತಿಳಿಯಲು ಸಾಧ್ಯವಾಗುವಂತಹುದು. ಆದುದರಿಂದಲೇ ಗುರೂಪದೇಶಕ್ಕೆ ಅತ್ಯಂತ ಮಹತ್ವದ ಸ್ಥಾನವಿರುವುದು.

**ಸಭವಾನಚರದ್ಘೋರಂ ಯತ್ತಪಃ ಸುಸಮಾಹಿತಃ ।**
**ತೇನ ಖೇದಯಸೇನಸ್ತ್ವಂ ಪರಾಂ ಶಂಕಾಂಚ ಯಚ್ಛಸಿ ॥ ೭ ॥**

ಸಃ ಭವಾನ್ = ಅಂತಹ ಕಾರಣಾಂತರಗಳಿಲ್ಲದೆ ಸೃಷ್ಟ್ಯಾದಿಗಳನ್ನು ಮಾಡುವ ನೀನು; ಸು ಸಮಾಹಿತಃ = ಮನೋನಿಗ್ರಹವನ್ನು ಚೆನ್ನಾಗಿ ಮಾಡಿ; ಯತ್ ಘೋರಂ ತಪಃ ಅಚರತ್ = ಯಾವ ರೀತಿಯ ಕಠಿಣ ತಪಸ್ಸನ್ನು ಆಚರಿಸುವೆಯೋ; ತೇನ = ಅದರಿಂದ; ತ್ವಂ = ನೀನು; ನಃ = ನಮ್ಮನ್ನು; ಖೇದಯಸೇ = ವಿಚಲಿತ ಮನಸ್ಕರನ್ನಾಗಿ ಮಾಡಿರುವಿ; ಪರಾಂ = ಅತಿಶಯವಾದ; ಶಂಕಾಂ ಚ = ಅನುಮಾನವನ್ನೂ ಕೂಡ; ಯಚ್ಛಸಿ = ಉಂಟುಮಾಡುತ್ತಿರುವಿ.

ನಾರದರ ಪ್ರಶ್ನೆಯು ತಮ್ಮೊಬ್ಬರಿಗೋಸ್ಕರ ಮಾಡಿದುದಲ್ಲ ಎಂಬುದು 'ನಃ' ಎಂಬ ಬಹುವಚನ ಪದದಿಂದ ವ್ಯಕ್ತವಾಗುತ್ತದೆ. ಬ್ರಹ್ಮದೇವರ ತಪಸ್ಸು ಯಾರನ್ನು ಕುರಿತು, ಏತಕ್ಕಾಗಿ ಎಂಬುದು ಇಲ್ಲಿ ಮುಖ್ಯವಾದ ವಿಷಯ. ನರ–ನಾರಾಯಣ ರೂಪದಿಂದ ಪರಮಪುರುಷನೇ ಆಚರಿಸುವ ತಪಸ್ಸಿನ ವಿಷಯದಲ್ಲಿಯೂ ಇಂತಹ ಪ್ರಶ್ನೆ ಉದ್ಭವಿಸಬಹುದು. ಆದರೆ, ಅವನ ಮಾತೇ ಕಟ್ಟಕಡೆಯದಾದುದರಿಂದ, ಆ ಮಹಾಮಹಿಮನು ಆಚರಿಸುವ ತಪಸ್ಸಿನ ವಿಧಾನವು ಇತರರಿಗೆ ಮಾದರಿಯೇ ಹೊರತು ಅನ್ಯ ಉದ್ದೇಶದಿಂದ ಆಚರಿಸುವುದಲ್ಲ ಎಂಬುದು ಪ್ರಶ್ನೆಗೆ ಉತ್ತರ. ಆ ಭಗವಂತ, ತನ್ನ ರೂಪದ ಅವಯವ ಸ್ಥಾನಗಳಲ್ಲಿ ತತ್ವಾಭಿಮಾನಿ ದೇವತೆಗಳನ್ನಿಟ್ಟುಕೊಂಡು ತಪಸ್ಸಿನ ವಿಧಾನವನ್ನು ತೋರುವುದರಿಂದ ಅದು ಆ ದೇವತೆಗಳಿಗೆ ಮಾರ್ಗದರ್ಶನ.

**ಏತನ್ಮೇ ಪೃಚ್ಛತಃ ಸರ್ವಂ ಸರ್ವಜ್ಞಸಕಲೇಶ್ವರ ।**
**ವಿಜಾನೀಹಿ ಯಥೈವೇದಮಹಂ ಬುಧ್ಯೇನುಶಾಸಿತಃ ॥ ೮ ॥**

ಸರ್ವಜ್ಞ = ವಿಶ್ವದ ವಿಚಾರವನ್ನೆಲ್ಲಾ ಸಮಗ್ರವಾಗಿ ಬಲ್ಲವನೇ; ಸಕಲೇಶ್ವರ = ವಿಶ್ವದ ಸಕಲಕ್ಕೂ ಯಜಮಾನನಾದ ತಂದೆಯೇ; ಯಥಾ = ಯಾವ ಪ್ರಕಾರದಿಂದ; ಅನುಶಾಸಿತಃ ಏವ = ಉಪದೇಶ ಹೊಂದಿಯೇ; ಅಹಂ = ನಾನು; ಬುಧ್ಯೇ = ಅರಿತುಕೊಳ್ಳಬಲ್ಲನೋ ಹಾಗೆ; ಏತತ್ = ಈ ನಿಜತತ್ತ್ವವನ್ನು; ಪೃಚ್ಛತಃ = ಶಿಷ್ಯವೃತ್ತಿಯಿಂದ ಕೇಳುತ್ತಿರುವ; ಮೇ = ನನಗೆ; ಸರ್ವಂ = ಎಲ್ಲವನ್ನೂ; ವಿಜಾನೀಹಿ = ತಿಳಿಸಿಕೊಡು.

ಜಗತ್ತಿನ ಸೃಷ್ಟಿಯು ಕಾರ್ಯಕಾರಣಭಾವದಿಂದ ಕೇವಲ ಪ್ರಕೃತಿನಿಯಮಗಳಿಗನುಸಾರವಾಗಿಯೇ ರಚಿತವಾಗಿರುವಂತೆ ಕಂಡುಬಂದರೂ, ಅಂತಹ ನಿಯಮಗಳನ್ನು ಮೀರಿಯೂ ಚಿತ್ರವಿಚಿತ್ರವಾಗಿ ರಚಿತವಾಗಿರುವುದನ್ನು ತಿಳಿಯದೆ ಭ್ರಾಂತರಾಗಿರುವ ಈಗಿನ ವಿಜ್ಞಾನಿಗಳ ವಾದವು ನಿರರ್ಥಕವಾದುದೆಂದು ತಿಳಿಯಬೇಕು. ಮೇರು ಪರ್ವತವು ಕೆಳಗೆ ಸಣ್ಣದಾಗಿಯೂ, ಮೇಲೆ ವಿಶಾಲವಾಗಿಯೂ ಇರುವುದು, ದಶರಥನ ರಥವು ದಶದಿಕ್ಕುಗಳಿಗೂ ಹೋಗಿಬರುವ ಸಾಮರ್ಥ್ಯ ಹೊಂದಿದ್ದುದು, ಪ್ರಿಯವ್ರತರಾಜನು ಸೂರ್ಯನ ರಥದ ಸಮಸಮಕ್ಕೆ ತನ್ನ ರಥವನ್ನು ಓಡಿಸುತ್ತಾ ಭೂವಿಭಾಗಗಳನ್ನು ಮಾಡಿದುದು– ಇಂತಹ ಅನೇಕ ಘಟನೆಗಳು ಸಾಮಾನ್ಯ ಪ್ರಕೃತಿನಿಯಮಗಳನ್ನು ಮೀರಿದವುಗಳು. ಅಘಟನ ಘಟನಾ ಸಾಮರ್ಥ್ಯವುಳ್ಳ ಮಹಾಸತ್ತ್ವನ ಕಾರ್ಯಗಳವು. ಅವುಗಳ ಮರ್ಮವನ್ನು ಆ ಮಹಾನುಭಾವನ, ಅಥವಾ ಅವನಿಂದ ಉಪದಿಷ್ಟರಾದವರಿಂದಲೇ ಸಂಗ್ರಹಿಸಿ ತಿಳಿಯಬೇಕು. "ಪೃಚ್ಛತಃ" ಎಂಬ ಮಾತು ಶಿಷ್ಯನ ವಿನಯವನ್ನೂ, "ಅನುಶಾಸಿತಃ" ಎಂಬುದು ಉಪದೇಶದ ಅವಶ್ಯಕತೆಯನ್ನೂ ತಿಳಿಸುತ್ತದೆ.

**ಬ್ರಹ್ಮೋವಾಚ:**– ಬ್ರಹ್ಮದೇವರು ಹೇಳಿದರು.

**ಸಮ್ಯಕ್ಕಾರುಣಿಕಸ್ಯೇದಂ ವತ್ಸತೇ ವಿಚಿಕಿತ್ಸಿತಂ ।**
**ಯದಹಂ ಚೋದಿತಃ ಸೌಮ್ಯ ಭಗವದ್ವೀರ್ಯದರ್ಶನೇ ॥ ೧೯ ॥**

ವತ್ಸ = ಮಗೂ; ಕಾರುಣಿಕಸ್ಯ = ಲೋಕಕಲ್ಯಾಣದೃಷ್ಟಿಯುಳ್ಳ; ತೇ = ನಿನ್ನ; ಇದಂ = ಈ; ವಿಚಿಕಿತ್ಸಿತಂ = ಪ್ರಶ್ನರೂಪವಾದ ವಿಶೇಷಫಲದಾಯಕವಾದ ಕಾರ್ಯವು; ಸಮ್ಯಕ್ = ಅತ್ಯಂತ ಶ್ಲಾಘ್ಯವಾದುದು; ಸೌಮ್ಯ = ಸಮಬುದ್ಧಿಯಿಂದ ಶಿಷ್ಯವೃತ್ತಿಗೆ

ಅರ್ಹನಾದವನೇ; ಯತ್= ಯಾವ ನಿನ್ನ ಪ್ರಶ್ನೆಯಿಂದ; ಅಹಂ = ನಾನು; ಭಗವತ್ ವೀರ್ಯದರ್ಶನೇ = ಶ್ರೀಹರಿಯ ಮಹಿಮೆಯನ್ನು ಕುರಿತು ಚಿಂತಿಸುವಂತೆ; ಚೋದಿತಃ = ಪ್ರೇರಣೆಯನ್ನು ಹೊಂದಿದವನಾದೆ.

ಅಲ್ಪಜ್ಞನಾದ ಶಿಷ್ಯನು ಮಹಾಜ್ಞಾನಿಗಳಾದ ಗುರುಗಳನ್ನು ಕುರಿತು, ''ನನ್ನಂತಹ ಪಾಮರನಲ್ಲಿ ನೀವು ಇಷ್ಟು ವಿಶ್ವಾಸ ತೋರುವುದು ಆಶ್ಚರ್ಯವೆನಿಸುತ್ತದೆ'' ಎಂದಾಗ, ''ಅಪ್ಪಾ, ನೀನು ಉದ್ಬೋಧಕ ಸಾಮಗ್ರಿ. ನೀನು ಬಂದು ಕೂತರೆ ಸಾಕು. ಭಗವಂತನ ವಿಷಯಕವಾದ ಚಿಂತನೆ ನನ್ನಲ್ಲಿ ಎಚ್ಚರಗೊಳ್ಳುತ್ತದೆ'' ಎಂದು ಹೇಳಿದವರು ಶ್ರೀ ಶ್ರೀಪಾದರಾಜಮಠಾಧೀಶರಾಗಿದ್ದ ಶ್ರೀದಯಾನಿಧಿತೀರ್ಥ ಶ್ರೀಪಾದಂಗಳವರು(ಕ್ರಿ.ಶ. ೧೯೪೦). ಇದರಂತೆ ಇದೆಯಲ್ಲವೆ, ಬ್ರಹ್ಮದೇವರು ನಾರದರನ್ನು ಕುರಿತು ಹೇಳಿದ ಮಾತು ? ಇದನ್ನೇ ಶಿಷ್ಯವಾತ್ಸಲ್ಯವೆನ್ನುವುದು. ಶಿಷ್ಯನಲ್ಲಿ ಗುರುಭಕ್ತಿ ಇರಬೇಕು; ನಿಜ. ಆದರೆ, ಆ ಗುರುಗಳಲ್ಲಿ ಇಂತಹ ಶಿಷ್ಯವಾತ್ಸಲ್ಯವಿರಬೇಕಲ್ಲ !

**ನಾನೃತಂ ಬತತಚ್ಚಾಪಿ ಯಥಾ ಮಾಂ ಪ್ರಬ್ರವೀಷಿಭೋ ।**
**ಅವಿಜ್ಞಾಯ ಪರಂ ಮತ್ತ ಏತಾವತ್ವಂ ಯತೋಹಿ ಮೇ ॥ ೧೦ ॥**

ಭೋ = ಎಲೋ, ಕುಮಾರ; ಪರಂ ಅವಿಜ್ಞಾಯ = ನನಗಿಂತಲೂ ಶ್ರೇಷ್ಠನಾದವನನ್ನು ತಿಳಿಯದೆ; ಯಥಾಮಾಂ ಪ್ರಬ್ರವೀಷಿ = ನಾನೇ ಈ ಸೃಷ್ಟಿಗೆಲ್ಲಾ ಕರ್ತನೆಂದು ಏನು ಹೇಳುತ್ತಿರುವೆಯೋ; ತತ್‌ಚ ಅಪಿ = ಅದೆಲ್ಲವೂ; ಅನೃತಂ ನ ಬತ = ಸುಳ್ಳು ಅಲ್ಲವೆ ? ಯತಃ = ಏಕೆಂದರೆ; ಮೇ = ನನಗೆ; ಏತಾವತ್ವಂ ಹಿ = ಈಗ ಏನು ಹೇಳಲಿರುವೆನೋ ಅಷ್ಟೇ ಅಧಿಕಾರ.

ಇದು ಪೂರ್ವಪಕ್ಷವನ್ನು ನಿರಾಕರಿಸುವ ವಿಚಾರವೇ ಹೊರತು ಒಪ್ಪಿಗೆ ಮಾತಲ್ಲ. 'ನ ಅನೃತಂ' = ಸುಳ್ಳಲ್ಲ, ಎಂದು ಅರ್ಥಮಾಡಬಾರದು. ಈ ಪ್ರಶ್ನೆ ಮಾಡಿದಾಗ ನಾರದರಿಗೆ ಶ್ರೀಹರಿಯ ಸರ್ವೋತ್ತಮತ್ವದ ವಿಚಾರ ತಿಳಿದಿರಲಿಲ್ಲವೇ ಎಂದು ಶಂಕಿಸಬಾರದು. ಜೀವರ ಅಸ್ವಾತಂತ್ರ್ಯ ಕರ್ತೃತ್ವವೆಂಬುದು ಅತಿಗಹನ ವಿಚಾರ; ಕೇವಲ ಅನುಭವೈಕವೇದ್ಯ. ಅದನ್ನು ಕುರಿತು ಉತ್ಪನ್ನವಾದುದು ನಾರದರ ಪ್ರಶ್ನೆ.

**ಯೇನ ಸ್ವರೋಚಿಷಾ ವಿಶ್ವಂ ರೋಚಿತಂ ರೋಚಯಾಮ್ಯಹಂ ।**
**ಯಥಾರ್ಕೋಽಗ್ನಿರ್ಯಥಾ ಸೋಮೋ ಯಥರ್ಕ್ಷಗ್ರಹ ತಾರಕಾ॥ ೧೧ ॥**

ಯಥಾ ಅರ್ಕಃ, ಯಥಾ ಸೋಮಃ, ಯಥಾ ಋಕ್ಷಗ್ರಹ ತಾರಕಾಃ = ಸೂರ್ಯ, ಅಗ್ನಿ, ಚಂದ್ರ, ಅಶ್ವಿನ್ಯಾದಿ ನಕ್ಷತ್ರಗಳು, ಗ್ರಹಗಳು ಇತರ ನಕ್ಷತ್ರಗಳು ಹೇಗೋ ಹಾಗೆ;

ಸ್ವರೂಪಚಿಷಾ = ತನ್ನ ಕಾಂತಿಯ ಬಲದಿಂದ; ಪನ = ಯಾರಿಂದ; ವಿಶ್ವಂ = ಜಗತ್ತು; ರೋಚಿತಂ = ಪ್ರಕಾಶಿತವಾಗಿದೆಯೋ; ತೇನ = ಅವನ ಬಲದಿಂದ; ಅಹಂ = ನಾನು; ರೋಚಯಾಮಿ = ಪ್ರಕಾಶಗೊಳಿಸುತ್ತೇನೆ.

"ಯದಾದಿತ್ಯಗತೋತೇಜೋ ಜಗದ್ಭಾಸಯತೇಖಿಲಂ ।
ಯಚ್ಚಂದ್ರಮಸಿ ಯಚ್ಚಾಗ್ನೌತತ್ತೇಜೋವಿದ್ಧಿಮಾಯಕಂ" ಎಂಬ ಗೀತೋಕ್ತಿಯಂತೆ,

ಸೂರ್ಯಚಂದ್ರನಕ್ಷತ್ರಾದಿಗಳಲ್ಲಿ ತನ್ನ ಕಾಂತಿಯನ್ನಿಟ್ಟು ಭಗವಂತನು ಅವುಗಳಲ್ಲಿ ಅವುಗಳಂತಿದ್ದು ವ್ಯಾಪಾರ ಮಾಡುವುದರಿಂದ ಅವು ಕಾಂತಿಯುಕ್ತವಾಗಿ ಬೆಳಕನ್ನು ಕೊಡುತ್ತವೆ. ಆದರಂತೆ ಬ್ರಹ್ಮದೇವರು ತಮ್ಮಲ್ಲಿ ತಮ್ಮಂತಿದ್ದು ವ್ಯಾಪಾರ ಮಾಡುವ ಶ್ರೀಹರಿಯ ಮಹಿಮೆಯನ್ನು ಪ್ರಕಟಿಸುವ ಮುಖ್ಯಸಾಧನವಾಗಿ ಆ ಸ್ವಾಮಿಯ ಪರಮ ಪ್ರಸಾದಕ್ಕೆ ಪಾತ್ರರಾಗಿದ್ದಾರೆ.

**ತಸ್ಮೈನಮೋಭಗವತೇ ವಾಸುದೇವಾಯ ಧೀಮಹಿ ।**
**ಯನ್ಮಾಯಯಾದುರ್ಜಯಯಾಮಾಂವದಂತಿಜಗದ್ಗುರುಂ ॥ ೧೨ ॥**

ದುರ್ಜಯಯಾ = ಹರಿಭಕ್ತರಲ್ಲದವರಿಂದ ಮೀರಲಶಕ್ಯವಾದ; ಯತ್ ಮಾಯಯಾ = ಯಾರ ಶಕ್ತಿ ವಿಶೇಷದಿಂದ ಮೋಹಿತರಾಗಿ; ಮಾಂ = ನನ್ನನ್ನು; ಜಗದ್ಗುರುಂ = ಈ ಜಗತ್ತಿಗೆ ನಿಯಾಮಕನೆಂದು; ವದಂತಿ = ಹೇಳುವರೋ;ತಸ್ಮೈ = ಆ ಮಾಯಾ ಪುರುಷನಾದ; ಭಗವತೇ = ಗುಣಪೂರ್ಣನಾದ; ವಾಸುದೇವಾಯ = ಸರ್ವಾಂ ತರ್ಯಾಮಿಯಾದ ಪರಮಾತ್ಮನಿಗೆ; ನಮಃ = ನಮಸ್ಕಾರವು; ಧೀಮಹಿ = ನಾವು ಅವನನ್ನು ಧ್ಯಾನಿಸುತ್ತೇವೆ.

ಸ್ತೋತ್ತಮರ ವಿಷಯದಲ್ಲಿ ಅವಹೇಳನದ ಮಾತನ್ನು ಕೇಳಿದ ಪಾಪವನ್ನು ಶ್ರೀಹರಿಯ ಸ್ಮರಣೆಯಿಂದ ಕಳೆದುಕೊಳ್ಳಬೇಕೆಂಬ ನಿಯಮಾನುಸಾರ ಬ್ರಹ್ಮದೇವರು ಆ ಶ್ರೀಹರಿಯನ್ನು ಧ್ಯಾನಿಸಿ ನಮಸ್ಕಾರ ಮಾಡಿದ್ದಾರೆ. ಮಾಯಾ ಎಂದರೆ ಇಲ್ಲದುದನ್ನು ಇದ್ದಂತೆ ತೋರಿಸುವ ಇಂದ್ರಜಾಲವಲ್ಲ. ಶ್ರೀಹರಿಯ ಇಚ್ಛೆ, ಚಿತ್ಪ್ರಕೃತಿಯೆನಿಸುವ ವಿಷ್ಣುಪತ್ನಿ ಮಾಯಾದೇವಿ, ಜೀವರನ್ನು ಜಡಅಜ್ಞಾನದಲ್ಲಿ ಬಂಧಿಸುವ ಆ ಮಹಾತಾಯಿಯ ಶಕ್ತಿ, ಈ ಮೂರಕ್ಕೂ ಮಾಯಾ ಎಂದು ಹೆಸರು. ಜೀವರಿಗೆ ಬಂಧಕವಾದ ಅನಾದಿಕರ್ಮವನ್ನು ಬೆಳಸಿ ಕಳೆಯುವುದಕ್ಕಾಗಿ, ಅವರನ್ನು ಅಜ್ಞಾನಬಂಧನ ರೂಪವಾದ ದೇಹಗಳಲ್ಲಿಟ್ಟು, ಸಾಧನೆಯ ನಂತರ ಆ ಬಂಧನವನ್ನು ಪೂರ್ಣವಾಗಿ ಕಳೆದು ಬಿಡುವುದಕ್ಕಾಗಿ ರಮಾನಾರಾಯಣರು ತಮ್ಮ ಮಾಯೆಯನ್ನು ವಿಶ್ವದಲ್ಲಿ ಬೀರಿ ಜನರನ್ನು

ಮರುಳು ಮಾಡಿದ್ದಾರೆ. ಅವರ ಅಜ್ಞಾನದ ಮಾತುಗಳು ಹೊರಬೀಳುತ್ತವೆ. ಚತುರ್ಮುಖನನ್ನೇ ಜಗದ್ಗುರುವೆನ್ನುವುದು ಅಂತಹ ಮಾತೇ ಸರಿ.

**ವಿಲಜ್ಜಮಾನಯಾ ಯಸ್ಯ ಸ್ಥಾತುಮೀಕ್ಷಾಪಥೇಮುಯಾ ।**
**ವಿಮೋಹಿತಾ ವಿಕತ್ಥಂತೇ ಮಮಾಹಮಿತಿ ದುರ್ಧಿಯಃ ॥ ೧೩ ॥**

ಯಸ್ಯ ಈಕ್ಷಾ ಪಥೇ = ಯಾರ ಕಣ್ಣೆದುರಿಗೆ; ಸ್ಥಾತುಂ = ನಿಲ್ಲುವುದಕ್ಕೆ; ವಿಲಜ್ಜಮಾನಯಾ = ನಾಚುವಂತಹ; ಅಮುಯಾ = ಈ ಜೀವಾಚ್ಛಾದಿಕ ಚಿನ್ಮಾಯೆಯಿಂದ; ವಿಮೋಹಿತಾಃ = ಅಜ್ಞಾನಕ್ಕೆ ಒಳಗಾದ; ದುರ್ಧಿಯಃ = ಬುದ್ಧಿಗೆಟ್ಟವರು; ಮಮ = ಸೃಷ್ಟಿಕಾರ್ಯವು ನನ್ನದೆಂದೂ; ಅಹಂ = ನಾನು ಎಲ್ಲಕ್ಕೂ ಯಜಮಾನನೆಂದೂ; ಇತಿ = ಹೀಗೆ; ವಿಕತ್ಥಂತೇ = ವಿಕಲ್ಪವಾಗಿ ಅಥವ ತಪ್ಪಾಗಿ ನುಡಿಯುತ್ತಾರೆ.

ಚಿತ್ಪ್ರಕೃತಿ ಎನಿಸುವ ರಮಾದೇವಿಯೇ ಜೀವಾಚ್ಛಾದಿಕ ಪರಮಾಚ್ಛಾದಿಕಗಳಿಗೆ ಅಭಿಮಾನಿ ಅವಾಂತರ ಅಭಿಮಾನಿಯೂ ದೈತ್ಯಳೂ ಇರುವುದರಿಂದ, ಪರಮಾತ್ಮನೆದುರು ನಿಲ್ಲಲು ನಾಚಿಕೆ, ಭಯಗಳಿಗೆ ಅವಕಾಶವಿದ್ದ ಹಾಗಾಯಿತು. ಆ ನಾಚಿಕೆ, ಭಯಗಳ ತೋರಿಕೆಯು ದೈತ್ಯಾಭಿಮಾನಿಯ ಮೇಲೆ ಪರಿಣಾಮ ಬೀರುವುವೇ ಹೊರತು ನಿರ್ಲಿಪ್ತಳಾದ ರಮಾದೇವಿಯ ಮೇಲಲ್ಲ.

ಜೀವನಿಗೆ ತನ್ನ ಸ್ವರೂಪದ ತಿಳಿವಳಿಕೆ ಇಲ್ಲದಂತೆ ಮಾಡುವುದು ಜೀವಾಚ್ಛಾದಿಕ; ಜೀವನಿಗೆ ಬಿಂಬದರ್ಶನವಾಗದಂತೆ ಮಾಡಿರುವುದು ಪರಮಾಚ್ಛಾದಿಕ. ಈ ಎರಡಕ್ಕೂ ಹಿನ್ನೆಲೆಯಾಗಿರುವುದು ಪರಮಾತ್ಮನ ಇಚ್ಛಾಪರಣ ಮಾಯೆ (ಶಕ್ತಿ).

**ದ್ರವ್ಯಂಕರ್ಮಚಕಾಲಶ್ಚ ಸ್ವಭಾವೋ ಜೀವ ಏವಚ ।**
**ವಾಸುದೇವಾತ್ಪರೋಬ್ರಹ್ಮನ್ನೈವಾನ್ಯೋಽರ್ಥೋಽಸ್ತಿತಾತ್ವತಃ ॥ ೧೪ ॥**

ಬ್ರಹ್ಮನ್ = ಬ್ರಹ್ಮಜ್ಞಾನಾರ್ಹನಾದ ಮಗೂ; ದ್ರವ್ಯಂ = ಪಥಿವ್ಯಾದಿ ಭೌತವಸ್ತುಗಳು; ಚ = ಮತ್ತು; ಕರ್ಮ = ಪುಣ್ಯಪಾಪಾದಿಗಳು, ಚ = ಮತ್ತು; ಕಾಲಃ = ವಸ್ತುಗಳಿಗೆ ಪರಿಣಾಮವನ್ನುಂಟುಮಾಡುವ ಎಣಿಕೆಯ ಕಾಲವು; ಸ್ವಭಾವಃ = ಸತ್ವಾದಿ ಮೂಲಭೂತಗುಣಗಳು; ಜೀವಃ ಏವ ಚ = ಜೀವ ಕೋಟಿಯೂ ಕೂಡ; ವಾಸುದೇಶವಾತ್ ಪರಃ ಅರ್ಥಃ = ಎಲ್ಲದರಲ್ಲಿಯೂ ಎಲ್ಲ ಕಡೆಯೂ ವ್ಯಾಪ್ತನಾದ ವಾಸುದೇವ ನಾಮಕನಿಗಿಂತ ಅನ್ಯವಾದ ಸಮರ್ಥವಸ್ತುವು; ತಾತ್ವತಃ = ನಿಜವಾಗಿ; ನ ಏವ = ಇಲ್ಲವೇ ಇಲ್ಲ.

ದ್ರವ್ಯಂ = ಯಜ್ಞಕಾರ್ಯದಲ್ಲಿ ಬಳುಸುವ ಹೋಮದ್ರವ್ಯಗಳು; ಕರ್ಮ = ಮಂತ್ರಪೂರ್ವಕವಾದ ಹೋಮಕಾರ್ಯ; ಕಾಲಃ = ವಸಂತಾದಿ ಯೋಗ್ಯ ಕಾಲ; ಸ್ವಭಾವಃ = ಬ್ರಾಹ್ಮಣಾದಿ ವರ್ಣಭಾವ; ಜೀವಃ = ಯಜ್ಞಕರ್ತನಾದ ಯಜಮಾನ. ಈ ರೀತಿಯಾಗಿಯೂ ಶ್ರೀವಿಜಯಧ್ವಜಾಚಾರ್ಯರು ವ್ಯಾಖ್ಯಾನಮಾಡಿರುವುದು ಬಹು ಶ್ಲಾಘ್ಯವಾಗಿದೆ. ಸ್ವತಂತ್ರನಾದ ಭಗವಂತನಿಂದ ಸೃಷ್ಟ್ಯಾದಿಕಾರ್ಯಗಳು ನಡೆಯುವುವೇ ಹೊರತು, ಅಸ್ವತಂತ್ರ ವಸ್ತುಗಳಿಂದ ಅದು ಸಾಧ್ಯವಿಲ್ಲವೆಂಬುದು ಸ್ಪಷ್ಟೀಕೃತವಾಗಿದೆ. ವಸ್ತುಗಳ ಅಸ್ವಾತಂತ್ರ್ಯ ವಿಚಾರದಿಂದ ಈಗಿನ ವಿಜ್ಞಾನಿಗಳ ವಾದ ಬಿದ್ದುಹೋಯಿತು; ಅಸ್ವತಂತ್ರ ಜೀವರ ವಿಚಾರದಿಂದ ಜೈನರ ಅರ್ಹಂತ ಸಮಾನಸ್ಕಂಧರ ವಾದ ನಿರಾಕೃತವಾಯಿತು. ಯಜ್ಞ ಭಾವಿತರಾದ ದೇವತೆಗಳೂ ಅಸ್ವತಂತ್ರರೆಂದಾಯಿತು.

**ನಾರಾಯಣಪರಾ ವೇದಾ ದೇವಾನಾರಾಯಣಾಂಗಜಾಃ ।**
**ನಾರಾಯಣಪರಾ ಲೋಕಾ ನಾರಾಯಣ ಪರಾ ಮಖಾಃ ॥ ೧೫ ॥**

**ನಾರಾಯಣಪರೋ ಯೋಗೋ ನಾರಾಯಣ ಪರಂ ತಪಃ ।**
**ನಾರಾಯಣಪರಂ ಜ್ಞಾನಂ ನಾರಾಯಣಪರಾ ಗತಿಃ ॥ ೧೬ ॥**

ವೇದಾಃ = ಸಕಲವೇದಗಳೂ; ನಾರಾಯಣ ಪರಾಃ = ಶ್ರೀಮನ್ನಾರಾಯಣನ ಸರ್ವೋತ್ತಮತ್ವವನ್ನೇ ಪ್ರತಿಪಾದಿಸತಕ್ಕವುಗಳಾಗಿವೆ; ದೇವಾಃ = ದೇವತೆಗಳು; ನಾರಾಯಣ ಅಂಗಜಾಃ = ನಾರಾಯಣನ ಚಕ್ಷುರಾದಿ ಅವಯಾಂಶಗಳಿಂದ ಜಾತರಾಗಿ, ಅವನಿಗಿಂತ ಕನಿಷ್ಠರಾಗಿದ್ದಾರೆ; ಲೋಕಾಃ = ಸಮಸ್ತ ಲೋಕಗಳೂ; ನಾರಾಯಣ ಪರಾಃ = ನಾರಾಯಣನಿಂದ ಪರಿಪಾಲಿತವಾಗಿವೆ; ಮಖಾಃ = ಯಜ್ಞಗಳು; ನಾರಾಯಣ ಪರಾಃ = ಬೇರೆ ಬೇರೆ ದೇವತೆಗಳಿಗೆ ಜನಕನಾಗಿ, ಅವರಲ್ಲಿ ಅವರಂತೆ ನಾಮರೂಪಗಳಿಂದ ಬಿಂಬನಾಗಿರುವ ನಾರಾಯಣನನ್ನು ಉದ್ದೇಶಿಸಿ ಆಚರಿಸತಕ್ಕವುಗಳಾಗಿವೆ.

ಯೋಗಃ = ಯೋಗಿಗಳ ಧ್ಯಾನವಿಷಯವು; ನಾರಾಯಣಪರಃ = ನಾರಾಯಣನನ್ನು ಕುರಿತುದಾಗಿದೆ; ತಪಃ = ತಪಸ್ಸು; ನಾರಾಯಣ ಪರಂ = ನಾರಾಯಣನ ಪ್ರಸಾದ ಪ್ರಾಪ್ತಿಗಾಗಿ ಆಚರಿಸುವುದಾಗಿದೆ; ಜ್ಞಾನಂ = ವೇದಾರ್ಥಜ್ಞಾನವು; ನಾರಾಯಣಪರಂ = ನಾರಾಯಣನ ಮಹಿಮೆಯನ್ನು ತಿಳಿಸುವುದಾಗಿದೆ; ಗತಿಃ = ಮುಟ್ಟಬೇಕಾದ ಗುರಿಯು; ನಾರಾಯಣಪರಂ = ನಾರಾಯಣನಿಂದ ಪರಿಪಾಲಿತವಾದ ವೈಕುಂಠಸ್ಥಾನವಾಗಿದೆ.

ವೈವಿಧ್ಯವುಳ್ಳ ಪ್ರಪಂಚದಲ್ಲಿ ಏಕಏವ ಸ್ವತಂತ್ರನಾದ ಶ್ರೀಮನ್ನಾರಾಯಣನು ತತ್ತದ್ರೂಪ ನಾಮಗಳಿಂದ ಪ್ರವಿಷ್ಟನಾಗಿ ತನ್ನ ಸಂಕಲ್ಪ ಮಾತ್ರ ಶಕ್ತಿಯಿಂದ ಎಲ್ಲವನ್ನೂ ನಡೆಸುತ್ತಿರುವುದರಿಂದ, ವೈವಿಧ್ಯದಲ್ಲಿ ಏಕತೆಯು ಓತಪ್ರೋತವಾಗಿದೆ. ವಸ್ತುವೈವಿಧ್ಯವನ್ನು ಅವ್ಯಕ್ತವೊಂದರಲ್ಲಿಯೂ, ದೈವೀ ಪ್ರಪಂಚದ ವೈವಿಧ್ಯವನ್ನು ದೇವೋತ್ತಮನಾದ ನಾರಾಯಣನಲ್ಲಿಯೂ ಕಾಣುವುದು ಜಾಣತನ.

**ತಸ್ಯಾಪಿ ದ್ರಷ್ಟುರೀಶಸ್ಯ ಕೂಟಸ್ಥಸ್ಯಾಖಿಲಾತ್ಮನಃ ।**
**ಸೃಜ್ಯಂ ಸೃಜಾಮಿ ಸೃಷ್ಟೋಽಹಮೀಕ್ಷಯೈವಾಭಿಚೋದಿತಃ ॥ ೧೭ ॥**

ಅಖಿಲಾತ್ಮನಃ = ಬಿಂಬರೂಪದಿಂದ ಸರ್ವಸ್ವಾಮಿಯಾದ; ಕೂಟಸ್ಥಸ್ಯಾಃ = ಅವ್ಯಕ್ತ ತತ್ವಾಭಿಮಾನಿಯಾದ; ತಸ್ಯಾಃ ಅಪಿ = ಶ್ರೀದೇವಿಗೂ ಸಹ; ಈಶ್ವರಸ್ಯ = ಯಜಮಾನನಾದ; ದ್ರಷ್ಟುಃ = ಸರ್ವಜ್ಞ ಶಿರೋಮಣಿಯಾದವನ; ಈಕ್ಷಯಾ ಕರುಣಾಕಟಾಕ್ಷದಿಂದ; ಚೋದಿತಃ ಏವ = ಪ್ರೇರಿತನಾಗಿಯೇ; ಸೃಜ್ಯಂ = ಅವನ ಸಂಕಲ್ಪಾನುಸಾರ ಸೃಷ್ಟಿಯಾಗಬೇಕಾದ ಜಗತ್ತನ್ನು; ಸೃಷ್ಟಃ = ಅವನಿಂದ ಸೃಷ್ಟಿಗೆ ಬಂದ ನಾನು; ಸೃಜಾಮಿ = ಸೃಷ್ಟಿಮಾಡುತ್ತೇನೆ.

'ಪ್ರೇರಣೆ' ಎಂಬ ಮಾತನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು. ವಿದ್ಯುಚ್ಛಕ್ತಿಯು ವಿದ್ಯುದ್ವಾಹಕತಂತಿಯ ಒಂದು ಕೊನೆಯನ್ನು ಸ್ಪರ್ಶ ಮಾಡುವುದರಿಂದ ಮಾತ್ರವೇ ಆ ತಂತಿಯು ಕಾರ್ಯೋನ್ಮುಖವಾಗುವುದಿಲ್ಲ. ಆ ಶಕ್ತಿಯು ತಂತಿಯಲ್ಲಿ ಹರಿಯುತ್ತಿರುವಾಗ ಮಾತ್ರ ಅದು ಕಾವೇರಿ ಬೆಳಕನ್ನು ಕೊಡುವುದು. ಯಂತ್ರಗಳ ಮುಖ್ಯಸುರಳಿಯಲ್ಲಿ ವಿದ್ಯುಚ್ಛಕ್ತಿ ಪ್ರವಹಿಸಿದಾಗ ಮಾತ್ರ ಆ ಬಳಿಯ ಅಯಸ್ಕಾಂತಕ್ಷೇತ್ರವು ಕಾರ್ಯೋನ್ಮುಖವಾಗಿ ಯಂತ್ರದ ಚಕ್ರಗಳು ಚಲಿಸುವುವು. ಅದರಂತೆ, ಸ್ವತಂತ್ರನಾದ ಭಗವಂತನು ವಸ್ತು ಸ್ವಭಾವಗಳಲ್ಲಿಯೂ, ಜೀವ ಸ್ವರೂಪಗಳಲ್ಲಿಯೂ ವ್ಯಾಪ್ತನಾಗಿ ತನ್ನ ಸಂಕಲ್ಪ ಶಕ್ತಿಮಾತ್ರದಿಂದ ಪ್ರಪಂಚದ ವ್ಯಾಪಾರಗಳು ನಡೆಯುವಂತೆ ಮಾಡುವನು. ಪ್ರೇರಣೆ ಎಂಬ ಮಾತಿನ ಅರ್ಥವಿದು. ಆದುದರಿಂದ ಅವನು ಮುಖ್ಯಕಾರಣನೆನಿಸುವನು; ಉಳಿದೆಲ್ಲವೂ ಅಮುಖ್ಯಕಾರಣಗಳು. ಚತುರ್ಮುಖನಲ್ಲಿ, ಅವನಂತೆ ನಾಮರೂಪಗಳಿಂದ ಅಂತರ್ವರ್ತಿಯಾಗಿ, ಶ್ರೀವಾಸುದೇವನು ಜಗತ್ಸೃಷ್ಟಿಯನ್ನು ಮಾಡುವನು. ನಾರಾಯಣನ ಸಂಕಲ್ಪ ಬಲದಿಂದ ಬ್ರಹ್ಮನ ದೇಹೇಂದ್ರಿಯಗಳು ವ್ಯಾಪಾರದಲ್ಲಿ ತೊಡಗುವುವು. ಆದರಿಂದ ಬ್ರಹ್ಮನಿಗೆ ಕೀರ್ತಿ, ಪುಣ್ಯಲಾಭ.

**ಸತ್ತ್ವಂ ರಜಸ್ತಮ ಇತಿ ನಿರ್ಗುಣಸ್ಯಗುಣಾಸ್ತ್ರಯಃ ।**
**ಸ್ಥಿತಿ ಸರ್ಗನಿರೋಧೇಷು ಗೃಹಿತಾಮಾಯಯಾವಿಭೋಃ ॥ ೧೮ ॥**

ನಿರ್ಗುಣಸ್ಯ = ಜಡಗುಣರಹಿತನಾದ ಪರಮಾತ್ಮನ ವಶದಲ್ಲಿ ಸದಾ ಇರತಕ್ಕ; ಸತ್ವಂ ರಜಃ ತಮಃ ಇತಿ = ಸತ್ವ, ರಜ, ತಮ ಎಂಬ; ತ್ರಯಃ ಗುಣಾಃ = ಮೂರು ಜಡಗುಣಗಳು; ಸ್ಥಿತಿ ಸರ್ಗನಿರೋಧೇಷು = ಸೃಷ್ಟಿಸ್ಥಿತಿಲಯ ಕಾರ್ಯಗಳನ್ನು ನಡೆಸುವಲ್ಲಿ; ವಿಭೋಃ ಮಾಯಯಾ = ಸರ್ವಸಮರ್ಥನಾದ ಸ್ವಾಮಿಯ ಸಂಕಲ್ಪ ಶಕ್ತಿಯಿಂದ; ಗೃಹೀತಾಃ (ಭವಂತಿ) = ಬಳಸಲ್ಪಡುವುವು.

ಬ್ರಹ್ಮಾಂಡದ ಹೊರಗಿನ ಸೃಷ್ಟಿಯಲ್ಲಿ ಸತ್ವಾದಿ ತ್ರಿಗುಣಗಳು ಕ್ರಮವಾಗಿ ಸ್ಥೂಲ, ಸ್ಥೂಲತರಗಳಾಗುವಂತೆ ⁽¹⁾ವಿಕಾರಗೊಳಿಸಲ್ಪಡುವುವು. ಬ್ರಹ್ಮಾಂಡದೊಳಗಿನ ದೈನಂದಿನ ಸೃಷ್ಟಿಯಲ್ಲಿ ಸ್ಥೂಲತತ್ವಗಳ ⁽²⁾ಬೆರಕೆಯು ನಡೆಯುವುದು. ಇದಕ್ಕೆ ವೈಕೃತ ಸೃಷ್ಟಿ ಎಂದು ಹೆಸರು. (೧) ಪ್ರಾಕೃತಸೃಷ್ಟಿ= Physical Combinations(೨) ವೈಕೃತಸೃಷ್ಟಿ= Chemical Products.

**ಕಾರ್ಯಕಾರಣ ಕರ್ತೃತ್ವೇ ದ್ರವ್ಯಜ್ಞಾನಕ್ರಿಯಾಶ್ರಯಾಃ ।**
**ಬಧ್ನಂತಿ ನಿತ್ಯದಾಮುಕ್ತಂ ಮಾಯಿನಂ ಪುರುಷಂಗುಣಾಃ ॥ ೧೯ ॥**

ದ್ರವ್ಯ, ಜ್ಞಾನ, ಕ್ರಿಯಾಶ್ರಯಾಃ = ವಸ್ತುರಾಶಿ, ಜ್ಞಾನ ಮತ್ತು ಕಾರ್ಯರೂಪವಾದ ಚಟುವಟಿಕೆಗಳಿಗೆ ಆಧಾರಗಳಾದ; ಗುಣಾಃ = ಸತ್ವ ರಜಸ್ತಮೋಗುಣಗಳು; ನಿತ್ಯದಾ ಮುಕ್ತಂ = ನಿತ್ಯಮುಕ್ತನೇ ಆದ; ಮಾಯಿನಂ = ಶಕ್ತಿ ಸ್ವರೂಪನಾದ; ಪುರುಷಂ = ಭಗವಂತನನ್ನು; ಕಾರ್ಯಕಾರಣ ಕರ್ತೃತ್ವೇ = ಕಾರ್ಯರೂಪವಾದ ಶರೀರ, ಕಾರಣರೂಪವಾದ ಮನಸ್ಸು ಮತ್ತು ಕ್ರಿಯಾರೂಪವಾದ ಇಂದ್ರಿಯಗಳು ಇವುಗಳಲ್ಲಿ; ಬಧ್ನಂತಿ = ತೊಡಗಿಸುತ್ತವೆ.

ಬಂಧನಕ್ಕೊಳಗಾಗದೆ ನಿತ್ಯಮುಕ್ತನಾದವನನ್ನು ಸ್ವತಃ ಕಾರ್ಯಮಾಡಲಾರದ ಜಡಗುಣಗಳು ಎಂದಿಗೂ ಬಂಧಿಸಲಾರವು. ಆದುದರಿಂದ ಈ ಶ್ಲೋಕದ ಅಭಿಪ್ರಾಯವನ್ನು ಸಾರ್ಥಕವಾದ ರೀತಿಯಲ್ಲಿ ಗ್ರಹಿಸಬೇಕು. ಗುಣಕಾರ್ಯಗಳ ಪರಿಣಾಮವಾಗಬೇಕಾಗಿರುವುದು ಅನಾದಿ ಲಿಂಗಬದ್ಧರಾದ ಜೀವರ ಮೇಲೆಯೇ ಹೊರತು ನಿತ್ಯನಿರ್ಮುಕ್ತನಾದ ಭಗವಂತನ ಮೇಲಲ್ಲ. ಆದರೆ, ಅವನು ಜೀವರಲ್ಲಿ ಜೀವರಂತೆ ಬಿಂಬನಾಗಿ ನಟಿಸಿದಾಗ ಮಾತ್ರ ಪ್ರತಿಬಿಂಬ ಭಾವದಿಂದ ಜೀವರ ಮೇಲೆ ಪರಿಣಾಮವುಂಟಾಗುವುದು. ಆದುದರಿಂದ ಗುಣಗಳು ಪುರುಷನನ್ನು ಬಂಧಿಸುತ್ತವೆ ಎಂದಾಗ, ಗುಣಗಳಿಗೆ ಬದ್ಧನಾದವನಂತೆ ಆ ಪುರುಷೋತ್ತಮನು ಆಡುತ್ತಾನೆ ಎಂದರ್ಥ.

ಸಾರ್ಥಕವಾದ ಅದರ ಅಭಿಪ್ರಾಯ ಈ ರೀತಿಯಾಗಿದೆ. ನಿತ್ಯದಾಮುಕ್ತಂ= ದೇಹಾಭಿಮಾನದ ಹೊರತು, ನಿತ್ಯಮುಕ್ತನೇ ಆದ; ಪುರುಷಂ = ಜೀವಕೋಟಿಯನ್ನು; ಗುಣಾಃ = ಜಡಗುಣಗಳಲ್ಲಿದ್ದು ಅವುಗಳ ಸ್ವಭಾವಗಳನ್ನು ಪ್ರಕಟಿಸುವ ಸ್ವತಂತ್ರ ಪುರುಷನು; (ದೇಹಾಭಿಮಾನವನ್ನುಂಟುಮಾಡಿ); ಬಧ್ನಾತಿ = ಬಂಧನಕ್ಕೆ ಒಳಪಡಿಸುತ್ತಾನೆ.

ಇದರಲ್ಲಿ ವಿವೇಕ– ತಮೋಗುಣವು ದೇಹಾಭಿಮಾನವನ್ನುಂಟುಮಾಡಿ ದುಃಖಕ್ಕೆ ಕಾರಣವಾದುದು. ರಜೋಗುಣವು ಇಂದ್ರಿಯಗಳ ಚಟುವಟಿಕೆಗಳಿಗೆ ಕಾರಣವಾದುದು; ಸತ್ವಗುಣವು ಮನಸ್ಸು ಜ್ಞಾನಗ್ರಾಹಿಯಾಗುವಂತೆಯೂ ಸುಖಾನುಭವ ಕೊಡುವಂತೆಯೂ ಮಾಡುವುದು.

''ರಜೋಗುಣಮುಪಾದಾನೀಕೃತ್ಯ ಸೃಷ್ಟಿಂ ವಕ್ಷ್ಯನ್ ಹರೇಃ ಸತ್ವಾದಿ ಗುಣೈಃ ಜೀವಬಂಧಕತ್ವ ಮಹಿಮಾನಮಾಹ'' (ವಿಜಯಧ್ವಜೀಯ ವ್ಯಾಖ್ಯಾನ.)

ಮೂಲ ತಮೋಗುಣದಲ್ಲಿ ಅಡಗಿದ್ದ ಚಟುವಟಿಕೆಯ ಶಕ್ತಿಯನ್ನು ಮೂಲಸತ್ವಗುಣವು ಕ್ಷೋಭೆಗೊಳಿಸಿ ಹೊರತರುತ್ತದೆ. ಈ ರಜೋಗುಣವನ್ನು ಬಳಸಿಕೊಂಡು ಭಗವಂತನು ಸೃಷ್ಟಿಕಾರ್ಯವನ್ನು ನಡೆಸುತ್ತಾನೆ.

ತಮದ ಚಟುವಟಿಕೆಯ ಭಾಗದೊಂದಿಗೆ ಮೂಲ ಸತ್ವವು ಬೆರೆತಿರುವುದರಿಂದ, ಅದು ವಿದ್ಯುದಾದಿ ಶಕ್ತಿರೂಪವನ್ನು ಹೊಂದಿ ಕಾರ್ಯಗಳಿಗೆ ನೆರವಾಗುವುದು.(Importance of Electronics in the modern world.)

**ಸ ಏಷ ಭಗವಾಂಲ್ಲಿಂಗೈಸ್ತ್ರಿಭಿರೇತೈರಧೋಕ್ಷಜಃ ।**
**ಸ್ವಲಕ್ಷಿತಗತಿರ್ಬ್ರಹ್ಮನ್ ಸರ್ವೇಷಾಂ ಮಮಚೇಶ್ವರಃ ॥ ೨೦ ॥**

ಬ್ರಹ್ಮನ್= ಬ್ರಹ್ಮವಾದಿಯಾದ ನಾರದಾ; ಸಃ ಏಷಃ ಭಗವಾನ್= (೧೧ನೇ ಶ್ಲೋಕದಿಂದ ೧೯ರ ವರೆಗೆ ವಿವರಿಸಿದ ರೀತಿಯಲ್ಲಿ); ಇಂತಹ ಮಹಿಮಾಸ್ಪದನಾದ ಭಗವಂತನು; ಅಧೋಕ್ಷಜಃ = ಅಧೋಕ್ಷಜನೆಂಬ ನಾಮರೂಪದಿಂದಿದ್ದು; ಏತೈಃ ತ್ರಿಭಿಃ ಲಿಂಗೈಃ = ಜ್ಞಾನಸಾಧಕಗಳಾದ ಈ ಮೂರು ಗುಣಗಳಿಂದ; ಸ್ವಲಕ್ಷಿತ ಗತಿಃ = ತಾನು ನಡೆಸುವ ಸಾಧನ ಮಾರ್ಗದಲ್ಲಿ ಜೀವರ ಸ್ವರೂಪೋದ್ಧಾರಕನಾಗಿ; ಸರ್ವೇಷಾಂ = ಎಲ್ಲಾ ಜೀವರಿಗೂ; ಮಮ ಚ = ಅದರಂತೆ ನನಗೂ; ಈಶ್ವರಃ = ಸ್ವಾಮಿಯಾಗಿದ್ದಾನೆ.

ಸ್ವಲಕ್ಷಿತಗತಿಃ ಎಂದರೆ, ಬಿಂಬಕಾರ್ಯದಿಂದ ಪ್ರತಿಬಿಂಬತ್ವೇನ ಜೀವರ ಸಾಧನೆ ಮಾಡಿ, ಮಾಡಿಸುತ್ತಾ ಎಂದರ್ಥ. ಅಲ್ಲದೆ, ಮುಕ್ತಿಯೋಗ್ಯರಾದ ಜೀವರ ಸತ್ಸಾಧನೆಯಿಂದ ತನ್ನ ಇರುವಿಕೆಯನ್ನು ತೋರುವವನೆಂದೂ ಅರ್ಥ. ಅಕ್ಷಜ ಎಂದರೆ ಅಕ್ಷಿ ಮೊದಲಾದ ಇಂದ್ರಿಯಗಳಿಂದ ಜನ್ಯವಾದ ಜ್ಞಾನ. ಜೀವರಿಗೆ ಮುಟ್ಟುವ ಆ ಜ್ಞಾನವು, ಒಳಮುಖವಾಗಿ (ಗುಹಾಪ್ರವೇಶ ಮಾಡದೆ), ಕೆಳಮುಖವಾಗಿ (ಹೊರಮುಖವಾಗಿ) ಇರುವಂತೆ ಮಾಡುವವನು ಅಧೋಕ್ಷಜ. ಭವಪಾಶದಲ್ಲಿ ಜೀವರನ್ನು ಕಟ್ಟಿಹಾಕುವ ಇವನೇ ವಾಸುದೇವನಾಮಕನಾಗಿ ಮುಕ್ತಿಪ್ರದನೂ ಆಗಿದ್ದಾನೆ.

**ಕಾಲಂ ಕರ್ಮಸ್ವಭಾವಂಚ ಮಾಯೇಶೋ ಮಾಯಯಾಸ್ವಯಾ ।**
**ಆತ್ಮನ್ಯದೃಚ್ಛಯಾಪ್ರಾಪ್ತಂ ವಿಬುಭೂಷುರುಪಾದದೇ ॥ ೨೧ ॥**

ಮಾಯೇಶಃ = ಚಿತ್ಪ್ರಕೃತಿನಾಮಕಳಾದ ಲಕ್ಷ್ಮೀದೇವಿಗೆ ಪತಿಯಾದ ಸ್ವತಂತ್ರ ಪುರುಷನು; ಸ್ವಯಾ = ತನ್ನ; ಮಾಯಯಾ = ಇಚ್ಛಾಶಕ್ತಿಯಿಂದ; ಆತ್ಮನಿ = ತನ್ನ ಆಶ್ರಯದಲ್ಲಿ; ಯದೃಚ್ಛಯಾ ಪ್ರಾಪ್ತಂ = ಸ್ವಾಭಾವಿಕವಾಗಿಯೇ ಇರುವ(ತನ್ನ ಇಚ್ಛೆಯಿಂದಲೇ ಇರುವ); ಕಾಲಂ = ಕಾಲವನ್ನೂ; ಕರ್ಮ = ಜೀವರಿಗೆ ಬಂಧಕಗಳಾದ ಕರ್ಮಬೀಜಗಳನ್ನೂ; ಸ್ವಭಾವಂ ಚ = ತಮ್ಮ ತಮ್ಮ ಸಹಜ ಸ್ವರೂಪಗಳಿಂದಿರುವ ಜೀವರನ್ನೂ, ಸ್ವಾಭಾವಿಕ ಜಡಲಕ್ಷಣಗಳುಳ್ಳ ಗುಣತ್ರಯಗಳನ್ನೂ; ವಿಬುಭೂಷುಃ = ವಿಕಾರಗಳಿಗೆ ಒಳಪಡಿಸಿ, ನಾನಾ ರೂಪನಾಮಗಳನ್ನು ಕೊಟ್ಟು ಅದೇ ನಾಮರೂಪಗಳಿಂದ ಬಿಂಬಕಾರ್ಯ ನಡೆಸುವುದಕ್ಕಾಗಿ; ಉಪಾದದೇ = ಸ್ವೀಕಾರ ಮಾಡಿದನು.

ಸ್ವಭಾವ ಶಬ್ದದಿಂದ ಜೀವರನ್ನೂ, ಜಡಮಾಯಾಗುಣಗಳನ್ನೂ ನಿರ್ದೇಶಿಸಿ, ಲಕ್ಷ್ಮೀಮಾಯೆಯನ್ನೂ ನಿರೂಪಿಸಿ, ಸ್ವಮಾಯೆ ಅಥವಾ ತನ್ನ ಇಚ್ಛಾಶಕ್ತಿ ಎಂಬ ಮಾಯೆ ಎಂಬುದನ್ನೂ ಬಿಡಿ ಬಿಡಿಯಾಗಿ ಹೇಳಿರುವುದರಿಂದ, 'ಬ್ರಹ್ಮಾಭಿನ್ನವಾಗಿ ಬ್ರಹ್ಮನ ವಶವಾದ ಮಾಯೆಯಿಂದ ಮಾಯಾಪ್ರಪಂಚದ ಸೃಷ್ಟಿ' ಎಂಬ ಅದ್ವೈತಿಗಳ ವಾದಕ್ಕೆ ಅವಕಾಶವೇ ಇಲ್ಲದಂತಾಯಿತು; ಭಗವಂತನ ಸರ್ವೇಶ್ವರತ್ವವನ್ನೂ, ಪುರುಷೋತ್ತಮತ್ವವನ್ನೂ ಸ್ಥಾಪಿಸಿದಂತಾಯಿತು

**ಕಾಲಾದ್ಗುಣವ್ಯತಿಕರಾತ್ಪರಿಣಾಮಸ್ಸ್ವಭಾವತಃ ।**
**ಕರ್ಮಣೋ ಜನ್ಮ ಮಹತಃ ಪುರುಷಾಧಿಷ್ಠಿತಾದಭೂತ್ ॥ ೨೨ ॥**

ಕಾಲಾತ್ = ಕಾಲವಶದಿಂದ; ಪರಿಣಾಮಸ್ವಭಾವತಃ = ವಿಕಾರಗಳಿಗೆ ಒಳಗಾಗುವ ಸ್ವಭಾವವುಳ್ಳ; ಗುಣವ್ಯತಿಕಾರಾತ್ = ಜಡಗುಣಗಳ ವಿಕೃತಿಯಿಂದ; ಕರ್ಮಣಃ = ಜಗತ್

ಸೃಷ್ಟ್ಯಾದಿ ಕರ್ಮಗಳಿಗೆ ಬೇಕಾದ; ಮಹತಃ ಜನ್ಮ = ಮಹತ್ತತ್ತ್ವದ ಸೃಷ್ಟಿಯು; ಪುರುಷ ಅಧಿಷ್ಠಿತಾತ್= ಭಗವಂತನ ಅಧಿಷ್ಠಾನ ಬಲದಿಂದ; ಅಭೂತ್= ಉಂಟಾಯಿತು.

ಪ್ರಳಯನಿದ್ರಾಕಾಲದ ಅವಧಿ ಮುಗಿಯುತ್ತಿರುವಾಗ, ದುರ್ಗಾದೇವಿಯ ಸ್ತುತಿಯಿಂದ ಭಗವಂತನಲ್ಲಿ ಸೃಷ್ಟಿಯ ವಿಷಯದಲ್ಲಿ ಇಚ್ಛೆಯು ಮೂಡಿತು. ಇದೇ ಕಾಲಪ್ರಚೋದನೆ. ಗುಣಗಳ ವಿಕೃತಿ ಎಂದರೆ ಭೌತಿಕ ಮಿಶ್ರಣ. ಮಹತ್ತತ್ತ್ವದಿಂದ ತನ್ಮಾತ್ರಗಳವರೆಗೆ ವಿಕೃತಸೃಷ್ಟಿ ಎಂದು ಹೆಸರು. ಪ್ರಕಟವಾದ ಅಧಿಕಾಂಶ ಸತ್ವಗುಣದಿಂದ ಕೂಡಿ, ಚಟುವಟಿಕೆಗೆ ಬೇಕಾದಷ್ಟು ರಜೋಗುಣವು, ಸ್ವಲ್ಪ ತಮೋಗುಣವನ್ನು ಕೂಡಿಸಿಕೊಂಡು ಮಹತ್ತತ್ತ್ವವೆಂಬ ಬ್ರಹ್ಮದೇವರ ಶರೀರ ವಸ್ತುವಾಗುವುದು. ಅದು ಹಾಗಾಗುವುದು ಭಗವದಧಿಷ್ಠಾನದಿಂದ, ಎಂದರೆ ಅವನ ಇಚ್ಛಾರೂಪವಾದ ಪ್ರೇರಣೆಯಿಂದ ೧೦೦ ಸತ್ವ + ೧೦ ರಜ + ೧ ತಮ- ಇವುಗಳ ಭೌತಮಿಶ್ರಣದಿಂದಾದುದು ಮಹತ್ತತ್ತ್ವ.

**ಮಹತಸ್ತು ವಿಕುರ್ವಾಣಾದ್ರಜಃ ಸತ್ವೋಪಬೃಂಹಿತಾತ್ ।**
**ತಮಃ ಪ್ರಧಾನಸ್ತ್ವಭವದ್ದ್ರವ್ಯಜ್ಞಾನಕ್ರಿಯಾತ್ಮಕಃ ॥ ೨೩ ॥**

**ಸೋಹಂಕಾರ ಇತಿ ಪ್ರೋಕ್ತೋ ವಿಕುರ್ವನ್ಸಮಭೂತ್ತ್ರಿಧಾ ।**
**ವೈಕಾರಿಕಸ್ತೈಜಸಶ್ಚ ತಾಮಸಶ್ಚೇತಿ ಯದ್ಭಿದಾ ॥ ೨೪ ॥**

ರಜಃ ಸತ್ವ ಉಪಬೃಂಹಿತಾತ್= ಸ್ವಲ್ಪ ಹೆಚ್ಚಾಗಿ ರಜೋಗುಣ ಮತ್ತು ಸತ್ವಗುಣಗಳಿಂದ ಕೂಡಿ; ತಮಃ ಪ್ರಧಾನಾ = ತಮೋಗುಣವು ಕಾಣುವಷ್ಟು ಸೇರಿರಲು; ವಿಕುರ್ವಾಣಾತ್= ಕಾಲಕರ್ಮಸ್ವಭಾವಗಳ ನಿಮಿತ್ತ ವಿಕೃತ ಗೊಳಿಸಲ್ಪಟ್ಟ; ಮಹತಃ = ಮಹತ್ತತ್ತ್ವದಿಂದ; ದ್ರವ್ಯಜ್ಞಾನ ಕ್ರಿಯಾತ್ಮಕಃ = ಭೌತದ್ರವ್ಯಗಳು, ಜ್ಞಾನಶಕ್ತಿಗಳು, ಕ್ರಿಯಾಶಕ್ತಿಗಳು ಇವುಗಳಿಗೆ ಸಾಧಕವಾದ ಇನ್ನೊಂದು ತತ್ವವು; ಅಭವತ್= ಉಂಟಾಯಿತು.

ಈ ಹೊಸತತ್ವದಲ್ಲಿ ಸತ್ವಗುಣ, ರಜೋಗುಣಗಳೇ ಹೆಚ್ಚಾಗಿ ಮಹತ್ತತ್ತ್ವಕ್ಕೆ ಸೇರುವವು. ತಮೋಗುಣವು ಪ್ರಧಾನವೆಂದರೆ, ಹೆಚ್ಚಾಗಿಲ್ಲದಿದ್ದರೂ ಅದರ ಇರುವಿಕೆಯು ಸ್ಪಷ್ಟವಾಗಿ ಕಂಡುಬರುವುದು ಎಂದರ್ಥ.

ಸಃ = ಆ ಹೊಸತತ್ವವು; ಅಹಂಕಾರಃ ಇತಿ ಪ್ರೋಕ್ತಃ = ಅಹಂಕಾರತತ್ವ ಎಂದು ಕರೆಸಿಕೊಳ್ಳುತ್ತದೆ; ವಿಕುರ್ವನ್= ಅದರಲ್ಲಿ ಹೆಚ್ಚು ಸತ್ವವಿರುವಂತೆ, ಸ್ವಲ್ಪ ಹೆಚ್ಚು

ರಜೋಗುಣವಿರುವಂತೆ ಮತ್ತು ಮೊದಲಿಗಿಂತ ಸ್ವಲ್ಪ ಹೆಚ್ಚು ತಮೋಗುಣಗಳನ್ನು ಸೇರಿಸಿ ವಿಕಾರಗೊಳಿಸಿದುದರಿಂದ; ಯತ್ ಭಿಧಾ = ಯಾವ ಮೂರು ರಾಶಿಗಳ ಭಿನ್ನತೆಯು; ವೈಕಾರಿಕಃ = ವೈಕಾರಿಕವೆಂದು; ಚ = ಮತ್ತು; ತೈಜಸಃ = ತೈಜಸವೆಂದು; ಚ = ಮತ್ತು; ತಾಮಸಃ = ತಾಮಸವೆಂದು; ತ್ರಿಧಾ ಸಮಭೂತ್= ಅದು ಮೂರುವಿಧವಾಗಿ ಆಯಿತು.

ಮಹತ್ತತ್ತ್ವರಾಶಿಯಲ್ಲಿ ಸ್ವಲ್ಪಭಾಗವನ್ನು ತೆಗೆದುಕೊಂಡು ಅದಕ್ಕೆ ಕ್ರಮವಾಗಿ ಸತ್ವಗುಣ, ರಜೋಗುಣ, ತಮೋಗುಣಗಳು ಒಂದಕ್ಕಿಂತ ಒಂದು ಕಡಿಮೆಯಾಗಿರುವಂತೆ ಕೂಡಿಸಿ ಕದಡಿದಾಗ ಉಂಟಾಗುವುದು ಅಹಂಕಾರತತ್ತ್ವ. ಅದನ್ನು ಮೂರು ಭಾಗಮಾಡಿ, ಮತ್ತೆ ಮೇಲಿನಂತೆ ಮೂರುಗುಣಗಳನ್ನು ಕ್ರಮವಾಗಿ ಬೆರೆಸಿ ಕದಡಿದರೆ ವೈಕಾರಿಕ ಅಹಂಕಾರ, ತೈಜಸ ಅಹಂಕಾರ ಮತ್ತು ತಾಮಸ ಅಹಂಕಾರಗಳೆಂದು ಮೂರು ಬಗೆಯಾಗುವುವು. ಮೊದಲನೆಯದು ಮನಸ್ಸು ಮತ್ತು ದೇವತೆಗಳ ಸೂಕ್ಷ್ಮಶರೀರಗಳಿಗೂ, ಎರಡನೆಯದು ದಶೇಂದ್ರಿಯ ಶಕ್ತಿಗಳಿಗೂ, ಮೂರನೆಯದು ಸೂಕ್ಷ್ಮಪಂಚಭೂತಗಳ ಸೃಷ್ಟಿಗೂ ಉಪಯೋಗಿಸಲ್ಪಡುವವು. ಬೆರಕೆಯಾದ ಮೇಲೂ, ವೈಕಾರಿಕವು ಸತ್ವಪ್ರಧಾನ, ತೈಜಸವು ರಜೋಗುಣಪ್ರಧಾನ, ತಾಮಸಾಹಂಕಾರವು ತಮೋಗುಣಪ್ರಧಾನ.

**ದ್ರವ್ಯಶಕ್ತಿಃ ಕ್ರಿಯಾಶಕ್ತಿರ್ಜ್ಞಾನ ಶಕ್ತಿರಿತಿ ಪ್ರಭೋಃ ।**
**ತಾಮಸಾದಪಿ ಭೂತಾದೇರ್ವಿಕುರ್ವಾಣಾದಭೂನ್ನಭಃ ॥ ೨೫ ॥**

ದ್ರವ್ಯಶಕ್ತಿಃ = ಸೂಕ್ಷ್ಮಭೂತಗಳನ್ನು ಉತ್ಪಾದಿಸುವ ಶಕ್ತಿ; ಕ್ರಿಯಾಶಕ್ತಿಃ = ಇಂದ್ರಿಯಗಳನ್ನು ಕಾರ್ಯೋನ್ಮುಖವಾಗಿ ಮಾಡುವ ಶಕ್ತಿ ಮತ್ತು; ಜ್ಞಾನಶಕ್ತಿಃ = ಮನಸ್ಸು ಮತ್ತು ಇಂದ್ರಿಯಗಳನ್ನು ಜ್ಞಾನಪ್ರದವಾಗುವಂತೆ ಮಾಡುವ ಶಕ್ತಿ; ಇತಿ = ಈ ರೀತಿಯಾಗಿ; ಪ್ರಭೋಃ = ಅಹಂಕಾರತತ್ತ್ವಾಭಿಮಾನಿಯಾದ ರುದ್ರದೇವರ ಶಕ್ತಿಗಳು; ವಿಕುರ್ವಾಣಾತ್ ತಾಮಸಾತ್ ಅಪಿ = ಕಾಲ ಕರ್ಮ ಸ್ವಭಾವಾದಿಗಳ ನಿಮಿತ್ತದಿಂದ ವಿಕೃತಗೊಳಿಸಲ್ಪಟ್ಟ ತಾಮಸಾಹಂಕಾರದಿಂದ; ನಭಃ = ಆಕಾಶತತ್ತ್ವವು; ಅಭೂತ್= ಉಂಟಾಯಿತು.

ತ್ರಿಗುಣಗಳು ವಿವಿಧ ಸ್ವಭಾವಗಳನ್ನು ಹೊಂದಿದ್ದರೂ, ಅವು ಜಡಗಳಾದುದರಿಂದ ಸ್ವತಃ ತಮ್ಮ ಸ್ವಭಾವಸಿದ್ಧವಾದ ಗುಣಗಳನ್ನು ಪ್ರಕಟಿಸಲಾರವು. ಅವುಗಳು ಪ್ರಕಟವಾಗುವಂತೆ ಮಾಡುವುದು ರುದ್ರದೇವರ(ರುದ್ರಾಂತರ್ಗತ ಸ್ವತಂತ್ರ ಪುರುಷನ)

ಶಕ್ತಿ; ಇದರಂತೆ ಇಂದ್ರಿಯಗಳನ್ನು ನಡೆಸುವ ಮತ್ತು ಜ್ಞಾನೇಂದ್ರಿಯಗಳನ್ನೂ ಬಳಸುವ ಶಕ್ತಿಗಳೂ ಕೂಡ ರುದ್ರದೇವರ ಶಕ್ತಿಯಿಂದ ನಡೆಯುವವು. ಈ ರುದ್ರದೇವರು ವೈಕಾರಿಕ ದೇಹವುಳ್ಳವರಾಗಿ ತಮ್ಮಿಂದ ಜನಿಸಿದ ದೇವತೆಗಳ ಶಕ್ತಿಗಳನ್ನು ಉದ್ಬೋಧಿಸಿ, ಅವರ ಮುಖಾಂತರ ಅವರವರ ವಶವರ್ತಿಗಳಾದ ದ್ರವ್ಯಗಳ ಮತ್ತು ಇಂದ್ರಿಯಗಳ ಶಕ್ತಿಗಳನ್ನು ಪ್ರಕಟಿಸುವರು.

ಸೂಕ್ಷ್ಮ ಆಕಾಶತತ್ತ್ವ ಮೊದಲಾದವು ಕ್ರಮವಾಗಿ ತಾಮಸಾಹಂಕಾರದಿಂದ ಉತ್ಪನ್ನವಾಗುವವು.

**ತಸ್ಯ ಮಾತ್ರಾಗುಣಃ ಶಬ್ದೋ ಲಿಂಗಂ ಯದ್ದ್ರಷ್ಟುದೃಶ್ಯಯೋಃ ।**
**ತಮಸೋಥ ವಿಕುರ್ವಾಣಾದಭೂತ್ ಸ್ಪರ್ಶಗುಣೋನಿಲಃ ॥ ೨೬ ॥**

ತಸ್ಯ = ಆ ಸೂಕ್ಷ್ಮ ಆಕಾಶತತ್ತ್ವದ; ಮಾತ್ರಾಗುಣಃ = ಜ್ಞಾನಾಶ್ರಯವಾದ ಗುಣವು; ಶಬ್ದಃ = ನಾದವು; ಯತ್ = ಆ ಯಾವ ಶಬ್ದಗುಣವು; ದ್ರಷ್ಟುಃ = ಕಾಣತಕ್ಕ ಪುರುಷನ, ಮತ್ತು; ದೃಶ್ಯಯೋಃ = ಕಾಣಬರುವ ಜಗದ್ವಸ್ತುಗಳ; ಲಿಂಗಂ = ದ್ಯೋತಕವಾದ ಲಕ್ಷಣವು; ಅಥ = ಅನಂತರದಲ್ಲಿ; ವಿಕುರ್ವಾಣಾತ್ ತಮಸಃ = ವಿಕೃತಿಗೊಳಗಾದತಾಮಸಾಹಂಕಾರದಿಂದ; ಸ್ಪರ್ಶಗುಣಃ = ತ್ವಗಿಂದ್ರಿಯದಿಂದ ಗ್ರಹಿಸಬಹುದಾದ ಸ್ಪರ್ಶಗುಣವುಳ್ಳ; ಅನಿಲಃ = ಸೂಕ್ಷ್ಮವಾಯುತತ್ತ್ವವು; ಅಭೂತ್ = ಉಂಟಾಯಿತು.

ಆಕಾಶ, ವಾಯು ಮೊದಲಾದ ಸೂಕ್ಷ್ಮಭೌತ ತತ್ತ್ವಗಳು ಶಬ್ದಸ್ಪರ್ಶಾದಿಗಳಿಂದ ಇಂದ್ರಿಯಗಳಿಗೆ ಜ್ಞಾನಜನಕ ಸಾಧನಗಳಾದುದರಿಂದ ಇವುಗಳಿಗೆ ಮಾತ್ರಾಗಳೆಂದು ಹೆಸರು. ವೇದಗಳು ಪ್ರಕಟವಾಗುವುದು ಶಬ್ದರೂಪದಲ್ಲಿ. ಆದುದರಿಂದ ಜಗತ್ತಿನ ಸೃಷ್ಟಿಕರ್ತನಾದ ಭಗವಂತನಿಗೂ, ಜಗದ್ವಸ್ತುಗಳಿಗೂ ಇರುವ ಸಂಬಂಧವನ್ನು ತಿಳಿಸುವಲ್ಲಿ ಶಬ್ದಗುಣಕವಾದ ಆಕಾಶತತ್ತ್ವದ ಪಾತ್ರ ಹಿರಿಯದು. ವೇದಮಯನಾದ ಭಗವಂತ, ಜೀವರಲ್ಲಿ ಬಿಂಬನಾಗಿದ್ದು, ತಾನು ತಿಳಿದು ಜೀವರಿಗೆ ತಿಳಿಸುತ್ತಾನೆ. ಆದುದರಿಂದ ಸೃಷ್ಟಿಯಲ್ಲಿ ಬಂದ ಜೀವರಿಗೆ ಆಕಾಶತತ್ತ್ವದ ಪ್ರಯೋಜನ ಬಹಳ.

ತಾಮಸಾಹಂಕಾರದಿಂದ ಮೊದಲು ಉತ್ಪನ್ನವಾದ ಆಕಾಶತತ್ತ್ವದ ಅಂಶಗಳನ್ನು ಬೇರೆಯಾಗಿ ತೆಗೆದು ಎಷ್ಟು ಬೇಕೋ ಅಷ್ಟು ಬೇರೆ ನಾಲ್ಕು ಅಂಶಗಳನ್ನು ಬೆರೆಸಿ ವಿಕಾರಗೊಳಿಸುವುದರಿಂದ, ಸ್ಪರ್ಶಜ್ಞಾನವನ್ನುಂಟುಮಾಡುವ ವಾಯುತತ್ತ್ವವು ಹುಟ್ಟುವುದು. ಶಬ್ದಜ್ಞಾನವನ್ನು ಗ್ರಹಿಸುವವರು ದಿಗ್ದೇವತೆಗಳು; ಸ್ಪರ್ಶಜ್ಞಾನವನ್ನು ಗ್ರಹಿಸುವವರು ವಾಯುದೇವತೆಗಳಲ್ಲಿ ಪ್ರಮುಖರಾದ ಅಹಂಕಾರಿಕಪ್ರಾಣರು(ಇವರಿಗೆ ಮುಖ್ಯಪ್ರಾಣರ ಬಲ). ಇವರ ಕಾರ್ಯಕ್ಷೇತ್ರಗಳು ನರಮಂಡಲಗಳಲ್ಲಿ, ಅವರವರ ಸ್ಥಾನಗಳಲ್ಲಿ ಇರತಕ್ಕವುಗಳಾಗಿವೆ.

ಲಕ್ಷ್ಮೀಪತಿಯು ಬ್ರಹ್ಮವಾಯುಗಳ ಮುಖಾಂತರ ರುದ್ರೇಂದ್ರಾದಿಗಳಲ್ಲಿದ್ದು ತಿಳಿದು ತಿಳಿಸುತ್ತಾನೆ ಎಂಬುದನ್ನು ಸರ್ವತ್ರ ಅನ್ವಯಿಸಬೇಕು. ಇವರು ತಿಳಿದುದರಲ್ಲಿ ದೇಹಾಭಿಮಾನಿಯಾದ ಜೀವನು ಎಷ್ಟು ಗ್ರಹಿಸಬೇಕೋ ಅಷ್ಟನ್ನು ಅಹಂಕಾರತತ್ವದ ಮೂಲಕ ಅವನಿಗೆ ತಿಳಿಸುವ ಕ್ರಮವನ್ನು ಭಗವಂತ ಏರ್ಪಡಿಸಿದ್ದಾನೆ.

**ಪರಾನ್ವಯಾಚ್ಛಬ್ದವಾಂಶ್ಚ ಪ್ರಾಣ ಓಜಃ ಸಹೋ ಬಲಂ ।**
**ವಾಯೋರಪಿ ವಿಕುರ್ವಾಣಾತ್ಕಾಲಕರ್ಮಸ್ವಭಾವತಃ ॥**
**ಉದಪದ್ಯತ ತೇಜೋವೈ ರೂಪವತ್ ಸ್ಪರ್ಶ ಶಬ್ದವತ್** ॥ ೨೭ ॥

ಪರ ಅನ್ವಯಾತ್= ಆಕಾಶತತ್ವದ ಸಂಬಂಧವನ್ನು ರೂಢಿಸಿಕೊಂಡಿರುವುದರಿಂದ; ಶಬ್ದವಾನ್ ಚ= ಶಬ್ದಾಶ್ರಯವೂ ಆಗಿ; ಪ್ರಾಣಃ= ವಾಯುತತ್ವವು ಸರ್ವಚೇಷ್ಟಾಪ್ರದವಾದುದು; ಓಜಃ = ತನ್ನ ಕೆಳಗಿನ ಭೂತ ವಸ್ತುಗಳ ಸೃಷ್ಟಿ, ಸ್ಥಿತಿ, ಲಯ ಸಾಮರ್ಥ್ಯವನ್ನು ಹೊಂದಿರುವುದು; ಸಹಃ= ಜಯಿಸಲಶಕ್ಯವಾದುದು; ಬಲಂ= ಸ್ವಸಾಮರ್ಥ್ಯದಿಂದ ಪ್ರವರ್ತಿಸಬಲ್ಲುದು;

ಮುಂದೆ ಉತ್ಪತ್ತಿಯಾಗುವ ತೇಜ, ಅಪ, ಪೃಥ್ವೀತತ್ವಗಳ ದೃಷ್ಟಿಯಿಂದ ವಾಯುತತ್ವವು ಸ್ವತಂತ್ರವೆಂದು ಭಾವಿಸಬೇಕು, ಅಷ್ಟೆ

ವಿಕುರ್ವಾಣಾತ್= ಪಂಚೀಕರಣಕ್ರಮದಿಂದ; ವಾಯೋಃ ಅಪಿ= ಆ ವಾಯುತತ್ವದಿಂದಲೇ; ಕಾಲ ಕರ್ಮ ಸ್ವಭಾವತಃ= ಕಾಲ ಕರ್ಮ ಸ್ವಭಾವಗಳನ್ನು ಪ್ರಕಟಿಸುವ ನಿಮಿತ್ತದಿಂದ; ಸ್ಪರ್ಶಶಬ್ದವತ್= ಸ್ಪರ್ಶಗುಣ ಶಬ್ದಗುಣವಿಶಿಷ್ಟಗಳಾದ ವಾಯು ಆಕಾಶ ತತ್ವಗಳಂತೆ; ರೂಪವತ್= ರೂಪದರ್ಶನ ಗುಣವುಳ್ಳ; ತೇಜಃ= ತೇಜಸ್ತತ್ವವು; ಉದಪದ್ಯತ ವೈ = ಉಂಟಾಯಿತು ಎಂಬುದು ನಿಜ.

ಮಹತ್ತತ್ವದಿಂದ ಹಿಡಿದು ಪಂಚತನ್ಮಾತ್ರಗಳ ವರೆಗಿನ ಸೃಷ್ಟಿಯು ಜೀವರ ಸ್ವಭಾವಗಳು ಕಾಲಕರ್ಮವಶದಿಂದ ಪ್ರಕಟವಾಗಲೆಂಬ ಕಾರಣದಿಂದಲೇ ಆದವು. ತನ್ಮಾತ್ರಗಳ ಮತ್ತು ತದಭಿಮಾನಿ ದೇವತೆಗಳ ಶಕ್ತಿ ವಿಶೇಷಗಳು ನರಮಂಡಲದ ಕೇಂದ್ರಗಳಲ್ಲಿದ್ದು ಕಾರ್ಯರೂಪಕ್ಕೆ ಬರುವುವು. (Conveying nervous impulses from and to the brain, which finds its connection with the 'true' mind located in the ecntremost super–microscopic fibre of the spinal chord.)

**ತೇಜಸಸ್ತು ವಿಕುರ್ವಾಣಾದಾಸೀದಂಭೋ ರಸಾತ್ಮಕಂ ।**
**ರೂಪವತ್ಸ್ಪರ್ಶವಚ್ಚಾಂಭೋ ಘೋಷವಚ್ಚ ಪರಾನ್ವಯಾತ್ ॥ ೨೮ ॥**

ತೇಜಸಃ = ಅಗ್ನಿತತ್ವದ; ವಿಕುರ್ವಾಣಾತ್ ತು = ಪಂಚೀಕರಣದಿಂದ; ರಸಾತ್ಮಕಂ = ರಸಗುಣೋಪೇತವಾದ; ಅಂಭಃ = ಜಲತತ್ವವು; ಆಸೀತ್= ಉಂಟಾಯಿತು; ಪರಾನ್ವಯಾತ್= ಶಬ್ದಗುಣದಿಂದ ಆಕಾಶ, ಅದರಿಂದ ವಾಯು ಇತ್ಯಾದಿ ಪರಂಪರೆಯಿಂದ; ರೂಪವತ್, ಸ್ಪರ್ಶವತ್, ಘೋಷವತ್= ರೂಪ, ಸ್ಪರ್ಶ, ಶಬ್ದಗುಣಗಳಿಂದ ಬಂದಂತೆ; ಅಂಭಃ = ಆಪ ತತ್ವವು;(ರಸಗುಣದಿಂದ ಬಂದಿತು).

ಆಯಾ ತತ್ವಗಳಿಗೆ ಆಯಾ ತನ್ಮಾತ್ರಗಳು ಮೂಲವಾದರೂ ಅವು ಪಂಚೀಕರಣದಿಂದ ಉತ್ಪನ್ನವಾಗುವುದರಿಂದ ಆಕಾಶದಿಂದ, ವಾಯು, ವಾಯುವಿನಿಂದ ತೇಜ, ತೇಜದಿಂದ ಆಪ ಎಂಬ ಈ ಪರಂಪರೆಯನ್ನು ತಿಳಿಯಬೇಕು.

**ವಿಶೇಷಸ್ತು ವಿಕುರ್ವಾಣಾದಂಭಸೋಗಂಧವಾನಭೂತ್ ।**
**ಪರಾನ್ವಯಾದ್ರಸಸ್ಪರ್ಶರೂಪ ಶಬ್ದಗುಣಾನ್ವಿತಃ ॥ ೨೯ ॥**

ವಿಕುರ್ವಾಣಾತ್ ಅಂಭಸಃ = ಜಲತತ್ವಕ್ಕೆ ಇತರ ನಾಲ್ಕನ್ನು ಯುಕ್ತ ಪ್ರಮಾಣಗಳಲ್ಲಿ ಬೆರಸುವುದರಿಂದ (ಪಂಚೀಕರಣದಿಂದ); ವಿಶೇಷಃ ತು = ವಿಶಿಷ್ಟವಾದ; ಗಂಧವಾನ್= ಗಂಧಗುಣ ಪ್ರಧಾನದಿಂದ ಪೃಥ್ವೀ ತತ್ವವು; ಅಭೂತ್= ಉಂಟಾಯಿತು; ಪರಾನ್ವಯಾತ್= ಪರಂಪರೆಯ ಕ್ರಮದಿಂದ ಅದು; ರಸ, ಸ್ಪರ್ಶ, ರೂಪ, ಶಬ್ದಗುಣಾನ್ವಿತಃ ಅಭೂತ್= ರಸ, ರೂಪ, ಸ್ಪರ್ಶ, ಶಬ್ದಗುಣಗಳಿಂದಲೂ ಕೂಡಿರುವುದಾಯಿತು.

**ಪಂಚೀಕರಣದ ಕ್ರಮ :–**

| ತನ್ಮಾತ್ರ | ಶಬ್ಧ | ಸ್ಪರ್ಶ | ರೂಪ | ರಸ | ಗಂಧ | ಮಹಾಭೂತ |
|---|---|---|---|---|---|---|
| ಶಬ್ದ | (೧೦೦ + ೨೦) + | ೨೦ + | ೨೦ + | ೨೦ + | ೨೦ | = ಆಕಾಶ |
| ಸ್ಪರ್ಶ | (೧೦೦ + ೨೦) + | ೨೦ + | ೨೦ + | ೨೦ + | ೨೦ | = ವಾಯು |
| ರೂಪ | (೧೦೦ + ೨೦) + | ೨೦ + | ೨೦ + | ೨೦ + | ೨೦ | = ತೇಜ |
| ರಸ | (೧೦೦ + ೨೦) + | ೨೦ + | ೨೦ + | ೨೦ + | ೨೦ | = ಆಪ |
| ಗಂಧ | (೧೦೦ + ೨೦) + | ೨೦ + | ೨೦ + | ೨೦ + | ೨೦ | = ಪೃಥ್ವಿ |

ಶಬ್ದ ತನ್ಮಾತ್ರಕ್ಕೆ ಸ್ವಲ್ಪ ತಮೋಗುಣ ಬೆರೆಸುವುದರಿಂದ ವಾಯು ತನ್ಮಾತ್ರ; ಆದುದರಿಂದ ಶಬ್ದಗುಣಕ್ಕೂ ಸ್ಪರ್ಶಗುಣಕ್ಕೂ ಪರಂಪರಾಭಾವ. ಇದರಂತೆ ಮುಂದಿನವು. ಅದೇ ರೀತಿ ಭೂತ ವಾಯುವಿನಲ್ಲಿ ಭೂತಾಕಾಶದ ತತ್ವ ಬೆರೆತಿದೆ; ತೇಜ ಭೂತ ತತ್ವದಲ್ಲಿ ಆಕಾಶ, ವಾಯುಗಳು ಸೇರಿವೆ; ಜಲದಲ್ಲಿ ಆಕಾಶ, ವಾಯು ಮತ್ತು ತೇಜ ತತ್ವಗಳು ಅಡಗಿವೆ; ಪೃಥ್ವೀ ತತ್ವದಲ್ಲಿ ಮೇಲಿನ ನಾಲ್ಕೂ ಕೂಡಿಕೊಂಡಿವೆ. ಇದು ಪರಂಪರಾ ಭಾವ.

**ವೈಕಾರಿಕಾನ್ಮನೋ ಜಜ್ಞೇ ದೇವಾವೈಕಾರಿಕಾದಶ ।**
**ದಿಗ್ವಾತಾರ್ಕ ಪ್ರಚೇತೋಶ್ವಿವಹ್ನೀಂದ್ರೋಪೇಂದ್ರ ಮಿತ್ರಕಾಃ ॥ ೩೦ ॥**

ವೈಕಾರಿಕಾತ್= ಸತ್ವಪ್ರಧಾನವಾದ ವೈಕಾರಿಕ ಅಹಂಕಾರದಿಂದ; ಮನಃ= ಮನಸ್ಸೆಂಬ ಸ್ಥೂಲ ಅಂತಃಕರಣವು; ಜಜ್ಞೇ = ಹುಟ್ಟಿತು; ದಶ ವೈಕಾರಿಕಾದೇವಾಃ= ವೈಕಾರಿಕ ದೇಹವನ್ನು ಪಡೆದ ಹತ್ತುಮಂದಿ ದೇವತೆಗಳು; (ಜಜ್ಞಿರೇ = ಜನ್ಮ ತಾಳಿದರು; ದಿಕ್= ದಿಗ್ದೇವತೆ; ವಾತ= ವಾಯು; ಅರ್ಕ = ಸೂರ್ಯ; ಪ್ರಚೇತಃ = ವರುಣ; ಅಶ್ವಿ = ಅಶ್ವಿನಿಗಳು, ವಹ್ನಿ = ಅಗ್ನಿ, ಇಂದ್ರ; ಉಪೇಂದ್ರ = ವಿಷ್ಣು; ಮಿತ್ರ; ಕಃ= ದಕ್ಷಪ್ರಜಾಪತಿ ಇವರು ದಶದೇವತೆಗಳು.

ಪಾದಾಭಿಮಾನಿ ದೇವತೆಯಲ್ಲಿ ಅಂತರ್ಯಾಮಿಯಾಗಿ ಬಂದವನು ಉಪೇಂದ್ರ(ವಿಷ್ಣು). ದಶ ದೇವತೆಗಳಲ್ಲಿ ಐವರು ಜ್ಞಾನೇಂದ್ರಿಯಗಳಿಗೂ, ಐವರು ಕರ್ಮೇಂದ್ರಿಯಗಳಿಗೂ ಅಭಿಮಾನಿಗಳು.

**ತೈಜಸಾತ್ತು ವಿಕುರ್ವಾಣಾದಿಂದ್ರಿಯಾಣಿ ದಶಾಭವನ್ ।**
**ಜ್ಞಾನಶಕ್ತಿಃ ಕ್ರಿಯಾಶಕ್ತಿರ್ಬುದ್ಧಿಃ ಪ್ರಾಣಸ್ತು ತೈಜಸಃ ॥ ೩೧ ॥**

ವಿಕುರ್ವಾಣಾತ್= ಹೆಚ್ಚು ಸ್ಥೂಲಗೊಳಿಸಲ್ಪಟ; ತೈಜಸಾತ್= ತೈಜಸ ಅಹಂಕಾರ ತತ್ವದಿಂದ; ದಶ ಇಂದ್ರಿಯಾಣಿ= ಹತ್ತು ಸೂಕ್ಷ್ಮೇಂದ್ರಿಯ ತತ್ವಗಳು; ಅಭವನ್= ಉಂಟಾದವು; ತೈಜಸಃ ತು = ತೈಜಸಾಹಂಕಾರವನ್ನು ಧರಿಸಿಯೇ; ಜ್ಞಾನಶಕ್ತಿಃ= ಜ್ಞಾನಗ್ರಹಣ ಸಾಮರ್ಥ್ಯವೂ; ಕ್ರಿಯಾಶಕ್ತಿಃ = ಕ್ರಿಯಾ ಸಾಮರ್ಥ್ಯವೂ; ಬುದ್ಧಿಃ = ಬುದ್ಧಿ ತತ್ವವೂ; ಪ್ರಾಣಃ= ಪ್ರಾಣ ತತ್ವವೂ; ಅಭವನ್= ಉಂಟಾದವು.

ಬುದ್ಧಿ ತತ್ವವೆಂಬುದರಿಂದ ಜ್ಞಾನವನ್ನುಂಟುಮಾಡುವ ಉಮಾದೇವಿಯೆಂದೂ ಪ್ರಾಣತತ್ವವೆಂಬುದರಿಂದ ಅಹಂಕಾರಿಕ ಪ್ರಾಣನೆಂದೂ ತಿಳಿಯಬೇಕು. ಉಮಾದೇವಿಯ

ಬಲದಿಂದ ಜ್ಞಾನೇಂದ್ರಿಯಗಳೂ, ಅಹಂಕಾರಿಕ ಪ್ರಾಣನಿಂದ ಕರ್ಮೇಂದ್ರಿಯಗಳೂ ಕಾರ್ಯೋನ್ಮುಖವಾಗುವುವು.

**ಶ್ರೋತ್ರಂ ತ್ವಕ್ ಘ್ರಾಣದೃಗ್ಜಿಹ್ವಾ ವಾಗ್ದೋರ್ಮೇಢ್ರಾಂಘ್ರಿಪಾಯವಃ ।**
**ಯಯೇತೇ ಸಂಹತಾಭಾವಾ ಭೂತೇಂದ್ರಿಯ ಮನೋಗುಣಾಃ ।**
**ಯದಾಯತನ ನಿರ್ಮಾಣೇನಶೇಕುರ್ಬ್ರಹ್ಮವಿತ್ತಮ ॥ ೩೨ ॥**

ಬ್ರಹ್ಮವಿತ್ತಮ = ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ನಾರದಾ; ಶ್ರೋತ್ರಂ, ತ್ವಕ್, ಘ್ರಾಣ, ದೃಕ್, ಜಿಹ್ವಾ ಎಂಬ ಈ ಐದು ಜ್ಞಾನೇಂದ್ರಿಯಗಳು; ವಾಕ್, ದೋಃ, ಮೇಢ್ರ, ಅಂಘ್ರಿ, ಪಾಯವಃ = ಬಾಯಿ, ಬಾಹುಗಳು, ಗುಹ್ಯೇಂದ್ರಿಯ, ಪಾದ ಮತ್ತು ಗುದೇಂದ್ರಿಯವೆಂಬ ಐದು ಕರ್ಮೇಂದ್ರಿಯಗಳು; ಏತೇ = ಯಾವ ಈ; ಭೂತ = ಪಂಚತನ್ಮಾತ್ರಗಳು; ಇಂದ್ರಿಯ = ಇಂದ್ರಿಯಗಳು; ಮನಃ = ಮನಸ್ಸು; ಗುಣಾಃ = ಅಹಂಕಾರ, ಮಹತ್ತತ್ವ, ಸತ್ವ, ರಜ, ತಮ ಮುಂತಾದಗುಣ ವಿಶೇಷಗಳು; ಅಸಂಹತಾ ಭಾವಾಃ = ಪರಸ್ಪರ ಕೂಡಿಕೊಳ್ಳದ ಸ್ವಭಾವ ಉಳ್ಳವುಗಳಾದುದರಿಂದ; ಯತ್ ಆಯತನ ನಿರ್ಮಾಣೇ = ಸೃಷ್ಟಿಕರ್ತನ ಶರೀರವೆನಿಸುವ ಬ್ರಹ್ಮಾಂಡವನ್ನು ನಿರ್ಮಿಸುವ ಕಾರ್ಯದಲ್ಲಿ; ನ ಶೇಕುಃ = ಸಮರ್ಥವಾಗಲಿಲ್ಲ.

ಅಸಂಹತಾಃ ಎಂದರೆ ಪರಸ್ಪರ ಪಂಚೀಕರಣದಿಂದ ಕೂಡಿ, ರಾಸಾಯನಿಕ ಗುಣ ವಿಕಾರಗಳನ್ನು ಹೊಂದಿರದ ಎಂದು ಅರ್ಥ. "The crux of modern science is here which can never be understood by the modern, materialistic scientists. Even the deities incharge of the said primordial elements– (೨೧ Strings) by adding the five gross elements of the Brahmanda we get ೨೬ strings. Pancha Tanmatras and Pancha bhootas or ೧೦ indrias make ೧೦ strings; Only Pancha bhutas make five strings; could not create the Brahmanda inspite of their boasting. It was only when the Lord entered them with His mind, that the Brahmanda was produced and creation went on within by chemical Bangs, not one Big Bang. ಸಂಹತಿ ಎಂಬ ಪದ ಪರಮಾಣುಗಳ ತಾಕಲಾಟವನ್ನೂ ಋಣವಿದ್ಯುತ್ ವಿನಿಮಯವನ್ನೂ ಸೂಚಿಸುತ್ತದೆ.

"ಭೂಮಿಃ, ಅಪಃ, ಅನಲಃ, ವಾಯುಃ, ಮನಃ, ಬುದ್ಧಿಃ, ಅಹಂಕಾರಃ - ಇತೀಯಂ ಮೇ ಭಿನ್ನಾಪ್ರಕೃತಿರಷ್ಟಥಾ" = ೮ Strings broadly speaking.

**ತದಾಸಂಹೃತ್ಯಚಾನ್ಯೋನ್ಯಂ ಭಗವಚ್ಛಕ್ತಿ ಚೋದಿತಾಃ ।**
**ಸದಸತ್ವಮುಪಾದಾಯನೋಭಯಂ ಸಸೃಜುರ್ಹ್ಯದಃ ॥ ೩೩ ॥**

ತದಾ = ಜಡತತ್ವಗಳ ಅಭಿಮಾನಿ ದೇವತೆಗಳು ಭಗವಂತನನ್ನು ಸ್ತುತಿಸಿ ಶರಣಾಗತರಾದ ನಂತರ; ಭಗವಚ್ಛಕ್ತಿ ಚೋದಿತಾಃ = ಮುಖ್ಯ ಪ್ರಾಣಾಂತರ್ಗತ ಮಾಯಾರಮಣನಾದ ಭಗವಂತನ ಶಕ್ತಿ ಸಂಚಾರ ಬಲದಿಂದ ಪ್ರೇರಿತರಾಗಿ; ಅನ್ಯೋನ್ಯಂ ಸಂಹೃತ್ಯ = ಜಡತತ್ವಗಳನ್ನು ಒಂದರೊಡನೊಂದನ್ನು ಸಂಬಂಧಗೊಳಿಸಿ; ಸತ್ ಅಸತ್ವಂ ಉಪಾದಾಯ = ಭೂಮಿ (ಗಂಧತನ್ಮಾತ್ರ), ಅಪ (ರಸತನ್ಮಾತ್ರ) ತೇಜ (ರೂಪತನ್ಮಾತ್ರ)ಗಳೆಂಬ ಸತ್ ಅಥವ ಗೋಚರಕ್ಕೆ ಬರುವ ತತ್ವಗಳನ್ನೂ ಅಸತ್ ಅಥವ ಗೋಚರಕ್ಕೆಬಾರದ ವಾಯು (ಸ್ಪರ್ಶತನ್ಮಾತ್ರ) ಮತ್ತು ಆಕಾಶ (ಶಬ್ದತನ್ಮಾತ್ರ)ಗಳನ್ನೂ ಸಂಗ್ರಹಿಸಿಕೊಂಡು; ನಃ ಭಯಂ = ನಮಗೆ ಸಂಸಾರ ಭಯವನ್ನುಂಟುಮಾಡುವ; ಅದಃ = ಬ್ರಹ್ಮಾಂಡವನ್ನು; ಸಸೃಜುಃ = ಸೃಷ್ಟಿ ಮಾಡಿದರು. ತಾತ್ವಿಕರಲ್ಲಿದ್ದು ಭಗವಂತನೇ ಬ್ರಹ್ಮಾಂಡವನ್ನು ಸೃಷ್ಟಿಹಿದನು.

ಬ್ರಹ್ಮಾಂಡವೆಂಬ ಸುವರ್ಣ ಕಟಾಹವು ಸೂಕ್ಷ್ಮ ಪೃಥ್ವೀತತ್ವವೇ ಆದ ಅಪ್ಪಟ ಬಂಗಾರ ನಿರ್ಮಿತವಾದುದು. ಅದರಲ್ಲಿ ಸ್ವತ್ವಗುಣದಿಂದ ಹಿಡಿದು ಶಬ್ದ ತನ್ಮಾತ್ರದವರೆಗಿನ ಇಪ್ಪತ್ತೊಂದು ತತ್ವಗಳು ಸಮ್ಮಿಳಿತವಾಗಿವೆ. ಮನಸ್ಸು, ಬುದ್ಧಿಗಳನ್ನು ಅಹಂಕಾರ ತತ್ವದ ವಿಭಾಗಗಳೆಂದೆಣಿಸಿದಾಗ ೧೯ ತತ್ವಗಳ ಸಮ್ಮೇಳನವಾಗುವುದು. 'ತೈಜಸ' ನಾಮಕ ಪರಮಾತ್ಮ ಹತ್ತೊಂಭತ್ತು ಮುಖವುಳ್ಳವನು, ಎಂದರೆ ಮುಖ್ಯವಾಗಿ ೧೯ ಬಗೆಯ ಕಾರ್ಯಗಳನ್ನು ನಿರ್ವಹಿಸುವವನು.

**ವರ್ಷಪೂಗಸಹಸ್ರಾಂತೇ ತದಂಡಮುದಕೇಶಯಂ ।**
**ಕಾಲಕರ್ಮ ಸ್ವಭಾವಸ್ಥೋ ಜೀವೋ ಜೀವಮಜೀಜನತ್ ॥ ೩೪ ॥**

ವರ್ಷಪೂಗ ಸಹಸ್ರಾಂತೇ = ಒಂಭತ್ತನೆಯದಾದ ಜಲಾವರಣದಲ್ಲಿ ದೇವಮಾನದ ಒಂದು ಸಹಸ್ರ ವರ್ಷಗಳ ಕಾಲ ರಮಾದೇವಿಯರೊಡನೆ ಶಯನಿಸಿದ ನಂತರ; ಜೀವಃ = ಸರ್ವ ಪ್ರಾಣಾಧಾರನಾದ ಪರಮೇಶ್ವರನು; ಕಾಲಕರ್ಮಸ್ವಭಾವಸ್ಥಃ = ಕಾಲ, ಕರ್ಮ, ಮತ್ತು ಜೀವರ ಪ್ರಕೃತಿಯಲ್ಲಿ ಪ್ರೇರಕಶಕ್ತಿಯಿಂದ ನಿಂತು; ಉದಕೇಶಯಂ = ಬಾಹ್ಯೋದಕವಲ್ಲಿ ನಿಂದಿರುವ; ಅಜೀವಂ = ಜಡವಾದ; ತತ್ ಅಂಡಂ = ಆ ಬ್ರಹ್ಮಾಂಡವನ್ನು; ಅಜೀ ಜನತ್ = ನಿರ್ಮಿಸಿದನು. (ತದಂಡಂ = ಆ

ಬ್ರಹ್ಮಾಂಡವನ್ನೂ; ಜೀವಂ = ಸಕಲ ಜೀವರಲ್ಲಿ ಪ್ರಮುಖನಾದ ಚತುರ್ಮುಖನನ್ನೂ; ಅಜೀಜನತ್= ಸೃಷ್ಟಿಸಿದನು.)

ನವಾವರಣಗಳ ಸೃಷ್ಟಿಯಾದ ನಂತರ, ಅದರಲ್ಲಿ ಸಾವಿರ ವರ್ಷಗಳ ಕಾಲ ಶಯನಿಸಿ, ನಂತರ ಬಾಹ್ಯೋದಕದಲ್ಲಿ ಕದಡಿದ್ದ ಭೂರೇಣುಗಳನ್ನು ಕೊಡಿಸಿ ದಶಮಾವರಣವೆನಿಸುವ ಬ್ರಹ್ಮಾಂಡವನ್ನು ಸೃಷ್ಟಿಸಿ, ಮುಂದೆ ಸೃಷ್ಟಿಯಲ್ಲಿ ತರಬೇಕಾದ ವಸ್ತುಗಳನ್ನೂ, ಜೀವರನ್ನೂ ತನ್ನುದರಲ್ಲಿ ಸೇರಿಸಿಕೊಂಡು ಆ ಪರಮಾತ್ಮ ಬ್ರಹ್ಮಾಂಡದೊಳಗೆ ಪ್ರವೇಶಿಸಿ, ಅಂಡೋಕದಲ್ಲಿ ಮತ್ತೆ ಸಾವಿರ ವರ್ಷಕಾಲ ಶಯನಿಸಿ, ನಂತರ ತನ್ನ ನಾಭೀಕಮಲದಿಂದ ಚತುರ್ಮುಖನನ್ನು ಪಡೆದನು. ಬ್ರಹ್ಮಾಂಡದೊಳಗಿನ ಸೃಷ್ಟಿಯನ್ನು ಪ್ರಾರಂಭಿಸುವಾಗ, ಚತುರ್ಮುಖನಿಗೆ ವಿರಾಟರೂಪವನ್ನು ಕೊಟ್ಟು ಅದರಲ್ಲಿ ತನ್ನ ವಿರಾಟರೂಪವನ್ನಿಟ್ಟು ಲೋಕಗಳ ಸೃಷ್ಟಿಯನ್ನು ಮಾಡಿದನು.

**ಸಏಷಪುರುಷಸ್ತಸ್ಮಾದಂಡಂ ನಿರ್ಭಿದ್ಯ ನಿರ್ಗತಃ ।**
**ಸಹಸ್ರೋರ್ವಂಘ್ರಿ ಬಾಹ್ವಕ್ಷಿಃ ಸಹಸ್ರಾನನ ಶೀರ್ಷವಾನ್ ॥ ೩೫ ॥**

ಸಃ ಏಷಃ ಪುರುಷಃ = ಬ್ರಹ್ಮಾಂಡವನ್ನು ಪ್ರವೇಶಿಸಿ ಪದ್ಮನಾಭನಾಗಿದ್ದ ಈ ಪುರುಷನು; ತಸ್ಮಾತ್= ತನ್ನ ಆ ರೂಪದಿಂದ; ಅಂಡಂ ನಿರ್ಭಿದ್ಯ = ಬ್ರಹ್ಮಾಂಡ ಕಟಾಹದಿಂದ ಒಳಗಿನ ಸೃಷ್ಟಿಗೆ ಬೇಕಾದ ದ್ರವ್ಯಗಳನ್ನು ಹೊರತೆಗೆದು; ಸಹಸ್ರ = ಅ ಸಂಖ್ಯಾತಗಳಾದ; ಊರು = ತೊಡೆಗಳು; ಅಂಘ್ರಿ = ಪಾದಗಳು; ಬಾಹೂ = ತೋಳುಗಳು; ಅಕ್ಷಿಃ = ಕಣ್ಣು; ಸಹಸ್ರ = ಅನೇಕಾನೇಕ; ಆನನ = ಮುಖಗಳು; ಶೀರ್ಷವಾನ್= ಮತ್ತು ತಲೆಗಳು ಉಳ್ಳವನಾಗಿ; ನಿರ್ಗತಃ = ರೂಪವನ್ನು ತಾಳಿದನು.

ಇದು ಪುರುಷ ಸೂಕ್ತವು ವರ್ಣಿಸುವ ವಿರಾಡ್ರೂಪ, ಬ್ರಹ್ಮಾಂಡದಲ್ಲಿ ತುಂಬಿರುವ ಅನಂತ ರೂಪಗಳು ಕೂಡಿ ಆಗಿರುವ ಏಕೈಕ ರೂಪ, ಆನಂದಮಯ – ವರ್ಣನಾತೀತ, ಊಹಾತೀತ; ಅವರವರ ಯೋಗ್ಯತಾನುಸಾರ ಮಾತ್ರ ಭಾವಿಸಲು ಶಕ್ಯವಾದುದು. ಆ ಸಹಸ್ರಾರು ರೂಪಗಳಿಗೆ ಅನುಗುಣವಾದ ಅವಯವಗಳಲ್ಲದೆ ಕೆಲವು ರೂಪಗಳಿಗೆ ಹೆಚ್ಚು ಹೆಚ್ಚು ಅವಯಗಳು ಉಂಟು. ಇವು ಎರಡು ಕೂಡಿದರೆ ಮತ್ತೊಂದು ರೂಪ; ಮೂರು ಕೂಡಿದರೆ ಇನ್ನೊಂದು; ಹೀಗೆ ವ್ಯೂಹರೂಪಗಳು ಮತ್ತು ಕೂಟರೂಪಗಳು. ಅದಕ್ಕಿಂತಲೂ ಆಶ್ಚರ್ಯಕರವೆಂದರೆ, ಒಂದೊಂದರೊಳಗೂ ಇತರ ಎಲ್ಲಾ ರೂಪಗಳೂ ಕೂಡಿಕೊಂಡಿರುವುವು. ಈ ರೂಪಗಳು ನಿತ್ಯ; ಸೃಷ್ಟಿಸ್ಥಿತಿ ಲಯಗಳಿಗೆ ಕಾರಣವಾದುವು.

ಬ್ರಹ್ಮಾಂಡ ಕಟಾಹದಿಂದಲೇ ವಿಶ್ವದ ಸೃಷ್ಟಿಗೆ ಬೇಕಾದ ವಸ್ತುಗಳು ಬಂದುವು ಎಂಬುದನ್ನು ವಿಜ್ಞಾನಿಗಳು ಗಮನಿಸಬೇಕು.

**ಯಸ್ಯೇಹಾವಯವೈರ್ಲೋಕಾನ್ಕಲ್ಪಯಂತಿ ಮನೀಷಿಣಃ ।**
**ಊರ್ವಾದಿಭಿರಧಸ್ಸಪ್ತ ಸಪ್ತೋರ್ಧ್ವಂ ಜಘನಾದಿಭಿಃ ॥ ೩೬ ॥**

ಯಸ್ಯ = ಯಾವ ಈ ಮಹಾಪುರುಷನ; ಅವಯವೈಃ = ಬೇರೆ ಬೇರೆ ಅವಯವಗಳಿಂದ; ಎಂದರೆ; ಊರು ಆದಿಭಿಃ = ತೊಡೆಯಿಂದ ಪಾದಕಮಲದವರೆಗಿನ ಭಾಗಗಳಿಂದ; ಸಪ್ತ ಅಧಃ ಲೋಕಾನ್= ಕೆಳಗಿನ ಏಳುಲೋಕಗಳನ್ನೂ; ಜಘನಾದಿ ಭಿಃ = ಸೊಂಟದಿಂದ ಶಿರಸ್ಸಿನವರೆಗಿನ ಭಾಗಗಳಿಂದ; ಸಪ್ತ ಊರ್ಧ್ವಂ = ಮೇಲಿನ ಏಳು ಲೋಕಗಳನ್ನೂ; ಮನೀಷಿಣಃ = ತಿಳಿದವರು (ಬ್ರಹ್ಮಜ್ಞಾನಿಗಳು); ಕಲ್ಪಯಂತಿ = ಸೃಷ್ಟಿಯಾದುವೆಂದು ಭಾವಿಸುತ್ತಾರೆ.

ಐವತ್ತು ಕೋಟಿ ಯೋಜನ ವಿಸ್ತಾರವಾದ ಬ್ರಹ್ಮಾಂಡವನ್ನು ತುಂಬಿಕೊಂಡಿದೆ, ವಿಶ್ವರೂಪ. ಇಲ್ಲಿ ಮುಖ್ಯವಾಗಿ ಹದಿನಾಲ್ಕು ಲೋಕಗಳ ವಿಚಾರವನ್ನು ತಿಳಿಸಿದ್ದಾರೆ. ವಿರಾಟ್ಪುರುಷನ ತೊಡೆಯ ಅಂಶದಿಂದ ಪ್ರಚೋದಿತವಾಗಿ ಅತಲ ಲೋಕವು ಸೃಷ್ಟಿಯಾಗಿ ಅಲ್ಲಿ ಸ್ಥಿತವಾದ ಊರ್ವಂಶದಿಂದ ಸುರಕ್ಷಿತವಾಗದೆ; ಇದರಂತೆ ತೊಡೆಯ ಕೆಳಭಾಗ, ಮೊಣಕಾಲು, ಕಣಕಾಲು, ಹಿಮ್ಮಡಿ, ಪಾದದ ಮೇಲ್ಭಾಗ ಮತ್ತು ಪಾದದ ಕೆಳಭಾಗದ ಅಂಶಗಳ ದೆಸೆಯಿಂದ ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಳ ಲೋಕಗಳ ಸೃಷ್ಟಿ ಸ್ಥಿತಿಗಳೆಂದು ಭಾವಿಸುಬೇಕು. ಸೊಂಟದ ದೆಸೆಯಿಂದ ಭೂಲೋಕ, ನಾಭಿ, ಎದೆ, ಕಂಠ, ಬಾಯಿ, ಹುಬ್ಬಿನ ಮಧ್ಯದೇಶ ಮತ್ತು ಶಿರಸ್ಸಿನ ದೆಸೆಯಿಂದ ಅಂತರಿಕ್ಷ, ಸ್ವರ್ಗ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕಗಳ ಸೃಷ್ಟಿಸ್ಥಿತಿಗಳು. ಹೀಗೆ ತ್ರಿಗುಣಗಳ ವಿವಿಧ ಮಿಶ್ರಣಗಳಿಂದಲೇ ಆಗಿರುವ ಲೋಕಗಳ ಸೃಷ್ಟಿ ಸ್ಥಿತಿಗಳಿಗೆ ಜಡಪ್ರಕೃತಿಯು ಅಸ್ವತಂತ್ರವಾದ ಉಪಾದಾನ ಕಾರಣ; ಭಗವಂತನೇ ನಿಮಿತ್ತ ಕಾರಣ; ಸ್ವತಂತ್ರ ಮುಖ್ಯ ಕಾರಣ.

ಲೋಕಗಳ ಉತ್ಪತ್ತಿಯು ವಿರಾಟ್ಪುರುಷನ ಅವಯವಗಳ ದೆಸೆಯಿಂದಲೇ ಹೊರತು ಅವಯವಗಳಿಂದಲೇ ಅಲ್ಲ. ಲೋಕಗಳಲ್ಲಿಯೂ, ಆಯಾ ಲೋಕಗಳಿಗೆ ಸಂಬಂಧಪಟ್ಟ ವಸ್ತುಗಳಲ್ಲಿಯೂ ಭಗವಂತನ ಅವಯವ ವಿಶೇಷಗಳ ಸನ್ನಿಧಾನ ಮತ್ತು ಪ್ರೇರಣೆಗಳೆಂದು ತಿಳಿಯಬೇಕು. ಅದರಿಂದ ಅವುಗಳ ಸ್ಥಿತಿಗತಿಗಳು.

**ಪುರುಷಸ್ಯ ಮುಖಂ ಬ್ರಹ್ಮ ಕ್ಷತ್ರಮೇತಸ್ಯಬಾಹವಃ ।**
**ಊರ್ವೋರ್ವೈಶ್ಯೋ ಭಗವತಃ ಪದ್ಭ್ಯಾಂ ಶೂದ್ರೋ**
**ವ್ಯಜಾಯತ ॥ ೩೭ ॥**

ಪುರಷಸ್ಯ = ಈ ವಿರಾಟ್ಪುರುಷನ; ಮುಖಂ (ಮುಖಾತ್) = ವದನದ ದೆಸೆಯಿಂದ; ಬ್ರಹ್ಮ = ಬ್ರಾಹ್ಮಣಜಾತಿಯು; ಏತಸ್ಯ = ಇವನ; ಬಾಹವಃ (ಬಾಹುಭ್ಯಃ) = ಬಾಹುಗಳ ದೆಸೆಯಿಂದ; ಕ್ಷತ್ರಂ = ಕ್ಷತ್ರಿಯ ಜಾತಿಯು; ಭಗವತಃ = ಈ ಭಗವಂತನ; ಊರ್ವೋಃ = ತೊಡೆಗಳ ದೆಸೆಯಿಂದ; ವೈಶ್ಯಃ = ವೈಶ್ಯಜಾತಿಯು; ಪದ್ಭ್ಯಾಂ = ಪಾದಗಳ ದೆಸೆಯಿಂದ; ಶೂದ್ರಃ = ಶೂದ್ರ ಜಾತಿಯು; ವ್ಯಜಾಯತ = ಉತ್ಪನ್ನವಾಯಿತು.

ಇಲ್ಲಿ ಜಾತಿಗಳ ಸೃಷ್ಟಿಯನ್ನು ಹೇಳಿರುವರೇ ಹೊರತು, ಆಯಾ ಜಾತಿಗಳಲ್ಲಿ ಕರ್ಮವಶದಿಂದ ಹುಟ್ಟುವ ಜೀವರ ಜಾತಿಗಳನ್ನು ನಿರ್ದೇಶಿಸಿ ಹೇಳಿರುವುದಿಲ್ಲ. ಒಬ್ಬನೇ ವ್ಯಕ್ತಿ, ಕರ್ಮಾನುಸಾರ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಜಾತಿಗಳಲ್ಲಿ ಹುಟ್ಟಿ ಸಾಧನೆಯನ್ನು ಮಾಡಿಕೊಳ್ಳುವನು. ಬ್ರಾಹ್ಮಣಜಾತಿ ವೇದಾಧ್ಯಯನಾದಿಗಳಿಗೆ ಮೀಸಲಾದುದರಿಂದ ಭಗವಂತನ ಬಾಯಿಯ ದೆಸೆಯಿಂದ ಹುಟ್ಟಿತು. ಬಾಹುಬಲದಿಂದ ಕ್ಷತ್ರಿಯರು ಯುದ್ಧ ಮಾಡಬೇಕಾದುದರಿಂದ ಅವರಲ್ಲಿ ಭಗವಂತನ ಬಾಹುಬಲ; ಸಮಾಜದ ಸುಸ್ಥಿತಿಗೆ ಬೇಕಾದ ಐಶ್ವರ್ಯವನ್ನು ಗಳಿಸಿ ಹಂಚುವುದು ವೈಶ್ಯರ ಕಾರ್ಯವಾದುದರಿಂದ ಅವರಲ್ಲಿ ಭಗವಂತನ ಸುಸ್ಥಿರವಾದ ತೊಡೆಯಬಲ; ಸೇವಾಕಾರ್ಯದಿಂದ ಸಮಾಜದ ಚಟುವಟಿಕೆಗಳಲ್ಲಿ ಭಾಗವಹಿಸಬೇಕಾದುದರಿಂದ ಭಗವಂತನ ಚಲನಾತ್ಮಕ ಪಾದಗಳ ಬಲ. ಹೀಗೆ ತಿಳಿಯಬೇಕು. ಆ ಪುರುಷನೇ ಬ್ರಾಹ್ಮಣರಲ್ಲಿ ವಾಸುದೇವವನಾಗಿ, ಕ್ಷತ್ರಿಯರಲ್ಲಿ ಸಂಕರ್ಷಣನಾಗಿ, ವೈಶ್ಯರಲ್ಲಿ ಪ್ರದ್ಯುಮ್ನನಾಗಿ, ಶೂದ್ರರಲ್ಲಿ ಅನಿರುದ್ಧನಾಗಿ, ಆವರವರ ಕೆಲಸಗಳನ್ನು ತಾನೇ ಮಾಡಿ ಅವರು ಮಾಡಿದಂತೆ ಎನಿಸಿ, ಅವರಿಗೆ ಫಲಕೊಡುತ್ತಾನೆ. ಇದು ವಿಶ್ವ ಸಮಾಜ ವ್ಯವಸ್ಥೆಯೇ ಹೊರತು ಮಾನವರಿಂದ ಕಲ್ಪಿತವಾದ ಮೇಲುಕೀಳಿನ ಅವ್ಯವಸ್ಥೆಯ ತಂತ್ರವಲ್ಲ. ಪಾಶ್ಚಾತ್ಯರ 'ವಿಕಾಸ ವಾದ'ದಿಂದ ಜನರಲ್ಲಿ ತಪ್ಪು ಕಲ್ಪನೆಯು ಉಂಟಾಗಿ, ಅದರಿಂದ ಅನಾಹುತಗಳು ಸಂಭವಿಸುತ್ತಿರುವುದು ಕಲಿಯುಗದ ಪ್ರಭಾವವೇ ಹೊರತು ಭಗವಂತನಿಂದ ನಿರ್ಮಿತವಾದ ಜಾತಿ ಪದ್ಧತಿಯ ದೋಷವಲ್ಲ.

**ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವರ್ಲೋಕೋಽಸ್ಯ ನಾಭಿತಃ ।**
**ಹೃದಾ ಸ್ವರ್ಲೋಕ ಉರಸಾ ಮಹರ್ಲೋಕೋಮಹಾತ್ಮನಃ ॥ ೩೮ ॥**

**ಗ್ರೀವಾಯಾಂ ಜನಲೋಕಶ್ಚ ತಪೋಲೋಕಶ್ಚ ನೇತ್ರಯೋಃ ।**
**ಮೂರ್ಧಭಿಸ್ಸತ್ಯ ಲೋಕಸ್ತು ಬ್ರಹ್ಮಲೋಕಃ ಸನಾತನಃ ॥ ೩೯ ॥**

ಮಹಾತ್ಮನಃ = ವಿರಾಟ್ಪುರುಷನ; ಪದ್ಭ್ಯಾಂ = ಪಾದಗಳ ದೆಸೆಯಿಂದ; ಭೂಃ ಲೋಕಃ = ಭೂಲೋಕವು; ಕಲ್ಪಿತಃ = ಸೃಷ್ಟವಾಯಿತು; ಅಸ್ಯ = ಇವನ; ನಾಭಿತಃ = ನಾಭಿಯ ದೆಸೆಯಿಂದ; ಭುವರ್ಲೋಕಃ = ಅಂತರಿಕ್ಷ ಲೋಕವು; ಹೃದಾ =

ಮಧ್ಯದೇಹದ ಮಧ್ಯಭಾಗದಿಂದ; ಸ್ವರ್ಲೋಕಃ = ಸ್ವರ್ಗಲೋಕವು; ಉರಸಾ = ಎದೆಯ ಮೇಲ್ಭಾಗದಿಂದ; ಮಹರ್ಲೋಕಃ = ಮಹರ್ಲೋಕವು; ಗ್ರೀವಾಯಾಂ = ವದನದಿಂದ ನುಡಿಸುವ ಕಂಠಪ್ರದೇಶದ ದೆಸೆಯಿಂದ; ಜನಲೋಕಃ ಚ = ಜನಲೋಕವೂ; ಚ = ಮತ್ತು; ನೇತ್ರಯೋಃ = ಹುಬ್ಬುಗಳಿಂದ ಕೂಡಿದ ನೇತ್ರಗಳ ಪ್ರದೇಶದ ದೆಸೆಯಿಂದ; ತಪೋಲೋಕಃ = ತಪೋಲೋಕವೂ; ಮೂರ್ಧಭಿಃ = ತಲೆಯೊಳಗಿನ ಮೆದುಳಿನ ಅಂಶಗಳ ದೆಸೆಯಿಂದ; ಸನಾತನಃ(ಸನಾದನಃ) = ವೇದಗಳಿಗೆ ಆಶ್ರಯವಾದ; ಬ್ರಹ್ಮಲೋಕಃ = ಬ್ರಹ್ಮನ ಲೋಕವೆಂಬ; ಸತ್ಯಲೋಕಃ = ಸತ್ಯಲೋಕವು; ಕಲ್ಪಿತಃ = ಉಂಟಾಯಿತು.

ಪಾತಾಳಾದಿಗಳೂ ಭೂಲೋಕದಲ್ಲಿ ಅಡಕಪದ್ಭ್ಯಾಂ

**ತತ್ಕಟ್ಯಾಮತಲಂಕ್ಲಪ್ತಮೂರುಭ್ಯಾಂ ವಿತಲಂ ವಿಭೋಃ ।**
**ಜಾನುಭ್ಯಾಂ ಸುತಲಂಶುದ್ಧಂ ಜಂಘಾಭ್ಯಾಂತು ತಲಾತಲಂ ॥ ೪೦ ॥**

**ಮಹಾತಲಂತು ಗುಲ್ಫಾಭ್ಯಾಂ ಪ್ರಪಾದಾಭ್ಯಾಂ ರಸಾತಲಂ ।**
**ಪಾತಾಲಂ ಪಾದ ತಲತ ಇತಿಲೋಕಮಯಃ ಪುಮಾನ್ ॥ ೪೧ ॥**

ತತ್ = ಅವನ; ಕಟ್ಯಾಂ = ತೊಡೆಯ ಮೇಲ್ಭಾಗದ ದೆಸೆಯಿಂದ; ಅತಲಂ = ಅತಲ ಲೋಕವು; ಕ್ಲಪ್ತಂ = ನಿರ್ದಿಷ್ಟವಾಗಿದೆ; ವಿಭೋಃ = ಸರ್ವಸಮರ್ಥನಾದವನ; ಊರುಭ್ಯಾಂ = ತೊಡೆಗಳ ದೆಸೆಯಿಂದ; ವಿತಲಂ = ವಿತಲ ಲೋಕವು; ಜಾನುಭ್ಯಾಂ = ಮೊಣಕಾಲುಗಳ (ಗಂಟುಗಳ) ದೆಸೆಯಿಂದ; ಶುದ್ಧಂ = ಸುಭದ್ರವಾದ; ಸುತಲಂ = ಸುತಲ ಲೋಕವು; ಜಂಘಾಭ್ಯಾಂ ತು = ಮೊಣಕಾಲಿನಿಂದ ಹಿಮ್ಮಡಿಯವರೆಗಿನ ಕಣಕಾಲುಗಳ ದೆಸೆಯಿಂದ; ತಲಾತಲಂ = ತಲಾತಲ ಲೋಕವು; ಗುಲ್ಫಾಭ್ಯಾಂ = ಹಿಮ್ಮಡಿಗಳ ಗಂಟುಗಳ ದೆಸೆಯಿಂದ; ಮಹಾತಲ ಲೋಕವು; ಪ್ರಪಾದಾಭ್ಯಾಂ = ಮುಂಗಾಲುಗಳ ದೆಸೆಯಿಂದ; ರಸಾತಲಂ = ರಸಾತಲ ಲೋಕವೂ; ಪಾದತಲತಃ = ಪಾದಗಳ ತಳಭಾಗಗಳಿಂದ; ಪಾತಾಲಂ = ಪಾತಾಳ ಲೋಕವೂ; ಕ್ಲಪ್ತಂ = ನಿರ್ದಿಷ್ಟವಾಗಿದೆ; ಇತಿ = ಈ ಪ್ರಕಾರವಾಗಿ; ಪುಮಾನ್ = ವಿರಾಟ್ಪುರುಷನು; ಲೋಕಮಯಃ = ಹದಿನಾಲ್ಕು ಲೋಕಗಳಲ್ಲಿಯೂ ತುಂಬಿಕೊಂಡಿದ್ದಾನೆ.

ನಿರ್ಮಿತಗಳಾದ ಲೋಕಗಳ ಸ್ಥಿತಿಗತಿಗಳನ್ನೂ, ಅವುಗಳಿಗೆ ಮೂಲಕಾರಣನಾದ ಮಹಾಪುರುಷನ ವ್ಯಾಪ್ತವಾದ ರೂಪವನ್ನೂ ಮನಸ್ಸಿಗೆ ತಂದುಕೊಳ್ಳಬೇಕು.

**ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವರ್ಲೋಕಸ್ತುನಾಭಿತಃ ।**
**ಸ್ವರ್ಲೋಕಃ ಕಲ್ಪಿತೋಮೂರ್ಧ್ನಿ ಇತಿವಾ ಲೋಕ ಕಲ್ಪನಾ ॥ ೪೨ ॥**

ಭೂರ್ಲೋಕಃ = ಸಾಧನ ಭೂಮಿಯಾದ ಭೂಲೋಕವು; ಪದ್ಭ್ಯಾಂ = ಸೊಂಟದ ಮತ್ತು ಅದರ ಕೆಳಭಾಗಗಳ ಅಂಶಗಳ ದೆಸೆಯಿಂದ; ಕಲ್ಪಿತಃ = ಉಂಟಾಯಿತು; ಭುವರ್ಲೋಕಃ ತು = ಅಂತರಿಕ್ಷ ಲೋಕವು; ನಾಭಿತಃ = ಹೊಕ್ಕುಳಿನ ದೆಸೆಯಿಂದ; ಕಲ್ಪಿತಃ = ಉಂಟಾಯಿತು; ಸ್ವರ್ಲೋಕಃ = ಸ್ವರ್ಗಲೋಕವು; ಮೂರ್ಧ್ನಿ = ಹೊಕ್ಕುಳಿನ ಮೇಲ್ಭಾಗಗಳ ದೆಸೆಯಿಂದ; ಕಲ್ಪಿತಃ = ಸೃಷ್ಟವಾಯಿತು; ಇತಿ ವಾ = ಹೀಗೆಂತಲೂ; ಲೋಕ ಕಲ್ಪನಾ = ಲೋಕಗಳ ಸ್ಥಿತಿಗತಿಗಳ ಚಿಂತನೆಯನ್ನು ಮಾಡತಕ್ಕದ್ದು.

ಹದಿನಾಲ್ಕು ಲೋಕಗಳನ್ನು ಮೂರು ವಿಭಾಗ ಮಾಡಿ ಚಿಂತಿಸುವ ಕ್ರಮವಿರುವುದರಿಂದ ಈ ರೀತಿಯ ಕಲ್ಪನೆಯೂ ಅಗತ್ಯ. ಇದು ವ್ಯಾಹೃತಿ ಮಂತ್ರವಾದ "ಭೂಃ ಭುವಃ ಸುವಃ" ಎಂಬುದಕ್ಕೆ ಅನುಗುಣವಾದುದು. ಭೂಲೋಕವು ಗ್ರಾಮ್ಯಸುಖಗಳಿಗೆ ಹೆಚ್ಚಾಗಿ ಆಶ್ರಯವಾಗಿರುವುದರಿಂದ ಅತಲದಿಂದ ಪಾತಾಳದವರೆಗಿನ ಏಳು ಲೋಕಗಳೂ ಭೂಲೋಕದೊಡನೆ ಕೂಡಿಕೊಂಡ ಹಾಗಾಯಿತು. ಸ್ವರ್ಗಲೋಕದಿಂದ ಸತ್ಯಲೋಕದವರೆಗಿನ ಆರು ಲೋಕಗಳೂ ಗಾಯತ್ರಿಮಂತ್ರಕ್ಕೆ ಮುಖ್ಯಾಶ್ರಯನಾದ ಸೂರ್ಯನಾರಾಯಣನಿರುವ ಮತ್ತು ಭೂಲೋಕದ ಸಜ್ಜನರ ಮನಸ್ಸನ್ನು ಊರ್ಧ್ವಲೋಕಗಳ ಕಡೆಗೆ ಸೆಳೆಯುವ ಅಂತರಿಕ್ಷಲೋಕವೂ ನಾಭಿ ಮತ್ತು ಶಿರಸ್ಸಿನವರೆಗಿನ ಅವಯವಾಂಶಗಳ ದೆಸೆಯಿಂದ ಉತ್ಪನ್ನವೆಂದ ಹಾಗಾಯಿತು. ಅಂತರಿಕ್ಷಲೋಕವು ಊರ್ಧ್ವಲೋಕ ಅಧೋಲೋಕಗಳ ಸಂಧಿಸ್ಥಾನ. ಹೀಗೆ 'ತ್ರಿಲೋಕ' ಕಲ್ಪನೆ. ವಿರಾಟ್ಪುರುಷನು ಉತ್ತಮಾಂಗಗಳ ಅಂಶಗಳ ದೆಸೆಯಿಂದ ಸತ್ವಗುಣ ಪ್ರಚುರ ಕಾರ್ಯಗಳನ್ನೂ, ಮಧ್ಯಗತವಾದ ನಾಭಿಪ್ರದೇಶದಿಂದ ರಜೋಗುಣ ಪ್ರಚುರ ಕಾರ್ಯಗಳನ್ನೂ ಕೆಳಗಿನಂಗಗಳ ದೆಸೆಯಿಂದ ತಮೋಗುಣಪ್ರಚುರ ಕಾರ್ಯಗಳನ್ನೂ ನಡೆಸುತ್ತಾನೆ. ಭೂಲೋಕದಲ್ಲಿ ಬಂದ ಸಾತ್ವಿಕ ಜೀವರ ಸಾಧನೆಯು ಅಂತರಿಕ್ಷ ಮಾರ್ಗದಿಂದ ಸ್ವರ್ಗಾದಿಗಳ ಕಡೆಗೆ ಏರುತ್ತದೆ. ಅಧಮ ಜೀವರ ಸಾಧನೆಯು ಕೆಳಕೆಳಗೆ ತಳ್ಳುತ್ತದೆ.

ಐದನೆಯ ಅಧ್ಯಾಯ ಮುಗಿಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥

---

# ದ್ವಿತೀಯಸ್ಕಂಧ— ಆರನೆಯ ಅಧ್ಯಾಯ ಪ್ರಾರಂಭ

**ಬ್ರಹ್ಮೋವಾಚ:—** ಬ್ರಹ್ಮದೇವರು ಹೇಳಿದರು.

**ಸೂಚನೆ:—** ಅಧ್ಯಾತ್ಮ, ಅಧಿದೈವ, ಅಧಿಭೂತರೂಪ ಸಾಮಗ್ರಿಗಳ ಉತ್ಪತ್ತಿಯು ವಿರಾಟ್ಪುರುಷನ ವಿವಿಧ ಅವಯವಗಳಿಂದ ಆಯಿತೆಂದೂ, ಸುರಕ್ಷಿತವಾಗಿವೆಯೆಂದೂ ಹೇಳಿ, ಮೂಲಕಾರಣನಾದ ಆ ಪುರುಷನು ಜಗದ್ಭಿನ್ನನೆಂದೂ, ಸರ್ವೋತ್ತಮನೆಂದೂ ಈ ಅಧ್ಯಾಯದಲ್ಲಿ ತಿಳಿಸುತ್ತಾರೆ.

**ವಾಚೋ ವಹ್ನೇರ್ಮುಖಂಕ್ಷೇತ್ರಂ ಛಂದಸಾಂ ಸಪ್ತಧಾತವಃ ।**
**ಹವ್ಯಕವ್ಯಾಮೃತಾನ್ನಾನಾಂ ಜಿಹ್ವಾಸರ್ವರಸಸ್ಯ ಚ** ॥ ೧ ॥

ವಾಚಃ = ಆಡುವ ಮಾತುಗಳು; ವಹ್ನೇಃ = ಅಗ್ನಿದೇವನ ಪ್ರೇರಣೆಗೆ ಒಳಪಟ್ಟದ್ದು; ಮುಖಂ = ವಿರಾಟ್ಪುರುಷನ ಮುಖವು; ಕ್ಷೇತ್ರಂ = ಅಗ್ನಿಯ ಜನ್ಮಸ್ಥಾನವು; ಛಂದಸಾಂ = ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್ ಮತ್ತು ಜಗತೀ ಎಂಬ ಛಂದಸ್ಸುಗಳಿಗೆ; ಸಪ್ತ ಧಾತವಃ = ತ್ವಕ್, ಚರ್ಮ, ಮಾಂಸ, ರಕ್ತ, ಮೇಧಸ್ಸು, ಮಜ್ಜಾ, ಅಸ್ಥಿಗಳೆಂಬ ಪುರುಷನ ಸಪ್ತಧಾತುಗಳು ಜನ್ಮ ಸ್ಥಾನಗಳು; ಹವ್ಯ ಕವ್ಯ ಅಮೃತಾನ್ನಾನಾಂ = ದೇವಯಜ್ಞ, ಪಿತೃಯಜ್ಞಗಳಲ್ಲಿ ಅರ್ಪಿಸುವ ಅಮೃತಸದೃಶ ಅನ್ನಾದಿ ಹವಿಸ್ಸುಗಳ; ಚ = ಮತ್ತು; ರಸಸ್ಯ = ಲವಣ, ಆಮ್ಲ, ಖಾರ, ಕಹಿ, ಒಗರು, ಮಧುರ ಎಂಬ ರಸಗಳಿಗೂ; ಜಿಹ್ವಾ = ಪುರುಷನ ಜಿಹ್ವೇಂದ್ರಿಯವು ಜನ್ಮಸ್ಥಾನ.

ಮಾತುಗಳಲ್ಲಿ ವರ್ಣಗಳೂ, ವರ್ಣಾಭಿಮಾನಿ ದೇವತೆಗಳೂ, ಆ ಎರಡರಲ್ಲಿ ಭಗವದ್ರೂಪಗಳೂ ಇರುವುದರಿಂದ ಅಧಿಭೂತ, ಅಧಿದೈವ, ಅಧ್ಯಾತ್ಮಗಳೆಂಬ ಮೂರು ವಿಭಾಗಗಳಾಗುವು. ಇದರಂತೆ ಇತರ ವಿಷಯಗಳಲ್ಲಿಯೂ ಅನ್ವಯ. ಅಧಿಭೂತ, ವಸ್ತುನಿಷ್ಠ; ಅಧಿದೈವ, ಅಭಿಮಾನಿ ದೇವತಾನಿಷ್ಠ; ಅಧ್ಯಾತ್ಮ, ಮನೋನಿಷ್ಠ; ವರ್ಣಾಭಿಮಾನಿಗಳ ವಾಕ್ಯಗಳ ಉಚ್ಚಾರಣೆಗೆ ಸಹಾಯಕನಾಗಿರುವುದು ಅಗ್ನಿದೇವ.

ವಿರಾಟ್ಪುರುಷನ ಅವಯವಗಳು ಎಂದಾಗ, ಅಧಿಭೂತ, ಅಧಿದೈವ, ಅಧ್ಯಾತ್ಮಗಳಲ್ಲಿ ಪ್ರವಿಷ್ಟವಾಗಿರುವ ಭಗವಂತನ ಆನಂದಮಯ ಸ್ವರೂಪವಾದ ಮತ್ತು

ಪರಸ್ಪರ ಭಿನ್ನಗಳಲ್ಲದ ಅವಯವಗಳೆಂದು ಗ್ರಹಿಸಬೇಕು. ಆ ಪರಮಾತ್ಮ ಸ್ವಗತಭೇದ ವಿವರ್ಜಿತ. ಅವನ ಒಂದೊಂದು ಅವಯವವೂ ಬೇರೆ ಎಲ್ಲಾ ಅವಯವಗಳ ಕಾರ್ಯಗಳನ್ನೂ ನಿರ್ವಹಿಸಬಲ್ಲುದು. ಅವನು ಒಂದೊಂದು ರೂಪದಲ್ಲಿಯೂ ಅನಂತರೂಪಗಳು ಬೇರೆ ಬೇರೆಯಾಗಿಯೂ, ಪರಸ್ಪರ ಅಭಿನ್ನವಾಗಿಯೂ ಇರುವವು. ಏಕತೆಯಲ್ಲಿ ಭಿನ್ನತೆಯನ್ನು ತೋರುವುದು ಅವನ ವಿಶೇಷ ಮಹಿಮೆ. ಇದನ್ನೇ ವಿಶೇಷ ಎಂದು ಶ್ರೀಮನ್ಮಧ್ವಾಚಾರ್ಯರು ನಿರೂಪಿಸಿರುವುದು.

**ಸರ್ವಾಸೂನಾಂಚ ವಾಯೋಶ್ಚ ತನ್ನಾಸೇಪರಮಾಯನೇ ।**
**ಅಶ್ವಿನೋರೋಷಧೀನಾಂ ಚ ಘ್ರಾಣೋಗಂಧಸ್ಯಚೈವಹಿ ॥ ೨ ॥**

ಸರ್ವ ಅಸೂನಾಂ ಚ = ಎಲ್ಲಾ ಪ್ರಾಣವಾಯುಗಳಿಗೂ; ವಾಯೋಃ ಚ = ಮುಖ್ಯಪ್ರಾಣರಿಗೂ; ತತ್ ನಾಸೇ = ಆ ಪುರುಷನ ಮೂಗಿನ ಹೊಳ್ಳೆಗಳು; ಪರಮ ಅಯನೇ = ಜನ್ಮಸ್ಥಾನಗಳು ಮತ್ತು ಮುಖ್ಯ ಆಶ್ರಯಗಳು; ಘ್ರಾಣಃ = ವಾಸನೆಯನ್ನು ಹಿಡಿಯುವ ಸಾಮರ್ಥ್ಯವುಳ್ಳ ಘ್ರಾಣೇಂದ್ರಿಯವು; ಅಶ್ವಿನಃ = ಅಶ್ವಿನೀ ದೇವತೆಗಳಿಗೂ; ಚ = ಮತ್ತು; ಓಷಧೀನಾಂ = ವನಸ್ಪತಿ ಜಾತಿಗೂ; ಚ = ಮತ್ತು; ಗಂಧಸ್ಯ = ಸುವಾಸನೆ ದುರ್ವಾಸನೆಗಳಿಗೂ; ಹಿ = ನಿಜವಾಗಿ; ಕ್ಷೇತ್ರಂ = ಜನ್ಮಸ್ಥಾನವು.

ಮೂಗು ಕರ್ಮೇಂದ್ರಿಯ; ಮೂಗಿನ ಶಕ್ತಿಯು ಜ್ಞಾನೇಂದ್ರಿಯ. ಔಷಧಿಗಳೆಂದರೆ ಭತ್ತ, ಗೋಧಿ ಮೊದಲಾದ ಎಲ್ಲವೂ ಸೇರಿಕೊಳ್ಳುವವು. ದುರ್ವಾಸನೆಗೂ ಭಗವಂತನ ಘ್ರಾಣೇಂದ್ರಿಯವೇ ಆಶ್ರಯ ಎಂಬುದನ್ನು ದೇವದಾನವ ಅಭಿಮಾನಿಗಳ ದೃಷ್ಟಿಯಿಂದ ವಿವೇಕಿಸಿ ತಿಳಿಯಬೇಕು. ಭಗವಂತ ಸುವಾಸನೆ ದುರ್ವಾಸನೆ, ಸುಖದುಃಖ ಇತ್ಯಾದಿಗಳನ್ನು ಜೀವರ ಅನುಭವಕ್ಕೆ ಬರುವಂತೆ ಮಾಡುವನೇ ಹೊರತು, ಅವನು ಯಾವುದರಿಂದಲೂ ಲಿಪ್ತನಾಗುವುದಿಲ್ಲ. ತತ್ವಾಭಿಮಾನಿ ದೇವತೆಗಳೂ ನಿರ್ಲಿಪ್ತರೇ, ದುಃಖಾದಿಗಳ ವಿಷಯದಲ್ಲಿ ಜೀವರಿಗೆ ಅಹಂಕಾರದ ಮೂಲಕ ಸುಖದುಃಖ ಸ್ಪರ್ಶಮಾತ್ರ ಉಂಟು.

**ರೂಪಾಣಾಂ ತೇಜಸಾಂ ಚಕ್ಷುರ್ದಿವಃ ಸೂರ್ಯಸ್ಯ ಚಾಕ್ಷಿಣೀ ।**
**ಕರ್ಣೌದಿಶಾಂ ಚ ತೀರ್ಥಾನಾಂ ಶ್ರೋತ್ರಮಾಕಾಶ ಶಬ್ದಯೋಃ ॥ ೩ ॥**

ರೂಪಾಣಾಂ = ನೇತ್ರೇಂದ್ರಿಯ ಸಾಮರ್ಥ್ಯಕ್ಕೂ, ಕಣ್ಣಿಗೆ ಗೋಚರವಾಗುವ ವಸ್ತುಗಳನ್ನು ಬೆಳಗಿಸುವ ಪ್ರಕಾಶಗಳಿಗೂ; ಚಕ್ಷುಃ = ಭಗವಂತನ ಚಕ್ಷುರಿಂದ್ರಿಯವು ಕ್ಷೇತ್ರ ಸ್ಥಾನೀಯವಾದುದು; ದಿವಃ = ಅಂತರಿಕ್ಷಲೋಕದ ಅಭಿಮಾನಿ ದೇವತೆಗಳಿಗೂ; ಚ = ಮತ್ತು; ಸೂರ್ಯಸ್ಯ = ಸೂರ್ಯನಿಗೂ; ಅಕ್ಷಿಣೀ = ಭಗವಂತನ ಕಣ್ಣುಗಳು

ಉತ್ಪತ್ತಿ ಸ್ಥಾನಗಳು; ಕರ್ಣೌ = ಅವನ ಕಿವಿಗಳು; ದಿಶಾಂ = ದಿಗ್ದೇವತೆಗಳಿಗೂ; ತೀರ್ಥಾನಾಂ ಚ = ಪುಣ್ಯಕ್ಷೇತ್ರಗಳಿಗೂ, ಜನ್ಮ ಸ್ಥಾನೀಯಗಳು; ಶ್ರೋತ್ರಂ = ಅವನ ಶ್ರೋತ್ರೇಂದ್ರಿಯವು–ಅವನ ಶಬ್ದಗ್ರಹಣ ಸಾಮರ್ಥ್ಯವು; ಆಕಾಶಶಬ್ದಯೋಃ = ಆಕಾಶ ಮತ್ತು ಅದರಲ್ಲಿ ಉತ್ಪನ್ನವಾಗುವ ಶಬ್ದಗಳಿಗೆ ಜನ್ಮಸ್ಥಾನವು.

ಜನ್ಮಸ್ಥಾನವೆಂದಾಗಲೆಲ್ಲಾ ಪುರುಷೋತ್ತಮನ ಅವಯವಗಳು ಪ್ರಾಣಿಗಳ ಅವಯವಗಳ ಉತ್ಪತ್ತಿಗೂ, ಕಾರ್ಯಕ್ಷಮತೆಗೂ ಮೂಲ ನಿಮಿತ್ತ ಕಾರಣಗಳೆಂದು ತಿಳಿಯಬೇಕು.

**ತದ್ಗಾತ್ರಂ ವಸ್ತು ಸಾರಾಣಾಂ ಸೌಭಾಗ್ಯಸ್ಯ ಚ ಭಾಜನಂ ।**
**ತ್ವಗಸ್ಯ ಸ್ಪರ್ಶವಾಯೋಶ್ಚ ಸರ್ವಮೇಧಸ್ಯ ಚೈವ ಹಿ ॥ ೪ ॥**

ವಸ್ತು ಸಾರಾಣಾಂ = ಪದಾರ್ಥಗಳಲ್ಲಿ ಕಂಡುಬರುವ ಸಾಮರ್ಥ್ಯ ವಿಶೇಷಗಳಿಗೂ; ಸೌಭಾಗ್ಯಸ್ಯ ಚ = ಗುಣಾತಿಶಯಗಳಿಗೂ; ತತ್ ಗಾತ್ರಂ = ಆ ವಿರಾಟ್ ಪುರುಷನ ಶರೀರವು; ಭಾಜನಂ = ಉತ್ಪಾದಕವೂ, ಆಶ್ರಯವೂ ಆಗಿದೆ; ಸ್ಪರ್ಶವಾಯೋಃ = ಸ್ಪರ್ಶೇಂದ್ರಿಯದ ಸಾಮರ್ಥ್ಯ ಮತ್ತು ಭೂತವಾಯುಗಳಿಗೆ; ಚ = ಮತ್ತು; ಸರ್ವಮೇಧಸ್ಯ = ಎಲ್ಲಾ ಬಗೆಯ ಯಜ್ಞಗಳಿಗೆ; ಅಸ್ಯ ತ್ವಕ್ = ಇವನ ತ್ವಗಿಂದ್ರಿಯವು; ಭಾಜನಂ ಏವ ಹಿ = ನಿಜವಾಗಿಯೂ ಆಶ್ರಯವಾಗಿದೆ.

ಜನರು ಸಾಮಾನ್ಯವಾಗಿ 'ಕಿವಿ' ಎಂದಾಗ ಹೊರಗೆ ಕಾಣುವ ಕಿವಿಯ ಆಕಾರವೆಂದು ಭಾವಿಸುತ್ತಾರೆ. ಆದರೆ ಅದು ಧ್ವನಿಗಳನ್ನು ಸಂಗ್ರಹಿಸುವ ಸುರುಳಿ ಬಟ್ಟಲು ಮಾತ್ರವಾಗಿದೆ. ಧ್ವನಿಗಳನ್ನು ಗ್ರಹಿಸುವ ಸಾಮರ್ಥ್ಯವಿರುವುದು ಒಳಗಿವಿಯಲ್ಲಿ ಸಂಬಂಧಿಸಿರುವ ನರವಿಶೇಷಗಳಲ್ಲಿ(auditory nerves); ಅಲ್ಲಿ ಸ್ಥಿತರಾಗಿರುವ ದಿಗ್ದೇವತೆಗಳ ಕಾರ್ಯವದು. ನರಗಳು ವಿದ್ಯುದ್ವಾಹಕಗಳಾದರೂ ಜಡತಂತುಗಳು; ಅವುಗಳ ಕಾರ್ಯಾಚರಣೆಯು ಅಲ್ಲಿನ ದೇವತೆಗಳಿಂದ. ಇದರಂತೆ, ತ್ವಗಿಂದ್ರಿಯವೆಂದಾಗ ಹೊರಚರ್ಮವೆಂದು ತಿಳಿಯಬಾರದು; ಅಲ್ಲಿ ಸಂಬಂಧಿಸಿರುವ ನರಗಳ ಮತ್ತು ತ್ವಗಿಂದ್ರಿಯಾಭಿಮಾನಿಗಳ ಕಾರ್ಯವೆಂದು ತಿಳಿಯಬೇಕು. ಪ್ರಾಣಿಗಳ ಜ್ಞಾನೇಂದ್ರಿಯಗಳ ಆಕಾರಗಳು ಮತ್ತು ಗ್ರಹಣ ಸಾಮರ್ಥ್ಯಗಳು ಆಯಾ ಇಂದ್ರಿಯಗಳಿಗೆ ಸಂಬಂಧಿಸಿದ ನರಗಳಲ್ಲಿರುತ್ತವೆ. ಆ ನರಗಳು ದೇವತೆಗಳಿಂದ ಪ್ರಚೋದಿತಗಳಾಗಿ ಕಾರ್ಯ ನಿರ್ವಹಿಸುತ್ತವೆ. ಇಂದ್ರಿಯವಸ್ತುಗಳಿಗೆ, ಅವುಗಳ ಸಾಮರ್ಥ್ಯ ವಿಶೇಷಗಳಿಗೆ ಮತ್ತು ಅವುಗಳಿಗೆ ಪ್ರೇರಕರಾದ ಬೇರೆ ಬೇರೆ ದೇವತೆಗಳಿಗೆ ಜನ್ಮ ಕೊಡುವವನು, ಸಾಮರ್ಥ್ಯಗಳನ್ನಿಟ್ಟು ನಡೆಸುವವನು ಭಗವಂತ. ಅವನ ಸ್ವರೂಪಭೂತವಾದ ಜ್ಞಾನಾನಂದ ಶರೀರವು ವಿಚಿತ್ರವಾದುದು. ಆದರೆ, ಅವನು ವಸ್ತುಗಳಲ್ಲಿಯೂ,

ಇಂದ್ರಿಯಗಳಲ್ಲಿಯೂ, ದೇವತೆಗಳಲ್ಲಿಯೂ ಪ್ರವಿಷ್ಟನಾಗಿ ಕಾರ್ಯಗಳನ್ನು ನಡೆಸುವಾಗ ವಸ್ತುಗಳಂತೆ, ಇಂದ್ರಿಯಗಳಂತೆ, ದೇವತೆಗಳಂತೆ ಆಕಾರ ಗುಣಕ್ರಿಯಾದಿಗಳನ್ನು ಪ್ರಕಟಿಸುವುದರಿಂದ ಆ ವಿರಾಟ್(ವಿಶ್ವ)ಪುರುಷನ ದೇಹ, ಅವಯವ, ಇಂದ್ರಿಯ ಮುಂತಾಗಿ ಭಾವಿಸುವುದೆಷ್ಟೋ ಅಷ್ಟೇ ಹೊರತು ಅವನಿಗೆ ನಮ್ಮಂತೆ ಚರ್ಮ, ಕಿವಿ, ಮೂಗು, ಕಣ್ಣು ಮುಂತಾದ ಜಡವಸ್ತುಗಳಿವೆ ಎಂದು ತಿಳಿಯಬಾರದು. ಅವನಿಂದ ವಸ್ತುಗಳು ಹುಟ್ಟಿದುವು ಎಂದರೆ, ಜಡವಸ್ತುಗಳನ್ನು ವಿವಿಧ ರೂಪಗಳಿಂದ ಸೃಷ್ಟಿಸುವುದು ಕೇವಲ ಅವನ ಇಚ್ಛಾ ಶಕ್ತಿ ಎಂದು ಗ್ರಹಿಸಬೇಕು. ಅವನು ತನ್ನ ಇಚ್ಛಾರೂಪಗಳಿಂದ ವಸ್ತುಗಳಲ್ಲಿ ಮತ್ತು ಪ್ರಾಣಿಗಳಲ್ಲಿ ಪ್ರವಿಷ್ಟನಾಗಿ ಅವುಗಳನ್ನು ಪ್ರಕಟಿಸುವುದೇ ಅವುಗಳ ಸೃಷ್ಟಿ. ಅವು ಕಾರಣವಸ್ತುಗಳು; ಅವನು ನಿಮಿತ್ತಕಾರಣ– ಗಡಿಗೆಯನ್ನು ಮಾಡುವ ಕುಂಬಾರನಂತೆ. (ಇದೇ ಈಗಿನ ವಿಜ್ಞಾನಿಗಳು ಕಂಡುಹಿಡಿಯಲಾಗದ ಸಂಘಟಕವಸ್ತು– Co–ardinating factor).

ಅವನ ಸ್ಪರ್ಶೇಂದ್ರಿಯದಿಂದ ಚರ್ಮವಸ್ತುವೂ, ಅದರ ಸಾಮರ್ಥ್ಯವನ್ನು ಪ್ರೇರಿಸುವ ಪ್ರಾಣದೇವತೆಯೂ(ವಾಯು) ಹುಟ್ಟಿದುವೆಂದರೆ, ಅವುಗಳಲ್ಲಿ ಅವನ ಇಚ್ಛಾಶಕ್ತಿಯು ಪ್ರಕಟವಾಗಿದೆ; ಆದರಿಂದ ಅವುಗಳ ಸ್ಥಿತಿಗತಿಗಳು ಎಂದು ತಿಳಿಯಬೇಕು.

**ರೋಮಾಣ್ಯುದ್ಭಿಜಜಾತೀನಾಂ ಯೈರ್ವಾಯಜ್ಞಸ್ತು ಸಂಭೃತಃ ।**
**ಕೇಶಸ್ಮಶ್ರುನಖಾನ್ಯಸ್ಯ ಶಿಲಾಲೋಹಾಭ್ರ ವಿದ್ಯುತಾಂ ॥ ೫ ॥**

ಯೈಃ ವಾ = ಯಾವ ವಸ್ತುಗಳಿಂದಲೇ; ಯಜ್ಞಃ ಸಂಭೃತಃ ತು = ಯಜ್ಞಕಾರ್ಯಗಳು ಸಂಪನ್ನವಾಗುವವೋ; ಅಂತಹ; ಉದ್ಭಿಜ ಜಾತೀನಾಂ = ವೃಕ್ಷಜಾತಿಗಳಿಗೆ; ರೋಮಾಣಿ = ಆ ಪುರುಷನ ರೋಮ ಮೂಲಗಳು ಉತ್ಪತ್ತಿಸ್ಥಾನಗಳು; ಅಸ್ಯ = ಇವನ; ಕೇಶ ಸ್ಮಶ್ರು ನಖಾನಿ = ತಲೆಕೂದಲುಗಳು, ಗಡ್ಡ ಮೀಸೆಗಳು ಮತ್ತು ಉಗುರುಗಳು; ಶಿಲಾ ಲೋಹ ಅಭ್ರ ವಿದ್ಯುತಾಂ = ಶಿಲೆಗಳಿಗೂ, ಲೋಹಗಳಿಗೂ, ಮೇಘಗಳಿಗೂ, ವಿದ್ಯುತ್ತಿಗೂ ಆಶ್ರಯಗಳಾದ ಉತ್ಪತ್ತಿ ಸ್ಥಾನಗಳು.

ವೃಕ್ಷಜಾತಿಗಳ ಪ್ರತಿನಿಧಿಗಳಾಗಿ ಯಜ್ಞೋಪಯೋಗಿ ವೃಕ್ಷಗಳನ್ನು ಹೆಸರಿಸಿದ್ದಾರೆ. ಕಟ್ಟಿಗೆಯಿಂದ ಯಜ್ಞಕಾರ್ಯಕ್ಕೆ ಬೇಕಾದ ಅಗ್ನಿ ಉತ್ಪತ್ತಿಯಾಗುವುದು; ಪಲಾಶ ಮೊದಲಾದ ಕಡ್ಡಿಗಳು ಹೋಮಕಾರ್ಯಕ್ಕೆ ಒದಗುವವು. ತಲೆಗೂದಲುಗಳ ಅಂಶಗಳಿಂದ ಮೇಘಗಳ ಉತ್ಪತ್ತಿ; ಗಡ್ಡಮೀಸೆಗಳಿಂದ ವಿದ್ಯುಚ್ಛಕ್ತಿ(ಮಿಂಚಿನಲ್ಲಿ ಕಂಡುಬರುವುದು) ಮತ್ತು ಉಗುರುಗಳಿಂದ ಶಿಲೆಗಳು, ಲೋಹಗಳು.

**ಬಾಹವೋ ಲೋಕಪಾಲಾನಾಂ ಪ್ರಾಯಶಃ ಕ್ಷೇಮಕರ್ಮಣಾಂ ।**
**ವಿಕ್ರಮೋ ಭೂರ್ಭುವಃಸ್ವಶ್ಚ ಕ್ಷೇಮಸ್ಯ ಶರಣಸ್ಯ ಚ ॥ ೬ ॥**

ಪ್ರಾಯಶಃ = ವಿಶೇಷವಾಗಿ; ಕ್ಷೇಮ ಕರ್ಮಣಾಂ = ರಕ್ಷಣೆಯ ಭಾರವನ್ನು ಹೊತ್ತಿರುವ; ಲೋಕಪಾಲಾನಾಂ = ಲೋಕ ರಕ್ಷಕರ; ಬಾಹವಃ = ಪರಾಕ್ರಮಶಾಲಿಗಳಾದ ಬಾಹುಗಳು, ವಿಶ್ವಪುರುಷನ ಬಾಹು ಜನ್ಯವಾದುವು; ವಿಕ್ರಮಃ = ಅವನ ಹೆಜ್ಜೆಗಳು; ಭೂಃ, ಭುವಃ, ಚ, ಸ್ವಃ = ಭೂಲೋಕ, ಅಂತರಿಕ್ಷಲೋಕ ಮತ್ತು ಸ್ವರ್ಗಾದಿ ಲೋಕಗಳಿಗೆ ಉತ್ಪಾದಕಗಳು; ಕ್ಷೇಮಸ್ಯ = ಇತು ಸಂಪದ್ರಕ್ಷಣೆಗೆ; ಚ = ಮತ್ತು; ಶರಣಸ್ಯ = ಮೋಕ್ಷಪದವಿಗೆ; (ನಿಮಿತ್ತ ಕಾರಣಗಳು.)

ಹೆಜ್ಜೆಗಳೆಂದರೆ ಮುನ್ನಡೆ. ಆ ಪರಮ ಪುರುಷನ ಮುನ್ನಡೆಯೆಂಬುದು ಪುಣ್ಯಜೀವಿಗಳನ್ನು ಮೇಲೆ ಮೇಲಿನ ಲೋಕಗಳಿಗೆ ಕೊಂಡೊಯ್ಯುವುದು ಎಂದರ್ಥ.

**ಸರ್ವಕಾಮವರಸ್ಯಾಪಿ ಹರೇಶ್ಚರಣ ಆಸ್ಪದಂ ।**
**ಅಪಾಂ ವೀರ್ಯಸ್ಯ ಸರ್ಗಸ್ಯ ಪರ್ಜನ್ಯಸ್ಯ ಪ್ರಜಾಪತೇಃ ॥ ೭ ॥**

**ಪುಂಸಃ ಶಿಶ್ನ ಉಪಸ್ಥಸ್ತು ಪ್ರಜಾತ್ಯಾನಂದ ನಿರ್ವೃತೇಃ ।**
**ಪಾಯುರ್ಯಮಸ್ಯ ಮಿತ್ರಸ್ಯ ಪರಿಮೋಕ್ಷಸ್ಯ ನಾರದ ॥ ೮ ॥**

ಸರ್ವಕಾಮಸ್ಯ ಅಪಿ = ಸಕಲ ವಿಧ ಉತ್ತಮ ಪುರುಷಾರ್ಥಗಳ ಸಾಧನೆಗೂ; ಹರೇಃ = ಶ್ರೀಹರಿಯ; ಚರಣಃ = ಪಾದವು; ಆಶ್ರಯಂ = ಉತ್ಪಾದಕವು ಮತ್ತು ಆಶ್ರಯವು; ಅಪಾಂ = ನೀರುಗಳಿಗೆ; ವೀರ್ಯಸ್ಯ = ಸಂತಾನಜನಕದ್ರವಕ್ಕೆ; ಸರ್ಗಸ್ಯ = ಸೃಷ್ಟಿಕಾರ್ಯಕ್ಕೆ; ಪರ್ಜನ್ಯಸ್ಯ = ಮಳೆಗೆ ಅಭಿಮಾನಿಯಾದ ಪರ್ಜನ್ಯನಾಮಕ ದೇವತೆಗೆ; ಪ್ರಜಾಪತೇಃ = ಪ್ರಜಾಸಂತಾನ ಮೂಲ ಪುರುಷನಿಗೆ; ಪುಂಸಃ = ವಿರಾಟ್ಪುರುಷನ; ಶಿಶ್ನಃ = ಪುರುಷೇಂದ್ರಿಯವು; ಉಪಸ್ಥಃ ತು = ಸ್ತ್ರೀಗುಹ್ಯೇಂದ್ರಿಯವೂ ಕೂಡ; (ಉತ್ಪಾದಕ ಮತ್ತು ಆಶ್ರಯ) ಅಂತೆಯೇ; ಪ್ರಜಾತಿ ಆನಂದ ನಿರ್ವೃತೇಃ = ಸಂಭೋಗಕ್ರಿಯೆಯಿಂದುಂಟಾಗುವ ಆನಂದೋದ್ರೇಕಕ್ಕೂ ಉತ್ಪಾದಕ, ಆಶ್ರಯ; ಓ ನಾರದ; ಯಮಸ್ಯ = ಯಮನಿಗೂ; ಮಿತ್ರಸ್ಯ = ಮಿತ್ರನಾಮಕ ದೇವತೆಗೂ; ಪರಿಮೋಕ್ಷಸ್ಯ = ಮಲವಿಸರ್ಜನ ಕ್ರಿಯೆಗೂ; ಪಾಯುಃ = ಪರಮಾತ್ಮನ ಗುದ ಸ್ಥಾನವು ಆಶ್ರಯ.

ಹಿಂದೆಯೇ ಹೇಳಿದಂತೆ, ಪರಮಾತ್ಮನ ಅವಯವಗಳೆಂದಾಗ, ಅವು ಕೇವಲ ಜ್ಞಾನಾನಂದಾತ್ಮಕವಾದುವು, ಇಚ್ಛಾರೂಪವಾಗಿ, ಪೂರ್ಣನಿರ್ಲಿಪ್ತವಾಗಿ, ಜೀವಿಗಳ ಶರೀರಗಳನ್ನು ಉತ್ಪಾದಿಸಿ ಅವುಗಳಲ್ಲಿ ನಿಯಾಮಕವಾಗಿ ಇರತಕ್ಕವು ಎಂದು ತಿಳಿಯಬೇಕು. ಪ್ರಜಾಪತಿಗಳು ದಕ್ಷ, ಕಶ್ಯಪ ಮೊದಲಾದವರು. ಶಿಶ್ನ, ಉಪಸ್ಥ ಎರಡೂ ಪುರುಷನಲ್ಲಿ ಹೇಗೆ ಕೂಡುವವು ಎಂದು ಶಂಕಿಸಬಾರದು. ಪರಮಾತ್ಮ ಗಂಡೂ ಅಲ್ಲ,

ಹೆಣ್ಣೂ ಅಲ್ಲ, ನಪುಂಸಕನೂ ಅಲ್ಲ. ಆದರೆ ಆ ಎಲ್ಲ ಸ್ಥಿತಿಗಳಿಗೂ ನಿಮಿತ್ತ ಕಾರಣನಾದವನು. ಶಿಶ್ನ ಉಪಸ್ಥಗಳಲ್ಲಿ ದಕ್ಷಪ್ರಜಾಪತಿ ಮತ್ತು ಆತನ ಪತ್ನಿ ನಿಯಾಮಕರಾಗಿದ್ದು, ಭಗವದ್ದತ್ತವಾದ ಆನಂದವನ್ನನುಭವಿಸಿದಾಗ, ಅದರ ಕಿಂಚಿತ್ ಭಾಗವು ಸಂಭೋಗಕ್ರಿಯೆಯಲ್ಲಿ ಭಾಗವಹಿಸಿದ ಜೀವರಿಗೂ ಸ್ಪರ್ಶವಾಗುವುದು. ಮಲವಿಸರ್ಜನ ಕ್ರಿಯೆಯಲ್ಲಿ ಭಾಗವಹಿಸುವ ದೈತ್ಯಾಭಿಮಾನಿಗಳಿಗೆ ತೋದಕರಾಗಿ, ಭಗವಂತನ ಗೃಹದ ನಿರ್ಮಲೀಕರಣ ಕಾರ್ಯರೂಪವಾದ ಸೇವೆಯಲ್ಲಿ ನಿರತರಾಗಿರುವವರು ಯಮ ಮತ್ತು ಮಿತ್ರ ಎಂಬ ದೇವತೆಗಳು. ಈ ರೀತಿಯಲ್ಲಿ ಭಾವಿಸಿ ಆನಂದವಾಗಿ, ನಿರ್ಲಿಪ್ತರಾಗಿ, ಜೀವನ ಸಾಗಿಸಬಲ್ಲವರು ಪೂರ್ಣಜ್ಞಾನಿಗಳು, ಜೀವನ್ಮುಕ್ತರು.

**ಹಿಂಸಾಯಾನಿರ್ಋತೇರ್ಮೃತ್ಯೋರ್ನಿರಯಸ್ಯ ಗುದಃ ಸ್ಮೃತಃ ।**
**ಪರಾಭೂತೇರಧರ್ಮಸ್ಯ ತಮಸಶ್ಚಾಪಿ ಪಶ್ಚಿಮಃ ॥ ೯ ॥**

ಹಿಂಸಾಯಾಃ = ಹಿಂಸಾಕಾರ್ಯಕ್ಕೆ; ನಿಋತೇಃ = ನಿಋಋತಿ ಎಂಬ ದೇವತೆಗೆ; ಮೃತ್ಯೋಃ = ಮೃತ್ಯುದೇವತೆಗೆ; ನಿರಯಸ್ಯ = ನರಕದ ಸ್ಥಿತಿಗೆ; ಗುದಃ = ಅಪಾನವಾಯುದ್ವಾರವಾದ ಗುದೇಂದ್ರಿಯವು; ಸ್ಮೃತಃ = ಜನ್ಯಸ್ಥಾನವೆಂದು ಹೇಳಿದೆ; ಪರಾಭೂತೇಃ = ಅಪಜಯಕ್ಕೂ ಅದಕ್ಕೆ ಅಭಿಮಾನಿಯಾದ ಅಲಕ್ಷ್ಮಿಗೂ; ಅಧರ್ಮಸ್ಯ = ಪಾಪಕಾರ್ಯಗಳಿಗೂ, ತದಭಿಮಾನಿಯಾದ ಕಲಿ ಪುರುಷನಿಗೂ; ಚ = ಮತ್ತು; ತಮಸಃ ಅಪಿ = ತಮೋಗುಣದ ಕಾರ್ಯಗಳಿಗೂ; ಪಶ್ಚಿಮಃ = ವಿರಾಟ್ಪುರುಷನ ಪೃಷ್ಠಗಳು ಜನ್ಯಸ್ಥಾನಗಳು.

ಹಿಂಸಾಕಾರ್ಯ ನಡೆಯುವುದು ದುಷ್ಟರಾದ ದೈತ್ಯಾಭಿಮಾನಿಗಳಿಂದ. ಆದರೆ, ಬಲಹೀನರಾದ ಅವರಿಗೆ ಬಲಪ್ರದರಾದವರು ದೇವತಾ ಅಭಿಮಾನಿಗಳು. ಅವರಲ್ಲಿ ಪ್ರಧಾನರಾದವರು ಘಟೋತ್ಕಚನಾಗಿ ಜನ್ಮತಾಳಿದ್ದ ನಿಋಋತಿಗಳು.

**ನಾಡ್ಯೋ ನದ ನದೀನಾಂತು ಗೋತ್ರಾಣಾಮಸ್ಥಿ ಸಂಹತಿಃ ।**
**ಅವ್ಯಕ್ತರಸ ಸಿಂಧೂನಾಂ ಭೂತಾನಾಂ ನಿಧನಸ್ಯ ಚ ॥ ೧೦ ॥**

**ಉದರಂ ವಿದಿತಂ ಪುಂಸೋ ಹೃದಯಂ ಮನಸಃ ಪದಂ ।**
**ಧರ್ಮಸ್ಯ ಮಮ ತುಭ್ಯಂ ಚ ಕುಮಾರಾಣಾಂ ಭವಸ್ಯ ಚ ॥ ೧೧ ॥**

**ವಿಜ್ಞಾನಸ್ಯ ಚ ತತ್ವಸ್ಯ ಪರಸ್ಯಾತ್ಮಪರಾಯಣಂ ।**
**ಅಹಂ ಭವಾನ್ ಭವಶ್ಚೈವ ಯ ಇಮೇ ಮುನಯೋಽಗ್ರಜಾಃ ॥ ೧೨ ॥**

ನದನದೀನಾಂ ತು = ನದಗಳಿಗೂ(ಗಂಡು ನದಿಗಳಿಗೆ) ನದಿಗಳಿಗೂ(ಗಂಗಾದಿಗಳಿಗೆ); ನಾಡ್ಯಃ = ನರಸಮೂಹಗಳು ಉತ್ಪತ್ತಿಸ್ಥಾನಗಳು; ಗೋತ್ರಾಣಾಂ = ಪರ್ವತಗಳಿಗೆ; ಅಸ್ಥಿಸಂಹತಿಃ = ಮೂಳೆಗಳ ಗುಂಪುಗಳು ಕ್ಷೇತ್ರ ಸ್ಥಾನೀಯಗಳು; ಅವ್ಯಕ್ತ ರಸ ಸಿಂಧೂನಾಂ = ಅವ್ಯಕ್ತ ತತ್ವದಲ್ಲಡಗಿರುವ ಷಡ್ರಸಗಳಿಗೂ, ಜಲಸಮೂಹಗಳಿಗೂ; ಭೂತಾನಾಂ = ಜೀವರಿಗೂ; ನಿಧನಸ್ಯ ಚ = ಸಂಹಾರ ಕಾರ್ಯಕ್ಕೂ; ಪುಂಸಃ = ವಿರಾಟ್ಪುರುಷನ; ಉದರಂ = ಮಧ್ಯಶರೀರವು, ವಿದಿತಂ = ಉತ್ಪತ್ತಿಸ್ಥಾನವೆಂದು ಹೇಳಿದೆ.

ಈ ವಸ್ತು ವಿಶೇಷಗಳನ್ನೆಲ್ಲಾ ವಿರಾಟ್ ಪುರುಷನ ಶರೀರದಲ್ಲಿಯೂ, ನಮ್ಮ ನಮ್ಮ ಶರೀರಗಳಲ್ಲಿಯೂ ಭಾವಿಸಬೇಕು. ಸುಷುಮ್ನಾದಿ ನಾಡಿಗಳೂ ಬೆನ್ನುಮೂಳೆ ಮತ್ತು ಅದಕ್ಕೆ ಸಂಬಂಧಿಸಿದ ಅಸ್ಥಿಸಂಗ್ರಹವೂ ಇರುವುದು ಮಧ್ಯದೇಹದಲ್ಲಿ. ಜೀವರಿಗೆ ಪ್ರಾಣಾಧಾರವೂ, ಮರಣಕಾರಣವೂ ಆದ ಶ್ವಾಸಕೋಶಗಳು ಮತ್ತು ಹೃದಯವು ಇರುವುದೂ ಇಲ್ಲಿಯೇ.

ಹೃದಯಂ = ಆ ವಿರಾಟ್ಪುರುಷನ; ಹೃದಯಂ = ಹೃದಯಕಮಲವು; ಮನಸಃ ಪದಂ = ಮನಸ್ಸಿಗೆ ಉತ್ಪಾದಕವೂ ಆಗಿದೆ; ಧರ್ಮಸ್ಯ = ಧರ್ಮಾಭಿಮಾನಿಯಾದ; ಮಮ = ನನಗೆ(ಚತುರ್ಮುಖನಿಗೆ); ಚ = ಮತ್ತು; ತುಭ್ಯಂ = ನಿನಗೆ; ಕುಮಾರಾಣಾಂ = ಸನಕಾದಿಗಳಿಗೆ; ಭವಸ್ಯ ಚ = ರುದ್ರನಿಗೂ ಕೂಡ; ಪದಂ = ಆಶ್ರಯಸ್ಥಾನವು.

ಹಿಂದೆ ದೇಹದೊಳಗಿನ ಅಂಶಗಳ ವಿಚಾರವನ್ನು ಹೇಳಿ, ಈಗ ವ್ಯಕ್ತಿಗಳ ವಿಚಾರವನ್ನು ಹೇಳಿರುವುದರಿಂದ, ವಿರಾಟ್ಪುರುಷನ ವ್ಯಷ್ಟಿ ಸಮಷ್ಟಿ ರೂಪ–ಭಾವಗಳ ಐಕ್ಯವನ್ನು ತಿಳಿಸಿದ್ದಾರೆ. "ಸಹಸ್ರಶೀರ್ಷಾ ಪುರುಷಃ" ಇತ್ಯಾದಿ ವರ್ಣನೆಯಲ್ಲಿ ಕಂಡುಬರುವ ರೂಪಗಳ ವೈವಿಧ್ಯವನ್ನೂ, ಅವು ಕೆಲಕೆಲವು ಮತ್ತು ಹೆಚ್ಚು ಹೆಚ್ಚಾಗಿ ಕೂಡಿಕೊಂಡು ಆಗಿರುವ ರೂಪರೂಪಾಂತರಗಳನ್ನೂ ವ್ಯಕ್ತಿರೂಪವರ್ಣನೆಯಿಂದ ತಿಳಿಸಿದ್ದಾರೆ.

ವಿಜ್ಞಾನಸ್ಯ ತತ್ವಸ್ಯ ಚ = ವಿಜ್ಞಾನತತ್ವಕ್ಕೂ; ಪರಸ್ಯ = ಸರ್ವೋತ್ತಮನ; ಆತ್ಮಾ = ಮಧ್ಯದೇಹವು; ಪರಾಯಣಂ = ಸೃಷ್ಟಿಸ್ಥಿತಿಗಳಿಗೆ ಮೂಲಕಾರಣವೂ, ಆಶ್ರಯವೂ ಆದುದು; ಅಹಂ = ನಾನು; ಭವಾನ್ = ನೀನು; ಚ = ಮತ್ತು; ಭವ ಏವ = ರುದ್ರನೂ; ಇಮೇ = ಈ; ಅಗ್ರಜಾಃ ಮುನಯಃ = ಸನಕಾದಿ ಮುನಿಗಳೂ; (ಸರ್ವ ಇದಂ = ಈ ಎಲ್ಲವೂ; ಪುರುಷಃ ಏವ = ಆ ಪರಮಪುರುಷನ ರೂಪದಿಂದ ಉತ್ಪನ್ನಗಳಾಗಿ ಇರತಕ್ಕವುಗಳಾಗಿವೆ.)

ವಿಜ್ಞಾನ ತತ್ತ್ವವೆಂದಾಗ ಆ ತತ್ತ್ವಕ್ಕೆ ಅಭಿಮಾನಿಯಾದ ಸರಸ್ವತೀದೇವಿಯೆಂದು ತಿಳಿಯಬೇಕು. 'ಅಹಂ, ಭವಾನ್' ಇತ್ಯಾದಿ ಪದಗಳ ಅರ್ಥವನ್ನು ೧೫ನೇ ಶ್ಲೋಕದ 'ಪುರುಷಃ ಏವ' ಎಂಬುದರಿಂದ ಪೂರ್ಣಮಾಡಬೇಕು.

**ಸುರಾಸುರ ನರಾ ನಾಗಾಃ ಖಗಾಮೃಗಸರೀಸೃಪಾಃ ।**
**ಗಂಧರ್ವಾಪ್ಸರಸೋಯಕ್ಷಾ ರಕ್ಷೋಭೂತಗಣೋರಗಾಃ ॥ ೧೩ ॥**

**ಪಶವಃ ಪಿತರಃ ಸಿದ್ಧಾ ವಿದ್ಯಾಧ್ರಾಶ್ಚಾರಣಾದ್ರುಮಾಃ ।**
**ಅನ್ಯೇ ಚ ವಿವಿಧಾ ಜೀವಾ ಜಲಸ್ಥಲ ನಭೌಕಸಃ ॥ ೧೪ ॥**

**ಗ್ರಹರ್ಕ್ಷಕೇತವಸ್ತಾರಾಸ್ತಡಿತಸ್ತನಯಿತ್ನವಃ ।**
**ಸರ್ವಂ ಪುರುಷ ಏವೇದಂ ಭೂತಂ ಭವ್ಯಂ ಭವಚ್ಚಯತ್ ॥ ೧೫ ॥**

ಸುರರು, ಅಸುರರು, ನರರು, ನಾಗರು, ಖಗ ಮೃಗ ಸರೀಸೃಪಗಳು(ಹರಿದಾಡುವ ಪ್ರಾಣಿಗಳು), ಗಂಧರ್ವರು, ಅಪ್ಸರರು, ಯಕ್ಷರು, ರಾಕ್ಷಸರು, ಭೂತಗಣಗಳು, ಉರಗಗಳು(ಸರ್ಪಜಾತಿಗಳು), ಪಶುಗಳು, ಪಿತೃಗಣದವರು, ಸಿದ್ಧರು, ವಿದ್ಯಾಧರರು, ಚಾರಣರು, ದ್ರುಮಗಳು(ವೃಕ್ಷಜಾತಿಗಳು), ಜಲಸ್ಥಲನಭೌಕಸಃ = ನೀರಿನಲ್ಲಿ, ಭೂಮಿಯ ಮೇಲೆ ಮತ್ತು ಆಕಾಶದಲ್ಲಿರತಕ್ಕ; ಅನ್ಯೇ ಚ ವಿವಿಧಾಃ ಜೀವಾಃ = ಬೇರೆ ಬೇರೆ ಅನೇಕ ಬಗೆಯ ಜೀವಿಗಳು; ಗ್ರಹಗಳು, ಋಕ್ಷಗಳು(ನಕ್ಷತ್ರಗಳು), ಕೇತುಗಳು, ತಾರೆಗಳು, ಮಿಂಚು, ಗುಡುಗು(ಸ್ತನಯಿತ್ನು); ಭೂತಂ ಭವ್ಯಂ ಭವತ್ ಚ = ಆಗಿ ಹೋದವು, ಹುಟ್ಟತಕ್ಕವು ಮತ್ತು ಇರತಕ್ಕವು; ಯತ್= ಯಾವುದುಂಟೋ; ಇದಂ ಸರ್ವಂ = ಈ ಎಲ್ಲವೂ; ಪುರುಷಃ ಏವ = ಪುರುಷನಿಂದಲೇ ಉತ್ಪನ್ನಗಳಾಗಿ ಅವನನ್ನು ಆಶ್ರಯಿಸಿಕೊಂಡೇ ಇರತಕ್ಕವುಗಳಾಗಿವೆ.

ಸಕಲವೂ ಅಸ್ವತಂತ್ರವಾದುದರಿಂದ, ಸ್ವತಂತ್ರಪುರುಷನ ವ್ಯಾಪ್ತಿ ವ್ಯಾಪಾರಗಳಿಂದಲೇ ತಮ್ಮ ಅಸ್ತಿತ್ವವನ್ನು ಹೊಂದಿವೆ ಎಂಬುದೇ ನಿಜವಾದ ದ್ವೈತಸಿದ್ಧಾಂತ. ಯಾವ ವಸ್ತುವಾಗಲೀ ಜೀವವಾಗಲೀ ಸ್ವತಂತ್ರನಾದ ಭಗವಂತನಿಂದ ಹೊರಗಿಲ್ಲ, ಅವನ ಸತ್ವಬಲದಿಂದಲೇ ಅವುಗಳ ಸತ್ವ ಉಳಿದಿದೆ ಎಂದು ತಿಳಿಯಬೇಕು. ಅವನ ವ್ಯಾಪ್ತಿಯು ಎಲ್ಲದರ ಹೊರಗೂ ಒಳಗೂ ಇರುವುದನ್ನು ನೀರೊಳಗಿನ ಬಟ್ಟೆಯ ನಿದರ್ಶನದಿಂದ ಅರ್ಥ ಮಾಡಿಕೊಳ್ಳಬೇಕು. ಕೊಳದ ನೀರು ಬಟ್ಟೆಯ ಹೊರಗೂ, ಆ ಬಟ್ಟೆಯ ತಂತುಗಳಲ್ಲಿಯೂ ವ್ಯಾಪಿಸಿರುವಂತೆ ಭಗವಂತನ ವ್ಯಾಪ್ತಿ. ನಕ್ಷತ್ರಗಳು = ೨೭ ಪ್ರಸಿದ್ಧ ನಕ್ಷತ್ರಗಳ ಸಮೂಹಗಳು. ತಾರೆಗಳು = ನಕ್ಷತ್ರರೂಪವಾದ ದೇವಯಾನಗಳು.

**ತೇನೇದಮಾವೃತಂ ವಿಶ್ವಂ ವಿತಸ್ತಿಮಧಿತಿಷ್ಠತಾ ।**
**ಸ್ವಧಿಷ್ಣ್ಯಂ ಪ್ರತಪನ್ಪ್ರಾಣೋ ಬಹಿಶ್ಚ ಪ್ರತಪತ್ಯಸೌ ॥ ೧೬ ॥**

ವಿತಸ್ತಿಂ ಅಧಿತಿಷ್ಠತಾ = ಹೃದಯಾಕಾಶದಲ್ಲಿ ಸ್ಥಿತನಾದ; ತೇನ = ಆ ವಿರಾಟ್ಪುರುಷನಿಂದ; ಇದಂ ವಿಶ್ವಂ = ಈ ಜಗತ್ತು; ಆವೃತಂ = ವ್ಯಾಪ್ತವಾಗಿದೆ; ಅಸೌ ಪ್ರಾಣಃ = ಪ್ರಾಣನಾಮಕನಾದ ಈ ಅಂತರಾತ್ಮನು; ಸ್ವಧಿಷ್ಣ್ಯಂ = ತಾನಿರತಕ್ಕ ಹೃದಯ ಸ್ಥಾನವನ್ನು; ಪ್ರತಪನ್= ಬೆಳಗಿಸಿ ನೋಡುತ್ತಾ; ಬಹಿಃ ಚ = ಹೊರಗೂ ಕೂಡ; ಪ್ರತಪತಿ = ಬೆಳಗಿಸಿ ನೋಡುವನು.

ವಿರಾಡ್ರೂಪಿಯಾದ ಭಗವಂತನು ಅಣುರೂಪ ಮಹದ್ರೂಪಗಳುಳ್ಳವನೂ, ಆ ಸಕಲ ರೂಪಗಳೂ ಒಂದೇ ರೂಪವಾಗಿ ಉಳ್ಳವನೂ ಆಗಿರುವ ವಿಚಿತ್ರ ಮಹಿಮ; ಅವನು ಅಣುರೂಪಗಳಿಂದ ಸಕಲರ ಹೃದಯಗಳಲ್ಲಿದ್ದು ಅಂತರಂಗ ದೃಷ್ಟಿಯನ್ನು ನೀಡುವವನೂ, ಮಹದ್ರೂಪದಿಂದ ಬಾಹ್ಯದೃಷ್ಟಿಯನ್ನು ಕರುಣಿಸುವವನೂ ಆಗಿದ್ದಾನೆ.

**ಏವಂ ವಿರಾಜಂ ಪ್ರತಪಂಸ್ತಪತ್ಯಂತರ್ಬಹಿಃ ಪುಮಾನ್ ।**
**ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ॥ ೧೭ ॥**

ಪುಮಾನ್= ಈ ಪುರುಷನು; ಏವಂ = ಹಿಂದೆ ವಿವರಿಸಿದಂತೆ; ವಿರಾಜಂ = ವಿರಾಡ್ರೂಪದಿಂದ ಕೂಡಿದ; ಅಂತಃ = ಬ್ರಹ್ಮಾಂಡಾಂತರ್ಗತ ವಸ್ತುಗಳನ್ನು; ಪ್ರತಪನ್= ತನ್ನ ಪ್ರಕಾಶದಿಂದ ನೋಡುತ್ತಾ; ಬಹಿಃ = ಅವ್ಯಕ್ತತತ್ತ್ವ ಪರ್ಯಂತ ಬ್ರಹ್ಮಾಂಡದ ಹೊರಗೂ; ತಪತಿ = ನೋಡುತ್ತಾನೆ; ಸಃ = ಅವನು; ಯತ್= ಯಾವ ಬಲದಿಂದ; ಮರ್ತ್ಯಂ = ಲಯಕ್ಕೊಳಗಾಗುವ ಬ್ರಹ್ಮಾದಿಗಳನ್ನೂ; ಅನ್ನಂ = ಸ್ವಭೋಗ್ಯವಾದ ಲಕ್ಷ್ಮೀಸ್ವರೂಪವನ್ನೂ; ಅತ್ಯಗಾತ್= ಮೀರಿರುವನೋ, ಆ ಕಾರಣದಿಂದ; ಅಭಯಸ್ಯ = ದುಃಖಭಯರಹಿತವಾದ; ಅಮೃತಸ್ಯ = ಮುಕ್ತರ ಸ್ಥಿತಿಗೂ; ಈಶಃ = ಒಡೆಯನಾಗಿದ್ದಾನೆ.

ಭಗವಂತನು ವಿರಾಡ್ರೂಪದಿಂದ ಬ್ರಹ್ಮಾಂಡದೊಳಗೆ ವ್ಯಾಪ್ತನಾಗಿರುವುದಷ್ಟೇ ಅಲ್ಲ; ಅವನು ಬ್ರಹ್ಮಾಂಡವನ್ನು ಬಳಸಿರುವ ನವಾವರಣಗಳಲ್ಲಿಯೂ ವ್ಯಾಪ್ತನಾಗಿದ್ದಾನೆ. ಅಲ್ಲದೆ, ಮುಕ್ತಾಮುಕ್ತ ಪ್ರಪಂಚಗಳೆರಡರಲ್ಲಿಯೂ ವ್ಯಾಪ್ತನಾಗಿದ್ದಾನೆ. ಅವನನ್ನು ಬಿಟ್ಟಿರುವುದು ಏನೂ ಇಲ್ಲ. ಆದುದರಿಂದ ಆಶ್ರಿತವಸ್ತುಗಳ ಅಸ್ವಾತಂತ್ರ್ಯವನ್ನೂ, ಆಶ್ರಯನೀಡುವವನ ಸ್ವಾತಂತ್ರ್ಯವನ್ನು ಗಮನದಲ್ಲಿಟ್ಟುಕೊಂಡು, ಸಕಲವೂ ಅವನೇ ಎಂದು ಹೇಳುವುದು ರೂಢಿ.

**ಮಹಿಮೈಷತತೋ ಬ್ರಹ್ಮನ್ಪುರುಷಸ್ಯ ದುರತ್ಯಯಃ ।**
**ಪಾದೋಸ್ಯ ಸರ್ವಭೂತಾನಿ ಪುಂಸಃ ಸ್ಥಿತಿ ವಿದೋ ವಿದುಃ ॥ ೧೮ ॥**

ಬ್ರಹ್ಮನ್= ಬ್ರಹ್ಮಜ್ಞಾನಾಧಿಕಾರಿಯಾದ ನಾರದಾ; ತತಃ= ವ್ಯಾಪ್ತನಾದ; ಪುರುಷಸ್ಯ = ವಿರಾಟ್ಪುರುಷನ; ಏಷ ಮಹಿಮಾ = ಈ ಸಾಮರ್ಥ್ಯವು; ದುರತ್ಯಯಃ = ಮೀರಲಸಾಧ್ಯವಾದುದು; ಸರ್ವಭೂತಾನಿ = ಸೃಷ್ಟಿಯಲ್ಲಿ ಕಂಡುಬರುವ ಎಲ್ಲಾ ಜಡ ಚೇತನ ವಸ್ತುಗಳೂ; ಅಸ್ಯ ಪುಂಸಃ = ಈ ಪುರುಷನ; ಪಾದಃ = ಒಂದು ಅಂಶವು; ಎಂದು; ಸ್ಥಿತಿ ವಿದಃ = ಯಥಾರ್ಥಜ್ಞಾನ ಉಳ್ಳವರು; ವಿದುಃ = ಬಲ್ಲವರಾಗಿದ್ದಾರೆ.

"ಭಗವಂತನಿಗೂ ಅವನ ಅಂಶಗಳಿಗೂ ಭೇದವಿಲ್ಲ. ಅವನ ಅಂಶವೆಂಬುದೂ ಪೂರ್ಣವೇ ಹೊರತು ಕೊರತೆ ಹೊಂದಿರುವ ಒಂದು ಚೂರಲ್ಲ. ಜಗತ್ತಿನಲ್ಲಿರುವುದು ಪೂರ್ಣವೇ ಆದ ಅಂಶವಾದುದರಿಂದ ಅದು ಜಗತ್ತಿಗೆ ನಿಲುಕುವಂತಹುದೇ ಆಯಿತು. ಅಂದಮೇಲೆ ಮೀರಲಾಗುವುದಿಲ್ಲ ಎಂಬ ಮಾತು ಹೇಗೆ ಕೂಡುತ್ತದೆ?' ಎಂದರೆ, ಭಗವಂತನ ಅಂಶಗಳನ್ನು ಸ್ವಾಂಶಗಳೆಂದೂ, ಭಿನ್ನಾಂಶಗಳೆಂದೂ ಶಾಸ್ತ್ರಗಳು ತಿಳಿಸುತ್ತವೆ. ಜಗತ್ತಿನಲ್ಲಿ ಕಂಡುಬರುವುದು ಅವನ ಭಿನ್ನಾಂಶ. ಭಿನ್ನವೆಂದರೆ, ಪೂರ್ಣವನ್ನು ಒಡೆದು ಒಂದು ಭಾಗವನ್ನು ಬೇರೆ ಮಾಡುವುದೆಂದು ಅರ್ಥವಲ್ಲ. ಜಗದ್ವಸ್ತುಗಳಲ್ಲಿರುವ ಪರಮಾತ್ಮನ ಅಂಶವು ಆ ವಸ್ತುಗಳ ಸ್ಥಿತಿಗತಿಗಳನ್ನು ತೋರಿಸುವುದೇ ಹೊರತು ತನ್ನ ಮಹಿಮೆಯನ್ನು ತೋರಗೊಡುವುದಿಲ್ಲ. ಆ ಭಿನ್ನಾಂಶವೆಂಬುದರಿಂದ ನಡೆಯುವುದು ಅನ್ಯಕಾರ್ಯವೇ ಹೊರತು ತನ್ನ ಮಹಿಮಾ ಪ್ರಕಟನ ಕಾರ್ಯವಲ್ಲ. ಈ ಕಾರಣದಿಂದ, ವಸ್ತುಗಳನ್ನೂ ಜೀವರನ್ನೂ ಭಿನ್ನಾಂಶವೆಂದು ಕರೆಯುತ್ತಾರೆ. ಇದು ಅಂಶಿ ಅಂಶಭಾವವಲ್ಲ; ಕೇವಲ ಒಂದು ಬಗೆಯ ಸಾದೃಶ್ಯ, ಸ್ವಾತಂತ್ರ್ಯ ಪಾರತಂತ್ರ್ಯ ದ್ಯೋತಕ. ಜಗದ್ವಸ್ತುಗಳಲ್ಲಿ ಅವುಗಳಂತಿರುವ ಪುರುಷೋತ್ತಮನು ತನ್ನ ಪೂರ್ಣತೆಯನ್ನು ಮರೆಮಾಚಿ ಆಯಾ ವಸ್ತುಗಳಂತೆ ಕಂಡರೂ, ಹಾಗೆ ಕಾಣುವ ತಾನು ತಾನೇ ಹೊರತು ಅನ್ಯವಲ್ಲ; ವಸ್ತುಗಳಲ್ಲಿಯೂ ಜೀವರಲ್ಲಿಯೂ ಅವುಗಳಂತೆ ಕಾಣಿಸಿಕೊಳ್ಳುವ ಪರಮ ಪುರುಷನಿಗೆ ಬಿಂಬನೆಂದು ಹೆಸರು. ಆ ಬಿಂಬನ ದೆಸೆಯಿಂದ ವಸ್ತುಗಳನ್ನೂ ತಮ್ಮನ್ನೂ ಕನ್ನಡಿಯಲ್ಲಿ ಕಂಡಂತೆ ಕಾಣುವ ಜೀವರು ಪ್ರತಿಬಿಂಬರೆನಿಸಿಕೊಳ್ಳುತ್ತಾರೆ. ಆದುದರಿಂದ ಬಿಂಬನಿಗೂ ಪ್ರತಿಬಿಂಬರಿಗೂ ಪೂರ್ಣಸಾದೃಶ್ಯವುಂಟು. ಅದೇ ಇದು ಎನ್ನುವಂತೆ !ಆದರೆ, ಪ್ರತಿಬಿಂಬವು ಬಿಂಬವಲ್ಲ. ಇದು ಜೀವ–ಬ್ರಹ್ಮರ, ಜಗದ್ವಸ್ತು–ಬ್ರಹ್ಮರ ಏಕತೆಯಲ್ಲ. ಆದುದರಿಂದಲೇ ತಮ್ಮ ತಮ್ಮ ಯೋಗ್ಯತೆಗಳಿಗೆ ನಿಲುಕುವಷ್ಟೇ ಬ್ರಹ್ಮನ ಮಹಿಮೆಯನ್ನು ತಮ್ಮ ತಮ್ಮಲ್ಲಿ ಕಾಣಬಲ್ಲ ಬ್ರಹ್ಮಾದಿ ಜೀವರು ಅವನ ಪೂರ್ಣತೆಯನ್ನು ಎಂದಿಗೂ ತಿಳಿಯಲಾರರು; ಇನ್ನು ಮೀರುವುದೆಲ್ಲಿ ಬಂತು !

**ಅಮೃತಂ ಕ್ಷೇಮಮಭಯಂ ತ್ರಿಮೂರ್ಧ್ನೋಽಧಾಯಿ ಮೂರ್ಧಸು ।**
**ಪಾದಾಸ್ತ್ರಯೋ ಬಹಿಸ್ತ್ವಾಸನ್ನಪ್ರಜಾನಾಂ ಯ ಆಶ್ರಯಾಃ ॥ ೧೯ ॥**

ಅಮೃತಂ = ಅನಂತಾಸನವನ್ನೂ; ಕ್ಷೇಮಂ = ವೈಕುಂಠವನ್ನೂ; ಅಭಯಂ = ಶ್ವೇತದ್ವೀಪವನ್ನೂ; ತ್ರಿಮೂರ್ಧ್ನಃ = ಮೂರು ಉನ್ನತ ಸ್ಥಾನಗಳಲ್ಲಿರುವ ಶ್ರೀಹರಿಯ; ಮೂರ್ಧ್ನಸು = ಮೂರು ಶಿರಃ ಪ್ರಾಯಗಳಾದ ಸ್ಥಾನಗಳಲ್ಲಿ; ಅಧಾಯಿ = ಅವನು ಧರಿಸಿರುವನು; ಅಪ್ರಜಾನಾಂ = ಪ್ರಜನನ ರೂಪವಾದ ಸಂಸಾರಬಂಧನವನ್ನು ಮೀರಿದ, ಆಕಾರಮಾತ್ಯನಾದ ಬಿಂಬನ ದರ್ಶನವುಳ್ಳವರಿಗೆ; ಆಶ್ರಯಾಃ = ಆಶ್ರಯಗಳಾದ; ತ್ರಯಃ ಪಾದಾಃ = ಮೂರು ಅಂಶಗಳು; ಬಹಿಃ ತು = ಬೂರ್ಭುವಃ ಸ್ವರಾದಿ ಮೂರುಲೋಕಗಳ ಹೊರಗೇನೇ; ಆಸನ್ = ಇರತಕ್ಕವುಗಳಾಗಿವೆ.

ಮೂರುಲೋಕಗಳಲ್ಲಿ ಕಂಡುಬರುವುದು ವಿರಾಟ್ಪುರುಷನ ಭಿನ್ನಾಂಶ. ಅವನು ತನ್ನದೇ ಆದ ಪೂರ್ಣಾಂಶಗಳಿಂದ ಅನಂತಾಸನ, ವೈಕುಂಠ, ಶ್ವೇತದ್ವೀಪಗಳೆಂಬ ಮೂರು ಸ್ಥಾನಗಳಲ್ಲಿದ್ದಾನೆ. ಪ್ರಳಯಕಾಲದಲ್ಲಿ ಇತರ ಲೋಕಗಳೆಲ್ಲವೂ ನೀರು, ಬೆಂಕಿ, ಮೊದಲಾದವುಗಳಿಂದ ನಾಶಹೊಂದಿದರೂ ಅನಂತಾಸನ, ವೈಕುಂಠ, ಶ್ವೇತದ್ವೀಪಗಳು ನಾಶ ಹೊಂದುವುದಿಲ್ಲ; ರೂಪಾಂತರದಿಂದ ಇದ್ದಲ್ಲಿಯೇ ಇರುತ್ತವೆ.

**ಅಂತಸ್ತ್ರಿಲೋಕ್ಯಾಸ್ತ್ವಪರೋ ಗೃಹಮೇಧೈರ್ಬೃಹದ್ಧುತಃ ।**
**ಸೃತೀ ವಿಚಕ್ರಮೇ ವಿಷ್ವಕ್ ಸಾಶನಾನಶನೇ ಉಭೇ ॥ ೨೦ ॥**

ತ್ರಿಲೋಕ್ಯಾಃ ಅಂತಃ = ಭೂಮ್ಯಂತರಿಕ್ಷ ಸ್ವರ್ಗಲೋಕಗಳ ಒಳಗೆ; ಗೃಹಮೇಧೈಃ = ಗೃಹಸ್ಥರಿಂದ; ಬೃಹತ್ ಹುತಃ = ಬ್ರಹ್ಮಾರ್ಪಣವೆಂದ ಕರ್ಮಗಳನ್ನು ಅಂಗೀಕರಿಸುವ; ಅಪರಃ = ಪರಮಪುರುಷನ ಇನ್ನೊಂದು ಸ್ವರೂಪಾಂಶವು; ಸಾಶನ ಅನಶನ ಉಭೇ ಸೃತೀ = ಆಹಾರಸೇವನೆಯಿಂದ ಬದುಕುವ ಮನುಷ್ಯರು ಮತ್ತು ಆಹಾರದ ಅವಶ್ಯಕತೆ ಇಲ್ಲದೆ ಇರುವ ದೇವತೆಗಳು ಎಂಬ ಎರಡು ಮಾರ್ಗಗಳುಳ್ಳವರನ್ನು; ವಿಷ್ವಕ್ = ಸಮಗ್ರವಾಗಿ; ವಿಚಕ್ರಮೇ = ಹೊಂದಿ ಇರುವುದು.

ಯಜ್ಞಪುರುಷನ ಈ ಸ್ವಾಂಶವು ದೇವ–ಮಾನುಷರ ಉದ್ಧಾರಾರ್ಥವಾಗಿರುವುದೇ ಹೊರತು, ಅವುಗಳನ್ನಾಶ್ರಯಿಸಿ ಅವುಗಳಂತಿರುವುವಲ್ಲ.

**ಯದವಿದ್ಯಾ ಚ ವಿದ್ಯಾ ಚ ಪುರುಷಸ್ತೂಭಯಾಶ್ರಯಃ ।**
**ತಸ್ಮಾದಂಡಾದ್ವಿರಾಟ್ ಜಜ್ಞೇ ಭೂತೇಂದ್ರಿಯ ಗುಣಾಶ್ರಯಃ ॥ ೨೧ ॥**

ಪುರುಷಃ ತು = ಪುರುಷೋತ್ತಮನಾದವನು; ಯತ್ [illegible] ಯಾವುದು; ಅವಿದ್ಯಾ = ಅಜ್ಞಾನ ಪ್ರಭಾವಿತವೋ; ಚ = ಮತ್ತು; ವಿದ್ಯಾ [illegible] ಜ್ಞಾನ ಪ್ರಧಾನವಾದ; ಉಭಯ = ಎರಡಕ್ಕೂ; ಆಶ್ರಯಃ = ಆಧಾರನಾದ[illegible], ತಸ್ಮಾತ್ [illegible]ತಾತ್ ಮಹದಾದಿ ತತ್ವಗಳ ದೆಸೆಯಿಂದ ಸೃಷ್ಟವಾದ ಬ್ರಹ್ಮಾಂಡದಿಂದ; ಭೂತ ಇಂದ್ರಿಯ ಗುಣ ಆಶ್ರಯಃ = ಭೌತಪ್ರಪಂಚ, ಜೀವಿಗಳು, ಇಂದ್ರಿಯ ಶಕ್ತಿಗಳು ಮತ್ತು ಪಂಚತನ್ಮಾತ್ರ ಪಂಚಭೂತಗಳಿಗೆ ಆಶ್ರಯನಾದ; ವಿರಾಟ್ = ವಿಶ್ವವ್ಯಾಪಕನೂ [illegible]ರೂಪನೂ ಆದ ಪುರುಷನು; ಜಜ್ಞೇ = ಆವಿರ್ಭವಿಸಿದನು.

ಜಡ ಚೇತನಗಳಿಗೂ, ಮಾನವಗಣ ದೇವಗಣಗಳಿಗೂ ಆಶ್ರಯನಾದ ಸೃಷ್ಟಿಕರ್ತನು, ಬ್ರಹ್ಮಾಂಡವನ್ನು ಸೃಷ್ಟಿಸಿ, ಜಡ ಚೇತನಗಳನ್ನು ತನ್ನೊಳಗಿಟ್ಟುಕೊಂಡು, ಬ್ರಹ್ಮಾಂಡದೊಳಗೆ ಪ್ರವೇಶಿಸಿ, ವಿರಾಡ್ರೂಪವನ್ನು ತಾಳಿದನು. ಬ್ರಹ್ಮಾಂಡದೊಳಗೆ ತುಂಬಿದ್ದ ಅಂಡೋದಕದಲ್ಲಿ ವ್ಯಾಪಿಸಿದ ನಾರಾಯಣರೂಪಕ್ಕೂ, ಆ ಜಲದಲ್ಲಿ ಶಯನಿಸಿ ಚತುರ್ಮುಖನಿಗೆ ಜನ್ಮಕೊಟ್ಟ ಪದ್ಮನಾಭ ರೂಪಕ್ಕೂ ವಿರಾಟ್ ಪುರುಷನೆಂದೇ ಹೆಸರು. ಅದು ರೂಪಭೇದವೇ ಹೊರತು ಸ್ವರೂಪ ಭೇದವಲ್ಲ.

**ತದ್ದ್ರವ್ಯಮತ್ಯಗಾದ್ವಿಶ್ವಂ ಗೋಭಿಃ ಸೂರ್ಯ ಇವಾಶ್ರಯಂ ।**
**ಯದಾಸ್ಯ ನಾಭ್ಯಾನ್ನಲಿನಾದಹಮಾಸಂ ಮಹಾತ್ಮನಃ ॥ ೨೨ ॥**

ಸೂರ್ಯಃ = ಸೂರ್ಯನು; ಸ್ವಗೋಭಿಃ = ತನ್ನ ಕಿರಣಗಳಿಂದ; ಆಶ್ರಯಂ = ತನಗೆ ಆಶ್ರಯವಾದ ಆಕಾಶಗತವಸ್ತುಗಳನ್ನು ಹೇಗೆ ಪ್ರಕಾಶಗೊಳಿಸುವನೋ ಹಾಗೆ; ವಿಶ್ವಂ ತದ್ದ್ರವ್ಯಂ = ಬ್ರಹ್ಮಾಂಡದಲ್ಲಿ ಸೃಷ್ಟವಾದ ಭೂತ ಇಂದ್ರಿಯ ಗುಣಗಳನ್ನು ತತ್ತನ್ನಿಯಾಮಕರೆನಿಸುವ ಬ್ರಹ್ಮರುದ್ರ ಇಂದ್ರಾದಿಗಳನ್ನು; ಅತ್ಯಗಾತ್ = ಒಳ ಹೊರಗೆ ವ್ಯಾಪಿಸಿದನು; ಯದಾ = ಯಾವ ಆ ಸಮಯದಲ್ಲಿ; ಅಸ್ಯ ಮಹಾತ್ಮನಃ = ಈ ಮಹಾಪುರುಷನ; ನಾಭ್ಯಾನ್ನಲಿನಾತ್ = ನಾಭೀಕಮಲದ ದೆಸೆಯಿಂದ; ಅಹಂ = ನಾನು; ಆಸಂ = ಜನ್ಮವನ್ನು ಪಡೆದೆನು.

ಸೃಷ್ಟಿಗೆ ಮುಖ್ಯಕಾರಣನಾದವನು ಶ್ರೀಹರಿ. ಅಮುಖ್ಯಕಾರಣ ಚುತುರ್ಮುಖ ಬ್ರಹ್ಮದೇವರು; ಅವರ ಮುಖಾಂತರ ಸೃಷ್ಟಿಯು ನಡೆಯುವುದು. ಶ್ರೀಹರಿಯು ಬ್ರಹ್ಮಾಂಡವನ್ನು ತುಂಬಿದ ವಿರಾಡ್ರೂಪದಿಂದಲೂ ಜಲಶಾಯಿಯಾದ ತನ್ನ ವಿರಾಡ್ರೂಪದಿಂದಲೂ ಪ್ರಕಟನಾದ. ಮೊದಲನೆಯ ವಿರಾಡ್ರೂಪವನ್ನಾಶ್ರಯಿಸಿದ ಚತುರ್ಮುಖನ ವಿರಾಡ್ರೂಪ ಒಂದನ್ನೂ, ಎರಡನೆಯ ಭಗವದ್ವಿರಾಡ್ರೂಪದ ನಾಭೀಕಮಲದಲ್ಲಿ ಜನಿಸಿದ ಚತುರ್ಮುಖನ ಇನ್ನೊಂದು ವಿರಾಡ್ರೂಪವನ್ನೂ

ಗ್ರಹಿಸಬೇಕು. ಈ ಎರಡನೇ ಚತುರ್ಮುಖ ರೂಪವು ಜ್ಞಾನ ಭಕ್ತ್ಯಾದಿ ಲಕ್ಷಣಗಳಿಂದ ರುದ್ರೇಂದ್ರಾದಿಗಳನ್ನು ಬೆಳಗಿಸಿ ಮೀರಿಸುವುದಾಗಿತ್ತು.

**ನಾವಿಂದಂ ಯಜ್ಞಸಂಭಾರಾನ್ಪುರುಷಾವಯವಾನೃತೇ ।**
**ತೇಷು ಯಜ್ಞಾಶ್ಚಪಶವಃ ಸವನಸ್ಪತಯಃ ಕುಶಾಃ ॥ ೨೩ ॥**

ಪುರುಷ ಅವಯವಾನ್ ಋತೇ = ಬ್ರಹ್ಮಾಂಡವನ್ನು ತುಂಬಿದ ಪುರುಷರೂಪದ ಅವಯವಗಳ ಹೊರತು; ಯಜ್ಞಸಂಭಾರಾನ್ = ಯಜ್ಞಕಾರ್ಯಕ್ಕೆ ಆವಶ್ಯಕವಾದ ವಸ್ತು ವಿಶೇಷಗಳನ್ನು; ನಾವಿಂದಂ = ನಾನು ಪಡೆಯಲಾಗಲಿಲ್ಲ; ತೇಷು = ಆ ಅವಯವಗಳಲ್ಲಿಯೇ; ಯಜ್ಞಾಃ = ಅಗ್ನಿಷ್ಟೋಮಾದಿ ಯಜ್ಞಕ್ರಿಯೆಗಳು; ಪಶವಃ = ಬಲಿಪಶುಗಳು; ವನಸ್ಪತಯಃ = ಅಶ್ವತ್ಥಾದಿ ವೃಕ್ಷವಸ್ತುಗಳು; ಕುಶಾಃ = ದರ್ಭ ಮುಂತಾದವು; ಸಃ = ಕೂಡಿಕೊಂಡಿದ್ದವು.

ತನ್ನನ್ನು ಸೃಷ್ಟಿಗೆ ತಂದ ದಯಾಮಯನನ್ನು ಭಕ್ತಿಯಿಂದ ಪೂಜಿಸಲು ಸೃಷ್ಟವಾದ ಭೌತದ್ರವ್ಯಗಳು ಇನ್ನೂ ಉಂಟಾಗಿರಲಿಲ್ಲವಾದುದರಿಂದ ಅವು ಯಾವ ಭಗವಂತನ ಅವಯವಗಳ ದೆಸೆಯಿಂದ ಉತ್ಪನ್ನವಾಗಬೇಕೋ ಆ ಅವಯವಗಳಲ್ಲಿಯೇ ಅವು ಹುದುಗಿವೆಯೆಂದು ಭಾವಿಸಿ ಮಾನಸಿಕ ಯಜ್ಞವನ್ನು ಚತುರ್ಮುಖನು ಆಚರಿಸಿದುದನ್ನು ಇಲ್ಲಿ ತಿಳಿಸಿದ್ದಾರೆ. ಈ ಯಜ್ಞದಿಂದ ನಾವು ತಿಳಿಯಬೇಕಾದುದೇನೆಂದರೆ, ಈ ಲೋಕದ ಜನರು ಕಂಡಂತೆ ಯಜ್ಞಗಳನ್ನಾಚರಿಸುವಾಗ, ಭೌತಯಜ್ಞಸಾಮಗ್ರಿಗಳನ್ನೇ ಪ್ರಧಾನವೆಂದು ತಿಳಿಯದೆ ಅವುಗಳಿಗೆ ಉತ್ಪತ್ತಿ ಸ್ಥಾನಗಳೂ ಆಶ್ರಯಗಳೂ ಆದ ವಿರಾಟ್ಪುರುಷನ ಅವಯವಗಳನ್ನು ಚಿಂತಿಸಿ, ಆ ಅವಯವಗಳಲ್ಲಿಯೂ ಯಜ್ಞಕ್ರಿಯೆ ನಡೆಸುವವರಲ್ಲಿಯೂ ಇರುವ ಏಕೈಕ ಪುರುಷನನ್ನು ಧ್ಯಾನಿಸಬೇಕು ಆಗಲೇ "ನಾನು" ಎಂಬ ದುರ್ಭಾವನೆ ಇಲ್ಲದೆ ಯಜ್ಞಕ್ರಿಯೆಯು ಸಾರ್ಥಕವಾಗುವುದು.

**ಇದಂ ಚ ದೇವ ಯಜನಂ ಕಾಲಶ್ಚೋರುಗುಣಾನ್ವಿತಃ ।**
**ವಸೂನ್ಯೋಷಧಯಃ ಸ್ನೇಹಾ ರಸ ಲೋಹ ಮೃದೋಜಲಂ ॥ ೨೪ ॥**

ಇದಂ ಚ = ಇದಾದರೋ; ದೇವ ಯಜನಂ = ದೇವತೆಗಳನ್ನೇ ಯಜ್ಞಭೂಮಿಯಾಗಿ ಉಳ್ಳದ್ದು; ಕಾಲಃ ಉರುಗುಣಾನ್ವಿತಃ = ವಸಂತ ಗ್ರೀಷ್ಮಾದಿ ಕಾಲವಿಶೇಷಗಳು ಮತ್ತು ಅವುಗಳ ಧರ್ಮಗಳು; ವಸೂನಿ = ಸುವರ್ಣಾದಿ ದ್ರವ್ಯಗಳು;

ಓಷಧಯಃ = ಭತ್ತ, ಗೋಧಿ ಮೊದಲಾದವು; ಸ್ನೇಹಾಃ = ತುಪ್ಪ ಮೊದಲಾದ ಜಿಡ್ಡಿನ ಪದಾರ್ಥಗಳು; ರಸಾಃ = ಹಾಲು, ಬೆಲ್ಲ ಮೊದಲಾದ; ಲೋಹಾಃ = ಕಬ್ಬಿಣ, ಹಿತ್ತಾಳೆ ಮೊದಲಾದವು; ಮೃದಃ = ಇಟ್ಟಿಗೆಗಳಿಗೆ ಬೇಕಾದ ಶುದ್ಧ ಮೃತ್ತಿಕೆಗಳು; ಜಲಂ = ಗಂಗಾದಿ ಜಲಗಳು.

ಯಜ್ಞಾಚರಣೆಗೆ ಸಾಮಗ್ರಿಗಳ ವಿಚಾರವನ್ನು ಇಲ್ಲಿ ಹೇಳಿದ್ದಾರೆ. ಬ್ರಹ್ಮದೇವರು ಆಚರಿಸಿದ ಈ ಪ್ರಥಮ ಯಜ್ಞದಲ್ಲಿ ಅವುಗಳು ಎಲ್ಲಿದ್ದುವು ಎಂದರೆ, ಅವುಗಳ ಸೃಷ್ಟಿಗೆ ಮೂಲಕಾರಣನಾದ ವಿರಾಟ್ಪುರುಷನ ಅವಯವಗಳಲ್ಲಿಯೇ ಇರುವಂತೆ ಭಾವಿಸಿದರು, ಮಾನಸಿಕ ಯಜ್ಞವನ್ನಾಚರಿಸಿದರು ಎಂದರ್ಥ. ಈಗ ನಾವೂ ಮಾನಸ ಪೂಜೆಯನ್ನಾಚರಿಸಬಹುದು; ಅದು ಬಹಳ ತಿಳಿವಳಿಕೆಯಿಂದಲೂ, ಅಭ್ಯಾಸದಿಂದಲೂ ಸಾಧ್ಯವಾಗುವುದು. ಬಾಹ್ಯ ನಲಕರಣೆಗಳಿಂದ ಕಂಡಂತೆ ವಿಗ್ರಹಾದಿಗಳನ್ನಿಟ್ಟುಕೊಂಡು ಪೂಜಿಸುವಾಗ, ವಿಗ್ರಹಾದಿಗಳಲ್ಲಿಯೂ ಪೂಜಾ ಸಾಮಗ್ರಿಗಳಲ್ಲಿಯೂ, ಪೂಜಕರಲ್ಲಿಯೂ ಇರುವ ವಿರಾಟ್ಪುರುಷನ ಅಂಶಗಳನ್ನು ಕುರಿತು ಚಿಂತಿಸುವುದು ಅಗತ್ಯ. ಅದು ಮಾನಸಪೂಜೆಗೆ ಸಹಾಯಕವಾಗುವುದು. ಕಲಿಯುಗವು ಮುಂದುವರಿದಂತೆಲ್ಲಾ ಸಜ್ಜನರಿಗೆ ಮಾನಸಪೂಜೆಯ ಅವಶ್ಯಕತೆ ಹೆಚ್ಚು ಹೆಚ್ಚಾಗುವುದು. ಈಗ ಹುಟ್ಟಿಬರುವ ಸಜ್ಜನರೂ ಜನ್ಮಾಂತರಗಳಲ್ಲಿ ವಿಶೇಷ ಅಭ್ಯಾಸಮಾಡಿ ಸಂಸ್ಕಾರಪೂರಿತ ಜೀವಿಗಳೇ ಆಗಿರುತ್ತಾರೆ.

**ಋಚೋ ಯಜೂಂಷಿ ಸಾಮಾನಿ ಚಾತುರ್ಹೋತ್ರಂಚ ಸತ್ತಮ ।**
**ನಾಮಧೇಯಾನಿ ಮಂತ್ರಾಶ್ಚ ದಕ್ಷಿಣಾಶ್ಚವ್ರತಾನಿಚ ॥ ೨೫ ॥**

ಸತ್ತಮ = ಸುಗುಣವುಳ್ಳವನೇ; ಋಚಃ = ಛಂದೋಬದ್ಧವಾದ ಕೃತಿಗಳು (ಋಕ್ಕುಗಳು); ಯಜೂಂಷಿ = ಛಂದೋಬದ್ಧವಲ್ಲದ ವಿವರಣ ವಾಕ್ಯಗಳು; ಸಾಮಾನಿ = ಗಾಯನ ಯೋಗ್ಯವಾದ ಕೃತಿಗಳು; ಚಾತುರ್ಹೋತ್ರಂ = ಅಧ್ವರ್ಯು ಮೊದಲಾದ ನಾಲ್ವರು ನಡೆಸುವ ಕ್ರಿಯೆಗಳು; ಚ = ಮತ್ತು; ನಾಮಧೇಯಾನಿ = ಇಂದ್ರ ಮೊದಲಾಗಿ ಉಚ್ಚರಿಸುವ ಹೆಸರುಗಳು; ಚ = ಮತ್ತು; ಮಂತ್ರಾಃ = ಹನ್ನೆರಡಕ್ಷರಗಳ ಮತ್ತು ಕಡಿಮೆಯ ಬೀಜಮಂತ್ರಗಳು ಮತ್ತು ಹೆಚ್ಚು ಅಕ್ಷರಗಳಿದ್ದೂ 'ನಮಃ' ಎಂಬುದರಿಂದ ಕೂಡಿದ ಮೂಲಮಂತ್ರಗಳು; ಚ = ಮತ್ತು; ದಕ್ಷಿಣಾಃ = ಹೋತ್ರಾದಿಗಳಿಗೆ ದಾನರೂಪವಾಗಿ ಕೊಡುವ ದ್ರವ್ಯಗಳು; ಚ = ಮತ್ತು; ವ್ರತಾನಿ = ಬ್ರಹ್ಮಚರ್ಯಾದಿ ನಿಯಮಗಳು ಈ ಎಲ್ಲವೂ ವಿರಾಟ್ಪುರುಷನ ದೆಸೆಯಿಂದಲೇ ಒದಗಿದವು.

ಯಜ್ಞಾಚರಣೆಗೆ ಆವಶ್ಯಕವಾದ ಭಾವ, ದ್ರವ್ಯ, ಕ್ರಿಯೆಗಳೆಲ್ಲವೂ ವಿರಾಟ್ಪುರುಷನಿಂದಲೇ ಪ್ರವೃತ್ತವಾದುವು.

**ದೇವತಾನುಕ್ರಮಃ ಕಲ್ಪಃ ಸಂಕಲ್ಪಃ ಸೂತ್ರಮೇವ ಚ ।**
**ಗತಯೋ ಮತಯಃ ಶ್ರದ್ಧಾ ಪ್ರಾಯಶ್ಚಿತ್ತಂ ಸಮರ್ಪಣಂ ॥ ೨೬ ॥**

ದೇವತಾ ಅನುಕ್ರಮಃ = ಯಜ್ಞದಲ್ಲಿ ಪೂಜಿಸಲ್ಪಡುವ ದೇವತೆಗಳ ತಾರತಮ್ಯ; ಕಲ್ಪಃ = ಪ್ರಯೋಗ ವಿಧಾನ; ಸಂಕಲ್ಪಃ = ಉದ್ದೇಶ ವಿವರಣ; ಸೂತ್ರಂ ಏವ ಚ = ಕರ್ಮಮೀಮಾಂಸಾ, ದೈವಮೀಮಾಂಸಾ ಸೂತ್ರಗಳು; ಗತಯಃ = ಯಜ್ಞಕ್ರಿಯೆಯಿಂದ ಅಪೇಕ್ಷಿತಗಳಾದ ಸ್ವರ್ಗಾದಿಸ್ಥಾನಗಳು; ಮತಯಃ = ಜ್ಞಾನಸಾಧನಗಳು; ಶ್ರದ್ಧಾ = ಫಲಪ್ರಾಪ್ತಿಯಲ್ಲಿ ವಿಶ್ವಾಸ; ಪ್ರಾಯಶ್ಚಿತ್ತಂ = ವಿಘ್ನಪರಿಹಾರ ಕ್ರಿಯೆಗಳು; ಸಮರ್ಪಣಂ = ಕೃಷ್ಣಾರ್ಪಣಬುದ್ಧಿ ಇವುಗಳೂ ಕೂಡ ವಿರಾಟ್ಪುರುಷನಿಂದಲೇ ಉಂಟಾದವು.

ಎಲ್ಲಾ ಕ್ರಿಯೆಗಳಿಗಿಂತಲೂ ಅತಿ ಮುಖ್ಯವಾದುದು ಸಮರ್ಪಣ; 'ನಾನಲ್ಲ, ನನ್ನಿಂದ ಅಲ್ಲ; ನಿನ್ನಿಂದಲೇ' ಎಂದು ಜೀವರ ಅಸ್ವಾತಂತ್ರ್ಯವನ್ನು ಭಗವಂತನ ಸರ್ವಸ್ವಾತಂತ್ರ್ಯವನ್ನೂ ನೆನೆದು ಪೂರ್ಣಫಲಭಾಗಿಗಳಾಗುವುದು ಸಮರ್ಪಣೆ.

**ಪುರುಷಾವಯವೈರೇತೈಃ ಸಂಭಾರಾಃ ಸಂಭೃತಾಮಯಾ ।**
**ಇತಿ ಸಂಭೃತ ಸಂಭಾರಃ ಪುರುಷಾವಯೈರಹಂ ।**
**ತಮೇವ ಪುರುಷಂ ಯಜ್ಞಂ ತೇನೈವಾಯಜಮೀಶ್ವರಂ ॥ ೨೭ ॥**

ಏತೈಃ ಪುರುಷಾವಯವೈಃ = ಈಗ ಹೇಳಿದ ರೀತಿಯಲ್ಲಿ ವಿರಾಟ್ಪುರುಷನ ದೇಹದ ಅಂಶಗಳಿಂದ; ಸಂಭಾರಾಃ = ಯಜ್ಞಕ್ಕೆ ಬೇಕಾದ ದ್ರವ್ಯಗಳು; ಮಯಾ = ನನ್ನಿಂದ; ಸಂಭೃತಾಃ = ಶೇಖರಿಸಲ್ಪಟ್ಟವು; ಇತಿ = ಈ ರೀತಿಯಾಗಿ; ಪುರುಷಾವಯವೈಃ = ಆ ಪುರುಷನ ಅವಯವಗಳಿಂದ; ಸಂಭೃತ ಸಂಭಾರಃ = ಸಂಪಾದಿತಗಳಾದ ದ್ರವ್ಯಗಳನ್ನುಳ್ಳವನಾಗಿ; ಅಹಂ = ನಾನು; ತೇನ ಏವ = ನನ್ನಲ್ಲಿಯೂ ದ್ರವ್ಯಗಳಲ್ಲಿಯೂ ಪ್ರವಿಷ್ಟನಾದ ಅವನಿಂದಲೇ; ತಮ್ ಏವ ಯಜ್ಞಪುರುಷಂ = ಪೂಜಾರ್ಹನಾದ ಅವನನ್ನೇ; ಅಯಜಂ = ಅರ್ಚಿಸಿದನು.

ಪೂಜಾದ್ರವ್ಯಗಳು ಭಗವಂತನಿಂದ ಬಂದುವೆಂದರೆ ಅವನೇ ದ್ರವ್ಯರೂಪವಾದನೆಂದು ತಿಳಿಯುವುದು ವಿವರ್ತವಾದವೆನಿಸಿ, ತಪ್ಪಾಗುವುದು. ಬ್ರಹ್ಮದೇವರು ಆಚರಿಸಿದ ಈ ಯಜ್ಞದಲ್ಲಿ ಜಡದ್ರವ್ಯಗಳ ಉತ್ಪತ್ತಿ ಇನ್ನೂ ಆಗಿರಲಿಲ್ಲ;

ಆದರೆ ಆ ದ್ರವ್ಯಗಳ ಮೂಲಕಾರಣವಾದ ಜಡಪ್ರಕೃತಿಯಲ್ಲಿ ಪ್ರವಿಷ್ಟನಾಗಿಯೇ ಭಗವಂತನು ಬ್ರಹ್ಮಾಂಡದೊಳಗೆ ವಿರಾಡ್ರೂಪವನ್ನು ತಾಳಿದ್ದನು. ಅವನ ಚಿದಾತ್ಮಕವಾದ ಅವಯವಗಳು ಅವನ ಸಂಕಲ್ಪದಿಂದ ಹೇಗೆ ಜಡದ್ರವ್ಯಗಳ ಉತ್ಪತ್ತಿಗೆ ಕಾರಣಗಳಾಗುವುವೆಂಬುದನ್ನು ಬ್ರಹ್ಮದೇವರು ಮಾನಸಿಕವಾಗಿ ಕಂಡು ಪೂಜಿಸಿದರೆಂದು ತಿಳಿಯುವುದು ಸೂಕ್ತವಾದುದು. ಭಗವಂತನು ತಮ್ಮಲ್ಲಿ ನಿಂತು ಜಗತ್ತಿನ ಸೃಷ್ಟಿಯನ್ನು ಯಾವರೀತಿಯಲ್ಲಿ ಮಾಡುವನೆಂಬುದು ಬ್ರಹ್ಮದೇವರಿಗೆ ಗೋಚರವಾಯಿತೆಂಬುದು ಇದರ ಭಾವ.

**ತತಸ್ತೇ ಭ್ರಾತರ ಇಮೇ ಪ್ರಜಾನಾಂ ಪತಯೋ ನವ ।**
**ಅಯಜನ್ವ್ಯಕ್ತ ಮವ್ಯಕ್ತಂ ಪುರುಷಂ ಸು ಸಮಾಹಿತಾಃ ॥ ೨೮ ॥**

ತತಃ = ನನ್ನಿಂದ ಆಚರಿಸಲ್ಪಟ್ಟ ಈ ಸರ್ವೋತ್ತಮವಾದ ಯಜ್ಞವನ್ನು ಗಮನಿಸಿದ ನಂತರ; ತೇ ಭ್ರಾತರಃ = ನಿನ್ನ ಸಹೋದರರಾದ ಮರೀಚಿ ಸನಕಾದಿಗಳೂ; ನವ ಪ್ರಜಾನಾಂ ಪತಯಃ = ದಕ್ಷನೇ ಮೊದಲಾದ ನವ ಪ್ರಜಾಪತಿಗಳೂ; ಸುಸಮಾಹಿತಾಃ = ಪ್ರಾಮಾಣ್ಯ ಬುದ್ಧಿಯಿಂದ ಶ್ರದ್ಧೆಯುಳ್ಳವರಾಗಿ; ವ್ಯಕ್ತಂ = ಯಥಾಶಕ್ತಿ ಬುದ್ಧಿಗ್ರಾಹ್ಯನೂ; ಅವ್ಯಕ್ತಂ = ಬುದ್ಧ್ಯತೀತನೂ ಆದ; ಪುರುಷಂ = ಬಹು ಫಲಪ್ರದನಾದ ಭಗವಂತನನ್ನು; ಅಯಜನ್ = ಸರ್ವಸಮರ್ಪಣ ಬುದ್ಧಿಯಿಂದ ಪೂಜಿಸಿದರು.

ಬ್ರಹ್ಮದೇವರು ವೇದೋಕ್ತ ಎಲ್ಲಾ ವಿಷಯಗಳನ್ನೂ, ವೇದಗಳಲ್ಲಿ ಕಂಡುಬಾರದ ಕೆಲವು ಹೆಚ್ಚು ಅಂಶಗಳನ್ನೂ ಬಲ್ಲವರು; ಸನಕಾದಿಗಳು ವೇದೋಕ್ತ ವಿಷಯಗಳನ್ನು ಮಾತ್ರ ಅವರವರ ಬುದ್ಧಿಗೋಚರವಾದಷ್ಟು ಮಾತ್ರ ತಿಳಿಯಬಲ್ಲವರು. ಆದುದರಿಂದ, ಸರ್ವಜ್ಞರೆನಿಸಿದ ಬ್ರಹ್ಮವಾಯುಗಳಿಗಿಂತ ಇತರ ದೇವತೆಗಳು ಅವರರು ಎಂಬ ತಾರತಮ್ಯ ತತ್ವವು ಇಲ್ಲಿ ಸೂಚಿತವಾಗಿದೆ. ಈ ದೇವತೆಗಳು ಉತ್ತಮ ಜ್ಞಾನಿಗಳಾದುದರಿಂದ ಬ್ರಹ್ಮದೇವರ ಆಚರಣೆಯನ್ನು ಪ್ರಾಮಾಣಿಕವೆಂದು ತಿಳಿದು, ತಾವೂ ಯಜ್ಞರೂಪೀ ಭಗವಂತನನ್ನು ಅರ್ಚಿಸಿ ಕೃತಾರ್ಥರಾದರು. ಮುಂದೆ ಸೃಷ್ಟಿಯಲ್ಲಿ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸಲು ಸಮರ್ಥರಾದರು.

**ತತಶ್ಚ ಮನವಃ ಕಾಲ ಈಜಿರೇ ಋಷಯೋ ಪರೇ ।**
**ಪಿತರೋ ವಿಬುಧಾ ದೈತ್ಯಾ ಮನುಷ್ಯಾಃ ಕ್ರತುಭಿರ್ವಿಭುಂ ॥ ೨೯ ॥**

ತತಃ ಚ = ಈಗಲಾದರೋ; ಕಾಲೇ = ವಸಂತಾದಿ ಕಾಲಗಳಲ್ಲಿ; ಅಪರೇ = ಈ ಹಿಂದೆ ಹೇಳಿದವರಲ್ಲದೆ ಇತರರಾದ; ಮನವಃ = ಸ್ವಾಯಂಭುವಾದಿ ಮನುಗಳು; ಋಷಯಃ = ಋಷಿಗಳೂ; ಪಿತರಃ = ಅಗ್ನಿಷ್ವಾತ್ತಾದಿ ಪಿತೃದೇವತೆಗಳೂ; ವಿಬುಧಾಃ =

ಇಂದ್ರಾದಿ ದೇವತೆಗಳೂ; ದೈತ್ಯಾಃ = ಪ್ರಹ್ಲಾದಾದಿ ದೈತ್ಯಕುಲ ಸಂಜಾತರೂ; ಮನುಷ್ಯಾಃ = ಮನುಷ್ಯೋತ್ತಮರೂ; ವಿಭುಂ = ದ್ರವ್ಯಕರ್ಮಕರ್ತೃಗಳಲ್ಲಿ ವ್ಯಾಪ್ತನಾದ ಭಗವಂತನನ್ನು; ಕ್ರತುಭಿಃ = ವಿವಿಧ ಯಜ್ಞಗಳಿಂದ; ಈಜಿರೇ = ಪೂಜಿಸಲಾರಂಭಿಸಿದರು.

ಯಜ್ಞಗಳ ಸ್ವರೂಪವೂ, ಪ್ರಾಮಾಣ್ಯವೂ, ಸಾರ್ಥಕತೆಯೂ ಮೇಲಿನ ಶ್ಲೋಕಗಳಲ್ಲಿ ಸುವ್ಯಕ್ತವಾಗಿರುವುವು. ೧೨ನೇ ಶ್ಲೋಕದ ಎರಡನೇ ಪಾದದಿಂದ ಹಿಡಿದು ಇಲ್ಲಿಯವರೆಗೆ ಹೇಳಿದುದೆಲ್ಲಾ ಪುರುಷಸೂಕ್ತದ ವ್ಯಾಖ್ಯಾನವೇ ಆಗಿದೆ.

**ನಾರಾಯಣೇ ಭಗವತಿ ತದಿದಂ ವಿಶ್ವಮಾಹಿತಂ ।**
**ಗೃಹೀತ ಮಾಯೋರುಗುಣೇ ಸರ್ಗಾದಾವಗುಣೇಸ್ವತಃ ॥ ೩೦ ॥**

ಸರ್ಗಾದೌ = ಸೃಷ್ಟಿಗೆ ಪೂರ್ವದಲ್ಲಿ; ಸ್ವತಃ ಅಗುಣೇ = ಸ್ವರೂಪತಃ ಗುಣಸಂಬಂಧರಹಿತನಾದರೂ; ಗೃಹೀತ ಮಾಯಾ ಉರುಗುಣೇ = ತನ್ನ ಅಚಿಂತ್ಯ ಸಾಮರ್ಥ್ಯದಿಂದ ಜಗದ್ವಸ್ತುಗಳಲ್ಲಿ ವ್ಯಾಪಿಸಿ ಅವುಗಳಿಗೆ ಆಧಾರನಾದ ಕಲ್ಯಾಣಗುಣ ಪೂರ್ಣನಾದ; ಭಗವತಿ = ಸಕಲೈಶ್ವರ್ಯ ಸಂಪನ್ನನಾದ; ನಾರಾಯಣೇ = ಶ್ರೀಮನ್ನಾರಾಯಣನಲ್ಲಿ; ತತ್ ಇದಂ ವಿಶ್ವಂ = ವಿಸ್ತಾರವಾಗಿ ವರ್ಣಿಸಿದ ಈ ವಿಶ್ವವು; ಆಹಿತಂ = ಧರಿಸಲ್ಪಟ್ಟಿದೆ.

ಜೀವರು ಸ್ವರೂಪತಃ ಗುಣಸಂಬಂಧವಿಲ್ಲದವರಾದರೂ, ಅನಾದಿ ಅಜ್ಞಾನಬದ್ಧರಾಗಿರುವುದರಿಂದ ಅವರಿಗೆ ಗುಣಸಂಬಂಧ ಕಲ್ಪಿತವಾಗುವುದು. ಭಗವಂತನು ಎಲ್ಲವನ್ನೂ ತನ್ನಲ್ಲಿ ಧರಿಸಿದ್ದರೂ ಸದಾ ಗುಣಸಂಬಂಧವಿಲ್ಲದವನಾಗಿ ನಿರ್ಗುಣನೆನಿಸುವನು.

**ಸೃಜಾಮಿ ತನ್ನಿಯುಕ್ತೋಽಹಂ ಹರೋ ಹರತಿ ತದ್ವಶಃ ।**
**ವಿಶ್ವಂ ಪುರುಷರೂಪೇಣ ಪರಿಪಾತಿತ್ರಿಶಕ್ತಿಧೃಕ್ ॥ ೩೧ ॥**

ತತ್ ನಿಯುಕ್ತಃ = ಸರ್ವತ್ರ ವ್ಯಾಪ್ತಿಯಾದ ಅವನಿಂದ ಪ್ರೇರಿತನಾಗಿ; ಅಹಂ = ನಾನು; ಸೃಜಾಮಿ = ಸೃಷ್ಟಿಯನ್ನು ಮಾಡುತ್ತೇನೆ; ತದ್ವಶಃ = ಅವನ ಅಧೀನನಾಗಿ; ಹರಃ = ಶಿವನು; ಹರತಿ = ಲಯಕಾರ್ಯವನ್ನು ನಡೆಸುತ್ತಾನೆ; ಪುರುಷ ರೂಪೇಣ = ತನ್ನ ವಿಷ್ಣುರೂಪದಿಂದ; ತ್ರಿಶಕ್ತಿಧೃಕ್ = ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳ ಶಕ್ತಿಗಳನ್ನು ಪ್ರಕಟಿಸುವವನಾಗಿ; ವಿಶ್ವಂ = ಜಗತ್ತನ್ನು; ಪರಿಪಾತಿ = ರಕ್ಷಿಸುತ್ತಾನೆ.

ಬ್ರಹ್ಮನಲ್ಲಿ ಬ್ರಹ್ಮನಾಗಿ, ಸ್ವಯಂ ವಿಷ್ಣುವಾಗಿ, ಶಿವನಲ್ಲಿ ಶಿವನಾಗಿ ಎಲ್ಲವನ್ನೂ ನಡೆಸುವವನು ಪುರಷೋತ್ತಮನೇ.

**ಇತಿ ತೇಭಿಹಿತಂ ತಾತ ಯಥೇದಮನುಪೃಚ್ಛಸಿ ।**
**ನಾನ್ಯದ್ಭಗವತಃ ಕಿಂಚಿದ್ಭಾವ್ಯಂ ಸದಸದಾತ್ಮಕಂ ॥ ೩೨ ॥**

ತಾತ = ಮಗೂ; ಯಥಾ ಪೃಚ್ಛಸಿ = ನೀನು ಪ್ರಶ್ನಿಸಿದಂತೆ; ಇದಂ = ಈ ತತ್ತ್ವವು; ಇತಿ = ಈ ಪ್ರಕಾರವಾಗಿ; ತೇ = ನಿನಗೆ; ಅನು ಅಭಿಹಿತಂ = ಕ್ರಮವಾದ ರೀತಿಯಲ್ಲಿ ಹೇಳಲಾಯಿತು; ಭಗವತಃ ಅನ್ಯತ್ = ಭಗವಂತನನ್ನು ಬಿಟ್ಟು ಬೇರೆಯದಾದ; ಕಿಂಚಿತ್ ಸತ್ ಅಸದಾತ್ಮಕಂ = ಗೋಚರವಾದ ಮತ್ತು ಅಗೋಚರವಾದ ಯಾವುದೊಂದೂ; ನಾ ಭಾವ್ಯಂ = ಇರುವುದೆಂದು ತಿಳಿಯಬಾರದು.

ಅಸತ್ ಎಂದರೆ ಇಲ್ಲದುದು ಎಂದು ಅರ್ಥಮಾಡಬಾರದು. ಇದ್ದಂತೆ ಕಾಣದಿರುವುದು ಎಂಬುದು ಅದರ ಅರ್ಥ. ಸ್ಪಷ್ಟವಾದ ಜಗತ್ತು ಸದ್ರೂಪವಾದುದೆಂದೂ ಅದರ ಮೂಲಕಾರಣವಾದ **ಅವ್ಯಕ್ತ** ಪ್ರಕೃತಿಯು ನಮ್ಮ ಕಣ್ಣೆದುರಿಗೆ ಇಲ್ಲದಿರುವುದೆಂದೂ ತಿಳಿಯಬೇಕು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ. ಸತ್ ಎಂದರೆ ಸ್ವತಂತ್ರ ಅಸ್ತಿತ್ವವುಳ್ಳ ಪರಬ್ರಹ್ಮವೆಂದೂ, 'ಅ + ಸತ್ ಎಂದರೆ 'ಅ'ಕಾರವಾಚ್ಯನಾದ ಅವನ ಬಲದಿಂದ ಇರುವ ಅಸ್ವತಂತ್ರ ವಸ್ತುವೆಂದೂ ಅರ್ಥವಾಗುವುದು. ಆದುದರಿಂದ ಜಗತ್ತು ಅಸತ್ಯವೆಂದರೆ ಪರಮಾತ್ಮನ ಅಧೀನವೆಂದು ಅರ್ಥವೇ ಹೊರತು ಇಲ್ಲದುದು ಇದ್ದಂತೆ ಕಾಣುವ ಭ್ರಾಂತಿ ಎಂದಲ್ಲ.

ಎಲ್ಲವೂ ಬ್ರಹ್ಮನ ಅಧೀನವೆಂದು ಹೇಳಿ, ಸೃಷ್ಟಿಕರ್ತನೆಂದು ಜಗತ್ತಿನಲ್ಲಿ ಕರೆಸಿಕೊಳ್ಳುವ ತಾನೂ ಅಸ್ವತಂತ್ರನೆಂದು ಚತುರ್ಮುಖ ಬ್ರಹ್ಮದೇವರು ನಾರದರಿಗೆ ತಿಳಿಸಿಕೊಟ್ಟರು.

**ನ ಭಾರತೀಮೇಂಗ ಮೃಷೋಪಲಕ್ಷ್ಯತೇ**
**ನಕರ್ಹಿಚಿನ್ಮೇ ಮನಸೋ ಮೃಷಾಗತಿಃ ।**
**ನಮೇ ಹೃಷೀಕಾಣಿ ಪತಂತ್ಯಸತ್ಪಥೇ**
**ಯನ್ಮೇ ಹೃದೌತ್ಕಂಠ್ಯವತಾ ಧೃತೋ ಹರಿಃ ॥ ೩೩ ॥**

ಅಂಗ = ಪ್ರಿಯ ನಾರದಾ; ಮೇ ಭಾರತೀ = ನನ್ನ ಮಾತು; ನ ಮೃಷಾ ಉಪಲಕ್ಷ್ಯತೇ = ಸುಳ್ಳಾಗಿರುವುದಿಲ್ಲ; ಮೇ ಮನಸಃ ಗತಿಃ = ನನ್ನ ಮನಸ್ಸಿನ ಪ್ರವೃತ್ತಿಯು; ಕರ್ಹಿಚಿತ್ = ಯಾವ ಕಾರಣದಿಂದಲೂ; ನಮೃಷಾ = ತಪ್ಪಾಗಿರುವುದಿಲ್ಲ; ಮೇ ಹೃಷೀಕಾಣಿ = ನನ್ನ ಇಂದ್ರಿಯಗಳು; ಅಸತ್ಪಥೇ = ತಪ್ಪು ದಾರಿಯಲ್ಲಿ; ನಪತಂತಿ = ಸಾಗುವುದಿಲ್ಲ; ಔತ್ಕಂಠ್ಯವತಾ ಮೇ ಹೃದಾ = ಏಕಾಂತ ಭಕ್ತಿಯಿಂದ ತುಂಬಿದ ನನ್ನ ಹೃದಯದಿಂದ; ಹರಿಃ = ಶ್ರೀಹರಿಯು; ಧೃತಃ = ಧರಿಸಲ್ಪಟ್ಟಿರುವನು.

ಬ್ರಹ್ಮ ಪದವಿಗೆ ಬರುವ ಋಜುಗಣದವರ ಇಂದ್ರಿಯ ಮನೋ ಹೃದಯಗಳು ಈ ರೀತಿಯಾಗಿಯೇ ಇರತಕ್ಕವುಗಳು. ಬ್ರಹ್ಮ ವಾಯುಗಳು ಈ ದಿಸೆಯಲ್ಲಿ ಪರಿಪಕ್ವತೆಯುಳ್ಳವರು. ಋಜುಗಳ ಹೊರತು ಉಳಿದ ಎಲ್ಲಾ ಜೀವರು ಕರ್ಮಾನುಗುಣವಾಗಿ ಭ್ರಾಂತಿಗೆ ಒಳಗಾಗತಕ್ಕವರು; ಸತ್ವಗುಣದ ಪ್ರಾಬಲ್ಯವಿದ್ದಾಗ ಮಾತ್ರ ಅವರ ತಿಳಿವಳಿಕೆ ಸ್ವಚ್ಛವಾಗಿರುವುದು. ಬ್ರಹ್ಮ ವಾಯುಗಳ ಮಾತುಗಳು ಮತ್ತು ಅವರ ಬಲದಿಂದ ಇತರರು ಹೇಳುವ ಮಾತುಗಳು ಮಾತ್ರ ಪ್ರಾಮಾಣಿಕವಾದುವು.

**ಸೋಽಹಂ ಸಮಾಮ್ನಾಯಮಯಸ್ತಪೋಮಯಃ**
**ಪ್ರಜಾಪತೀನಾಮಭಿವಂದಿತಃ ಪತಿಃ ।**
**ಆಸ್ಥಾಯ ಯೋಗಂ ನಿಪುಣಂ ಸಮಾಹಿತಸ್ತಂ**
**ನಾಧ್ಯಗಚ್ಛಂ ಯತ ಆತ್ಮಸಂಭವಃ** ॥ ೩೪ ॥

ಸಃ ಅಹಂ = ನಿರ್ದುಷ್ಟಮನೋವ್ಯಾಪಾರವುಳ್ಳ ನಾನು; ಸಮಾಮ್ನಾಯಮಯಃ = ಚೆನ್ನಾಗಿ ವೇದಾರ್ಥಗಳನ್ನು ಗ್ರಹಿಸಿ ವೇದಮಯನೆನಿಸಿದ್ದೇನೆ; ತಪೋಮಯಃ = ತಪಸ್ವಿಯಾಗಿದ್ದೇನೆ; ಪ್ರಜಾಪತೀನಾಂ = ದಕ್ಷಪ್ರಜಾಪತಿ ಮೊದಲಾದವರಿಗೆ; ಅಭಿವಂದಿತಃ ಪತಿಃ = ನಮಸ್ಕಾರಯೋಗ್ಯನಾದ ಯಜಮಾನನಾಗಿದ್ದೇನೆ; ಯತಃ ಆತ್ಮಸಂಭವಃ = ಯಾವ ಪರಮಾತ್ಮನಿಂದ ಜನಿಸಿದ ನಾನು; ಸಮಾಹಿತಃ = ಪ್ರಶಾಂತ ಮನಸ್ಸುಳ್ಳವನಾಗಿ; ನಿಪುಣಂ ಯೋಗಂ ಆಸ್ಥಾಯ = ಉತ್ತಮ ರೀತಿಯಲ್ಲಿ ಧ್ಯಾನ ಮಾಡಿಯೂ; ತಂ = ಆ ಪರಮಪುರುಷನನ್ನು; ನ ಅಧಿ ಅಗಚ್ಛಂ = ಪೂರ್ಣವಾಗಿ ತಿಳಿದಿಲ್ಲ.

ಭಗವಂತನ ಸರ್ವೋತ್ತಮತ್ವವು ಇಲ್ಲಿ ಚೆನ್ನಾಗಿ ಪ್ರತಿಪಾದಿತವಾಗಿದೆ. ವೇದಪುರುಷನೆಂಬ ಹೆಸರು ಅವನಿಗೇ ಸಲ್ಲತಕ್ಕದ್ದು. ಆದರೆ, ಅವನ ಕೃಪೆಯಿಂದ, ಚತುರ್ಮುಖನಿಗೂ ವೇದಪುರುಷನೆಂಬ ಹೆಸರು ಯಥೋಚಿತವಾಗಿ ಸಲ್ಲುತ್ತದೆ.

**ನತೋಽಸ್ಮ್ಯಹಂ ತಚ್ಚರಣಂ ಸಮೀಯುಷಾಂ**
**ಭವಚ್ಛಿದಂ ಸ್ವಸ್ತ್ಯಯನಂ ಸುಮಂಗಳಂ ।**
**ಯಃ ಸ್ವಾತ್ಮಮಾಯಾವಿಭವಂ ಸ್ವಯಂ ಗತೋ**
**ನಾಹಂ ನಭಸ್ವಾಂಸ್ತಮಥಾಪರೇ ಕುತಃ** ॥ ೩೫ ॥

ಯಃ = ಯಾವ ಪುರುಷೋತ್ತಮನು; ಸ್ವಾತ್ಮಮಾಯಾ ವಿಭವಂ = ತನ್ನ ವಿಶೇಷ ಸಾಮರ್ಥ್ಯದಿಂದ ಪ್ರಕಟಿಸುವ ಅನಂತ ಗುಣನಾಮರೂಪಕ್ರಿಯೆಗಳ ವೈಭವವನ್ನು; ಸ್ವಯಂ = ತಾನು ಮಾತ್ರ; ಗತಃ = ಬಲ್ಲವನಾಗಿರುವನೋ; ತಂ = ಅದನ್ನು; ಅಹಂ =

ನಾನು; ನ ಗತಃ = ಬಲ್ಲವನಾಗಿರುವುದಿಲ್ಲ; ಅಪರೇ = ಇನ್ನಿತರರು; ಕುತಃ = ಹೇಗೆ ತಾನೇ ತಿಳಿಯಬಲ್ಲರು; ಸಮೀಯುಷಾಂ = ಭಕ್ತಿಯಿಂದ ಪ್ರಾರ್ಥಿಸುವವರ; ಭವಚ್ಛಿದಂ = ಭವಪಾಶವನ್ನು ಕಳೆಯುವ; ಸ್ವಸ್ತ್ಯಯನಂ = ಶಾಂತಿಪ್ರದವಾದ; ಸುಮಂಗಳಂ = ಅತ್ಯಂತ ಮಂಗಳಕರವಾದ; ತತ್ ಚರಣಂ = ಅವನ ಪಾದಕಮಲಗಳನ್ನು ಉದ್ದೇಶಿಸಿ; ಅಹಂ = ನಾನು; ನತೋಽಸ್ಮಿ = ನಮಸ್ಕಾರ ಮಾಡುತ್ತೇನೆ.

ಭಗವಂತನ ಮಹಿಮೆಗಳನ್ನು ಸಂಪೂರ್ಣವಾಗಿ ಬಲ್ಲವರು ಯಾರೂ ಇಲ್ಲ. ತನ್ನ ಮಹಿಮೆಯನ್ನು ಅವನೇ ಬಲ್ಲ. ಸರ್ವಜ್ಞನೆಂದರೆ ಅವನೇ ಸರಿ. ಆದರೆ ಜಗತ್ತಿನ ವ್ಯಷ್ಟಿಯಿಂದ ಬ್ರಹ್ಮಾದಿಗಳು ಸರ್ವಜ್ಞರು. ಅವರಿಗೂ ಅವನ ಮಹಿಮೆಗಳ ಅರಿವು ಸಂಪೂರ್ಣವಾಗಿಲ್ಲವೆಂದಾಗ, ಇತರರಿಗೆ ಅದು ಹೇಗೆ ಸಾಧ್ಯ !ಜ್ಞಾನದಿಂದ ಮೋಕ್ಷ ಎಂದು ಹೇಳುವ ವಾದಿಗಳ ಮಾತು ಇದರಿಂದ ನಿರಾಕೃತವಾಯಿತು. ಭಗವಂತನ ವಿಷಯಕವಾದ ಜ್ಞಾನವು ಅವರವರ ಯೋಗ್ಯತೆಗಳಿಗೆ ತಕ್ಕಷ್ಟು ಉಂಟಾದರೆ ಸಾಕು. ಮುಕ್ತಿಗೆ ಬೇಕಾದುದು ಭಕ್ತಿ; ಕೇವಲ ಜ್ಞಾನವಲ್ಲ. ನಮಸ್ಕಾರ ಕ್ರಿಯೆಯೇ ಅಗತ್ಯವಾದ ಸಾಧನ.

**ನಾಹಂ ನ ಯೂಯಂ ಬತ ತದ್ಗತಿಂ**
**ವಿದುರ್ನವಾಮದೇವಃ ಕಿಮುತಾಪರೇ ಸುರಾಃ ।**
**ಯನ್ಮಾಯಯಾ ಮೋಹಿತ ಬುದ್ಧಯಸ್ತ್ವಿದಂ**
**ವಿನಿರ್ಮಿತಂ ಸ್ವಾತ್ಮ ಸಮಂ ವಿಚಕ್ಷ್ಮಹೇ** ॥ ೩೬ ॥

ತದ್ಗತಿಂ = ಆ ಪರಮಾತ್ಮನ ವ್ಯಾಪಾರಗಳನ್ನು; ಬತ = ನಿಜವಾಗಿ; ಅಹಂ = ನಾನು; ಯೂಯಂ = ಮಾನಸ ಪುತ್ರರಾದ ನೀವುಗಳು; ನ ವಿದುಃ = ಪೂರ್ಣವಾಗಿ ತಿಳಿದಿಲ್ಲ; ವಾಮದೇವಃ = ರುದ್ರನು; ನ = ತಿಳಿದಿಲ್ಲ; ಅಪರೇ ಸುರಾಃ = ಇತರ ದೇವತೆಗಳು; ಕಿಮುತ = ಹೇಗೆ ತಾನೇ ತಿಳಿದಾರು ? ಯತ್ ಮಾಯಯಾ = ಯಾವ ಭಗವಂತನ ಬಂಧಕ ಶಕ್ತಿಯಿಂದ; ಮೋಹಿತ ಬುದ್ಧಯಃ = ಆವೃತವಾದ ಬುದ್ಧಿಯುಳ್ಳವರಾಗಿ; ವಿನಿರ್ಮಿತಂ ಇದಂ = ನಿರ್ಮಿತವಾದ ಈ ಜಗತ್ತನ್ನು; ಸ್ವಾತ್ಮಸಮಂ = ಭಗವದ್ಭರಿತವಾದುದನ್ನಾಗಿ, ನಮ್ಮ ನಮ್ಮ ಯೋಗ್ಯತೆಗಳಿಗೆ ಅನುಸಾರವಾಗಿ; ವಿಚಕ್ಷ್ಮಹೇ = ತಿಳಿಯುತ್ತೇವೆ.

ವ + ಅಮ = ವಾಮ, ಎಂದರೆ ನಿರ್ದೋಷ ಎಂದರ್ಥ. ನಿರ್ದೋಷ ಗುಣಪೂರ್ಣನಾದ ಪರಮಾತ್ಮನನ್ನು ದೇವ ಅಥವಾ ಸ್ವಾಮಿ ಎಂದು ತಿಳಿದಿರುವ ರುದ್ರದೇವರಿಗೆ 'ವಾಮದೇವ' ಎಂದು ಹೆಸರು. ಆದುದರಿಂದ ಅವರನ್ನೇ ಸರ್ವಜ್ಞರೆಂದು ಹೇಳುವವರ ಮತ ಸರಿಯಾದುದಲ್ಲ. ಭಗವಂತನ ಮಹಿಮೆಯನ್ನು ಅವರೂ ಪೂರ್ಣವಾಗಿ ತಿಳಿದಿಲ್ಲವೆಂದು ಇಲ್ಲಿ ಹೇಳಿರುವುದು ಅದಕ್ಕೆ ಸಾಕ್ಷಿಯಾಗಿದೆ.

ನಾರದಾದಿಗಳು ರುದ್ರದೇವರಿಗಿಂತ ಕಡಿಮೆ ಜ್ಞಾನವುಳ್ಳವರು. ಅವರು ಬ್ರಹ್ಮನ ಮಾನಸ ಪುತ್ರರಾಗಿ ಮೊದಲು ಹುಟ್ಟಿದುದರಿಂದ ಮಾತ್ರ ಅವರ ಹೆಸರುಗಳನ್ನು ರುದ್ರದೇವರಿಗಿಂತ ಮೊದಲು ಇಲ್ಲಿ ಹೇಳಿದ್ದಾರೆ, ಅಷ್ಟೇ. ನೇರವಾಗಿ, ಮಾನಸಪುತ್ರರಾಗಿ ಹುಟ್ಟಿದರೂ ಅವರ ಜ್ಞಾನವು ಕುಂಠಿತವಾದುದು ಎಂದು ಹೇಳುವುದು ಇನ್ನೊಂದು ಕಾರಣ.

**ಯಸ್ಯಾವತಾರ ಕರ್ಮಾಣಿ ಗಾಯಂತಿಹ್ಯಸ್ಮದಾದಯಃ ।**
**ನಯಂ ವಿಂದಂತಿ ತತ್ತ್ವೇನ ತಸ್ಮೈ ಭಗವತೇ ನಮಃ ॥ ೩೭ ॥**

ಅಸ್ಮದಾದಯಃ = ನಮ್ಮಂತಹ ಜೀವರು; ಯಸ್ಯ = ಯಾವ ಸ್ವತಂತ್ರ ಪುರುಷನ; ಅವತಾರ ಕರ್ಮಾಣಿ = ನಾನಾ ಅವತಾರಗಳಲ್ಲಿ ತೋರಿದ ಕರ್ಮಗಳ ಮಹಿಮೆಯನ್ನು ಕುರಿತು; ಹಿ = ನಿಜವಾಗಿ; ಗಾಯಂತಿ = ಸ್ತುತಿಸುತ್ತಾರೆ; ಯಂ = ಯಾರ ವಿಷಯವನ್ನು ಕುರಿತು; ತತ್ತ್ವೇನ = ಇದ್ದುದಿದ್ದಂತೆ ಸಕಲವನ್ನೂ; ನ ವಿಂದಂತಿ = ತಿಳಿಯಲಸಮರ್ಥರಾಗಿರುವರುತಸ್ಮೈ = ಅಂತಹ; ಭಗವತೇ = ಸರ್ವವಿಧದಲ್ಲಿಯೂ ಪರಿಪೂರ್ಣನಾದ ಪುರುಷನಿಗೆ; ನಮಃ = ನಮಸ್ಕಾರ.

ನಾವು ಭಗವಂತನನ್ನು ತಿಳಿದೂ ತಿಳಿದಿಲ್ಲ ಎಂಬುದು ಇದರ ಅರ್ಥ. ಅವನ ಮಹಿಮೆ ಅತ್ಯಗಾಧವಾದುದು. ವೇದಶಾಸ್ತ್ರಗಳಿಂದಲೂ, ಅವತಾರ ಕಾರ್ಯಗಳ ವರ್ಣನೆಯಿಂದಲೂ-ನಾವು ಅವನನ್ನು ಎಷ್ಟೇ ತಿಳಿದರೂ, ತಿಳಿಯಬೇಕಾದ ವಿಷಯದಲ್ಲಿ ಅದು ಅತ್ಯಲ್ಪ. ಅವನ ವಿಷಯವನ್ನು ಕೇಳುತ್ತಾ, ಪುಣ್ಯವಿಶೇಷದಿಂದ ಕಾಣುತ್ತಾ, ನಿರ್ಭರರಾಗಿ, ಪರಮಭಕ್ತಿಯಿಂದ ಆ ಕರುಣಾಸಿಂಧುವಿಗೆ ನಮಸ್ಕಾರ ಮಾಡಿ ಕೃತಾರ್ಥರಾಗುವುದು ಮಾತ್ರ ಜೀವರಿಗೆ ಸಾಧ್ಯ.

**ಸ ಏಷ ಆದ್ಯಃ ಪುರುಷಃ ಕಲ್ಪೇ ಕಲ್ಪೇ ಸೃಜತ್ಯಜಃ ।**
**ಆತ್ಮಾತ್ಮನ್ಯಾತ್ಮನಾತ್ಮಾನಂ ಸಸಂಯಚ್ಛತಿ ಪಾತಿ ಚ ॥ ೩೮ ॥**

ಆದ್ಯಃ = ಸೃಷ್ಟಿಗೆ ಮೂಲ ಕಾರಣನಾದ; ಅಜಃ = ಜನನ ಮರಣ ರಹಿತನಾದ; ಪುರುಷಃ = ಅಂತರಾತ್ಮನಾದ; ಏಷಃ = ಈ; ಸಃ ಆತ್ಮಾ = ಸಮಗ್ರವಾಗಿ ತಿಳಿಯಲಾಗದ ಶ್ರೀಮನ್ನಾರಾಯಣನು; ಕಲ್ಪೇ ಕಲ್ಪೇ = ಪ್ರತಿಯೊಂದು ಕಲ್ಪದಲ್ಲಿಯೂ;

(i) ಆತ್ಮನಾ = ಸ್ವಸಾಮರ್ಥ್ಯದಿಂದ; ಆತ್ಮನಿ = ತನ್ನಲ್ಲಿಯೇ; ಆತ್ಮಾನಂ = ತನ್ನನ್ನು ಮತ್ಸ್ಯಾದಿ ರೂಪನಾಮಗಳುಳ್ಳವನನ್ನಾಗಿ; ಸೃಜತಿ = ಪ್ರಕಟಮಾಡಿಕೊಳ್ಳುತ್ತಾನೆ; ಸಃ = ಅವನು; ಸಂಯಚ್ಛತಿ = ದೈತ್ಯರನ್ನು ಸಂಹರಿಸುತ್ತಾನೆ; ಚ = ಮತ್ತು; ಪಾತಿ = ತನ್ನನ್ನು ಶರಣು ಹೊಕ್ಕವರನ್ನು ರಕ್ಷಿಸುತ್ತಾನೆ.

(ii) ಆತ್ಮನಾ = ಸ್ವಸಾಮರ್ಥ್ಯದಿಂದ; ಆತ್ಮನಿ = ತನಗೆ ಅಧೀನವಾದ

ಪ್ರಕೃತಿಯಲ್ಲಿ; ಆತ್ಮಾನಂ = ಜೀವಸಮೂಹವನ್ನು; ಸೃಜತಿ = ಸೃಷ್ಟಿಯಲ್ಲಿ ತರುತ್ತಾನೆ; ಸಂಯಚ್ಛತಿ = ಶಿಕ್ಷಿಸುತ್ತಾನೆ; ಚ = ಮತ್ತು; ಪಾತಿ = ರಕ್ಷಿಸುತ್ತಾನೆ.

ಸೃಷ್ಟಿಕಾರ್ಯವು ಪ್ರವಾಹರೂಪವಾಗಿ ಅನಾದ್ಯನಂತಕಾಲಿಕವಾಗಿರುವುದು. ಕಲ್ಪವೆಂದರೆ ಬ್ರಹ್ಮಕಲ್ಪವೆಂದೂ, ಬ್ರಹ್ಮನ ದಿನಕಲ್ಪವೆಂದೂ ಅರ್ಥ. ಬ್ರಹ್ಮನ ೧೦೦ ವರ್ಷಗಳಷ್ಟು ಕಾಲ (೪೩೨ ಕೋಟಿ X ೩೬೦ X ೧೦೦) ಸೃಷ್ಟಿಯ ಅವಧಿ. ಇದಕ್ಕೆ ಒಂದು 'ಪರ' ಎಂದು ಹೆಸರು. ಅಷ್ಟೇ ಕಾಲ ಪ್ರಳಯಾನಂತರದ ರಾತ್ರಿಯ ಅವಧಿ. ಜೀವೋತ್ತಮರು ಬ್ರಹ್ಮಪದವಿಗೆ ಬಂದು ಬಂದು ನಿವೃತ್ತರಾಗಿ ವೈಕುಂಠಪದವಿಯಲ್ಲಿರುತ್ತಾರೆ. ಇತರ ಜೀವರು ತಮ್ಮ ತಮ್ಮ ಸಾಧನೆಗಳು ಮುಗಿದ ನಂತರ ತಮಗೆ ಯೋಗ್ಯವಾದ ಪದವಿಯನ್ನು ಹೊಂದುತ್ತಾರೆ. ಜೀವರ ಸಾಧನೆಗಳಿಗಾಗಿ ಪರಬ್ರಹ್ಮನು ಸೃಷ್ಟಿಕಾರ್ಯವನ್ನು ನಡೆಸುತ್ತಾನೆ. (i) ಸೃಷ್ಟವಾದ ವಸ್ತುಗಳ ಸ್ಥಿತಿಗತಿಗಳಿಗಾಗಿ ಅವುಗಳಲ್ಲಿ ಅವುಗಳಂತೆ ನಾಮರೂಪಗಳನ್ನು ಪ್ರಕಟಿಸುವುದು ಪರಮಾತ್ಮನ ಒಂದು ಬಗೆಯ ಆತ್ಮಸೃಷ್ಟಿ. (ii) ಬ್ರಹ್ಮನ ಪ್ರತಿಹಗಲಿನಲ್ಲಿಯೂ (೪೩೨ ಕೋಟಿವರ್ಷ) ದಶಾವತಾರಾದಿ ರೂಪಗಳನ್ನು ಪ್ರಕಟಿಸುವುದು ಇನ್ನೊಂದು ಬಗೆಯ ಆತ್ಮಸೃಷ್ಟಿ. ಈ ಎರಡೂ ದೀಪದಿಂದ ದೀಪಗಳು ಬಂದ ಹಾಗೆ.

**ವಿಶುದ್ಧಂ ಕೇವಲಂ ಜ್ಞಾನಂ ಪ್ರತ್ಯಕ್ಸಮ್ಯಗವಸ್ಥಿತಂ ।**
**ಸತ್ಯಂ ಪೂರ್ಣಮನಾದ್ಯಂತಂ ನಿರ್ಗುಣಂ ನಿತ್ಯಮದ್ವಯಂ ॥ ೩೯ ॥**

ವಿಶುದ್ಧಂ = ದೋಷರಹಿತವಾದುದು; ಕೇವಲಂ = ತಾನೇ ತಾನಾಗಿ ಇರುವುದು; ಜ್ಞಾನಂ = ಜ್ಞಾನವೇ ಸ್ವಭಾವವಾಗಿರುವುದು(ಬೇರೆಯ ಕಾರಣಗಳಿಂದ ಜ್ಞಾನವನ್ನು ಪಡೆಯುವ ಆವಶ್ಯಕತೆ ಇಲ್ಲದಿರುವುದು); ಪ್ರತ್ಯಕ್ = ಇತರ ವಸ್ತುಗಳಿಂದ, ಜೀವರಿಂದ ಭಿನ್ನವಾದುದು; ಸಮ್ಯಕ್ ಅವಸ್ಥಿತಂ = ದುಷ್ಟಾಂಶಗಳಿಲ್ಲದೇ ಇರುವುದು; ಸತ್ಯಂ = ನಿರ್ದುಃಖ ನಿತ್ಯ ನಿರತಿಶಯ ಆನಂದಾನುಭವವೇ ಸ್ವರೂಪವಾಗಿರುವುದು; ಪೂರ್ಣಂ = ದೇಶ, ಕಾಲ, ಗುಣಗಳಲ್ಲಿ ಮಿತಿ ಇಲ್ಲದಿರುವುದು; ಅನಾದ್ಯಂತಂ = ಆದಿಮಧ್ಯಾಂತ ರಹಿತವಾದುದು; ನಿರ್ಗುಣಂ = ಜಡಗುಣದೂರವಾದುದು; ನಿತ್ಯಂ = ಪರಿಣಾಮಗಳಿಗೆ ಒಳಗಾಗದೆ ಏಕಪ್ರಕಾರವಾಗಿರುವುದು; ಅದ್ವಯಂ = ತನಲ್ಲಿ ಯಾವ ವಿಧವಾದ ಭೇದವೂ ಇಲ್ಲದಿರುವುದು.

ಪರಮ ಪುರುಷನ ಸರ್ವೋತ್ತಮ ಲಕ್ಷಣಗಳನ್ನು ಇಲ್ಲಿ ತಿಳಿಸಿದ್ದಾರೆ. ದೋಷಸಂಬಂಧ ಜೀವರಿಗುಂಟು; ಅವನಿಗಿಲ್ಲ. ಅವನಿಗೆ ಅನ್ಯಾಶ್ರಯದ ಆವಶ್ಯಕತೆಯಿಲ್ಲ. ಜ್ಞಾನಾನಂದಮಯವಾದುದು ಅವನ ಶರೀರ; ತರ್ಕವಿತರ್ಕಗಳಿಂದ ಅವನು ಜೀವರಂತೆ ಜ್ಞಾನ ಸಂಪಾದನೆ ಮಾಡಬೇಕಾಗಿಲ್ಲ. ಅವನು ಜಡಜೀವರಲ್ಲಿದ್ದರೂ, ಅವುಗಳಿಗೆ ಆಶ್ರಯನಾಗಿದ್ದರೂ ಅವುಗಳಿಂದ ಭಿನ್ನನಾಗಿದ್ದಾನೆ; ಜೀವಬ್ರಹ್ಮರ ಏಕತೆಯಾಗಲೀ, ಅಂಶ

ಅಂಶಿಭಾವವಾಗಲೀ ಇರುವುದೆಂದು ಹೇಳುವುದು ಸರಿಯಲ್ಲ. ಸನ್ನಿವೇಶಗಳ ಪರಿಣಾಮಗಳು ಜೀವರ ಮೇಲೆ ಆಗುವಂತೆ ಅವನ ಮೇಲೆ ಕಿಂಚಿತ್ತೂ ಆಗುವುದಿಲ್ಲ. ಮುಕ್ತಿಯೋಗ್ಯ ಜೀವರಾದರೂ ಸಂಸಾರಾವಸ್ಥೆಯಲ್ಲಿ ಅವರಿಗೆ ಕಾಲಕರ್ಮ ಪ್ರಕೃತಿಗಳ ಸಂಬಂಧದಿಂದ ದೋಷವಿದ್ದಂತೆ ಕಂಡುಬರುವುದು. ದೋಷ ಸ್ವಭಾವವೇ ಉಳ್ಳ ಜೀವರೂ ಇರುವರು. ಆದರೆ ಬ್ರಹ್ಮನಲ್ಲಿ ಇಂತಹ ದೋಷಗಳಿಗೆ ಅವಕಾಶವೇ ಇಲ್ಲ. 'ಸತ್' ಎಂದರೆ ಉತ್ತಮವಾದುದು; ಅದರ ಭಾವ ಸತ್ಯ. ಆದುದರಿಂದ ಬ್ರಹ್ಮನನ್ನು 'ಸತ್' ಎಂದಾಗ, ಅವನು ಕಲ್ಯಾಣಗುಣಪೂರ್ಣನೆಂದೂ, ನಿತ್ಯ ನಿರತಿಶಯಾನಂದ ಸ್ವರೂಪನೆಂದೂ ಹೇಳಿದ ಹಾಗಾಯಿತು. ಬ್ರಹ್ಮನ ದೃಷ್ಟಿಯಿಂದ ಜೀವರ ಪೂರ್ಣತೆಗಳು ಅವರವರ ಯೋಗ್ಯತೆಗಳಿಗೆ ತಕ್ಕಷ್ಟು ಮಾತ್ರ; ಜಲವನ್ನು ತುಂಬುವ ಸಣ್ಣ ದೊಡ್ಡ ಪಾತ್ರೆಗಳಂತೆ. ಬ್ರಹ್ಮನ ಪೂರ್ಣತೆಯು ಸಮುದ್ರದಂತೆ ಎಂದು ಭಾವಿಸಬಹುದು. ಜೀವ ಜಡದ್ರವ್ಯಗಳೂ ಅನಾದ್ಯನಂತಗಳಾದರೂ ಹುಟ್ಟು ಸಾವುಗಳ ಚಕ್ರದಲ್ಲಿ ಸಿಕ್ಕುವಂತಹವು; ಬ್ರಹ್ಮನಿಗೆ ಇಂತಹ ಪರಿಸ್ಥಿತಿ ಇಲ್ಲವಾದುದರಿಂದ ಅವನು ನಿಜವಾಗಿ ಅನಾದ್ಯನಂತನಾದವನು; ನಿರ್ಗುಣನೆಂದರೆ ಜಡಗುಣಸಂಬಂಧವಿಲ್ಲದವನೆಂದು ಅರ್ಥವೇ ಹೊರತು, ತನ್ನ ಸ್ವಭಾವವೇ ಆದ ಕಾರುಣ್ಯ, ಚಾತುರ್ಯ, ಸ್ವಾತಂತ್ರ್ಯಾದಿ ಗುಣಗಳಿಲ್ಲದವನಲ್ಲ. ಜಡಗಳು ಜಗದ್ರೂಪವಾಗಿ ಪರಿಣಾಮ ಹೊಂದಿ ವಿಕೃತಿಗಳಿಗೆ ಒಳಗಾಗುವವು. ಜೀವರು ಇಂತಹ ವಿಕೃತಿಗಳಲ್ಲಿ ಸಿಕ್ಕಿಕೊಂಡು ವಿಕಾರಗಳ ಪರಿಣಾಮಗಳಿಗೆ ಸಿಗಬೇಕಾಗುವುದು. ಬ್ರಹ್ಮನು ಜಗದ್ರೂಪನಾಗಿ, ಜೀವರ ಬಿಂಬನಾಗಿ ವರ್ತಿಸಿದರೂ ಅವನ ರೂಪರೂಪಾಂತರಗಳು ಕೇವಲ ಅವನ ಸಂಕಲ್ಪರೂಪವಾದುವು; ವಿಕೃತಿಯ ಪರಿಣಾಮಗಳಲ್ಲ. ಆದುದರಿಂದ ಅವನು ನಿತ್ಯ. ಜೀವರು ಮುಕ್ತರಾದಮೇಲೂ ಜ್ಞಾನಾನಂದರೂಪಗಳಾದ ಅವಯವಗಳಿಂದ ವಿಹರಿಸುವರು. ಅವರಿಗೂ ಅವರ ಅವಯವಗಳಿಗೂ ಭಿನ್ನತೆಯಿಲ್ಲ. ಆದರೂ ಒಂದು ಅವಯವದ ಕಾರ್ಯ ಇನ್ನೊಂದರಿಂದ ನಡೆಯುವುದಿಲ್ಲ. ಬ್ರಹ್ಮನ ವಿಷಯವು ಹಾಗಲ್ಲ; ಅವನ ಸ್ವರೂಪೇಂದ್ರಿಯಗಳಲ್ಲಿ ಒಂದೊಂದು ಅವಯವವೂ ಬೇರೆ ಎಲ್ಲಾ ಇಂದ್ರಿಯಗಳ ವ್ಯಾಪಾರಗಳನ್ನೂ ನಿರ್ವಹಿಸಬಲ್ಲುದು. ಅವನು ಸ್ವಗತಭೇದಗಳಿಲ್ಲದವನು; ಆದುದರಿಂದ ಅದ್ವಯ.

**ಋತಂ ವಿಂದಂತಿ ಮುನಯಃ ಪ್ರಶಾಂತಾತ್ಮೇಂದ್ರಿಯಾಶಯಾಃ ।**
**ಯದಾತದ್ವೈವಸತ್ತರ್ಕೈಸ್ತಿರೋಧೀಯೇತ ವಿಪ್ಲುತಂ ॥ ೪೦ ॥**

ಯದಾ = ಯಾವಾಗ; ಪ್ರಶಾಂತ ಆತ್ಮ ಇಂದ್ರಿಯ ಆಶಯಾಃ = ಅಜ್ಞಾನ ನಿಮಿತ್ತವಾದ ಗೊಂದಲಗಳಿಲ್ಲದೆ ಪ್ರಶಾಂತಗಳಾದ ಮನಸ್ಸು ಇಂದ್ರಿಯಗಳುಳ್ಳ; ಮುನಯಃ = ಮೌನದಿಂದ ಆಲೋಚಿಸುವವರು; ಋತಂ = ಯಥಾಸ್ಥಿತಿಯನ್ನು;

ವಿಂದಂತಿ = ಬಲ್ಲವರಾಗುತ್ತಾರೋ; ತದಾ ಏವ = ಆಗಲೇ; ಅಸತ್ತರ್ಕ್ಯೈಃ ವಿಪ್ಲುತಂ = ದುಷ್ಟ ವಿಚಾರಸರಣಿಗಳಿಂದ ಉಂಟಾದ ಮನಸ್ಸಿನ ದುರ್ಭಾವನೆಯು; ತಿರೋಧೀಯೇತ = ನಾಶವಾಗಬಲ್ಲುದು.

ಹಿಂದಿನ ಶ್ಲೋಕದಲ್ಲಿ ತಿಳಿಸಿದಂತೆ ಬ್ರಹ್ಮವಸ್ತುವಿನ ಲಕ್ಷಣಗಳನ್ನು ಯಥಾವತ್ತಾಗಿ ತಿಳಿದರೆ ಮಾತ್ರ ಜೀವಬ್ರಹ್ಮೈಕ್ಯವಾದ, ಅವಯವ ಅವಯವಿಭಾವ ವಾದ, ಬ್ರಹ್ಮಪರಿಣಾಮ ವಾದ, ಶೂನ್ಯ ವಾದ ಮುಂತಾದವು ಬಿಟ್ಟುಹೋಗುವವು. ಆಗ ಮಾತ್ರ ಬ್ರಹ್ಮ ಸಾಕ್ಷಾತ್ಕಾರವಾಗಿ ಮುಕ್ತಿಯು ದೊರೆಯುವುದು.

ಅಪೂರ್ಣರಾದ ಜೀವರು ಅತಿಪರಿಪೂರ್ಣನಾದ ಬ್ರಹ್ಮನನ್ನು ಹೇಗೆ ಸಾಕ್ಷಾತ್ಕರಿಸಿಕೊಳ್ಳಬಲ್ಲರು ಎಂದರೆ, ಭಗವಂತನ ಅವತಾರ ರೂಪಗಳ ದರ್ಶನ, ಗುಣಕಥನಾದಿಗಳಿಂದ ಅದು ಸಾಧ್ಯ ಎಂಬುದು ಉತ್ತರ. ಭಗವಂತನ ಮೂಲರೂಪಕ್ಕೂ ಅವತಾರರೂಪಗಳಿಗೂ ಯಾವ ಭೇದವೂ ಇಲ್ಲದಿರುವುದು ಯಥಾಯೋಗ್ಯ ಸಾಕ್ಷಾತ್ಕಾರಕ್ಕೆ ಸಾಧಕವಾಗಿರುವುದು.

**ಆದ್ಯೋಽವತಾರಃ ಪುರುಷಃ ಪರಸ್ಯ ಕಾಲಃ ಸ್ವಭಾವಃ ಸದಸನ್ಮನಶ್ಚ ।**
**ದ್ರವ್ಯಂ ವಿಕಾರೋ ಗುಣ ಇಂದ್ರಿಯಾಣಿ ವಿರಾಟ್ ಸ್ವರಾಟ್ ಸ್ಥಾಸ್ನು**
**ಚರಿಷ್ಣುಭೂಮ್ನಃ ॥ ೪೧ ॥**

ಪರಸ್ಯ = ಶೂನ್ಯನಾಮಕ ಮೂಲರೂಪೀ ನಾರಾಯಣನ; ಆದ್ಯಃ ಅವತಾರಃ = ದೀಪದಿಂದ ದೀಪವು ಬಂದಂತೆ ಮೊದಲು ಪ್ರಕಟವಾದ ಅವತಾರವು; ಪುರುಷಃ = ಪುರುಷನೆಂದು ಕರೆಸಿಕೊಳ್ಳುವುದು; ಭೂಮ್ನಃ = ಮುಂದೆ ರೂಪರೂಪಾಂತರಗಳಿಂದ ಸರ್ವವ್ಯಾಪಿಯಾದ ಈ ಪುರುಷನ ದೆಸೆಯಿಂದ; ಕಾಲಃ = ಪರಮಾಣುಕಾಲದಿಂದ ಮಹಾಕಾಲ ಪರ್ಯಂತವಾದ ಕಾಲಸೃಷ್ಟಿಯು; ಸ್ವಭಾವಃ = ವಸ್ತುಗಳ ಸ್ವಭಾವ ವಿಕಾಸವು; ಸತ್ = ಪ್ರಾಣಶಕ್ತಿಯ ಆವಿರ್ಭಾವವು; ಅಸತ್ = ಅವ್ಯಕ್ತಪ್ರಕೃತಿಯ ವ್ಯಕ್ತತ್ವವು; ಮನಃ = ಮನ ಇಂದ್ರಿಯದ ಸೃಷ್ಟಿಯು; ಚ = ಮತ್ತು; ದ್ರವ್ಯಂ = ಸೂಕ್ಷ್ಮ ಪಂಚಭೂತಗಳು; ವಿಕಾರಃ = ಸೂಕ್ಷ್ಮ ಪಂಚಭೂತಗಳಿಂದ ನಿರ್ಮಿತವಾದ ಬ್ರಹ್ಮಾಂಡವು; ಗುಣಃ = ಸತ್ವಾದಿ ಗುಣಗಳು; (ಗುಣಗಳ ಪಂಚೀಕರಣದಿಂದಾದ ಜಗದ್ವಸ್ತುಗಳು); ಇಂದ್ರಿಯಾಣಿ = ದೇಹೇಂದ್ರಿಯಗಳು; ವಿರಾಟ್ = ಆಕಾಶದಲ್ಲಿ ಸಂಚರಿಸುವ ಪಕ್ಷಿಜಾತಿಗೆ ರಾಜನಾದ ಗರುಡ; ಸ್ವರಾಟ್ = ಸ್ವರ್ಗಾಧಿಪತಿಯಾದ ಇಂದ್ರ; ಸ್ಥಾಸ್ನುಃ = ಅಚರವಸ್ತುಗಳು(ಸ್ಥಾವರಗಳು); ಚರಿಷ್ಣುಃ = ಸಂಚರಿಸಬಲ್ಲ ಜೀವಿಗಳು(ಜಂಗಮಗಳು); ಹೀಗೆ ಸೃಷ್ಟಿಯು ಉಂಟಾಯಿತು.

ಆರಂಭದಿಂದ ಕಡೆಯತನಕ ನಡೆದ ಸೃಷ್ಟಿಯ ಕ್ರಮವೂ, ಅದನ್ನು ನಡೆಸುತ್ತಾ ಅದರಲ್ಲಿ ಪ್ರವಿಷ್ಟನಾಗಿ ನಿಂತಿರುವ ಪರಮಪುರುಷನ ಮಹಿಮೆಯೂ ಇಲ್ಲಿ

ಸಂಗ್ರಹೀತವಾಗಿದೆ. ಸೃಷ್ಟವಾದ ಎಲ್ಲದರ ಸ್ಥಿತಿಗತಿಗಳು ಅವನಿಂದಲೇ ಆದುದರಿಂದ, ಮುಖ್ಯವೃತ್ತಿಯಿಂದ "ಪುರುಷ ಏವೇದಗಂ ಸರ್ವಂ" (ಎಲ್ಲವೂ ಪುರುಷನೇ) ಎಂದು ಹೇಳುವುದರ ಔಚಿತ್ಯವೂ ಸೂಚಿತವಾಗಿದೆ.

**ಅಹಂ ಭವೋ ಯಜ್ಞ ಇಮೇ ಪ್ರಜೇಶಾ**
**ದಕ್ಷಾದಯೋ ಯೇ ಭವದಾದಯಶ್ಚ ।**
**ಸ್ವರ್ಲೋಕಪಾಲಾಃ ಖಗಲೋಕಪಾಲಾ**
**ನೃಲೋಕಪಾಲಾಸ್ತಲಲೋಕಪಾಲಾಃ** ॥ ೪೨ ॥

**ಗಂಧರ್ವ ವಿದ್ಯಾಧರ ಚಾರಣೇಶಾ ಯೇ**
**ಯಕ್ಷರಕ್ಷೋರಗ ನಾಗನಾಥಾಃ ।**
**ಯೇವಾ ಋಷೀಣಾಮೃಷಭಾಃ ಪಿತೃಣಾಂ**
**ದೈತ್ಯೇಂದ್ರ ಸಿದ್ಧೇಶ್ವರದಾನವೇಂದ್ರಾಃ** ॥ ೪೩ ॥

**ಅನ್ಯೇ ಚ ಯೇ ಪ್ರೇತ ಪಿಶಾಚ ಭೂತ**
**ಕೂಷ್ಮಾಂಡಯಾದೋ ಮೃಗಪಶ್ವಧೀಶಾಃ ।**
**ಯತ್ಕಿಂ ಚ ಲೋಕೇ ಭಗವನ್ಮಹಸ್ವದೋಜಃ**
**ಸಹಸ್ವದ್ಬಲವತ್ ಕ್ಷಮಾವತ್ ॥**
**ಹ್ರೀಃ ಶ್ರೀರ್ವಿಭೂತ್ಯಾತ್ಮವದದ್ಭುತಾರ್ಣಂ**
**ತತ್ತತ್ಪರಂ ರೂಪವದಸ್ವರೂಪಂ** ॥ ೪೪ ॥

ಅಹಂ = ಸೃಷ್ಟಿಕರ್ತನೆನಿಸಿದ ಬ್ರಹ್ಮನಾಮಕನಾದ ನಾನು; ಭವಃ = ಅಹಂಕಾರಾಭಿಮಾನಿ ರುದ್ರನು; ಯಜ್ಞಃ = ಯಜ್ಞಾಭಿಮಾನಿ ರುಧ್ರನು; ಯೇ ದಕ್ಷಾದಯಃ ಇಮೇ ಪ್ರಜೇಶಾಃ = ಪ್ರಜಾಭಿವೃದ್ಧಿಗೆ ಕಾರಣರೆನಿಸುವ ಈ ದಕ್ಷಪ್ರಜಾಪತಿ ಮೊದಲಾದವರು; ಚ = ಮತ್ತು; ಭವದಾದಯಃ = ನಾರದನಾದ ನಿನ್ನಂತಹ ಮಾನಸ ಪುತ್ರರು; ಸ್ವರ್ಲೋಕಪಾಲಾಃ = ಇಂದ್ರಾದಿ ದೇವತೆಗಳು; ಖಗಲೋಕಪಾಲಾಃ = ಗರುಡನೇ ಮೊದಲಾದವರು; ನೃಲೋಕಪಾಲಾಃ = ಪ್ರಿಯವ್ರತ ಮೊದಲಾದ ಚಕ್ರವರ್ತಿಗಳು; ತಲಲೋಕಪಾಲಾಃ = ಪಾತಾಳಾದಿ ಲೋಕರಕ್ಷಕರಾದ ಅನಂತ, ಬಲಿಚಕ್ರವರ್ತಿ ಮೊದಲಾದವರು;

ಗಂಧರ್ವೇಶಾಃ = ವಿಶ್ವಾವಸು ಮೊದಲಾದವರು; ವಿದ್ಯಾಧರೇಶಾಃ = ಚಿತ್ರಕೇತು ಮೊದಲಾದವರು; ಚಾರಣೇಶಾಃ = ಪುಷ್ಪದಂತ ಮೊದಲಾದವರು; ಯೇ = ಯಾವ; ಯಕ್ಷನಾಥಾಃ = ಕುಬೇರ ಮೊದಲಾದವರು; ರಕ್ಷೋನಾಥಾಃ = ನಿಋುಋುತಿ ಮೊದಲಾದವರು; ಉರಗನಾಥಾಃ = ಸರ್ಪಜಾತಿಯ ಒಡೆಯರಾದ ವಾಸುಕಿ

ಮೊದಲಾದವರು; ನಾಗನಾಥಾಃ = ಮಹೋರಗನಾಥರಾದ ಅನಂತ(ಶೇಷ) ಮೊದಲಾದವರು; ಯೇ ವಾ = ಯಾರು ಯಾರು; ಋಷೀಣಾಂ ಋಷಭಾಃ = ಋಷಿಶ್ರೇಷ್ಠರಾದ ವಸಿಷ್ಠಾದಿಗಳು; ಪಿತೃಣಾಂ ಋಷಭಾಃ = ಪಿತೃದೇವತೆಗಳಲ್ಲಿ ಶ್ರೇಷ್ಠರಾದ ಯಮಧರ್ಮ ಮೊದಲಾದವರು; ದೈತ್ಯೇಂದ್ರಾಃ = ದೈತ್ಯಕುಲ ಚಕ್ರವರ್ತಿಯಾದ ಪ್ರಹ್ಲಾದಾದಿಗಳು; ಸಿದ್ಧೇಶಾಃ = ಸಿದ್ಧಪುರುಷ ಶ್ರೇಷ್ಠರಾದ ಸನಕಾದಿಗಳು, ದಾನವೇಂದ್ರಾಃ = ದಾನವಕುಲ ರಕ್ಷಕರಾದ ವೃಷಪರ್ವ ಮೊದಲಾದವರು;

ಅನ್ಯೇ ಚ = ಇನ್ನೂ ಬೇರೆ ಬೇರೆಯಾದ; ಪ್ರೇತೇಶಾಃ = ಪ್ರೇತಪತಿಗಳಾದ ಯಮ (ರೂಪಾಂತರ) ಮೊದಲಾದವರು; ಪಿಶಾಚೇಶಾಃ = ಘಂಟಾಕರ್ಣ ಮೊದಲಾದವರು; ಭೂತೇಶಾಃ = ಭೈರವಾದಿಗಳು; ಕೂಷ್ಮಾಂಡೇಶಾಃ = ಭೃಂಗಿ, ದಕ್ಷ ಮೊದಲಾದವರು; ಯಾದಸಾಂ ಈಶಾಃ = ಜಲಚರ ಮುಖಂಡರಾದ ತಿಮಿಂಗಿಲ ಮೊದಲಾದ್ದು; ಮೃಗಾಣಾಂ ಈಶಾಃ = ಸಿಂಹ ಶಾರ್ದೂಲಾದಿಗಳು; ಪಶೂನಾಂ ಈಶಾಃ = ನಂದಿಕೇಶ್ವರ ಮೊದಲಾದವರು; ಲೋಕೇ = ಜಗತ್ತಿನಲ್ಲಿ ಕಂಡುಬರುವ; ಭಗವನ್ಮಹಸ್ವತ್ = ಭಗವಂತನ ದೆಸೆಯಿಂದ ಮಹತ್ವ ಉಳ್ಳದಾಗಿರುವುದೋ ಅದು; ಓಜಸ್ವತ್ = ಕಾಂತಿಯುಕ್ತವಾಗಿರುವುದು; ಸಹಸ್ವತ್ = ಸಹನಶೀಲವಾಗಿರುವುದು; ಬಲವತ್ = ಕಾರ್ಯದಕ್ಷತೆಯುಳ್ಳದ್ದು; ಕ್ಷಮಾವತ್ = ಕ್ಷಮಾಗುಣವಿಶಿಷ್ಟವಾಗಿರುವುದು (ಕ್ರೋಧಾದಿಗಳಿಲ್ಲದಿರುವುದು); ಹ್ರೀವತ್ = ಯುಕ್ತವಿಷಯದಲ್ಲಿ ಲಜ್ಜೆಯನ್ನು ಹೊಂದಿರುವುದು; ಶ್ರೀವತ್ = ಐಶ್ವರ್ಯಸಂಪನ್ನವಾಗಿರುವುದು; ವಿಭೂತ್ಯಾತ್ಮವತ್ = ವಿಶೇಷ ಶಕ್ತಿಸಂಪನ್ನವಾದುದು; ಅದ್ಭುತ ಅರ್ಣಂ = ಆಶ್ಚರ್ಯಕರವಾದ ಸಮುದ್ರವು ತತ್ತತ್ಪರಂ ರೂಪವತ್ = ಈ ಒಬ್ಬೊಬ್ಬರ, ಒಂದೊಂದರ ಉತ್ತಮ ಸ್ವರೂಪ ಲಕ್ಷಣಗಳು; ಅಸ್ವರೂಪಂ = ತಮ್ಮ ಪ್ರಭಾವಗಳಿಂದಲೇ ಉಂಟಾಗಿರುವುವಲ್ಲ (ನಿಜವಾಗಿ ಅವು;) ಅಸ್ವರೂಪಂ = ತಮ್ಮೊಳಗಿನ ಆಕಾರವಾಚ್ಯ ಪುರುಷ ಬಿಂಬಕ್ರಿಯೆಯಿಂದಲೇ ಬಂದಿರತಕ್ಕವುಗಳಾಗಿವೆ.

ಆ ಪ್ರಭಾವ ತಮ್ಮದೇ ಎಂದು ತಿಳಿದರೆ ಅದು ಮಿಥ್ಯಾಜ್ಞಾನವಾಗುವುದು ಮೂವತ್ತೂರು ಕೋಟಿ ದೇವತೆಗಳೆಂಬುದರ ಗ್ರಹಿಕೆ ನಮಗೆ ಸಾಮಾನ್ಯವಾಗಿ ಇರುವುದಿಲ್ಲ. ಇದುವರೆಗೆ ವಿವರಿಸಿದ ದೇವತಾಗಣಗಳ ಯಜಮಾನರ ವಿಷಯವನ್ನು ತಿಳಿದ ಮೇಲೆ, ಅವರವರ ಅಧೀನದಲ್ಲಿ ಸಹಸ್ರಾರು ಸಣ್ಣ ಪುಟ್ಟ ದೇವತೆಗಳಿರುವರೆಂಬುದ

ವೇದ್ಯವಾಗುತ್ತದೆ. ಪಿಶಾಚ, ದೈತ್ಯ, ದಾನವ, ಕೂಷ್ಮಾಂಡಾದಿ ದೇವತಾಗಣಗಳು ಇರುವವು. ಅವುಗಳಂತೆ ಆಯಾ ಗುಂಪುಗಳಿಗೆ ಸೇರಿದ, ಮುಕ್ತಿಯೋಗ್ಯರಲ್ಲದ ನೀಚಜೀವರೂ ಇರುವರು. ಗಣನಾಯಕರು ಈ ಎಲ್ಲರ ಮೇಲೂ ಅಧಿಕಾರ ಹೊಂದಿ ನಿಯಂತ್ರಿಸುವರು.

**ಪ್ರಾಧಾನ್ಯತೋ ಯಾನೃಷಯ ಆಮನಂತಿ**
**ಲೀಲಾವತಾರಾನ್ಪುರುಷಸ್ಯ ಭೂಮ್ನಃ ।**
**ಆಪೀಯತಾಂ ಕರ್ಮಕಷಾಯ**
**ಶೋಷಾನನುಕ್ರಮಿಷ್ಯೇತಇಮಾನ್ಸುಪೇಶಲಾನ್ ॥ ೪೫ ॥**

ಭೂಮ್ನಃ = ಗುಣಪೂರ್ಣನೂ ಸರ್ವವ್ಯಾಪಿಯೂ ಆದ; ಪುರುಷಸ್ಯ = ಭಗವಂತನ; ಯಾನ್ ಲೀಲಾವತಾರಾನ್ = ಲೀಲೆಯಿಂದಲೋ ಎಂಬಂತೆ ಪ್ರಕಟಿಸುವ ಯಾವ ಅವತಾರಗಳನ್ನು; ಋಷಯಃ = ಬ್ರಹ್ಮಾದಿ ಜ್ಞಾನಿ ವರೇಣ್ಯರು; ಆಮನಂತಿ = ತಿಳಿದು ಪೂಜಿಸುವರೋ; ಅಂತಹ; ಕರ್ಮಕಷಾಯ ಶೋಷಾನ್ = ಬಂಧಕವಾದ ಕರ್ಮರೂಪ ರಸವನ್ನು ಶೋಷಿಸಿಬಿಡುವಂತಹ; ಸುಪೇಶಲಾನ್ = ಅತ್ಯಂತ ಮಧುರವಾಗಿರುವ; ಇಮಾನ್ = ಈ ಅವತಾರಗಳನ್ನು ಕುರಿತು; ತೇ = ನಿನಗೆ; ಅನುಕ್ರಮಿಷ್ಯೇ = ಕ್ರಮವಾಗಿ ತಿಳಿಸುತ್ತೇನೆ; ಆಪೀಯತಾಂ = ಅದನ್ನು ಆಸ್ವಾದಿಸಿ ಮನಸ್ಸಿಗೆ ತಂದುಕೊಂಡು ನೀನು ಕೃತಾರ್ಥನಾಗು.

೪೨ರಿಂದ ೪೪ನೇ ಶ್ಲೋಕಪೂರ್ತಿ ವರ್ಣಿಸಿರುವುದು ಭಗವಂತನ ವಿಭೂತಿರೂಪಗಳನ್ನು. ೪೫ನೇ ಶ್ಲೋಕದಲ್ಲಿ ಹೇಳಿರುವುದು ಮುಂದಿನ ಅಧ್ಯಾಯದಲ್ಲಿ ತಿಳಿಸುವ ಮತ್ಸ್ಯಾದಿ ಅವತಾರಗಳನ್ನು ಕುರಿತು.

ಬ್ರಹ್ಮಾದಿ ಜ್ಞಾನಿಗಳು ಎಂದು ಚತುರ್ಮುಖ ಬ್ರಹ್ಮದೇವರು ನಾರದರನ್ನು ಕುರಿತು ಹೇಳುವಾಗ, ಹಿಂದಿನ ಕಲ್ಪಗಳ ಮತ್ತು ಮುಂದಿನ ಕಲ್ಪಗಳ ಬ್ರಹ್ಮರನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಹೇಳಿದ್ದಾರೆಂದು ಭಾವಿಸಬೇಕು.

ಭಗವಂತನ ಅವತಾರ ಲೀಲಾಕಥೆಗಳ ಶ್ರವಣವೇ ಕರ್ಮಗಳನ್ನು ನೀಗಿಕೊಳ್ಳುತ್ತಾ ಭಕ್ತಿಯನ್ನು ಬೆಳೆಸಿಕೊಂಡು ಮುಕ್ತರಾಗುವುದಕ್ಕೆ ಮುಖ್ಯ ಸಾಧನ.

ಇಲ್ಲಿಗೆ ಆರನೆಯ ಅಧ್ಯಾಯ ಮುಗಿಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

---

# ದ್ವಿತೀಯ ಸ್ಕಂಧ—ಏಳನೆಯ ಅಧ್ಯಾಯ ಪ್ರಾರಂಭ

**ಬ್ರಹ್ಮೋವಾಚ:**– ಬ್ರಹ್ಮದೇವರು ಹೇಳಿದರು.

> **ಯತ್ರೋದ್ಯತಃ ಕ್ಷಿತಿತಲೋದ್ಧರಣಾಯ**
> **ಬಿಭ್ರತ್ಕ್ರಾಡೀಂ ತನುಂ ಸಕಲಯಜ್ಞಮಯೀಮನಂತಃ ।**
> **ಅಂತರ್ಮಹಾರ್ಣವ ಉಪಾಗತಮಾದಿದೈತ್ಯಂ**
> **ತಂ ದಂಷ್ಟ್ರಯಾದ್ರಿಮಿವ ವಜ್ರಧರೋದದಾರ** ॥ ೧ ॥

ಕ್ಷಿತಿತಲೋದ್ಧರಣಾಯ = ರಸಾತಳದಲ್ಲಡಗಿಸಿಟ್ಟಿದ್ದ ಭೂಮಿಯನ್ನು ಮೇಲಕ್ಕೆತ್ತಿ ತರುವುದಕ್ಕಾಗಿ; ಯತ್ರ ಉದ್ಯತಃ = ಬ್ರಹ್ಮಾದಿಗಳಿಂದ ಪ್ರಾರ್ಥಿತನಾಗಿ ಉದ್ಯುಕ್ತನಾದ ಸಮಯದಲ್ಲಿ; ಸಕಲ ಯಜ್ಞಮಯೀಂ = ಸಕಲ ಯಜ್ಞಾಂಗಗಳಿಗೂ ಆಶ್ರಯನಾದ; ಕ್ರೌಡೀಂ ತನುಂ ಬಿಭ್ರತ್ = ವರಾಹರೂಪವನ್ನು ತಾಳಿದ; ಅನಂತಃ = ಆದಿಪುರುಷನು; ಅಂತರ್ಮಹಾರ್ಣವೇ = ಘನೋದಕದಂತರಾಳದಲ್ಲಿ; ಉಪಾಗತಂ = ಅಡ್ಡಿಯಾಗಿ ಬಂದ; ಆದಿ ದೈತ್ಯಂ = ಆದಿ ಹಿರಣ್ಯಾಕ್ಷನನ್ನು; ವಜ್ರಧರಃ = ಇಂದ್ರನು; ಅದ್ರಿಂ ಇವ = ಪರ್ವತವನ್ನು ವಜ್ರಾಯುಧದಿಂದ ಸೀಳಿದಂತೆ; ದಂಷ್ಟ್ರಯಾ = ತನ್ನ ಕೋರೆದಾಡೆಗಳಿಂದ; ದದಾರ = ಬಡಿದು ಸೀಳಿಹಾಕಿದನು.

ಇದು, ಪದ್ಮಕಲ್ಪದ ರಾತ್ರಿ ಕಳೆದು, ಶ್ವೇತವರಾಹಕಲ್ಪದ ಹಗಲು ಪ್ರಾರಂಭವಾದಾಗ ನಡೆದ ಸಂಗತಿ. ಮುಂದೆ ಒಂದು ಕೃತಯುಗದಲ್ಲಿ, ನರಸಿಂಹಾವತಾರಕ್ಕೆ ಮೊದಲು, ಭೂದೇವಿಯನ್ನು ಮೇಲೆತ್ತಿ ತರುವುದಕ್ಕಾಗಿ ಇನ್ನೊಮ್ಮೆ ವರಾಹಾವತಾರವಾಗುವುದು, 'ಭೂವರಾಹ' ಅವತಾರ. ಮೊದಲ ಸಲ ಇಡೀ ಭೂಮಂಡಲವನ್ನೇ ತರಬೇಕಾಯಿತು. ಎರಡನೆಯ ಸಲ, ಮುಳುಗಿಹೋಗಿದ್ದ ಭಾರತದ ಪಶ್ಚಿಮಕರಾವಳಿ ಪ್ರದೇಶವನ್ನು ಮಾತ್ರ ಮೇಲಕ್ಕೆತ್ತಿದುದು. ಆಗ ಕಂಕುಳಿನಲ್ಲಿ ಭೂದೇವಿಯನ್ನೆತ್ತಿಕೊಂಡು, ಕೋಡಿನ ತುದಿಯಿಂದ ಭೂಪ್ರದೇಶವನ್ನು ಮೇಲೆತ್ತಿದುದರ ಕುರುಹಾಗಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ವರಾಹ ಪರ್ವತವಿದೆ. ಮೊದಲಸಲ ಕೋಡಿನ ತುದಿಯಿಂದ ಭೂಮಿಯನ್ನು ಮೇಲಕ್ಕೆತ್ತಿಕೊಂಡು ಹೊರಟಾಗ ಹಿರಣ್ಯಾಕ್ಷನು ಅಡ್ಡಿಪಡಿಸಲು, ಗದೆಯಿಂದ ಅವನನ್ನು ಬಡಿದು ಚಕ್ರದಿಂದ ಸೀಳಿಹಾಕಿದನು.

**ಜಾತೋ ರುಚೇರಜನಯತ್ಸುಯಶಾಃ ಸುಯಜ್ಞ**
**ಆಕೂತಿ ಸೂನುರಮರಾನಥ ದಕ್ಷಿಣಾಯಾಂ ।**
**ಲೋಕತ್ರಯಸ್ಯ ಮಹತೀ ಮಹರದ್ಯದಾರ್ತಿಂ**
**ಸ್ವಾಯಂಭುವೇನ ಮನುನಾ ಹರಿರಿತ್ಯನೂಕ್ತಃ** ॥ ೨ ॥

ಸುಯಶಾಃ = ಸ್ತುತ್ಯರ್ಹವಾದ ಕೀರ್ತಿಯುಳ್ಳ; ಸುಯಜ್ಞಃ = ಉತ್ತಮವಾದ ಸ್ವಾರ್ಪಣರೂಪಯಜ್ಞಗಳಿಗೆ ಆಶ್ರಯನಾದ ಶ್ರೀಮನ್ನಾರಾಯಣನು; ರುಚೇಃ = ರುಚಿನಾಮಕ ಪ್ರಜಾಪತಿಯಿಂದ; ಆಕೂತಿ ಸೂನುಃ = ಆಕೂತೀದೇವಿಯ ಮಗನೆನಿಸಿ; ಅಥ = ಅನಂತರ; ದಕ್ಷಿಣಾಯಾಂ = ರಮಾ ಅವತಾರಳಾದ ದಕ್ಷಿಣಾದೇವಿಯಲ್ಲಿ; ಅಮರಾನ್ = ತುಷಿತರೆಂಬ ದೇವತೆಗಳನ್ನು; ಅಜನಯತ್ = ಪಡೆದನು; ಯತ್ = ಯಾವ ಕಾರಣದಿಂದ; ಲೋಕತ್ರಯಸ್ಯ = ಮೂರುಲೋಕಗಳಿಗೂ ಪ್ರಾಪ್ತವಾಗಿದ್ದ; ಮಹತೀಂ ಆರ್ತಿಂ = ಮಹಾವಿಪತ್ತನ್ನು; ಅಹರತ್ = ಪರಿಹರಿಸಿದನೋ, ಆ ಕಾರಣದಿಂದ; ಹರಿಃ ಇತಿ = ಇವನು ಶ್ರೀಹರಿಯೇ ಎಂದು; ಸ್ವಾಯಂಭುವೇನ ಮನುನಾ = ಸ್ವಾಯಂಭುವನಾದ ಆದಿಮನುವಿನಿಂದ; ಅನೂಕ್ತಃ = ವೈದಿಕಮಂತ್ರಗಳಿಂದ ಸ್ತುತಿಸಲ್ಪಟ್ಟನು.

ಯಜ್ಞನಾಮಕನಾಗಿ ಜನಿಸಿದ ಈ ಶ್ರೀಮನ್ನಾರಾಯಣನು ಮುಂದೆ ಇಂದ್ರಪದವಿಯನ್ನಲಂಕರಿಸಿ, ಸ್ವಾಯಂಭುವನನ್ನೇ ತಿಂದು ಬಿಡಲು ಬಂದ ರಾಕ್ಷಸರನ್ನು ಸಂಹರಿಸಿ, ಸಂಸಾರಕ್ಲೇಶ ನಾಶಕನಾದ ಶ್ರೀಹರಿಯೇ ಇವನೆಂದು ಸ್ತುತಿಸಲ್ಪಟ್ಟನು.

**ಜಜ್ಞೇ ಚ ಕರ್ದಮ ಗೃಹೇ ದ್ವಿಜದೇವಹೂತ್ಯಾಂ**
**ಸ್ತ್ರೀಭಿಃ ಸಮಂ ನವಭಿರಾತ್ಮಗತಿಂ ಸ್ವಮಾತ್ರೇ ।**
**ಊಚೇಯ ಆತ್ಮ ಶಮಲಂ ಗುಣಸಂಗಪಂಕಮಸ್ಮಿನ್ವಿಧೂಯ**
**ಕಪಿಲಃ ಸ್ವಗತಿಂ ಪ್ರಪೇದೇ** ॥ ೩ ॥

ದ್ವಿಜ = ಬ್ರಹ್ಮಜ್ಞಾನಿಯಾದ ನಾರದಾ; ಚ = ಅನಂತರ; ಕರ್ದಮಗೃಹೇ = ಕರ್ದಮಋುಷಿಯ ಮನೆಯಲ್ಲಿ; ದೇವಹೂತ್ಯಾಂ = ದೇವಹೂತೀ ಎಂಬ ಪತ್ನಿಯ ದೆಸೆಯಿಂದ; ನವಭಿಃ ಸ್ತ್ರೀಭಿಃ ಸಮಂ = ಒಂಭತ್ತು ಮಂದಿ ಹೆಣ್ಣುಮಕ್ಕಳ ಸಹೋದರನಾಗಿ; ಜಜ್ಞೇ = ಅವತರಿಸಿದನು; ಸ್ವಮಾತ್ರೇ = ತನ್ನ ತಾಯಿ ಎನಿಸಿದ ದೇವಹೂತೀ ದೇವಿಗೆ; ಯಃ ಕಪಿಲಃ = ಈ ಕಪಿಲನಾಮಕ ಪುತ್ರನು; ಆತ್ಮಗತಿಂ = ಆತ್ಮತತ್ವಜ್ಞಾನವನ್ನು; ಊಚೇ = ಉಪದೇಶ ಮಾಡಿದನು; ಅಸ್ಮಿನ್ = ಈ ತಾಯಿಯಲ್ಲಿ; ಆತ್ಮಶಮಲಂ = ಮನೋದೋಷರೂಪವಾದ; ಗುಣಸಂಗಪಂಕಂ =

ತ್ರಿಗುಣಸಂಬಂಧಿಯಾದ ಕಶ್ಮಲವನ್ನು; ವಿಧೂಯ = ಸಾಂಖ್ಯಶಾಸ್ತ್ರೋಪದೇಶದಿಂದ ತೊಳೆದು ಹಾಕಿ; ಸ್ವಗತಿಂ = ಸ್ವಸ್ಥಾನವಾದ ವೈಕುಂಠವನ್ನು; ಪ್ರಪೇದೇ = ಸೇರಿಕೊಂಡನು.

ಈಗಿನ ಸಾಂಖ್ಯಶಾಸ್ತ್ರವೆಂಬುದು ಮಿಶ್ರತತ್ವಗಳಿಂದ ಕೂಡಿಕೊಂಡಿದೆ. ಇದರ ಪ್ರವರ್ತಕನಾದ ಬೇರೊಬ್ಬ ಕಪಿಲ ಋಷಿಯುಂಟೆಂದೂ ಹೇಳುತ್ತಾರೆ. ಆದರೆ, ಇಲ್ಲಿ ಹೇಳಿರುವುದು ಶ್ರೀಹರಿಯೇ ಕಪಿಲರೂಪದಿಂದ ಉಪದೇಶ ಮಾಡಿದ ಶುದ್ಧ ಸಾಂಖ್ಯಶಾಸ್ತ್ರ.

**ಅತ್ರೇರಪತ್ಯಮಭಿಕಾಂಕ್ಷತ ಆಹ ತುಷ್ಟೋ**
**ದತ್ತೋಮಯಾಹಮಿತಿ ಯದ್ಭಗವಾನ್ಸದತ್ತಃ ।**
**ಯತ್ಪಾದ ಪಂಕಜ ಪರಾಗ ಪವಿತ್ರದೇಹಾ**
**ಯೋಗರ್ಧಿಮಾಪುರಮಯೀಂ ಯದುಹೈಹಯಾದ್ಯಾಃ** ॥ ೪ ॥

ಅಪತ್ಯಂ ಅಭಿಕಾಂಕ್ಷತಃ = ಭಗವಂತನಂತಹ ಪುತ್ರನನ್ನು ಪಡೆಯಬೇಕೆಂದು ಅಪೇಕ್ಷಿಸಿದ ಅತ್ರಿಮುನಿಯ ತಪಸ್ಸಿಗೆ; ತುಷ್ಟಃ = ಸಂತುಷ್ಟನಾದ ಭಗವಂತನು; ಮಯಾ = ನನ್ನಿಂದ; ಅಹಂ = ನಾನು; ದತ್ತಃ = ನಿನಗೆ ದತ್ತನಾಗಿದ್ದೇನೆ; ಇತಿ ಯತ್ ಆಹ = ಹೀಗೆ ಹೇಳಿದ ಕಾರಣದಿಂದ; ಸಃ ಭಗವಾನ್ = ಅತ್ರಿ ಅನಸೂಯಾದೇವಿಯರ ಪುತ್ರನೆಂದು ಜನಿಸಿದ ಭಗವಂತನು; ದತ್ತಃ = ದತ್ತ (ದತ್ತ + ಆತ್ರೇಯಃ) ಎಂದು ಪ್ರಸಿದ್ಧನಾಗಿದ್ದಾನೆ; ಯತ್ = ಯಾರ; ಪಾದಪಂಕಜ ಪರಾಗ ಪವಿತ್ರದೇಹಾಃ = ಪಾದಕಮಲಪರಾಗ ಧಾರಣೆಯಿಂದ ದೇಹಪಾವಿತ್ರ್ಯವನ್ನು ಪಡೆದವರೋ, ಆ; ಯದು ಹೈಹಯ ಆದ್ಯಾಃ = ಯದುರಾಯ, ಕಾರ್ತವೀರ್ಯಾರ್ಜುನ ಮೊದಲಾದವರು; ಅಮಯೀಂ (ಅ + ಮಯೀಂ) ಪುರುಷೋತ್ತಮನಾದ ಭಗವಂತನನ್ನೇ ಧ್ಯಾನಮಾಡತಕ್ಕಂತಹ; ಯೋಗರ್ಧಿಂ = ಯೋಗ ಸಿದ್ಧಿಯನ್ನು; ಆಪುಃ = ಪಡೆದರು.

ಅತ್ರಿ ಪುತ್ರ 'ದತ್ತ'ನಾದುದರಿಂದ 'ದತ್ತಾತ್ರೇಯ' ಎಂಬ ಹೆಸರು. ಇದು ಜ್ಞಾನಪ್ರಧಾನವಾದ ಅವತಾರ.

**ತಪ್ತಂ ತಪೋ ವಿವಿಧಲೋಕ ಸಿಸೃಕ್ಷಯಾಮಯಾ**
**ಆದೌ ಸನತ್ಸುತಪಸಸ್ತಪತಃ ಸನೋಭೂತ್ ।**
**ಪ್ರಾಕ್ಕಲ್ಪ ಸಂಪ್ಲವ ವಿನಷ್ಟಮಿಹಾತ್ಮತತ್ವಂ ಸಮ್ಯಕ್**
**ಜಗಾದ ಮುನಯೋ ಯದಚಕ್ಷತಾತ್ಮನ್** ॥ ೫ ॥

ಆದೌ = ಲೋಕಗಳನ್ನು ಸೃಷ್ಟಿಸುವುದಕ್ಕೆ ಮೊದಲು; ವಿವಿಧಲೋಕ ಸಿಸೃಕ್ಷಯಾ = ಸ್ವರ್ಗಮರ್ತ್ಯಪಾತಾಳಾದಿ ಲೋಕಗಳನ್ನು ಸೃಷ್ಟಿಸಬೇಕೆಂಬ ಇಚ್ಛೆಯಿಂದ; ಮಯಾ = ನನ್ನಿಂದ; ತಪಃ ತಪ್ತಂ = ತಪಸ್ಸು ಆಚರಿಸಲ್ಪಟ್ಟಿತು; ಸನಾತ್ ಆದೌ = ಸನಕ ನಾಮಕನ ಸೃಷ್ಟಿಗೆ ಮೊದಲು; ತಪತಃ ತಪಸಃ = ಉತ್ತಮವಾದ ತಪಸ್ಸಿನ ಫಲವಾಗಿ; ಸನಃ = ಮಹಾವಿಷ್ಣುವೇ ಆ ಹೆಸರಿನಿಂದ; ಅಭೂತ್= ಅವತರಿಸಿದನು; ಆತ್ಮನ್= ಆತ್ಮಜ್ಞಾನಿಯಾದ ನಾರದಾ; ಮುನಯಃ ಯತ್ ಆತ್ಮತತ್ವಂ ಅಚಕ್ಷತ = ಋಷಿಗಳು ಹೃತ್ಪದ್ಮವಾಸಿಯಾದ ಯಾವ ಪರಮಾತ್ಮನ ವಿಷಯವನ್ನು ಕಂಡಿದ್ದರೋ; ಪ್ರಾಕ್ಕಲ್ಪ ಸಂಪ್ಲವ ವಿನಷ್ಟಂ = ಹಿಂದಿನ (ಪದ್ಮ)ಕಲ್ಪದ ರಾತ್ರಿಯಲ್ಲಿ ಹಬ್ಬಿದ ಜಲಪ್ರಳಯದಿಂದ ನಷ್ಟವಾಗಿಹೋದ; ತತ್= ಅದನ್ನು; ಸಮ್ಯಕ್ ಜಗಾದ = ಸನತ್ಕುಮಾರ ರೂಪದಿಂದ ಚೆನ್ನಾಗಿ ಉಪದೇಶ ಮಾಡಿದನು.

ಸಕಲ ಚೇತನರಿಗೂ ಆತ್ಮಸ್ವರೂಪನಾಗಿ ಸರ್ವರ ಹೃದಯಕಮಲಗಳ ನಿವಾಸಿಯಾಗಿರುವ ಪರಮಾತ್ಮನ ವಿಷಯವನ್ನು ದ್ವಿತೀಯ ಪರಾರ್ಧದ ಮೊದಲನೆ ದಿನವಾದ ಪದ್ಮಕಲ್ಪದಲ್ಲಿ ಋಷಿಗಳು ತಮ್ಮ ತಪಃ ಪ್ರಭಾವದಿಂದ ಕಂಡುಕೊಂಡಿದ್ದಾರೆ. ಆ ತತ್ವಜ್ಞಾನವು ಬ್ರಹ್ಮನ ದಿನಕಲ್ಪಾಂತ್ಯದ ಜಲಪ್ರಳಯದಿಂದ ನಷ್ಟವಾಗಿ ಹೋಯಿತು. ಶ್ವೇತವರಾಹ ಕಲ್ಪಾರಂಭದಲ್ಲಿ ಬ್ರಹ್ಮನ ತಪಸ್ಸಿಗೆ ಮೆಚ್ಚಿ ಮಹಾವಿಷ್ಣುವೇ 'ಸನ' (ಸಮಾರಾಧ್ಯ) ಎಂಬ ಹೆಸರಿನಿಂದ ಅವತರಿಸಿ, ಮುಂದೆ ಸನಕ, ಸನಂದನ, ಸನಾತನ, ಸನತ್ಕುಮಾರ (ಸನತ್ಸುಜಾತ) ಎಂಬ ನಾಲ್ಕು ರೂಪಗಳಿಂದ ನಾಲ್ವರು ಬಾಲಮಹಾಯೋಗಿಗಳಲ್ಲಿ ಕಾಣಿಸಿಕೊಂಡನು. ಮೂವರಲ್ಲಿ ಭಗವಂತನ ವಿಶೇಷಾಂಶ; ಸನಾತನ ಎಂಬುದು ಅವನದೇ ರೂಪ. ಆ ರೂಪದಿಂದ ನಷ್ಟವಾಗಿದ್ದ ಭಗತ್ತತ್ವವನ್ನು ಉಪದೇಶ ಮಾಡಿದನು ಎಂಬುದಕ್ಕೆ "ಸನತ್ಸುಜಾತೀಯ" ಎಂಬ ಶಾಸ್ತ್ರಗ್ರಂಥ ನಿದರ್ಶನವಾಗಿದೆ.

**ಧರ್ಮಸ್ಯ ದಕ್ಷದುಹಿತರ್ಯಜನಿ ಸ್ವಮೂರ್ತ್ಯಾ**
**ನಾರಾಯಣೋ ನರ ಇತಿ ಸ್ವತಪಃ ಪ್ರಭಾವಃ ।**
**ದೃಷ್ಟ್ವಾತ್ಮನೋ ಭಗವತೋ ನಿಯಮಾವಲೋಪಂ**
**ದೇವ್ಯಸ್ತ್ವನಂಗಪೃತನಾ ಘಟಿತುಂ ನ ಶೇಕುಃ** ॥ ೬ ॥

ಧರ್ಮಸ್ಯ = ಧರ್ಮಾತ್ಮನಾದ; ದಕ್ಷದುಹಿತರಿ = ದಕ್ಷ ಪ್ರಜಾಪತಿಯ ಪುತ್ರಿಯ ಗರ್ಭದಲ್ಲಿ; ಸ್ವಮೂರ್ತ್ಯಾ = ತನ್ನ ಸ್ವರೂಪಾಂಶದಿಂದ; ನಾರಾಯಣಃ = ಶ್ರೀಮನ್ನಾರಾಯಣನು; ಸ್ವತಪ ಪ್ರಭಾವಃ = ತನ್ನ ತಪೋರೂಪ ಮಹಾತ್ಮ್ಯಗಳನ್ನು

ಪ್ರಕಟಿಸುತ್ತಾ; ನರಃ ಇತಿ = ನರ ಎಂಬ ಹೆಸರಿನಿಂದ; ಅಜನಿ = ಅವತಾರ ಮಾಡಿದನು; ದೃಷ್ಟಾತ್ಮನಃ = ತಪಸ್ಸಿನ ಆವಶ್ಯಕತೆ ಇಲ್ಲದೆಯೇ ತನ್ನ ಸ್ವರೂಪವನ್ನು ಬಲ್ಲವನಾದ; ಭಗವತಃ = ಲೋಕಶಿಕ್ಷಾರ್ಥವಾಗಿ ತಪಸ್ಸನ್ನಾಚರಿಸುತ್ತಿದ್ದ ಮಹಾಮಹಿನ; ನಿಯಮ ಅವಲೋಪಂ = ತಪೋ ಭಂಗವನ್ನು; ಘಟಿತುಂ = ಉಂಟು ಮಾಡಲು; ಅನಂಗ ಪೃತನಾಃ = ಕಾಮದೇವನ ಸೈನ್ಯದಂತಿದ್ದ ದೇವತಾ ಸ್ತ್ರೀಯರು; ನಶೇಕುಃ = ಸಮರ್ಥರಾಗಲಿಲ್ಲ.

ಸ್ವಯಂ ನಾರಾಯಣನಾಗಿಯೂ, ಶೇಷದೇವರಲ್ಲಿ ತನ್ನ ವಿಶೇಷಾಂಶದಿಂದ ನರನಾಗಿಯೂ ಅವತಾರ ಮಾಡಿದುದರಿಂದ ನರ, ನಾರಾಯಣ ಎಂಬ ರೂಪಗಳೆಂದು ಭಾವಿಸಬೇಕು. ಭಗವಂತನಿಗೆ ತಪಸ್ಸಿನ ಆವಶ್ಯಕತೆ ಇಲ್ಲ; ಲೋಕಶಿಕ್ಷಾರ್ಥವಾಗಿ ತಪಸ್ಸಿನ ರೀತಿಯನ್ನು ಆಚರಿಸಿ ತೋರಿಸಿದನೆಂದಷ್ಟೇ ತಿಳಿಯಬೇಕು. ತಪಸ್ಸಿನ ಬಾಹ್ಯಾಚರಣೆಯನ್ನು ಇತರರು ಕಂಡು ಅನುಸರಿಸಿರಬಹುದು; ಅಂತರಂಗದ ಬಗೆಯನ್ನು ಇತರರು ಹೇಗೆ ತಿಳಿದಾರು ಎಂದು ಶಂಕಿಸಬೇಕಾಗಿಲ್ಲ. ಪರಮಾತ್ಮ ತಾನು ಪ್ರಕಟಿಸುವ ತನ್ನ ದೇಹಗಳಲ್ಲಿ ಮುಖ್ಯರಾದ ತತ್ತ್ವಾಭಿಮಾನಿ ದೇವತೆಗಳಿಗೆ ಆಶ್ರಯಕೊಟ್ಟಿರುತ್ತಾನೆ. ಆದುದರಿಂದ ಅವನ ಅಂತರಂಗವನ್ನು ಅವರು ತಮ್ಮ ತಮ್ಮ ಯೋಗ್ಯತಾನುಸಾರ ತಿಳಿಯಬಲ್ಲರು. ಈ ಎರಡು ರೂಪಗಳಿಂದ ಭಗವಂತನು ಭರತವರ್ಷದ ಮೇರೆಯಾದ ಬೃಹತ್ ಹಿಮಾಲಯದ ನರ ನಾರಾಯಣಾಶ್ರಮದಲ್ಲಿ ಈಗಲೂ ಇದ್ದಾನೆ. ಈ ಭಗವದವತಾರಿಯು ತನ್ನ ಮೇಲೆ ಹಾಯ್ದು ಬಂದ ದೇವತಾ ಸ್ತ್ರೀಯರಿಗಿಂತಲೂ ಹೆಚ್ಚು ಸುಂದರಿಯರಾದ ಸ್ತ್ರೀಯರನ್ನು ತನ್ನ ಶರೀರದಿಂದಲೇ ನಿರ್ಮಿಸಿ ತೋರಿಸಿ ಬಂದವರನ್ನು ನಾಚಿಸಿ ಹಿಮ್ಮೆಟ್ಟಿಸಿದನಂತೆ.

**ಕಾಮಂ ಹಂತಿ ಕೃತಿನೋ ನನು ರೋಷ**
**ದೃಷ್ಟ್ಯಾ ರೋಷಂ ದಹಂತಮುತತೇನ ದಹಂತ್ಯಸಹ್ಯಂ ।**
**ಸೋಯಂ ಯದಂತರಮಲಂ ನಿವಿಶನ್ಬಿಭೇತಿ**
**ಕಾಮಃ ಕಥಂ ನು ಪುನರಸ್ಯ ಮನಂ ಶ್ರಯೇತ** ॥ ೭ ॥

ಕೃತಿನಃ = ಮಹಾತ್ಮರಾದ ರುದ್ರಾದಿಗಳು; ಕಾಮಂ = ಕಾಮನನ್ನು (ಕಾಮವನ್ನು); ರೋಷ ದೃಷ್ಟ್ಯಾ = ಕೋಪದಿಂದ; ದಹಂತಿ ನನು = ಸುಟ್ಟುಬಿಡುವರಲ್ಲವೆ ! ಉತ = ಹಾಗಿದ್ದರೂ; ದಹಂತಂ = ತಮ್ಮನ್ನು ಸುಡುತ್ತಿರುವ; ಅಸಹ್ಯಂ = ಸಹಿಸಲಾಗದ; ರೋಷಂ = ಕೋಪಸ್ವಭಾವವನ್ನು; ತೇ = ಅವರು; ನದಹಂತಿ = ಸುಡಲು ಸಮರ್ಥರಾಗಿರುವುದಿಲ್ಲ; ಸಃ ಅಯಂ = ಈ ಕ್ರೋಧಾಭಿಮಾನಿಯು; ಯದಂತರಂ = ಯಾವ ಭಗವಂತನ ಮನಸ್ಸನ್ನು; ನಿವಿಶನ್ = ಪ್ರವೇಶಿಸಲಿಚ್ಛಿಸಿ; ಬಿಭೇತಿ = ಹೆದರುವನೋ; ಅಂತಹ; ಅಸ್ಯಮನಂ = ಈ ಭಗವಂತನ

ಮನಸ್ಸನ್ನು; ಕಾಮಃ = ಕಾಮದೇವನು; ಪುನಃ = ಇನ್ನು; ಕಥಂನು ಶ್ರಯೇತ = ಹೇಗೆ ತಾನೇ ಹೊಕ್ಕಿರಬಲ್ಲನು ?

ಅರಿಷಡ್ವರ್ಗಗಳಲ್ಲಿ ಪ್ರಧಾನವಾದುದು ಕಾಮ; ಕ್ರೋಧಾದಿಗಳು ಸಹಕಾರಿಗಳು. ಕ್ರೋಧಾಧಿಗಳಿಲ್ಲದ ಭಗವಂತನಲ್ಲಿ ಕಾಮನಿಗೂ ಸ್ಥಾನವಿಲ್ಲವೆಂಬುದು ತಾತ್ಪರ್ಯ. ಇದರಿಂದ ಜಡಗುಣಬದ್ಧರಾದ ಜೀವರಿಗೂ, ಗುಣಾತೀತನಾದ ಭಗವಂತನಿಗೂ ಇರುವ ಅಂತರವು ವೇದ್ಯವಾಗುತ್ತದೆ.

**ವಿದ್ಧಃ ಸಪತ್ನ್ಯುದಿತ ಪತ್ರಿಭಿರಂತಿರಾಜ್ಞೋ**
**ಬಾಲೋಽಪಿಸನ್ನುಪಗತಸ್ತಪಸೇ ವನಾಯ ।**
**ತಸ್ಮಾ ಅದಾದ್ಧ್ರುವಗತಿಂ ಗೃಣತೇ ಪ್ರಸನ್ನೋ ದಿವ್ಯಾಃ**
**ಸ್ತುವಂತಿ ಮುನಯೋ ಯದುಪರ್ಯಧಸ್ತಾತ್ ॥ ೮ ॥**

ಬಾಲಃ ಅಪಿ ಸನ್ = ಸಣ್ಣ ಬಾಲಕನಾದರೂ ಕೂಡ; ರಾಜ್ಞಃ ಅಂತಿ = ಉತ್ತಾನ ಪಾದರಾಯನ ಬಳಿಯಲ್ಲಿ; ಸಪತ್ನ್ಯಾ = ಅವನ ದ್ವಿತೀಯ ಪತ್ನಿಯಾದ ತನ್ನ ಚಿಕ್ಕಮ್ಮನಿಂದ; ಉದಿತ = ಪ್ರಯೋಗಿಸಲ್ಪಟ್ಟ; ಪತ್ರಿಭಿಃ = ಮಾತುಗಳೆಂಬ ಬಾಣಗಳಿಂದ; ವಿದ್ಧಃ = ಬಡಿಯಲ್ಪಟ್ಟವನಾಗಿ; ತಪಸೇ = ತಪಸ್ಸನ್ನಾಚರಿಸುವುದಕ್ಕಾಗಿ; ವನಾಯ = ಅಡವಿಯನ್ನು ಕುರಿತು; ಉಪಗತಃ = ಹೊರಟುಬಿಟ್ಟನು; ಗೃಣತಃ = ನಾರದರಿಂದ ಉಪದಿಷ್ಟನಾಗಿ ತಪವನ್ನಾಚರಿಸಿ, ಪ್ರತ್ಯಕ್ಷನಾದ ವಾಸುದೇವರೂಪಿ ಭಗವಂತನನ್ನು ಸ್ತೋತ್ರ ಮಾಡಿದ; ತಸ್ಮಾ = ಆ ಬಾಲಕನಿಗೆ; ಪ್ರಸನ್ನಃ = ಪ್ರಸನ್ನನಾದ ಭಗವಂತನು; ಯದುಪರಿ ಅಧಸ್ತಾತ್ = ಯಾವ ಸ್ಥಾನದ ಮೇಲ್ಭಾಗದಲ್ಲಿಯೂ ಕೆಳಭಾಗದಲ್ಲಿಯೂ ಸಂಚರಿಸುವ; ದಿವ್ಯಾಃ ಮುನಯಃ = ತಾರಾಲೋಕಗಳ ಸಿದ್ಧಪುರುಷರು; ಸ್ತುವಂತಿ = ಹೊಗಳುವರೋ, ಅಂತಹ; ಧ್ರುವಗತಿಂ = ಧ್ರುವಸ್ಥಾನವನ್ನು; ಆದಾತ್ = ಅನುಗ್ರಹಿಸಿದನು.

ನರನಾರಾಯಣ ರೂಪಗಳಿಂದ ಅವತರಿಸಿ ತಪಶ್ಚರ್ಯೆಯ ರೀತಿಯನ್ನು ಭಗವಂತನು ಮಾಡಿ ತೋರಿಸುತ್ತಿರಲು, ನಾರದಾದಿಗಳು ಅದರಿಂದ ಪಾಠಕಲಿಯುತ್ತಿದ್ದಾರೆ. ಅಂತಹ ನಾರದರಿಂದ ಉಪದಿಷ್ಟನಾದ ಬಾಲಕನು ಅದೇ ರೀತಿಯಲ್ಲಿ ತಪಸ್ಸನ್ನಾಚರಿಸಿ ಭಗವಂತನ ಅನುಗ್ರಹಕ್ಕೆ ಪಾತ್ರನಾದನೆಂಬುದನ್ನು ಇಲ್ಲಿ ತಿಳಿಸಿದ್ದಾರೆ. ಭಗವಂತನ ಪ್ರಸಾದ ಪ್ರಾಪ್ತಿಗೆ ತಪೋರೂಪವಾದ ಭಕ್ತಿಯು ಪ್ರಧಾನವೇ ಹೊರತು ವಯಸ್ಸು ಪಾಂಡಿತ್ಯ ಮೊದಲಾದವುಗಳಲ್ಲವೆಂಬುದು ಇದರಿಂದ ತಿಳಿದುಬರುತ್ತದೆ.

ಇಲ್ಲಿ, ಧ್ರುವಸ್ಥಾನದ ಮಹಿಮೆಯನ್ನು ಹೇಳುವಾಗ ಅಂತರಿಕ್ಷ ಲೋಕದ ಒಂದು ವೈಚಿತ್ರ್ಯವನ್ನು ತಿಳಿಸಿದ್ದಾರೆ. ಧ್ರುವನಕ್ಷತ್ರದ ಮೇಲ್ಭಾಗದಲ್ಲಿ ಎಂದರೆ ಸ್ವರ್ಗಾದಿ ಊರ್ಧ್ವಲೋಕಗಳ ಸುತ್ತಮುತ್ತಲೂ, ಮತ್ತು ಆ ನಕ್ಷತ್ರದ ಕೆಳಭಾಗದಲ್ಲಿ ಸಂಚರಿಸುತ್ತಾ ಕೋಟ್ಯಾನುಕೋಟಿ ನಕ್ಷತ್ರಗಳಂತೆ ನಮಗೆ ಕಾಣತಕ್ಕವು ಸಿದ್ಧಪುರುಷರ ವಿಮಾನಗಳೇ ಹೊರತು ಸಾಮಾನ್ಯ ನಕ್ಷತ್ರ ಪುಂಜಗಳಲ್ಲ. (Not so called Galaxies) ಎಂಬುದು ಆ ವೈಚಿತ್ರ್ಯ.

**ಯದ್ವೇನ ಮುತ್ಪಥಗತಂ ದ್ವಿಜವಾಕ್ಯವಜ್ರ**
**ನಿಷ್ಪ್ಲಿಷ್ಟಪೌರುಷಭಗಂ ನಿರಯೇ ಪತಂತಂ ।**
**ಜ್ಞಾತ್ವಾರ್ಥಿತೋ ಜಗತಿ ಪುತ್ರ ಪದಂ ಚ**
**ಲೇಭೇ ದುಗ್ಧಾವಸೂನಿ ವಸುಧಾಸಕಲಾನಿ ಯೇನ ॥ ೯ ॥**

ಉತ್ಪಥಗತಂ = ತನ್ನಿಂದ ಅನ್ಯವಾದ ದೈವವಿಲ್ಲವೆಂದು ಅದ್ವೈತವಾದವನ್ನು ಹಿಡಿದು ಉನ್ಮತ್ತನಾದ; ದ್ವಿಜವಾಕ್ಯ ವಜ್ರ = ಋಷಿ ಶ್ರೇಷ್ಠರಾದ ಬ್ರಾಹ್ಮಣರ ವಾಕ್ಯಗಳೆಂಬ ವಜ್ರಾಘಾತದಿಂದ; ನಿಷ್ಪ್ಲಿಷ್ಟ ಪೌರುಷ ಭಗಂ = ನಾಶವಾದ ಪೌರುಷ ಸಂಪತ್ತುಳ್ಳ; ನಿರಯೇ ಪತಂತಂ = ತಮಸ್ಸಿನಲ್ಲಿ ಬೀಳುತ್ತಿದ್ದ; ವೇನಂ = ವೇನ ಚಕ್ರವರ್ತಿಯನ್ನು; ಜ್ಞಾತ್ವಾ = ಕಂಡು; ಅರ್ಥಿತಃ = ಜಗತ್ಪಾಲನೆಗಾಗಿ ಚಕ್ರವರ್ತಿಯೊಬ್ಬನು ಬೇಕೆಂದು ಋಷಿ ಮುನಿಗಳಿಂದ ಪ್ರಾರ್ಥಿತನಾಗಿ; ಯೇನ = ಯಾವ ನೂತನ ಚಕ್ರವರ್ತಿಯಿಂದ; ವಸುಧಾ = ಭೂದೇವಿಯು; ಸಕಲಾನಿ ವಸೂನಿ = ಅಮೃತ ಸದೃಶವಾದ ಸಕಲ ಭೋಗ್ಯ ಸಾಧನಗಳನ್ನೂ; ದುಗ್ಧಾ = ಹಸುವಿನ ಹಾಲು ಕರೆದಂತೆ ಹಿಂಡಲ್ಪಟ್ಟವಳಾಗಿ ನೀಡಿದಳೋ ಅಂತಹ; ಯತ್ ಪುತ್ರಪದಂ = ಪೃಥುಚಕ್ರವರ್ತಿಯೆಂಬ ಅವತಾರವು ಯಾವುದೋ ಆ ಪುತ್ರಪದವಿಯನ್ನು; ಲೇಭೇ = ಭಗವಂತನು ತಾಳಿದನು.

ವೇನ ಚಕ್ರವರ್ತಿಯು ಉನ್ಮತ್ತನಾಗಿ, ಬ್ರಾಹ್ಮಣರ ಶಾಪಕ್ಕೆ ಗುರಿಯಾಗಿ ಮರಣ ಹೊಂದಿದಾಗ, ಋಷಿಗಳಿಂದ ಪ್ರಾರ್ಥಿತನಾದ ಭಗವಂತನು, ಆ ಋಷಿಗಳು ಮಥಿಸಿದ ವೇನನ ಬಲಭುಜದಿಂದ ಎದ್ದು ಬಂದು, ಪೃಥು ಚಕ್ರವರ್ತಿ ಎಂದು ಪ್ರಸಿದ್ಧನಾದನು. ಬೆಳೆಗಳನ್ನು ನೀಡದೆ ಬರಡಾಗಿದ್ದ ಭೂಮಿಯು ಮತ್ತೆ ಸಸ್ಯಸಮೃದ್ಧಿಯಿಂದ ರಂಜಿಸುವಂತೆ ಮಾಡಿದ ಪ್ರತಾಪಶಾಲಿಯು ಪೃಥುಚಕ್ರವರ್ತಿ.

**ನಾಭೇರಸಾವೃಷಭ ಆಸ ಸುದೇವಿ ಸೂನುರ್ಯೋವೈಚಚಾರ**
**ಸಮದೃಗ್ ಹೃದಿಯೋಗ ಚರ್ಯಾಂ ।**
**ಯತ್ಪಾರ ಹಂಸ್ಯಂ ಮೃಷಯಃ ಪದಮಾಮನಂತಿ**
**ಸ್ವಸ್ಥಃ ಪ್ರಶಾಂತಕರಣಃ ಪರಮುಕ್ತಸಂಗಃ ॥ ೧೦ ॥**

ಅಸೌ = ಈ ಪರಮಾತ್ಮನು; ನಾಭೇಃ = ನಾಭಿ ಚಕ್ರವರ್ತಿಯ ದೆಸೆಯಿಂದ; ಸುದೇವಿ ಸೂನುಃ = ಸುದೇವಿಯೆಂಬ ರಾಣಿಯ ಮಗನಾದ; ವೃಷಭಃ = ವೃಷಭ ನಾಮಕನಾಗಿ; ಆಸ = ಕಾಣಿಸಿಕೊಂಡಿದ್ದನು; ಯಃ ವೈ = ಆ ಶ್ರೀಹರಿಯೇ; ಹೃದಿ = ಅಂತರಂಗದಲ್ಲಿ; ಸಮದೃಕ್ = ಸರ್ವತ್ರದಲ್ಲಿ ತಾನಿದ್ದು ಸಮದೃಷ್ಟಿಯುಳ್ಳವನಾಗಿ; ಯೋಗಚರ್ಯಾಂ = ಯೋಗಿಗಳ ಚರ್ಯೆಯನ್ನು; ಚಚಾರ = ನಡೆಸಿದನು; ಯತ್ = ಯಾವ ಆ ನಡವಳಿಕೆಯನ್ನು; ಋಷಯಃ = ಆತ್ಮಚಿಂತಕರಾದ ಮಹಾನುಭಾವರು; ಪಾರಹಂಸ್ಯಂ = ಪರಮಹಂಸರಿಗೆ ಯೋಗ್ಯವಾದ (ಪರಮಹಂಸರಿಂದ ಪ್ರಾಪ್ಯವಾದ); ಪದಂ = ಮಾರ್ಗವೆಂದು (ಸ್ಥಾನವೆಂದು); ಆಮನಂತಿ = ತಿಳಿಯುವರೋ, ಆ ಪರಮಹಂಸವೃತ್ತಿಯನ್ನಾಚರಿಸಿ ತೋರಿಸಿದ ವೃಷಭನಾಮಕನು; ಸ್ವಸ್ಥಃ = ಆತ್ಮಾರಾಮನಾದವನು; ಪ್ರಶಾಂತಕರಣಃ = ಪರಿಪೂರ್ಣ ಶಾಂತಿಯುಕ್ತವಾದ ಮನಸ್ಸುಳ್ಳವನು; ಪರಿಮುಕ್ತಸಂಗಃ = ಜಡ ಜೀವಾತ್ಮಕ ಪ್ರಪಂಚವನ್ನು ಧರಿಸಿದ್ದರೂ ಅದರಲ್ಲಿ ಸ್ವಾಭಿಮಾನವಿಲ್ಲದವನು.

ಸುದೇವಿಯೆಂಬಾಕೆಗೆ ಮೇರುದೇವಿ ಎಂಬ ನಾಮಾಂತರವೂ ಉಂಟು. ಈಗ ನಾವು ಭರತವರ್ಷವೆಂದು ಕರೆಯುವ ಪ್ರದೇಶಕ್ಕೆ ನಾಭಿವರ್ಷವೆಂದು ಹೆಸರು ಮೊದಲು ಇದ್ದಿತು. ಸರ್ವತ್ರದಲ್ಲಿ ಅದರದರಂತೆ, ಅವರವರಂತೆ ಕಾಣಿಸಿಕೊಂಡು ಪ್ರೇರಕನಾದ ಶ್ರೀಹರಿಗೆ ಸಮನೆಂದು ಹೆಸರು. ಯಾರಲ್ಲಿಯೂ ಸ್ನೇಹವಾಗಲೀ ದ್ವೇಷವಾಗಲೀ ಇಲ್ಲದಿರುವುದರಿಂದ ಅವನಿಗೆ ಸಮನೆಂದು ಹೆಸರು; ಈ ರೀತಿಯಿಂದ ಅವನು ಸಮದೃಷ್ಟಿಯುಳ್ಳವನು 'ಪರಮಹಂಸ' ಎಂದರೆ ಉತ್ತಮ ವರ್ಗದ ಯೋಗಿ. ಇಂತಹ ಯೋಗಿಯ ಚರ್ಯೆಯನ್ನು ನಡೆಸುವ ಆವಶ್ಯಕತೆ ಶ್ರೀಹರಿಗೆ ಇಲ್ಲ. ಆದರೂ ಲೋಕಶಿಕ್ಷಾರ್ಥವಾಗಿ ಹಾಗೆ ವರ್ತಿಸಿದನೆಂದು ತಿಳಿಯಬೇಕು. ಅವನು ಆದರ್ಶರೂಪವಾಗಿ ತೋರಿಸಿದುದು ವಿಧಿನಿಷೇದಗಳನ್ನು ಮೀರಿದ ಅವಧೂತಯೋಗಿಯ ಚರ್ಯೆ.

**ಸತ್ರೇಮಮಾಸ ಭಗವಾನ್ಹಯಶೀರ್ಷ ಏಷಃ**
**ಸಾಕ್ಷಾತ್ಸಯಜ್ಞ ಪುರುಷಸ್ತಪನೀಯ ವರ್ಣಃ ।**
**ಛಂದೋಮಯೋ ಮಖಮಯೋಽಖಿಲ ದೇವತಾತ್ಮಾ**
**ವಾಚೋಬಭೂವುರುಶತೀಃ ಶ್ವಸತೋಽಸ್ಯ ನಸ್ತಃ** ॥ ೧೧ ॥

ಮಮ ಸತ್ರೇ = ನಾನು ನಡೆಸಿದ ಯಜ್ಞದಲ್ಲಿ; ಹಯಶೀರ್ಷಃ = ಹಯಗ್ರೀವ ರೂಪವುಳ್ಳವನಾಗಿ; ಏಷಃ = ಈ ಮಹಾನುಭಾವನಾದ; ಭಗವಾನ್ = ಸಕಲೈಶ್ವರ್ಯ ಸಂಪನ್ನನಾದವನು; ಆಸ = ಅವತರಿಸಿದನು; ಸಃ = ಅವನು; ಸಾಕ್ಷಾತ್ ಯಜ್ಞ

ಪುರುಷಃ = ಯಜ್ಞ ಪುರುಷನೇ ಆದ ಆವನು; ತಪನೀಯವರ್ಣಃ = ಬೆಳ್ಳಿಬಂಗಾರಗಳ ವರ್ಣಗಳಿಂದ ಕೂಡಿದವನು; ಛಂದೋಮಯಃ = ವೇದಸ್ವರೂಪನಾದವನು; ಮಖಮಯಃ = ಯಜ್ಞಸ್ವರೂಪಿಯಾದವನು; ಅಖಿಲದೇವತಾತ್ಮಾ = ಸಕಲ ದೇವತೆಗಳಿಗೂ ಅಂತರಾತ್ಮನಾದವನು; ಅಸ್ಯ = ಈ ಅಶ್ವರೂಪಿಯ; ನಸ್ತಃ = ಮೂಗಿನ ಹೊಳ್ಳೆಗಳಿಂದ; ಶ್ವಸತಃ = ಶ್ವಾಸರೂಪವಾಗಿ ಹೊರಟ ವಾಯುವಿನಿಂದ; ಉಶತೀಃ = ಪವಿತ್ರಗಳಾದ (ಅರ್ಥಗರ್ಭಿತಗಳಾದ); ವಾಚಃ = ವೇದವಾಕ್ಯಗಳು; ಬಭೂವುಃ = ಶಬ್ದರೂಪದಿಂದ ಆವಿರ್ಭವಿಸಿದುವು.

'ಮಮಸತ್ರೇ' ಎಂದರೆ ಬ್ರಹ್ಮದೇವರು ಆಚರಿಸಿದ ಯಜ್ಞದಲ್ಲಿ ಎಂದರ್ಥ. ಯಜ್ಞಪುರಷಃ ಎಂದರೆ ಯಜನ ಯೋಗ್ಯವಾದ ಸ್ವರೂಪವುಳ್ಳವನೆಂದರ್ಥ. ಅವನು ಯಜ್ಞಮಯನೂ ಆಗಿದ್ದಾನೆ; ಹೇಗೆಂದರೆ, ಯಜ್ಞೋಪಯೋಗಿ ವಸ್ತುಗಳಲ್ಲಿಯೂ, ಕರ್ತೃಗಳಲ್ಲಿಯೂ, ಕ್ರಿಯೆಗಳಲ್ಲಿಯೂ ಇದ್ದು ಯಜ್ಞಫಲದಾಯಕನು ಶ್ರೀಹರಿಯೇ ಆಗಿದ್ದಾನೆ. ಬೆಳ್ಳಿಯಂತೆ ಬೆಳಗುವ ಶ್ವೇತವರ್ಣ ಉಳ್ಳವನೂ, ಬಂಗಾರದಂತೆ ಹೊಳೆಯುವ ರೋಮ ರಾಶಿಗಳುಳ್ಳವನೂ ಆ ಹಯಗ್ರೀವಮೂರ್ತಿ ಛಂದೋರೂಪವೇದಗಳಿಗೆ ಆಶ್ರಯನೂ, ಮಂತ್ರಗಳ ಅಂತರ್ಯಾಮಿಯೂ ಮಂತ್ರ ಪ್ರತಿಪಾದ್ಯನೂ ಆದುದರಿಂದ ಅವನು ಛಂದೋಮಯ. ಅವನ ನಿಶ್ವಾಸವಾಯುವು ಹೊರಗೆಡಹುವ ಧ್ವನಿಗಳು ವೇದವಾಕ್ಯಗಳಾಗಿ ಮುನಿಗಳಿಗೆ ಗೋಚರಿಸತಕ್ಕವು.

**ಮತ್ಸ್ಯೋಯುಗಾಂತ ಸಮಯೇ ಮನುನೋಪಲಬ್ಧಃ**
**ಕ್ಷೋಣೀಮಯೋನಿಖಿಲ ಜೀವನಿಕಾಯ ಕೇತಃ ।**
**ವಿಸ್ರಂಸಿತಾನುರುಭಯೇ ಸಲೀಲೇ ಮುಖಾನ್ಮ**
**ಆದಾಯ ತತ್ರ ವಿಜಹಾರಹ ವೇದಮಾರ್ಗಾನ್** ॥ ೧೨ ॥

ಮೇಮುಖಾತ್ ವಿಸ್ರಂಸಿತಾನ್ = ನನ್ನ ಬಾಯಿಂದ ಹೊರಬಂದ; ವೇದಮಾರ್ಗಾನ್ = ವೇದಗಳನ್ನು (ಹಯಗ್ರೀವ (ತಮ)ನೆಂಬ ದೈತ್ಯನು (ಅಪಹರಿಸಲಾಗಿ) ಆದಾಯ = (ಆ ದೈತ್ಯನನ್ನು ಕೊಂದು) ನನಗೆ ತಂದು ಕೊಟ್ಟು ಇದ್ದವನಾಗಿ; ಯುಗಾಂತ ಸಮಯೇ = ಪುನಃ ಮನುಕಲ್ಪಪ್ರಳಯ ಕಾಲದಲ್ಲಿ; ಮತ್ಸ್ಯಃ = ಆ ಮತ್ಸ್ಯರೂಪಿಯು; ಕ್ಷೋಣೀಮಯಃ = ನಾವೆಯಂತಹ ಭೂರೂಪನಾಗಿ; ನಿಖಿಲಭಾವನಿಕಾಯ ಕೇತಃ = ಸಕಲ ಜೀವ ಸಮೂಹಕ್ಕೂ ಆಶ್ರಯದಾತನಾಗಿದ್ದು; ಉರುಭಯೇ ಸಲಿಲೇ = ಪ್ರಳಯೋದಕ ನಿಮಿತ್ತವಾದ ಮಹಾಭಯದ ಸನ್ನಿವೇಶದಲ್ಲಿ; ಮನುನಾ = ಸಪ್ತ ಋಷಿಗಳಿಂದೊಡಗೂಡಿ ಸ್ತೋತ್ರ ಮಾಡಿದ ಮನುವಿನಿಂದ; ಉಪಲಬ್ಧಃ = ರಕ್ಷಕನಾಗಿ ಪ್ರಾಪ್ತನಾದನು; ತತ್ರ = ಆ ಪ್ರಳಯ ಜಲಧಿಯಲ್ಲಿ; ವಿಜಹಾರ = ಕ್ರೀಡಿಸಿದನು.

ಪದ್ಮಕಲ್ಪದ ರಾತ್ರಿ ಕಳೆದನಂತರ ಶ್ವೇತವರಾಹ ಕಲ್ಪದಾರಂಭದಲ್ಲಿ ವೇದಗಳನ್ನು ಕದ್ದ ಹಯಗ್ರೀವಾಸುರನನ್ನು ಸಂಹರಿಸಲು ಮತ್ಸ್ಯಾವತಾರವಾಯಿತು. ಆ ಮತ್ಸ್ಯರೂಪಿಯೇ ವೈವಸ್ವತ ಮನ್ವಂತರದಾರಂಭದಲ್ಲಿ ಮುಂದೆ ಮನುಪಟ್ಟವಾಳುವ ಸತ್ಯವ್ರತ ರಾಜನನ್ನು ಜೀವಕೋಟಿಯ ಸಹಿತವಾಗಿ ಸಂರಕ್ಷಿಸಿದವನು. ಇಲ್ಲೊಂದು ಸ್ವಾರಸ್ಯವಾದ ಅಂಶವು ಕಂಡುಬರುತ್ತದೆ. ಸತ್ಯವ್ರತಾದಿಗಳು ಹಡಗಿನಲ್ಲಿದ್ದು ರಕ್ಷಿತರಾದರೇ ಅಥವ ಹಡಗಿನಂತೆ ಪ್ರಳಯಲೋಕದಲ್ಲಿ ಮುಳುಗದೆ ನಿಂತ ಭೂಭಾಗದಲ್ಲಿದ್ದರೇ ಎಂಬುದು ವಿಚಾರಾರ್ಹವಾದ ಅಂಶ. ಆ ಭೂಭಾಗವೇ ಈಗಿನ 'ಇರಾಣ' ಪ್ರದೇಶವೆಂಬುದು ತಿಳಿದು ಬಂದಾಗ ಭಾರತದೇಶದ ವ್ಯಾಪ್ತಿಯು ಹಿಂದೂಕುಷ್ ಪರ್ವತದಾಚೆಗೂ ಇದ್ದಿತೆಂಬುದು ವೇದ್ಯವಾಗುತ್ತದೆ. 'ಕ್ಯಾಸ್ಪಿಯನ್ ಸಮುದ್ರ'ವೆಂಬುದು 'ಕಶ್ಯಪ ಸಮುದ್ರ'ವೇ ಅಲ್ಲವೆ ?

**ಕ್ಷೀರೋದಧಾವಮರ ದಾನವ**
**ಯೂಥಪಾನಾಮುನ್ಮಥ್ನತಾ ಮಮೃತಲಬ್ಧಯ ಆದಿದೇವಃ ।**
**ಪೃಷ್ಠೇನ ಕಚ್ಛಪ ವಪುರ್ವಿದಧಾರಗೋತ್ರಂ**
**ನಿದ್ರೇಕ್ಷಣೋದ್ರಿ ಪರಿವರ್ತಕಷಾಣಕಂಡೂಃ** ॥ ೧೩ ॥

ಅಮೃತ ಲಬ್ಧಯೇ = ಅಮೃತವನ್ನು ಪಡೆಯುವುದಕ್ಕಾಗಿ; ಅಮರ ದಾನವ ಯೂಥಪಾನಾಂ = ದೇವದಾನವ ನಾಯಕರು; ಕ್ಷೀರೋದಧೌ ಉನ್ಮಥ್ನತಾಂ = ಕ್ಷೀರಸಮುದ್ರದಲ್ಲಿ ಮಂದರ ಪರ್ವತವನ್ನಿಟ್ಟು ಮಥನ ಮಾಡುತ್ತಿದ್ದ ಸಮಯದಲ್ಲಿ; ಆದಿದೇವಃ ಕಚ್ಛಪ ವಪುಃ = ಕೂರ್ಮರೂಪಧಾರಿಯಾದ ಶ್ರೀಹರಿಯು; ಅದ್ರಿ ಪರಿವರ್ತನ ಕಷಾಣಕಂಡೂಃ = ಕಡೆಯುವಾಗ ತಿರುಗುತ್ತಿದ್ದ ಪರ್ವತದಿಂದ ತುರಿಕೆಯನ್ನು ಪರಿಹರಿಸಿದಂತೆ ಆಗುತ್ತಿರಲು; ನಿದ್ರೇಕ್ಷಣಃ = ನಿದ್ರೆ ಬಂದಂತೆ ಅರೆಗಣ್ಣು ಮುಚ್ಚಿದವನಾಗಿ; ಪೃಷ್ಠೇನ = ತನ್ನ ಬೆನ್ನಿನಿಂದ; ಗೋತ್ರಂ = ಆ ಪರ್ವತವನ್ನು; ದಧಾರ = ನೀರಿನಲ್ಲಿ ಮುಳುಗದಂತೆ ಇಟ್ಟುಕೊಂಡಿದ್ದನು.

ಅಭ್ಯಂಜನ ಸಮಯದಲ್ಲಿ ನುರಿತವರು ನೆತ್ತಿಯಮೇಲೆ ಎಣ್ಣೆಯನ್ನಿಟ್ಟು ಮೃದುವಾಗಿ ಬಡಿಯುತ್ತಿರಲು ಹೇಗೆ ನಿದ್ರೆ ಬಂದಂತಾಗುವುದೋ ಹಾಗೆ ಕೂರ್ಮರೂಪಿಗೆ ಬೆನ್ನಿನಮೇಲೆ ಬೆಟ್ಟವನ್ನಿಟ್ಟು ಕಡೆಯುವುದು ಹಿತವಾಗಿದ್ದಿತಂತೆ ! ಮೈನವೆಯಾದಾಗ ತುರಿಸಿದಂತೆ ಆಯಿತಂತೆ ! ಆಮೆಯು ಸ್ವಾಭಾವಿಕವಾಗಿ ಕಣ್ಣುಮುಚ್ಚಿರುವುದನ್ನಿಲ್ಲಿ ಚಿತ್ರಿಸಿದ್ದಾರೆ.

**ತ್ರೈವಿಷ್ಟಪೋರುಭಯಹಾರಿ ನೃಸಿಂಹ ರೂಪಂ**
**ಕೃತ್ವಾಭ್ರಮದ್ಭ್ರುಕುಟಿದಂಷ್ಟ್ರಕರಾಲವಕ್ತ್ರಂ ।**
**ದೈತ್ಯೇಂದ್ರಮಾಶುಗದಯಾಭಿಪತಂತ**
**ಮಾರಾದೂರೌನಿಪಾತ್ಯವಿದದಾರನಖೈಃ ಸ್ಫುರಂತಂ** ॥ ೧೪ ॥

ತ್ರೈವಿಷ್ಟಪ ಉರುಭಯ ಹಾರಿ = ದೇವತೆಗಳಿಗೆ ದೈತ್ಯನಿಂದ ಉಂಟಾದ ಮಹಾಭಯವನ್ನು ಪರಿಹರಿಸುವಂತಹ; ಭ್ರಮದ್ಭ್ರುಕುಟಿದಂಷ್ಟ್ರ = ಚಲಿಸುವ ಹುಬ್ಬುಗಳು ಮತ್ತು ಕೋರೆದಾಡೆಗಳುಳ್ಳ; ಕರಾಲವಕ್ತ್ರಂ = ಭಯಂಕರವಾದ ಮುಖವುಳ್ಳ; ನೃಸಿಂಹರೂಪಂ ಕೃತ್ವಾ = ಮಾನವಮೃಗರೂಪವನ್ನು ಧರಿಸಿ; ಆಶು = ಬಹು ಬೇಗನೆ; ಗದಯಾ = ತನ್ನ ಗದೆಯ ಪೆಟ್ಟಿನಿಂದ; ಆರಾತ್ ಪತಂತಂ = ದೂರಕ್ಕೆಸೆಯಲ್ಪಟ್ಟು ಬಿದ್ದ; ಸ್ಫುರಂತಂ = ನಡಗುತ್ತಿದ್ದ; ದೈತ್ಯೇಂದ್ರಂ = ಹಿರಣ್ಯ ಕಶಿಪುವನ್ನು; ಊರೌ = ತೊಡೆಯಮೇಲೆ; ನಿಪಾತ್ಯ = ಕೆಡಹಿಕೊಂಡು; ನಖೈಃ = ಉಗುರುಗಳಿಂದ; ವಿದದಾರ = ಸೀಳಿಹಾಕಿದನು.

ಶ್ರೀನೃಸಿಂಹರೂಪಿಯು ಹುಬ್ಬುಗಳನ್ನು ಸಂಕೋಚ ವಿಕಾಸಗಳಿಂದ ಅಲುಗಾಡಿಸುತ್ತಾ, ಕೋರೆಹಲ್ಲುಗಳು ಕಾಣುವಂತೆ ಬಾಯಿ ತೆರೆಯುತ್ತಾ ಅತಿ ಭಯಂಕರವಾಗಿ ಕಾಣಿಸಿದನು. ಹಿರಣ್ಯಾಕ್ಷನನ್ನು ಕೊಂದ ವಿಚಾರವನ್ನಿಲ್ಲಿ ಹೇಳದಿದ್ದರೂ, ಮತ್ಸ್ಯಾವತಾರದ ಎರಡು ಕೃತ್ಯಗಳಂತೆ ಆದಿ ವಾರಾಹನೇ ಇಲ್ಲಿ ಭೂವರಾಹನಾಗಿ ಹಿರಣ್ಯಾಕ್ಷನನ್ನು ಮತ್ತೆ ಸಂಹರಿಸಿದನೆಂದು ಭಾವಿಸಬೇಕು.

**ಅಂತಸ್ಸರಸ್ಯುರುಬಲೇನ ಪದೇ ಗೃಹೀತೋ**
**ಗ್ರಾಹೇಣ ಯೂಥಪತಿರಂಬುಜ ಹಸ್ತ ಆರ್ತಃ ।**
**ಆಹೇದಮಾದಿಪುರುಷಾಖಿಲಲೋಕನಾಥ**
**ತೀರ್ಥಶ್ರವಃಶ್ರವಣ ಮಂಗಳ ನಾಮಧೇಯ** ॥ ೧೫ ॥

**ಸ್ಮೃತ್ವಾ''ಽಶ್ತಮರಣಾರ್ಥಿನಮಪ್ರಮೇಯ**
**ಶ್ಚಕ್ರಾಯುಧಃ ಪತಗರಾಜಭುಜಾಧಿರೂಢಃ ।**
**ಚಕ್ರೇಣ ನಕ್ರವದನಂ ವಿನಿಪಾಟ್ಯತಸ್ಮಾದ್ಧಸ್ತೇಪ್ರಗೃಹ್ಯ**
**ಭಗವಾನ್ ಕೃಪಯೋಜ್ಜಹಾರ** ॥ ೧೬ ॥

ಅಂತಸ್ಸರಸಿ = ಸರೋವರದಲ್ಲಿ; ಉರುಬಲೇನ ಗ್ರಾಹೇಣ = ಅತಿ ಬಲಿಷ್ಠವಾದ ಮೊಸಳೆಯಿಂದ; ಪದೇ ಗೃಹೀತಃ = ಹಿಡಿಯಲ್ಪಟ್ಟ ಕಾಲುಳ್ಳ; ಯೂಥಪತಿಃ = ಆನೆಗಳ ಗುಂಪಿನ ನಾಯಕನು (ಗಜೇಂದ್ರನು); ಅಂಬುಜ ಹಸ್ತಃ = ಸೊಂಡಿಲಿನಲ್ಲಿ ಕಮಲಪುಷ್ಪವನ್ನು ಹಿಡಿದೆತ್ತಿ; ಆರ್ತಃ = ದುಃಖಿತನಾಗಿ; ಇದಂ ಆಹ = ಈ ರೀತಿಯಾಗಿ ಸ್ತೋತ್ರಮಾಡಿದನು; ''ಆದಿಪುರುಷ = ಪುರುಷೋತ್ತಮಾ; ಅಖಿಲಲೋಕನಾಥ = ಸಮಸ್ತಲೋಕಗಳಿಗೂ ಒಡೆಯನಾದವನೇ; ತೀರ್ಥಶ್ರವಃ = ಪಾವನಕರವಾದ

ಕೀರ್ತಿಯುಳ್ಳವನೇ; ಶ್ರವಣಮಂಗಳ ನಾಮಧೇಯ = ಶ್ರವಣಮಾತ್ರದಿಂದ ಶುಭದಾಯಕವಾದ ದಿವ್ಯನಾಮಗಳುಳ್ಳವನೇ;" ॥ ೧೫ ॥

ತಂ = ಆ ಗಜೇಂದ್ರನನ್ನು; ಅರಣ ಅರ್ಥಿನಂ = ಹೋರಾಡಲು ಸಾಮರ್ಥ್ಯವಿಲ್ಲದೆ ಪ್ರಾರ್ಥಿಸಿದವನನ್ನಾಗಿ ತಿಳಿದು; ಸ್ಮೃತ್ವಾ = ಆ ಪ್ರಾರ್ಥನೆಯನ್ನು ಮನಸ್ಸಿಗೆ ತಂದುಕೊಂಡು; (ಪ್ರಾರ್ಥನೆಯಿಂದ ಸಂತುಷ್ಟನಾಗಿ); ಅಪ್ರಮೇಯಃ = ತಿಳಿಯಲಸಾಧ್ಯವಾದ ಮಹಿಮೆಯುಳ್ಳ; ಭಗವಾನ್ = ಷಡ್ಗುಣೈಶ್ವರ್ಯಪರಿಪೂರ್ಣನಾದ; ಹರಿಃ = ತಾಪಸನಾಮಕನಾಗಿ ಅವತರಿಸಿದ ಶ್ರೀಹರಿಯು; ಚಕ್ರಾಯುಧಃ = ಚಕ್ರಾಯುಧಧಾರಿಯಾಗಿ; ಪತಗರಾಜಭುಜಾಧಿರೂಢಃ = ಗರುಡನ ಹೆಗಲನ್ನೇರಿದವನಾಗಿ; ಚಕ್ರೇಣ = ಚಕ್ರಾಯುಧದಿಂದ; ನಕ್ರವದನಂ = ಮೊಸಳೆಯ ಬಾಯನ್ನು; ವಿನಿಪಾಟ್ಯ = ಸೀಳಿಹಾಕಿ; ತಸ್ಮಾತ್ = ಆ ಗಜೇಂದ್ರನ ಕಡೆಯಿಂದ; ಹಸ್ತೇಪ್ರಗೃಹ್ಯ = ತನಗರ್ಪಿಸಿದ ಕಮಲಪುಷ್ಪವನ್ನು ಸ್ವೀಕರಿಸಿ; ಕೃಪಯಾ = ಕರುಣೆಯಿಂದ; ಉಜ್ಜಹಾರ = ಮೇಲಕ್ಕೆತ್ತಿದನು.(ಉದ್ಧರಿಸಿದನು) ॥ ೧೬ ॥

ಬಲೋನ್ಮತ್ತನಾದ ಆನೆಗಳ ಸಲಗನಿಗೆ ಶ್ರೀಹರಿಯ ಸ್ಮರಣೆ ಹೇಗೆ ಬಂದಿತು ಎಂದರೆ, ಅದು ಜನ್ಮಾಂತರ ಸಂಸ್ಕಾರದ ಸ್ಮರಣೆ ಎಂದು ತಿಳಿಯಬೇಕು. ಜಾತಿ, ವಯಸ್ಸು ಮೊದಲಾದವುಗಳಿಗಿಂತ ಪೂರ್ವಜನ್ಮಗಳ ಸಂಸ್ಕಾರವೇ ಬಲವತ್ತರವೆಂಬುದು ಇದರಿಂದ ತಿಳಿದುಬರುತ್ತದೆ. "ಆದಿಪುರುಷ" ಎಂಬ ಮಾತಿನಲ್ಲಿ ಭಗವಂತನ ಮಾಹಾತ್ಮ್ಯವು ಅಡಕವಾಗಿದೆ. 'ತಾಪಸ' ನಾಮಕನಾದವನು ಶ್ರೀಹರಿಯೇ ಎಂಬುದನ್ನು ಸೂಚಿಸಲು 'ಅಪ್ರಮೇಯಃ' 'ಚಕ್ರಾಯುಧಃ' 'ಪತಗರಾಜ ಭುಜಾಧಿರೂಢಃ' ಎಂಬ ವಿಶೇಷಣಗಳನ್ನು ಕೊಟ್ಟಿದ್ದಾರೆ. 'ಉಜ್ಜಹಾರ' ಎಂದರೆ, ನೀರಿನಿಂದ ಮೇಲಕ್ಕೆ ಕರೆತಂದನೆಂದು ಮಾತ್ರವೇ ಅರ್ಥವಲ್ಲ; ಮುಕ್ತನನ್ನಾಗಿ ಮಾಡಿದನು ಎಂಬುದು ಅದರ ಅರ್ಥ.

**ಜ್ಯಾಯಾನ್ ಗುಣೈರವರಜೋಽಪ್ಯದಿತೇಃ ಸುತಾನಾಂ**
**ಲೋಕಾನ್ವಿಚಕ್ರಮ ಇಮಾನ್ಯದಥೋಧಿಯಜ್ಞಃ ।**
**ಕ್ಷ್ಮಾಂ ವಾಮನೇನ ಜಗೃಹೇ ತ್ರಿಪದಚ್ಛಲೇನ**
**ಯಾಂಚ್ಞಾಮೃತೇ ಪಥಿಚರನ್ ಪ್ರಭುಭಿರ್ನಚಾಲ್ಯಃ** ॥ ೧೭ ॥

ಅಥ = ಅನಂತರ; ಅಧಿಯಜ್ಞಃ = ಯಜ್ಞಸ್ವರೂಪಿಯಾದ ಭಗವಂತನು; ಗುಣೈಃ ಜ್ಯಾಯಾನ್ ಅಪಿ = ಗುಣಗಳಿಂದ ಸರ್ವಶ್ರೇಷ್ಠನಾದರೂ; ಅದಿತೇಃ ಸುತಾನಾಂ = ಅದಿತೀದೇವಿಯ ಮಕ್ಕಳ ಗುಂಪಿನಲ್ಲಿ; ಅವರಜಃ = ಕಿರಿಯನಾಗಿ ಅವತರಿಸಿ; ಇಮಾನ್

ಲೋಕಾನ್= ಈ ಲೋಕಗಳನ್ನು; ವಿಚಕ್ರಮೇ = ತ್ರಿವಿಕ್ರಮರೂಪದಿಂದ ಅತಿಕ್ರಮಿಸಿ ನಿಂತನು; ಪಥಿಚರನ್= ಮಾರ್ಗದಲ್ಲಿ ಚಲಿಸುತ್ತಿರುವವನನ್ನು; ಪ್ರಭುಭಿಃ ಅಪಿ = ಸಮರ್ಥರಾದವರಿಂದಲೂ ಕೂಡ; ಯಾಞ್ಞ್ಯಾಂ ಋತೇ = ಉಪಾಯದಿಂದಲ್ಲದೆ; ನ ಚಾಲ್ಯಃ = ದೂರಸರಿಸಬಾರದು; ಎಂಬ ನ್ಯಾಯಾನುಸಾರ; ವಾಮನೇನ = ಚಿಕ್ಕ ರೂಪದಿಂದ; ತ್ರಿಪದಚ್ಛಲೇನ = ಮೂರು ಹೆಜ್ಜೆಯಷ್ಟು ಭೂಮಿಯನ್ನು ಬೇಡುವ ನೆವದಿಂದ; ಕ್ಷ್ಮಾಂ = ಭೂಮಿಯನ್ನು; ಜಗೃಹೇ = ತನ್ನದಾಗಿ ಮಾಡಿಕೊಂಡನು.

ದುಷ್ಟಬುದ್ಧಿಗೊಳಗಾದವರನ್ನು ಸನ್ಮಾರ್ಗಕ್ಕೆ ತರಲು ಬಲಾತ್ಕಾರಕ್ಕಿಂತ ಉಪಾಯವೇ ಶ್ರೇಷ್ಠವಾದ ಮಾರ್ಗವೆಂಬುದನ್ನಿಲ್ಲಿ ತೋರಿಸಿದ್ದಾರೆ. ದೈತ್ಯರ ಗರ್ವವನ್ನು ದಮನಗೊಳಿಸುವುದರಿಂದ ವಾಮನ ಎಂಬ ಹೆಸರು; ಕೇವಲ ಕುಳ್ಳನಾದವನೆಂದು ಮಾತ್ರವಲ್ಲ. ವಾಮನನಾಗಿ ಬಂದು ಶ್ರೀಹರಿಯು ತ್ರಿವಿಕ್ರಮನಾದುದನ್ನು ಕಂಡ ಬಲಿಚಕ್ರವರ್ತಿಗೆ, ಅನಾಯಾಸವಾಗಿ ಒಳಗಣ್ಣು ತೆರೆಯುವಂತಾಯಿತು. ಶಿಕ್ಷೆಯು ಮನಸ್ಸನ್ನು ನೋಯಿಸುತ್ತದೆ. ಉಪಾಯವು ಅದನ್ನು ಹದಗೊಳಿಸುತ್ತದೆ.

**ನಾರ್ಥೋ ಬಲೇರಯಮುರುಕ್ರಮ**
**ಪಾದಶೌಚಮಂಭಃಶಿವಂ ಧೃತವತೋ ವಿಬುಧಾಧಿಪತ್ಯಂ ।**
**ಯೋವೈಪ್ರತಿಶ್ರುತಮೃತೇಪಿ ಚ ಶೀರ್ಷಮಾಣಮಾತ್ಮನ್ಯ**
**ಮಂಗಮನಸಾ ಹರಯೇಭಿಮೇನೇ** ॥ ೧೮ ॥

ಅಂಗ = ಮಗೂ ನಾರದಾ; ಯಃ ವೈ = ಯಾವ ಮಹಾನುಭಾವನು; ಪ್ರತಿಶ್ರುತಂ ಋತೇಪಿ ಚ = ಕೇಳಿದ ಮೂರು ಹೆಜ್ಜೆ ಭೂಮಿಯನ್ನಲ್ಲದಿದ್ದರೂ; ಆತ್ಮನ್ಯಂ = ತನ್ನದೆಂದುಕೊಳ್ಳುತ್ತಿದ್ದ; ಶೀರ್ಷಮಾಣಂ = ಶಿರಸ್ಸೆನ್ನುವ ಭೂಮಿಯನ್ನು; ಮನಸಾ = ಮನಃ ಪೂರ್ವಕವಾಗಿ; ಹರಯೇ = ಶ್ರೀಹರಿಗೆ; ಅಭಿಮೇನೇ = ಸಮರ್ಪಿಸಿದನೋ; ಉರುಕ್ರಮಪಾದಶೌಚಂ ಶಿವಂ ಅಂಭಃ = ತ್ರಿವಿಕ್ರಮನ ಪಾದವನ್ನು ತೊಳೆದಿಳಿದ ಪವಿತ್ರ ಗಂಗಾಜಲವನ್ನು; ಧೃತವತಃ = ತಲೆಯಲ್ಲಿ ಧರಿಸಿದನೋ; ಬಲೇಃ = ಅಂತಹ ಬಲಿಚಕ್ರವರ್ತಿಗೆ; ವಿಬುಧಾಧಿಪತ್ಯಂ = ಸ್ವರ್ಗಲೋಕದ ಆಧಿಪತ್ಯವು; ನ ಅರ್ಥಂ = ನಿಜವಾದ ಫಲವಲ್ಲ.

ತ್ರಿವಿಕ್ರಮ ರೂಪವನ್ನು ತಾಳಿದ ಭಗವಂತನ ಪಾದದ ಹೆಬ್ಬೆರಳ ಉಗುರು ಸೋಕಿದ ಮಾತ್ರದಿಂದ, ನೂರು ಕೋಟಿ ಯೋಜನ ಮಂದವಾದ ಬ್ರಹ್ಮಾಂಡಖರ್ಪರವು ಬಿರಿಯಿತು. ಬಾಹ್ಯಾವರಣದ ಜಲವು ಆ ಪಾದವನ್ನು ತೊಳೆದು ಕೆಳಗಿಳಿಯಿತು; ಪವಿತ್ರ ಗಂಗೆ ಎನಿಸಿತು.

ಅಹಂ ಮಮತಾ ಬುದ್ಧಿಯನ್ನು ನೀಗಿಕೊಂಡು, ತನ್ನ ತಲೆಯ ಪ್ರದೇಶವನ್ನೇ ಮೂರನೆಯ ಹೆಜ್ಜೆ ಇಡಲು ಸ್ಥಾನವನ್ನಾಗಿ ಮನಸಾರ ಸಮರ್ಪಿಸಿ, ವಿಷ್ಣುಪಾದೋದಕವನ್ನು ಆ ತಲೆಯಮೇಲೆ ಧಾರಣಮಾಡಿದ ಬಲಿಚಕ್ರವರ್ತಿಗೆ ಮುಕ್ತಿಯಲ್ಲಿ ಆನಂದೋದ್ರೇಕವು ನಿಜವಾದ ಫಲವೇ ಹೊರತು ಅಲ್ಪಾವಧಿಯ ಸ್ವರ್ಗಾಧಿಪತ್ಯವಲ್ಲ. ಆತನಿಗೆ ಸ್ವರ್ಗಾಧಿಪತ್ಯಕ್ಕೆ ಅಧಿಕವಾದ ಸುಖವು ರಸಾತಲಲೋಕದಲ್ಲಿ ಕಲ್ಪಿತವಾದುದಲ್ಲದೆ, ಒಂದು ಮನ್ವಂತರಕಾಲ ಸ್ವರ್ಗಾಧಿಪತ್ಯವೂ ದೊರೆಯಿತು. ಆದರೆ, ಅವೆರಡನ್ನೂ ಮೀರಿದ ಆನಂದೋದ್ರೇಕದ ಫಲವೂ ನಿಯತವಾಯಿತು.

**ತುಭ್ಯಂ ಚ ನಾರದ ಭೃಶಂ ಭಗವಾನ್ವಿವೃದ್ಧ**
**ಭಾವೇನ ಸಾಧುಪರಿತುಷ್ಟ ಉವಾಚ ಯೋಗಂ ।**
**ಜ್ಞಾನಂ ಚ ಭಾಗವತಮಾತ್ಮಸುತತ್ತ್ವದೀಪಂ**
**ಯದ್ವಾಸುದೇವಶರಣಾ ವಿದುರಂಜಸೈವ** ॥ ೧೯ ॥

ನಾರದ = ಮಗೂ, ನಾರದಾ; ಭಗವಾನ್ = ಭಗವಂತನು; ಭೃಶಂ = ಅತಿಶಯವಾಗಿ; ವಿವೃದ್ಧಭಾವೇನ = ಉತ್ಕಟ ಭಕ್ತಿಯಿಂದ; ಸಾಧು ಪರಿತುಷ್ಟಃ = ಸಂತುಷ್ಟನಾಗಿ; ಯತ್ = ಯಾವುದನ್ನು; ವಾಸುದೇವ ಶರಣಾಃ = ವಿಷ್ಣುಭಕ್ತರು; ಅಂಜಸಾ ಏವ ವಿದುಃ = ನಿಜವಾಗಿ ತಿಳಿದು ಮುಕ್ತರಾಗಬಲ್ಲರೋ, ಅಂತಹ; ಆತ್ಮಸುತತ್ತ್ವದೀಪಂ = ಉತ್ತಮವಾದ ಆತ್ಮತತ್ತ್ವದ ಬೆಳಕಾದ; ಭಾಗವತಂ = ಭಗವತ್ಸಂಬಂಧಿಯಾದ; ಯೋಗಂ ಜ್ಞಾನಂ ಚ = ಕರ್ಮಯೋಗ ಜ್ಞಾನಯೋಗಗಳನನ್ನು; ತುಭ್ಯಂ ಚ = ನಮಗೂ ನಿನಗೂ; ಉವಾಚ = ಉಪದೇಶಮಾಡಿದನು.

ಜ್ಞಾನೋಪದೇಶವು ಮಹಿದಾಸಾವತಾರದ ಉದ್ದೇಶ.

**ಚಕ್ರಂ ಚ ದಿಕ್ಷ್ವವಿಹಿತಂ ದಶಸು ಸ್ವತೇಜೋ**
**ಮನ್ವಂತರೇಷು ಮನುವಂಶಧರೋ ಬಿಭರ್ತಿ ।**
**ದುಷ್ಟೇಷು ರಾಜಸು ದಮಂವಿದಧತ್ಸ್ವಕೀರ್ತಿಂ**
**ಸತ್ಯೇ ನಿವಿಷ್ಟ ಉಶತೀಂ ಪ್ರಥಯಂಶ್ಚರಿತ್ರೈಃ** ॥ ೨೦ ॥

ದುಷ್ಟೇಷು ರಾಜಸು = ದುರ್ಮಾರ್ಗಿಗಳಾದ ರಾಜರ ವಿಷಯದಲ್ಲಿ; ದಮಂ ವಿದಧತ್ = ಶಿಕ್ಷೆಯನ್ನು ವಿಧಿಸುತ್ತಾ; ಸತ್ಯೇ = ಸತ್ಯ ಧರ್ಮಗಳಲ್ಲಿ; ನಿವಿಷ್ಟ =

ನಿಲ್ಲಿಸಲ್ಪಟ್ಟ; ಉಶತೀಂ = ಮನೋಹರವಾದ; ಸ್ವಕೀರ್ತಿಂ = ತನ್ನ ಯಶಸ್ಸನ್ನು; ಚರಿತ್ರೈಃ = ತನ್ನ ಆಚರಣೆಗಳಿಂದ; ಪ್ರಥಯನ್ = ಪ್ರಖ್ಯಾತಿಗೊಳಿಸುತ್ತಾ; ಮನ್ವಂತರೇಷು = ಸ್ವಾಯುಂಭವಾದಿ ಮನ್ವಂತರಗಳಲ್ಲಿ; ಮನುವಂಶಧರಃ = ಮನುವಂಶದಲ್ಲಿ ಬಂದವನಾಗಿ; ದಶಸು ದಿಕ್ಷು = ಹತ್ತು ದಿಕ್ಕುಗಳಲ್ಲಿಯೂ; ಅವಿಹಿತಂ = ತಡೆ ಇಲ್ಲದೆ; ಚಕ್ರಂ = ತನ್ನ ಪ್ರತಾಪರೂಪವಾದ ಆಜ್ಞಾಚಕ್ರವನ್ನು; ಬಿಭರ್ತಿ = ನಿರ್ವಹಿಸುತ್ತಾನೆ.

ಇದು ರಾಜರಾಜೇಶ್ವರನೆಂಬ ಅವತಾರ ವರ್ಣನೆ. ಆ ಹೆಸರಿನಿಂದ ಅವತರಿಸಿ ಇದ್ದುದಲ್ಲದೆ, ಪ್ರತಿಮನ್ವಂತರದಲ್ಲಿಯೂ ಆಯಾ ಮನುಗಳ ಅಂತರ್ಯಾಮಿಯಾಗಿದ್ದು ಚಕ್ರವರ್ತಿತ್ವವನ್ನು ನಿರ್ವಹಿಸುವವನು ಅವನೇ.

**ಧನ್ವಂತರಿಶ್ಚ ಭಗವಾನ್ ಸ್ವಯಮಾಸ ದೇವೋ**
**ನಾಮ್ನಾನೃಣಾಂ ಪುರುರುಜಾಂ ಋಜ ಆಶು ಹಂತಿ ।**
**ಯಜ್ಞೇಚ ಭಾಗಮಮೃತಾಯುರವಾಪಚಾದ್ಧಾ**
**ಆಯುಶ್ಚವೇದಮನುಶಾಸ್ತ್ಯವತೀರ್ಯ ಲೋಕೇ** ॥ ೨೧ ॥

ಧನ್ವಂತರಿಃ ಚ = ಧನ್ವಂತರೀ ರೂಪದಿಂದ ಅವತರಿಸಿದವನು; ಸ್ವಯಂ = ಸ್ವಾಂಶನೇ ಆದ; ಭಗವಾನ್ ಆಸ = ಭಗವಂತನು ಕಾಣಿಸಿಕೊಂಡಿದ್ದನು; ದೇವಃ = ಈ ಸ್ವಾಮಿಯು; ಪುರುರುಜಾಂ = ನಾನಾ ರೋಗಗಳಿಗೆ ಈಡಾಗುವ; ನೃಣಾಂ = ಮಾನವರ; ರುಜಃ = ರೋಗಗಳನ್ನು; ನಾಮ್ನಾ = ತನ್ನ ನಾಮೋಚ್ಚಾರಣೆಯಿಂದಲೇ; ಆಶು = ಶೀಘ್ರವಾಗಿ; ಹಂತಿ = ನಾಶಪಡಿಸುತ್ತಾನೆ; ಅಮೃತಾಯುಃ = ನಿತ್ಯನಾದ ಈ ಪರಮಾತ್ಮನು; ಯಜ್ಞೇ = ಯಜ್ಞಗಳಲ್ಲಿ; ಭಾಗಂ ಚ = ಭಾಗವನ್ನೂ; ಅವಾಪ = ಸ್ವೀಕರಿಸುವವನಾದನು; ಅದ್ಧಾ = ನಿಜವಾಗಿ; ಲೋಕೇ ಅವತೀರ್ಯ = ಈ ಲೋಕದಲ್ಲಿ ಅವತಾರ ಮಾಡಿ; ಆಯುಃ ವೇದಂ ಚ = ಆಯುರ್ವೇದವನ್ನೂ; ಅನುಶಾಸ್ತಿ = ಪ್ರವರ್ತಿಸುತ್ತಾನೆ.

'ನಾಮ್ನಾ' ಎಂದರೆ ನಾಮಸ್ಮರಣೆ ಎಂಬುದು ನಿಜ; ಶ್ರದ್ಧಾ ಭಕ್ತಿಯಿಂದ ನಾಮಸ್ಮರಣೆ ಮಾಡಿದರೇನೇ ರೋಗ ನಿವಾರಣೆಯಾಗುವುದು. ಆದರೆ, ಧನ್ವಂತರೀ ಜಪವೆಂದು ಇಲ್ಲಿ ಅರ್ಥಮಾಡಿಕೊಳ್ಳಬೇಕು. ಯಜ್ಞಗಳಲ್ಲಿ ತನ್ನ ಭಾಗದ ಹವಿಸ್ಸನ್ನು

ಸ್ವೀಕರಿಸಿ ಧನ್ವಂತರಿಯು ಲೋಕಕ್ಷೇಮನಿರ್ವಾಹಕನಾಗಿರುವನು. ಆಯುರ್ವೇದದ ಪ್ರವರ್ತಕನು ಈ ದೇವನೇ ಆದುದರಿಂದ ಅದು ನಿಜವಾಗಿ ಪರಿಣಾಮಕಾರಿಯಾದುದು.

**ಕ್ಷತ್ರಂ ಕ್ಷಯಾಯ ವಿಧಿನೋಽಪಹೃತಂ**
**ಮಹಾತ್ಮಾಬ್ರಹ್ಮಧ್ರುಗುಜ್ಝಿತಪಥಂ ನರಕಾರ್ತಿಲಿಪ್ಸು ।**
**ಉದ್ಧಂತ್ಯಸಾವವನಿಕಂಟಕಮುಗ್ರವೀರ್ಯ**
**ಸ್ತ್ರಿಃಸಪ್ತಕೃತ್ವಉರುಧಾರ ಪರಶ್ವಧೇನ** ॥ ೨೨ ॥

ಉಜ್ಝಿತಪಥಂ = ಸನ್ಮಾರ್ಗದಿಂದ ದೂರಸರಿದ; ಬ್ರಹ್ಮಧ್ರುಕ್= ಬ್ರಹ್ಮದ್ರೋಹಿಗಳಾದ; ನರಕಾರ್ತಿಲಿಪ್ಸು = ನರಕದುಃಖಿಗಳಿಗೆ ಸಿದ್ಧರಾದ; ಅವನಿಕಂಟಕಂ = ಭೂಮಿಗೆ ಮುಳ್ಳಿನಂತಿರುವ; ಕ್ಷಯಾಯ ವಿಧಿನಾ ಉಪಹೃತಂ = ನಾಶಹೊಂದುವುದಕ್ಕಾಗಿಯೇ ವಿಧಿಯಿಂದ ಸೃಷ್ಟರಾದ; ಕ್ಷತ್ರಂ = ದುಷ್ಟಕ್ಷತ್ರಿಯ ಕುಲದವರನ್ನು; ಉಗ್ರವೀರ್ಯಃ = ಪರಮ ಪರಾಕ್ರಮಿಯಾದ; (ಅಸೌ ಮಹಾತ್ಮಾ = ಪರಶುರಾಮಾವತಾರಿಯಾದ ಈ ಪುರುಷೋತ್ತಮನು;) ಉರುಧಾರ ಪರಶ್ವಧೇನ = ಅತ್ಯಂತ ಹರಿತವಾದ ಪರುಶು ಆಯುಧದಿಂದ; ತ್ರಿಸಪ್ತ ಕೃತ್ವಃ = ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆ ಮಾಡಿದವನಾಗಿ; ಉದ್ಧಂತಿ = ಚೆನ್ನಾಗಿ ಸಂಹರಿಸುತ್ತಾನೆ.

ಉ = ರುದ್ರನನ್ನು; ಗ್ರ = ಗ್ರಾಸಮಾಡುವ ಪರಾಕ್ರಮವುಳ್ಳವನು ಉಗ್ರ. ಜೀವರು ತ್ರಿವಿಧರಾಗಿರುವುದರಿಂದ, ದುಷ್ಟರ ಸಾಧನೆಗೂ ಅವಕಾಶ ಮಾಡಿಕೊಟ್ಟು, ಆದರಿಂದಲೇ ಸಜ್ಜೀವರಿಗಂಟಿದ ಪಾಪಗಳನ್ನು ತೊಡೆದು ಹಾಕುತ್ತಾ, ಕಡೆಗೆ ದುರ್ಜನರನ್ನು ನಾಶಪಡಿಸುವುದು ಭಗವತ್ಸಂಕಲ್ಪ. ದುರ್ಜೀವರ ಸ್ವರೂಪೇಚ್ಛೆಯು ಭಗವದ್ವೇಷ. ಅದು ಫಲಿಸುವುದು ಅವರ ದುಃಖಾನುಭವದಿಂದ. ಅದಕ್ಕಾಗಿ ಅವರಿಗೆ ದುಃಖವನ್ನೇ ಕೊಡುವ ಭಗವಂತನ ಸಂಕಲ್ಪವು ಅವರ ಅಪೇಕ್ಷೆಯನ್ನು ಪೂರೈಸುವುದಕ್ಕಾಗಿಯೇ ಹೊರತು, ಅವರ ಮೇಲೆ ದ್ವೇಷದಿಂದಲ್ಲ. ಭಗವಂತನಿಗೆ ಸಜ್ಜನರಲ್ಲಿ ಸ್ನೇಹವಾಗಲೀ, ದುರ್ಜನರಲ್ಲಿ ದ್ವೇಷವಾಗಲೀ ಉಂಟೆಂದು ತಿಳಿಯಬಾರದು. ಸಜ್ಜನರ ಸ್ನೇಹದಿಂದ ಅವನಿಗೆ ಆಗಬೇಕಾದ ಪ್ರಯೋಜನವೇನೂ ಇಲ್ಲ. ದುರ್ಜನರ ದೆಸೆಯಿಂದ ಭಯವಿಲ್ಲದ ಅವನಿಗೆ ಅವರ ಮೇಲೆ ದ್ವೇಷವೂ ಇಲ್ಲ.

**ಕೃತ್ಸ್ನಪ್ರಸಾದ ಸುಮುಖಃ ಕಲಯಾ ಕಲೇಶ**
**ಇಕ್ಷ್ವಾಕುವಂಶಅವತೀರ್ಯ ಗುರೋರ್ನಿದೇಶೇ ।**
**ತಿಷ್ಠನ್ವನಂ ಸದಯಿತಾನುಜ ಆವಿವೇಶ**
**ಯಸ್ಮಿನ್ವಿರುಧ್ಯ ದಶಕಂಧರ ಆರ್ತಿಮಾರ್ಛತ್** ॥ ೨೩ ॥

ಯಸ್ಮಿನ್= ಯಾರಲ್ಲಿ; ವಿರುದ್ಧ್ಯ= ವಿರೋಧ ಮಾಡಿ; ದಶಕಂಧರಃ= ರಾವಣನು; ಆರ್ತಿಂ= ಮರಣರೂಪವಾದ ದುಃಖವನ್ನು; ಆರ್ಚ್ಛತ್= ಹೊಂದಿದನೋ, ಅಂತಹ; ಕೃತ್ಸ್ನಪ್ರಸಾದ ಸುಮುಖಃ= ಪೂರ್ಣಪ್ರಸಾದದಾಯಕವಾದ ಸುಂದರ ವದನಾರವಿಂದವುಳ್ಳ; ಕಲೇಶಃ= ಸಮರ್ಥರಿಗೆಲ್ಲಾ ಸಾಮರ್ಥ್ಯಪ್ರದನಾದ ಪ್ರಭುವು; ಕಲಯಾ= ಸ್ವಾಂಶದಿಂದ; ಇಕ್ಷ್ವಾಕುವಂಶೇ= ಇಕ್ಷ್ವಾಕುವಂಶದಲ್ಲಿ; ಅವತೀರ್ಯ= ಅವತಾರ ಮಾಡಿ; ಗುರೋಃ= ತಂದೆಯಾದ ದಶರಥನ; ನಿದೇಶೇ ತಿಷ್ಠನ್= ಆಜ್ಞಾನುವರ್ತಿಯಾಗಿ; ಸದಯಿತಾನುಜಃ= ಪತ್ನಿಯಿಂದಲೂ ತಮ್ಮನಿಂದಲೂ ಕೂಡಿಕೊಂಡು; ವನಂ= ಅರಣ್ಯವನ್ನು; ಆವಿವೇಶ= ಪ್ರವೇಶಿಸಿದನು.

ಮೂರು ಶ್ಲೋಕಗಳಲ್ಲಿ ರಾಮಾವತಾರದ ಮಹಿಮೆಯು ವರ್ಣಿತವಾಗಿರುವುದು. ಇದು ಮನ್ವಾದಿಗಳಲ್ಲಿ ಕಂಡುಬರುವ ಆವೇಶ ಅವತಾರವಲ್ಲ; ಸ್ವಯಂ ಭಗವದವತಾರ ಎಂದು ತಿಳಿಸಿದ್ದಾರೆ.

**ತಸ್ಮಾ ಅದಾದುದಧಿರೂಢ ಭಯಾಂಗ ವೇಪೋ**
**ಮಾರ್ಗಂ ಸಪದ್ಯರಿಪುರಂ ಹರವದ್ದಿಧಕ್ಷೋಃ ।**
**ದೂರೇಸುಹೃನ್ಮಥಿತರೋಷ ಸುಶೋಷ ದೃಷ್ಟ್ಯಾ**
**ತಾತಪ್ಯಮಾನ ಮಕರೋರಗನಕ್ರ ಚಕ್ರಃ** ॥ ೨೪ ॥

ದೂರೇ ಸುಹೃತ್= ಪ್ರಿಯಳಾದ ಜಾನಕಿಯಿಂದ ದೂರನಾಗಿದ್ದವನ; ಮಥಿತರೋಷ ಸುಶೋಷದೃಷ್ಟ್ಯಾ= ಕಲಕಿದ ಅಂತಃಕರಣದಿಂದ ಉತ್ಪನ್ನವಾದ ಅಗ್ನಿಪೂರಿತ ದೃಷ್ಟಿಯಿಂದ; ತಾತಪ್ಯಮಾನ ಮಕರಉರಗ ನಕ್ರ ಚಕ್ರ= ಮೀನುಗಳು, ಹಾವುಗಳು, ಮೊಸಳೆಗಳು ಬೆಂದುಹೋಗುತ್ತಿರಲು; ಉದಧಿಃ= ಸಮುದ್ರರಾಜನಾದ ವರುಣನು; ರೂಢಭಯಾಂಗವೇಪಃ= ಭಯದಿಂದ ಮೈಯಲ್ಲಿ ನಡಕವುಳ್ಳವನಾಗಿ; ಸಪದಿ= ಕೂಡಲೇ; ರಿಪುಂ= ಶತ್ರುವನ್ನು; ಹರವತ್ ದಿಧಕ್ಷೋಃ= ಅಗ್ನಿನೇತ್ರವುಳ್ಳ ಶಿವನಂತೆ ಸುಟ್ಟುಬಿಡಲಿಚ್ಛಿಸಿದ; ತಸ್ಮೈ= ಆ ಶ್ರೀರಾಮಚಂದ್ರನಿಗೆ; ಮಾರ್ಗಂ ಅದಾತ್= ದಾರಿಯನ್ನು ಮಾಡಿಕೊಟ್ಟನು.

ಶ್ರೀರಾಮನ ಕೋಪವನ್ನು ಕಂಡ ಮೇಲೆಯೇ ವರುಣನು ದಾರಿಯನ್ನು ಕೊಟ್ಟನೆಂಬುದರಿಂದ, ದೇವತೆಗಳೂ ಅಜ್ಞಾನಕ್ಕೊಳಗಾಗಿದ್ದು ಬುದ್ಧಿಯನ್ನು ತಂದುಕೊಳ್ಳುವರೆಂಬುದು ತಿಳಿದುಬರುತ್ತದೆ. ಜಲಚರ ಪ್ರಾಣಿಗಳಿಗೆ ಶ್ರೀರಾಮನ ಕೋಪಾಗ್ನಿಯಿಂದ ಹಿಂಸೆಯಾಯಿತೆಂದು ಶಂಕಿಸಬಾರದು. ಹಿಂಸೆಗೊಳಗಾದವರು ದುರ್ಜೀವಿಪ್ರಾಣಿಗಳೇ ಆದುದರಿಂದ ಅದು ಅವರ ಪ್ರಾಪ್ತಿ.

**ವಕ್ಷಸ್ಥಲ ಸ್ಪರ್ಶರುಗ್ಣಮಹೇಂದ್ರವಾಹದಂ-**
**ತ್ರೈರ್ವಿಲಂಬಿತ ಕಕುಬ್ವಯರೂಢಹಾಸಃ ।**
**ಸದ್ಯೋsಸುಭಿಸ್ಸಹ ವಿನೇಷ್ಯತಿ ದಾರಹರ್ತುರ್ವಿ-**
**ಸ್ಫೂರ್ಜಿತೈರ್ಧನುಷ ಉಚ್ಚರಿತೈಃ ಸಸೈನ್ಯಃ** ॥ ೨೫ ॥

ವಕ್ಷಸ್ಥಲ ಸ್ಪರ್ಶ = ತನ್ನ ಎದೆಯನ್ನ ತಾಗಿದುದರಿಂದಲೇ; ರುಗ್ಣ = ಮುರಿಯಲ್ಪಟ್ಟ; ಮಹೇಂದ್ರವಾಹದಂತೈಃ = ಮಹೇಂದ್ರನ ವಾಹನವಾದ ಐರಾವತದ ದಂತಗಳನ್ನು ಕಂಡು; ವಿಲಂಬಿತ ಕಕುಬ್ವಯಃ = ಉನ್ನತ ಸ್ಥಾನ ಜಯ ಹೊಂದಿದ ಮನಸ್ಸಿನಿಂದ; ರೂಢಹಾಸಃ = ಉಂಟಾದ ಅಟ್ಟಹಾಸದ ನಗೆಯುಳ್ಳವನು; (ರಾವಣನು); ದಾರಹರ್ತುಃ = ತನ್ನ ಪತ್ನಿಯನ್ನು ಹಿಂದಕ್ಕೆ ಕರೆತರಲು ಬಂದವನ; ಧನುಷಃ = ಧನುಸ್ಸಿನ; ಉಚ್ಚರಿತೈಃ ವಿಸ್ಫೂರ್ಜಿತೈಃ = ರೇಂಕಾರದ ಜ್ವಾಲೆಯಿಂದ; ಸದ್ಯಃ = ಕೂಡಲೇ; ಸಸೈನ್ಯಃ = ತನ್ನ ಸೈನ್ಯ ಸಮೇತನಾಗಿ; ಅಸುಭಿಃ ಸಃ = ತನ್ನ ಪ್ರಾಣಗಳಿಂದ ಕೂಡಿ; ವಿನೇಷ್ಯತಿ = ನಾಶ ಹೊಂದುತ್ತಾನೆ.

ಶ್ರೀರಾಮನ ಧನುಷ್ಟೇಂಕಾರದಿಂದಲೇ ರಾವಣಾದಿಗಳ ಪ್ರಾಣಗಳು ಹಾರಿಹೋದುವು. ಬಾಣಗಳ ಆಘಾತದಿಂದ ದೇಹಗಳು ಬಿದ್ದುಹೋದುವು, ಕಂಡಹಾಗೆ. ವಜ್ರದಂತಹ ರಾವಣನ ಎದೆಗೆ ತಾಕಿ ಐರಾವತದ ದಂತಗಳು ಮುರಿದುವೆಂದು ಅವನ ಗರ್ವದ ನಗುವಿಕೆ. ಆದರೆ ಧನುಸ್ಸಿನ ಟೇಂಕಾರದಿಂದಲೇ ತನ್ನ ಮತ್ತು ತನ್ನವರ ಪ್ರಾಣಗಳು ಹಾರಿಹೋಗುವುವೆಂದು ಅವನು ತಿಳಿದಿರಲಿಲ್ಲ.

**ಭೂಮೇಃ ಸುರೇತರವರೂಥ ವಿಮರ್ದಿತಾಯಾಃ**
**ಕ್ಲೇಶವ್ಯಯಾಯ ಕಲಯಾ ಸಿತಕೃಷ್ಣಕೇಶಃ ।**
**ಜಾತಃ ಕರಿಷ್ಯತಿ ಜನಾನುಪಲಕ್ಷ್ಯಮಾರ್ಗಃ**
**ಕರ್ಮಾಣಿಚಾತ್ಮಮಹಿಮೋಪನಿಬಂಧನಾನಿ** ॥ ೨೬ ॥

ಸುರೇತರ ವರೂಥ ವಿಮರ್ದಿತಾಯಾಃ = ದೈತ್ಯಸಮೂಹದಿಂದ ಉಪಟಳಕ್ಕೆ ಒಳಗಾದ; ಭೂಮೇಃ = ಭೂಮಿಯ; ಕ್ಲೇಶವ್ಯಯಾಯ = ದುಃಖವನ್ನು ಕಳೆಯುವುದಕ್ಕಾಗಿ; ಕಲಯಾ = ಅಂಶತ್ವೇನ; ಸಿತಕೃಷ್ಣಕೇಶಃ = ಶುಕ್ಲಕೇಶಕೃಷ್ಣಕೇಶವುಳ್ಳ ಭಗವಂತ; ಜಾತಃ = ಬಲರಾಮನಲ್ಲಿ ರಾಮನೆಂದೂ, ಸ್ವಯಂ ಕೃಷ್ಣನೆಂದೂ ಅವತರಿಸಿ; ಜನ ಅನುಪಲಕ್ಷ್ಯಮಾರ್ಗಃ = ಜನಸಾಮಾನ್ಯರಿಗೆ ತನ್ನ ಚರ್ಯೆಗಳು ತಿಳಿಯದಿರುವಂತೆ;

ಆತ್ಮಮಹಿಮಾ ಉಪನಿಬಂಧನಾನಿ = ಜ್ಞಾನಿಗಳಿಗೆ ಅರ್ಥವಾಗುವ ತನ್ನ ಮಹಿಮೆಗಳುಳ್ಳ (ಅಥವಾ ಇತರರಿಗೆ ಅಸಾಧ್ಯವಾಗಿ, ತನಗೆ ಮಾತ್ರ ಸಾಧ್ಯವಾದ ಮಹಿಮೆಗಳನ್ನು ತಿಳಿಸುವ ಕರ್ಮಗಳನ್ನು); ಕರಿಷ್ಯತಿ = ಆಚರಿಸುತ್ತಾನೆ.

ಶ್ರೀಕೃಷ್ಣಾವತಾರದಿಂದ ಭೂಭಾರಹರಣಮಾಡಿದ ವಿಚಾರ ಇಲ್ಲಿಂದ ಮುಂದೆ ಪ್ರಸಕ್ತವಾಗಿದೆ. ಭಗವಂತನ ಮೈಯಲ್ಲಿ ವೃದ್ಧಾಪ್ಯಸೂಚಕವಾದ ಬಿಳಿಯ ಕೂದಲು ಹೇಗೆ ಬಂದಿತು ಎಂದು ಶಂಕಿಸಬಾರದು. ಯುಗಾನುಸಾರವಾಗಿ ಶ್ವೇತವರ್ಣ, ಪೀತವರ್ಣ, ರಕ್ತವರ್ಣ, ಕೃಷ್ಣವರ್ಣಗಳಿಂದ ಅವತರಿಸುವ ಅವನಲ್ಲಿ ಎಲ್ಲ ವರ್ಣಗಳೂ ಉಂಟು. ಪ್ರತಿಯೊಂದು ರೂಪದಲ್ಲಿಯೂ ಇತರ ಎಲ್ಲಾ ರೂಪಗಳೂ ಇರುವ ಅದ್ಭುತ ಮಹಿಮನವನು.

**ತೋಕೇನ ಜೀವ ಹರಣಂ ಯದುಲೂಪಿಕಾ-**
**ಯಾಸ್ತ್ರೈಮಾಸಿಕಸ್ಯ ಚಪದಾ ಶಕಟೋಽಪವೃತ್ತಃ ।**
**ಯದ್ರಿಂಗತಾಂತರಗತೇನ ದಿವಸ್ಪೃಶೋರ್ವಾಉನ್ಮೂಲನಂತ್ವಿ**
**ತರಥಾರ್ಜನಯೋರ್ನಭಾವ್ಯಂ** ॥ ೨೭ ॥

ತೋಕೇನ = ಸಣ್ಣ ಶಿಶುರೂಪದಿಂದ; ಯತ್‌ಉಲೂಪಿಕಾಯಃ ಜೀವಹರಣಂ = ಉಲೂಪಿಯಿಂದೊಡಗೂಡಿದ ಪೂತಣಿಯ ಸಂಹಾರವು ಯಾವುದೋ ಆ ಕಾರ್ಯವು; ತ್ರೈಮಾಸಿಕಸ್ಯ ಪದಾ ಚ = ಮೂರುತಿಂಗಳ ಶಿಶುರೂಪದ ಪಾದಸ್ಪರ್ಶದಿಂದಲೇ; ಶಕಟೋಽಪವೃತ್ತಃ = ಗಾಡಿಯನ್ನು ತಲೆಕೆಳಗು ಮಾಡುವನೆವದಿಂದ ಶಕಟಾಸುರನ ಸಂಹಾರವು; ಅಂತರಂ ಗತೇನ = ಒರಳಿಗೆ ಸಂಬಂಧಿಸಿ ನಡುವಿಗೆ ಕಟ್ಟಿದ ಹಗ್ಗದ ಸಹಿತವಾಗಿ; ರಿಂಗತಾ = ಆಟವಾಡುತ್ತಾ; ಉರ್ವಾಃ = ಭೂಮಿಯಿಂದ; ದಿವಸ್ಪೃಶೋಃ= ಆಕಾಶವನ್ನು ಮುಟ್ಟುವಂತೆ ಬೆಳೆದು ನಿಂತಿದ್ದ; ಅರ್ಜುನಯೋಃ = ಯಮಳಾರ್ಜುನ ವೃಕ್ಷಗಳ; ಉನ್ಮೂಲನಂ = ಕೆಳಗುರುಳಿಸುವಿಕೆಯು; ಯತ್ ತು = ಯಾವುದೋ ಅದೂ ಕೂಡ; ಇತರಥಾ = ಬೇರೆ ವ್ಯಕ್ತಿಗಳಿಂದ; ನಭಾವ್ಯಂ = ಆಗುವುದೆಂದು ಭಾವಿಸಲಾಗದು.

ಪೂತಣಿಯ ಸಂಹಾರ (ಮರಣ)ವೂ, ಉಲೂಪಿಯ ಸಂಹಾರ (ಸಂಗ್ರಹ)ವೂ ಆಯಿತು. ಅದರಂತೆ ಅರ್ಜುನ ವೃಕ್ಷಗಳ ಬೀಳುವಿಕೆಯೂ, ಯಮಳಾರ್ಜುನರ ಉದ್ಧಾರವೂ ಆಯಿತು.

**ಯದ್ವೈವ್ರಜೇವ್ರಜಪಶೂನ್ವಿಷತೋಯ**
**ಪೀತಾನ್ಗೋಪಾಂಸ್ತು ಜೀವಯದನುಗ್ರಹ ದೃಷ್ಟಿ ವೃಷ್ಟ್ಯಾ ।**
**ತಚ್ಛುದ್ಧಯೇತಿ ವಿಷವೀರ್ಯವಿಲೋಲ**
**ಜಿಹ್ವಮುಚ್ಚಾಟಯಿಷ್ಯ ದುರಗಂವಿಹರನ್ ಹ್ರದಿನ್ಯಾಂ** ॥ ೨೮ ॥

ವ್ರಜೇ = ಮಂದೆಯಲ್ಲಿನ; ವ್ರಜಪಶೂನ್ = ನಂದವ್ರಜದ ಹಸುಗಳನ್ನು; ವಿಷ[illegible]ತೋಯ ಪೀತಾನ್ = ವಿಷಮಿಶ್ರಿತ ಜಲಪಾನ ಮಾಡಿದ ಅವುಗಳನ್ನು; ಗೋಪಾನ್ ತು = ಅದೇ ಜಲಪಾನ ಮಾಡಿದ ಗೋಪಾಲಕರನ್ನೂ; ಅನುಗ್ರಹದೃಷ್ಟಿ ವೃಷ್ಟ್ಯಾ ವೈ = ಅನುಗ್ರಹ ರೂಪವಾದ ನೋಟದ ಅಮೃತವರ್ಷದಿಂದಲೇ; ಜೀವಯತ್ ಯತ್ = ಬದುಕಿಸಿದನೆಂಬ ಕಾರ್ಯವು ಯಾವುದೋ ಅದು; ತತ್ ಶುದ್ಧಯೇ ಇತಿ = ಆ ಯಮುನಾ ನದಿಯ ನೀರನ್ನು ಶುದ್ಧಿಗೊಳಿಸುವುದಕ್ಕೆಂದು; ವಿಷವೀರ್ಯವಿಲೋಲ ಜಿಹ್ವಂ = ವಿಷದ ಬಲದಿಂದ ಚಲಿಸುವ ನಾಲಗೆಯುಳ್ಳ; ಉರಗಂ = ಕಾಳೀಯ ಸರ್ಪವನ್ನು; ಹ್ರದಿನ್ಯಾಂ = ಕಾಳಿಂದೀ ಮಡುವಿನಲ್ಲಿ; ವಿಹರನ್ = ಅದರ ತಲೆಯಮೇಲೆ ನಾಟ್ಯವಾಡುತ್ತಾ; ಉಚ್ಚಾಟಯಿಷ್ಯತ್ = ಹೊರಗೋಡಿಸಿದನು ಎಂಬುದು; ಇತರಥಾನ ಭಾವ್ಯಂ = ಅನ್ಯರಿಂದ ಸಾಧ್ಯವಾಗುವುದೆಂದು ತಿಳಿಯಬಾರದು.

ವಿಷಾಭಿಮಾನಿಯು ದುರ್ಗಾದೇವಿ ಅದನ್ನು ಜಯಿಸಿ ನಿಲ್ಲುವುದು ಅದರ ಬೇಗೆಯಿಲ್ಲದಂತೆ ಇತರರನ್ನು ರಕ್ಷಿಸುವುದು, ಆ ದುರ್ಗಾರಮಣನಿಗೆ ಮಾತ್ರ ಸಾಧ್ಯ. ಶ್ರೀ–ಭೂ–ದುರ್ಗಾರಮಣನಾದವನು ಶ್ರೀಕೃಷ್ಣ.

**ತತ್ಕರ್ಮದಿವ್ಯಮಿವಯನ್ನಿಶಿ ನಿಃಶಯಾನಂ**
**ದಾವಾಗ್ನಿನಾಶುವಿಪಿನೇ ಪರಿದಹ್ಯಮಾನೇ ।**
**ಉನ್ನೇಷ್ಯತಿವ್ರಜಮಿತೋವಸಿತಾಂತಕಾಲಂ**
**ನೇತ್ರೇಪಿಧಾಯ್ಯಸಬಲೋನಧಿಗಮ್ಯವೀರ್ಯಃ** ॥ ೨೯ ॥

ವಿಪಿನೇ = ಅರಣ್ಯದಲ್ಲಿ; ನಿಶಿ = ರಾತ್ರಿಯ ಕಾಲದಲ್ಲಿ; ನಿಃಶಯಾನಂ = ಗಾಢನಿದ್ರೆಗೆ ವಶವಾಗಿದ್ದ; ದಾವಾಗ್ನಿನಾ = ಭಯಂಕರವಾದ ಕಾಳ್ಗಿಚ್ಚಿನಿಂದ; ಆಶು = ಬೇಗನೆ; ಪರಿದಹ್ಯಮಾನೇ = ಸುಟ್ಟುಹೋಗುವ ಸ್ಥಿತಿಯಲ್ಲಿ; ಅವಸಿತಾಂತಕಾಲಂ = ಕೊನೆಗಾಲವು ಪ್ರಾಪ್ತವಾಯಿತೆಂದು ಹೆದರಿರಲು; ವ್ರಜಂ = ಗೋಗೋಪಾಲಕರನ್ನು; ನೇತ್ರೇ ಪಿಧಾಯ್ಯ = ಕಣ್ಣುಗಳನ್ನು ಮುಚ್ಚಿಸಿ; ಇತಃ = ಈ ವಿಪತ್ತಿನಿಂದ; ಉನ್ನೇಷ್ಯತಿ (ಇತಿ) ಯತ್ ತತ್ ಕರ್ಮ = ಪಾರುಮಾಡುವನೆಂಬ ಆ ಕಾರ್ಯವು; ದಿವ್ಯಂ ಇವ =

ಪ್ರಶಂಸನೀಯವಾದುದೇ ಸರಿ. ಏಕೆಂದರೆ; ಸಃ = ಆ ಶ್ರೀಕೃಷ್ಣನು; ಬಲಃ = ಬಲಿಷ್ಠನು; ಅನಧಿಗಮ್ಯವೀರ್ಯಃ = ಬ್ರಹ್ಮಾದಿಗಳಿಂದಲೂ ತಿಳಿಯಲಶಕ್ಯವಾದ ಪರಾಕ್ರಮವುಳ್ಳವನು.

ರಾತ್ರಿ ಎಂಬುದು ಸಾಮಾನ್ಯರಿಗೆ ಮೈಮರೆಯುವ ಕಾಲ. ಜ್ಞಾನಿಗಳಿಗೂ, ಜ್ಞಾನಿಗಳಿಂದ ಪೂಜ್ಯನಾದ ಶ್ರೀಕೃಷ್ಣನಿಗೂ ಪೂರ್ಣ ಎಚ್ಚರದ ಕಾಲ.

**ಗೃಹ್ಣೀತ ಯದ್ಯದುಪಬದ್ಧುಮಮುಷ್ಯಮಾತಾ**
**ಶುಲ್ಬಂ ಸುತಸ್ಯ ನತು ತತ್ತದಮುಷ್ಯಮಾತಿ ।**
**ಯಜ್ಜೃಂಭತೋಽಸ್ಯವದನೇ ಭುವನಾನಿ**
**ಗೋಪೀಸಂವೀಕ್ಷ್ಯಶಂಕಿತಮನಾಃ ಪ್ರತಿಬೋಧಿತಸ್ಯ** ॥ ೩೦ ॥

ಅಮುಷ್ಯಮಾತಾ = ಈ ಶ್ರೀಕೃಷ್ಣನ ತಾಯಿಯು; ಉಪಬದ್ಧುಂ = ಇವನನ್ನು ಕಟ್ಟಿಹಾಕುವುದಕ್ಕಾಗಿ; ಯತ್ ಶುಲ್ಬಂ = ಯಾವ ಹಗ್ಗವನ್ನು; ಗೃಹ್ಣೀತ (ಗೃಹ್ಣಾತಿ) = ತೆಗೆದುಕೊಳ್ಳುವಳೋ; ಸುತಸ್ಯ ಅಮುಷ್ಯ = ಈ ಮಗನ ವಿಷಯದಲ್ಲಿ; ತತ್ ತು = ಆ ಹಗ್ಗವು; ನ ಮಾತಿ = ಸಾಕಾಗುವುದಿಲ್ಲ (ಸಾಕಾಗಲಿಲ್ಲ); ಪ್ರತಿಬೋಧಿತಸ್ಯ ಅಸ್ಯ = ನಿದ್ರೆಯಿಂದ ಎಚ್ಚೆತ್ತ ಇವನ; ಜೃಂಭತಃ ವದನೇ = ಆಕಳಿಸುವ ಬಾಯಲ್ಲಿ; ಗೋಪೀ = ಯಶೋದಾದೇವಿಯು; ಭುವನಾನಿ = ಲೋಕಗಳನ್ನೆಲ್ಲಾ; ಸಂವೀಕ್ಷ್ಯ = ಸ್ಪಷ್ಟವಾಗಿ ಕಂಡು; ಶಂಕಿತಮನಾಃ ಬಭೂವ = ಆಶ್ಚರ್ಯಚಕಿತಳಾದಳು.

ತನ್ನ ಭಕ್ತರಿಗೆ ಮಾತ್ರ ತಿಳಿಯುವಂತೆ ಶ್ರೀಕೃಷ್ಣನು ತನ್ನ ಮಹಿಮೆಯನ್ನು ಕ್ರಮಕ್ರಮವಾಗಿ ಬಿಚ್ಚಿ ತೋರಿಸುವನು. ಅಗಮ್ಯನಾದರೂ ಪ್ರತ್ಯಕ್ಷವಾಗಿ ಬಂದು ತನ್ನ ರಕ್ಷಣೆಯ ಕಾರುಣ್ಯವನ್ನು ಪ್ರದರ್ಶಿಸುವನೆಂಬುದೂ, ಅಮೇಯನಾದರೂ ತಾನಾಗಿ ಮಹಿಮಾ ಜ್ಞಾನವನ್ನುಂಟುಮಾಡುವನೆಂಬುದೂ ಮೇಲಿನ ಎರಡು ಶ್ಲೋಕಗಳಿಂದ ತಿಳಿದು ಬರುತ್ತದೆ.

**ನಂದಂ ಚ ಮೋಕ್ಷ್ಯತಿ ಭಯಾದ್ವರುಣಸ್ಯ ಪಾಶಾತ್**
**ಗೋಪಾನ್ಬಿಲೇಷು ಪಿಹಿತಾನ್ಮಯಸೂನುನಾ ಚ ।**
**ಜಲ್ಪಾವೃತಂ ನಿಶಿ ಶಯಾನಮತಿಶ್ರಮೇಣ**
**ಲೋಕೇ ವಿಕುಂಠ ಉಪಧಾಸ್ಯತಿ ಗೋಕುಲಂ ಸ್ಮ** ॥ ೩೧ ॥

ನಂದಂ ಚ = ನಂದಗೋಪನನ್ನು; ವರುಣಸ್ಯ ಪಾಶಾತ್ ಭಯಾತ್ = ವರುಣ ಪಾಶದ ಭಯದಿಂದ; ಮೋಕ್ಷ್ಯತಿ = ಬಿಡಿಸುತ್ತಾನೆ; ಮಯ ಸೂನುನಾ = ದೈತ್ಯ

ಶಿಲ್ಪಿಯಾದ ಮಯನ ಮಗನಿಂದ; ಜಲ್ಪಾವೃತಂ = ಮರುಳು ಮಾತುಗಳಿಗೆ ಸಿಕ್ಕಿದ; ಬಿಲೇಷು ಪಿಹಿತಾನ್ = ಅಜ್ಞಾನ ಗುಹೆಯಲ್ಲಿ ಅಡಗಿಸಲ್ಪಟ್ಟ; ನಿಶಿ = ಸಂಸಾರದ ಕತ್ತಲೆಯಲ್ಲಿ; ಅತಿ ಶ್ರಮೇಣ ಶಯಾನಂ = ಬಹಳ ಶ್ರಮಪಟ್ಟುದರಿಂದ ಮೈಮರೆತ; ಗೋಪಾನ್ = ಗೋಪಾಲಕರನ್ನು; ಗೋಕುಲಂ ಚ = ಗೋಕುಲವನ್ನೂ; ವಿಕುಂಠಲೋಕೇ = ವೈಕುಂಠಲೋಕದಲ್ಲಿ; ಉಪಧಾಸ್ಯತಿ = ಸ್ಥಾಪಿಸುತ್ತಾನೆ.

ಮಯಸುತನ ಮಾಯೆಗೊಳಗಾಗಿ ಗುಹೆಯೊಳಗೆ ಸಿಕ್ಕಿಕೊಂಡ ಗೋಪಾಲಕರನ್ನು ಅಲ್ಲಿಂದ ಬಿಡಿಸಿ ತಂದನೆಂಬ ಕಥನದ ಅಭಿಪ್ರಾಯ ನಂದಗೋಕುಲದವರಿಗೆ ವೈಕುಂಠದರ್ಶನ ಮಾಡಿಸಿ ಅವರನ್ನು ಮುಕ್ತಿಯೋಗ್ಯರಾಗಿ ಉಳಿಯುವಂತೆ ಮಾಡಿದನು ಎಂದು. ಗೋಲೋಕವೆಂಬುದು ವೈಕುಂಠದಲ್ಲಿದೆ ಎಂದಹಾಗಾಯಿತು.

**ಗೋಪೈರ್ಮಖೇಪ್ರತಿಹತೇವ್ರಜ ವಿಪ್ಲವಾಯ**
**ದೇವೇಭಿವರ್ಷತಿ ಪಶೂನ್ ಕೃಪಯಾ ರಿರಕ್ಷುಃ ।**
**ಧರ್ತೋಚ್ಛಿಲೀಂಧ್ರಮಿವ ಸಪ್ತದಿನಾನಿ**
**ಸಪ್ತವರ್ಷೋಮಹೀಧ್ರಮನಘೈಕ ಕರೇ ಸಲೀಲಂ** ॥ ೩೨ ॥

ಗೋಪೈಃ ಮಖೇ = ಗೋವರ್ಧನ ಪೂಜೆಯಲ್ಲಿ ಗೋಪಾಲಕರು ನಿರತರಾಗಿರಲು; ವ್ರಜ ವಿಪ್ಲವಾಯ = ನಂದವ್ರಜವನ್ನು ನಾಶಮಾಡಿಬಿಡಬೇಕೆಂದು; ದೇವೇ = ದೇವೇಂದ್ರನು; ಅಪ್ರತಿಹತೇ ಅಭಿವರ್ಷತಿ = ಏಕ ಪ್ರಕಾರವಾಗಿ ಮಳೆ ಸುರಿಸುತ್ತಿರಲು; ಕೃಪಯಾ = ಕರುಣೆಯಿಂದ; ಪಶೂನ್ ರಿರಕ್ಷುಃ = ಪಶುಗಳನ್ನೂ ಅಜ್ಞಾನಿಗಳಾದ ಗೋಪಾಲಕರನ್ನೂ ರಕ್ಷಿಸಬೇಕೆಂದು; ಸಪ್ತ ದಿನಾನಿ = ಏಳು ದಿವಸಗಳ ಕಾಲ; ಸಪ್ತ ವರ್ಷಃ = ಏಳು ವರ್ಷದ ಬಾಲಕನಾದ ಶ್ರೀಕೃಷ್ಣನು; ಅನಘೈಕಕರೇ = ಮಹಿಮಾನ್ವಿತವಾದ ಒಂದು ಕೈಯಿಂದಲೇ; ಮಹೀಧ್ರಂ = ಗೋವರ್ಧನಗಿರಿಯನ್ನು; ಉಚ್ಛಿಲೀಂಧ್ರಂ ಇವ = ತೆರೆದ ಛತ್ರಿಯಂತೆ; ಸಲೀಲಂ = ಅನಾಯಾಸವಾಗಿ; ಧರ್ತಾ = ಎತ್ತಿ ಹಿಡಿದವನಾದನು.

ಭಗವಂತನು ಮಾಡುವ ಒಂದೊಂದು ಕಾರ್ಯವೂ ಅನೇಕಾನೇಕ ಪ್ರಯೋಜನಗಳನ್ನುಂಟುಮಾಡುವುವು. ಭಗವಂತನನ್ನು ನಂಬಿ, ಅವನ ಆದೇಶದಂತೆ ನಡೆದವರಿಗೆ ಅವನ ರಕ್ಷಣೆಯು ಸದಾ ಇರುವುದೆಂಬುದು ಗೋಪಾಲಕರಿಗೆ ತಿಳಿಯಿತು. ನಿಜವಾದ ಯಜ್ಞಭೋಕ್ತಾರನು ಭಗವಂತನೇ ಎಂಬುದನ್ನು ಮರೆತು ದುಡುಕಿದ ದೇವೇಂದ್ರನಿಗೆ ಗರ್ವಭಂಗವಾಯಿತು; ಭಗವಂತನಲ್ಲಿ ಭಕ್ತಿ ಹೆಚ್ಚಿತು.

ಕ್ರೀಡನ್ವನೇ ನಿಶಿ ನಿಶಾಕರ ರಶ್ಮಿ ಗೌರ್ಯಾಂ
ರಾಸೋನ್ಮುಖಃಕಲಪದಾಯತ ಮೂರ್ಛಿತೇನ ।
ಉದ್ದೀಪಿತ ಸ್ಮರರುಜಾಂ ವ್ರಜ ಸದ್ವಧೂನಾಂ
ಹರ್ತುರ್ಹರಿಷ್ಯತಿ ಶಿರೋಧನದಾನುಗಸ್ಯ || ೩೩ ||

ನಿಶಿ = ರಾತ್ರಿಯ ವೇಳೆಯಲ್ಲಿ; ನಿಶಾಕರ ರಶ್ಮಿ ಗೌರ್ಯಾಂ = ಚಂದ್ರಕಿರಣಗಳ ಧವಳ ಕಾಂತಿಯಲ್ಲಿ; ರಾಸೋನ್ಮುಖಃ = ಗೋಪಿಯರೊಡನೆ ನರ್ತನದಲ್ಲಿ ಆಸಕ್ತನಾಗಿ; ಕ್ರೀಡನ್= ವಿಹರಿಸುತ್ತಾ; ಕಲಪದಾಯತ ಮೂರ್ಛಿತೇನ = ತನ್ನ ಮಧುರ ವಚನಗಳಿಂದಲೂ, ಸಪ್ತಸ್ವರ ಮಧುರ ಸಮ್ಮೇಳನದ ವೇಣುವಾದನದಿಂದಲೂ; ಉದ್ದೀಪಿತ ಸ್ಮರರುಜಾಂ = ಉದ್ರಿಕ್ತವಾದ ಕಾಮ ಬೇಗೆಯುಳ್ಳ; ವ್ರಜಸದ್ವಧೂನಾಂ = ನಂದವ್ರಜದ, ಪ್ರೇಮಪ್ರಧಾನಭಕ್ತಿಯುಳ್ಳ ವನಿತೆಯರನ್ನು; ಹರ್ತುಃ = ಅಪಹರಿಸುವ ಇಚ್ಛೆಯಿಂದ ಬಂದ; ಧನದಾನುಗಸ್ಯ = ಕುಬೇರನ ಗುಂಪಿನ ಶಂಖಚೂಡನ; ಶಿರಃ = ಶಿರಸ್ಸನ್ನು; ಹರಿಷ್ಯತಿ = ಹಾರಿಸಿಬಿಡುತ್ತಾನೆ.

ಭಗವಂತನ ಮಾಹಾತ್ಮ್ಯವನ್ನು ಯಥಾಯೋಗ್ಯವಾಗಿ ಅರ್ಥಮಾಡಿಕೊಂಡು ಅವನಲ್ಲಿ ಅನನ್ಯ ಸಾಧಾರಣ ಸ್ನೇಹ ಮಾಡುವುದಕ್ಕೆ ಭಕ್ತಿ ಎಂದು ಹೆಸರು. ಶಿಶುವು ತನ್ನ ಮಾತಾಪಿತೃಗಳ ಮಾಹಾತ್ಮ್ಯಜ್ಞಾನದ ಆವಶ್ಯಕತೆ ಇಲ್ಲದೆ ಸಹಜವಾಗಿ ಅವರನ್ನಾಶ್ರಯಿಸಿರುವಂತೆ, ಶ್ರೀಕೃಷ್ಣನಿಂದ ಆಕರ್ಷಿತರಾಗಿ ಅವನಲ್ಲಿ ಗೋಪಿಯರು ಸ್ನೇಹವನ್ನು ಬೆಳೆಸಿದುದು ಪ್ರೇಮಭಕ್ತಿ.

ಏಚಪ್ರಲಂಬ ಖರದುರ್ದರ ಕೇಶ್ಯರಿಷ್ಟ
ಮಲ್ಲೇಭಕಂಸ ಯವನಾಃ ಕುಜಪೌಂಡ್ರಕಾದ್ಯಾಃ ।
ಅನ್ಯೇಪಿ ಶಾಲ್ವಕಪಿ ಬಲ್ವಲ ದಂತ ವಕ್ರಸಪ್ತೋಕ್ಷ
ಶಂಬರ ವಿದೂರಥ ರುಕ್ಮಿಮುಖ್ಯಾಃ || ೩೪ ||

ಯೇವಾ ಮೃಧೇ ಸಮಿತಿ ಶಾಲಿನ ಆತ್ತಚಾಪಾಃ
ಕಾಂಭೋಜಮತ್ಸ್ಯ ಕುರು ಸೃಂಜಯ ಕೈಕಯಾದ್ಯಾಃ ।
ಯಾಸ್ಯಂತ್ಯದರ್ಶನಮಿತಾಬಲಪಾರ್ಥಭೀಮ
ವ್ಯಾಜಾಹ್ವಯೇನ ಹರಿಣಾ ನಿಲಯಂ ತದೀಯಂ || ೩೫ ||

ಏಚ = ಇನ್ನೂ ಅನ್ಯರಾದ; ಪ್ರಲಂಬ, ಖರ, ದುರ್ದರ, ಕೇಶಿ, ಅರಿಷ್ಟ, ಮಲ್ಲ, ಇಭ (ಗಜ), ಕಂಸ, ಯವನ, ಕುಜ, ಪೌಂಡ್ರಕ, ಆದ್ಯಾಃ = ಈ ಮೊದಲಾದವರು; ಅನ್ಯೇ ಅಪಿ = ಇನ್ನೂ ಇತರರಾದ; ಶಾಲ್ವ, ಕಪಿ (ಮೈಂದ), ಬಲ್ವಲ, ದಂತವಕ್ರ, ಸಪ್ತೋಕ್ಷ,

ಶಂಬರ, ವಿದೂರಥ, ರುಕ್ಮಿ, ಮುಖ್ಯಾಃ = ಈ ಮುಂತಾದವರು; ಯೇವಾ = ಯಾರು ಯಾರು; ಮೃಧೇ = ಮಹಾಭಾರತ ಯುದ್ಧದಲ್ಲಿ; ಸಮಿತಿಶಾಲಿನಃ = ಯುದ್ಧವಿಶಾರದರು; ಆತ್ತ ಚಾಪಾಃ = ಧನಸ್ಸು ಮೊದಲಾದ ಆಯುಧಧಾರಿಗಳಾದ; ಕಾಂಬೋಜ, ಮತ್ಸ್ಯ, ಕುರು, ಸೃಂಜಯ, ಕೈಕಯ, ಆದ್ಯಾಃ = ಮೊದಲಾದವರು; ಬಲಪಾರ್ಥಭೀಮ ವ್ಯಾಜಾಹ್ವಯೇನ = ಬಲರಾಮ, ಅರ್ಜುನ, ಭೀಮಸೇನ ಇವರುಗಳಲ್ಲಿ ಅವರವರ ಹೆಸರುಗಳಿಂದ ತಾನೇ ಇದ್ದವನಾದ; ಹರಿಣಾ = ಶ್ರೀಕೃಷ್ಣನಿಂದ; ಅದರ್ಶನಮಿತಾಃ = ಮರಣ ಹೊಂದಿದವರಾಗಿ; ತದೀಯ ನಿಲಯಂ = ಅವನಿಂದ ಅಧಿಷ್ಠಿತಗಳಾದ ಸ್ಥಾನಗಳನ್ನು; ಯಾಸ್ಯಂತಿ = ಹೊಂದುತ್ತಾರೆ.

ಬಾಲಕ್ರೀಡೆ, ರಾಸಕ್ರೀಡೆಗಳನ್ನು ಸೂಚಿಸಿದನಂತರ, ಶ್ರೀಕೃಷ್ಣನು ಅನೇಕ ಅಸುರರನ್ನೂ, ಕಂಸನನ್ನೂ ಸಂಹಾರ ಮಾಡಿದ ವಿಚಾರವನ್ನು ತಿಳಿಸಿ, ರುಕ್ಮಿಣೀ ಸ್ವಯಂವರಾದಿಗಳಿಂದ ರಾರಾಜಿಸಿದುದನ್ನೂ, ಮಹಾಭಾರತವನ್ನು ನಡೆಸಿ ತ್ರಿವಿಧ ಜೀವರಿಗೆ ಅವರವರ ಗತಿಗಳನ್ನು ಹೊಂದಿಸಿದುದನ್ನೂ ಸಂಗ್ರಹಿಸಿ ತಿಳಿಸಿದ್ದಾರೆ. ಪಾರ್ಥ, ಭೀಮ, ದ್ರೋಣ, ಭೀಷ್ಮಾದಿಗಳಿಗೆ ವೈಕುಂಠ ಸ್ಥಾನವೂ, ದೈತ್ಯಾವೇಶ ಯುಕ್ತರಾಗಿದ್ದ ಶಿಶುಪಾಲಾದಿ ಜೀವರಿಗೆ ದೈತ್ಯಸಂಪರ್ಕನಾಶವೂ, ದುರ್ಯೋಧನಾದಿಗಳಿಗೆ ತಮಸ್ಸೆಂಬ ನಿತ್ಯನರಕವೂ ಸಿದ್ಧವೆಂದು ತಿಳಿಯಬೇಕು. ಭಗವಂತನಿಲ್ಲದ ಸ್ಥಾನವಿಲ್ಲ. ಅಂಧಂತಮಸ್ಸಿನಲ್ಲಿಯೂ ಅವನೇ ಇದ್ದು ದೈತ್ಯರಿಗೆ ಇಷ್ಟವಾದ ದ್ವೇಷವನ್ನು ದುಃಖದಿಂದ ಹೆಚ್ಚಿಸುತ್ತಾ ಇರುವನು. ಆದುದರಿಂದ ವೈಕುಂಠ, ನರಕ, ನಿತ್ಯನರಕಗಳೆಲ್ಲವೂ ಅವನ ಮನೆಗಳೇ ಆಗಿವೆ.

**ಕಾಲೇನ ಮೀಲಿತದೃಶಾಮವಮೃಶ್ಯನೃಣಾಂ**
**ಸ್ತೋಕಾಯುಷಾಂ ಸ್ವನಿಗಮೋಬತ ದೂರಪಾರಃ ।**
**ಆವಿರ್ಹಿತಸ್ತ್ವನುಯುಗಂ ಸಹಿ ಸತ್ಯವತ್ಯಾಂ**
**ವೇದದ್ರುಮಂ ವಿಟಪಶೋ ವಿಭಜಿಷ್ಯತಿಸ್ಮ** ॥ ೩೬ ॥

ಕಾಲೇನ = ಕಾಲಗತಿಯಿಂದ; ಮೀಲಿತದೃಶಾಂ = ಕ್ಷೀಣವಾದ ಜ್ಞಾನವುಳ್ಳ; ಸ್ತೋಕಾಯುಷಾಂ = ಅಲ್ಪಾಯುಷಿಗಳಾದ; ನೃಣಾಂ = ಜನರಿಗೆ; ಸ್ವನಿಗಮಃ = ತನ್ನ ಪರವಾದ ವೇದವು; ದೂರಪಾರಃ ಬತ = ಗ್ರಹಿಸಲಸಾಧ್ಯವೇ ಸರಿ ಎಂದು; ಅವಮೃಶ್ಯ = ಯೋಚಿಸಿ; ಅನುಯುಗಂ = ಯುಗ ಯುಗಗಳಲ್ಲಿ; ಆವಿರ್ಹಿತಃ ತು = ಅವತಾರ ಮಾಡಿದ; ಸಃ ಹಿ = ಆ ಭಗವಂತನೇ; ಸತ್ಯವತ್ಯಾಂ ಆವಿರ್ಹಿತಃ = ಸತ್ಯವತೀ ಪುತ್ರನೆಂದು ಅವತರಿಸಿ; ವೇದದ್ರುಮಂ = ವೇದವೆಂಬ ಮಹಾಕಲ್ಪವೃಕ್ಷವನ್ನು; ವಿಟಪಶಃ =

ಶಾಖೋಪಶಾಖೆಗಳಾಗಿ; ವಿಭಜಿಷ್ಯತಿ ಸ್ಮ= ವಿಭಾಗ ಮಾಡುತ್ತಾನೆ ಎಂಬುದು ಪ್ರಸಿದ್ಧವು.

ಇದುವರೆಗೆ ಹದಿನೇಳು ಸಲ ವೇದವ್ಯಾಸಾವತಾರವಾಗಿದೆ ಎಂದು ಹೇಳುತ್ತಾರೆ. ಮುಖ್ಯವಾಗಿ ಮೂರು, ಏಳು, ಹದಿನಾರು, ಇಪ್ಪತ್ತು ಮತ್ತು ಇಪ್ಪತ್ತೆಂಟನೇ ದ್ವಾಪರಯುಗಗಳಲ್ಲಿ ನಡೆದ ವ್ಯಾಸಾವತಾರಗಳನ್ನು ಕುರಿತು ಪುರಾಣಗಳು ಹೇಳುತ್ತವೆ. ಪ್ರತಿ ಮನ್ವಂತರದಲ್ಲಿಯೂ ಶ್ರೀಹರಿಯು ವ್ಯಾಸರೂಪಿಯಾಗಿ ಅವತರಿಸಿ ವೇದ ವಿಭಜನೆ ಮಾಡಿ ಮಂದಜನರಿಗೆ ಉಪಕಾರವೆಸಗುವನು. ಕೆಲವು ಸಲ ಮಹಾಋಷಿಗಳಂತರ್ಯಾಮಿಯಾಗಿ ವೇದವಿಭಾಗ ಮಾಡುವನೆಂದೂ, ಈ ಇಪ್ಪತ್ತೆಂಟನೇ ದ್ವಾಪರಯುಗದಲ್ಲಿ ಸ್ವಯಂ ಶ್ರೀಹರಿಯೇ ವೇದವ್ಯಾಸರೂಪಿಯಾಗಿ ಅವತರಿಸಿರುವನೆಂದೂ ಹೇಳುವರು. ಇದರಿಂದ 'ವ್ಯಾಸಃ ಕಶ್ಚನ ಋಷಿಃ' ಎಂದು ಹೇಳುವವರಿಗೆ ಅವಕಾಶವಿದ್ದರೂ, ಈಗ ಅವತರಿಸಿ ವೇದವಿಭಾಗ ಮಾಡಿ ಬ್ರಹ್ಮಸೂತ್ರ ಮಹಾಭಾರತ ಪುರಾಣಗಳನ್ನು ರಚಿಸಿರುವುದು ಸ್ವಯಂ ಶ್ರೀಹರಿಯೇ ಎಂದು ನಿಶ್ಚಿತವಾಗುವುದು.

**ದೇವದ್ವಿಷಾಂ ನಿಗಮವರ್ತ್ಮನಿವಿಷ್ಟಿತಾನಾಂ ಪೂರ್ಭಿರ್ಮಯೇನ**
**ವಿಹಿತಾಭಿರದೃಶ್ಯಮೂರ್ತಿಃ ।**
**ಲೋಕಾನ್ಘತಾಂ ಮತಿವಿಮೋಹಮತಿಪ್ರಲೋಭಂ ವೇಷಂ ವಿಧಾಯ**
**ಯದಭಾಷತ ಔಪಧರ್ಮ್ಯಂ ॥ ೩೭ ॥**

**ಯರ್ಹ್ಯಾಲಯೇಷ್ವಪಿ ಸತಾಂ ನ ಕಥಾಹರೇಃಸ್ಯುಃ ಪಾಷಂಡಿನೋ**
**ದ್ವಿಜಜನಾವೃಷಲಾನೃದೇವಾಃ ।**
**ಸ್ವಾಹಾ ಸ್ವಧಾವಷಡಿತಿಸ್ಮ ಗಿರೋ ನ ಯತ್ರ ಶಾಸ್ತಾಭವಿಷ್ಯತಿ**
**ಕಲೇರ್ಭಗವಾನ್ಯುಗಾಂತೇ ॥ ೩೮ ॥**

ದೇವದ್ವಿಷಾಂ= ದೇವತೆಗಳ ಶತ್ರುಗಳಾದ; ನಿಗಮವರ್ತ್ಮನಿ ವಿಷ್ಟಿತಾನಾಂ= ವೇದವಿಹಿತಮಾರ್ಗದಲ್ಲಿ ನಿಷ್ಠೆಯನ್ನು ಹೊಂದಿದ್ದ; ಮಯೇನ ವಿಹಿತಾಭಿಃ ಪೂರ್ಭಿಃ= ಮಯಾಸುರನಿಂದ ತಮಗಾಗಿ ನಿರ್ಮಿತಗಳಾದ ಪಟ್ಟಣಗಳ ಸಹಾಯದಿಂದ; ಲೋಕಾನ್ ಘ್ನತಾಂ= ಲೋಕಹಂತಕರಾಗಿದ್ದ ತ್ರಿಪುರಾಸುರರಿಗೆ; ಅದೃಶ್ಯಮೂರ್ತಿಃ= ಕಾಣಬಾರದವನಾಗಿ; ವೇಷಂ ವಿಧಾಯ= ಮುದ್ದುಬಾಲಕನ ರೀತಿಯಲ್ಲಿ ಕಾಣಿಸಿಕೊಂಡು; ಮತಿವಿಮೋಹಂ= ಬುದ್ಧಿಗೆ ಭ್ರಮೆಯನ್ನುಂಟುಮಾಡುವ; ಅತಿಪ್ರಲೋಭಂ= ಬಹಳ ವಂಚನೆಯ; ಯತ್ ಔಪಧರ್ಮ್ಯಂ= ಯಾವುದು

ಮೇಲ್ನೋಟಕ್ಕೆ ಧರ್ಮವೆಂದು ಕಾಣುವುದೋ ಅಂತಹ ಧರ್ಮವನ್ನು; ಅಭಾಷತ = ಹೇಳಿದನು.

ಇದು ಬುದ್ಧಾವತಾರದ ನಿರೂಪಣೆ. ಹಿಂದೆ ತ್ರಿಪುರಾಸುರರ ಮಹಾಪತಿವ್ರತೆಯರಾದ ಹೆಂಡತಿಯರ ಮುಂದೆ ಸುಂದರಾಕಾರದಿಂದ ಬತ್ತಲೆ ನಿಂತು, ಅವರ ಪಾತಿವ್ರತ್ಯವು ಚಲಿಸುವಂತೆ ಮಾಡಿ, ತ್ರಿಪುರಾಸುರರ ಬಲವನ್ನು ಕುಗ್ಗಿಸಿ, ಶಿವನಿಂದ ಆ ಅಸುರರನ್ನು ಕೊಲ್ಲಿಸಿದ ಅವನೇ, ಬ್ರಾಹ್ಮಣರಾಗಿ ಹುಟ್ಟಿ ವೇದಮಾರ್ಗಾನುವರ್ತಿಗಳಾಗಿದ್ದ ಅದೇ ಅಸುರರಿಗೆ ಮೋಹವನ್ನೊಡ್ಡಿ ವಂಚಿಸುವುದಕ್ಕಾಗಿ, ಮತ್ತೊಮ್ಮೆ ಮುದ್ದು ಬಾಲಕನಂತೆ ಕಾಣಿಸಿಕೊಂಡು, ಪಾಷಂಡಿಗಳಿಗೆ ರುಚಿಸುವಂತೆ ಧರ್ಮಬೋಧೆಯನ್ನು ಮಾಡಿದನು. ಮುಂದೆ ಶಾಕ್ಯಮುನಿಯೆನಿಸಿದ ಬುದ್ಧನಾಗಿ ಅದೇ ಧರ್ಮವನ್ನೇ ಲೋಕದಲ್ಲಿ ಹರಡಿರುವನು. ಭಗವಂತನಾದವನು ಹೀಗೆ ವಂಚಿಸಬಹುದೇ ಎಂದು ಕೇಳುವುದು ಸಹಜ. ಆದರೆ, ದೈತ್ಯರ ಸ್ವರೂಪ ಸ್ವಭಾವವೇನೆಂಬುದನ್ನು ತಿಳಿದರೆ ಆ ಪ್ರಶ್ನೆಗೆ ಅವಕಾಶವಿರುವುದಿಲ್ಲ. ಅವರು ವೇದಮಾರ್ಗವನ್ನನುಸರಿಸುವುದು ಭಗವತ್ಪರವಾದ ಜ್ಞಾನ ಭಕ್ತಿ ವೈರಾಗ್ಯಗಳನ್ನು ಸಂಪಾದಿಸುವುದಕ್ಕಲ್ಲ; ಅದು, ವೈದಿಕಮರ್ಮಗಳನ್ನರಿತು ಬಲಿಷ್ಠರಾಗಿ ಲೋಕಕಂಟಕರಾಗುವುದಕ್ಕಾಗಿ ಮತ್ತು ಸ್ವಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ; ಇಂದ್ರಜಿತುವು ಯಜ್ಞವನ್ನಾಚರಿಸಿದಂತೆ! ದೈವಭಕ್ತರಾದ ದೇವತೆಗಳ ಶತ್ರುಗಳನ್ನು ವಂಚಿಸುವುದು, ನಿಗ್ರಹಿಸುವುದು ಪರಮಧರ್ಮವೇ ಸರಿ. ಆದರಿಂದ ದೈತ್ಯರ ಸ್ವರೂಪಭೂತವಾದ ಭಗವದ್ವೇಷವು ಬಲಿಯುವುದು; ಅದು ಅವರಿಗೆ ಇಷ್ಟವಾದುದು. ಅಂತಹ ದುಷ್ಟಸ್ವಭಾವವನ್ನೇ ಏಕೆ ಒಳ್ಳೆಯದಾಗುವಂತೆ ಸರ್ವಸಮರ್ಥನಾದ ಭಗವಂತ ಮಾಡಬಾರದು ಎಂದು ಕೇಳುವುದು ದಯಾಮಯರಾದ ಸಜ್ಜನರೇ ಹೊರತು ನಿಷ್ಕರುಣಿಗಳಾದ ದೈತ್ಯಸ್ವಭಾವದವರಲ್ಲ. ಅವರಿಗೆ ಇಷ್ಟವಲ್ಲದುದನ್ನು ಭಗವಂತ ಮಾಡುವುದು ಅವರಿಗೆ ಹಿಂಸೆಯೇ ಹೊರತು ಹಿತವಲ್ಲ. ಆದುದರಿಂದ ನ್ಯಾಯಮೂರ್ತಿಯಾದ ಭಗವಂತನು ದೈತ್ಯರ ಸ್ವರೂಪೇಚ್ಛೆಯನ್ನು ಕೆಡಿಸುವುದಿಲ್ಲ.

ಯರ್ಹಿ = ಯಾವ ಕಾರಣದಿಂದ; ಸತಾಂ ಆಲಯೇಷು ಅಪಿ = ಸಜ್ಜನರ ಮನೆಗಳಲ್ಲಿಯೂ ಕೂಡ; ಹರೇಃ ಕಥಾಃ = ಶ್ರೀಹರಿಯ ಚರಿತ್ರೆಯ ವಿಚಾರಗಳು; ನ ಸ್ಯುಃ = ನಡೆಯದೇ ಹೋಗುವವೋ; ದ್ವಿಜಜನಾಃ = ಬ್ರಾಹ್ಮಣರು; ಪಾಷಂಡಿನಃ ಸ್ಯುಃ = ಶಾಸ್ತ್ರಗಳ ಅಪಲಾಪ ಮಾಡುವವರಾಗುವರೋ; ನೃದೇವಾಃ = ರಾಜಕೀಯ ಯಜಮಾನರು; ವೃಷಲಾಃ ಸ್ಯುಃ = ಧರ್ಮಹಂತಕರಾಗುವರೋ; ಯತ್ರ = ಯಾವ ಕಾಲದಲ್ಲಿ; ಸ್ವಾಹಾ ಸ್ವಧಾವಷಟ್ ಇತಿ ಗಿರಃ = ಸ್ವಾಹಾ, ಸ್ವಧಾ, ವಷಟ್ ಎಂಬ ಮಂತ್ರೋಚ್ಚಾರಗಳು; ನ = ಇಲ್ಲದೇ ಹೋಗುವವೋ; ಕಲೇಃ ಯುಗಾಂತೇ = ಅಂತಹ

ಕಲಿಯುಗದ ಕಡೆಯ ಭಾಗದಲ್ಲಿ; ಭಗವಾನ್= ಭಗವಂತನು; ಶಾಸ್ತಾ ಭವಿಷ್ಯತಿ = ಕಲ್ಕಿ ಅವತಾರವನ್ನು ಮಾಡಿ ಶಿಕ್ಷೆಯನ್ನು ವಿಧಿಸುವನು.

ಯುಗಪ್ರವರ್ತಕನಾಗಿ, ಭಗವಂತನು ಇಂತಹ ದುಷ್ಟಕಲಿಗಾಲಕ್ಕೆ ಏಕೆ ಅವಕಾಶವನ್ನುಂಟುಮಾಡಿರುವನು ಎಂದು ಕೇಳಬಹುದು. ಇದು ಕರ್ಮಮಾರ್ಗದ ಮರ್ಮ. ಇದರಲ್ಲಿಯೇ ಜೀವರ ಸಾಧನೆಯ ಸಾರ್ಥಕತೆ ಇರುವುದು. ಇಂತಹ ಕೆಟ್ಟಯುಗದಲ್ಲಿ ಸಜ್ಜನರ ಪಾಪಗಳು ಬೇಗ ಕಳೆದು ಹೋಗುವವು; ಸುಲಭರೀತಿಯಿಂದ ಅವರ ಭಕ್ತಿಭಾಗ್ಯ ಅಭಿವೃದ್ಧಿ ಹೊಂದುವುದು. "ಸಂಕಟ ಬಂದಾಗ ವೆಂಕಟ ರಮಣ" ಅಲ್ಲವೆ! ಅದೇ ರೀತಿಯಾಗಿ ದೈತ್ಯಸ್ವಭಾವದವರು ಕಲಿಯುಗದಲ್ಲಿ ನಿರಾತಂಕವಾಗಿ ಹಾರಾಡಿ, ಮಾಡಬಾರದುದನ್ನೆಲ್ಲಾ ಮಾಡಿ, ಹರಿ–ಹರಿಭಕ್ತರಲ್ಲಿ ದ್ವೇಷವನ್ನು ಚೆನ್ನಾಗಿ ಅಭಿವೃದ್ಧಿಪಡಿಸಿಕೊಂಡು ತಮಗೆ ಸಿದ್ಧವಾದ ಗತಿಯನ್ನು ಹೊಂದುತ್ತಾರೆ.

**ಸರ್ಗೇತು ಯೋಽಹಮೃಷಯೋ ನವಯೇಽಪ್ರಜೇಶಾಃ**
**ಸ್ಥಾನೇಽಥಧರ್ಮಮಖಮನ್ವಮರಾವನೀಶಾಃ ।**
**ಅಂತೇತ್ವಧರ್ಮ ಹರಮನ್ಯುವಶಾಃ ಸುರಾದ್ಯಾ ಮಾಯಾ**
**ವಿಭೂತಯ ಇಮಾಃ ಪುರುಶಕ್ತಿ ಭಾಜಃ** ॥ ೩೯ ॥

ಯಃ ಅಹಂ = ಯಾವ ನಾನು (ಚತುರ್ಮುಖನು); ಋಷಯಃ = ಕರ್ದಮಾದಿ ಋಷಿಗಳು; ಯೇ ನವ ಪ್ರಜೇಶಾಃ = ಮರೀಚಿ ಮೊದಲಾದ ನವ ಪ್ರಜಾಪತಿಗಳು; ಸರ್ಗೇ ತು = ಸೃಷ್ಟಿಕಾಲದಲ್ಲಿಯೂ; ಅಥ= ಆಮೇಲೆ; ಸ್ಥಾನೇ ತು = ಜಗತ್ಪಾಲನೆಯ ಕಾಲದಲ್ಲಿಯಾದರೋ; ಧರ್ಮ ಮುಖ= ಧರ್ಮನೇ ಮೊದಲಾದ; ಮನು, ಅಮರಾವನೀಶಾಃ = ಹದಿನಾಲ್ಕು ಮನುಗಳೂ, ಪ್ರಿಯವ್ರತಾದಿ ಚಕ್ರವರ್ತಿಗಳೂ; ಅಂತೇ ತು = ಪ್ರಳಯಕಾಲದಲ್ಲಿಯಾದರೋ; ಅಧರ್ಮಃ= ಅಧರ್ಮನೂ; ಹರಃ= ರುದ್ರನೂ; ಮನ್ಯುವಶಾಃ = ಕೋಪೋದ್ದೀಪನಕಾರಕರಾದ; ಸುರಾದ್ಯಾಃ = ದೇವತೆಗಳೇ ಮೊದಲಾದವರೂ; ಮಾಯಾ ವಿಭೂತಯಃ= ಪುರುಷೋತ್ತಮನ ಇಚ್ಛಾಶಕ್ತಿಯ ಪ್ರಭಾವ ಉಳ್ಳವರಾಗಿ; ಪುರುಶಕ್ತಿಭಾಜಃ = ಹೆಚ್ಚಿನ ಸಾಮರ್ಥ್ಯ ಉಳ್ಳವರಾಗಿರುತ್ತೇವೆ.

ಹಿಂದೆ ಹೇಳಿದುದು ಭಗವಂತನ ಸ್ವಯಂ ಅವತಾರಾಂಶಗಳು. ಈಗ ಹೇಳಿದುದು ಅವನ ಇಚ್ಛಾರೂಪವಾದ ವಿಶೇಷಾಂಶಗಳು, ಎಂದರೆ, ವಿಭೂತಿರೂಪಗಳು. ಜೀವೇಶ್ವರ ಭೇದತತ್ವವನ್ನು ಇಲ್ಲಿ ಸ್ಪಷ್ಟಗೊಳಿಸಿದ್ದಾರೆ. ಕೃಷ್ಣಾದ್ಯವತಾರಗಳಲ್ಲಿ ಸ್ವಯಂ ವ್ಯಕ್ತನಾಗುತ್ತಾನೆ. ಬ್ರಹ್ಮಾದಿಗಳಲ್ಲಿ ಅವರವರ ಯೋಗ್ಯತಾನುಸಾರ ತನ್ನ ಸಾಮರ್ಥ್ಯವನ್ನು

ಪ್ರಕಟಿಸುತ್ತಾನೆ. ಅವರು ಅಸ್ವತಂತ್ರರಾದುದರಿಂದ, ಅವರಲ್ಲಿ ಅವರಂತೆ ವ್ಯಾಪಾರ ಮಾಡುವವನು ಶ್ರೀಹರಿಯೇ; ಆದರೆ, ಹಾಗೆ ಮಾಡುವುದು 'ವಿಭೂತಿರೂಪ'.

**ವಿಷ್ಣೋರ್ನುವೀರ್ಯಗಣನಾಂ ಕತಮೋಽರ್ಹತೀಹ**
**ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇರಜಾಂಸಿ ।**
**ಚಸ್ಕಂಭಯಃ ಸ್ವರಭಸಾಸ್ಖಲಿತಂ ತ್ರಿಪೃಷ್ಠಂ ಯಸ್ಮಾತ್**
**ನಿಶಾಮ್ಯ ಸದನಾದುರುಕಂಪಮಾನಂ** ॥ ೪೦ ॥

ಯಃ = ಯಾವ ನಾನು; ಪಾರ್ಥಿವಾನಿ ರಜಾಂಸಿ = ಪೃಥ್ವಿಯ ಕಣಕಣದ ಅಣುಗಳನ್ನೂ; ವಿಮಮೇ = ಎಣಿಸಿದೆನೋ; ಕವಿಃ ಅಪಿ = ಹೆಚ್ಚು ತಿಳುವಳಿಕೆಯುಳ್ಳವನಾದರೂ; ಸದನಾತ್ = ವಿನಾಶಕ್ಕೆ ಸತ್ಯಲೋಕವು ಒಳಗಾಗುತ್ತಿದೆಯೆಂದು ಶಂಕಿಸಿ; ಉರುಕಂಪಮಾನಂ ಮಾಂ = ಅಂಹ ನಾನು ಭಯದಿಂದ ನಡುಗುತ್ತಿರುವೆನೆಂಬುದು; ಯತ್ = ಯಾವ ತ್ರಿವಿಕ್ರಮಾವತಾರದ ಪರಿಣಾಮವೋ ಅದನ್ನು; ನಿಶಾಮ್ಯ = ತಿಳಿದು; ಸ್ವರಭಸಾ = ತನ್ನ ಹೆಜ್ಜೆಯ ವೇಗದಿಂದ; ಚಲಿತಂ = ಅಲುಗಾಡಿದ; ತ್ರಿಪೃಷ್ಠಂ = ಸತ್ಯಲೋಕವನ್ನು; ಯಃ = ಯಾವ ಮಹಾಪುರುಷನು; ಚಸ್ಕಂಭ = ತಡೆದು ನಿಲ್ಲಿಸಿದನೋ; ವಿಷ್ಣೋಃ = ಅಂತಹ ಮಹಾವಿಷ್ಣುವಿನ; ವೀರ್ಯಗಣನಾಂ = ಸಾಮರ್ಥ್ಯದ ಮಿತಿಯನ್ನು ತಿಳಿಯಲು; ಕತಮಃ ಯಃ ಅರ್ಹತಿ ನು = ಬೇರೆ ಯಾವನು ತಾನೇ ಸಮರ್ಥನಾದಾನು ?

ಆದಿಕವಿ ಎನಿಸಿದ ಬ್ರಹ್ಮದೇವರು ಪೃಥ್ವಿಯಲ್ಲಿನ ಅಣುಗಳನ್ನೆಲ್ಲಾ ಎಣಿಸಬಲ್ಲರು. ಅವರಿಗುಂಟಾದ ಭಯವನ್ನು ಪರಿಹರಿಸಿದ ಪರಮಪುರುಷನು ಅನಂತಗುಣಪೂರ್ಣನಾದುದರಿಂದ ಅವನ ಮಹಿಮೆಯನ್ನು ಪೂರ್ಣವಾಗಿ ಆ ಬ್ರಹ್ಮದೇವರೂ ತಿಳಿಯಲಾರರೆಂದಮೇಲೆ ಇನ್ನು ಇತರರ ಪಾಡೇನು !

**ನಾಂತಂ ವಿದಾಮ್ಯಹಮಮೀ ಮುನಯಃ ಪ್ರಜೇಶಾ**
**ಮಾಯಾ ಬಲಸ್ಯ ಪುರುಷಸ್ಯ ಕುತೋಽಪರೇಯೇ ।**
**ಗಾಯನ್ಗುಣಾನ್ದಶ ಶತಾನನ ಆದಿದೇವಃ**
**ಶೇಷೋಽಧುನಾಪಿ ಸಮವಸ್ಯತಿ ನಾಸ್ಯಪಾರಂ** ॥ ೪೧ ॥

ಮಾಯಾಬಲಸ್ಯ ಪುರುಷಸ್ಯ = ನಿಗೂಢವಾದ ಸಾಮರ್ಥ್ಯವುಳ್ಳ ಪರಮಪುರುಷನ; ಅಂತಂ = ಮಿತಿಯನ್ನು; ಅಹಂ = ನಾನು; ನ ವಿದಾಮಿ = ಪೂರ್ಣವಾಗಿ ತಿಳಿಯಲಾರದವನಾಗಿದ್ದೇನೆ; ಅಪರೇ ಯೇ = ಇನ್ನುಳಿದವರಾದ; ಅಮೀ ಮುನಯಃ = ಈ ಋಷಿಗಳೂ; ಪ್ರಜೇಶಾಃ = ಮನುಗಳು ಮೊದಲಾದ

ಚಕ್ರವರ್ತಿಗಳೂ; ಕುತಃ = ಹೇಗೆ ತಿಳಿಯಬಲ್ಲರು ?ದಶಶತಾನನಃ = ಸಹಸ್ರಹೆಡೆಗಳುಳ್ಳ; ಆದಿದೇವಃ ಶೇಷಃ = ದೇವತೆಗಳಲ್ಲಿ. ಮೊದಲಿಗನಾದ ಶೇಷದೇವನು; ಅಸ್ಯ = ಈ ಪುರುಷೋತ್ತಮನ; ಗುಣಾನ್ = ಮಹಿಮೆಗಳನ್ನು; ಗಾಯನ್= ಎರಡು ಸಹಸ್ರ ನಾಲಗೆಗಳಿಂದ ಕೀರ್ತಿಸುತ್ತಾ; ಅಧುನಾಪಿ = ಇನ್ನೂಕೂಡ; ಪಾರಂ = ಅಂತ್ಯವನ್ನು; ನ ಸಮವಸ್ಯತಿ = ಮುಟ್ಟಲು ಸಮರ್ಥನಾಗಿಲ್ಲ.

ಪುರುಷೋತ್ತಮನ ಅಪಾರ ಮಹಿಮೆಯೂ, ಬ್ರಹ್ಮದೇವರ ಜೀವೋತ್ತಮತ್ವವೂ, ನಾರದರ ಪ್ರಶ್ನೆಗೆ ಉತ್ತರವೂ ಇಲ್ಲಿ ಸಂಗ್ರಹೀತವಾಗಿದೆ.

**ಏಷಾಂ ಸ ಏವ ಭಗವಾನ್ದಯಯೇದನಂತಃ**
**ಸರ್ವಾತ್ಮನಾಶ್ರಿತ ಪದೋಯದಿನಿರ್ವ್ಯಲೀಕಂ ।**
**ತೇವೈ ವಿದಂತ್ಯತಿತರಂತಿಚದೇವಮಾಯಾಂ ನೈಷಾಂ**
**ಮಮಾಹಮಿತಿ ಧೀಃಶ್ವಸೃಗಾಲ ಭಕ್ಷ್ಯೇ** ॥ ೪೨ ॥

ಏಷಾಂ = ಸಾಧನೆ ಬಲದಿಂದ ಯಾರಿಗೆ; ಶ್ವಸೃಗಾಲ ಭಕ್ಷ್ಯೇ = ನಾಯಿನರಿಗಳು ಕಿತ್ತುತಿನ್ನುವಂತಹ ದೇಹದಲ್ಲಿ; ಮಮ ಅಹಂ ಇತಿಧೀಃ ನ = ನನ್ನದು, ನಾನು ಎಂಬ ಬುದ್ಧಿ ಇರುವುದಿಲ್ಲವೋ; ನಿರ್ವ್ಯಲೀಕಂ =ವ್ಯಾಜಾಂತರಗಳಿಲ್ಲದೆ; ಸರ್ವಾತ್ಮನಾ ಆಶ್ರಿತಃ ಪದಃ ಯದಿ = ಸರ್ವಸಮರ್ಪಣ ಭಾವದಿಂದ ಅವರು ಭಗವಂತನ ಪಾದಗಳನ್ನು ಆಶ್ರಯಿಸಿದರೆ; ಯೇಷಾಂ = ಅಂತಹ ಯಾರಲ್ಲಿ; ಅನಂತಃ ಭಗವಾನ್= ಅನಂತನಾದ ಭಗವಂತನು; ಸ ಏವ ದಯಯೇತ್= ತಾನಾಗಿ ದಯಾದೃಷ್ಟಿಯನ್ನು ಬೀರುವನೋ; ತೇವೈ = ಅವರೇನೇ; ದೇವಮಾಯಾಂ = ತಮ್ಮನ್ನು ದೈವೇಚ್ಛೆಯಿಂದ ಮುಸುಕಿರುವ ಅಜ್ಞಾನದ ಪರದೆಯನ್ನು; ಅತಿತರಂತಿ = ದಾಟಬಲ್ಲರು.

ಅನಾದಿ ಅಜ್ಞಾನ ನಿವಾರಣೆಗಾಗಿ, ಪ್ರಪಂಚದಲ್ಲಿ ಕೊಟ್ಟ ದೇಹಗಳ ಮೂಲಕ, ಮುಸುಕಿರುವ ಭಗವದಿಚ್ಛಾರೂಪವಾದ ಅಜ್ಞಾನದ ಪರದೆಯನ್ನು ನೀಗಿಕೊಳ್ಳಲು ಜೀವರ ಪ್ರಯತ್ನವು ಆವಶ್ಯಕ. ಜ್ಞಾನವನ್ನು ಸಂಪಾದಿಸಿ ಅವರು ದೇಹಾಭಿಮಾನತ್ಯಾಗ ಮಾಡಬೇಕು. ಆದರೆ ಅಷ್ಟರಿಂದಲೇ ಅಜ್ಞಾನ ಬಂಧ ನಿವೃತ್ತಿಯಾಗುವುದಿಲ್ಲ. ಭಗವಂತನ ಪ್ರಸನ್ನತೆಯಿಂದಲೇ ಅದು ಸಾಧ್ಯ. ಜೀವರಲ್ಲಿ ನಿಂತು ಸಾಧನೆಯನ್ನು ಮಾಡಿಸಿ, ನಂತರ ತಾನು ಅವರಲ್ಲಿ ಪ್ರಸನ್ನಾಗಿ ಭಗವಂತನು ಮುಕ್ತಿಪ್ರದಾಯಕನಾಗುವನು.

ಹೀಗಿರುವುದರಿಂದ, ಜ್ಞಾನೋದಯವಾದ ಕೊಡಲೇ ಮಾಯಾನಿವೃತ್ತಿಯೆಂಬ ವಾದವು ನಿರಾಕೃತವಾಯಿತು.

ವೇದಾಹಮಂಗ ಪರಮಸ್ಯಹಿ ಯೋಗಮಾಯಾಂ
ಯೂಯಂ ಭವಶ್ಚಭಗವಾನಥ ದೈತ್ಯವರ್ಯಃ ।
ಪತ್ನೀಮನೋಃ ಸಚ ಮನುಸ್ತದಪತ್ಯಭೂತಾಃ
ಪ್ರಚೀನ ಬರ್ಹಿಋಭುರಂಗ ಉತಧ್ರುವಶ್ಚ ॥ ೪೩ ॥

ಇಕ್ಷ್ವಾಕುರ್ಐಲ ಮುಚುಕುಂದ
ವಿದೇಹಗಾಧಿರಘ್ವಂಬರೀಷಸಗರಾಗಯ ನಾಹುಷಾದ್ಯಾಃ ।
ಮಾಂಧಾತ್ರಲರ್ಕ ಶತಧನ್ವನ ರಂತಿದೇವ
ದೇವವ್ರತಾ ಬಲಿ ರಮೂರ್ತರಯೋದಿಲೀಪಃ ॥ ೪೪ ॥

ಸೌಭರ್ಯುದಂಕ ಶಿಬಿ ದೇವಲ ಪಿಪ್ಪಲಾದಾಃ
ಸಾರಸ್ವತೋದ್ಧವಪರಾಶರ ಭೂರಿಷೇಣಾಃ ।
ಯೋನ್ಯೇ ವಿಭೀಷಣ ಹನೂಮದುಪೇಂದ್ರ ದತ್ತಾ
ಪಾರ್ಥಾರ್ಷ್ಟಿಷೇಣ ವಿದುರಶ್ರುತದೇವ ಮುಖ್ಯಾಃ ॥ ೪೫ ॥

ತೇವೈವಿದಂತ್ಯತಿತರಂತಿಚ ದೇವ ಮಾಯಾಂ
ಸ್ತ್ರೀಶೂದ್ರಹೂಣ ಶಬಲಾ ಅಪಿಪಾಪ ಜೀವಾಃ ।
ಯದ್ಯದ್ಭುತಕ್ರಮ ಪರಾಯಣ ಶೀಲ ಶಿಕ್ಷಾಸ್ತಿರ್ಯಗ್ಜನಾ
ಅಪಿಕಿಮು ಶ್ರುತಧಾರಣಾಯೇ ॥ ೪೬ ॥

ಅಂಗ = ಪ್ರಿಯನಾರದಾ; ಪರಮಸ್ಯ = ಪುರುಷೋತ್ತಮನ; ಯೋಗಮಾಯಾಂ = ನಿಗೂಢಮಹಿಮೆಯನ್ನು; ಹಿ = ನಿಜವಾಗಿ; ಅಹಂ = ನಾನು (ಬ್ರಹ್ಮಪದದವರು); ತಿಳಿದಿದ್ದೇನೆ; ಯೂಯಂ = ನೀನು ಮತ್ತು ಸನಕಾದಿಗಳು; ಭಗವಾನ್ ಭವಃ = ದೇವೋತ್ತಮನಾದ ರುದ್ರನು; ವೇದ = ಬಲ್ಲವರಾಗಿದ್ದೀರಿ; ಅಥ = ಇನ್ನೂ; ದೈತ್ಯವರ್ಯಃ = ಪರಿಶುದ್ಧಭಕ್ತನಾದ ಪ್ರಹ್ಲಾದ ; ಅಲ್ಲದೆ ಮನು ಮತ್ತು ಮನುಪತ್ನಿ, ಅವರ ಮಕ್ಕಳೆನಿಸುವ ಪ್ರಾಚೀನ ಬರ್ಹಿಗಳು, ಋಭು, ವೇನನ ತಂದೆಯಾದ ಅಂಗ, ಹಾಗೂ ಧ್ರುವ, ಇಕ್ಷ್ವಾಕು, ಐಲ, ಮುಚುಕುಂದ, ಜನಕ, ವಿದೇಹ ಗಾಧಿ, ಅಂಬರೀಷ, ಸಗರ, ಗಯ, ಯಯಾತಿ ನಾಹುಷ, ಮಾಂಧಾತಾ, ಅಲರ್ಕ, ಶತಧನ್ವಾ, ರಂತಿದೇವ, ದೇವವ್ರತ, ಬಲಿ, ಅಮೂರ್ತ, ರಯ, ದಿಲೀಪ, ಸೌಭರಿ, ಉದಂಕ, ಶಿಬಿ, ದೇವಲ, ಪಿಪ್ಪಲಾದ, ಸಾರಸ್ವತ, ಉದ್ಧವ, ಪರಾಶರ, ಭೂರಿಷೇಣ, ವಿಭೀಷಣ,

ಹನುಮಂತ, ಉಪೇಂದ್ರ, ದತ್ತ, ಅರ್ಜುನ, ಆರ್ಷ್ಟಿಷೇಣ, ವಿದುರ, ಶ್ರುತದೇವ, ತೇಷ್ವೆ = ಈ ಮಹಾನುಭಾವರುಗಳೇ; ದೇವಮಾಯಾಂ = ಭಗವಂತನ ಅದ್ಭುತ ಸಾಮರ್ಥ್ಯವನ್ನು; ವಿದಂತಿ = ಅವರವರ ಯೋಗ್ಯತಾನುಸಾರ, ಸರಿಯಾಗಿ ತಿಳಿಯುತ್ತಾರೆ; ಅತಿತರಂತಿ ಚ = ಮಾಯಾಬಂಧನದಿಂದ ಬಿಡುಗಡೆಯನ್ನು ಪಡೆಯುತ್ತಾರೆ; ಅದ್ಭುತಕ್ರಮ ಪರಾಯಣ ಶೀಲ ಶಿಕ್ಷಾಃ ಯದಿ = ಪರಮಾದ್ಭುತ ಚರ್ಯೆಗಳುಳ್ಳ ವಿಷ್ಣುವಿನಲ್ಲಿಯೇ ಮನಸ್ಸಿಟ್ಟವರಾಗಿ, ವೈಷ್ಣವಮಾರ್ಗಾನುವರ್ತಿಗಳಾದರೆ; ಪಾಪಜೀವಾಃ = ಪಾಪಯೋನಿಗಳಲ್ಲಿ ಜನ್ಮ ಹೊಂದಿದ; ಸ್ತ್ರೀ, ಶೂದ್ರ, ಹೂಣ, ಶಬರಾ, ಅಪಿ = ಇವರೂ ಕೂಡ; ವಿದಂತಿ ಅತಿತರಂತಿ = ದೇವಮಾಯೆಯ ಮಹಿಮೆಯನ್ನರಿತು ಸಂಸಾರಬಂಧನದಿಂದ ಬಿಡುಗಡೆ ಹೊಂದುತ್ತಾರೆ; ತಿರ್ಯಕ್ ಜನಾಃ ಅಪಿ = ವೃಂದಾವನದಂತಹ ವೆಂಕಟಾದ್ರಿಯಂತಹ ಪ್ರದೇಶಗಳಲ್ಲಿನ ಪ್ರಾಣಿಜೀವಿಗಳೂ, ವೃಕ್ಷ ಜೀವಿಗಳೂ ಕೂಡ ಜ್ಞಾನಿಗಳಾಗಿ ಮುಕ್ತರಾಗುತ್ತಾರೆ; ಯೇ ಶ್ರುತಧಾರಣಾಃ ಕಿಮು = ಇನ್ನು ಶಾಸ್ತ್ರ ಶ್ರವಣ, ಶಾಸ್ತ್ರಾರ್ಥಮನನ, ಹೃದಯದಲ್ಲಿ ಭಗವನ್ಮೂರ್ತಿಧಾರಣ ಮೊದಲಾದ ಸಾಧನವುಳ್ಳವರು ವಿಶೇಷ ಮಹಿಮಾ ಜ್ಞಾನ ಉಳ್ಳವರಾಗಿ ಪಾರಾಗುವರೆಂದು ಹೇಳಬೇಕಾದುದೇನಿದೆ ?

ಇಲ್ಲಿ ಹಿರಿಯ ದೇವತಾಗಣಗಳವರನ್ನೂ, ದೇವರ್ಷಿಮಹರ್ಷಿಗಳನ್ನೂ, ವಿಶೇಷವಾಗಿ ಕರ್ಮಜ ದೇವತೆಗಳನ್ನೂ ಕುರಿತು ಪ್ರಶಂಸೆ ಮಾಡಿದ್ದಾರೆ. ಇದು ಚತುಃಶ್ಲೋಕೀ ಭಾಗವತದ ವ್ಯಾಖ್ಯಾನ ಪ್ರಾಯವಾದುದು. ಆ ಮಹನೀಯರ ಹೆಸರುಗಳನ್ನು ನೆನೆಸುವುದೇ ಪುಣ್ಯಪ್ರದವಾದುದು. ಶ್ರೀಮದ್ಭಾಗವತದಲ್ಲಿ ಅವರ ಚರಿತ್ರೆಗಳು ಮುಂದೆ ವಿಸ್ತಾರವಾಗಿ ನಿರೂಪಿಸಲ್ಪಡುತ್ತವೆ. ಈ ಗುಂಪಿನಲ್ಲಿ ನಡುವೆ ಹನುಮಂತನ ಹೆಸರನ್ನೂ ಉಪೇಂದ್ರ, ದತ್ತ ಎಂಬ ಭಗವದವತಾರಗಳ ಹೆಸರುಗಳನ್ನೂ ಸೇರಿಸಿರುವುದು ಅಜ್ಞಜನರ ಮೋಹನಾರ್ಥವಾಗಿ. ಭಗವದ್ಭಕ್ತರ ನಾಮಸ್ಮರಣೆಯಿಂದ ಪುನೀತವಾದ ಅವರ ಮನಸ್ಸು, ತಾರತಮ್ಯ ಜ್ಞಾನವಿಲ್ಲದೆ ಹನುಮಂತನನ್ನೂ ಉಪೇಂದ್ರ ದತ್ತರನ್ನೂ ಸಾಮಾನ್ಯರೆಂದು ಭಾವಿಸಿ ಮಲಿನವಾಗಿ ಹೋಗುವುದು. ಅದು ಅವರ ಪ್ರಾಪ್ತಿ

**ಶಶ್ವತ್ಪ್ರಶಾಂತಮಭಯಂ ಪ್ರತಿಬೋಧಮಾತ್ರಂ**
**ಶುದ್ಧಂ ಸಮಂ ಸದಸತಃ ಪರಮಾತ್ಮತತ್ತ್ವಂ ।**
**ಶಬ್ದೋನಯತ್ರ ಪುರುಕಾರಕವಾನ್**
**ಕ್ರಿಯಾರ್ಥೋಣಮಾಯಾ ಪರೈತ್ಯಭಿಮುಖೇಚ ವಿಲಜ್ಜಮಾನಾ ॥ ೪೭ ॥**

**ತದ್ವೈಪದಂ ಭಗವತಃ ಪರಮಸ್ಯಪುಂಸೋ**
**ಬ್ರಹ್ಮೇತಿ ಯದ್ವಿದು ರಜಸ್ರಸುಖಂ ವಿಶೋಕಂ ।**
**ಸಮ್ಯಜ್ನಿಶಾಮ್ಯಯತಯೋ ಯಮಲೋಕಹೇತುಂಜಹ್ಯುಃ**
**ಸುಧಾಮಿವನಿಪಾನ ಖನಿತ್ರಮಿಂದ್ರಃ ॥ ೪೮ ॥**

ಶಶ್ವತ್= ಏಕಪ್ರಕಾರವಾಗಿ; ಪ್ರಶಾಂತಂ = ಸುಖೈಕರೂಪವಾದ; ಅಭಯಂ = ಸಮರಹಿತವಾದುದರಿಂದ ನಿರ್ಭಯವಾದ; ಪ್ರತಿಬೋಧಮಾತ್ರಂ = ಜಡಸಂಬಂಧಲೇಶವೂ ಇಲ್ಲದೆ ಕೇವಲ ಜ್ಞಾನಸ್ವರೂಪವಾದ; ಶುದ್ಧಂ = ದೋಷರಹಿತವಾದ; ಸಮಂ = ಸರ್ವತ್ರ ವೈಷಮ್ಯರಹಿತವಾಗಿ ತತ್ತದ್ಯೋಗ್ಯತಾನುಸಾರವಾಗಿರುವ; ಸದಸತಃ ಪರಂ = ಇತರ ಅನಿತ್ಯನಿತ್ಯವಸ್ತುಗಳಿಂದ ಅನ್ಯವೂ ಉತ್ಕೃಷ್ಟವೂ ಆದ; ಆತ್ಮ ತತ್ವಂ = ಜಡಾತೀತ ಚೇತನ ಸತ್ವವಾದ; ಯತ್ರ = ಯಾವುದರ ವಿಷಯದಲ್ಲಿ; ಶಬ್ದಃ = ವೇದವಚನವಾಗಲೀ; ಕ್ರಿಯಾರ್ಥಃ = ಯಜ್ಞಯಾಗಾದಿ ಕ್ರಿಯೆಯಾಗಲೀ; ನ ಪುರುಕಾರಕವಾನ್= ಪರಮಪ್ರಯೋಜನವನ್ನು ಹೊಂದಿಸಲಾರದೋ; ಅಭಿಮುಖೇ = ಯಾವುದರ ಎದುರಿನಲ್ಲಿ; ಮಾಯಾ = ಜಡಗಳಿಗೆ ಅಭಿಮಾನಿಯಾದ ಮಾಯಾದೇವಿಯು; ವಿಲಜ್ಜಮಾನಾ = ನಾಚಿಕೆಯುಳ್ಳವಳಾಗಿ; ಪರ್ಯೆತಿ = ಹಿಂದಿರುಗುವಳೋ; ಯತ್= ಯಾವುದನ್ನು; ಬ್ರಹ್ಮೇತಿವಿದುಃ = ಬ್ರಹ್ಮನೆಂದು ತಿಳಿಯುವರೋ; ಅಜಸ್ರಸುಖಂ = ನಿರಂತರ ಸುಖರೂಪವಾದುದು; ವಿಶೋಕಂ = ದುಃಖರಹಿತವಾದುದು ಎಂದು; ನಿಶಾಮ್ಯ = ಶಾಸ್ತ್ರಗಳಿಂದ ಕೇಳಿ ತಿಳಿದು; ಯತಯಃ = ಸಾಧಕರಾದ ಸಜ್ಜೀವರು; ಇಂದ್ರಃ = ಸಮರ್ಥನಾದವನು; ಸುಧಾಂ ನಿಶಾಮ್ಯ = ಅಮೃತಸದೃಶವಾದ ಜಲವನ್ನು ಕಂಡು; ನಿಪಾನ ಖನಿತ್ರಂ ಇವ = ಭಾವಿಯನ್ನು ತೋಡುವ ಸಾಧನೆಗಳಾದ ಹಾರೆ ಗುದ್ದಲಿಗಳನ್ನು ಬಿಸಾಡುವಂತೆ; ಯಮಲೋಕಹೇತುಂ = ಅಲ್ಪಸುಖ ನೀಡುತ್ತಾಯಮಲೋಕದ ಕಡೆಗೊಯ್ಯುವ ಸಂಸಾರ ಸಾಧನಗಳನ್ನು; ಜಹ್ಯುಃ = ಬಿಟ್ಟುಬಿಡುವರೋ, ಅಂತಹ; ಭಗವತಃ ಪದಂ = ಭಗವಂತನ ಸ್ಥಾನವು; ತತ್ ವೈ = ಅದೇ ಆಗಿದೆ.

ಮೇಲಿನ ಎರಡು ಶ್ಲೋಕಗಳಲ್ಲಿ ಭಗವಂತನ ನಿಜಸ್ವರೂಪ ಲಕ್ಷಣಗಳನ್ನೂ, ಅವನಿಂದ ಅಧಿಷ್ಠಿತವಾದ ವೈಕುಂಠ ಪದವಿಯ ಸ್ಥಿತಿಯನ್ನೂ ವರ್ಣಿಸಿ, ಯೋಗ್ಯಜೀವರು ಸಂಸಾರ ಸಾಧನಗಳನ್ನು ತ್ಯಜಿಸಿ ವೈಕುಂಠರೂಪನೇ ಆದ ವಾಸುದೇವನನ್ನು ಹೊಂದಲು ಪ್ರಯತ್ನಿಸಬೇಕೆಂದು ಉಪದೇಶ ನೀಡಿದ್ದಾರೆ. ಇಂದ್ರ ಎಂದರೆ ದೇವೇಂದ್ರನೆಂದು ಅರ್ಥಮಾಡುವ ಅಗತ್ಯವಿಲ್ಲ; ಏಕೆಂದರೆ ಭಾವಿಯನ್ನು ತೋಡಿ ಅಮೃತವನ್ನಾಗಲೀ, ಅಮೃತದಂತಹ ನೀರನ್ನಾಗಲೀ ಪಡೆಯಬೇಕಾದ ಅಗತ್ಯ ಅವನಿಗಿಲ್ಲ.

**ಸಃ ಶ್ರೇಯಸಾಮಪಿ ವಿಭುರ್ಭಗವಾನ್ಯತೋಸ್ಯ**
**ಭಾವಸ್ವಭಾವ ವಿಹಿತಸ್ಯ ಸತಃ ಪ್ರಸಿದ್ಧಃ ।**
**ದೇಹೇಸ್ವಧಾತು ವಿಗಮೇತು ವಿಶೀರ್ಯಮಾಣೇ-**
**ವ್ಯೋಮೇವ ತತ್ರ ಪುರುಷೋನ ವಿಶೀರ್ಯತೇಜಃ** ॥ ೪೯ ॥

ಸಃ ಭಗವಾನ್= ಮುಕ್ತಿ ಪ್ರದಾತನೂ ಮುಕ್ತಿ ಸ್ವರೂಪನೂ ಆದ ಭಗವಂತ; ಯತಃ ಶ್ರೇಯಸಾಂ ಅಪಿ ವಿಭುಃ= ಮೋಕ್ಷಾದಿ ಶ್ರೇಯಃ ಪ್ರಾಪ್ತಿಗೂ ಯಜಮಾನನಾದುದರಿಂದ; ಅಸ್ಯಭಾವಸ್ವಭಾವ ವಿಹಿತಸ್ಯ= ಇವನಲ್ಲಿ ಭಕ್ತಿಯಿಂದ ಇವನಬಿಂಬಸಾದೃಶ್ಯವುಳ್ಳ; ಸತಃ= ಸಜ್ಜೀವನ (ರ) ಇರುವಿಕೆಯು; ಪ್ರಸಿದ್ಧಃ= ಇರತಕ್ಕದ್ದೇ ಆಗಿದೆ; ದೇಹೇ= ದೇಹವು; ಸ್ವಧಾತು ವಿಗಮೇ= ಪಂಚಭೂತಗಳಲ್ಲಿ ವಿಲೀನವಾಗುತ್ತಾ; ವಿಶೀರ್ಯಮಾಣೇ= ನಾಶವಾಗಿ ಹೋಗಲು; ತತ್ರ= ಅಲ್ಲಿ; ಅಜಃ ಪುರುಷಃ= ಜನನರಹಿತನಾಗಿ ನಿತ್ಯನಾದ ಜೀವನು (ಜೀವಾಂತರ್ಗತ ಪರಮಾತ್ಮನೂ); ವ್ಯೋಮಃ ಇವ= ಆಕಾಶದಂತೆ; ನವಿಶೀರ್ಯತೇ= ನಾಶಹೊಂದುವುದಿಲ್ಲ.

ವ್ಯೋಮ ಎಂದಾಗ ಇಲ್ಲಿ ಭೌತಾಕಾಶಕ್ಕೂ ಆಶ್ರಯವಾದ ಸೂಕ್ಷ್ಮಾಕಾಶವೆಂದು ತಿಳಿಯಬೇಕು. ದೇಹ ದೇಹಾಂತರಗಳನ್ನು ಹೊಂದುತ್ತಾ ಭಗವತ್ಪ್ರಸಾದದಿಂದ ಮುಕ್ತನಾಗುವ ಜೀವನೂ (ಜೀವರೂ), ಶ್ರೇಯಃ ಪ್ರದನಾದ ಪುರುಷೋತ್ತಮನೂ ಸದಾ ಇರುವವರೆಂದು ಹೇಳಿರುವುದರಿಂದ ಜೀವೇಶ್ವರ ಭೇದವು ಸ್ಪಷ್ಟವಾಯಿತು.

**ಸೋಽಯಂ ತೇಽಭಿಹಿತಸ್ತಾತ ಭಗವಾನ್ ವಿಶ್ವಭಾವನಃ ।**
**ಸಮಾಸೇನ ಹರೇರ್ನಾನ್ಯದನ್ಯಸ್ಮಾತ್ಸದಸಚ್ಚಯತ್ ॥ ೫೦ ॥**

ತಾತ= ಪ್ರಿಯನಾರದಾ; ವಿಶ್ವಭಾವನಃ= ವಿಶ್ವಾಂತರ್ಯಾಮಿಯಾಗಿ ವಿಶ್ವಕ್ಕೆ ಆದರ ಸ್ಥಿತಿಯನ್ನೊದಗಿಸಿರುವ; ಸಃ ಅಯಂ ಭಗವಾನ್= ಇದುವರೆಗೆ ವಿವರಿಸಿದ ಮಹಿಮಾವಿಶಿಷ್ಟನಾದವನು ಭಗವಂತ; ಸಮಾಸೇನ= ಸಂಗ್ರಹವಾಗಿ; ತೇ ಅಭಿಹಿತಃ= ನಿನಗೆ ತಿಳಿಸಲ್ಪಟ್ಟವನಾಗಿದ್ದಾನೆ (ನಿನಗೆ ಅವನ ವಿಚಾರವನ್ನು ಸಂಗ್ರಹವಾಗಿ ತಿಳಿಸಿದ್ದೇನೆ.); ಅಸ್ಮಾತ್ ಹರೇಃ ಅನ್ಯತ್ = ಈ ಶ್ರೀಹರಿಯಿಂದ ಬೇರೆಯಾದುದು; ಯತ್ ಸದಸತ್= ಇದ್ದು ಇಲ್ಲವಾಗತಕ್ಕದ್ದು ಯಾವುದೂ; ನ= ಇಲ್ಲ.

ಶ್ರೀಹರಿಯಿಂದ ಬೇರೆಯಾದುದು ಯಾವುದೂ ಇಲ್ಲ ಎಂದು ಮೇಲೆ ತೋರುವ ಅದ್ವೈತಪರ ಅರ್ಥವು ಸರಿಯಲ್ಲ. ವಿಶ್ವಭಾವನಃ ಎಂದರೆ ವಿಶ್ವದಲ್ಲಿ ವಿಶ್ವದಂತಿರುವವನೆಂದೂ ವಿಶ್ವವೇ ಆಗಿರುವನೆಂದೂ ಅರ್ಥವಾಗುವುದು. ಎರಡನೆಯ ಅರ್ಥವನ್ನು ಹಿಡಿದರೆ ಶ್ರೀಹರಿಯ ಸ್ವಾತಂತ್ರ್ಯ, ಕಾರುಣ್ಯ, ಸೃಷ್ಟ್ಯಾದಿ ಅಷ್ಟಕರ್ತೃತ್ವ ಎಲ್ಲವೂ ವ್ಯರ್ಥವ್ಯಾಪಾರವೆಂದ ಹಾಗಾಗುತ್ತದೆ. ಆದುದರಿಂದ, ಶ್ರೀಹರಿಯಿಂದ ಭಿನ್ನವಾದರೂ ಜೀವಜಡಗಳು ಅವನನ್ನು ಬಿಟ್ಟು ಬೇರೆಯಾಗಿ ಎಂದಿಗೂ ಇರಲಾಗುವುದಿಲ್ಲ ಎಂಬುದು ನಿಜವಾದ ಅರ್ಥ. ಅಸ್ವಾತಂತ್ರ್ಯ, ಜೀವಜಡಗಳ ಲಕ್ಷಣ. ಸರ್ವಸ್ವಾತಂತ್ರ್ಯ ಶ್ರೀಹರಿಯ ಸ್ವರೂಪಲಕ್ಷಣ.

**ಇದಂ ಭಾಗವತಂ ನಾಮಯನ್ಮೇ ಭಗವತೋದಿತಂ ।**
**ಸಂಗ್ರಹೋಯಂ ವಿಭೂತೀನಾಂ ತದೇತದ್ವಿಪುಲೀಕುರು ॥ ೩೧ ॥**

ಯತ್= ಯಾವುದು; ಮೇ = ನನಗೆ; ಭಗವತಾ ಉದಿತಂ = ಶ್ರೀ ಹರಿಯಿಂದ ಉಪದೇಶಿಸಲ್ಪಟ್ಟಿತೋ; ಇದಂ = ಅಂತಹ ಇದು; ಭಾಗವತಂನಾಮ = ಭಗವದ್ಭಕ್ತಿಯನ್ನುಂಟುಮಾಡುವ, ಭಗವತ್ಸಂಬಂಧಿಯಾದುದರಿಂದ, ಭಾಗವತ ಎಂಬ ಹೆಸರನ್ನುಳ್ಳದು; ಅಯಂ = ಇದು; ವಿಭೂತೀನಾಂ = ಭಗವತಂನ ಮಹಿಮಾದ್ಯೋತಕ ಅವತಾರಗಳ; ಸಂಗ್ರಹಃ = ಸಂಕ್ಷಿಪ್ತರೂಪವು; ತತ್= ಆದುದರಿಂದ; ಏತತ್= ಇದನ್ನು; ವಿಪುಲೀಕುರು = ಭಗವದ್ಭಕ್ತರಿಗೆ ಅನುಕೂಲಿಸುವಂತೆ ವಿಸ್ತಾರಗೊಳಿಸು.

ಈ ನನ್ನ ಅಭಿಪ್ರಾಯವನ್ನು ವೇದವ್ಯಾಸದೇವನಿಗೆ ಅರಿಕೆಮಾಡಿಕೊಂಡು ವಿಸ್ತಾರವಾಗಿ ಶ್ರೀಮದ್ಭಾಗವತ ಗ್ರಂಥವನ್ನು ರಚಿಸುವಂತೆ ಮಾಡು ಎಂದು ಬ್ರಹ್ಮದೇವರು ನಾರದರಿಗೆ ಹೇಳಿದರೆಂದು ತಿಳಿಯಬೇಕು.

**ಯಥಾಹರೌ ಭಗವತಿ ನೃಣಾಂ ಭಕ್ತಿರ್ಭವಿಷ್ಯತಿ ।**
**ಸರ್ವಾತ್ಮನ್ಯಖಿಲಾಧಾರ ಇತಿ ಸಂಕಲ್ಪ್ಯವರ್ಣಯ ॥ ೩೨ ॥**

ಯಥಾ = ಯಾವ ಬಗೆಯಿಂದ; ನೃಣಾಂ = ಜನರಿಗೆ; ಸರ್ವಾತ್ಮನಿ = ಸರ್ವಾಂತರ್ಯಾಮಿಯಾದ; ಅಖಿಲಾಧಾರೇ = ಸಮಸ್ತಕ್ಕೂ ಆಶ್ರಯನಾದ; ಭಗವತಿ ಹರೌ = ಭಗವಂತನಾದ ಶ್ರೀ ಹರಿಯಲ್ಲಿ; ಭಕ್ತಿಃ ಭವಿಷ್ಯತಿ = ಆ ಸ್ವಾಮಿಯ ಸರ್ವೋತ್ತಮತ್ವವನ್ನು ತಿಳಿದು ಪ್ರೇಮ ಮಾಡುವ ಬಗೆಯ ಭಕ್ತಿಯುಂಟಾಗುವುದೋ ಹಾಗೆ; ಇತಿ = ಈ ರೀತಿಯಾಗಿ ಭಾಗವತ ರಚನೆಯಾಗಬೇಕೆಂದು; ಸಂಕಲ್ಪ್ಯ = ಮನಸ್ಸಿಗೆ ತಂದುಕೊಂಡು; ವರ್ಣಯ = ವೇದವ್ಯಾಸದೇವರ ಮುಂದೆ ವರ್ಣಿಸಿ ಹೇಳು.

ಭಾಗವತ ಶಾಸ್ತ್ರವು ಜನಸಾಮಾನ್ಯರಿಗೂ ಭಗವದ್ಭಕ್ತಿಯುಂಟಾಗುವಂತೆ ಮಾಡುವ ಸಕಲಶಾಸ್ತ್ರಗಳ ಸಾರಭೂತವಾದುದು. ಪಂಡಿತರಂತೆ ಜಿಜ್ಞಾಸೆಯಲ್ಲಿ ತೊಡಗಿ ಶ್ರಮಪಡುವ ಆವಶ್ಯಕತೆ ಇಲ್ಲದೆಯೇ ಜಿಜ್ಞಾಸೆಯ ಫಲವಾದ ಭಗವಂತನ ಮಹಾತ್ಮ್ಯಜ್ಞಾನವನ್ನೂ, ಭಗವಂತನಲ್ಲಿ ಭಕ್ತಿಯನ್ನೂ ಪಡೆಯುವಂತೆ ಮಾಡುವ ಮಹಿಮೆಯುಳ್ಳದು ಶ್ರೀಮದ್ಭಾಗವತ. ಈ ಶಾಸ್ತ್ರವನ್ನು ಶ್ರದ್ಧೆಯಿಂದ ಶ್ರವಣ ಮಾಡಿದವರು ಪಾಂಡಿತ್ಯವನ್ನೂ ಸಂಪಾದಿಸಿ ಅನುಭವಿಗಳಾದ ಜ್ಞಾನಿಗಳೂ ಆಗಬಲ್ಲರು; ಯೋಗಿವರೇಣ್ಯರೂ ಆಗಬಹುದು. ಶಾಸ್ತ್ರಾಧ್ಯಯನದಿಂದ ಬರಬೇಕಾದ ಫಲವೇ ಇದು. ಇಂತಹ ಸುಲಭಶಾಸ್ತ್ರವನ್ನು ಸಜ್ಜನರ ಉದ್ಧಾರಾರ್ಥವಾಗಿ ರಚಿಸುವಂತೆ

ವೇದವ್ಯಾಸದೇವರಲ್ಲಿ ಮನವಿಮಾಡಿಕೋ ಎಂದು ಬ್ರಹ್ಮದೇವರು ನಾರದರಿಗೆ ಹೇಳಿದ್ದಾರೆ.

**ನೃಜನ್ಮನಿ ನತುಷ್ಯೇತ ಕಿಂಫಲಂ ಯಮನಶ್ವರೇ ।**
**ಕೃಷ್ಣೇಯದ್ಯಪವರ್ಗೇಶೇ ಭಕ್ತಿಃ ಸ್ಯಾದನಪಾಯಿನೀ ॥ ೫೩ ॥**

ಯಮನಶ್ವರೇ = ಯಮನಿಂದ ನಾಶಕ್ಕೆ ಒಳಗಾಗುವಂತಹ; ನೃಜನ್ಮನಿ = ನರಜನ್ಮದಲ್ಲಿ; ನತುಷ್ಯೇತ = ಐಹಿಕ ಸುಖ ಭೋಗಗಳಿಂದಲೂ, ಆಜನ್ಮದಲ್ಲಿ ಸಂಪಾದಿಸಿದ ಪುಣ್ಯವಿಶೇಷಗಳಿಂದ ಸಿಗುವ ಸ್ವರ್ಗಾದಿಲೋಕಗಳ ಭೋಗದಿಂದಲೂ ತೃಪ್ತಿಯನ್ನು ಹೊಂದಲಾಗುವುದಿಲ್ಲ; ಅಪವರ್ಗೇಶೇ = ಮುಕ್ತಿಸುಖಕೊಡುವ ಸ್ವಾಮಿಯಾದ; ಕೃಷ್ಣೇ = ಶ್ರೀಕೃಷ್ಣನಲ್ಲಿ; ಅನಪಾಯಿನೀ ಭಕ್ತಿಃ = ನಿರಂತರ ಭಕ್ತಿಯು; ಯದಿನಸ್ಯಾತ್ = ಉಂಟಾಗಲಿದ್ದಲ್ಲಿ; ಕಿಂ ಫಲಂ = ನರಜನ್ಮದಿಂದ ಬಂದಫಲವೇನು !

ನರಜನ್ಮದ ಹಿರಿಮೆಯನ್ನೂ, ಭಕ್ತಿಯ ಮಹಿಮೆಯನ್ನೂ ಅದರಿಂದ ಲಭಿಸುವ ಮುಕ್ತಿಗೊಡೆಯನ ಸಾನ್ನಿಧ್ಯದ ಫಲವನ್ನೂ ತಿಳಿಸಿ, ಅಂತಹ ಭಕ್ತಿಮಾರ್ಗವನ್ನು ಜಗತ್ತಿನಲ್ಲಿ ವಿಸ್ತರಿಸಬೇಕೆಂದೂ, ಅದಕ್ಕೆ ಸಾಧಕವಾದ ಶ್ರೀಮದ್ಭಾಗವತಶಾಸ್ತ್ರವನ್ನು ರಚಿಸುವಂತೆ ಶ್ರೀವೇದವ್ಯಾಸದೇವರಲ್ಲಿ ಪ್ರಾರ್ಥನೆಯನ್ನು ಸಲ್ಲಿಸಬೇಕೆಂದೂ ಬ್ರಹ್ಮದೇವರು ನಾರದರಿಗೆ ಹೇಳಿದ್ದಾರೆ. ಬ್ರಹ್ಮದೇವರ ಪ್ರಾರ್ಥನೆಯನ್ನು ಭಗವದ್ರೂಪೀ ವೇದವ್ಯಾಸದೇವರಿಗೆ ಸಲ್ಲಿಸುವ ನಾರದರ ಪಾತ್ರ, ಅವರ ಹೆಸರಿಗೆ ಅನುಗುಣವಾದುದು. ನಾರ = ಜ್ಞಾನ: ದ = ಕೊಡುವವರು (ಜ್ಞಾನಮಾರ್ಗ ದರ್ಶಕರು.)

**ಕಿಂಸ್ಯಾದ್ವರ್ಣಾಶ್ರಮಾಚಾರೈಃ ಕಿಂದಾನೈಃ ಕಿಂತಪಃ ಶ್ರುತೈಃ ।**
**ಸರ್ವಾಘಘ್ನೋತ್ತಮ ಶ್ಲೋಕೇನಚೇದ್ಭಕ್ತಿರಧೋಕ್ಷಜೇ ॥ ೫೪ ॥**

ಸರ್ವ ಅಘಘ್ನ ಉತ್ತಮಶ್ಲೋಕೇ = ಅರ್ಥವತ್ತಾಗಿ ಮಾಡಿದ ನಾಮಸ್ಮರಣೆಯಿಂದಲೇ ಸಕಲ ಪಾಪಗಳನ್ನೂ ಧ್ವಂಸಮಾಡಿಬಿಡುವ; ಅಧೋಕ್ಷಜೇ = ಭಕ್ತಿಯ ಪರಿಚಯ, ಅಭ್ಯಾಸಗಳಿಗಾಗಿಯೇ ಮನಸ್ಸನ್ನು ಕೆಳಮುಖವಾಗುವಂತೆ ಮಾಡಿರುವ ಶ್ರೀಹರಿಯಲ್ಲಿ; ಭಕ್ತಿಃ ನಚೇತ್= ಭಕ್ತಿಯುಂಟಾಗದಿದ್ದಲ್ಲಿ ಅಥವ ಭಕ್ತಿ ಇರದಿದ್ದಲ್ಲಿ); ವರ್ಣಾಶ್ರಮ ಆಚಾರೈಃ = ವರ್ಣಾಶ್ರಮೋಚಿತ ಆಚಾರಗಳ ಅಭ್ಯಾಸದಿಂದ; ಕಿಂಸ್ಯಾತ್= ಅಲ್ಪಫಲವಲ್ಲದೆ ಮುಕ್ತಿರೂಪವಾದ ಉತ್ತಮಫಲ ದೊರಕೀತೆ ?ದಾನೈಃ ಕಿಂ = ಬಗೆಬಗೆಯ ದಾನಗಳನ್ನು ಕೊಟ್ಟೇನು ಫಲ ?ತಪಃ ಶ್ರುತೈಃ = ತಪಸ್ಸಿನ ಆಚರಣೆಯಿಂದಲೂ ಶಾಸ್ತ್ರಶ್ರವಣದಿಂದಲೂ; ಕಿಂ = ಏನು ಫಲ ?

ಆಚಾರ, ವಿಚಾರ, ದಾನ, ತಪಸ್ಸು ಮೊದಲಾದುವು ಭಕ್ತಿಯ ಬೆಳವಣಿಗೆಗೆ ಸಾಧಕವಾಗಬೇಕು. ಹಾಗಾಗದಿದ್ದ ಪಕ್ಷದಲ್ಲಿ ಅವು ವ್ಯರ್ಥ. ಆಚಾರ ವಿಚಾರಗಳು ಸಾರ್ಥಕವಾಗಬೇಕಾದರೆ ಭಕ್ತಿಯ ಸಹಕಾರದಿಂದಲೇ ಅದು ಸಾಧ್ಯ. ಅಷ್ಟೇ ಅಲ್ಲದೆ, ಕಾಲಗತಿಯಿಂದ ಆಚಾರವಿಚಾರಗಳಿಗೆ ಅವಕಾಶ ಕಡಿಮೆಯಾದರೂ ಶ್ರೀಮದ್ಭಾಗವತ ಸುಶ್ರವಣಗೈದು, ಭಕ್ತಿಯಿಂದ ಭಗವಂತನ ಸ್ಮರಣೆ ಮಾಡಿದ ಮಾತ್ರದಿಂದ ಸಕಲಪಾಪಗಳ ನಿವಾರಣೆಯಾಗಿ ಬಿಡುವುದು. ಆದುದರಿಂದ ದೇಶ-ಕಾಲ-ಜಾತಿ-ಮತಗಳ ಅಡಚಣೆಯಿಲ್ಲದೆ ಮುಕ್ತಿ ಸುಧೆಯನ್ನು ಕರೆಯುವ ಕಲಿಯುಗದ ಕಾಮಧೇನು, ಶ್ರೀಮದ್ಭಾಗವತ. ಹೀಗೆಂದು ಬ್ರಹ್ಮದೇವರು ಪ್ರಶಂಸೆ ಮಾಡಿದ್ದಾರೆ.

**ಮಾಯಾಂ ವರ್ಣಯತೋಽಮುಷ್ಯ ಈಶ್ವರಸ್ಯಾನುಮೋದತಃ ।**
**ಶೃಣ್ವತಃ ಶ್ರದ್ಧಯಾ ನಿತ್ಯಂ ಮಾಯಯಾತ್ಮಾ ನ ಮುಹ್ಯತಿ ॥ ೫೫ ॥**

ಅಮುಷ್ಯ ಈಶ್ವರಸ್ಯ = ಸ್ವತಂತ್ರನಾದ ಇವನ; ಮಾಯಾಂ = ತನ್ನ ಅದ್ಭುತ ಶಕ್ತಿಯಿಂದ ಜೀವಿಗಳ ಅನಾದಿ ಅಜ್ಞಾನ ಬಂಧನವನ್ನು ಬಿಡುಸುವುದಕ್ಕಾಗಿ, ಆಜೀವರನ್ನು ಸಂಸಾರ ಬಂಧನದಲ್ಲಿಡುವ ಜಗತ್ ಸೃಷ್ಟ್ಯಾದಿ ತಂತ್ರವನ್ನು; ವರ್ಣಯತಃ = ವರ್ಣಿಸಿಕೊಂಡಾಡುವ; ಅನುಮೋದತಃ = ಕೇಳಿ ನಲಿಯುವ; ನಿತ್ಯಂ = ಸದಾ; ಶ್ರದ್ಧಯಾ = ಶ್ರದ್ಧೆಯಿಂದ; ಶೃಣ್ವತಃ = ಬೇರೆಯವರಿಂದ ಕೇಳಿ ಸಂತೋಷಿಸುವ; ಆತ್ಮಾ = ಜೀವನು; ಮಾಯಯಾ = ಸಂಸಾರದ ಮೋಹಕ ಬಂಧನದಿಂದ; ನ ಮುಹ್ಯತಿ = ಮೋಸಹೋಗುವುದಿಲ್ಲ.

ಮಾಯಾ ಎಂದರೆ ಇಲ್ಲದುದನ್ನು ಇದ್ದಂತೆ ತೋರಿಸಿ ಮೊಹಗೊಳಿಸುವಿಕೆ ಎಂಬ ಅರ್ಥ ಲೋಕವಿದಿತವಾದುದು. ಸರ್ವಸಮರ್ಥನಾದ ಭಗವಂತನೂ ಜೀವರಿಗೆ ಸ್ಥೂಲದೇಹಗಳನ್ನು ಕೊಟ್ಟು ದೇಹಾತ್ಮವಿವೇಕವಿಲ್ಲದಂತೆ ಮಾಡಿರುವುದೂ ಒಂದು ಮಾಯಾತಂತ್ರವಲ್ಲವೆ ? ಇದು ಸಾಧಾರಣ ಇಂದ್ರಜಾಲ ಮಹೇಂದ್ರ ಜಾಲದಂತಲ್ಲ ಇರತಕ್ಕವಸ್ತುಗಳನ್ನು ಚಮತ್ಕಾರವಾಗಿ ನಿರ್ಮಿಸಿ, ಬಳಸಿ, ಬಂಧನದಲ್ಲಿಟು ಬಿಡಿಸುವುದು ಭಗವಂತನ ಅದ್ಭುತ ಸಾಮರ್ಥ್ಯವೇ ಹೊರತು ಸಾಮಾನ್ಯಯಕ್ಷಿಣೀ ವಿದ್ಯೆಯಲ್ಲ. ಭಗವದ್ಭಕ್ತರು ದೇಹಾತ್ಮವಿವೇಕ ಹೊಂದುವಂತೆ ಆಸ್ವಾಮಿಯೇ ಮಾಡುವುದರಿಂದ ಅವರು ಮಾಯಾತೀತರಾಗುವರು.

ಏಳನೆಯ ಅಧ್ಯಾಯ ಸಮಾಪ್ತಿಯಾಯಿತು.

---

# ದ್ವಿತೀಯಸ್ಕಂಧ ಎಂಟನೆಯ ಅಧ್ಯಾಯ ಪ್ರಾರಂಭ

**ರಾಜೋವಾಚಃ–** ಪರೀಕ್ಷಿದ್ರಾಜನು ಪ್ರಶ್ನೆ ಮಾಡಿದನು.

**ಬ್ರಹ್ಮಣಾ ಚೋದಿತೋಬ್ರಹ್ಮನ್ ಗುಣಾಖ್ಯಾನೇಽಗುಣಸ್ಯಚ ।**
**ಯಸ್ಮೈಯಸ್ಮೈಯಥಾಪ್ರಾಹ ನಾರದೋ ದೇವದರ್ಶನಃ ॥ ೧ ॥**

ಬ್ರಹ್ಮನ್= ಬ್ರಹ್ಮಜ್ಞಾನಿವರೇಣ್ಯರಾದ ಶ್ರೀಶುಕಾಚಾರ್ಯರೇ; ಅಗುಣಸ್ಯ = ಜಡಗುಣರಹಿತನಾದ, ನಿತ್ಯ ನಿರ್ಮುಕ್ತಸತ್ವಾದಿ ಅಖಿಲ ಗುಣಪೂರ್ಣನಾದ ಶ್ರೀಹರಿಯ; ಗುಣಾಖ್ಯಾನೇ = ಗುಣವರ್ಣನೆಯ ವಿಷಯದಲ್ಲಿ; ಬ್ರಹ್ಮಣಾ = ತಂದೆಯಾದ ಬ್ರಹ್ಮದೇವರಿಂದ; ಚೋದಿತಃ = ಆಜ್ಞಪ್ತರಾದ; ದೇವದರ್ಶನಃ = ಭಗವದ್ದರ್ಶನದಿಂದ ಸತ್ಯನಿಷ್ಠರಾದ; ನಾರದಃ = ನಾರದರುಖುಸ್ಮೈಯಸ್ಮೈ = ವ್ಯಾಸರನ್ನು ಹೊರತು ಯಾರ್ಯಾರಿಗೆ; ಯಥಾಯಥಾ = ಹೇಗೆ ಹೇಗೆ; ಪ್ರಾಹ = ಹೇಳಿದರು ?

ಬ್ರಹ್ಮದೇವರು ಸೂಕ್ಷ್ಮವಾಗಿ ಸೂಚಿಸಿದ ಶ್ರೀಮದ್ಭಾಗವತ ಕಥೆಯನ್ನು ನಾರದರು ವಿಸ್ತರಿಸಿ ಬೇರೆಯ ಅನೇಕರಿಗೆ ಹೇಳಿದರು; ಆದರೆ ವೇದವ್ಯಾಸದೇವರಿಗೆ ದಿವ್ಯವಾದ ಭಾಗವತಗ್ರಂಥವನ್ನು ರಚಿಸಬೇಕೆಂದು ಸೂಚಿಸಿದರೇ ಹೊರತು, ಕಥೆಯನ್ನೆಲ್ಲಾ ಹೇಳಿದರೆಂದು ಭಾವಿಸಬಾರದು. ನಾರದರ ಉಪದೇಶದ ಅವಶ್ಯಕತೆಯು ಇತರರಿಗೇ ಹೊರತು ವೇದವ್ಯಾಸದೇವರಿಗಲ್ಲ. ಬ್ರಹ್ಮನನ್ನು ನಿರ್ಗುಣನೆಂದು ಹೇಳುವವರು ಈ ಶ್ಲೋಕಾರ್ಥವನ್ನು ಚೆನ್ನಾಗಿ ಮನನ ಮಾಡಬೇಕು. ಏಳನೇ ಅಧ್ಯಾಯದ ೪೭ ನೇ ಶ್ಲೋಕದಲ್ಲಿ ಪರಬ್ರಹ್ಮನನ್ನೇ ಕುರಿತು ಬ್ರಹ್ಮದೇವರು ಹೇಳಿರುವುದು ವ್ಯಕ್ತವಾಗುತ್ತದೆ; ಅವರು ಹೇಳಿದುದು ಅದ್ವೈತವಾದಿಗಳ ಅನಿಸಿಕೆಯ ಮಾಯಾಶಬಲಗತ ಈಶ್ವರನಲ್ಲ. ಆದುದರಿಂದ ಅಗುಣ ಅಥವ ನಿರ್ಗುಣ ಎಂದರೆ, ಜಡಗುಣರಹಿತ ಎಂತಲೇ ಅರ್ಥಮಾಡಬೇಕು. ಅವನ ಗುಣಾಖ್ಯಾನ ಎಂದಾಗ ಸ್ವರೂಪಭೂತ ಗುಣಗಳೆಂದು ಅರ್ಥಮಾಡಬೇಕೇ ಹೊರತು ಆರೋಪಿತ ಗುಣಗಳೆಂದಲ್ಲ. ಸ್ವರೂಪಗುಣಗಳೇ ಇಲ್ಲವೆಂದು ಹೇಳುವುದು ಮಿಥ್ಯಾಜ್ಞಾನಿಗಳವಾದ. ಯಾವ ಸ್ವರೂಪಗುಣವೂ ಇಲ್ಲದವನಿಗೆ ಜಗದ್ರೂಪವಾದ ನಾಟಕವಾಡಿ ವಿಹರಿಸಬೇಕೆಂಬ ಅಪೇಕ್ಷೆ, ಕ್ರೀಡಿಸುವ ಸ್ವಭಾವ ಇರುವುವೆಂದು ಹೇಳುವುದು ಮೊಂಡರ ಅಪಲಾಪ; ಅದು ಜ್ಞಾನಿಗಳಾಡುವ ಮಾತಲ್ಲ.

**ಏತದ್ವೇದಿತುಮಿಚ್ಛಾಮಿ ತತ್ತ್ವಂ ವೇದವಿದಾಂವರ ।**
**ಹರೇರದ್ಭುತವೀರ್ಯಸ್ಯ ಕಥಾಲೋಕಸುಮಂಗಲಾಃ ॥ ೨ ॥**

ಅದ್ಭುತವೀರ್ಯಸ್ಯ = ಊಹಾತೀತ ಸಾಮರ್ಥ್ಯವುಳ್ಳ; ಹರೇಃ = ಶ್ರೀಹರಿಯ; ಕಥಾಃ = ಮಹಿಮಾವರ್ಣನೆಗಳು; ಲೋಕಸುಮಂಗಲಾಃ = ಜನರಿಗೆ ಶಾಶ್ವತ ಮಂಗಳ ಪ್ರದವಾದುವು; ವೇದವಿದಾಂವರ = ವೇದವಿದ್ಯಾವಿಶಾರದರಾದವರಲ್ಲಿ ಅಗ್ರಗಣ್ಯರಾದ ಮುನಿವರರೇ; ಏತತ್ ತತ್ತ್ವಂ = ಈ ದಿವ್ಯವಾದ ಭಗವತ್ತತ್ತ್ವವನ್ನು; ವೇದಿತುಂ = ತಿಳಿಯಲು; ಇಚ್ಛಾಮಿ = ಅಪೇಕ್ಷಿಸುತ್ತೇನೆ.

ಲೋಕದಲ್ಲಿ ಜನರು ಅದ್ಭುತವೆಂದು ಕಾಣುವ ಸಾಮಾನ್ಯ ವಿಷಯಗಳನ್ನೂ, ಕ್ಷುದ್ರದೇವತೆಗಳ ಮತ್ತು ಸಾಧಾರಣ ಯೋಗಿಗಳ ಮಹಿಮೆಗಳನ್ನೂ ಕೇಳುವುದರಲ್ಲಿ ಆಸಕ್ತಿ ಹೊಂದಿರುತ್ತಾರೆ. ಅವರಿಗೆ ದೊರೆಯುವುದು ಅಲ್ಪಲಾಭ; ಅನಿತ್ಯಸುಖ. ಶ್ರೀಹರಿಯ ಮಹಿಮಾಶ್ರವಣವು ಸಂಸಾರಬಂಧನ ರೂಪವಾದ ಅಮಂಗಳವನ್ನು ಕಳೆದು, ನಿತ್ಯಮಂಗಳ ರೂಪವಾದ ವೈಕುಂಠನಗರಿಗೆ ಪ್ರಯಾಣಮಾಡಲು ಸಾಧಕವಾದುದು. ಅಂತಹ ಕಥೆಯಲ್ಲಿಯೇ ಜ್ಞಾನಿಗಳು ಆಸಕ್ತಿ ಹೊಂದಿರುತ್ತಾರೆಂಬುದು ಪರೀಕ್ಷಿದ್ರಾಜರ ಉದಾಹರಣೆಯಿಂದ ತಿಳಿದು ಬರುತ್ತದೆ.

ಈಗಿನ ಜಿಜ್ಞಾಸುಗಳಿಗೆ ಬರಬಹುದಾದ ಒಂದು ಸಂಶಯವನ್ನು ಇಲ್ಲಿ ನಿವಾರಿಸುವುದು ಸೂಕ್ತವೆಂದು ಕಾಣುತ್ತದೆ. 'ಬ್ರಹ್ಮದೇವರು ನಾರದಪರಾಶರಾದಿಗಳಿಗೆ ಹೇಳುವುದು, ಅದನ್ನು ಶುಕಾಚಾರ್ಯರು ಪರೀಕ್ಷಿದ್ರಾಜರಿಗೆ ಹೇಳುವುದು, ಅವರು ಹಾಗೆ ಹೇಳಿದರೆಂದು ಸೂತಪೌರಾಣಿಕರು ಶೌನಕಾದಿಗಳಿಗೆ ಹೇಳುವುದು ನಾರದಾದಿಗಳು ಹೇಳಿದುದನ್ನು ಶ್ರೀವೇದವ್ಯಾಸದೇವರು ಹೇಳುವುದು, ತಮ್ಮ ತಂದೆಯಾದ ವೇದವ್ಯಾಸರು ಹೇಳಿದರೆಂದು ಶುಕಾಚಾರ್ಯರು ಹೇಳುವುದು, ಈ ಎಲ್ಲವನ್ನೂ ಇವರಿಗೆ ಅವರು ಹೇಳಿದರು, ಅವರು ಇವರಿಗೆ ಹೇಳಿದರು ಎಂದು ವೇದವ್ಯಾಸದೇವರು ಬರೆಯುವುದು ಇದೆಲ್ಲಾ ಒಂದು ತೊಡಕಾದ ಸಮಸ್ಯೆಯ ಹಾಗಿದೆ. ಆದರೆ, ಒಳಹೊಕ್ಕು ನೋಡಿದಾಗ, ಈ ಭಾಗವತ ಪುರಾಣವು ಪ್ರತಿ ಬ್ರಹ್ಮ ದಿನಕಲ್ಪದಲ್ಲಿಯೂ ಅಲ್ಪಸ್ವಲ್ಪ ವ್ಯತ್ಯಾಸಗಳಿಂದ ಏಕಪ್ರಕಾರವಾಗಿ ಇರತಕ್ಕುದಾದುದರಿಂದ ಅದು ಹೇಗೆ ಪ್ರವೃತ್ತವಾಯಿತೋ ಅದನ್ನೆಲ್ಲಾ ಚಾರಿತ್ರಿಕ ರೀತಿಯಲ್ಲಿ ಶ್ರೀವೇದವ್ಯಾಸರೂಪಿಯಾದ ಭಗವಂತನು 'ಶ್ರೀಮಧ್ಭಾಗವತ'ವೆಂಬ ಈ ಗ್ರಂಥದಲ್ಲಿ ಕ್ರೋಢೀಕರಿಸಿ ಹೇಳಿರುವನೆಂದು ತಿಳಿಯಬೇಕು.

**ಪೃಥಯಸ್ವ ಮಹಾಭಾಗ ಯಥಾಹಮಖಿಲಾತ್ಮನಿ ।**
**ಕೃಷ್ಣೇನಿವೇಶ್ಯ ನಿಸ್ಸಂಗಂ ಮನಸ್ತ್ಯಕ್ಷೇ ಕಳೇವರಂ ॥ ೩ ॥**

ಮಹಾಭಾಗ = ಬ್ರಹ್ಮಾನುಭವಿಗಳಾದ ಶ್ರೀಶುಕಾಚಾರ್ಯರೇ; ಅಹಂ = ನಾನು; ಯಥಾ = ಯಾವರೀತಿಯಿಂದ ಶ್ರವಣಮನನ ಮಾಡಿ; ಅಖಿಲಾತ್ಮನಿ = ಸರ್ವಾಂತರ್ಯಾಮಿಯಾದ; ಕೃಷ್ಣೇ = ಮನೋಹರಮೂರ್ತಿಯಾದ ಶ್ರೀಕೃಷ್ಣನಲ್ಲಿ; ನಿಸ್ಸಂಗಂ (ನಿಸ್ಸಂಗಂ) = ಸರ್ವಸಂಗರಹಿತನಾಗಿ; ಮನಃನಿವೇಶ್ಯ = ಮನಸ್ಸನ್ನು ಶ್ರೀಕೃಷ್ಣನ ಪಾದಗಳಲ್ಲಿ ಸ್ಥಿರಗೊಳಿಸಿ; ಕಳೇವರಂ = ದೇಹವನ್ನು; ತ್ಯಕ್ಷ್ಯೇ = ಬಿಡಬಲ್ಲೆನೋ ಹಾಗೆ; ಪ್ರಥಯಸ್ವ = ಆ ದಿವ್ಯ ಪುರುಷನ ಮಾಹಾತ್ಮ್ಯವನ್ನು ವಿವರಿಸಿ ಹೇಳಿರಿ.

ಇದೇ ಭಕ್ತಿಯ ರಹಸ್ಯವನ್ನು ಅರಿಯಲು ಮಾಡಬೇಕಾದ ಪ್ರಶ್ನೆ. ಕೆಸರಿನ ಮಡುವಿನಲ್ಲಿ ಸಿಕ್ಕಿಹಾಕಿಕೊಂಡವನು, ಅಲ್ಲಿ ಬೆಳೆದಿರಬಹುದಾದ ಜೊಂಡುಹುಲ್ಲುಗಳನ್ನು ನಂಬಿ ಹಿಡಿದುಕೊಂಡು ಮಡುವಿನಿಂದ ಹೊರಬರಲು ಪ್ರಯತ್ನಿಸಿದಷ್ಟೂ ಹೆಚ್ಚು ಹೆಚ್ಚು ಆಳಕ್ಕೆ ಹೋಗುತ್ತಿರಲು, ದಡದಲ್ಲಿರುವ ಶತ್ರುವೊಬ್ಬನು ಸಹಾಯಕ್ಕೆ ಬಂದರೂ ಅವನ ಕೈಗೆ ಸಿಗುವುದರ ಬದಲು ಕೆಸರಿನಲ್ಲಿ ಜೀವ ಉಳಿಸಿಕೊಂಡು ಹೆಣಗುವುದೇ ಮೇಲೆಂದು ಬಗೆದಿರುವಾಗ, ಸಮರ್ಥನೂ ಕರುಣಾಳುವೂ ಆದವನೊಬ್ಬನು ಸದುಪಾಯದಿಂದ ಪಾರುಗಾಣಿಸಲು ಬಂದರೆ, ಅವನನ್ನು ಸಂಪೂರ್ಣವಾಗಿ ನಂಬಿ ಹಗುರ ಮನಸ್ಸಿನಿಂದ ಶರಣು ಹೊಗುವಂತೆ, ಸರ್ವಸಮರ್ಥನೂ ಕರುಣಾಸಮುದ್ರನೂ ಆದ ಶ್ರೀಹರಿಯ ಮಹಿಮಾತಿಶಯವನ್ನು ಚೆನ್ನಾಗಿ ಅರ್ಥಮಾಡಿಕೊಂಡವನು ಸಂಪೂರ್ಣವಾಗಿ ಸ್ವಾಭಿಮಾನ ಸ್ವಜನಾಭಿಮಾನಗಳನ್ನು ತೊರೆದು, ದುಷ್ಟಪ್ರಲೋಭನಗಳಿಗೆ ಒಳಗಾಗದೆ, ಸಂತೋಷದಿಂದ ಸರ್ವಸಂಗಪರಿತ್ಯಾಗ ಮಾಡಿಬಿಡಬಹುದು; ದೇಹವೆಂಬ ಗೇಹದ ನಿಜಸ್ಥಿತಿಯನ್ನರಿತು, ನಿತ್ಯಸಖನಾದ ಬಿಂಬನ ಪೂರ್ಣಪರಿಚಯ ಹೊಂದಿದಾಗ ನಗುನಗುತ್ತಾ ದೇಹತ್ಯಾಗ ಮಾಡಲು ಅನುಕೂಲವಾಗುವುದು. ಆದುದರಿಂದಲೇ, 'ಪರಮಾತ್ಮನ ಮಾಹಾತ್ಮ್ಯಜ್ಞಾನ, ಅವನಲ್ಲಿ ಸುದೃಢವಾದ ಸ್ನೇಹ' ಎಂಬ ಮಾತುಗಳಲ್ಲಿ ಭಕ್ತಿ ಎಂಬುದರ ಅರ್ಥವನ್ನು ಶ್ರೀಮದಾಚಾರ್ಯರು ತುಂಬಿಕೊಟ್ಟಿದ್ದಾರೆ. ಅಂತಹ ಸ್ನೇಹರೂಪವಾದ ಭಕ್ತಿಲಾಭವಾಗಬೇಕೆಂದು ಪರೀಕ್ಷಿದ್ರಾಜರು ಉತ್ಸುಕರಾಗಿ ಪ್ರಶ್ನೆ ಮಾಡಿದ್ದಾರೆ.

**ಶೃಣ್ವತಃ ಶ್ರದ್ಧಯಾ ನಿತ್ಯಂ ಗೃಣತಶ್ಚಸ್ವಚೇಷ್ಟಿತಂ ।**
**ಕಾಲೇನಾನತಿ ದೀರ್ಘೇಣ ಭಗವಾನ್ವಿಶತೇ ಹೃದಿ ॥ ೪ ॥**

ಸ್ವಚೇಷ್ಟಿತಂ = ತನ್ನ ದಿವ್ಯಲೀಲಾ ಪ್ರಸಂಗಗಳನ್ನು; ನಿತ್ಯಂ = ಅನುದಿನವೂ; ಶ್ರದ್ಧಯಾ = ವಿಶ್ವಾಸದಿಂದ; ಶೃಣ್ವತಃ = ಶ್ರವಣ ಮಾಡುವ; ಗೃಣತಃ ಚ = ಮನನವನ್ನೂ ಮಾಡುವವರ; ಹೃದಿ = ಹೃದಯ ಮಂದಿರದಲ್ಲಿ; ಭಗವಾನ್ = ಭಗವಂತನು; ನ ಅತಿ ದೀರ್ಘೇಣ ಕಾಲೇನ = ಶ್ರೀಘ್ರದಲ್ಲಿಯೇ; ವಿಶತೇ = ಪ್ರವೇಶ ಮಾಡುತ್ತಾನೆ.

ಬಿಂಬರೂಪೀ ಪರಮಾತ್ಮ ಅನಾದಿ ನಿತ್ಯಬಂಧುವಾಗಿರುವುದರಿಂದ ಅವನು ಹೊಸದಾಗಿ ಹೃದಯಮಂದಿರಕ್ಕೆ ಬರಬೇಕಾಗಿಲ್ಲ. ಆದರೆ, ಭಕ್ತಿಯನ್ನು ಯಥಾಯೋಗ್ಯವಾಗಿ ಪೂರ್ಣಮಾಡಿಕೊಂಡವರಿಗೆ ತಾನು ಹೃದಯದಲ್ಲೇ ಇರುವುದನ್ನು ತೋರಿಸಿಕೊಂಡು ಮನಶ್ಶಾಂತಿಯನ್ನು ನೀಡುತ್ತಾನೆ ಎಂಬುದು ಇದರ ಅಭಿಪ್ರಾಯ.

**ಪ್ರವಿಷ್ಟಃ ಕರ್ಣರಂಧ್ರೇಣ ಸ್ವಾನಾಂಭಾವ ಸರೋರುಹಂ ।**
**ಧುನೋತಿ ಶಮಲಂ ಕೃಷ್ಣಃ ಸಲಿಲಸ್ಯಯಥಾಶರತ್ ॥ ೫ ॥**

ಕರ್ಣರಂಧ್ರೇಣ = ಶ್ರವಣೇಂದ್ರಿಯವಾದ ಕಿವಿಯ ಮೂಲಕ; ಸ್ವಾನಾಂ = ತನ್ನ ಭಕ್ತರ; ಭಾವ ಸರೋರುಹಂ = ಅಷ್ಟದಳ ಹೃತ್ಕಮಲದಲ್ಲಿ ಪ್ರಕಟವಾಗುವ ಮನೋಮಂದಿರವನ್ನು; ಪ್ರವಿಷ್ಟಃ = ಪ್ರವೇಶಿಸಿ; ಯಥಾ = ಹೇಗೆ; ಶರತ್= ಶರದೃತುವು; ಸಲಿಲಸ್ಯ = ನೀರಿನ; ಶಮಲಂ = ಕೊಳೆಯನ್ನು; ಧುನೋತಿ = ಕಳೆದು ಬಿಡುವುದೋ, ಹಾಗೆ; ಕೃಷ್ಣಃ = ಶ್ರೀಕೃಷ್ಣನು; ಶಮಲಂ = ತನ್ನವರ ಪಾಪಕಾರಣಗಳನ್ನು; ಧುನೋತಿ = ಕಳೆದುಬಿಡುತ್ತಾನೆ.

ಹೃದಯದಲ್ಲಿ ಭಗವದಪರೋಕ್ಷವಾಗುವವರೆಗೆ ದೇವದಾನವರ ಹೋರಾಟರೂಪವಾದ ಮನಸ್ಸಿನ ಕಶ್ಮಲ ಉಳಿದಿರುತ್ತದೆ. ದೇವತೆಗಳ ಪಕ್ಷ ಜಯಿಸಿದರೂ ದೈತ್ಯರ ಪಕ್ಷ ಮತ್ತೆ ಮತ್ತೆ ತಲೆ ಎತ್ತುತ್ತಲೇ ಇರುತ್ತದೆ – ಮಳೆಗಾಲದ ನೀರು ತುಂಬಿದ ಸರೋವರದಲ್ಲಿ ಕೊಳೆಯ ಅಂಶಗಳು ಕೆಳಗೆ ಮೇಲೆ ನೀರಿನಲ್ಲಿ ಸಂಚರಿಸುತ್ತಲೇ ಇರುವಂತೆ. ಭಗವದಪರೋಕ್ಷವೆಂಬುದು ಶರದೃತು ಬಂದಂತೆ. ಆ ಕಾಲದ ನಿಮಿತ್ತದಿಂದ ನೀರಿನ ಕೊಳೆಯೆಲ್ಲಾ ಕೆಳಗಿಳಿದು ಅಡಗುವುದರಿಂದ ಸರೋವರದ ನೀರು ಸ್ವಚ್ಛವಾಗಿ ಕಂಗೊಳಿಸುವಂತೆ, ಅಪರೋಕ್ಷ ನೀಡಿದ ಭಗವಂತನ ಸಂಕಲ್ಪ ಮಾತ್ರದಿಂದ, ಕರ್ಮಬೆಳೆದು ಜನ್ಮ ಜನ್ಮಾಂತರಗಳಿಗೆ ಕಾರಣವಾಗುತ್ತಿದ್ದ ಮನಸ್ಸಿನ ಗೊಂದಲವೆಲ್ಲಾ ಕಳೆದು ಅದು ನಿರ್ಮಲವಾಗುತ್ತದೆ. ಸಂಚಿತ ಆಗಾಮಿಗಳ ಕಾಟ ನಿಂತು ಹೋಗುತ್ತದೆ. ಪ್ರಾರಬ್ಧಶೇಷವು ಜನ್ಮಾಂತರಗಳಿಗೆ ಕಾರಣವಾಗದೆ, ಭೋಗದಿಂದ ಮುಗಿದುಹೋಗುತ್ತದೆ. ಕಟ್ಟಕಡೆಗೆ ಲಿಂಗದೇಹದ ವ್ಯಾಪಾರವೆಲ್ಲಾ ತಟಸ್ಥವಾಗಿ ಭಗವದಿಚ್ಛಾರೂಪವಾದ ಜೀವನ್ಮುಕ್ತಾವಸ್ಥೆ ಪ್ರಾಪ್ತವಾಗುತ್ತದೆ. ಇದು, ''ನಾನು'' ಹೋಗಿ, ''ನೀನು'' ಉಳಿಯುವ ಪರಿಸ್ಥಿತಿ.

**ಧೌತಾತ್ಮಾಪುರುಷಃ ಕೃಷ್ಣಪಾದಮೂಲಂ ನಮುಂಚತಿ ।**
**ಮುಕ್ತ ಸರ್ವಪರಿಕ್ಲೇಶಃ ಪಾಂಥಃ ಸ್ವಶರಣಂ ಯಥಾ ॥ ೬ ॥**

ಪಾಂಥಃ = ಕಾರ್ಯನಿಮಿತ್ತದಿಂದ ದೂರದೇಶಗಳಲ್ಲಿ ಸಂಚಾರ ಮಾಡಿ ಮಾಡಿ ಬಳಲಿದವನು; ಸ್ವಶರಣಂ = ತನ್ನ ಮನೆಯನ್ನು ಯಥಾ = ಹೇಗೋ ಹಾಗೆ; ಧೌತಾತ್ಮಾ = ಪಾಪಗಳಿಂದ ಮುಕ್ತನಾದ; ಮುಕ್ತ ಸರ್ವಪರಿಕ್ಲೇಶಃ = ಪಾಪಸಂಬಂಧವ ಎಲ್ಲಾ ದುಃಖಗಳಿಂದಲೂ ದೂರನಾದ; ಪುರುಷಃ = ಜೀವನು; ಕೃಷ್ಣಪಾದ ಮೂಲಂ = ಸ್ವಗೃಹ ಸದೃಶವಾದ ಭಗವಂತನ ಪಾದದಾಶ್ರಯವನ್ನು; ಸಮುಂಚತಿ = ಬಿಡುವುದಿಲ್ಲ.

ವ್ಯಾಪಾರ ದೃಷ್ಟಿಯಿಂದಾಗಲೀ, ಲೋಕಾನುಭವ ದೃಷ್ಟಿಯಿಂದಾಗಲೀ, ಬೇರೆ ಯಾವ ಕಾರಣದಿಂದಾಗಲೀ ದೂರಸಂಚಾರ ಮಾಡಿ ಬಂದವರಿಗೆ ಸ್ವದೇಶ, ಸ್ವಗ್ರಾಮ, ಸ್ವಗೃಹಗಳನ್ನು ಕಂಡಾಗ ಆಗುವ ತೃಪ್ತಿ, ಸಂತಸಗಳನ್ನು ಅನುಭವಿಸಿ ತಿಳಿಯಬೇಕು. "Home, sweet home" ಇದು ಒಳ್ಳೆಯ ದೃಷ್ಟಾಂತ, ಭಗವಂತನ ಪಾದಮೂಲದ ಸುಖವನ್ನು ಅರ್ಥಮಾಡಿಕೊಳ್ಳುವುದಕ್ಕೆ. ದೃಷ್ಟಾಂತವನ್ನು ಇಷ್ಟಕ್ಕೆ ಮಾತ್ರ ಮಿತಿಗೊಳಿಸಬೇಕು; ಅತಿಯಾಗಿ ಹಿಗ್ಗಿಸಬಾರದು.

**ಯದಧಾತುಮತೋಬ್ರಹ್ಮನ್ ದೇಹಾರಂಭೋಽಸ್ಯಧಾತುಭಿಃ ।**
**ಯದೃಚ್ಛಯಾ ಹೇತುನಾವಾ ಭವಂತೋ ಜಾನತೇಯಥಾ ॥ ೭ ॥**

ಬ್ರಹ್ಮನ್ = ಬ್ರಹ್ಮವೇತ್ತರಾದ ಶ್ರೀಶುಕಾಚಾರ್ಯರೇ; ಅಧಾತುಮತಃ = ಪ್ರಾಕೃತವಸ್ತುಗಳಿಂದ ಕೂಡಿರದ; ಅಸ್ಯ = ಕೇವಲ ಚೇತನಸ್ವರೂಪನಾದ ಜೀವನಿಗೆ; ಧಾತುಭಿಃ = ಪ್ರಾಕೃತ ವಸ್ತುಗಳಿಂದ; ದೇಹಾರಂಭಃ = ದೇಹ ಉಂಟಾಗುವಿಕೆಯು; ಯತ್ = ಯಾವುದುಂಟೋ ಆ ಕ್ರಿಯೆಯು; ಭವಂತಃ = ಮಹಾತ್ಮರಾದ ನೀವು; ಯಧಾಜಾನತೇ = ಹೇಗೆ ತಿಳಿದಿರುವಿರೋ ಹಾಗೆ; ಯದೃಚ್ಛಯಾ = ಭಗವಂತನ ಸಂಕಲ್ಪಮಾತ್ರದಿಂದಲೋ; ವಾ = ಅಥವ; ಹೇತುನಾ = ಬೇರೆ ಕಾರಣಗಳಿಂದಲೋ ?

ಪರೀಕ್ಷಿದ್ರಾಜರಂತಹ ಉತ್ತಮಜ್ಞಾನಿಗಳಿಗೆ ಇಂತಹ ವಿಚಾರಗಳು ತಿಳಿಯದೆಂದಲ್ಲ; ತಿಳಿದಿದ್ದರೂ ಬಗೆಬಗೆಯ ಸಂಶಯಗಳು ಆಗಿಂದಾಗ್ಗೆ ಕಾಡುವುದು ಸಹಜ ಈ ಕಾರಣದಿಂದಲೇ ಅಂತಹ ಸಂಶಯಗಳನ್ನು ನಿವಾರಿಸುವುದಕ್ಕಾಗಿ, ಚತುರ್ಮುಖ ಬ್ರಹ್ಮದೇವರೇ ಸಾಮಾನ್ಯರಂತೆ ವಿವಿಧ ಪ್ರಶ್ನೆಗಳನ್ನು ಕೇಳಿರುವುದನ್ನೂ ಭಗವಂತನೇ ನೇರವಾಗಿ ಉತ್ತರಗಳನ್ನು ಹೇಳಿರುವುದನ್ನೂ ವಿಷ್ಣುರಹಸ್ಯ ಪುರಾಣವಲ್ಲಿ ನೋಡಬಹುದು.

**ಆಸೀದ್ಯದುದರಾತ್ಪದ್ಮಂ ಲೋಕಸಂಸ್ಥಾನ ಲಕ್ಷಣಂ ।**
**ಯಾವಾನಯಂ ವೈ ಪುರುಷ ಇಯತ್ತಾವಯವೈಃ ಪೃಥಕ್ ।**
**ತಾವಾನಸಾವಿತಿ ಪ್ರೋಕ್ತಸ್ತಥಾವಯವವಾನಿವ ॥ ೮ ॥**

ಉದರಾತ್= ಬ್ರಹ್ಮಾಂಡವನ್ನು ಸೃಷ್ಟಿಸಿ, ಅಂಡೋದಕದಲ್ಲಿ ಶೇಷಶಾಯಿಯಂತೆ ಮಲಗಿದ ಯಾರನಾಭಿಯಿಂದ; ಲೋಕಸಂಸ್ಥಾನಲಕ್ಷಣಂ= ಹದಿನಾಲ್ಕು ಲೋಕಗಳಸೃಷ್ಟಿಯ ಲಕ್ಷಣವನ್ನು ಸೂಚಿಸುವ; ಯತ್ ಪದ್ಮಂ ಆಸೀತ್= ಯಾವ ಹದಿನಾಲ್ಕು ದಳವುಳ್ಳ ಕಮಲ ಪುಷ್ಪವು ಆವಿರ್ಭವಿಸಿತೋ ಅದನ್ನನುಕರಿಸಿ ಪೃಥಕ್ ಅವಯವೈಃ= ಬೇರೆಬೇರೆ ಅವಯವಗಳಿಂದ ಕೂಡಿಕೊಂಡು; ಅಯಂ ಪುರುಷಃ= ವಿರಾಟ್ ಪುರುಷನೆನಿಸಿದ ಭಗವಂತನು; ಯಾವಾನ್ ಇಯತ್ತವಾನ್= ಯಾವ ಆಕಾರಮಿತಿಯುಳ್ಳವನೋ; ಅಸೌ= ಪ್ರಸಿದ್ಧನಾದ ಆವಿರಾಟ್ಪುರುಷನು; ಅವಯವವಾನ್ ಇವ= ಸ್ವಷ್ಟಾವಯವಗಳಿಂದ ಕೂಡಿರುವವನಂತೆ; ತಾವಾನ್= ಅಷ್ಟುಮಿತಿಗೊಳಗಾದವನು; ಇತಿ= ಹೀಗೆಂದು; ಪ್ರೋಕ್ತಃ= ವರ್ಣಿಸಲ್ಪಟ್ಟಿರುವನು; ವೈ= ಅಲ್ಲವೇ ? ಹಾಗೆ ತಿಳಿಯುವುದು ಪಾಪಕರವಲ್ಲವೆ ?

ಭಗವಂತನ ಆಕಾರವನ್ನು ಅಧಿಕರಿಸಿ ಚಿಂತನೆಯನ್ನು ಮಾಡುವಾಗ ಮನಸ್ಸಿನಲ್ಲಿ ಯಾವ ತೊಡಕಿನ ಪ್ರಶ್ನೆಯುಂಟಾಗುವುದೆಂಬುದನ್ನು ಪರೀಕ್ಷಿದ್ರಾಜರು ಎತ್ತಿ ಹೇಳಿದ್ದಾರೆ.

**ಅಜಃ ಸೃಜತಿ ಭೂತಾನಿ ಭೂತಾತ್ಮಾಯದನುಗ್ರಹಾತ್ ।**
**ದದೃಶೇಯೇನ ತದ್ರೂಪಂ ನಾಭಿಪದ್ಮಸಮುದ್ಭವಃ ॥ ೯ ॥**

ನಾಭಿಪದ್ಮಸಮುದ್ಭವಃ= ಶ್ರೀಮನ್ನಾರಾಯಣನ ನಾಭಿಕಮಲದಲ್ಲಿ ಜನ್ಮವನ್ನು ಪಡೆದ; ಭೂತಾತ್ಮಾ= ತಾನು ಸೃಷ್ಟಿಸಿದ ಅಹಂಕಾರಾದಿ ತತ್ವಗಳಲ್ಲಿಯೂ ಜೀವರಲ್ಲಿಯೂ ಅಂತರ್ಯಾಮಿಯಾದ; ಅಜಃ= ಸರ್ವವಿಲಕ್ಷಣನಾದ ಅನಾದಿಪುರುಷನಿಂದ ಜಾತನಾದ ಬ್ರಹ್ಮನು; ಯದನುಗ್ರಹಾತ್= ಯಾವ ಆದಿಕಾರಣಕರ್ತನ ಅನುಗ್ರಹದಿಂದ; ಭೂತಾನಿ= ತತ್ವಗಳನ್ನೂ ತತ್ವೇಶರನ್ನೂ ಸೃಜತಿ= ಸೃಷ್ಟಿಸುವನೋ; ತದ್ರೂಪಂ= ಆ ಆದಿಪುರುಷನ ರೂಪವನ್ನು ಯೇನ= ಯಾವ ಪ್ರಕಾರದಿಂದ; ದದೃಶೇ = ಕಂಡನು ?

ಬ್ರಹ್ಮಾಂಡದ ಹೊರಗಿನ ಜಲಾವರಣದಲ್ಲಿ ಸಹಸ್ರವರ್ಷಗಳ ಕಾಲ ಲಕ್ಷ್ಮೀ ಸಮೇತನಾಗಿ ಶಯನಮಾಡಿ ಬ್ರಹ್ಮಾಂಡವನ್ನು ಸೃಷ್ಟಿಸಿ, ಸೃಷ್ಟಿಯಲ್ಲಿ ತರಬೇಕಾದ ಸಕಲವನ್ನೂ ತನ್ನುದರದಲ್ಲಿಟ್ಟುಕೊಂಡು ಆ ಶ್ರೀಮನ್ನಾರಾಯಣನು ಅಂಡೋದಕದಲ್ಲಿ ಮತ್ತೆ ಕೆಲವು ಕಾಲಶಯನ ಮಾಡಿದ ನಂತರ ತನ್ನ ನಾಭಿಕಮಲದಿಂದ ಬ್ರಹ್ಮನನ್ನು ಪಡೆದನು. ಎಲ್ಲೆಲ್ಲಿಯೂ ಕತ್ತಲೆತುಂಬಿಕೊಂಡು ಗರ್ಭೋದಕದ (ಅಂಡೋದಕದ) ತುಂತುರುಗಳು ಸಿಡಿಯುತ್ತಿರಲು, ಭಯಚಕಿತನಾದವನಂತೆ, ಬ್ರಹ್ಮನು

ಆಲೋಚನೆಯಲ್ಲಿ ತೊಡಗಿ, ಅಶರೀರವಾಣಿಯಂತೆ ತಪಸ್ಸನ್ನಾಚರಿಸಿ, ತನ್ನ ಜನಕನನ್ನು ಕಂಡನೆಂಬ ವಿಚಾರವಾದ ಪ್ರಶ್ನೆಯಿದು.

**ಸಚಾಪಿ ಯತ್ರ ಪುರುಷೋ ವಿಶ್ವಸ್ಥಿತ್ಯುದ್ಭವಾಪ್ಯಯಃ ।**
**ಮುಕ್ತ್ವಾತ್ಮಮಾಯಾಂ ಮಾಯೇಶಃ**
**ಶೇತೇಸರ್ವಗುಣಾಶ್ರಯಃ ॥ ೧೦ ॥**

ಸರ್ವಗುಣಾಶ್ರಯಃ = ಸ್ವಯಂ ಸ್ವರೂಪಭೂತ ಕಲ್ಯಾಣ ಗುಣಗಳ ಗಣಿಯಾಗಿ, ಸೃಷ್ಟಿಯಲ್ಲಿ ಬರಬೇಕಾದ ಗುಣಗಳಿಗೆ ಆಶ್ರಯಾನಾಗಿ; ವಿಶ್ವಸ್ಥಿತಿ, ಉದ್ಭವ, ಅಪ್ಯಯಃ = ವಿಶ್ವದ ಸ್ಥಿತಿ, ಸೃಷ್ಟಿ, ಪ್ರಳಯಗಳಿಗೆ ಕಾರಣನಾದ; ಸಃ ಚ ಪುರುಷಃ = ಆ ಲಕ್ಷ್ಮೀಪತಿಯಾದ ಪುರುಷನು; ಮಾಯೇಶಃ = ಬಂಧಕಮಾಯೆಗೆ ಆಶ್ರಯನಾಗಿದ್ದುಕೊಂಡು; ಆತ್ಮ ಮಾಯಾಂ = ಸ್ವೇಚ್ಛಾರೂಪವಾದ ತನ್ನ ಆವರಕಶಕ್ತಿಯನ್ನು ; ಮುಕ್ತ್ವಾ = ಅಡಗಿಸಿಕೊಂಡು; ಯತ್ರ = ಎಲ್ಲಿ; ಅಪಿ ಶೇತೇ = ಇರತಕ್ಕವನಾಗಿದ್ದಾನೆ ?

ಇದು ಸೃಷ್ಟ್ಯಾದಿಗಳಿಗೆ ಕಾರಣವಾದ ಭಗವಂತನ ಮೂಲರೂಪದ ವಿಷಯಕವಾದ ಪ್ರಶ್ನೆ.

**ಪುರುಷಾವಯವೈರ್ಲೋಕಾಃ ಸಪಾಲಾಃ ಪೂರ್ವಕಲ್ಪಿತಾಃ ।**
**ಲೋಕೈರಮುಷ್ಯಾವಯವಾಃ ಸಪಾಲೈರಿತಿ ಶುಶ್ರುಮ ॥ ೧೧ ॥**

ಪುರುಷಾವಯವೈಃ = ಈ ಆದಿಪುರುಷನ ಅವಯವಗಳಿಂದ; ಸಪಾಲಾಃ = ಅಧಿದೇವತೆಗಳಿಂದ ಕೂಡಿದ; ಲೋಕಾಃ = ಹದಿನಾಲ್ಕು ಲೋಕಗಳು; ಪೂರ್ವೇ = ಮೊದಲು; ಕಲ್ಪಿತಾಃ = ಸೃಷ್ಟವಾದುವು; ಅಮುಷ್ಯ = ಈ ಪುರುಷನ; ಅವಯವಾಃ = ಶರೀರಾವಯವಗಳು; ಸಪಾಲೈಃ = ಅಧಿದೇವತೆಗಳಿಂದ ಕೂಡಿದ; ಲೋಕೈಃ = ಲೋಕಗಳಿಂದ; ಕಲ್ಪಿತಾಃ = ಆಗಿರುವುವು; ಇತಿ = ಹೀಗೆಂದು; ಶುಶ್ರುಮ = ನಾವು ಕೇಳಿದ್ದೇವೆ.

ಆದಿಪುರುಷನ ಅವಯವಗಳಿಂದ ಲೋಕಗಳು ಸೃಷ್ಟವಾದುವೆಂದೂ, ಲೋಕಗಳು ಅವನ ಅವಯವಗಳೆಂದೂ ಹೇಳಿದಾಗ ಉಂಟಾಗುವ ಸಂಶಯವನ್ನು ಪರಿಹರಿಸಿಕೊಳ್ಳಲು ಈ ಪ್ರಶ್ನೆಯನ್ನು ಕೇಳಿದ್ದಾರೆ. ಬ್ರಹ್ಮನೇ ಜಗದ್ರೂಪವಾಗಿ ಪರಿಣಮಿಸಿರುವನೆಂಬ ತಪ್ಪುಕಲ್ಪನೆಯೇ ಬರಬಹುದಾದ ಸಂಶಯ. ಆದಿಪುರುಷನಿಂದ ಅಭಿನ್ನಗಳಾದ ಸ್ವರೂಪಾವಯವಗಳು ಲೋಕಗಳಸೃಷ್ಟಿ ಸ್ಥಿತಿಗಳಿಗೆ ನಿಮಿತ್ತಕಾರಣಗಳೆಂದೂ,

ಲೋಕಗಳು ಅವನಿಗೆ ಪ್ರತಿಮಾಸ್ಥಾನೀಯಗಳೆಂದೂ ತಿಳಿಯಬೇಕಾದ ಆವಶ್ಯಕತೆಯು ಪ್ರಶ್ನೆಯಲ್ಲಿ ಅಡಗಿದೆ.

**ಯಾವಾನ್ಕಲ್ಪೋ ವಿಕಲ್ಪೋವಾಯಥಾಕಾಲೋನು ಮೀಯತೇ ।**
**ಭೂತಭವ್ಯಭವಚ್ಛಬ್ದ ಆಯುರ್ಮಾನಂಚಯತ್ಕೃತಂ ॥ ೧೨ ॥**

ಕಲ್ಪಃ = ದ್ವಿಪರಾರ್ಧ ಸಂಜ್ಞಿತವಾದ ಬ್ರಹ್ಮಕಲ್ಪವೂ; ವಾ = ಮತ್ತು; ವಿಕಲ್ಪಃ = ಶ್ವೇತವರಾಹಾದಿ ಬಹ್ಮನದಿನಕಲ್ಪಗಳು ಮತ್ತು ಮನುಕಲ್ಪಗಳು; ಯಾವಾನ್= ಯಾವ ಯಾವ ಮಿತಿಯುಳ್ಳವು ? ಆಯುರ್ಮಾನಂ= ಆಯುಷ್ಯಗಳ ಪರಿಮಿತಿಯು; ಯತ್ಕೃತಂ= ಯಾವುದರಿಂದ ನಿರ್ಣಯವಾಗುವುದೋ ಅಂತಹ; ಭೂತಭವ್ಯಭವತ್ ಶಬ್ದಃ= ಭೂತ ಭವಿಷ್ಯ, ವರ್ತಮಾನಗಳೆಂದು ಕರೆಸಿಕೊಳ್ಳುವ; ಕಾಲಃ ಚ= ಕಾಲವಾದರೂ; ಯಥಾ = ಯಾವರೀತಿಯಾಗಿ; ಅನುಮೀಯತೇ = ತಿಳಿಯಲ್ಪಡುತ್ತದೆ ?

ಕಾಲದ ಸ್ವರೂಪ ನಿರ್ಣಯದ ಆವಶ್ಯಕತೆಯನ್ನು ಒಳಗೊಂಡ ಪ್ರಶ್ನೆಯಿದು.

**ಕಾಲಸ್ಯಾನುಗತಿರ್ಯಾತು ಲಕ್ಷ್ಯತೇಣ್ವೀಮಹತ್ಯಪಿ ।**
**ಯಾವತೀಃ ಕರ್ಮಗತಯೋ ಯಾದೃಶೀರ್ದ್ವಿಜ ಸತ್ತಮ ॥ ೧೩ ॥**

ದ್ವಿಜಸತ್ತಮ = ಬ್ರಹ್ಮಕುಲವರೇಣ್ಯ; ಅಣ್ವೀ = ಪರಮಾಣು, ಲವ, ತೃಟೀಇತ್ಯಾದಿ ಸಂಜ್ಞಿತವಾದ; ಮಹತೀ ಅಪಿ= ದಿನಕಲ್ಪ, ಬ್ರಹ್ಮಕಲ್ಪ ಸಂಜ್ಞಿತವಾದ ಯಾಕಾಲಸ್ಯ ಅನುಗತಿಃ ತು = ಯಾವ ಕಾಲದ ಕ್ರಮವಾದ ಮುಂದುವರಿಕೆಯು; ಲಕ್ಷ್ಯತೇ = ತಿಳಿಯಲ್ಪಡುವುದೋ ಅದು; ಯಾವತೀಃ = ಎಷ್ಟೆಷ್ಟು ಪ್ರಮಾಣ ಉಳ್ಳವುಗಳು ? ಕರ್ಮಗತಯಃ = ಕಾಲವನ್ನವಲಂಬಿಸಿ ನಡೆಯುವಕರ್ಮದ ವಿಧಾನಗಳು; ಯಾದೃಶೀಃ = ಯಾವ ಬಗೆಯಾದವುಗಳು ?

ಕಾಲದ ಎಣಿಕೆಯ ಪ್ರಕಾರಗಳನ್ನೂ, ಕಾಲದಿಂದ ಪಕ್ವವಾಗುವ ಕರ್ಮಗಳ ಸಂಬಂಧವನ್ನೂ ಕುರಿತು ಪರೀಕ್ಷಿದ್ರಾಜರು ಪ್ರಶ್ನೆಮಾಡಿದ್ದಾರೆ. ಕಾಲದ ಲಕ್ಷಣ ಮತ್ತು ಅದರ ನಡೆಯನ್ನು ತಿಳಿಯುವುದು ಅತ್ಯಾವಶ್ಯಕ. ಕಾಲವೆಂಬ ಭಾವನೆಯೇ ಅತಿಮುಖ್ಯವಾದ ಪ್ರಶ್ನೆಗೆ ಎಡೆಕೊಡುವಂತಹುದು.

**ಯಸ್ಮಿನ್ಕರ್ಮಸಮವಾಯೋ ಯಥಾಯೇನೋಪಗೃಹ್ಯತೇ ।**
**ಗುಣಾನಾಂಗುಣಿನಾಂಚೈವ ಪರಿಮಾಣಂ ಸುವಿಸ್ತರಂ ॥ ೧೪ ॥**

ಯಸ್ಮಿನ್ = ಯಾವಾ ಯಾವ ಜೀವರಲ್ಲಿ; ಕರ್ಮಸಮವಾಯಃ = ಕಾಲಕರ್ಮಗಳ ಸಂಬಂಧವು; ಗುಣಾನಾಂ = ಸತ್ವಾದಿಗುಣಗಳ; ಚ = ಮತ್ತು; ಗುಣಿನಾಂ ಏವ = ಬ್ರಹ್ಮಾದಿ ಜೀವರುಗಳ; ಪರಿಮಾಣಂ = ಸಾಮರ್ಥ್ಯವಿಶೇಷಗಳು; ಸುವಿಸ್ತರಂ = ಸ್ವಷ್ಟವಾಗಿ; ಯಥಾ = ಹೇಗೆ; ಯೇನ =ಯಾವ ಸಹಾಯದಿಂದ; ಉಪಗೃಹ್ಯತೇ = ತಿಳಿಯಲ್ಪಡುತ್ತದೆ ?

ಕರ್ಮಪಥದಲ್ಲಿ ಸಾಗಬೇಕಾಗಿರುವ ಬ್ರಹ್ಮಾದಿ ತೃಣ ಜೀವರಲ್ಲಿ ಸಾಮರ್ಥ್ಯಗಳ ತಾರತಮ್ಯವಿರುವುದರಿಂದ ಅವರ ಕರ್ಮಗತಿಗಳಿಗೂ ಕಾಲಗತಿಗೂ ಇರುವ ಸಂಬಂಧವನ್ನು ತಿಳಿಯಬೇಕಾದುದು ಅವಶ್ಯಕ.

**ಭೂ ಪಾತಾಳ ಕಕುಬ್ ವ್ಯೋಮ ಗ್ರಹನಕ್ಷತ್ರಭೂಭೃತಾಂ ।**
**ಸರಿತ್ಸಮುದ್ರ ದ್ವೀಪಾನಾಂ ಸಂಭವಂಚೈತದೋಕಸಾಂ ॥ ೧೫ ॥**

ಏತತ್ ಭೂಭೃತಾಂ ಸರಿತ್ ಸಮುದ್ರ ದ್ವೀಪಾನಾಂ = ಈ ಪರ್ವತ ನದೀ ಸಮುದ್ರ, ದ್ವೀಪಗಳ, ಓಕಸಾಂ = ಆಶ್ರಯಸ್ಥಾನಗಳಾದ ಭೂಪಾತಾಳ ಕಕುಬ್ ವ್ಯೋಮ = ಭೂಲೋಕ, ಪಾತಾಳಾದಿ ಲೋಕಗಳು, ದಿಕ್ಕುಗಳು,ಆಕಾಶ; ಗ್ರಹನಕ್ಷತ್ರ =ಗ್ರಹಗಳು, ನಕ್ಷತ್ರಗಳು ಈ ಎಲ್ಲದರ; ಸಂಭವಂ ಚ = ಉತ್ಪತ್ತಿಯನ್ನೂ; ತಿಳಿಸಿ

ಇಲ್ಲಿಂದ ೨೪ ನೇ ಶ್ಲೋಕ ಪೂರ್ತಿ, ಪ್ರಶ್ನೆಗಳಿಗೆಲ್ಲಾ ಉತ್ತರ ಹೇಳಬೇಕೆಂದು ಪರೀಕ್ಷಿದ್ರಾಜರು ಶ್ರೀ ಶುಕಾಚಾರ್ಯರನ್ನು ಪ್ರಾರ್ಥಿಸಿದ್ದಾರೆ.,

**ಪ್ರಮಾಣಮಂಡಕೋಶಸ್ಯ ಬಾಹ್ಯಾಭ್ಯಂತರ ವಸ್ತುನಃ ।**
**ಮಹತಾಂಚಾನು ಚರಿತಂ ವರ್ಣಾಶ್ರಮ ವಿನಿರ್ಣಯಂ ॥ ೧೬ ॥**

ಅಂಡಕೋಶಸ್ಯ = ಬ್ರಹ್ಮಾಂಡ ವಿವರದ; ಬಾಹ್ಯ ಅಭ್ಯಂತರವಸ್ತುನಃ = ಬ್ರಹ್ಮಾಂಡದ ಒಳಹೊರಗಿನ ವಸ್ತುಗಳ; ಪ್ರಮಾಣಂ = ವಿಸ್ತಾರಗಳನ್ನೂ; ಮಹತಾಂ = ಭಗವದ್ಭಕ್ತರಾದ ಮಹಾನುಭವರ; ಅನುಚರಿತಂ = ಚರಿತ್ರೆಗಳನ್ನೂ; ವರ್ಣಾಶ್ರಮ ವಿನಿರ್ಣಯಂ ಚ = ಚಾತುರ್ವರ್ಣ್ಯಗಳ, ಚತುರಾಶ್ರಮಗಳ, ಬ್ರಹ್ಮಚರ್ಯ, ಗಾರ್ಹಸ್ಥ, ಯತಿ, ವಾನಪ್ರಸ್ಥ) ಇವುಗಳ ಶಾಸ್ತ್ರೀಯ ನಿಬಂಧನೆಗಳನ್ನೂ; ತಿಳಿಸಿ.

**ಅವತಾರಾನುಚರಿತಂ ಯದಾಶ್ಚರ್ಯತಮಂ ಹರೇಃ ।**
**ಯುಗಾನಿಯುಗಮಾನಂ ಚ ಧರ್ಮೋಯಶ್ಚ ಯುಗೇಯುಗೇ ॥೧೭ ॥**

ಯತ್ ಆಶ್ಚರ್ಯತಮಂ = ಯಾವವು ಅತ್ಯಂತ ಆಶ್ಚರ್ಯಜನಕಗಳೋ; ಹರೇಃ ಅವತಾರಾನುಚರಿತಂ = ಅಂತಹ ಶ್ರೀಹರಿಯ ಅವತಾರ ಲೀಲಾಕ್ರಿಯೆಗಳನ್ನೂ; ಯುಗಾನಿ = ಯುಗಗಳ ವಿಚಾರವನ್ನೂ; ಚ = ಮತ್ತು; ಯುಗಮಾನಂ = ಯುಗಗಳ ಕಾಲಮಾನಗಳನ್ನೂ; ಚ = ಮತ್ತು ಯುಗೇ ಯುಗೇ = ಬೇರೆ ಬೇರೆ ಯುಗಗಳಲ್ಲಿ; ಯಃಧರ್ಮಃ = ಆಚರಿಸಬೇಕಾದ ಧರ್ಮಗಳು ಯಾವುವು ಎಂಬುದನ್ನೂ; (ತಿಳಿಸಿರಿ).

**ನೃಣಾಂ ಸಾಧಾರಣೋ ಧರ್ಮಃ ಸವಿಶೇಷಶ್ಚಯಾದೃಶಃ ।**
**ಶ್ರೇಣೀನಾಂ ರಾಜರ್ಷೀಣಾಂ ಚ ಧರ್ಮಃ ಕೃಚ್ಛ್ರೇಷು**
**ಜೀವತಾಂ ॥ ೧೮ ॥**

ನೃಣಾಂ = ಮನುಷ್ಯರ; ಸಾಧಾರಣಃ ಧರ್ಮಃ =ಜಾತಿನಿಮಿತ್ತವಾದ ಧರ್ಮಗಳು; ಚ =ಮತ್ತು; ಸವಿಶೇಷಃ = ಅಹಿಂಸಾದಿ ವಿಶೇಷ ಧರ್ಮಗಳು; ಯಾದೃಶಃ = ಯಾವ ಪ್ರಕಾರವಾದವು ?ಶ್ರೇಣೀನಾಂ = ಯೋಧರ; ರಾಜರ್ಷೀಣಾಂ = ಜ್ಞಾನಿಗಳಾದ ಪ್ರಿಯವ್ರತಾದಿ ಚಕ್ರವರ್ತಿಗಳ; ಚ = ಮತ್ತು; ಕೃಚ್ಛ್ರೇಷು ಜೀವತಾಂ = ಕಷ್ಟಪರಿಸ್ಥಿತಿಯಲ್ಲಿ ಬಾಳಬೇಕಾಗಿರುವವರ; ಧರ್ಮಃ = ಧರ್ಮಗಳು; ಯಾದೃಶಃ = ಯಾವ ಪ್ರಕಾರದವು ?

ಈ ಕಲಿಯುಗದಲ್ಲಿ ಬಾಳಬೇಕಾಗಿರುವವರು ಇಂತಹ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ತಿಳಿದಿರಬೇಕು. ಏಕೆಂದರೆ ಕೃತಯುಗದಲ್ಲಿ ಅನ್ಯಯುಗಗಳ ಧರ್ಮವು ಹೇಗೆ ಪಾಪಕರವೋ ಹಾಗೆ ಕಲಿಯುಗದಲ್ಲಿ ಕೃತಾದಿಯುಗ ಧರ್ಮಚರಣೆ.ಯು ಕೇವಲ ಕ್ಲೇಶಕರವಾಗಿ, ಜ್ಞಾನಭಕ್ತಿ ವೈರಾಗ್ಯ ಸಂಪಾದನೆಗೆ ಅಡ್ಡಿಯನ್ನೊಡ್ಡಬಹುದು. ಜ್ಞಾನಪೂರ್ವಕವಾಗಿ ಜಾಣತನದಿಂದ ಆಚರಿಸುವ ಧರ್ಮವು ಲಾಭದಾಯಕ.

**ತತ್ತ್ವಾನಾಂ ಪರಿಸಂಖ್ಯಾನಂ ಲಕ್ಷಣಂ ಹೇತುಲಕ್ಷಣಂ ।**
**ಪುರುಷಾರಾಧನ ವಿಧಿರ್ಯೋಗಸ್ಯಾಧ್ಯಾತ್ಮಿಕಸ್ಯಚ ॥ ೧೯ ॥**

ತತ್ತ್ವಾನಾಂ = ಮಹತ್ತತ್ತ್ವ, ಅಹಂಕರಾತತ್ತ್ವ ಮೊದಲಾದವುಗಳ; ಪರಿಸಂಖ್ಯಾನಂ = ಅನುಕ್ರಮ ವಿವರವನ್ನೂ; ಲಕ್ಷಣಂ = ಅವುಗಳ ಗುಣವಿಶೇಷಗಳನ್ನೂ; ಹೇತು ಲಕ್ಷಣಂ = ಅವುಗಳನ್ನು ನಿರ್ಮಿಸಿದ ಕಾರಣಪುರುಷನ ಲಕ್ಷಣಗಳನ್ನೂ; ಪುರುಷಾರಾಧನ ವಿಧಿಃ = ಆ ಪುರುಷನನ್ನು ಆರಾಧಿಸಿ ಪ್ರಸಾದ ಹೊಂದುವ ರೀತಿ ಯಾವುದೆಂಬುದನ್ನೂ; ಚ = ಮತ್ತು; ಆಧ್ಯಾತ್ಮಿಕಸ್ಯ ಯೋಗಸ್ಯ ವಿಧಿಃ = ಯಮನಿಯಮಾದಿ ಯೋಗಾಭ್ಯಾಸ ಮತ್ತು ಭಕ್ತಿಯೋಗಗಳ ವಿಧಾನಗಳು ಯಾವುವೆಂಬುದನ್ನು; ತಿಳಿಸಿರಿ.

**ಯೋಗೇಶ್ವರೈಶ್ವರ್ಯಗತಿಂ ಲಿಂಗಭಂಗಂಚಯೋಗಿನಾಂ ।**
**ವೇದೋಪವೇದ ಧರ್ಮಾಣಾಮಿತಿಹಾಸಪುರಾಣಯೋಃ ॥ ೨೦ ॥**

**ಸಂಭವಃ ಸರ್ವಭೂತಾನಾಂ ವಿಕ್ರಮಃ ಪ್ರತಿಸಂಕ್ರಮಃ ।**
**ಇಷ್ಟಾಪೂರ್ತಸ್ಯಕಾಮ್ಯಾನಾಂ ತ್ರಿವರ್ಗಸ್ಯಚಯೋವಿಧಿಃ ॥ ೨೧ ॥**

ಯೋಗೇಶ್ವರ ಐಶ್ವರ್ಯಗತಿಂ= ಯೋಗಾಭ್ಯಾಸ ಮಾಡಿ ಅಣಿಮಾದಿ ಅಷ್ಟಸಿದ್ಧಿಗಳನ್ನು ಸಾಧಿಸುವುದನ್ನೂ; ಯೋಗಿನಾಂ= ಯಮನಿಯಮಾದಿ ಸಕ್ರಮಯೋಗಸಾಧನೆಯಿಂದ ಸಿದ್ಧಿಪಡೆದವರ; ಲಿಂಗ ಭಂಗಂಚ = ಕಾರಣ ಶರೀರ ನಾಶದ ಪರಿಯನ್ನೂ; ವೇದ, ಉಪವೇದ, ಧರ್ಮಾಣಾಂ = ಋಗಾದಿವೇದಗಳ, ಆಯುರ್ವೇದ ಧನುರ್ವೇದಾದಿ ಉಪವೇದಗಳ ಮತ್ತು ವರ್ಣಾಶ್ರಯಧರ್ಮಗಳ; ಇತಿಹಾಸಪುರಾಣಯೋಃ = ಇತಿಹಾಸಪುರಾಣಗಳ; ಸಂಭವಃ = ಉತ್ಪತ್ತಿವಿಚಾರವನ್ನೂ; ಸರ್ವಭೂತಾನಾಂ = ಎಲ್ಲಾ ಪ್ರಾಣಿವರ್ಗದ; ವಿಕ್ರಮಃ = ಜೀವನ ಚರ್ಯೆಗಳನ್ನೂ; ಪ್ರತಿಸಂಕ್ರಮಃ = ಸಂಹಾರದ ಬಗೆಯನ್ನೂ; ಇಷ್ಟಾಪೂರ್ತಸ್ಯ ಕಾಮ್ಯಾನಾಂ = ಜೀವನದ ಅಭಿಲಾಷೆಗಳನ್ನು ಪೂರೈಸಿಕೊಳ್ಳುವುದರ; ಚ = ಮತ್ತು; ತ್ರಿವರ್ಗಸ್ಯ = ಧರ್ಮ, ಅರ್ಥ, ಕಾಮಗಳನ್ನು ಸಾಧಿಸುವುದರ; ಯಃ ವಿಧಿಃ = ನಿಯಮಗಳು ಯಾವುವು ಎಂಬುದನ್ನೂ; ತಿಳಿಸಿರಿ

(ಅಣಿಮಾ = ಸಣ್ಣರೂಪತಾಳುವುದು; ಮಹಿಮಾ = ದೊಡ್ಡರೂಪ ತಾಳುವುದು; ಲಘಿಮಾ = ಹಗುರವಾಗುವುದು; ಗರಿಮಾ = ಭಾರವಾಗುವುದು; ಪ್ರಾಪ್ತಿಃ = ಇದ್ದಲ್ಲಿಯೇ ಬೇಕಾದ ಪದಾರ್ಥಗಳು ಬರುವಂತೆ ಮಾಡುವುದು; ಪ್ರಾಕಾಮ್ಯಂ = ಅಪೇಕ್ಷೆಗಳನ್ನು ಪೂರೈಸಿಕೊಳ್ಳುವುದು; ಈಶತ್ವಂ = ಇತರರ ಮೇಲೆ ನಾಯಕತ್ವ ಹೊಂದುವುದು; ವಶಿತ್ವಂ = ಇತರರ ಮನಸ್ಸನ್ನು ಅಧೀನಪಡಿಸಿಕೊಳ್ಳುವುದು). ಬಾಹ್ಯೇಂದ್ರಿಯಗಳ ಮತ್ತು ಅನಾದಿಲಿಂಗ ಶರೀರದ ಸಂಬಂಧ ಕಲ್ಪನೆಯಿಂದ ಜೀವನಿಗೆ ಇಹದಲ್ಲಿ ಸುಖದುಃಖಗಳ ಸ್ಪರ್ಶವುಂಟಾಗುತ್ತದೆ. ಪರಿಪಕ್ವಜ್ಞಾನದಿಂದ ಆಸಂಬಂಧವು ಕಡಿದು ಹೋದರೆ ಸುಖದುಃಖಗಳ ಸ್ಪರ್ಶವು ತಪ್ಪಿಹೋಗಿ, ಆ ಜೀವಿಯು ಜೀವನ್ಮುಕ್ತನಾಗುತ್ತಾನೆ. ಅವನು ನಿಜವಾಗಿ 'ತಿತಿಕ್ಷು'. ಸಕಾಲದಲ್ಲಿ ಬ್ರಹ್ಮದೇವರ ಜೊತೆಗೆ ವಿರಜಾಸ್ನಾನವಾದಾಗ ಆ ಲಿಂಗಶರೀರವು ಬಿಟ್ಟೇ ಹೋಗುತ್ತದೆ. ಜೀವಿಗಳು ಶಾಸ್ತ್ರವಿಧಿಗಳನ್ನರಿಯದೆ ಇಷ್ಟಾಪೂರ್ತಿಯ ಕಾರ್ಯಗಳಲ್ಲಿ ನಿರತರಾಗಿರುವುದು ಸಾಮಾನ್ಯ. ಅದು ಕರ್ಮವ್ಯಯವೇ ಹೊರತು ನಿಜವಾದ ಜ್ಞಾನ ಸಾಧನವಲ್ಲ. ವಿಧಿವತ್ತಾಗಿ ಧರ್ಮ, ಅರ್ಥ, ಕಾಮಗಳನ್ನು ಸಾಧಿಸುವುದು ಜ್ಞಾನಾರ್ಜನೆಗೆ ಸಹಕಾರಿಯಾಗುತ್ತದೆ– ಶಾಸ್ತ್ರವಿಚಾರ ಮತ್ತು ಭಗವಂತನ ಸ್ಮರಣೆಗಳ ಬಲದಿಂದ.

**ಯೋವಾನು ಶಾಯಿನಾಂ ಸರ್ಗಃ ಪಾಖಂಡಸ್ಯಚ ಸಂಭವಃ ।**
**ಆತ್ಮನೋಬಂಧ ಮೋಕ್ಷೌಚ ವ್ಯವಸ್ಥಾನಂ ಸ್ವರೂಪತಃ ॥ ೨೨ ॥**

ಅನುಶಾಯಿನಾಂ = ಪ್ರಾಕೃತಬಂಧನದಲ್ಲಿ ಸಿಕ್ಕಿಕೊಂಡವರ; ಸರ್ಗಃ = ಸೃಷ್ಟಿಯು; ಚ = ಮತ್ತು; ಪಾಖಂಡಸ್ಯ = ದೈವದ್ರೋಹಿಗಳ; ಸಂಭವಃ = ಹುಟ್ಟುವಿಕೆಯು; ಯೋವಾ = ಯಾವುದುಂಟೋ ಅದನ್ನೂ; ಆತ್ಮನಃ = ಜೀವಿಯ; ಬಂಧ ಮೋಕ್ಷೌ = ಸಂಸಾರದಲ್ಲಿ ಬಂಧನವೂ, ಅದರಿಂದ ಬಿಡುಗಡೆಯೂ; ಚ = ಮತ್ತು; ಸ್ವರೂಪತಃ ವ್ಯವಸ್ಥಾನಂ = ಮುಕ್ತಿಯಲ್ಲಿ ಪ್ರಾಕೃತಸಂಬಂಧವೇನೂ ಇಲ್ಲದೆ ಕೇವಲ ಸ್ವರೂಪದಿಂದಲೇ ಇರುವುದು ಮತ್ತು ಅಲ್ಲಿಯೂ ತಾರತಮ್ಯ ಹೊಂದಿರುವಿಕೆಗಳ ವಿಚಾರವನ್ನೂ; ತಿಳಿಸಿರಿ.

**ಯಥಾತ್ಮತಂತ್ರೋ ಭಗವಾನ್ ವಿಕ್ರೀಡತ್ಯಾತ್ಮಮಾಯಯಾ ।**
**ವಿಸೃಜ್ಯ ಚ ಯಥಾಮಾಯಾಮುದಾಸ್ತೇ ಸಾಕ್ಷಿವದ್ವಿಭುಃ ॥ ೨೩ ॥**

ಆತ್ಮತಂತ್ರಃ = ಪರತಂತ್ರಕ್ಕೊಳಗಾಗಿರದೆ ಸ್ವತಂತ್ರನಾದ; ಭಗವಾನ್ = ಭಗವಂತನು; ಆತ್ಮಮಾಯಯಾ = ಸ್ವೇಚ್ಛಾರೂಪವಾದ ಮಾಯಾ ಮತ್ತು ಅಧೀನವಾದ ಚಿದಚಿದ್ ಮಾಯೆಗಳಿಂದ; ಯಥಾ = ಹೇಗೆ; ವಿಕ್ರೀಡತಿ = ಜಗದ್ವ್ಯಾಪಾರಗಳನ್ನು ನಡೆಸುತ್ತಾ ವಿಹಾರ ಮಾಡುವನು ?ಚ = ಮತ್ತು; ಮಾಯಾಂ = ತನ್ನ ಮಾಯೆಗಳನ್ನು; ವಿಸೃಜ್ಯ = ಬಿಟ್ಟು; ವಿಭುಃ = ಸಮರ್ಥನಾದ ಆ ಸ್ವಾಮಿಯು; ಸಾಕ್ಷಿವತ್ = ವ್ಯಾಪಾರಗಳನ್ನು ಮಾಡುತ್ತಿದ್ದರೂ ಮಾಡದಿರುವವನಂತೆ ಕೇವಲ ಸಾಕ್ಷೀಭೂತನಾಗಿ; ಯಥಾ = ಹೇಗೆ; ಉದಾಸ್ತೇ = ಉದಾಸೀನನಾಗಿರುತ್ತಾನೆ ?

ಭಗವಂತನು ಜಡಮಾಯೆಯನ್ನು ಚಿನ್ಮಾಯಾರೂಪಳಾದ ರಮಾದೇವಿಯ ಮುಖಾಂತರ ಜೀವರಿಗೆ ಸಂಬಂಧಗೊಳಿಸಿ ಸಂಸಾರದಲ್ಲಿಡುವುದನ್ನೂ, ಸ್ವೇಚ್ಛಾಮಾಯೆಯಿಂದ ಜ್ಞಾನದಾನ ಮಾಡುವುದನ್ನೂ, ಉತ್ಸಾಹಿಯಂತೆ ಸಕಲ ವ್ಯಾಪಾರಗಳನ್ನು ನಡೆಸುತ್ತಿದ್ದರೂ ಉದಾಸೀನನಂತೆ ಇರುವ ಬಗೆಯ ವಿಚಾರವನ್ನೂ ಕುರಿತು ಪ್ರಶ್ನೆಮಾಡಿದ್ದಾರೆ. ಸೇಶ್ವರ ಸಾಂಖ್ಯಮತದಂತೆ ಭಗವಂತನೇನನ್ನೂ ಮಾಡುವುದಿಲ್ಲ; ಅವನ ಅಧ್ಯಕ್ಷತೆಯಲ್ಲಿ ಪ್ರಕೃತಿಯು ತಾನಾಗಿ ಪರಿಣಾಮ ಹೊಂದುವುದು. ಎಂದು ತಿಳಿದು ಬರುವುದು. ಆದರೆ, ಅಸ್ವತಂತ್ರ ವಸ್ತು ತಾನಾಗಿ ಪರಿಣಮಿಸುವುದು ಹೇಗೆ ಎಂಬ ಪ್ರಶ್ನೆಗೆ ಉತ್ತರಕೊಡಬೇಕಾಗುವುದು. ಭಗವದಿಚ್ಛೆಯ ಬಲವನ್ನೂ ಫಲಾಪೇಕ್ಷೆಯಿಲ್ಲದ ಅವನ ಸಂಕಲ್ಪವನ್ನೂ ತಿಳಿದಾಗ ಮಾತ್ರ ತತ್ತ್ವವಿವೇಕ ಉಂಟಾಗುವುದು. ಸಾಂಖ್ಯರ ಅಧ್ಯಕ್ಷತೆ ಎಂಬ ಮಾತಿಗೆ 'ಸಾಕ್ಷಿರೂಪವಾದ ಸಂಕಲ್ಪ' ಎಂದು ಅರ್ಥ ಮಾಡಿದರೆ, ಸಾಂಖ್ಯಶಾಸ್ತ್ರವು ಪೂರ್ಣವೈದಿಕವೇ ಆಗುವುದು. ಕಪಿಲ ರೂಪದಿಂದ ತನ್ನ ತಾಯಿಯೆನಿಸಿದ ದೇವಹೂತೀ ದೇವಿಯರಿಗೆ ಭಗವಂತನು ಉದೇಶ ಮಾಡಿದುದು ವೈದಿಕ ಸಾಂಖ್ಯಶಾಸ್ತ್ರ.

**ಸರ್ವಮೇತಚ್ಚ ಭಗವನ್ಪೃಚ್ಛತೋಮೇನು ಪೂರ್ವಶಃ ।**
**ತತ್ವತೋರ್ಹಸ್ಯುತಾಹರ್ತುಂ ಪ್ರಪನ್ನಾಯ ಮಹಾಮುನೇ ॥೨೪ ॥**

ಮಹಾಮುನೇ = ಜ್ಞಾನಸಂಪನ್ನರಾದ ಶ್ರೀಶುಕಾಚಾರ್ಯರೇ; ಪ್ರಪನ್ನಾಯ = ಶಿಷ್ಯತ್ವಲಕ್ಷಣಗಳಿಂದ ಶರಣುಹೊಂದಿದ; ಪೃಚ್ಛತಃ ಮೇ = ಪ್ರಶ್ನೆಮಾಡುತ್ತಿರುವ ನನಗೆ; ಏತತ್ ಸರ್ವಂ = ಪ್ರಶ್ನೆಮಾಡಿದ ಎಲ್ಲಾ ವಿಷಯಗಳನ್ನೂ; ಚ = ನಾನು ಕೇಳದೆ ಬಿಟ್ಟಿರುವ ಸಂಬಂಧಿಸಿದ ವಿಷಯಗಳನ್ನೂ; ಅನುಪೂರ್ವಶಃ = ಅನುಕ್ರಮವಾಗಿ;ತತ್ವತಃ = ಯಥಾರ್ಥವಾದ ರೀತಿಯಲ್ಲಿ ಉದಾಹರ್ತುಂ = ವಿವರಿಸಿ ಹೇಳಲು; ಅರ್ಹಸಿ = ನೀವು ಸಮರ್ಥರಾಗಿದ್ದೀರಿ.

ತತ್ವಾರ್ಥಗಳು ಹೊರಬರಬೇಕಾದರೆ ಈ ರೀತಿಯ ಗುರುಶಿಷ್ಯ ಸಮಾಗಮ ಏರ್ಪಡಬೇಕು. ಮರಣೋನ್ಮುಖರಾದ ಪರಿಕ್ಷೀದ್ರಾಜರು ಮಾಡಿರುವ ಪ್ರಶ್ನೆಗಳು, ವಿಶ್ವದಲ್ಲಿ ಎಲ್ಲಾಜೀವಿಗಳನ್ನೂ ಸ್ವತಂತ್ರನಾದ ಭಗವಂತನು ನಡೆಸಿಕೊಂಡು ಹೋಗುವ ಎಲ್ಲಾ ಬಗೆಗಳನ್ನೂ ಕುರಿತದ್ದಾಗಿದೆ ಎಂಬುದು ಆಶ್ಚರ್ಯದ ಮಾತೇನಿಲ್ಲ,ಸಾಮಾನ್ಯದೃಷ್ಟಿಗೆ. ಆದರೆ, ಭಗವಂತನ ಈ ಪ್ರಾಕಾರದ ಚಿತ್ರವಿಚಿತ್ರ ವ್ಯಾಪಾರಗಳ ವಿಚಾರವನ್ನೂ, ಅಂತಹ ವ್ಯಾಪಾರಗಳ ಸಮಾರಂಭದಲ್ಲಿ ಆದಿಜನ್ಮದಿಂದ ಚರಮದೇಹಾಂತ್ಯವರೆಗೆ ವೈಯಕ್ತಿಕ ಜೀವನಸಾಧನೆಗಳನ್ನು ಮಾಡಿಸಿರುವ ಬಗೆಯನ್ನೂ ತಿಳಿದಾಗ ಮಾತ್ರ ಆ ವ್ಯಕ್ತಿಗೆ ಯಥಾಯೋಗ್ಯವಾಗಿ ಭಗವಂತನ ಮಾಹಾತ್ಮ್ಯಜ್ಞಾನ ಉಂಟಾಗುವುದು. ಆ ಜ್ಞಾನವೇ ಭಕ್ತಿಗೆ ಪೂರಕವಾದುದು. ಭಕ್ತಿಯಿಂದ ಮುಕ್ತಿ.

**ಅತ್ರ ಪ್ರಮಾಣಂ ಹಿ ಭವಾನ್ ಪರಮೇಷ್ಠೀಯಥಾತ್ಮಭೂಃ ।**
**ಅಪರೇಹ್ಯನುತಿಷ್ಠಂತಿ ಪೂರ್ವೇಷಾಂ ಪೂರ್ವಜೈಃ ಕೃತಂ ॥ ೨೫ ॥**

ಯಥಾ = ಹೇಗೆ; ಆತ್ಮಭೂಃ = ಭಗವಂತನ ಮಗನೇ ಆದ; ಪರಮೇಷ್ಠೀ = ಸರ್ವಜೀವೋತ್ತಮನಾದ ಬ್ರಹ್ಮನು; ಪ್ರಮಾಣಂ = ಶಾಸ್ತ್ರಗಳ ವಿಷಯದಲ್ಲಿ ಆಪ್ತತ್ವಪ್ರಾಮಾಣ್ಯವುಳ್ಳವನೋ ಹಾಗೆ; ಅತ್ರ = ಈ ಸಮಯದಲ್ಲಿ; ಭವಾನ್= ಭಗವದವತಾರರಾದ ವ್ಯಾಸರ ಪುತ್ರರಾದ ನೀವು; ಪ್ರಮಾಣಂ ಹಿ = ತತ್ವಾರ್ಥ ಭೋದಕರಾಗಿದ್ದೀರಿ ಎಂಬುದು ಸುನಿಶ್ಚಯ; ಅಪರೇ ಹಿ = ಮರೀಚ್ಯಾದಿ ಮಹರ್ಷಿಗಳಾದರೂ; ಪೂರ್ವೇಷಾಂ ಪೂರ್ವಜೈಃ ಕೃತಂ = ಹಿಂದೆ ಹಿಂದಿನವರಾದ ಬ್ರಹ್ಮರುದ್ರಾದಿಗಳ ಆಚರಣೆಯನ್ನು; ಅನುತಿಷ್ಠಂತಿ = ಅನುಸರಿಸಿ ಕೃತಾರ್ಥರಾಗುತ್ತಾರೆ.

ಗ್ರಂಥಸ್ಥವಾಗಿದ್ದರೂ, ಶಾಸ್ತ್ರವಿಚಾರಗಳನ್ನು ಯಥಾವತ್ತಾಗಿ ತಿಳಿಯಬೇಕಾದರೆ, ಪರಂಪರಾಪ್ರಾಪ್ತಗಳಾದ ಅರ್ಥವಿಶೇಷಗಳನ್ನು ಸದ್ಗುರುಗಳ ಮುಖದಿಂದಲೇ ತಿಳಿಯಬೇಕು. ಸ್ವಯಂ ಪಂಡಿತರ ಮಾತುಗಳು ಪೂರ್ಣ ಪ್ರಾಮಾಣಿಕಗಳಾಗುವುದಿಲ್ಲ ಗುರುಮುಖೇನ ಕೇಳಿದ ಮೇಲೂ ಮನನದಿಂದ ಮಾತ್ರ ಜ್ಞಾನ ಸಿದ್ಧಿಯಾಗುವುದು.

**ನಮೇಸವಃ ಪರಾಯಂತಿ ಬ್ರಹ್ಮನ್ನನಶನಾದಮೀ ।**
**ಪಿಬತೋಽಚ್ಯುತ ಪೀಯೂಷಂ ತ್ವದ್ವಾಕ್ಯಾಬ್ಧಿವಿನಿಸ್ಸೃತಂ ॥ ೨೬ ॥**

ಬ್ರಹ್ಮನ್= ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರೇ; ಅನಶನಾತ್= ಅನ್ನ ಪಾನಾದಿಗಳಿಲ್ಲದಿದ್ದರೂ; ತ್ವದ್ವಾಕ್ಯಾತ್= ನಿಮ್ಮ ಮಾತುಗಳದೆಸೆಯಿಂದ; ವಿನಿಸ್ಸೃತಂ = ಸ್ರವಿಸುವ; ಅಚ್ಯುತಪೀಯೂಷಂ= ಭಗವನ್ಮಹಿಮಾರೂಪವಾದ ಅಮೃತವನ್ನು; ಪಿಬತಃ = ಪಾನಮಾಡುತ್ತಿರುವ; ಅಮೀ ಮೇ ಅಸವಃ = ಈ ನನ್ನ ಇಂದ್ರಿಯಾದಿಗಳು, ಮನಸ್ಸು, ಪ್ರಾಣಗಳು; ನ ಪರಾಯಂತಿ = ಮೃತಪ್ರಾಯವಾಗುವುದಿಲ್ಲ.

ಆಹಾರ ಸೇವನೇಯಿಲ್ಲದ ದೇಹವು ಕ್ಷೀಣವಾಗಿ ದುರ್ಬಲವಾಗುವುದರಿಂದ ಶ್ರೀಹರಿಕಥಾಶ್ರವಣದಲ್ಲಿ ಮನಸ್ಸು ಹೇಗೆ ನಿಂತೀತು ಎಂಬ ಶಂಕಾನಿವಾರಣೆಗೆ ಇಲ್ಲಿ ಉತ್ತರವಿದೆ. ಅಭ್ಯಾಸಾದ್ರಮತೇ ಬುದ್ಧಿಃ ಎಂಬ ಶ್ರೀಕೃಷ್ಣನ ಉಪದೇಶವನ್ನಿಲ್ಲ ಅನ್ವಯಿಸಬೇಕು. ವಾರದಲ್ಲಿ ಒಪ್ಪೊತ್ತು ಉಪವಾಸ, ಏಕಾದಶೀ ಉಪವಾಸ ವಿಷ್ಣುಪಂಚಕ ಉಪವಾಸ. ಭೀಷ್ಮಪಂಚಕ ಉಪವಾಸಾದಿಗಳನ್ನು ಶ್ರದ್ಧೆಯಿಂದ ಅಭ್ಯಾಸ ಮಾಡುವವರಿಗೆ ಇದು ಸಾಧ್ಯವಲ್ಲವೆ. ? ಆ ದಿನಗಳಲ್ಲಿ ಶ್ರೀಹರಿಸ್ಮರಣೆ ಇರಬೇಕು; ಇದ್ದಾಗ ದೇಹಾಲಸ್ಯದ ಕಡೆಗೆ ಗಮನವಿರುವುದಿಲ್ಲ. ನಿರಾಹಾರದಿಂದ ತಾತ್ವಿಕ ದೈತ್ಯರ ಬಲಕುಗ್ಗುವುದು, ದೇವತೆಗಳ ಬಲ ಹೆಚ್ಚುವುದು ಎಂಬುದು ಇದರ ಮರ್ಮ. ದೇವತೆಗಳು ಭಾಗವತಾಮೃತ ಪಾನದಿಂದ ಸಂತುಷ್ಟರಾಗುವುದರಿಂದ ದೇಹದ ಸಾತ್ವಿಕ ಬಲ ಅಧಿಕಾಧಿಕವಾಗುತ್ತಾ ಹೋಗುವುದು.

**ಸೂತ ಉವಾಚಃ**– ಸೂತ ಪುರಾಣಿಕರು ಹೇಳಿದರು.

**ಸ ಉಪಾಮಂತ್ರಿತೋ ರಾಜ್ಞಾ ಕಥಾಯಾಮೀತಿ ಸತ್ಪತೇಃ ।**
**ಬ್ರಹ್ಮರಾತೋಽಭೃಶಂ ಪ್ರೀತೋ ವಿಷ್ಣುರಾತೇನ ಸಂಸದಿ ॥ ೨೭ ॥**

**ಆಹಭಾಗವತಂ ನಾಮ ಪುರಾಣಂ ಬ್ರಹ್ಮ ಸಂಮಿತಂ ।**
**ಬ್ರಹ್ಮಣೇ ಭಗವತಾ ಪ್ರೋಕ್ತಂ ಬ್ರಹ್ಮಕಲ್ಪಉಪಾಗತೇ ॥ ೨೮ ॥**

ಸಂಸದಿ = ಋಷಿಗಣ ಮಧ್ಯದಲ್ಲಿ; ಇತಿ = ಈ ಪ್ರಕಾರವಾಗಿ; ಸತ್ಪತೇಃ = ಭಕ್ತರೊಡೆಯನ; ಕಥಾಯಾಂ= ಮಾಹಾತ್ಮ್ಯ ಕಥನ ವಿಷಯದಲ್ಲಿ; ರಾಜ್ಞಾವಿಷ್ಣುರಾತೇನ = ಪರೀಕ್ಷಿದ್ರಾಜನಿಂದ; ಉಪಾಮಂತ್ರಿತಃ = ಪ್ರಾರ್ಥಿಸಲ್ಪಟ್ಟವರಾಗಿ; ಸಃ ಬ್ರಹ್ಮರಾತಃ = ಆಶುಕಾಚಾರ್ಯರು; ಭೃಶಂ ಪ್ರೀತಃ = ಬಹಳ ಸಂತುಷ್ಟರಾಗಿ;

ಬ್ರಹ್ಮಕಲ್ಪ ಉಪಾಗತೇ = ಒಂದು ಬ್ರಹ್ಮಕಲ್ಪದ ರಾತ್ರಿ ಕಳೆದು ಇನ್ನೊಂದು ಬ್ರಹ್ಮಕಲ್ಪವು ಪ್ರಾರಂಭವಾದಾಗ; ಬ್ರಹ್ಮಣೇ = ಬ್ರಹ್ಮಪದವಿಗೆ ಬಂದ ಪುತ್ರನಿಗೆ; ಭಗವತಾ = ಶ್ರೀಮನ್ನಾರಾಯಣನಿಂದ; ಪ್ರೋಕ್ತಂ = ಉಪದೇಶಿಸಲ್ಪಟ್ಟ; ಬ್ರಹ್ಮಸಂಮಿತಂ = ವೇದವಿಹಿತವಾದ; ಭಾಗವತಂ ನಾಮಪುರಾಣಂ = ಶ್ರೀಮದ್ಭಾಗವತವೆಂಬ ಪುರಾಣವನ್ನು; ಆಹ = ಹೇಳಿದರು.

ಶ್ರೀಮನ್ನಾರಾಯಣನಿಂದ ಬ್ರಹ್ಮದೇವರಿಗೆ ಉಪದಿಷ್ಟವಾದ ಶ್ರೀಮದ್ಭಾಗವತ ಶಾಸ್ತ್ರವನ್ನು ತಮ್ಮ ತಂದೆಯಾದ ಶ್ರೀಮನ್ನಾರಾಯಣಾವತಾರರಾದ ವೇದವ್ಯಾಸದೇವರಿಂದ ಉಪದೇಶ ಹೊಂದಿದ ಶುಕಾಚಾರ್ಯರಿಗೆ ಬ್ರಹ್ಮರಾತ (ಬ್ರಹ್ಮದತ್ತ) ಎಂಬ ಹೆಸರು ಅನ್ವರ್ಥಕವಾದುದು; ಅವರ ಬಾಯಿಂದ ಹೊರಟ ಮಾತು ಆಪ್ತವಾಕ್ಯ. ಶ್ರೀಮದ್ಭಾಗವತವೆಂಬುದು ಸಾಧಾರಣ ಪುರಾಣಕಥೆಯಲ್ಲ. ಅದು ವೇದಗಳ ಪ್ರತಿರೂಪ. ಸ್ತ್ರೀಶೂದ್ರ ಬ್ರಹ್ಮಬಂಧುಗಳಿಗೂ ಎಟುಕುವಂತಹ ವೇದಶಾಸ್ತ್ರ; ಕಲಿಯುಗದ ಕಲುಷಿತವಾತಾವರಣದಲ್ಲಿ ಬಾಳಬೇಕಾದ ಸುಜೀವಿಗಳಿಗೆ ಅದು ನಿರ್ಬಂಧರಹಿತವಾದ ವೇದಾನುವಾದ. ನೇರವಾಗಿ ವೇದಾಭ್ಯಾಸ ಮಾಡದಿದ್ದರೂ ಶ್ರೀಮದ್ಭಾಗವತ ಕಥಾ ಶ್ರವಣ ಮನನಗಳಿಂದ ವೇದಾಭ್ಯಾಸದ ಪೂರ್ಣಫಲ ದೊರೆಯುವುದರಲ್ಲಿ ಸಂಶಯವಿಲ್ಲ.

ಪುರಂದರ ದಾಸಾದಿಗಳು ರಚಿಸಿಕೊಟ್ಟಿರುವ ಹರಿದಾಸ ಸಾಹಿತ್ಯವು ಶ್ರೀಮದ್ಭಾಗವತದ ಸಾರಸರ್ವಸ್ವ. ಆದರಿಂಲೇ ಮುಕ್ತಿ ದೊರೆಯುವುದೇ ಎಂದು ಆಕ್ಷೇಪಿಸುವ ಪಂಡಿತರು ಕೇವಲ ಮೊಂಡರು.

**ಯದ್ಯತ್ಪರೀಕ್ಷಿದೃಷಭಃ ಪಾಂಡೂನಾಮನುಪೃಚ್ಛತಿ ।**
**ಆನುಪೂರ್ವ್ಯೇಣ ತತ್ಸರ್ವಮಾಖ್ಯಾತುಮುಪಚಕ್ರಮೇ ॥ ೨೮ ॥**

ಪಾಂಡೂನಾಂ ಋಷಭಃ = ಪಾಂಡವಕುಲವರಿಷ್ಠನಾದ; ಪರೀಕ್ಷಿತ್ = ಪರೀಕ್ಷಿದ್ರಾಜನು; ಯದ್ಯತ್ ಪೃಚ್ಛತಿ = ಏನೇನನ್ನು ಕೇಳಿದನೋ; ತತ್ ಸರ್ವಂ = ಎಲ್ಲವನ್ನೂ; ಆನುಪೂರ್ವ್ಯೇಣ = ಕ್ರಮವಾಗಿ; ಆಖ್ಯಾತುಂ = ವಿವರಿಸಲು; ಉಪಚಕ್ರಮೇ = ಶುಕಾಚಾರ್ಯರು ಆರಂಭಮಾಡಿದರು.

ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಕ್ರಮವಾಗಿ ಒಂದನ್ನೂ ಬಿಡದೆ ಉತ್ತರಿಸಿದರು. ಆಕ್ರಮದಿಂದಲೇ ಶ್ರೀಮದ್ಭಾಗವತವು ಬ್ರಹ್ಮಸಂಮಿತವಾಗಿದೆ.

ಎಂಟನೆಯ ಅಧ್ಯಾಯ ಮುಗಿಯಿತು

---

# ದ್ವಿತೀಯ ಸ್ಕಂಧ — ಒಂಬತ್ತನೆಯ ಅಧ್ಯಾಯ ಪ್ರಾರಂಭ

ಶ್ರೀಗುರುಭ್ಯೋನಮಃ ॥ ಹರಿಃ ಓಂ ॥

**ಶ್ರೀಶುಕ ಉವಾಚಃ**— ಶ್ರೀಶುಕಾಚಾರ್ಯರು ನುಡಿದರು.

**ಆತ್ಮಮಾಯಾಮೃತೇ ರಾಜನ್ಪರಸ್ಯಾನುಭವಾತ್ಮನಃ ।**
**ನಘಟೇತಾರ್ಥಸಂಬಂಧಃ ಸ್ವಪ್ನೇ ದೃಷ್ಟುರಿವಾಂಜಸಾ** ॥ ೧ ॥

ರಾಜನ್= ಅಯ್ಯಾ, ಪರೀಕ್ಷಿದ್ರಾಜಾ; ಸ್ವಪ್ನೇ = ಸ್ವಪ್ನದಲ್ಲಿ; ದ್ರಷ್ಟುಃ ಇವ= ನೋಡತಕ್ಕ ಸಾಕ್ಷಿಜೀವನಿಗೆ ಹೇಗೋ ಹಾಗೆ; ಅನುಭವಾತ್ಮನಃ= ಕೇವಲ ಸ್ವರೂಪಭೂತನಾದ ಜೀವನಿಗೆ; ಪರಸ್ಯ ಆತ್ಮಮಾಯಾಂ ಋತೇ = ಸ್ವತಂತ್ರನಾದ ಭಗವಂತನ ಇಚ್ಛಾಶಕ್ತಿಯಿಂದಲ್ಲದೆ; ಅರ್ಥಸಂಬಂಧಃ = ಜಡದೇಹ ಸಂಬಂಧವು; ಅಂಜಸಾ = ತಾನೇತಾನಾಗಿ; ನಘಟೇತ = ಉಂಟಾಗುವುದಿಲ್ಲ.

ಜೀವನಾದವನು ಅನಾದಿಯಿಂದ ಲಿಂಗಶರೀರಬದ್ಧನಾಗಿದ್ದರೂ ಅದರ ಪರಿಣಾಮ ಅವನ ಮೇಲೆ ಆಗುತ್ತಿರುವುದಿಲ್ಲ; ಎಂದರೆ, ತಾನು ಜ್ಞಾನಾತ್ಮನೇ ಆಗಿರುವುದೂ, ಅಜ್ಞಾನಾವರಕದ ಬಂಧವಿರುವುದೂ ತಿಳಿಯದೆ ಮೂರ್ಛಿತನಂತೆ ಇರುತ್ತಾನೆ. ಈ ಬಂಧನದಿಂದ ಬಿಡಿಸಿ ಉದ್ಧಾರ ಮಾಡಬೇಕೆಂದು ಕರುಣಾಮಯನಾದ ಪರಮಾತ್ಮನು ಸಂಕಲ್ಪಿಸಿದ ಮೇಲೆ, ಜಡದೇಹ ಪ್ರಾಪ್ತಿಯಿಂದ, ಲಿಂಗದೇಹದ ಅರಿವು ಉಂಟಾಗುವ ಕ್ರಿಯೆ ನಡೆಯುವುದು. ಅದು ತಾನೇ ತಾನಾಗಿ ಆಗುವುದಿಲ್ಲ. ಇದಕ್ಕೆ ಸ್ವಪ್ನದೃಷ್ಟಾಂತ. ಜೀವನ ಮನಸ್ಸಿನಲ್ಲಿ ನಾನಾ ಬಗೆಯ ಸಂಸ್ಕಾರಗಳ ಸಂಗ್ರಹವಾಗಿದ್ದರೂ, ತೈಜಸನಾಮಕ ಪರಿಮಾತ್ಮನ ಇಚ್ಛೆಯಿಂದಲ್ಲದೆ ಅವು ಕೇವಲ ರಜೋಗುಣತಮೋಗುಣಗಳ ಬಲದಿಂದಲೇ ಸ್ವಪ್ನದಲ್ಲಿ ರೂಪುತಾಳಿ ಗೋಚರಿಸುವುದಿಲ್ಲ. ಭಗವದಿಚ್ಛೆಯ ಮಹತ್ವವನ್ನರಿತು ಭಕ್ತಿಭಾವವನ್ನು ಜಗತ್ತಿನ ಸೃಷ್ಟಿಯ ವಿಷಯದಲ್ಲಿಯೂ ಈ ಮಾತು ಅನ್ವಯಿಸುವುದು. ಭಕ್ತಿಭಾವವನ್ನು ತಳೆಯಬೇಕೆಂಬುದು ಇದರ ಅಭಿಪ್ರಾಯ.

**ಬಹುರೂಪ ಇವಾಭಾತಿ ಮಾಯಯಾ ಬಹುರೂಪಯಾ ।**
**ರಮಮಾಣೋಗುಣೇಷ್ವಸ್ಯಾಮಮಾಹಮಿತಿ ಮನ್ಯತೇ** ॥ ೨ ॥

ಬಹುರೂಪಯಾ = ದೇವ ತಿರ್ಯಕ್ ಮನುಷ್ಯಾದಿ ಪ್ರಾಕೃತರೂಪಗಳ ನಿಮಿತ್ತದಿಂದ, ಮಾಯಯಾ = ಭಗವಂತನ ಸಂಕಲ್ಪ ಶಕ್ತಿಯಿಂದ; ಬಹುರೂಪ ಇವ = ನಾನು ದೇವತೆ; ನಾನು ಮನುಷ್ಯ, ನಾನು ಪ್ರಾಣಿ ಮೊದಲಾದ ರೂಪಗಳುಳ್ಳವನಂತೆ; ಆಭಾತಿ = ಕಾಣಿಸಿಕೊಳ್ಳುತ್ತಾನೆ; ಅಸ್ಯಾಂ = ಈ ದೇವಮಾಯಾನಿರ್ಮಿತಗಳಾದ; ಗುಣೇಷು = ಶರೀರಭೂತ ಸತ್ವಾದಿಗುಗಳ ಪ್ರಭಾವಕ್ಕೊಳಗಾಗಿ; ರಮಮಾಣಃ = ವಿವಿಧ ಅನುಭವಗಳನ್ನು ಪಡೆಯುತ್ತಾ; ಮಮ = ಈ ದೇಹ ನನ್ನದು; ಅಹಂ = ಈ ದೇಹವೇ ನಾನು; ಇತಿ = ಹೀಗೇಂದು; ಮನ್ಯತೇ = ಭಾವಿಸುತ್ತಾನೆ.

ಇಲ್ಲಿ ಮಾಯಯಾ ಎಂದರೆ, ಭಗವದಿಚ್ಛೆಯಿಂದ ಮತ್ತು ಆ ಇಚ್ಛಾರೂಪವಾದ 'ಬಿಂಬ' ಕ್ರಿಯೆಯಿಂದ ಎಂದು ತಿಳಿಯಬೇಕು, ಜೀವ ಅಸ್ವತಂತ್ರನಾದುದರಿಂದ ಬಿಂಬನಾದ ಭಗವಂತ 'ಅಧೋಕ್ಷಜ'ನಾಗಿದ್ದು, ಹೊರಗಿನಿಂದ ಬರುವ ಅನುಗುಣ ಮತ್ತು ವ್ಯತಿರಿಕ್ತ ಭಾವನೆಗಳನ್ನು ಜೀವನ ಸ್ವರೂಪಕ್ಕೆ ಸ್ಪರ್ಶಮಾಡಿಸಿ, ಆ ಭಾವನೆಗಳು ತನ್ನವೇ ಎಂದು ಜೀವ ಭ್ರಾಂತನಾಗುವಂತೆ ಮಾಡುತ್ತಾನೆ. ಇದು ಅಹಂ ಮಮತಾ ಬುದ್ಧಿಗೆ ಕಾರಣ ಇದರಿಂದ ಸುಖದುಃಖಗಳ ಸ್ಪರ್ಶವಾಗಿ, ವಿವೇಕಕ್ಕೆ ಸಹಕಾರ ಒದಗುವುದು. ಅಧೋಕ್ಷಜ = ಜ್ಞಾನವನ್ನು ಕೆಳಮುಖವಾಗಿ (ಹೊರಮುಖವಾಗಿ) ಮಾಡಿರುವವನು.

**ಯರ್ಹಿವಾಯಂ ಮಹಿತ್ವೇಸ್ವೇ ಪರಸ್ಮಿನ್ಕಾಲಮಾಯಯೋಃ ।**
**ರಮತೇಗತಸಂಮೋಹಸ್ತ್ಯಕ್ತ್ವೋದಾಸ್ತೇತದೋಭಯಂ ॥ ೩ ॥**

ಹಿಂದಿನ ಶ್ಲೋಕದಲ್ಲಿ ಭಗವಂತನ ಬಂಧಕಶಕ್ತಿಯನ್ನೂ ಜೀವನ ಬಂಧನದ ಪರಿಯನ್ನೂ ನಿರೂಪಿಸಿ, ಇಲ್ಲಿ ಮುಕ್ತಿಯ ಬಗೆಯನ್ನು ಹೇಳಿದ್ದಾರೆ.

ಅಯಂ = ಹೀಗೆ ಬಂಧನದಲ್ಲಿ ಸಿಕ್ಕಿದ ಜೀವನು; ಕಾಲಮಾಯಯೋಃ ಪರಸ್ಮಿನ್ = ಕಾಲ ಮತ್ತು ಪ್ರಕೃತಿಮಾಯಾಪ್ರಭಾವಗಳಿಂದ ಬೇರೆಯಾದ; ಸ್ವೇ = ತನ್ನ; ಮಹಿತ್ವೇ = ಜ್ಞಾನಾನಂದಸ್ವರೂಪಸ್ಥಿತಿಯಲ್ಲಿ; ಯದಿ ಚ ರಮತೇ = ಅಪರೋಕ್ಷದಿಂದ ಅನುಭವ ಪಡೆದು ನಿಂತದ್ದೇ ಆದರೆ; ಗತಸಂಮೋಹಃ = ಭ್ರಾಂತಿಗಳನ್ನು ಕಳೆದುಕೊಂಡವನಾಗಿ; ಉಭಯಂ = ಪ್ರಕೃತಿಯ ಗುಣಕಾರ್ಯಗಳೆರಡನ್ನೂ (ತದ್ರೂಪವಾದ ಸಂಸಾರಬಂಧನವನ್ನು); ತ್ಯಕ್ತ್ವಾ = ನೀಗಿಕೊಂಡು; ಉದಾಸ್ತೇ = ವಾಸುದೇವ ನಾಮಕ ವೈಕುಂಠಪತಿಯ ದಯೆಯಿಂದ ಉತ್ಕೃಷ್ಟ ಸ್ಥಿತಿಯಲ್ಲಿ (ಸ್ವರೂಪಾನಂದಾನುಭವ ಸ್ಥಾನದಲ್ಲಿ) ಇರುತ್ತಾನೆ.

ಜೀವನ ಬಂಧನ ಮೋಕ್ಷಗಳು ನಡೆಯುವುದು ಬಿಂಬಕ್ರಿಯಿಂದ. ಬಂಧಿತನಂತೆ, ಮುಕ್ತನಂತೆ, ಜೀವಬಿಂಬನಾದ ಭಗವಂತನು ನಟಿಸಿದರೆ. ಜೀವನಿಗೆ ಬಂಧ ಮುಕ್ತಿಗಳ ಅನುಭವ ಉಂಟಾಗುವುದು. ಹೀಗೆ ಬಿಡಿಸಿ ಹೇಳದಿದ್ದರೆ, ಭಗವಂತನು ತಾನೇ ಸಗುಣನಾಗಿ ನಿರ್ಗುಣನಾಗುವನೆಂಬ ಅದ್ವೈತಿಗಳವಾದಕ್ಕೆ ಅವಕಾಶ ಉಂಟಾಗುವುದು, ನಿರಪೇಕ್ಷನಲ್ಲಿ ಸ್ವಾರ್ಥ ಕ್ರೀಡಾಲಕ್ಷ್ಮಣವನ್ನು ಆರೋಪಿಸಿದ ಪಾತಕ ಉಂಟಾಗುವುದು.

**ಆತ್ಮತತ್ತ್ವವಿಶುದ್ಧ್ಯರ್ಥಂ ಯದಾಹಭಗವಾನ್ನತಂ ।**
**ಬ್ರಹ್ಮಣೇ ದರ್ಶಯದ್ರೂಪಮವ್ಯಲೀಕವ್ರತಾದೃತಃ ॥ ೪ ॥**

ಅವ್ಯಲೀಕವ್ರತ ಆದೃತಃ = ಏಕಾಂತ ಭಕ್ತಿಯಿಂದ ಅರ್ಚಿಸಲ್ಪಟ್ಟವನಾಗಿ; ಭಗವಾನ್ = ಸಕಲೈಶ್ವರ್ಯಸಂಪನ್ನನಾದ ಪುರುಷೋತ್ತಮನು; ಬ್ರಹ್ಮಣೇ = ನಾಭೀಕಮಲದಲ್ಲಿ ಹುಟ್ಟಿದ ಬ್ರಹ್ಮನಿಗೆ; ಆತ್ಮತತ್ತ್ವ ವಿಶುದ್ಧ್ಯರ್ಥಂ = ಜೀವರು ಸ್ವರೂಪಲಕ್ಷಣವನ್ನು ಪರಿಶುದ್ಧರೀತಿಯಲ್ಲಿ ತಿಳಿಯುವುದಕ್ಕಾಗಿ; ಯತ್ ರೂಪಂ = ಯಾವ ತನ್ನ ರೂಪವನ್ನು ಅದರ್ಶಯತ್ = ಕಾಣಿಸಿದನೋ; ಋತಂ = ಸತ್ಯವಾದ ತತ್ತ್ವವನ್ನು; ಆಹ = ಹೇಳಿದನೋ; (ಸಃ = ಅವನು; ಎಂದು ಮುಂದಿನ ಶ್ಲೋಕದಿಂದ ಅಧ್ಯಾಹಾರ)

ತನ್ನ ಸೃಷ್ಟಿಯ ಕಾರಣವನ್ನೂ, ಸೃಷ್ಟಿಯ ವಿಧಾನವನ್ನೂ ತನ್ನ ಜನಕನ ಬಾಯಿಂದಲೇ ಕೇಳಿ ತಿಳಿಯಬೇಕೆಂದು ತಪಸ್ಸನ್ನಾಚರಿಸಿದ ಚತುರ್ಮುಖನಿಗೆ, ಆದಿಪುರುಷನಾದ ಆಸ್ವಾಮಿಯೇ ಹೇಳಿದ ಭಾಗವತ ಶಾಸ್ತ್ರವು ಅತ್ಯಂತ ಪ್ರಾಮಾಣಿಕವಾದುದು ಎಂಬುದು ಇದರಿಂದ ತಿಳಿದು ಬರುತ್ತದೆ.

**ಸ ಆದಿದೇವೋ ಭಜತಾಂ ಪರೋಗುರುಃ**
**ಸ್ವಧಿಷ್ಣ್ಯಮಾಸ್ಥಾಯ ಸಿಸೃಕ್ಷಯೈಕ್ಷತ ।**
**ತಾಂನಾಧ್ಯಗಚ್ಛದ್ದೃಶಮತ್ರ ಸಂಮತಾಂ**
**ಪ್ರಪಂಚ ನಿರ್ಮಾಣ ವಿಧಿರ್ಯಥಾ ಭವೇತ್ ॥ ೫ ॥**

ಭಜತಾಂ ಪರಃ ಗುರುಃ = ತಮ್ಮನ್ನು ಸೇವಿಸುವ ಸನಕಾದಿಗಳಿಗೆಲ್ಲಾ ಶ್ರೇಷ್ಠ ಗುರುಗಳಾದ; ಸಃ ಆದಿದೇವಃ = ದೇವತೆಗಳಲ್ಲೆಲ್ಲಾ ಮೊದಲಿಗರಾದ ಆ ಬ್ರಹ್ಮದೇವರು; ಸ್ವಧಿಷ್ಣ್ಯಂ ಆಸ್ಥಾಯ = ತಮಗೆ ಆವಾಸಸ್ಥಾನವಾದ ಕಮಲಪೀಠದಲ್ಲಿದ್ದುಕೊಂಡು; ಸಿಸೃಕ್ಷಯಾ = ಸೃಷ್ಟಿಯನ್ನು ಮಾಡಬೇಕೆಂದು; ಐಕ್ಷತ = ಸುತ್ತಲೂ ನೋಡಿದರು;

ಪ್ರಪಂಚನಿರ್ಮಾಣ ವಿಧಿಃ = ಪ್ರಪಂಚವನ್ನು ಸೃಷ್ಟಿಮಾಡುವ ವಿಧಾನವು; ಯಥಾಭವೇತ್= ಹೇಗೆ ಆದೀತು ಎಂಬುದನ್ನು ಕುರಿತು; ಅತ್ರ ಕುಳಿತಲ್ಲಿಂದ; ತಾಂ ಸಮ್ಮತಾಂದೃಶಂ = ಆ ಸಮರ್ಪಕವಾದ ದರ್ಶನವನ್ನು; ನಾಧ್ಯಗಚ್ಛತ್= ಕಾಣಲಾಗಲಿಲ್ಲ.

ಬ್ರಹ್ಮಾಂಡದೊಳಗೆ ತುಂಬಿದ್ದ ಗರ್ಭೋದಕದ ಬಿಂದುಗಳು ಸಿಡಿಯುತ್ತಿರಲು, ಪದ್ಮಸಂಭವರಾದ ಬ್ರಹ್ಮದೇವರಿಗೆ ತಾವು ಕುಳಿತಿದ್ದ ಕಮಲ ಪುಷ್ಪವು ಮಾತ್ರ ಕಾಣಿಸಿತೇ ಹೊರತು ಬೇರೆ ಏನೂ ಕಾಣುತ್ತಿರಲ್ಲಿಲ್ಲ. ಜಗತ್ಸೃಷ್ಟಿಗಾಗಿ ತಮಗೆ ಜನ್ಮ ಲಭಿಸಿರುವುದೆಂದು ಭಾವಿಸಿದರೂ ಆಸೃಷ್ಟಿಯ ಬಗೆ ಚೆನ್ನಾಗಿ ಮನಸ್ಸಿನಲ್ಲಿ ಮೂಡಲಿಲ್ಲ. ಅದನ್ನು ಕುರಿತು ಅವರು ಆಲೋಚಿಸಿದರು. ಬ್ರಹ್ಮದೇವರು ತಾವೇ ಸ್ವತಂತ್ರರಲ್ಲ. ಎಂಬ ತತ್ತ್ವವು ಇದರಿಂದ ತಿಳಿದು ಬರುತ್ತದೆ.

**ಸಂಚಿಂತಯನ್ದ್ವ್ಯಕ್ಷರಮೇಕದಾಂಭಸ್ಯುಪಾಶೃಣೋತ್**
**ದ್ವಿರ್ಗದಿತಂವಚೋವಿಭುಃ ।**
**ಸ್ಪರ್ಶೇಷು ಯತ್ಷೋಡಶಮೇಕವಿಂಶಂ ನಿಷ್ಕಿಂಚನಾನಾಂ**
**ನೃಪಯದ್ಧನಂ ವಿದುಃ ॥ ೬ ॥**

ನೃಪ = ಪರೀಕ್ಷಿದ್ರಾಜಾ; ಸ್ಪರ್ಶೇಷು = ಸ್ಪರ್ಶಾಕ್ಷರಗಳಲ್ಲಿ; ಯತ್ ಷೋಡಶಂ = ಹದಿನಾರನೆಯದಾದ ತಕಾರವೂ; ಏಕವಿಂಶಂ = ಇಪ್ಪತ್ತೊಂದನೆಯದಾದ ಪಕಾರವೂ; ಏಕದಾ = ಒಂದಾಗಿ; ನಿಷ್ಕಿಂಚನಾನಾಂ = ಜಗದ್ವ್ಯಾಪಾರವೊಂದರಲ್ಲಿಯೂ ಆಸಕ್ತಿ ಇಲ್ಲದವರಿಗೆ; ಯತ್ ಧನಂ ವಿದುಃ = ಯಾವುದನ್ನು ಪರಮೈಶ್ವರ್ಯವೆಂದು ಭಾವಿಸುವರೋ ಅಂತಹಃ; ದ್ವ್ಯಕ್ಷರಂ = 'ತಪ' ಎಂಬ ಎರಡಕ್ಷರಗಳನ್ನು; ಅಂಭಸಿ = ನೀರಿನ ತೊಟ್ಟುಗಳು ಬೀಳುವಲ್ಲಿ; ದ್ವಿರ್ಗದಿತಂ = ಎರಡು ಸಲ ಉಚ್ಚರಿತವಾದುದನ್ನು; ಉಪಾಶೃಣೋತ್ = ಗಮನಿಸಿ ಆಲಿಸಿದರು; ಸಂಚಿತಯತ್ = ಅದನ್ನು ಕುರಿತು ಆಲೋಚಿಸಿದರು.

ವ್ಯಾಪ್ತದರ್ಶಿಗಳಲ್ಲಿ ಸರ್ವೋತ್ತಮರಾದ ಬ್ರಹ್ಮಪದವಿಗೆ ಬಂದವರು, ನೀರಿನತೊಟ್ಟುಗಳು ಕಮಲದಳದ ಮೇಲೆ ಬಿದ್ದು ಉಂಟಾದ ಧ್ವನಿಯಲ್ಲಿ ದಿವ್ಯದರ್ಶನವನ್ನು ಪಡೆದರು. ಕಕಾರದಿಂದ ಮಕಾರದವರೆಗಿನ ಅಕ್ಷರಗಳು ಬಾಯೊಳಗಿನ ಎರಡೆರಡು ಭಾಗಗಳ ಸ್ಪರ್ಶದಿಂದ ಉತ್ಪನ್ನವಾಗುವುದರಿಂದ ಅವುಗಳಿಗೆ ಸ್ಪರ್ಶಾಕ್ಷರಗಳೆಂದು ಹೆಸರು 'ತಪ', 'ತಪ' ಎಂದು . ಕೇಳಿಸಿದ ಮಾತಿನಿಂದ ತಪಸ್ಸನ್ನಾಚರಿಸಬೇಕೆಂಬ ಅರ್ಥವನ್ನವರು ಗ್ರಹಿಸಿದರು. ಬ್ರಹ್ಮದೇವರ ಮಾತೇ

ಹೀಗಾದಮೇಲೆ, "ದೇವರನ್ನು ತೋರಿಸಿ ನೋಡೋಣ" ಎಂದು ಸುಲಭವಾಗಿ ಕೇಳಿಬಿಡುವ ಜನರನ್ನು ಕಂಡು ನಗಬೇಕೆ, ಅಳಬೇಕೆ! ತಪಸ್ಸಿನಿಂದ ಹೊರನೋಟವು ಒಳಗೆ ತಿರುಗಿದಲ್ಲದೆ ಭಗವಂತನ, ಭಗವದ್ವಿಷಯಗಳ ದರ್ಶನವಾಗುವುದಿಲ್ಲ.

**ನಿಶಮ್ಯತದ್ವಕ್ತೃದಿದೃಕ್ಷಯಾ**
**ದಿಶೋವಿಲೋಕ್ಯತತ್ರಾನ್ಯದಪಶ್ಯಮಾನಃ ।**
**ಸ್ವಧಿಷ್ಣ್ಯಮಾಸ್ಥಾಯ ವಿಮೃಶ್ಯತದ್ಧಿತಂ**
**ತಪಸ್ಯುಪಾದಿಷ್ಟ ಇವಾದಧೇಮನಃ** ॥ ೭ ॥

ನಿಶಮ್ಯ = 'ತಪ' ಎಂಬ ಶಬ್ದವನ್ನು ಆಲಿಸಿ; ತತ್ ವಕ್ತೃದಿದೃಕ್ಷಯಾ = ಆ ಮಾತನ್ನಾಡಿದವರನ್ನು ಕಾಣಬೇಕೆಂದು; ದಿಶಃ ವಿಲೋಕ್ಯ = ದಶದಿಕ್ಕುಗಳನ್ನೂ ನೋಡಿ; ತತ್ರ = ಅಲ್ಲೆಲ್ಲಿಯೂ; ಅನ್ಯತ್ = ಬೇರೆಯಾವುದನ್ನೂ; ಅಪಶ್ಯಮಾನಃ = ಕಾಣದವರಾಗಿ; ಸ್ವಧಿಷ್ಣ್ಯಂ ಆಸ್ಥಾಯ = ಪದ್ಮನಾಳದಲ್ಲಿ ಹೊಕ್ಕೂ ನೋಡಿ, ಅಲ್ಲಿಯೂ ಕಾಣದೆ ಪದ್ಮಪೀಠದಲ್ಲಿಯೇ ಕುಳಿತು; ತದ್ಧಿತಂ ವಿಮೃಶ್ಯ = ತನಗೆ ಹಿತವೆನಗುವ ರೀತಿಯನ್ನು ಕುರಿತು ಆಲೋಚಿಸಿ; ತಪಸಿ ಉಪಾದಿಷ್ಟಃ ಇವ = ತಪಸ್ಸು ಮಾಡಬೇಕೆಂದು ಉಪದೇಶವಾಯಿತೆಂದು ಭಾವಿಸಿ; ಮನಃ ಆದಧೇ = ತಪಸ್ಸನ್ನಾಚರಿಸಲು ಮನಸ್ಸುಮಾಡಿದರು.

೧೯೯ ಬ್ರಹ್ಮಕಲ್ಪಸಾಧನೆ ಮಾಡಿ ಬ್ರಹ್ಮಪಟ್ಟವನ್ನೇರಿದವರು ಮತ್ತೆ ತಪಸ್ಸನ್ನಾಚರಿಸಿ ಕರ್ತವ್ಯವಿಧಾನವನ್ನು ತಿಳಿಯಬೇಕಾಗಿರುವಾಗ, ಸಾಮಾನ್ಯರು ದೈವಸಂಕಲ್ಪವನ್ನರಿಯುವುದು, ಭಗವಂತನನ್ನು ಕಾಣುವುದು ಸುಲಭವೆಂದೆಣಿಸುವುದು ದಡ್ಡತನದ ಪರಮಾವಧಿ. ಪ್ರಪಂಚದ ವಿಷಯದಲ್ಲಿ ನಿಷ್ಕಿಂಚನರಾಗಬೇಕು; ಭಗವಂತನನ್ನೇ ತಮ್ಮ ಸರ್ವಸ್ವವೆಂದರಿತು ಅವನನ್ನು ಕಂಡು ಮೋದಿಸುವ ಬಗೆಯಲ್ಲಿ ಕರ್ತವ್ಯಪರರಾಗಬೇಕು.

**ದಿವ್ಯಂ ಸಹಸ್ರಾಬ್ದ ಮಮೋಘದರ್ಶನೋ**
**ಜಿತಾನಿಲಾತ್ಮಾ ವಿಜಿತೋಭಯೇಂದ್ರಿಯಃ ।**
**ಆತಪ್ಯತಸ್ಮಾಖಿಲ ಲೋಕತಾಪನಂ**
**ತಪಸ್ತಪೀಯಾಂಸ್ತಪತಾಂ ಸಮಾಹಿತಃ** ॥ ೮ ॥

ತಪತಾಂ ತಪೀಯಾನ್ = ತಪಸ್ವಿಗಳಲ್ಲಿ ಶ್ರೇಷ್ಠತಮರಾದ; ಅಮೋಘದರ್ಶನಃ = ತತ್ವಜ್ಞಾನಿಗಳಲ್ಲಿ ಸರ್ವೋತ್ತಮರಾದ ಜೀವೋತ್ತಮರು (ಬ್ರಹ್ಮದೇವರು); ಜಿತ ಅನಿಲ ಆತ್ಮಾ = ಶ್ವಾಸೋಚ್ಛ್ವಾಸ ಕ್ರಿಯೆಯನ್ನು ಸ್ತಂಭನಗೊಳಿಸಿ ಭಗವಂತನ ಅಧೀನ ಮಾಡಿ;

ವಿಜಿತ ಉಭಯ ಇಂದ್ರಿಯಃ = ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನು ವಶಪಡಿಸಿಕೊಂಡು ಮನಸ್ಸಿನಲ್ಲಿ ಕೇಂದ್ರಿಕರಿಸಿ; ಸಮಾಹಿತಃ = ಏಕಾಗ್ರಚಿತ್ತ ಉಳ್ಳವರಾಗಿ; ಅಖಿಲ ಲೋಕತಾಪನಂ = ತಪೋರೂಪವಾದ ಜ್ಞಾನದಿಂದ ಸಕಲ ಲೋಕಗಳನ್ನೂ ಬೆಳಗುವ ತಪೋರೂಪಿಯಾದ ಭಗವಂತನನ್ನು ಕುರಿತು; ದಿವ್ಯಂ ಸಹಸ್ರಾಬ್ದಂ = ದೇವಮಾನದ ಸಹಸ್ರವರ್ಷಗಳಷ್ಟುಕಾಲ; ಅತಪ್ಯತ = ಆಲೋಚನಾರೂಪವಾದ ತಪಸ್ಸನ್ನು ಆಚರಿಸಿದರು.

ಸಾಮಾನ್ಯ ತಿಳಿವಳಿಕೆಯುಳ್ಳವರು, ತಪಸ್ಸೆಂದರೆ ದೇಹ ಶೋಷಣೆಯೆಂಬ ಅರ್ಥವನ್ನು ಮಾತ್ರ ಗ್ರಹಿಸಿ, ಅಂತಹ ತಪಸ್ಸಿನಿಂದ ಲಭಿಸುವ 'ಸ್ಮಶಾನಮೌನ'ವೇ ಪರಮಾರ್ಥವೆಂದು ಹೇಳುವರು. ಆದರೆ, ಭಗವತ್ತತ್ವವನ್ನು ವಿಚಾರ ಪೂರ್ವಕವಾಗಿ ತಿಳಿದು, ಭಗವತ್ಪರ ಚಿಂತನಾಮೃತದಲ್ಲಿ ಮೀಯುತ್ತಾ ದೇಹಶೋಷಣೆಯ ಅಗತ್ಯವನ್ನರಿತು ತಪಸ್ಸನ್ನಾಚರಿಸುವವರು ಧನ್ಯರು. ಭಗವಂತನ ಮಹಿಮೆಯನ್ನು ಅವರವರ ಯೋಗ್ಯತಾನುಸಾರ ಪೂರ್ಣವಾಗಿ ತಿಳಿದು ಅವನ ದರ್ಶನಸುಖಾನುಭವ ಪಡೆಯಬೇಕಾದರೆ ಈ ರೀತಿಯಾಗಿ ಏಕಾಗ್ರಚಿತ್ತದಿಂದ ತಪಸ್ಸನ್ನಾಚರಿಸಬೇಕು. ಇಂತಹ ಆದರ್ಶಪ್ರಾಯವಾದ ತಪಸ್ಸನ್ನು ಬ್ರಹ್ಮದೇವರು ದೇವಮಾನದ ಒಂದುಸಾವಿರ ವರ್ಷಗಳಷ್ಟು ಕಾಲ ಆಚರಿಸಿದರು. ಶ್ರೀಮನ್ನಾರಾಯಣನ ನಾಭೀಕಮಲದಿಂದ ಉತ್ಪನ್ನರಾದ ಇವರ ಉದರದಲ್ಲಿ ಮುಂದೆ ಸೃಷ್ಟಿಯಲ್ಲಿ ಬರಬೇಕಾದ ಜೀವರೆಲ್ಲಾ ಇದ್ದರು. ಅವರಲ್ಲಿ ಉತ್ತಮ ದೇವತಾವರ್ಗಗಳವರು, ಬ್ರಹ್ಮದೇವರ ತಪಸ್ಸನ್ನು ಕಂಡು ಪಾರಕಲಿಯುತ್ತಿದ್ದರು.

**ತಸ್ಮೈಸ್ವಲೋಕಂಭಗವಾನ್ಸಭಾಜಿತಃ**
**ಸಂದರ್ಶಯಾಮಾಸ ಪರಂನಯತ್ಪದಂ ।**
**ವ್ಯಪೇತ ಸಂಕ್ಲೇಶವಿಮೋಹಸಾಧ್ವಸಂ**
**ಸಂದೃಷ್ಟವದ್ಭಿರ್ವಿಬುಧೈರಭಿಷ್ಟುತಂ** ॥ ೯ ॥

ಭಗವಾನ್ = ಭಗವಂತನು; ಸಭಾಜಿತಃ = ಬ್ರಹ್ಮದೇವರ ತಪಸ್ಸಿನಿಂದ ಸಂಪೂಜಿತನಾಗಿ; ಯತ್ ಪದಂಪರಂನ = ಯಾವಸ್ಥಾನವನ್ನು ಮೀರಿದ ಬೇರೆಯಾವುದೊಂದೂ ಇಲ್ಲವೋ ಅಂತಹ; ವ್ಯಪೇತ ಸಂಕ್ಲೇಶ ವಿಮೋಹ ಸಾಧ್ವಸಂ = ಸಂಸಾರಿಕಕ್ಲೇಶಗಳ ಮತ್ತು ಮೌಢ್ಯದ ಗೊಂದಲಗಳಿಲ್ಲದಿರುವ; ಸಂದೃಷ್ಟವದ್ಭಿಃ ವಿಬುಧೈಃ ಅಭಿಷ್ಟುತಂ = ಅಪರೋಕ್ಷಿಗಳಾದ ಜ್ಞಾನಿಗಳಿಂದ ಮುಖ್ಯವಾಗಿ ಪಡೆಯಬೇಕಾದ

ಸ್ಥಾನವೆಂದು ಸ್ತುತಿಸಲ್ಪಡುವ; ಸ್ವ ಲೋಕಂ = ತನ್ನವೈಕುಂಠಲೋಕವನ್ನು; ತಸ್ಮೈ = ಆ ಬ್ರಹ್ಮದೇವರಿಗೆ; ಸಂದರ್ಶಯಾಮಾಸ = ಚೆನ್ನಾಗಿತೋರಿಸಿದನು.

ಬ್ರಹ್ಮಜ್ಞಾನ ಪೂರ್ವಕವಾದ ಸಮಸ್ತಸಾಧನೆಗಳ ಗುರಿಯೂವೈಕುಂಠಲೋಕ ಪ್ರಾಪ್ತಿಯೇ ಹೊರತು, ಅದನ್ನೂಮೀರಿದ ಅನಿರ್ವಾಚ್ಯಸ್ಥಿತಿಯೊಂದಿದೆ ಎಂದು ಹೇಳುವ ಮಾತು, 'ಪರಂ ನಯತ್ಪದಂ' (= ಯತ್ ಪದಂ ವಿನಾಪರಂ ನ ಅಸ್ತಿ) ಎಂಬ ವೇದವ್ಯಾಸದೇವರ ಮಾತಿನಿಂದ ಸ್ಪಷ್ಟವಾಗಿ ನಿರಾಕೃತವಾಗಿರುವುದು.

**ನವರ್ತತೇ ಯತ್ರ ರಜಸ್ತಮಸ್ತಯೋ**
**ಸತ್ವಂ ಚಮಿಶ್ರಂ ನಚಕಾಲವಿಕ್ರಮಃ ।**
**ನಯತ್ರಮಾಯಾ ಕಿಮುತಾಪರೇ**
**ಹರೇರನುವ್ರತಾಯತ್ರ ಸುರಾಸುರಾರ್ಚಿತಾಃ** ॥ ೧೦ ॥

ಯತ್ರ = ಯಾವ ಪರಮಾತ್ಮನ ವೈಕುಂಠಲೋಕದಲ್ಲಿ; ರಜಸ್ತಮಸ್ತ್ಯಃ = ರಜೋಗುಣತಮೋಗುಣಗಳೂ; ಸತ್ವಂ = ಸತ್ವಗುಣವೂ; ಮಿಶ್ರಂ ಚ = ಇವುಗಳ ವಿವಿಧ ಮಿಶ್ರಣದಿಂದಾದ ವಸ್ತುಗಳೂ; ನವರ್ತತೇ = ಇರುವುದಿಲ್ಲವೋ; ಕಾಲವಿಕ್ರಮಃ ಚ ನ = ಕಾಲ ಚಕ್ರದ ಪರಿಣಾಮಗಳಾದ ವೃದ್ಧಿಕ್ಷಯಾದಿಗಳಿಲ್ಲವೋ; ಯತ್ರ ಮಾಯಾ ನ = ಎಲ್ಲಿ ಜಡಪ್ರಕೃತಿ ನಿಮಿತ್ತವಾದ ಮೋಹಗಳಿಲ್ಲವೋ ಅಲ್ಲಿ; ಕಿಮ್ ಉತ ಅಪರೇ = ಇನ್ನೂ ಬೇರೆ ವಿಧವಾದ ವಿಕಾರಗಳಿಗೆ ಅವಕಾಶವೆಲ್ಲುಂಟು ! ಯತ್ರ = ಯಾವ ಆ ಸ್ಥಾನದಲ್ಲಿ; ಸುರ ಅಸುರ ಅರ್ಚಿತಾಃ = ಅಸುವೆನಿಸಿಕೊಳ್ಳುವ ಹರಿಯಲ್ಲಿ ರತವಾದಮನಸ್ಸುಳ್ಳ ಜ್ಞಾನಿವರೇಣ್ಯರಾದ ದೇವತೆಗಳಿಂದ ಪೂಜ್ಯರಾದ; ಹರೇಃ ಅನುವ್ರತಾಃ = ಹರಿಯ ಚರ್ಯೆಗಳನ್ನನುಕರಿಸಿ ವರ್ತಿಸುವ ಮುಕ್ತರು ಇರುವರೋ, (ಅಂತಹ ಮುಕ್ತರ ಲೋಕವನ್ನು ಬ್ರಹ್ಮದೇವರಿಗೆ ತೋರಿಸಿದನು);

ಜಡ ಪ್ರಕೃತಿಯ ಪರಿಣಾಮಗಳಾದ ವಸ್ತುಗಳಿಲ್ಲದಿದ್ದರೂ ಲಕ್ಷ್ಮೀಸ್ವರೂಪವಾದ ಚಿದಾಕಾಶದಲ್ಲಿ ಬಿಂಬರಾದ ಲಕ್ಷ್ಮೀನಾರಾಯಣರ ಕ್ರಿಯೆಗಳಿಂದಲೇ ಕ್ರಿಯಾವಂತರಾದ, ದಿವ್ಯಜ್ಞಾನಿಗಳಾದ ದೇವತೆಗಳಿಂದ ಸ್ತುತ್ಯರಾದ ಮುಕ್ತಜೀವರು ತುಂಬಿರುವುದರಿಂದ, ವೈಕುಂಠಲೋಕವು ದಿವ್ಯತೇಜೋಮಯವಾದ, ಸುಖಾಶ್ರಯವಾದ ಸ್ಥಾನವೇ ಹೊರತು ಶೂನ್ಯಪ್ರಾಯವಾದುದಲ್ಲ. ಜಡತೇಜಸ್ಸಿನಲ್ಲಿ ಜಡವಸ್ತುಗಳ ಪರಿಚಯವನ್ನು ಮಾತ್ರ ಹೊಂದಿರುವ ನಮಗೆ ಚಿದಾತ್ಮಕ ವಸ್ತುಗಳ ಪರಿಚಯವಾಗುವುದು ಕಷ್ಟವೇ ಸರಿ.

ಸಮ್ಯಗಾಲೋಚನೆಯಿಂದ ಅದನ್ನು ಊಹಿಸಬಹುದು; ಯೋಗಸಾಮರ್ಥ್ಯದಿಂದ ಕಾಣಲೂ ಬಹುದು.

**ಶ್ಯಾಮಾವದಾತಾಃ ಶತಪತ್ರ ಲೋಚನಾಃ**
**ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ ।**
**ಸರ್ವೇಚತುರ್ಬಾಹವ ಉನ್ಮಿಷನ್ಮಣಿ**
**ಪ್ರವೇಕನಿಷ್ಕಾಭರಣಾಃ ಸುವರ್ಚಸಃ** ॥ ೧೧ ॥

ಶ್ಯಾಮ ಅವದಾತಾಃ = ನೀಲಮಣಿಯಂತೆ ದೋಷರಹಿತರೂ ಪರಿಶುದ್ಧರೂ ಆದ; ಶತಪತ್ರಲೋಚನಾಃ = ಕಮಲದಳದಂತೆ ವಿಶಾಲನೇತ್ರಗಳುಳ್ಳ; ಪಿಶಂಗವಸ್ತ್ರಾಃ = ಪೀತಾಂಬರಧಾರಿಗಳಾದ; ಸುರುಚಃ = ಉತ್ತಮ ಕಾಂತಿಯುಕ್ತರಾದ; ಸುಪೇಶಸಃ = ಅತ್ಯಂತ ಕೊಮಲ ಶರೀರಗಳುಳ್ಳವರಾದ; ಸರ್ವೇ = ವೈಕುಂಠವಾಸಿಗಳಾದ ಎಲ್ಲರೂ; ಚತುರ್ಬಾಹವಃ = ನಾಲ್ಕುತೋಳುಗಳುಳ್ಳವರಾಗಿ ಭಗವಂತನಂತೆ ರೂಪ ಉಳ್ಳವರು, (ಸಾರೂಪ್ಯಭಾಗಿಗಳು); ಉನ್ಮಿಷತ್‌ ಮಣಿ ಪ್ರವೇಕನಿಷ್ಕ ಆಭರಣಾಃ = ಹೊಳೆಯುವ ರತ್ನ ಮತ್ತು ಚಿನ್ನದ ಆಭರಣಗಳಿಂದ ಅಲಂಕೃತರಾದವರು; ಸುವರ್ಚಸಃ = ದಿವ್ಯತೇಜೋಯುಕ್ತ ಮುಖಕಮಲಗಳುಳ್ಳವರು.

ಇಲ್ಲಿ ಹೇಳಿರುವುದೆಲ್ಲಾ ಅಪ್ರಾಕೃತ ಶರೀರಿಗಳಾದ ವೈಕುಂಠವಾಸಿಗಳ ವರ್ಣನೆ. ಲಕ್ಷ್ಮೀಸ್ವರೂಪವಾದ ಪರಮಾತ್ಮನ ವೈಕುಂಠನಗರಿಯಲ್ಲಿ (ವಿರಜಾನದಿಯ ಒಳಗಿನ ಅಯೋಧ್ಯಾನಗರಿಯಲ್ಲಿ) ಉತ್ತಮ ಸೌಧಗಳು, ಸರೋವರಗಳು, ವನಪ್ರದೇಶಗಳು ಎಲ್ಲವೂ ಉಂಟು. ಆದರವು ಜಡ ನಿರ್ಮಿತಗಳಲ್ಲ. ಲಕ್ಷ್ಮೀಸ್ವರೂಪವಾದ ಸ್ಥಾನದಲ್ಲಿ ಮುಕ್ತಜೀವರು ಇರುವುದು ಹೇಗೆ ಎಂಬ ಸಂಶಯ ಸಾಮಾನ್ಯವಾಗಿ ಮೂಡಬಹುದು. ದ್ವೈತಾದ್ವೈತ ವಿವೇಕದಿಂದ ಇದಕ್ಕೆ ಪರಿಹಾರವನ್ನು ಕಂಡುಕೊಳ್ಳಬೇಕು. ಇಹಪ್ರಪಂಚದಲ್ಲಿಯೂ, ಮುಕ್ತಪ್ರಪಂಚದಲ್ಲಿಯೂ ವಸ್ತುಗಳಲ್ಲಿ ವಸ್ತುಗಳಂತೆ, ಜೀವರಲ್ಲಿ ಜೀವರಂತೆ ಇದ್ದು **ನಿರ್ಲಿಪ್ತರಾಗಿ** ವ್ಯಾಪಾರಗಳನ್ನು ಮಾಡುವವರು ಶ್ರೀಲಕ್ಷ್ಮೀನಾರಾಯಣರೇ. ಆದರೆ, ಇಹದಲ್ಲಿ ಅಜ್ಞಾನದಿಂದ ಜೀವರು ತಮ್ಮಲ್ಲಿ ತಮ್ಮಂತಿರುವ ಬಿಂಬನ ಜ್ಞಾನವಿಲ್ಲದೆ ಅಹಂಮಾನಿಗಳಾಗಿರುತ್ತಾರೆ; ಜ್ಞಾನಿಗಳು ಮಾತ್ರ ಉತ್ತಮ ಅನುಸಂಧಾನವುಳ್ಳವರಾಗಿರುತ್ತಾರೆ. ವೈಕುಂಠಸ್ಥಾನದಲ್ಲಿ ಭ್ರಾಂತಿಯ 'ಅಹಂ' ಇರುವುದಿಲ್ಲ. ಸ್ವರೂಪದ 'ನಾನು' ಎಂಬುದಿದ್ದು ಜೀವರು ತಮ್ಮನ್ನೂ ತಮ್ಮಬಿಂಬನನ್ನೂ ಪ್ರತ್ಯೇಕವೆಂದರಿತು, ಬಿಂಬವ್ಯಾಪಾರದಿಂದಲೇ ತಮ್ಮವ್ಯಾಪಾರಗಳು ನಡೆಯುತ್ತಿರುವುದನ್ನೂ ಕಾಣುತ್ತಾ, ಸ್ವಯೋಗ್ಯತಾನುಸಾರ ಸುಖಪೂರ್ಣರಾಗಿರುವರು.

ಬಿಂಬಪ್ರತಿಬಿಂಬ ಭಾವವೂ, ಆನಂದತಾರತಮ್ಯವೂ ಅಲ್ಲಿರುವುದರಿಂದ 'ನಾನೇ ಬ್ರಹ್ಮ ಬ್ರಹ್ಮನೇ ನಾನು' ಎಂಬ ದುಷ್ಟಬುದ್ಧಿಗೆ ಅವಕಾಶವಿರುವುದಿಲ್ಲ. **'ನಿರ್ಲಿಪ್ತತ್ವ'** ಎಂಬ ಮಾತಿನ ಅರ್ಥವು ಸ್ಪಷ್ಟವಾದಾಗ ಸಂಶಯವು ದೂರವಾಗುವುದು. ನಾಲ್ಕುತೋಳಿನ ಸಾರೂಪ್ಯವೆಂಬುದು ಸಾಯುಜ್ಯ, ಸಾಮೀಪ್ಯ, ಸಾಲೋಕ್ಯ, ಸಾರೂಪ್ಯವೆಂಬ ಚತುರ್ವಿಧ ಮುಕ್ತರಿಗೂ ಸಾಮಾನ್ಯಲಕ್ಷಣ. ಜೀವರ ಅಸ್ವಾತಂತ್ರ್ಯವೆಂಬದು ಇಲ್ಲಿಯೂ ಸುಸ್ಪಷ್ಟವಾಗಿರುವುದರಿಂದ ಜೀವಬ್ರಹ್ಮ ಏಕತಾವಾದಕ್ಕೆ ಅವಕಾಶವೇ ಇಲ್ಲದಂತಾಯಿತು.

**ಪ್ರವಾಳ ವೈದೂರ್ಯ ಮೃಣಾಲವರ್ಚಸಾಂ**
**ಪರಿಸ್ಫುರತ್ಕುಂಡಲ ಮೌಲಿಮಾಲಿನಾಂ ।**
**ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ**
**ಲಸದ್ವಿಮಾನಾವಲಿ ಭಿರ್ಮಹಾತ್ಮನಾಂ** ॥ ೧೨ ॥

ಪ್ರವಾಲ ವೈದೂರ್ಯ ಮೃಣಾಲ ವರ್ಚಸಾಂ = ಹವಳದಂತೆ, ವೈಡೂರ್ಯ ಮಣಿಯಂತೆ, ಕಮಲದಂಟಿನೊಳಭಾಗದಂತೆ, ವಿವಿಧಕಾಂತಿಯುಕ್ತ ಶರೀರಿಗಳಾದ; ಪರಿಸ್ಫುರತ್‌ಕುಂಡಲ ಮೌಲಿ ಮಾಲಿನಾಂ = ಹೊಳೆ ಹೊಳೆಯುವ ಕರ್ಣಾಭರಣಗಳಿಂದ, ಕಿರೀಟಗಳಿಂದ, ಹಾರಗಳಿಂದ ಶೋಭಿಸುವ; ಭ್ರಾಜಿಷ್ಣುಭಿಃ = ತೇಜಸ್ವಿಗಳಾದ; ಮಹಾತ್ಮನಾಂ = ಮಹಾಪುರುಷರ; ಲಸತ್ ವಿಮಾನಾವಲಿಭಿಃ = ದೇದೀಪ್ಯಮಾನವಾದ ಉಪ್ಪರಿಗೆಗಳ ಸಾಲುಗಳಿಂದ; ಪರಿತಃ = ಎಲ್ಲೆಲ್ಲಿಯೂ; ವಿರಾಜತೇ = ವೈಕುಂಠ ನಗರಿಯು ಪ್ರಕಾಶಮಾನವಾಗಿದೆ.

ವೈಕುಂಠದಲ್ಲಿನ ಉಪ್ಪರಿಗೆಗಳು, ಕುಂಡಲ ಕೀರೀಟ ಹಾರಾದಿಗಳು ಮುಕ್ತರ ಬಗೆಬಗೆಯ ಆನಂದಾನುಭವಗಳನ್ನು ಸೂಚಿಸತಕ್ಕವುಗಳಾಗಿವೆ.

**ವಿದ್ಯೋತಮಾನಃ ಪ್ರಮದೋತ್ತಮಾಭಿಃ**
**ಸುವಿದ್ಯುದಭ್ರಾವಲಿಭಿರ್ಯಥಾನಭಃ ।**
**ಶ್ರೀರ್ಯತ್ರ ರೂಪಿಣ್ಯುರುಗಾಯ ಪಾದಯೋಃ**
**ಕರೋತಿಮಾನಂ ಬಹುಧಾವಿಭೂತಿಭಿಃ** ॥ ೧೩ ॥

ಬಹುಧಾ ವಿಭೂತಿಭಿಃ = ನಾನಾಬಗೆಯ ತನ್ನ ಸಾಮರ್ಥ್ಯ ವಿಶೇಷಗಳಿಂದ; ರೂಪಿಣೀ ಶ್ರೀಃ = ಆಕಾರಗಳನ್ನು ಪ್ರಕಟಿಸುವ ಲಕ್ಷ್ಮೀದೇವಿಯು; ಯತ್ರ = ಯಾವ ವೈಕುಂಠ ಲೋಕದಲ್ಲಿ; ಉರುಗಾಯಪಾದಯೋಃ = ಪರಮಕೀರ್ತಿ ಶಾಲಿಯಾದ ಪುರುಷೋತ್ತಮನ ಪಾದಗಳ; ಮಾನಂ = ಅರ್ಚನೆಯನ್ನು; ಕರೋತಿ =

ಆಚರಿಸುವಳೋ, ಅಲ್ಲಿ; ಸುವಿದ್ಯುದಭ್ರಾವಲಿಭಿಃ = ಕಣ್ಣುಕೋರೈಸುವ ಮಿಂಚು ಬಳ್ಳಿಗಳುಳ್ಳ ಮೋಡಗಳಿಂದ; ನಭಃ ಯಥಾ = ಆಕಾಶವು ಹೇಗೋ ಹಾಗೆ; ಪ್ರಮದೋತ್ತಮಾಭಿಃ = ಉತ್ತಮಲಲನಾಮಣಿಯರಿಂದ; ವಿದ್ಯೋತಮಾನಃ = ವೈಕುಂಠಲೋಕವು ಪ್ರಕಾಶಿಸುತ್ತಿದೆ.

ಹಿಂದಿನ ಶ್ಲೋಕಗಳಲ್ಲಿ ಮುಕ್ತರ ಇರವನ್ನು ವರ್ಣಿಸಿದಂತೆ ಇಲ್ಲಿ ಆಲೋಕದ ಸ್ತ್ರೀರತ್ನಗಳ ವರ್ಣನೆಯನ್ನು ವಿಶೇಷ ರೀತಿಯಿಂದ ನಿರೂಪಿಸಿದ್ದಾರೆ. ಇಲ್ಲಯೂ ಬಿಂಬ ಪ್ರತಿಬಿಂಬ ಭಾವದಿಂದ ಅರ್ಥಗ್ರಹಣ ಮಾಡಬೇಕು. ಅನ್ಯಾಪೇಕ್ಷೆಯಿಲ್ಲದ ಭಗವಂತನು ತನ್ನನ್ನು ಬಗೆ ಬಗೆಯಾಗಿ ಅರ್ಚಿಸುವ ಲಕ್ಷ್ಮೀದೇವಿಗೆ ಆನಂದ ಪ್ರದನಾಗುವಾಗಲೇ, ಅಲ್ಲಿನ ವಿವಿಧ ಜೀವರಿಗೂ ಅವರವರ ಯೋಗ್ಯತಾನುಸಾರ ಆನಂದಪ್ರದನಾಗುತ್ತಾನೆ. ಅಲ್ಲಿನ ಸ್ತ್ರೀಯರ ಸೌಂದರ್ಯಾತಿಶಯವು ತಾರತಮ್ಯಾನುಸಾರವಾಗಿ ಲಕ್ಷ್ಮೀದೇವಿಯ ಸೌಂದರ್ಯದ ಪ್ರತಿಬಿಂಬರೂಪವಾಗಿರುವುದು.

**ಪ್ರೇಂಖಸ್ಥಿತಾಯಾಃ ಕುಸುಮಾಕರಾನು-**
**ಗೈರ್ವಿಗೀಯಮಾನಾ ಪ್ರಿಯಕರ್ಮಗಾಯತೀ ।**
**ದದರ್ಶತತ್ರಾಖಿಲ ಸಾತ್ವತಾಂ ಪತಿಂ ಶ್ರೀಯಃ**
**ಪತಿಂ ಯಜ್ಞಪತಿಂ ಜಗತ್ಪತಿಂ** ॥ ೧೪ ॥

ಯಾಃ = ಯಾವ ಮುಕ್ತ ಬ್ರಹ್ಮಾದಿಗಳು; ಕುಸುಮಾಕರಾನುಗಾಃ = ವಸಂತ ಋತುಮಾನಿಯ ಸಹವರ್ತಿಗಳಾದ ಕೋಗಿಲೆ ಮೊದಲಾದ ಪಕ್ಷಿಗಳ ರೂಪುಳ್ಳವರಾಗಿ; ಪ್ರೇಂಖಸ್ಥಿತಾಃ = ತಮತಮಗೆ ಉಚಿತಗಳಾದ ತೂಗುಯ್ಯಾಲೆಗಳ ಮೇಲೆ ಕುಳಿತಿರುವರೋ; ತೈಃ = ಅವರಿಂದ; ವಿಗೀಯಮಾನಾ = ಸ್ತುತಿಸಲ್ಪಡುವ; ಪ್ರಿಯಕರ್ಮಗಾಯತೀ = ಭಗವಂತನ ಕರುಣಾಮಯ ಕ್ರೀಡೆಗಳನ್ನು ವರ್ಣಿಸಿ ಹಿಗ್ಗುವ ಲಕ್ಷ್ಮೀದೇವಿ ಎಲ್ಲಿರುವಳೋ; ತತ್ರ = ಅಂತಹ ಶ್ವೇತದ್ವೀಪ ಮಂದಿರದಲ್ಲಿ; ಅಖಿಲ ಸಾತ್ವತಾಂ ಪತಿಂ = ಮಂಗಳ ಸ್ವರೂಪರಾದ ಸಕಲ ಮುಕ್ತರಿಗೂ ಒಡೆಯನಾದ; ಶ್ರೀಯಃ ಪತಿಂ = ಲಕ್ಷ್ಮೀಕಾಂತನನ್ನು; ಯಜ್ಞಪತಿಂ = ಸಕಲವಿಧ ಪೂಜೆಗಳನ್ನೂ ಸ್ವೀಕರಿಸಿ ಫಲಕೊಡುವ ಸ್ವಾಮಿಯನ್ನು; ಜಗತ್ಪತಿಂ = ಜಗದೊಡೆಯನನ್ನು; ದದರ್ಶ = ಬ್ರಹ್ಮದೇವರು ನೋಡಿದರು.

ವೈಕುಂಠ, ಶ್ವೇತದ್ವೀಪ, ಅನಂತಾಸನಗಳೆಂಬ ಮೂರು ಮುಕ್ತಸ್ಥಾನಗಳ ಒಡೆಯನಾದ ಶ್ರೀಹರಿಗೆ ತ್ರಿಕಕುಬ್ಧಾಮನೆಂದು ಹೆಸರು. ಸಾಂಶರಾದ ಬ್ರಹ್ಮಾದಿ ದೇವತೆಗಳು ಆ ಮೂರುಸ್ಥಾನಗಳಲ್ಲಿಯೂ ಇದ್ದು, ಭಗವಂತನ ವಿವಿಧ ವೈಭವಗಳನ್ನು

ಕಂಡು ಹಿಗ್ಗುವರು. ಮೂಲ ಮುಕ್ತಸ್ಥಾನ, ವೈಕುಂಠ; ಅಲ್ಲಿವಾಸುದೇವ ರೂಪಿಭಗವಂತ. ಅವತಾರರೂಪಗಳಿಗೆ ಆಶ್ರಯವಾದ ಪದ್ಮನಾಭರೂಪದಿಂದ ಶ್ವೇತದ್ವೀಪದಲ್ಲಿ ವಾಸ. ಅದು ಜಗ್ರದ್ರಕ್ಷಣೆಯ ಸಲುವಾಗಿರುವುದರಿಂದ ಆ ಶ್ವೇತದ್ವೀಪವು ಭೂಮಂಡಲದಲ್ಲಿಯೇ, ಕ್ಷೀರಸಮುದ್ರದಲ್ಲಿ ಒಂದೂವರೇಲಕ್ಷ ಯೋಜನೆದೆತ್ತರದ ಹಾಲಿನ ಕಂಬದ ಮೇಲೆ ವಿಸ್ತರಿಸಲ್ಪಟ್ಟಿದೆ. ಎತ್ತರ ಐವತ್ತು ಲಕ್ಷ. ಅನಂತಾಸನವೆಂಬುದು ಯಜ್ಞರೂಪಗಳಾದ ಪೂಜಾಕರ್ಮಗಳಿಂದ ಭಗವಂತನನ್ನು ಮೆಚ್ಚಿಸಿದ ಮಹಾಯೋಗಿಗಳು ಆ ಸ್ವಾಮಿಯ ದರ್ಶನವನ್ನು ಪಡೆಯಲು ಅನುಕೂಲಿಸುವಂತೆ, ಘನೋದಕದ ಉತ್ತರದಿಕ್ಕಿನಲ್ಲಿ, ಒಂದು ಲಕ್ಷಯೋಜನೆದೆತ್ತರದ ಘನೋದಕಸ್ತಂಭದ ಮೇಲೆ ಕಂಗೊಳಿಸುವಂತಹದು. ಅಲ್ಲಿ ಅನಂತಶಯನರೂಪ. ಹೀಗಿರುವುದರಿಂದ ಹದಿನಾರು ಕೋಟಿ ಯೋಜನದೆತ್ತರದಲ್ಲಿರುವ ವೈಕುಂಠದಲ್ಲಿ 'ಸಾತ್ವಾತಾಂಪತಿಂ' ಎಂದೂ, ಜಗತ್ಪಾಲನಾ ಕಾರಣವಾದ ಪದ್ಮನಾಭ ರೂಪಿಯನ್ನು 'ಶ್ರಿಯಃ ಪತಿಂ' ಎಂದೂ, ಯೋಗಿದರ್ಶನ ಸಾಧ್ಯನಾದ ಅನಂತ ಶಯನನನ್ನು 'ಯಜ್ಞಪತಿಂ' ಎಂದೂ ವರ್ಣಿಸಿದ್ದಾರೆ. ಮುಕ್ತಾಮುಕ್ತಪ್ರಪಂಚಗಳ ಪಾಲಕನಾದುದರಿಂದ ಅವನು ಜಗತ್ಪತಿ. ಆತ್ಮಮಾಯಾ ಕ್ರಿಯೆಯನ್ನು ವಿರಮಿಸಿ ಮುಕ್ತರ ನಡುವೆ ಮೆರೆಯುವ ಮುಕ್ತರೊಡೆಯನ ರೂಪವು ಮೂಲರೂಪವೇ ಹೊರತು ಕೆಲವರು ಭಾವಿಸಿರುವಂತೆ ಅದು ಮಾಯಾಪ್ರವಿಷ್ಟರೂಪವಲ್ಲ.

**ಸುನಂದ ನಂದ ಪ್ರಬಲಾರ್ಹಣಾದಿಭಿಃ**
**ಸ್ವಪಾರ್ಷ್ದಮುಖ್ಯೈಃ ಪರಿಸೇವಿತಂ ವಿಭುಂ ।**
**ಭೃತ್ಯ ಪ್ರಸಾದಾಭಿಮುಖಂ ದೃಗಾಸವೈಃ**
**ಪ್ರಸನ್ನ ಹಾಸಾರುಣ ಲೋಚನಾನನಂ** ॥ ೧೫ ॥

ಸುನಂದ ನಂದ ಪ್ರಬಲ ಅರ್ಹಣಾದಿಭಿಃ = ಸುನಂದ, ನಂದ, ಪ್ರಬಲ, ಅರ್ಹಣ ಮೊದಲಾದ; ಸ್ವಪಾರ್ಷ್ದ ಮುಖ್ಯೈಃ = ಮುಕ್ತರಾದ ತನ್ನ ದ್ವಾರಪಾಲಕರಿಂದ; ಪರಿಸೇವಿತಂ = ಸೇವೆಯನ್ನು ಕೈಗೊಳ್ಳುತ್ತಿರುವ; ವಿಭುಂ = ಸರ್ವತ್ರವ್ಯಾಪ್ತನಾದರೂ ಪರಿಚ್ಛಿನ್ನರೂಪದಿಂದ ದರ್ಶನ ಕೊಡುವ; ಭೃತ್ಯಪ್ರಸಾದಾಭಿಮುಖಂ = ತನ್ನ ಸೇವಕರಿಗೆ ಸತ್ಫಲಗಳನ್ನು ಕೊಡಲು ಸಿದ್ಧನಾಗಿರುವ; ದೃಕ್ ಅಸವೈಃ = ಅಮೃತಮಯವಾದ ದೃಷ್ಟಿಯಿಂದಲೂ; ಪ್ರಸನ್ನಹಾಸ = ಕರುಣಾಪೂರ್ಣವಾದ ಮಂದಹಾಸದಿಂದಲೂ; ಅರುಣ ಲೋಚನ = ನಸುಗೆಂಪಿನಂಚುಗಳುಳ್ಳ ದಿವ್ಯನೇತ್ರಗಳಿಂದಲೂ; (ಶೋಭಾಯ ಮಾನವಾದ); ಆನನಂ = ಭಗವಂತ ಮುಖಪದ್ಮವನ್ನು (ದದರ್ಶ = ಬ್ರಹ್ಮದೇವರು ನೋಡಿದರು).

ಭಗವಂತನ ದಿವ್ಯ ದರ್ಶನವೇ ಸಕಲ ಇಷ್ಟಾರ್ಥಪೂರಕವೂ ಆನಂದ ಪ್ರದವೂ ಆಗಿರುವುದೆಂಬುದನ್ನಿಲ್ಲಿ ವರ್ಣಿಸಿದ್ದಾರೆ. ಇಷ್ಟಾರ್ಥಗಳಲ್ಲೆಲ್ಲಾ ಅತಿ ಶ್ರೇಷ್ಠವಾದುದು ಇಂತಹ ದರ್ಶನ.

**ಕಿರೀಟಿನಂ ಕುಂಡಲಿನಂ ಚತುರ್ಭುಜಂ**
**ಪೀತಾಂಶುಕಂವಕ್ಷಸಿ ಲಕ್ಷಿತಂ ಶ್ರಿಯಾ ।**
**ಅಧ್ಯರ್ಹಣೀಯಾಸನಮಾಸ್ಥಿತಂ ವಿಭುಂ**
**ವೃತಂ ಚತುಃ ಷೋಡಶ ಪಂಚಶಕ್ತಿಭಿಃ** ॥ ೧೯ ॥

ಕಿರೀಟಿನಂ = ಸಹಜ ಕಿರೀಟಾಲಂಕೃತನಾದ; ಕುಂಡಲಿನಂ = ಸಹಜ ಕುಂಡಲ ಮಂಡಿತನಾದ; ಚತುರ್ಭುಜಂ = ನಾಲ್ಕುತೋಳಿನ; ಪೀತಾಂಶುಕಂ = ಪೀತಾಂಬರ ಧಾರಿಯಾದ; ವಕ್ಷಸಿ ಶ್ರಿಯಾಲಕ್ಷಿತಂ = ಎದೆಯಮೇಲೆ ಶ್ರೀವತ್ಸ ಚಿಹ್ನೆಯಿಂದ ಯುಕ್ತನಾದ; ಅಧ್ಯರ್ಹಣೀಯ ಆಸನಂ ಆಸ್ಥಿತಂ = ಉತ್ತಮವಾದ ಆಸನದಲ್ಲಿ ಕುಳಿತಿರುವ; ಚತುಷ್ಷೋಡಶ ಪಂಚಶಕ್ತಿಭಿಃ ಯುತಂ = ನಾಲ್ಕು, ಹದಿನಾರು, ಐದು ಶಕ್ತಿಗಳಿಂದ ಕೂಡಿರುವ; ವಿಭುಂ = ಸರ್ವೇಶ್ವರನಾದ ಶ್ರೀಮನ್ನಾರಾಯಣನನ್ನು; ದದರ್ಶ = ಬ್ರಹ್ಮದೇವರು ನೋಡಿದರು.

ಮುಕ್ತರ ಆಕಾರ ಅಲಂಕಾರಾದಿಗಳು ಭಗವಂತನ ಆಕಾರ ಅಲಂಕಾಗಳಂತಿದ್ದರೂ ಶ್ರೀವತ್ಸವೆಂಬುದು ಶ್ರೀಮನ್ನಾರಾಯಣನಲ್ಲಿ ಮಾತ್ರ ಇರುವ ಚಿಹ್ನೆ. ಇದರಿಂದ, ಮುಕ್ತಿಯಲ್ಲಿಯೂ ಜೀವೇಶ್ವರ ಭೇದ ಉಂಟೆಂಬುದು ವ್ಯಕ್ತವಾಗುವುದು. ನಾಲ್ಕುಶಕ್ತಿಗಳು– (i) ಇಚ್ಛೆ, ಜ್ಞಾನ, ಕ್ರಿಯಾ, ಬಲಾ; (ii) ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ; (iii) ಆತ್ಮಾ, ಅಂತರಾತ್ಮಾ, ಪರಮಾತ್ಮಾ, ಜ್ಞಾನಾತ್ಮಾ. ಹದಿನಾರು ಶಕ್ತಿಗಳುः– (i) ಮೋಚಿಕಾ, ಸೂಕ್ಷ್ಮಾ, ಅಸೂಕ್ಷ್ಮಾ, ಅಮೃತಾ, ಜ್ಞಾನಾಮೃತಾ, ಆಪ್ಯಾಯಿನೀ, ವ್ಯಾಪಿನೀ, ವ್ಯೋಮರೂಪಿಣೀ, ಅನಂತಾ, ಅಣಿಮಾ, ಮಹಿಮಾ, ಲಘಿಮಾ, ಪ್ರಾಪ್ತಿ, ಪ್ರಕಾಶ, ಈಶಿತ್ವ, ಪ್ರಾಕಾಮ್ಯ, (ii) ವಾಸುದೇವಾದಿ ಹದಿನಾರು ರೂಪಗಳಿಂದ ಪ್ರಕಟವಾಗುವ ಶಕ್ತಿವಿಶೇಷಗಳು ಐದು ಶಕ್ತಿಗಳುः– ವಿಮಲೋತ್ಕರ್ಷಿಣೀ, ಜ್ಞಾನ, ಕ್ರಿಯಾ, ಯೋಗ, ವಶಿತ್ವ.

ಭಗವಂತನಿಗೂ ಅವನ ಶಕ್ತಿಗಳಿಗೂ ಯಾವ ಭೇದವೂ ಇಲ್ಲ. ಎಲ್ಲವೂ ಅವನ ಸಂಕಲ್ಪರೂಪವಾದುವು. ಕಾರ್ಯಭೇದಗಳ ದೃಷ್ಟಿಯಿಂದ ವಿಶೇಷ ದರ್ಶನ.

**ಯುಕ್ತಂ ಭಗೈಃ ಸ್ವೈರಿತರತ್ರ ಚಾಧ್ರುವೈಃ**
**ಸ್ವಏವಧಾಮನ್ ರಮ ಮಾಣಮೀಶ್ವರಂ ।**
**ತದ್ದರ್ಶನಾಹ್ಲಾದ ಪರಿಪ್ಲುತಾಂತರೋ**
**ಹೃಷ್ಯತ್ತನುಃ ಪ್ರೇಮ ಭರಾಶ್ರುಲೋಚನಃ** ॥ ೧೭ ॥

**ನನಾಮ ಪಾದಾಂಬುಜಮಸ್ಯ ವಿಶ್ವಸೃಕ್**
**ಯತ್ಪಾರಮಹಂಸ್ಯೇನ ಪಥಾಧಿಗಮ್ಯತೇ** || ೧೮ ||

ಸ್ವೈಃ ಭಗ್ಯೈಃ ಯುಕ್ತಂ = ತನ್ನ ಸ್ವರೂಪಭೂತವೇ ಆದ ವಿವಿಧ ಶಕ್ತಿಗಳಿಂದ ಯುಕ್ತನಾದ; ಇತರತ್ರ ಚ = ಬೇರೆ ಅಧಿಷ್ಠಾನಗಳಲ್ಲಿಯದರೋ; ಅಧ್ರುವೈಃ = ತಾತ್ಕಾಲಿಕ ಶಕ್ತಿಗಳನ್ನು ಪ್ರದರ್ಶಿಸುವ; ಸ್ವಏವಧಾಮನ್ ರಮಮಾಣಂ = ಸ್ವರಮಣನಾದ; ಈಶ್ವರಂ = ಸರ್ವೇಶ್ವರನಾದ ಶ್ರೀಮನ್ನಾರಾಯಣನನ್ನು; (ದದರ್ಶ = ಬ್ರಹ್ಮದೇವರು ಕಂಡರು); ತದ್ದರ್ಶನ ಆಹ್ಲಾದ ಪರಿಪ್ಲುತ ಅಂತರಃ = ಆ ಭಗವಂತನ ದರ್ಶನದಿಂದ ಆನಂದ ಭರಿತವಾದ ಅಂತರಂಗವುಳ್ಳವರಾಗಿ; ಹೃಷ್ಯತ್ತನುಃ = ರೋಮಾಂಚಿತ ಶರೀರವುಳ್ಳವರಾಗಿ; ಪ್ರೇಮಭರಾಶ್ರುಲೋಚನಃ = ಆನಂದಬಾಷ್ಪಪೂರಿತಲೋಚನರಾಗಿ; ಯತ್ ಪಾರಮಹಂಸ್ಯೇನ ಪಥಾ ಅಧಿಗಮ್ಯತೇ = ಯಾವುದು ಉತ್ತಮ ಸನ್ಯಾಸ ಧರ್ಮಾಚರಣೆಯಿಂದ ಮಾತ್ರ ಲಭಿಸುವುದೋ, ಅಂತಹ; ಅಸ್ಯ ಪಾದಾಂಬುಜಂ = ಈ ಭಗವಂತನ ಪಾದಕಮಲಗಳನ್ನು ಉದ್ದೇಶಿಸಿ; ವಿಶ್ವಸೃಕ್ = ಜಗತ್ ಸೃಷ್ಟಿ ಮಾಡಿಲಿರುವ ಬ್ರಹ್ಮದೇವರು; ನನಾಮ = ಭಕ್ತಿ ಭರದಿಂದ ನಮಸ್ಕರಿಸಿದರು.

ಭಗವಂತನ ದಿವ್ಯದರ್ಶನ, ಅವನ ಪಾದಕಮಲಗಳಿಗೆ ಭಕ್ತಿಯಿಂದ ನಮಸ್ಕಾರ ಮಾಡುವುದು, ಇದೇ ಪರಮಭಾಗ್ಯ; ಸುಲಭವಾಗಿ ಲಭಿಸುವುದಲ್ಲ. ಉತ್ತಮ ಸನ್ಯಾಸ ಧರ್ಮದಿಂದಲೇ ಅದು ಸಾಧ್ಯ. ಸನ್ಯಾಸವೆಂದರೆ ಸಾಂಸಾರಿಕ ಸಂಬಂಧಗಳನ್ನು ಬಿಡುವುದು; ಭಗವಂತನಲ್ಲಿಯೇ ಮನಸ್ಸನಿಟ್ಟು ನಡೆದುಕೊಳ್ಳುವುದು.

**ತಂ ಪ್ರೀಯಮಾಣಂ ಸಮುಪಸ್ಥಿತಂ ಕವಿಂ**
**ಪ್ರಾಜಾವಿಸರ್ಗೇನಿಜ ಶಾಸನಾರ್ಹಣಂ ||**
**ಬಭಾಷ ಈಷತ್ಸ್ಮಿತ ಶೋಚಿಷಾಗಿರಾಪ್ರಿಯಃ**
**ಪ್ರಿಯಂ ಪ್ರೀತಮನಾಃ ಕರೇಸ್ಪೃಶನ್** || ೧೯ ||

ಸಮುಪಸ್ಥಿತಂ = ಉಪದೇಶಕ್ಕೆ ಪೂರ್ಣಸಿದ್ಧನಾದ; ಪ್ರೀಯಮಾಣಂ = ಪ್ರೀತಿಪಾತ್ರನಾದ; ಪ್ರಜಾವಿಸರ್ಗೇ = ಬ್ರಹ್ಮಾಂಡಗತ ಲೋಕಗಳಲ್ಲಿ ಪ್ರಜಾ ಸೃಷ್ಟಿಯನ್ನು ಮಾಡುವ ವಿಷಯದಲ್ಲಿ; ನಿಜಶಾಸನಾರ್ಹಣಂ = ತನ್ನ ಉಪದೇಶಕ್ಕೆ ಯೋಗ್ಯನಾದ; ತಂಕವಿಂ = ಜ್ಞಾನಿಶ್ರೇಷ್ಠನಾದ ಆ ಬ್ರಹ್ಮನನ್ನು ಕುರಿತು; ಪ್ರೀತಮನಾಃ = ಸಂತುಷ್ಟನಾದ; ಪ್ರಿಯಃ = ಬ್ರಹ್ಮಪದವಿಗೆ ಬಂದ ಮುಖ್ಯಪ್ರಾಣನಿಗೆ ಅತ್ಯಂತ ಪ್ರಿಯನಾದ ಶ್ರೀಹರಿಯು; ಕರೇಸ್ಪೃಶನ್= ಕೈಯಿಂದ ಸ್ಪರ್ಶಮಾಡಿ (ಮೈಸವರಿ); ಸ್ಮಿತ ಶೋಚಿಷಾಗಿರಾ =

ಮುಗುಳ್ನಗೆಯ ಕಾಂತಿಯಿಂದ ಹೊರಹೊಮ್ಮುವ ಮಾತಿನಿಂದ; ಪ್ರಿಯಂ = ಲೋಕಹಿತಾರ್ಥವಾದುದನ್ನು; ಈಷತ್ ಬಭಾಷ = ಸಂಗ್ರಹವಾಗಿ (ಸೂತ್ರರೂಪವಾಗಿ) ಹೇಳಿದನು.

ಇಲ್ಲಿ ಬ್ರಹ್ಮದೇವರ ಹಿರಿಮೆಯೂ, ಶ್ರೀಹರಿಯ ಗರಿಮೆಯೂ ಚೆನ್ನಾಗಿ ಚಿತ್ರಿತವಾಗಿದೆ. ಪರಮಾತ್ಮನ ಕಾರುಣ್ಯದ ಬಗೆ ವ್ಯಕ್ತವಾಗಿದೆ. ಸೂತ್ರರೂಪವಾಗಿ ಎಂದರೆ, ಸ್ವಲ್ಪಮಾತುಗಳಲ್ಲಿ, ಸಂಶಯಗಳಿಗೆ ಆಸ್ಪದವಿಲ್ಲದೆ, ಬಹಳ ಅರ್ಥಗರ್ಭಿತವಾಗಿ ಹೇಳುವುದು.

**ಶ್ರೀಭಗವನುವಾಚಃ—** ಶ್ರೀಹರಿಯ ಹೇಳಿದನು.

**ತ್ವಯಾಹಂ ತೋಷಿತಃ ಸಮ್ಯಕ್ ವೇದಗರ್ಭ ಸಿಸೃಕ್ಷಯಾ ।**
**ಚಿರಂಭೃತೇನತಪಸಾ ದುಸ್ತೋಷಃ ಕೂಟಯೋಗಿನಾಂ ॥ ೨೦ ॥**

ಕೂಟಯೋಗಿನಾಂ ದುಸ್ತೋಷಃ = ಕೇವಲ ತಪಸ್ಸಿನಿಂದ ಪ್ರೀತನಾಗದ; ಅಹಂ = ನಾನು; ಹೇವೇದಗರ್ಭ = ಎಲೈ ಬ್ರಹ್ಮ; ತ್ವಯಾ = ನಿನ್ನಿಂದ; ಸಿಸೃಕ್ಷಯಾ = ಸೃಷ್ಟಿಯ ಬಗೆಯನ್ನು ತಿಳಿಯುವುದಕ್ಕಾಗಿ; ಚಿರಂಭೃತೇನ ತಪಸಾ = ಬಹುಕಾಲ ಏಕಾಗ್ರತೆಯಿಂದ ಆಚರಿಸಿದ ತಪಸ್ಸಿನಿಂದ; ಸಮ್ಯಕ್ ತೋಷಿತಃ = ಉತ್ತಮರೀತಿಯಲ್ಲಿ ಸಂತುಷ್ಟನಾಗಿದ್ದೇನೆ.

ಭಗವಂತನು ತನ್ನ ನಿಜಭಕ್ತರ ಶ್ರದ್ಧೆಯ ತಪಸ್ಸಿಗೆ ಮೆಚ್ಚುವನೇ ಹೊರತು, ಅನ್ಯರು ಆಚರಿಸುವ ನಾಮಮಾತ್ರತಪಸ್ಸಿಗೆ ಮೆಚ್ಚುವವನಲ್ಲ.

**ವರಂ ವರಯ ಭದ್ರಂತೇ ವರೇಶಂ ಮಾಭಿವಾಂಛಿತಂ ।**
**ಸರ್ವಶ್ರೇಯಃ ಪರಿಶ್ರಾಮಃ ಪುಂಸಾಂಮದ್ದರ್ಶನಾವಧಿಃ ॥ ೨೧ ॥**

ಪುಂಸಾಂ = ಪುರುಷಾರ್ಥ ಸಾಧಕರಿಗೆ; ಮದ್ದರ್ಶನ ಅವಧಿಃ = ಕಟ್ಟಕಡೆಯದಾಗಿ ಲಭಿಸುವ ನನ್ನ ದರ್ಶನವೇ; ಸರ್ವಶ್ರೇಯಃ = ಸಕಲ ಪುರುಷಾರ್ಥ ಪ್ರದವಾದುದು, ಮತ್ತು ಪರಿಶ್ರಾಮಃ = ತಪ ಆದಿ ಸಾಧನಗಳ ಪರಮಪ್ರಯೋಜನವು; ತೇ ಭದ್ರಂ = ನಿನಗೆ ಮಂಗಳವಾಗಲಿ; ವರೇಶಂ = ವರಪ್ರದರಲ್ಲಿ ಅಗ್ರಗಣ್ಯನಾದ; ಮಾ = ನನ್ನನ್ನು ಕುರಿತು; ವಾಂಛಿತಂ ವರಂ = ಬೇಕಾದ ವರವನ್ನು; ವರಯ = ಬೇಡು.

ವರದೇಶರಿಗೆ ವರಪ್ರದನಾದವನು ಶ್ರೀಹರಿ. ಅವನ ದರ್ಶನವೇ ದೊಡ್ಡವರ. ಆದರಿಂದಲೇ ಸಕಲ ಇಷ್ಟಾರ್ಥಗಳೂ ಸಾಧಿತವಾಗುವುವು. ವರವನ್ನು ಬೇಡೆಂದು ಹೇಳಿಸಿಕೊಂಡು ಯಾಚಿಸಿದರೆ ಫಲಿಸದೆ ಇದ್ದೀತೆ. ?

**ಮನೀಷಿತಾನುಭಾವೋಽಯಂ ಮಮಲೋಕಾವಲೋಕನಂ ।**
**ಯದುಪಶ್ರುತ್ಯರಹಸಿ ಚಕರ್ಥಪರಮಂತಪಃ ॥ ೨೨ ॥**

ಯತ್ ಉಪಶ್ರುತ್ಯ = 'ತಪ' ಎಂಬ ಯಾವ ಮಾತನ್ನು ಗಮನವಿಟ್ಟು ಕೇಳಿ; ರಹಸಿ = ಒಳಹೊಕ್ಕುವಿಚಾರಮಾಡಿ; ಪರಮಂ ತಪಃ ಚಕರ್ಥ = ದಿವ್ಯವಾದ ತಪಸ್ಸನ್ನು ಆಚರಿಸಿದೆಯೋ ಅದು; ಅಯಂ ಲೊಕಾವಲೋಕನಂ = ಈ ನನ್ನ ಲೋಕದಲ್ಲಿ ನನ್ನನ್ನು ನೀನು ನೋಡಬೇಕೆಂದು ಸಂಕಲ್ಪಿಸಿದ; ಮಮ ಮನಿಷಿತಾ ಅನುಭಾವಃ = ನಾನು ಇಚ್ಛಿಸಿದ ಮಹಿಮಾ ಪ್ರದರ್ಶನ.

ಭಗವಂತನ ಮಹಿಮೆಯನ್ನು ವೇದೋಕ್ತ ರೀತಿಯಲ್ಲಿ ಎಷ್ಟೇ ಶ್ರವಣ ಮನನಾದಿಗಳಿಂದ ಆಲೋಚಿಸಿದರೂ ಅದು ಅಪೂರ್ಣವಾಗಿಯೇ ಇರುತ್ತದೆ. ಅಂತಹ ಮಹಿಮಾಸ್ಪದನಾದ ಆ ಪರಮ ಪುರುಷನನ್ನು ಪ್ರತ್ಯಕ್ಷವಾಗಿ ಕಂಡಾಗ ಶ್ರವಣ ಮನನದಿಂದ ಗ್ರಹಿಸಿದ ಮಹಿಮೆಯು ಸಾಕಾರವಾಗಿ ಕಂಡುಬರುವುದರಿಂದ, ತದ್ವಿಷಯಕವಾದ ಜ್ಞಾನವು ಪರಿಪೂರ್ಣವಾಗುತ್ತದೆ; ಅದು ಭಕ್ತಿಯ ರೂಪದಲ್ಲಿ ಪರಿಣಸುತ್ತದೆ. ಜನ್ಮಜನ್ಮಾಂತರಗಳ ಸಾಧನೆಯು ಒಂದು ಪಕ್ವಹಂತವನ್ನು ಮುಟ್ಟಿದಾಗ, ಹೃತ್ಕಮಲದಲ್ಲಿ ಪರಮಾತ್ಮನ ಅಪರೋಕ್ಷದರ್ಶನದಿಂದ ಲಭಿಸುವುದು ಇದೇ ರೀತಿಯ ಫಲ. ಸಂಶಯಗಳು ನಾಶವಾಗುವುದರಿಂದ, ಸಂಚಿತ ಆಗಾಮಿ ಕರ್ಮಗಳು ದಹಿಸಿಹೋಗುತ್ತವೆ. ಪ್ರಾರಬ್ಧಕರ್ಮವು ಭಕ್ತಿಯ ಬೆಳೆವಣಿಗೆಸಾಧಕವಾದುದು; ಅತ್ಯಗತ್ಯವಾದುದು.

**ಪ್ರತ್ಯಾದಿಷ್ಟಂ ಮಯಾತತ್ರ ತ್ವಯಿಕರ್ಮ ವಿಮೋಹಿತೇ ।**
**ತಪೋಮೇ ಹೃದಯಂ ಸಾಕ್ಷಾದಾತ್ಮಾಹಂ ತಪಸೋನಘ ॥ ೨೩ ॥**

ಅನಘ= ಪರಿಶುದ್ಧಾತ್ಮನಾದ ಹೇ ಬ್ರಹ್ಮಾ; ಅತ್ರತ್ವಯಿ ಕರ್ಮ ವಿಮೋಹಿತೇ = ಸೃಷ್ಟಿಯ ವಿಷಯದಲ್ಲಿ ಹೇಗೆ ಪ್ರವರ್ತಿಸಬೇಕೆಂದು ನೀನು ಆಲೋಚಿಸುತ್ತಿರಲು; ಮಯಾ = ನನ್ನಿಂದ; ಪ್ರತ್ಯಾದಿಷ್ಟಂ = ತಪಸ್ಸನ್ನಾಚರಿಸಬೇಕೆಂದು ಸೂಚಿಸಲ್ಪಟ್ಟಿತು; ತಪಃ = ತಪಸ್ಸು; ಮೇ ಹೃದಯಂ = ನನಗೆ ಅತ್ಯಂತ ಪ್ರಿಯವಾದುದು; ಅಹಂ = ನಾನು; ತಪಸಃ ಸಾಕ್ಷಾತ್ ಆತ್ಮಾ = ಜ್ಞಾನಾತ್ಮನಾಗಿದ್ದೇನೆ.

'ತಪ' ಎಂಬ ಮಾತಿಗೆ ದಹಿಸು, ಜ್ವಲಿಸು ಎಂಬ ಎರಡು ಅರ್ಥಗಳಿವೆ. ತಪಸ್ಸು ಎಂದರೆ ದೋಷವನ್ನು ದಹಿಸುವುದು; ಆತ್ಮ ಜ್ಯೋತಿಯನ್ನು ಬೆಳಗಿಸುವುದು. ಆತ್ಮದಲ್ಲಿ

ಅಂತರಾತ್ಮನನ್ನು ಕಾಣುವುದಕ್ಕೆ ಅದೇ ಅನುಸರಿಸಬೇಕಾದ ಮಾರ್ಗ. ಆತ್ಮಾ, ಅತಂರಾತ್ಮಾ, ಪರಮಾತ್ಮ, ಜ್ಞಾನಾತ್ಮಾ ಎಂಬ ನಾಲ್ಕುರೂಪಗಳಿಂದ ಭಗವಂತನು ಜೀವರ ಸಾಧನೆಗಳನ್ನು ಮಾಡಿಸುತ್ತಿದ್ದಾನೆ. ದೇಹೇಂದ್ರಿಯಗಳಲ್ಲಿ ಆತ್ಮನೆನಿಸಿ, ವಿಶ್ವನಾಮಕನಾಗಿ ಬಾಹ್ಯಾನುಭವಗಳಿಂದ ಜ್ಞಾನಪ್ರದನಾದ ಅನಿರುದ್ಧನೆ 'ಆತ್ಮಾ'. ಮನಸ್ಸಿಗೆ ನಿಯಾಮಕನಾಗಿ ಆಲೋಚನೆಯಿಂದ ಬಾಹ್ಯಜ್ಞಾನವನ್ನು ಪಕ್ವಗೊಳಿಸುವ ತೈಜಸನಾಮಕ ಪ್ರದ್ಯುಮ್ನನೆ 'ಅಂತರಾತ್ಮಾ'. ಪಕ್ವವಾದ ಜ್ಞಾನವನ್ನು ಒಳಮುಖವಾಗಿ ಮಾಡುವ ಪ್ರಾಜ್ಞನಾಮಕ ಸಂಕರ್ಷಣನೇ 'ಪರಮಾತ್ಮಾ'. ಆತ್ಮಾಂತರಾತ್ಮಪರಮಾತ್ಮ ರೂಪಗಳು ತನ್ನಲ್ಲಿ ಏಕೀಭವಿಸಿಕೊಂಡು ಜೀವನ ಸ್ವರೂಪ ಹೃದಯದಲ್ಲಿ ಬಿಂಬನಾಗಿ ಹೊಳೆಯುವ ತುರ್ಯನಾಮಕ ವಾಸುದೇವನೇ 'ಜ್ಞಾನಾತ್ಮಾ'. ಜ್ಞಾನಾತ್ಮನಾದ ಬಿಂಬನ ದರ್ಶನವೇ ತಪಸ್ಸಿನ ಫಲ. ಅದು ಸಿದ್ಧಿಸಿದಾಗ 'ನಾನು' ಎಂಬ ಜಡಬುದ್ಧಿಗೆ ಅವಕಾಶವೇ ಇರುವುದಿಲ್ಲ.

**ಸೃಜಾಮಿತಪಸೈವೇದಂ ಗ್ರಸಾಮಿ ತಪಸಾ ಪುನಃ ।**
**ಬಿಭರ್ಮಿ ತಪಸಾ ವಿಶ್ವಂ ವೀರ್ಯಂ ಮೇದುಶ್ಚರಂ ತಪಃ ॥ ೨೪ ॥**

ಇದಂ = ಈ ಜಗತ್ತನ್ನು; ತಪಸಾ ಏವ = ನನ್ನ ಜ್ಞಾನದ ಬಲದಿಂದಲೇ; ಸೃಜಾಮಿ ಸೃಷ್ಟಿಸುತ್ತೇನೆ; ಪುನಃ = ಅನಂತರ; ತಪಸಾ = ಜ್ಞಾನಶಕ್ತಿಯಿಂದಲೇ; ಗ್ರಸಾಮಿ = ಲಯಗೊಳಿಸುತ್ತೇನೆ. ವಿಶ್ವಂ = ಜಗತ್ತನ್ನು; ತಪಸಾ = ಜ್ಞಾನ ದೃಷ್ಟಿಯಿಂದ; ಬಿಭರ್ಮಿ = ಧರಿಸಿ ರಕ್ಷಿಸುತ್ತೇನೆ; ಮೇ ವಿರ್ಯಂ = ನನ್ನ ಸಾಮರ್ಥ್ಯವು; ತಪಃ = ಜ್ಞಾನರೂಪವಾದುದು; ದುಸ್ತರಂ = ಅದು ಇತರರಿಗೆ ಅಸಾಧ್ಯವಾದುದು.

ಕೇವಲ ತಪಸ್ಸನ್ನಾಚರಿಸುವವರಿಗೆ ಶ್ರಮವೇ ಹೊರತು ಕಾರ್ಯನಿರ್ವಾಹ ಸಾಮರ್ಥ್ಯ ಉಂಟಾಗುವುದಿಲ್ಲ. ಈ ಮಾತು ಈಗಿನ ವಿಜ್ಞಾನಿಗಳಿಗೆ ಚೆನ್ನಾಗಿ ಅನ್ವಯಿಸುತ್ತದೆ. ಅವರು ಭಗವಂತನಿಂದ ನಿರ್ಮಿತವಾದ ಜಡಪ್ರಪಂಚದಲ್ಲಿ, ಜಡವಸ್ತುಗಳನ್ನು ಬಳಸಿಕೊಂಡು, ಜಡಬುದ್ಧಿಯಿಂದ, ಕಡೆಗೆ ವಿಪತ್ತಿಗೆ ಕಾರಣವಾಗುವ ಅಲ್ಪಕ್ರಿಯೆಗಳನ್ನು ನಡೆಸಬಹುದೇ ಹೊರತು, ಸೃಷ್ಟಿಯ ರಹಸ್ಯವನ್ನು ಎಂದಿಗೂ ತಿಳಿಯಲಾರರು. ಭಗವದ್ಭಕ್ತರೂ ಕೂಡ ಅಸ್ವತಂತ್ರರಾದರಿಂದ, ಬಿಂಬ ಕ್ರಿಯೆಯನ್ನು ಅರಿತಾಗ ಮಾತ್ರ ಸಾರ್ಥಕ ಜೀವಿಗಳಾಗುವರು.

ಸೃಷ್ಟಿಯನ್ನು ಹೇಗೆ ಮಾಡಬೇಕೆಂದು ಆಲೋಚಿಸಿದ ಬ್ರಹ್ಮದೇವರಿಗೆ, ತಮ್ಮಲ್ಲಿ ತಮ್ಮಂತೆ ಬಿಂಬನಾಗಿರುವ ಜ್ಞಾನಾತ್ಮನೇ ಸೃಷ್ಟ್ಯಾದಿ ಕರ್ತನೆಂಬ ದಾರ್ಢ್ಯವು; ಸ್ವರೂಪಜ್ಞಾನವು ಅಥವ ಸ್ವರೂಪಬಿಂಬ ದರ್ಶನವು ಸಂಪೂರ್ಣವಾಗಲೆಂದೇ ತಪಸ್ಸನ್ನಾ ಚರಿಸಬೇಕೆಂದು ಆದೇಶವಾಯಿತು.

ಋಜುಗಣದ ಜೀವರು ಅನಾದಿ ಬಿಂಬೋಪಾಸಕರು. ೧೯ಲ ಬ್ರಹ್ಮ ಕಲ್ಪಗಳಲ್ಲಿ ಅವರ ಬಿಂಬದರ್ಶನಕ್ರಿಯೆಯು ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತಾ ಹೋಗುವುದು. ೧೯೯ ನೇ ಕಲ್ಪದಲ್ಲಿ ಮುಖ್ಯಪ್ರಾಣ ಪದವಿಯಲ್ಲಿರುವಾಗ ದೀಪದ ಬೆಳಕಿನಲ್ಲಿ ಸರ್ವವನ್ನೂ ಚೆನ್ನಾಗಿ ಕಾಣುವಂತೆ, ಜಗದ್ವ್ಯಾಪಿಯಾದ ಭಗವಂತನು ತಮ್ಮ ಬಿಂಬನಾಗಿರುವುದನ್ನು ಕಾಣುವರು. ಬ್ರಹ್ಮಪದವಿಗೆ ಬಂದಾಗ, ಸಹಸ್ರ ದಿವ್ಯವರ್ಷ ತಪಸ್ಸನ್ನಾಚರಿಸಿ, ಶ್ವೇತ ದ್ವೀಪದಲ್ಲಿ ವೈಕುಂಠಪತಿಯ ದರ್ಶನಮಾಡಿ, ಸೂರ್ಯನ ಬೆಳಕಿನಲ್ಲಿ ಎಲ್ಲವನ್ನೂ ಅತಿ ಸ್ಪಷ್ಟವಾಗಿ ಕಾಣುವಂತೆ ತಮ್ಮ ಬಿಂಬವನ್ನು ಕಂಡು, ತಮ್ಮ ಸಾಧನೆಯನ್ನು ಪೂರ್ತಿ ಮಾಡಿಕೊಳ್ಳುವರು.

**ಬ್ರಹ್ಮೋವಾಚ:–** ಬ್ರಹ್ಮದೇವರು ಹೇಳಿದರು.

> **ಭಗವನ್ಸರ್ವಭೂತಾನಾಮಧ್ಯಕ್ಷೋಽವಸ್ಥಿತೋಗುಹಾಂ ।**
> **ವೇದಹ್ಯಪ್ರತಿರುದ್ಧೇನ ಪ್ರಜ್ಞಾನೇನ ಚಿಕೀರ್ಷಿತಂ ॥ ೨೫ ॥**

ಭಗವನ್ = ಗುಣಪೂರ್ಣನಾದ ಸ್ವಾಮೀ; ಸರ್ವಭೂತಾನಾಂ = ಎಲ್ಲಾ ಜೀವರ; ಗುಹಾಂ ಅವಸ್ಥಿತಃ = ಸ್ವರೂಪ ಹೃದಯಗಳಲ್ಲಿ ಪ್ರತಿಷ್ಠಿತನಾಗಿರುವ; ಅಧ್ಯಕ್ಷಃ = ನೀನು ಸ್ವತಂತ್ರ ಕಾರ್ಯನಿರ್ವಾಹಕನಾಗಿರುವಿ; ಹಿ = ನಿಜವಾಗಿ; ಅಪ್ರತಿರುದ್ಧೇನ = ಯಾವ ಅಡೆತಡೆಗಳೂ ಇಲ್ಲದ; ಪ್ರಜ್ಞಾನೇನ = ಪೂರ್ಣಜ್ಞಾನ ಬಲದಿಂದ; ಚಿಕೀರ್ಷಿತಂ = ಯಾರಲ್ಲಿನಿಂತು ಏನು ಮಾಡಬೇಕು ಎಂಬುದನ್ನು; ವೇದ = ನೀನು ಬಲ್ಲವನೇ ಆಗಿರುವಿ.

'ಮರಕೇಳು' ಎಂದು ಹೇಳುತ್ತಿರುವುದು ಕೇವಲ ವಿಡಂಬನೆ; ಒಳಗೆ ನಿಂತು ಕೇಳಿ ಕೇಳಿಸಿಕೊಳ್ಳುವನು ಪರಮಾತ್ಮನೇ ಎಂಬುದನ್ನು ಬ್ರಹ್ಮದೇವರು ತಮ್ಮ ಮಾತಿನಿಂದ ಸ್ಪಷ್ಟಗೊಳಿಸಿದ್ದಾರೆ. ಪ್ರಜ್ಞಾನ ಎಂಬದು ಭಗವಂತನ ಜ್ಞಾನ; ಅದಕ್ಕನುಗುಣವಾಗಿ ವರ್ತಿಸುವ ಜೀವರ ಸ್ವರೂಪ, ಜ್ಞಾನದಲ್ಲಿ ನಾಲ್ಕುಬಗೆ. ವಸ್ತುವಿನ ಸಾಮಾನ್ಯದರ್ಶನ 'ಜ್ಞಾನ' ಅದು ಏನೆಂದು ನಿಶ್ಚಯಿಸಿ ತಿಳಿಯುವುದು 'ಸುಜ್ಞಾನ'; ಅದರ ಹಿನ್ನೆಲೆಯಾದ ದೈವೀಪ್ರಪಂಚವನ್ನು ತಿಳಿಯುವುದು 'ವಿಜ್ಞಾನ'; ವಿಶ್ವವ್ಯಾಪಿಯಾದ ಭಗವಂತನ ಸ್ವಾತಂತ್ರ್ಯವನ್ನೂ, ಜೀವರ ಪಾರತಂತ್ರ್ಯವನ್ನೂ ತಿಳಿಯುವುದು 'ಪ್ರಜ್ಞಾನ'.

> **ಅಥಾಪಿ ನಾಥಮಾನಾಯ ನಾಥ ನಾಥಯ ನಾಥಿತಂ ।**
> **ಪರಾವರೇ ಯಥಾರೂಪೇ ಜಾನೀಯಾಂ ತೇತ್ವರೂಪಿಣಃ ॥ ೨೬ ॥**

ಅಥ ಅಪಿ= ಹೀಗೆ ನೀನೇ ನುಡಿದು ನುಡಿಸುವುದರಿಂದಲೇ; ನಾಥ= ಬಾಹ್ಯಾಂತರಗಳ ಸ್ವಾಮಿಯಾದ ನೀನು; ನಾಥಮಾನಾಯ = ಪ್ರಾರ್ಥಿಸುವ ನನಗೆ; ನಾಥಿತಂ = ಪ್ರಾರ್ಥಿಸುವ ವರವನ್ನು; ನಾಥಯ = ದಯಪಾಲಿಸು. ಅರೂಪಿಣಃ = ವಿಕಾರಗಳಿಗೆ ಒಳಗಾಗುವ ಜಡರೂಪಗಳಿಲ್ಲದ; ತೇ = ನಿನ್ನ; ಪರ ಅಪರೇ ರೂಪೇ = ಸ್ವರೂಪ ಮತ್ತು ಬ್ರಹ್ಮಾಂಡಗತ ವಿರಾಡ್ರೂಪ ಎಂಬ ಎರಡು ಬಗೆಯ ರೂಪಗಳನ್ನು; ಯಥಾ ಜಾನೀಯಾಂ = ಹೇಗೆ ತಿಳಿಯಬಲ್ಲೆ, ಎಂಬುದು ನಾನು ನಿನ್ನಪ್ರೇರಣೆಯಿಂದಲೇ ಬೇಡುವ ವರ.

ಪರಮಾತ್ಮನು ಮಾಡುವ ಜಗದ್ವ್ಯಾಪಾರಗಳೆಲ್ಲಾ ಜೀವರ ಉಪಕಾರಕ್ಕಾಗಿ. ಸತ್ಯಸಂಕಲ್ಪನಾದ ಅವನು ಜೀವರ ಸ್ವಭಾವ ಲಕ್ಷಣಗಳನ್ನು ಅನುಸರಿಸಿಯೇ ಅಸ್ವತಂತ್ರರಾದ ಅವರಲ್ಲಿ ಅವರಂತೆ ವರ್ತಿಸುತ್ತಾನೆ. ಪ್ರತಿಬಿಂಬ ಭಾವದಿಂದ ಜೀವರೇ ಆ ವ್ಯಾಪಾರಗಳನ್ನು ಮಾಡಿದಂತೆ ಅನುಭವ ಉಂಟಾಗುವದುರಿಂದ, ಅವರ ಸ್ವರೂಪ ಸಾಮರ್ಥ್ಯಗಳು ಕ್ರಮಕ್ರಮವಾಗಿ ವಿಕಸಿತವಾಗುತ್ತವೆ. ಬ್ರಹ್ಮಪದವಿಯ ಆ ಜೀವರಿಗೆ ಸ್ವಾತಂತ್ರ್ಯವಿದ್ದಿದ್ದರೆ, ತಾವಾಗಿ ಏನನ್ನು ಕೇಳುತ್ತಿದ್ದರೋ ಹಾಗೆ ಸ್ವತಂತ್ರನಾದ ಭಗವಂತ ಅವರಲ್ಲಿ ನಿಂತು ಕೇಳಿ ಕೇಳಿಸಿದ್ದಾನೆ. ''ನೀನು ಕೇಳಿ ಕೇಳಿಸುತ್ತಿರುವುದರಿಂದ, ನಾನು ಕೇಳುತ್ತಿದ್ದೇನೆ'' ಎಂಬುದು 'ಅಪಿ' ಎಂಬುದರ ಸಾರ್ಥಕ್ಯ. ಇಲ್ಲಿ ಅಜ್ಞಾನದ 'ನಾನು' ಎಂಬುದಕ್ಕೆ ಎಡೆಯಿಲ್ಲ, ತನ್ನನ್ನೂ ತನ್ನ ಸ್ವಾಮಿಯನ್ನೂ (ಬಿಂಬಿನನ್ನೂ) ತಿಳಿದು ಪ್ರಯೋಗಿಸುವ 'ನಾನು' ಎಂಬ ವ್ಯವಹಾರ ವ್ಯಕ್ತವಾಗಿದೆ.

'ಪರ', 'ಅಪರ' ರೂಪಗಳೆಂದಾಗ, ಪ್ರಕೃತಿಯಲ್ಲಿ ಸಿಗಹಾಕಿಕೊಂಡು ಪರನಾದವನು ಅಪರವಾದ (ಕೀಳಾದ) ರೂಪವನ್ನು ತಾಳುತ್ತಾನೆ ಎಂದು ಹೇಳುವುದು ಸರಿಯಲ್ಲ. ಅವನ ಪರತ್ವಕ್ಕೆ ಎಂದೂ ಹಾನಿಯಿಲ್ಲ. ಅವನು ರೂಪಾಂತರವನ್ನು ಹೊಂದಿದಂತೆ ತನ್ನ ಸಂಕಲ್ಪಮಾತ್ರದಿಂದ ನಟಿಸುವುದು ಪ್ರಕೃತಿಯಲ್ಲಿ ರೂಪರೂಪಾಂತರಗಳನ್ನು ಉಂಟುಮಾಡುವುದಕ್ಕಾಗಿ. ವಿಕಾರಕಾರ್ಯಗಳಿಗೆ ಕಾರಣವಾದುದು ಪ್ರಕೃತಿ; ಅದಕ್ಕೆ ಭಗವಂತ ನಿಮಿತ್ತ ಕಾರಣನೇ ಹೊರತು ಉಪಾದಾನ (ವಸ್ತುತಃ) ಕಾರಣನಲ್ಲ

ಬ್ರಹ್ಮಾಂಡಗತ ವಿರಾಡ್ರೂಪಕ್ಕೂ ಭಗವಂತನ ಮೂಲ ರೂಪಕ್ಕೂ ಯಾವ ವ್ಯತ್ಯಸವೂ ಇಲ್ಲವೆಂದು ಭಾವಿಸುವ ಜ್ಞಾನ ಉಂಟಾಗಲಿ ಎಂಬುದೇ ಬೇಡಿಕೆಯ ಆಶಯ.

**ಯಥಾತ್ಮಮಾಯಾ ಯೋಗೇನ ನಾನಾ ಶಕ್ತ್ಯುಪಬೃಂಹಿತಃ ।**
**ವಿಲುಂಪನ್ವಿಸೃಜನ್ ಗೃಹ್ಣನ್ ಬಿಭ್ರದಾತ್ಮಾನಮಾತ್ಮನಾ ॥ ೨೭ ॥**

ಯಥಾ = ಹೇಗೆ; ಆತ್ಮಮಾಯಾ ಯೋಗೇನ; ನಿನ್ನ ಸ್ವರೂಪ ಸಾಮರ್ಥ್ಯ ಪ್ರಕಟಣೆಯ ಸಂಕಲ್ಪಮಾತ್ರದಿಂದ ಮತ್ತು ನಿತ್ಯಾವಿಯೋಗಿನಿಯಾದ ಮಾಯಾದೇವಿಯ ಒಡಗೂಡಿ; ನಾನಾ ಶಕ್ತಿ ಉಪಬೃಂಹಿತಃ = ನಾನಾಬಗೆಯ ಶಕ್ತಿಗಳನ್ನು ಪ್ರಕಟಿಸುತ್ತಾ; ಆತ್ಮನಾ ಆತ್ಮಾನಂ ಗೃಹ್ಣನ್ = ನಿನ್ನಿಂದಲೇ ನಿನ್ನ ರೂಪಾಂತರಗಳನ್ನು ವ್ಯಕ್ತಪಡಿಸುತ್ತಾ; ವಿಲುಂಪನ್ = ಲಯಗೊಳಿಸಿ; ವಿಸೃಜನ್ = ಸೃಷ್ಟಿಸಿ; ಬಿಭ್ರತ್ = ರಕ್ಷಣೆಯನ್ನು ಮಾಡುವಿ ?

ಭಗವಂತ, ತನ್ನಿಂದ ತನ್ನ ರೂಪಪಾಂತರಗಳನ್ನು ಪ್ರಕಟಿಸುವುದು ಮತ್ತು ತನ್ನೊಳಗಿಂದಲೇ ಜಗತ್ತನ್ನು ಸೃಷ್ಟಿಸಿ, ಪಾಲಿಸಿ ಮತ್ತೆ ತನ್ನಲ್ಲಿಯೇ ಸೇರಿಸಿಕೊಳ್ಳುವುದು ಹೇಗೆ ಎಂಬ ಮುಖ್ಯವಾದ ವಿಷಯವನ್ನು ಬ್ರಹ್ಮದೇವರು ಕೇಳಿದ್ದಾರೆ. ಪರಿಪೂರ್ಣಜ್ಞಾನಾನಂದ ಮಯ ಸ್ವರೂಪವುಳ್ಳವನು ಪರಬ್ರಹ್ಮ. ಬಹಳ ಮುಟ್ಟಿಗೆ ದುಃಖಹೇತುವಾದ ಜಗತ್ತು ಅಂತಹ ಸ್ವಚ್ಛರೂಪಿಯಿಂದ ಹೊರಬರುವುದು ಮತ್ತು ಅವನಲ್ಲಿ ಲಯವಾಗುವುದು ಎಂಬ ವಿರುದ್ಧ ಧರ್ಮಗಳ ಸಮನ್ವಯ ಹೇಗೆ ಎಂಬುದು ಸ್ಪಷ್ಟವಾಗಿ ತಿಳಿಯಬೇಕಾದ ವಿಷಯವೇ ಸರಿ. ಅದನ್ನು ವಿವೇಕಿಸಿ ತಿಳಿಯದಿದ್ದರೆ, ಅದ್ವೈತವೆಂದು ಲೋಕದಲ್ಲಿ ಪ್ರಸಿದ್ಧವಾಗಿರುವ ವಾದವು ತಲೆಹಾಕುತ್ತದೆ. 'ನಿರ್ಗುಣನು ಸಗುಣನಾಗುವನು; ತನ್ನಲ್ಲಿ ತಾನೇ ಸುಃಖ ದುಃಖಾ ತ್ಮಕವಾದ ಪ್ರಪಂಚದ ನಾಟಕವನ್ನು ಕಲ್ಪಿಸಿಕೊಳ್ಳುವನು ಎಂದು ಹೇಳಬೇಕಾಗುತ್ತದೆ. ಅನಿರ್ವಚನೀಯನಾದವನು ಹುಚ್ಚು ನಾಟಕವನ್ನು ಕಲ್ಪಿಸಿಕೊಂಡು ತನ್ನೊಡನೆ ತಾನೇ ಆಟವಾಡುವ ಹುಚ್ಚ ಎಂದೂ ಹೇಳಬೇಕಾಗುತ್ತದೆ.

**ಕ್ರೀಡಸ್ಯಮೋಘಸಂಕಲ್ಪ ಊರ್ಣನಾಭಿರ್ಯಥೋರ್ಣುತೇ ।**
**ತಥಾ ತದ್ವಿಷಯಾಂ ಧೇಹಿ ಮನೀಷಾಂ ಮಯಿ ಮಾಧವ ॥ ೨೮ ॥**

ಮಾಧವ = ಲಕ್ಷ್ಮೀರಮಣಾ; ಅಮೋಘ ಸಂಕಲ್ಪ = ವ್ಯರ್ಥವಲ್ಲದ ಸತ್ಯಸಂಕಲ್ಪನಾದ ಸ್ವಾಮೀ; ಉರ್ಣನಾಭಿಃ = ಜೇಡರ ಹುಳುವು; ಯಥಾ ಉರ್ಣುತೇ = ತನ್ನೊಳಗಿನ ರಸವಿಶೇಷದಿಂದಲೇ ಹೇಗೆ ದಾರವನ್ನು ತೆಗೆದು ಬಲೆಯನ್ನು ನಿರ್ಮಿಸುವುದೋ; ತಥಾ = ಹಾಗೆ; ಕ್ರಿಡಸಿ = ಜಗದ್ವ್ಯಾಪಾರದ ಕ್ರೀಡೆಯಲ್ಲಿ ರತನಾಗಿರುವಿ; ತತ್ ವಿಷಯಾಂ ಮನೀಷಾಂ = ಆ ನಿನ್ನ ಕ್ರೀಡಾವಿಲಾಸದ ರಹಸ್ಯಜ್ಞಾನವನ್ನು; ಮಯಿ = ನನ್ನ ಮನಸ್ಸಿನಲ್ಲಿ; ಧೇಹಿ = ಸ್ಥಿರಪಡಿಸು.

ತತ್ವ ಜಜ್ಞಾಸುಗಳು ಮೇಲೆ ಕಾಣುವ ಅರ್ಥವನ್ನೇ ಗ್ರಹಿಸಿ ಹಳ್ಳಕ್ಕೆ ಬೀಳುವವರಲ್ಲ. ಜೇಡರ ಹುಳುವಿನ ದೃಷ್ಟಾಂತವನ್ನು ಸಾಮಾನ್ಯ ರೀತಿಯಲ್ಲಿ ಅರ್ಥಮಾಡಿಕೊಂಡರೆ,

ಬ್ರಹ್ಮನೇ ಜಗದ್ರೂಪನಾಗಿ ಪರಿಣಮಿಸುವನು ತಪ್ಪು ಕಲ್ಪನೆ ಉಂಟಾಗುತ್ತದೆ. ಅವನು ನಿರ್ವಿಕಾರ ಎಂಬ ಮಾತು ಹಾರಿ ಹೋಗುತ್ತದೆ. ಆದುದರಿಂದ, ನಿರ್ವಿಕಾರನಾದವನು ವಿಕೃತ ಪ್ರಪಂಚದಂತೆ ಕಾಣುಸಿ ಕೊಳ್ಳುವುದು ಹೇಗೆ ಎಂಬುದನ್ನು ಚೆನ್ನಾಗಿ ವಿಮರ್ಶೆಮಾಡಿ ತಿಳಿಯಬೇಕು. ಸಜ್ಜೀವರು ಹಾಗೆ ತಿಳಿದು ಉದ್ಧೃತರಾಗಲಿ ಎಂಬ ದೃಷ್ಟಿಯಿಂದಲೇ ಬ್ರಹ್ಮದೇವರ ಬಾಯಿಂದ ಭಗವಂತ ಆ ವಿಚಾರವನ್ನು ಕುರಿತು ಪ್ರಶ್ನೆ ಮಾಡಿಸಿದ್ದಾನೆ.

"ಮಾಧವಾ" ಎಂದು ಸಂಭೋಧಿಸಿರುವುದು ದೊಡ್ಡ ರಹಸ್ಯವನ್ನು ಬಿಚ್ಚಿ ಹೇಳಿದಂತಾಗಿದೆ. ಇರುವುದು ಬ್ರಹ್ಮವಸ್ತುವೊಂದೇ ಅಲ್ಲ; ನಿತ್ಯ ಸಹಚಾರಿಣಿಯಾದ ರಮಾದೇವಿಯೂ ಇದ್ದಾಳೆ ಎಂದಾಗ, 'ಏಕ ಜೀವ' ವಾದ ನಿರಾಕೃತವಾಯಿತು. ಕೇವಲ ಅದ್ವೈತವಾದಕ್ಕೆ ಅವಕಾಶವಿಲ್ಲದಂತಾಯಿತು.

**ಭಗವಚ್ಛಿಕ್ಷಿತಮಹಂ ಕರವಾಣಿಹ್ಯತಂದ್ರಿತಃ ।**
**ನೇಹಮಾನಃ ಪ್ರಜಾಸರ್ಗಂ ಬಧ್ಯೇಯಂ ಯದನುಗ್ರಹಾತ್ ॥ ೨೯ ॥**

ಯದನುಗ್ರಹಾತ್ = ಯಾವ ನೀನು ಕೊಟ್ಟ ಸಮ್ಯಜ್ಞಾನದಿಂದ; ಪ್ರಜಾಸರ್ಗಂ ಈಹಮಾನಃ = ಪ್ರಜಾಸೃಷ್ಟಿಯನ್ನು ಮಾಡಲು ಇಚ್ಛಿಸಿರುವ ನಾನು; (ಯಥಾ) ನ ಬಧ್ಯೇಯಂ = 'ನಾನು ಮಾಡುತ್ತೇನೆ' ಎಂಬ ಅಜ್ಞಾನದಿಂದ ಬಂಧಿತನಾಗದಿರುವಂತೆ; ಭಗವಚ್ಛಿಕ್ಷಿತಂ = ಭಗವಂತನಾದ ನೀನು ನಡೆಸಿದಂತೆ; ಅಹಂ = ನಾನು; ಅತಂದ್ರಿತಃ = ಜಡಭಾವ ವಿಲ್ಲದಂತೆ; ಕರವಾಣಿ = ಮಾಡುತ್ತೇನೆ.

'ನಾನು' ಎಂಬ ಸ್ವತಂತ್ರಬುದ್ಧಿಯನ್ನು ಬಿಟ್ಟು ಬ್ರಹ್ಮಾದಿ ಋಜುಯೋಗಿಗಳು ಹೇಳುವ ಮಾತಿಗೂ, ಸಾಮಾನ್ಯ ಜೀವರು ಹೇಳುವ ಮಾತಿಗೂ ವ್ಯಾತ್ಯಸವಿದೆ. ಪರಿಪೂರ್ಣ ಅಸ್ವಾತಂತ್ರ್ಯ ಜ್ಞಾನವುಳ್ಳವರಾಗಿ ಆ ಮಹಾನುಭಾವ ಜೀವರು ತಮ್ಮ ಸ್ವರೂಪೇಂದ್ರಿಯಗಳನ್ನು ಬಳಸಿಕೊಂಡು ವ್ಯಾಪಾರಗಳನ್ನು ಮಾಡುತ್ತಾರೆ. ಸಾಮಾನ್ಯ ಜೀವರ ಸ್ವರೂಪೇಂದ್ರಿಯಗಳ ವ್ಯಾಪಾರ ಮುಕ್ತಿಗೆ ಪೂರ್ವದಲ್ಲಿ ಇರುವುದಿಲ್ಲ. ಅದುದರಿಂದ ಅವರ ಪರವಾಗಿ, ತತ್ವಾಭಿಮಾನಿಗಳಲ್ಲಿ ನಿಂತು ದೇವನೇ ನಡೆಸುವ ವ್ಯಾಪಾರಗಳನ್ನು 'ನಾನು ಮಾಡಿದೆ' ಎಂದು ಜೀವರು ಹೇಳುವುದು ಭ್ರಾಂತಿಯ ಪ್ರಭಾವ. ಗುರೂಪದೇಶಾನಂತರ ಭಗವದನುಗ್ರಹದಿಂದ ತತ್ವಜ್ಞಾನ ಉಂಟಾದರೆ, ಅಂತಹ ಜೀವನ ಸ್ವರೂಪಭೂತನಾದ 'ನಾನು' ಎಚ್ಚರಗೊಂಡು, ತನ್ನ ನಿಜಸ್ಥಿತಿಯ ಅರಿವನ್ನು ಹೊಂದುತ್ತದೆ; ಬಾಹ್ಯವೃತ್ತಿ ಜ್ಞಾನ ದೂರವಾಗುವುದರಿಂದ ಸುಖ ದುಃಖಗಳ

ಸಂಬಂಧವೂ ಕಡಿದುಹೋಗಿ ಆ ಜೀವನು ಕೇವಲ ಸಾಕ್ಷಿಯಂತಿದ್ದು ಸ್ವರೂಪಾನಂದದ ಪರಿಚಯವನ್ನು ಹೊಂದುತ್ತಾನೆ.

**ಯಾವತ್ಸಖಾಸಖ್ಯುರಿವೇಶ ತೇ ಕೃತಃ**
**ಪ್ರಜಾವಿಸರ್ಗೇ ವಿಭಜಾಮಿ ಭೋಜನಂ ।**
**ಅವಿಕ್ಲವಸ್ತೇ ಪರಿಕರ್ಮಣಿ ಸ್ಥಿತೋ**
**ಮಾಮೇಸಮುನ್ನದ್ಧಮದೋಜಮಾನಿನಃ** ॥ ೩೦ ॥

ಸಖಾ = ರಾಜನಂತಹ ವಿಶ್ವಾಸ ಮಾಡುವ ಯಜಮಾನನು; ಸಖ್ಯುಃ ಇವ = ತನ್ನ ಅಧೀನ ವಿಶ್ವಾಸಾರ್ಹನಿಗೆ ಕಾರ್ಯಭಾರವನ್ನು ಹಂಚಿಕೊಡುವಂತೆ; ಈಶ = ಹೇ ಸ್ವಾಮಿ; ತೇ ಕೃತಂ = ನೀನು ನನ್ನಲ್ಲಿ ನಿಂತು ಮಾಡುತ್ತಿರುವುದನ್ನು ತಿಳಿದು; ಪ್ರಜಾವಿಸರ್ಗೇ = ದೇವ ಮಾನುಷತಿರ್ಯಗ್ಜೀವಿಗಳನ್ನು ಸೃಷ್ಟಿಸುವಲ್ಲಿ; ಭೋಜನಂ ವಿಭಜಾಮಿ = ಅವರ ವರ ಕರ್ಮಭೋಗಗಳಿಗನುಗುಣವಾಗಿ ಅವರನ್ನು ಸೃಷ್ಟಿಸುತ್ತೇನೆ; ತೇ ಪರಿಕರ್ಮಣಿ = ಈ ನಿನ್ನ ಸೇವಾಕಾರ್ಯದಲ್ಲಿ; ಅವಿಕ್ಲವಃ ಸ್ಥಿತಃ = ದೈನ್ಯರಹಿತನಾಗಿ ದಿಟ್ಟತನದಿಂದ ಪ್ರವರ್ತಿಸುವಾಗ; ಮೇ = ನನಗೆ; ಅಜಮಾನಿನಃ = ಸೃಷ್ಟಿಕರ್ತನು ನಾನೇ ಎಂಬ; ಸಮುನ್ನದ್ಧಮದಃ = ಎದ್ದೆದ್ದು ಕುಣಿಯುವ ದುರಹಂಕಾರವು; ಮಾ ಭೂಯತ್ = ಉಂಟಾಗದಿರಲಿ.

ಆಗಿಂದಾಗ್ಗೆ ಭ್ರಾಂತಿಗೊಳಗಾಗುವ ಇಂದ್ರಾದಿ ದೇವತೆಗಳಿಗೆ ಬಿಂಬನ ವಿಸ್ಮರಣೆಯುಂಟಾಗಿ ತಾವೇ ಅಧಿಕಾರಿಗಳೆಂಬ ಗರ್ವ ಉಂಟಾಗುವುದು. ಅಂತಹ ಗರ್ವವು ಹಾನಿಕರವೆಂಬುದನ್ನು ತಿಳಿಸುವುದಕ್ಕಾಗಿ, ಋಜುಗಳಾದ ತಮಗೆ ಆ ಬಗೆಯ ಗರ್ವ ಉಂಟಾಗುವುದು ಅಸಂಭವವಾದರೂ ಹಾಗಾಗದಿರಲೆಂದು ಬ್ರಹ್ಮದೇವರು ಪ್ರಾರ್ಥಿಸಿದ್ದಾರೆ. ಆ ಬ್ರಹ್ಮದೇವರ ಶರೀರದಲ್ಲಿ ಸ್ಥಿತರಾಗಿದ್ದು, ಮುಂದೆ ಸೃಷ್ಟಿಯಲ್ಲಿ ಬರಬೇಕಾದ ರುದ್ರೇಂದ್ರಾದಿ ಜೀವರು ಸೃಷ್ಟಿಗೆ ಪೂರ್ವದಲ್ಲಿಯೂ ಅವರವರ ಯೋಗ್ಯತಾನುಸಾರಕಿಂಚಿತ್ ಜ್ಞಾನಿಗಳಾದುದರಿಂದ, ಬ್ರಹ್ಮದೇವರ ಪ್ರಾರ್ಥನೆಯು ಅವರ ಸ್ವರೂಪ ಮನಸ್ಸಿಗೂ ಮುಟ್ಟುತ್ತಿರುವುದನ್ನು ನಾವು ಗಮನಿಸಬೇಕು. ಇದು ಇವರಿಗೆ ಮೊದಲನೇ ಪಾಠವೇ ಸರಿ.

**ಶ್ರೀಭಗವಾನುವಾಚಃ–** ಭಗವಂತನು ನುಡಿದ

**ಜ್ಞಾನಂ ಪರಮಗುಹ್ಯಂ ಮೇ ಯದ್ವಿಜ್ಞಾನ ಸಮನ್ವಿತಂ ।**
**ಸರಹಸ್ಯಂ ತದಂಗಂ ಚ ಗೃಹಾಣ ಗದಿತಂ ಮಯಾ** ॥ ೩೧ ॥

ಯತ್ ಮೇ ವಿಜ್ಞಾನ ಸಮನ್ವಿತಂ= ಯಾವುದು ಬಿಂಬರೂಪಿಯಾದ ಮುಕ್ತಿಪ್ರದವಾದ ನನ್ನ ವಿಷಯಕವಾದ ಜ್ಞಾನವೋ (ವಿಜ್ಞಾನವೋ); ಅಂತಹ; ಪರಮಗುಹ್ಯಂ ಜ್ಞಾನಂ= ಉಪನಿಷತ್ತುಗಳಲ್ಲಿ ರಹಸ್ಯವಾಗಿ ಅಡಕವಾಗಿರುವ ಜ್ಞಾನವನ್ನು; ಸರಹಸ್ಯಂ = ರಹಸ್ಯಗಳಿಂದ ಕೂಡಿದ; ತದಂಗಂಚ = ಅದಕ್ಕೆ ಪೋಷಕಗಳಾದ ಅಂಶಗಳನ್ನೂ; ಮಯಾಗದಿತಂ= ನಾನು ಹೇಳುವುದನ್ನು; ಗೃಹಾಣ= ಮನಸ್ಸಿಗೆ ತಂದುಕೊ.

ವೇದೋಪನಿಷತ್ತುಗಳಲ್ಲಿ ಅಡಕವಾಗಿರುವ ಪರಮಾತ್ಮನ ಬಿಂಬಕ್ರಿಯಾ ಜ್ಞಾನವು ಗುರೂಪದೇಶದಿಂದಲೇ ತಿಳಿಯಲ್ಪಡಬೇಕಾಗಿರುವುದರಿಂದ, ಬ್ರಹ್ಮದೇವರಂತಹ ಉತ್ತಮೋತ್ತಮ ಅಧಿಕಾರಿಗೆ ರಹಸ್ಯವನ್ನು ಭೋದಿಸಲು ಶ್ರೀ ಹರಿಯೇ ಸಮರ್ಥನಾದ ಗುರು. ವಸ್ತುಗಳು ವಸ್ತುಗಳಂತೆ ಗುಣರೂಪ ಕ್ರಿಯೆಗಳನ್ನು ಪಡೆದಿರುವುದು ಅವುಗಳಲ್ಲಿ ಅವುಗಳಂತೆ ವರ್ತಿಸುವ ಭಗವಂತನ ಸಂಕಲ್ಪಕ್ರಿಯೆಯಿಂದ; ಜೀವರಲ್ಲಿ ಜೀವ ಭಾವವು ಪ್ರಕಟವಾಗುವುದೂ ಅದೇ ಬಲದಿಂದ. ಇಂತಹ ಭಗವಂತನ ಕ್ರಿಯೆಗಳಿಗೆ ಬಿಂಬ ಕ್ರಿಯಾ ಎಂದು ಹೆಸರು. ಜೀವರು ಭಗವಂತನ ಒಲುಮೆಯಿಂದ ಅವರವರ ಯೋಗ್ಯತಾನುಸಾರವಾಗಿ ವಿಶ್ವವ್ಯಾಪಕನ ಬಿಂಬಕ್ರಿಯೆಯನ್ನು ಅರಿಯಬಲ್ಲರು. ಬಿಂಬಕ್ರಿಯಾ ಜ್ಞಾನವೇ 'ವಿಜ್ಞಾನ'.

**ಯಾವಾನಹಂ ಯಥಾಭಾವೋ ಯದ್ರೂಪಗುಣ ಕರ್ಮಕಃ ।**
**ತಥೈವ ತತ್ವವಿಜ್ಞಾನಮಸ್ತುತೇ ಮದನುಗ್ರಹಾತ್ ॥ ೩೨ ॥**

ಅಹಂ ಯಾವಾನ್= ದೇಶಕಾಲಗಳಲ್ಲಿ ವ್ಯಾಪ್ತವಾಗಿರುವ ನನ್ನ ಪರಿಪೂರ್ಣತ್ವವೆಂತಹುದು; ಯಥಾಭಾವಃ = ವ್ಯಕ್ತಅವ್ಯಕ್ತ ಪ್ರಪಂಚಗಳನ್ನು ಮೀರಿ ಅವುಗಳಲ್ಲಿರುವ ನನ್ನ ನಿಜಸ್ಥಿತಿ ಹೇಗಿರುವುದು; ಯದ್ರೂಪ ಗುಣ ಕರ್ಮಕಃ = ನನ್ನ ಅವತಾರ ಲಕ್ಷಣಗಳು, ಕ್ರಿಯೆಗಳು ಎಂತಹವು ಎಂಬ ವಿಷಯಗಳಲ್ಲಿ; ತಥೈವ = ಯಥಾವತ್ತಾಗಿ; ತೇ = ನಿನಗೆ; ಮದನುಗ್ರಹಾತ್= ನನ್ನ ಅನುಗ್ರಹದಿಂದ; ತತ್ವವಿಜ್ಞಾನಂ = ತತ್ವಗಳ ವಿಶೇಷ ಜ್ಞಾನವು; ಅಸ್ತು = ಉಂಟಾಗಲಿ.

ಜೀವರ ಸ್ವರೂಪ ಜ್ಞಾನದ ಅಭಿವ್ಯಕ್ತಿಯೂ ಭಗವಂತನ ಬಿಂಬ ಕ್ರಿಯೆಯಿಂದಲೇ ಎಂಬುದನ್ನು 'ಮದನುಗ್ರಹಾತ್' ಎಂಬ ಮಾತು ತಿಳಿಸುತ್ತದೆ. 'ಯಥಾತಥಾಪಿವ' ಎಂಬುದು ಭಗವಂತನ ನಿಜಸ್ವರೂಪವನ್ನೇ ಕುರಿತು ಹೇಳಿರುವುದರಿಂದ 'ಮಾಯಾಪ್ರವಿಷ್ಟ

ಈಶ್ವರನೆಂದು' ಹೇಳುವ ಮಾತಿಗೆ ಅವಕಾಶವಿಲ್ಲದಂತಾಯಿತು. ಇದನ್ನು ಪುಷ್ಟೀಕರಿಸುಲು 'ವಿಜ್ಞಾನಂ' ಎಂಬ ಮಾತೂ ಸಹಕಾರಿಯಾಗಿದೆ.

**ಅಹಮೇವಾಸಮೇವಾಗ್ರೇ ನಾನ್ಯದ್ಯತ್ಸದಸತ್ಪರಂ ।**
**ಪಶ್ಚಾದಹಂ ತ್ವಮೇತಚ್ಚ ಯೋವಶಿಷ್ಯೇತ ಸೋಽಸ್ಮ್ಯಹಂ ॥ ೩೩ ॥**

**ಋತೇರ್ಥಂ ಯತ್ಪ್ರತೀಯೇತ ನಪ್ರತೀಯೇತಚಾತ್ಮನಿ ।**
**ತದ್ವಿದ್ಯಾದಾತ್ಮನೋ ಮಾಯಾಂ ಯಥಾಭಾಸೋಽಯಥಾತಮಃ ॥ ೩೪ ॥**

**ಯಥಾಮಹಾಂತಿ ಭೂತಾನಿ ಭೂತೇಷೂಚ್ಚಾವಚೇಷುಚ ।**
**ಪ್ರವಿಷ್ಟಾನ್ಯಪ್ರವಿಷ್ಟಾನಿ ತಥಾ ತೇಷು ನತೇಷ್ವಹಂ ॥ ೩೫ ॥**

**ಏತಾವದೇವ ಜಿಜ್ಞಾಸ್ಯಂ ತತ್ತ್ವ ಜಿಜ್ಞಾಸುನಾತ್ಮನಃ ।**
**ಅನ್ವಯವ್ಯತಿರೇಕಾಭ್ಯಾಂ ಯತ್ಸ್ಯಾತ್ಸರ್ವತ್ರ ಸರ್ವದಾ ॥ ೩೬ ॥**

ಅಗ್ರೇ = ಸೃಷ್ಟಿಗೆ ಪೂರ್ವದಲ್ಲಿ; ಅಹಂ ಏವ ಆಸಂ = ಇದ್ದವನು ನಾನೊಬ್ಬನೇ; ಅನ್ಯತ್ ಸದಸತ್ ಪರಂ ಯತ್= ನನ್ನಿಂದ ಬೇರೆಯಾದ ಸದ್ರೂಪವಾದ ಮತ್ತು ಅಸದ್ರೂಪರಾದ (ಕಾಣುವಂತಿರುವ ಮತ್ತು ಕಾಣದಂತಿರುವ) ಯಾವುದೊಂದೂ; ನ ಏವ ಆಸೀತ್= ಸ್ವತಂತ್ರವಾಗಿ ಸ್ಥಿತಿಯನ್ನು ಹೊಂದಿರಲೇ ಇಲ್ಲ; (ನನ್ನನ್ನು ಆಶ್ರಯಿಸಿ ಕೊಂಡೇ ಇದ್ದುವು); ಪಶ್ಚಾತ್= ಸೃಷ್ಟಿಯ ಅನಂತರದಲ್ಲಿ; ಅಹಂ ಆಸಂ = ನಾನು ಪ್ರಕಟನಾದೆನು; ತ್ವಂ ಆಸೀಃ = ನೀನು ಸೃಷ್ಟಿಯಲ್ಲಿ ಬಂದೆ; ಏತತ್ ಚ ಆಸೀತ್= ಈ ಜಗತ್ತೆಲ್ಲವೂ; ಕೂಡ = ಉಂಟಾಯಿತು; ಯಃ ಅವಶಿಷ್ಯೇತ = ಪ್ರಳಯಾನಂತರ ಉಳಿದಿರುವವನು; ಸಃ ಅಹಂ = ಅವನೇ ನಾನು.

ಯಥಾ ಸ್ಥಿತಿಯಲ್ಲಿ ಸ್ವತಂತ್ರನಾಗಿದ್ದು ಪ್ರಕಟನಾಗುವವನು ಭಗವಂತನೆಂದೂ, ಜೀವ ಜಗತ್ತುಗಳು ಅಸ್ವತಂತ್ರಗಳಾಗಿ ಆ ಭಗವಂತನನ್ನು ಆಶ್ರಯಿಸಿಕೊಂಡಿದ್ದು ಅವನಿಂದ ಸೃಷ್ಟವಾಗುವುವೆಂಮೂ ಇದರಿಂದ ಸ್ಪಷ್ಟವಾಯಿತು. ಜೀವ ಜಡಪರಮಾತ್ಮರ ಭೇದವೂ ಐಕ್ಯ ಅಥವ ಸ್ವತಂತ್ರ ಅಸ್ವತಂತ್ರ ಲಕ್ಷಣಗಳಿಂದ ಏಕತ್ರ ಇರುವಿಕೆಯೂ ಇಲ್ಲಿ ತಿಳಿಸಲ್ಪಟ್ಟಿರುವುದರಿಂದ ಪ್ರಚಲಿತವಾದ ಅದ್ವೈತವಾದಕ್ಕೆ ಅವಕಾಶವಿಲ್ಲದಂತಾಯಿತು 'ಐಕ್ಯ' ಎಂಬ ಶಬ್ದಕ್ಕೆ 'ಏಕತ್ರಭಾವಃ', 'ಏಕ ಇವ ಭಾವಃ' ಎಂದು ಅರ್ಥವಾಗುವುದೇ ಹೊರತು, 'ಏಕತಾ ಭಾವ' ಅಥವ ಒಂದೇ ಆಗಿರುವಿಕೆ ಎಂಬ ಅರ್ಥ ಕೂಡುವುದಿಲ್ಲ.

ಯತ್= ಯಾವುದು; ಆತ್ಮನಿ= ಕೇವಲ ಆತ್ಮಸ್ವರೂಪನಾದ ನನ್ನಲ್ಲಿ; ಅರ್ಥಂ ಋತೇಪ್ರತೀಯೇತ= ನಿಷ್ಪ್ರಯೋಜಕವಾಗಿರುವುದೆಂದೂ; ನ ಪ್ರತೀಯೇತ= ಬಾಧಕವಾಗದೆ ಇರುವುದೆಂದೂ; ತತ್= ವೇದಾದಿಗಳು ಹಾಗೆ ತಿಳಿಸುವುದು; ಆತ್ಮನಃ = ನನ್ನ; ಮಾಯಾಂ = ಸಾಮರ್ಥ್ಯವಿಶೇಷವೆಂದು; ವಿದ್ಯಾತ್= ತಿಳಿಯಬೇಕು; ಯಥಾ ಆಭಾಸಃ ಯಥಾತಮಃ = ಅದು ಬೆಳಕಿನಿಂದ ಕಾಣುವ ಮತ್ತು ಕತ್ತಲೆಯಿಂದ ಕಾಣದಿರುವ ವಸ್ತುವಿನಂತೆ.

ಇಲ್ಲಿ ವಸ್ತು ಎಂಬುದು ಜೀವ ಮತ್ತು ಪ್ರಕೃತಿಗಳೆರಡನ್ನೂ ನಿರ್ದೇಶಿಸುವ ಪದ. ಸೂರ್ಯಕಿರಣಗಳು ಬಿದ್ದಾಗ ಮೋಡದಲ್ಲಿ ಆ ಬೆಳಕಿನ ಪ್ರತಿಬಿಂಬವಾಗಿ ಕಾಮನಬಿಲ್ಲು ಮೂಡುವುದು. ಸೂರ್ಯನಂತಿರುವವನು ಪರಮಾತ್ಮ; ಬೆಳಕಿನ ಪ್ರತಿಬಿಂಬದಂತೆ ಅಂತರಾತ್ಮಪ್ರತಿಬಿಂಬವಾಗಿರುವುದು ಜೀವ. ಮೋಡದ ಜಲಬಿಂದುಗಳಲ್ಲಿ ಪ್ರವೇಶಿಸಿ ತಮೋಗುಣದಲ್ಲಡಗಿದ ವರ್ಣ ವಿಶೇಷಗಳನ್ನು ಆ ಬಿಂದುಗಳು ವಿಂಗಡಿಸಿ ತೋರಿಸುವ ಸಾಮರ್ಥ್ಯ ನೀಡುವುದು ಬೆಳಕು.

ಜೀವನ ಸ್ವರೂಪಾನಂದಾನುಭವಕ್ಕೆ ಅಡಿಯಾಗಿರುವುದು ತಮೋಗುಣ ವಿಶಿಷ್ಟವಾದ ಲಿಂಗಶರೀರ. ಆ ಜಡ ಶರೀರ, ಕತ್ತಲೆಯಂತೆ. ಅದರ ಲಕ್ಷಣಗಳನ್ನು ವಿಂಗಡಿಸಿ ತಿಳಿದು ಎಚ್ಚರಗೊಳ್ಳಲು ಭಗವದ್ವಿಷಯಕವಾದ ಜ್ಞಾನವು ಸಹಾಯಕವಾಗುವಂತೆ ಸೂರ್ಯಸದೃಶನಾದ, ಹೊರ ಒಳಗಿರುವ ಬಿಂಬನು ಸಾಮರ್ಥ್ಯ ನೀಡಿದಾಗ, ಕರ್ಮಗ್ಲಾನಿಯು ದೂರವಾಗಿ ಆತ್ಮಜ್ಞಾನ ಉದಯಿಸುವುದು. ಸಾಮರ್ಥ್ಯನೀಡುವವನು ಬಿಂಬ; ಯಥೋಚಿತವಾಗಿ ಅದರ ಲಾಭಹೊಂದುವುದು ಪ್ರತಿಬಿಂಬ, ಅಥವ ಅಸ್ವತಂತ್ರನಾದ ಜೀವ. ಹೀಗಿರುವುದರಿಂದ ಪ್ರಯೋಜನ ಹೊಂದುವುದೂ, ಬಂಧಕವನ್ನು ಕಳೆದುಕೊಳ್ಳುವುದೂ ಜೀವನೇ ಹೊರತು ಬ್ರಹ್ಮನಲ್ಲ. ಶಕ್ತಿಸ್ವರೂಪನಾದ ಆ ಬ್ರಹ್ಮನಿಗೆ ಮಾಯಾ ಎಂದು ಹೆಸರು; ಪ್ರತಿಬಿಂಬತ್ವೇನ ಜೀವನಿಗೂ ಆ ಹೆಸರು ಬಂದಿತು. ಕತ್ತಲೆಯಂತೆ ಗ್ಲಾನಿಯನ್ನುಂಟು ಮಾಡುವ ಗುಣ, ಕಾಲ, ಕರ್ಮಗಳಿಗೂ ಭಗವನ್ಮಾಯಾ ಬಲದಿಂದ ಮಾಯೆ ಎಂಬ ಹೆಸರು ಸಲ್ಲುತ್ತದೆ.

ಈ ಶ್ಲೋಕದಲ್ಲಿ, ಪರಮಾತ್ಮನು ಜಡವನ್ನು ಬಳಸಿಕೊಂಡು ಜೀವನಿಗೆ ಪ್ರಯೋಜನವನ್ನುಂಟುವ ಸೃಷ್ಟಿ, ಸ್ಥಿತಿ, ಲಯಗಳ ವಿಚಾರವು ಗರ್ಭಿತವಾಗಿದೆ. ಅವನು ಪ್ರಯೋಜನಾಪೇಕ್ಷೆ ಇಲ್ಲದವನಾದುದರಿಂದ ನಿರ್ಲಿಪ್ತ. ಚಿತ್ರ ವಿಚಿತ್ರವಾಗಿ ಜಗದ್ವ್ಯಾಪಾರಗಳನ್ನು ನಡೆಸುತ್ತಿದ್ದರೂ ನಿರ್ಲಿಪ್ತನಾಗಿರುವುದು ಅವನ ವಿಶೇಷ ಶಕ್ತಿ ಅಥವ ಮಾಯಾಬಲ. ಅದು ಇಂದ್ರಜಾಲದಂತೆ ಇಲ್ಲದಿರುವುದನ್ನು ಇದ್ದಂತೆ ತೋರಿಸುವುದಲ್ಲ; ಯಥಾರ್ಥ ಕ್ರಿಯಾರೂಪ.

ಯಥಾ = ಹೇಗೆ; ಮಹಾಂತಿ ಭೂತಾನಿ = ಮಹತ್ತತ್ವ, ಅಹಂಕಾರ ತತ್ವಮೊದಲಾದ ಭೌತಿಕ ವಸ್ತುಗಳು; ಉಚ್ಚಾವಚೇಷು ಭೂತೇಷು = ಮೇಲೆ ಮೇಲಿನ ಮತ್ತು ಕೆಳಕೆಳಗಿನ ವಸ್ತುಗಳಲ್ಲಿ; ಪ್ರವಿಷ್ಟಾನಿ ಅಪ್ರವಿಷ್ಟಾನಿ = ವ್ಯಾಪಿಸಿದ್ದರೂ ಹೇಗೆ ವ್ಯಾಪ್ತಿಯ ಮಿತಿಗೆ ಒಳಗಾಗಿರುವುದಿಲ್ಲವೋ; ತಥಾ = ಹಾಗೆ; ತೇಷು = ಅವುಗಳಲ್ಲಿ; ಅಹಂ = ನಾನು, ಪ್ರವಿಷ್ಟನಾಗಿದ್ದೇನೆ; ನತೇಷು ಅಹಂ = ಅವುಗಳಮಿತಿಗೆ ಒಳಪಟ್ಟ ಆಶ್ರಿತನು ನಾನಲ್ಲ.

ಉದಾಹರಣೆ ಮಹತ್ತತ್ವವು ಅಹಂಕಾರತತ್ವ ಮೊದಲಾದ ಕೆಳಕೆಳಗಿನ ಎಲ್ಲಾ ತತ್ವಗಳಲ್ಲಿ ಪ್ರವಿಷ್ಟವಾಗಿದ್ದರೂ ಅದು ಅವುಗಳನ್ನು ಮೀರಿಯೂ ಇರುವುದರಿಂದ ಇತರ ತತ್ವಗಳು ಮಹತ್ತತ್ವವನ್ನು ಆಶ್ರಯಿಸಿಕೊಂಡಿವೆ; ಮಹತ್ತತ್ವವು ಪ್ರತ್ಯೇಕವಾಗಿಯೂ ಇದೆ. ಇದರಂತೆ ಮಾಯಾ ರಮಣನಾದ ಭಗವಂತನು ಎಲ್ಲಕ್ಕೂ ಆಶ್ರಯನಾಗಿ, ಎಲ್ಲವನ್ನೂ ಮೀರಿದವನಾಗಿದ್ದಾನೆ.

ಯತ್ = ಯಾವುದು; ಸರ್ವತ್ರ ಸರ್ವದಾಸ್ಯಾತ್ = ಸರ್ವದೇಶ ಸರ್ವಕಾಲಗಳಲ್ಲಿ ಏಕಪ್ರಕಾರವಾಗಿರುವುದೋ; (ಅದು); ಅನ್ವಯವ್ಯತಿರೇಕಾಭ್ಯಾಂ = ಇತರ ವಸ್ತುಗಳ ಹೋಲಿಕೆ ಇರುವುದು ಮತ್ತು ಇಲ್ಲಿದಿರುವುದು ಎಂಬ ಲಕ್ಷಣಗಳಿಂದ; ಜಿಜ್ಞಾಸ್ಯಂ = ವಿಚಾರ ಮಾಡಿ ತಿಳಿಯಬೇಕಾದುದು; ಆತ್ಮನಃ ತತ್ವಜಿಜ್ಞಾಸುನಾ = ಪರಮಾತ್ಮತತ್ವವನ್ನು ಯಥಾವತ್ತಾಗಿ ತಿಳಿಯಲಿಚ್ಛಿಸಿರುವ ನಿನ್ನಿಂದ; ಏತದೇವ ವಿಜಿಜ್ಞಾಸ್ಯಂ = ಇದೇನೇ ಚೆನ್ನಾಗಿ ಆಲೋಚಿಸಿ ತಿಳಿಯಬೇಕಾಗಿರುವುದು.

ದ್ವೈತಾದ್ವೈತ ವಿಶಿಷ್ಟಾದ್ವೈತಗಳ ಸಂಧಿಸ್ಥಾನವಿರುವುದು ಇಲ್ಲಿಯೇ ವಿಶೇಷಜಿಜ್ಞಾಸೆಯಿಲ್ಲದೆ ತೋರಿಕೆಯ ಅರ್ಥವನ್ನು ಗ್ರಹಿಸಿದರೆ ಅದ್ವೈತವೆಂಬ ಹಾದಿ; ಸ್ವಲ್ಪದೂರ ಆಲೋಚಿಸಿ ಕೈಬಿಟ್ಟರೆ ವಿಶಿಷ್ಟಾದ್ವೈತ; ಚೆನ್ನಾಗಿ ವಿಚಾರ ಮಾಡಿದಾಗ ತಿಳಿದು ಬರುವುದು ದ್ವೈತವೆಂಬ ತತ್ವಾರ್ಥ. ಬ್ರಹ್ಮನಿಗೂ ಜೀವ ಜಡಗಳಿಗೂ ನಿತ್ಯತ್ವವೆಂಬ ಅನ್ವಯ ಲಕ್ಷಣವಿದ್ದರೂ, ದೇಶಕಾಲಗಳ ವ್ಯಾಪ್ತತ್ವ ವಿಷಯಕವಾದ ವ್ಯತಿರೇಕ ಲಕ್ಷಣವೂ ಇರುವುದರಿಂದ ಭೇದ ಜ್ಞಾನವೇ ಸತ್ಯವಾದುದು; ಭೇದಾಭೇದ, ಅಭೇದ ಎಂಬುವು ಸಮ್ಯಜ್ಞಾನವಾಗಲಾರವು

೩೨, ೩೪, ೩೫, ಮತ್ತು ೩೬ ನೇ ಶ್ಲೋಕಗಳ ಮೊತ್ತಕ್ಕೆ ''ಚತುಃ ಶ್ಲೋಕೀ ಭಾಗವತ'' ಎಂಬ ಸಂಕೇತವಿದೆ. ಇಡೀ ಭಾಗವತ ಗ್ರಂಥದಲ್ಲಿ ವಿಸಾರವಾಗಿ ಹೇಳಿರುವ ಸ್ವತಂತ್ರ ನಿತ್ಯ ವಸ್ತುವಾದ ಭಗವಂತ, ಸ್ವಪ್ರಯೋಜನರಹಿತನಾದ ಆವನಿಂದ ಜೀವರ ಉದ್ಧಾರಾರ್ಥವಾಗಿ ಜಗತ್ ಸೃಷ್ಟ್ಯಾದಿ ವ್ಯಾಪಾರ ಎಂಬ ಮುಖ್ಯ ವಿಷಯಗಳನ್ನು ಹೇಳಿ,

ಸಕಲ ವಸ್ತುಗಳ ಮತ್ತು ಜೀವರ ವ್ಯಾಪಾರಗಳನ್ನೆಲ್ಲಾ ಆವನೇ ನಡೆಸಿದರೂ ಹೇಗೆ ತಾನು ಪೂರ್ಣ ನಿರ್ಲಿಪ್ತನಾಗಿರುವನೆಂಬ ಅತಿ ಮುಖ್ಯ ವಿಷಯವನ್ನೂ ಈ ನಾಲ್ಕು ಶ್ಲೋಕಗಳಲ್ಲಿ ಸಂಗ್ರಹಿಸಿ ಹೇಳಿದ್ದಾರೆ. ಇದೇ ಸಕಲ ಶಾಸ್ತ್ರಾರ್ಥಗಳ ಸಾರ. ಮುಂದಿನ ಕಥಾಭಾಗವೆಲ್ಲಾ ಜೀವರ ಉದ್ಧಾರವೆಂಬ ಮಾತಿನಲ್ಲಿ ಅಡಕವಾಗಿದೆ.

**ಏತನ್ಮತಂ ಮಮಾತಿಷ್ಠ ಪರಮೇಣ ಸಮಾಧಿನಾ ।**
**ಭವಾನ್ ಕಲ್ಪವಿಕಲ್ಪೇಷು ನವಿಮುಹ್ಯತಿ ಕರ್ಹಿಚಿತ್** ॥ ೩೭ ॥

ಮಮ ಏತತ್ ಮತಂ = ನನ್ನ ಈ ಉಪದೇಶವನ್ನು; ಪರಮೇಣ ಸಮಾಧಿನಾ = ಚೆನ್ನಾಗಿ ಮನಸ್ಸಿಗೆ ತಂದುಕೊಂಡು; ಆತಿಷ್ಠ = ಕಾರ್ಯನಿರತನಾಗು; ಭವಾನ್ = ನೀನು; ಕಲ್ಪವಿಕಲ್ಪೇಷು = ನಿನ್ನ ಪ್ರತಿಯೊಂದು ದಿನಕಲ್ಪದಲ್ಲಿಯೂ ಲಯಕಾಲದಲ್ಲಿಯೂ; ಕರ್ಹಿಚಿತ್ = ಯಾವ ಕಾರಣದಿಂದಲೂ; ನವಿಮುಹ್ಯತಿ = ಬುದ್ಧಿಯ ವ್ಯಾತ್ಯಾಸ ಹೊಂದುವುದಿಲ್ಲ.

ಜೀವನ ಅಸ್ವಾತಂತ್ರ್ಯವನ್ನೂ, ಪರಮಾತ್ಮನ ಸ್ವಾತಂತ್ರ್ಯ ವ್ಯಾಪಾರಗಳನ್ನೂ ಅರಿತುಕೊಂಡು ನಡೆಯುವವರಿಗೆ ಬುದ್ಧಿಯು ಯಾವಾಗಲೂ ಸ್ವಚ್ಛವಾಗಿದ್ದು, ಅವರ ಕೃತಿಗಳೆಲ್ಲವೂ ಭಗವಂತನ ಸಂಕಲ್ಪಕ್ಕೆ ಅನುಗುಣವಾಗಿಯೇ ನಡೆದು ಪೂರ್ಣಫಲಕಾರಿಯಾಗುವುವು ಎಂಬುದು ಇದರ ಅಭಿಪ್ರಾಯ.

೪೩೨ ಕೋಟಿ ಮಾನವ ವರ್ಷಗಳಷ್ಟು ಕಾಲ ಬ್ರಹ್ಮದೇವರ. ಒಂದು ಹಗಲು ಅದಕ್ಕೆ ದಿನ ಕಲ್ಪವೆಂದು ಹೆಸರು. ಅಂತಹ ಒಂದೊಂದು ದಿನ ಕಲ್ಪದಲ್ಲಿ ಹದಿನಾಲ್ಕು ಮನುಕಲ್ಪಗಳಾಗುವುವು. ಒಂದೊಂದು ಮನುಕಲ್ಪದ ಆವಧಿ ೭೧ ಚತುರ್ಯುಗಗಳು (ಮಹಾಯುಗಗಳು) ೪೩೨೦೦೦೦ X೭೧ ಮಾನವ ವರ್ಷಗಳು.

**ಶ್ರೀಶುಕಉವಾಚಃ**— ಶುಕಾಚಾರ್ಯರು ನುಡಿದರು.

**ಸಂಪ್ರದ್ಯಶ್ಯೈವಮಜನೋ ಜನಾನಾಂಪರಮೇಷ್ಠಿನಃ ।**
**ಪಶ್ಯತಸ್ತಸ್ಯ ತದ್ರೂಪಮಾತ್ಮನೋನ್ಯರುಣದ್ಧರಿಃ** ॥ ೩೮ ॥

ಅಜನಃ = ಜನನರಹಿತನಾದ; ಹರಿಃ = ಶ್ರೀಹರಿಯು; ಏವಂ = ಈ ರೀತಿಯಾಗಿ; ಜನಾನಾಂಪರಮೇಷ್ಠಿನಃ = ಜನಿಸಲಿರುವ ರುದ್ರಾದಿಗಳಿಗಿಂತ ಶ್ರೇಷ್ಠನಾದ ಬ್ರಹ್ಮನಿಗೆ; ಸಂಪ್ರದೃಶ್ಯ = ತನ್ನ ದರ್ಶನವನ್ನು ಕೊಟ್ಟು; ತಸ್ಯಪಶ್ಯತಃ = ಆ ಬ್ರಹ್ಮದೇವನು

ನೋಡುತ್ತಿದ್ದಂತೆಯೇ; ಆತ್ಮನಃ ತತ್ ರೂಪಂ= ತನ್ನ ಆ ಮೂಲರೂಪವನ್ನು; ಸ್ಮರುಣತ್= ಅಂತರ್ಧ್ಯಾಧ್ಯಾನಗೊಳಿದನು.

ಭಗವತಂನಿಗೆ ಇತರರಂತೆ ಭೌತಿಕ ಆಕಾರಗಳ ಸಂಬಂಧವಿಲ್ಲದಿದ್ದರೂ, ಸ್ವರೂಪತಃ ಜ್ಞಾನಾನಂದಮಯವಾದ ಆಕಾರವುಂಟು ಎಂಬುದು ಬ್ರಹ್ಮದೇವರು ಕಂಡರೂಪದಿಂದ ಸಿದ್ಧವಾಗಿರುವುದು.

**ಅಂತರ್ಹಿತೇಂದ್ರಿಯಾರ್ಥಾಯ ಹರಯೇವಿಹಿತಾಂಜಲಿಃ ।**
**ಸರ್ವಭೂತಮಯೋ ವಿಶ್ವಂ ಸಸರ್ಜೇದಂ ಸಪೂರ್ವವತ್ ॥ ೩೯ ॥**

ಇಂದ್ರಿಯಾರ್ಥಾಯ = ಬಾಹ್ಯ ಚಕ್ಷುವಿಗೆ; ಅಂತರ್ಹಿತಾಯ = ಕಾಣದಂತೆ ಮರೆಯಾದ; ಹರಯೇ = ಶ್ರೀಹರಿಗೆ; ವಿಹಿತ ಅಂಜಲಿಃ = ಆರೂಪವನ್ನು ಮನಸ್ಸಿಗೆ ತಂದುಕೊಂಡು ಒಳಹೊರಗಿರುವ ಆಪ್ರಭುವಿಗೆ ನಮಸ್ಕರಿಸಿ; ಸರ್ವಭೂತಮಯಃ = ಸರ್ವಭೂತಗಳಿಗೂ (ಜೀವಕೋಟಿಗೆ) ಯಜಮಾನರಾದ ಬ್ರಹ್ಮದೇವರು; ಇದಂ ವಿಶ್ವಂ = ಈ ಪ್ರಪಂಚವನ್ನು; ಪೂರ್ವವತ್= ಹಿಂದಿನ ಬ್ರಹ್ಮಕಲ್ಪಗಳಲ್ಲಿ ಸೃಷ್ಟಿಯು ನಡೆದಂತೆ; ಸಸರ್ಜ = ಸೃಷ್ಟಿಮಾಡಿದರು.

ಜಿವರ ಸೃಷ್ಟಿಯು ಹಿಂದಿನ ಕಲ್ಪಗಳಲ್ಲಿ ಆದಂತಯೇ ಮುಂದಿನ ಕಲ್ಪಗಳಲ್ಲಿಯೂ ಆಗುವುದು. ಆದರೆ ಆಯಾಸ್ಥಾನಮಾನಗಳಲ್ಲಿ ಸಾಧನೆಮಾಡಿಕೊಳ್ಳುವ ಜೀವರು ಹೊಸ ಹೊಸ ಗುಂಪಿನವರು. ದೇವತೆಗಳ ಸ್ಥಾನಗಳಲ್ಲಿ ಸಮಾನ ಯೋಗ್ಯತೆಯ ಜೀವರು ಬರುವರು. ಮಾನವಾದಿ ಜೀವರ ಸ್ಥಾನಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆಯ ಸದೃಶ ಜೀವರೇ ಬರುವರು. ಒಬ್ಬೊಬ್ಬ ಜೀವರಿಗೂ ಸದೃಶರಾದ ಅನಂತ ಜೀವರು ಭಗವಂತನುದರದಲ್ಲಿ ಅಸೃಜ್ಯರಾಗಿದ್ದು ಸರದಿಯಪ್ರಕಾರ ಸೃಷ್ಟಿಗೆ ಬಂದು, ತಮ್ಮ ತಮ್ಮ ಸಾಧನೆಗಳನ್ನು ಜನ್ಮ ಜನ್ಮಾಂತರಗಳಲ್ಲಿ ಪೂರೈಸಿಕೊಂಡು ಮುಕ್ತಸ್ಥಾನಗಳನ್ನು ಸೇರುವರು. ಹೀಗಿರುವುದರಿಂದ ಸೃಷ್ಟಿಕಾರ್ಯ ಅನಾದ್ಯನಂತ ಪ್ರವಾಹರೂಪವಾದುದು. ಏಕಪ್ರಾಕಾರವಾಗಿರುವವರು ಲಕ್ಷ್ಮೀನಾರಾಯಣರು. ಸೃಷ್ಟಿಗೆ ಬಂದು ಮುಕ್ತರಾಗುವವರು ಬ್ರಹ್ಮಾದಿ ಜೀವರು.

**ಪ್ರಜಾಪತಿರ್ಧರ್ಮಪತಿರೇಕದಾನಿಯಮಾನ್ಯಮಾನ್ ।**
**ಭದ್ರಂ ಪ್ರಜಾನಾಮಿಚ್ಛನ್ನಾತಿಷ್ಠತ್ಸ್ವಾರ್ಥಕಾಮ್ಯಯಾ ॥ ೪೦ ॥**

ಪ್ರಜಾಪತಿಃ = ಸಾಧಕರಾದ ಸಕಲ ಜೀವರಿಗೂ ಯಜಮಾನರಾದ; ಧರ್ಮಪತಿಃ = ಧರ್ಮಾಧರ್ಮಗಳ ನಿಯಮಾವಳಿಗಳನ್ನು ಲೋಕಕ್ಕೆ ವಿಧಿಸತಕ್ಕವರಾದ

ಬ್ರಹ್ಮದೇವರು; ಏಕದಾ = ಒಮ್ಮೆ; ಪ್ರಜಾನಾಂ ಭದ್ರಂ ಇಚ್ಛನ್= ಲೋಕದ ಪ್ರಜೆಗಳಿಗೆ ಮಂಗಳವನ್ನು ಕೋರಿ; ಸುಅರ್ಥಕಾಮ್ಯಯಾ = ಉತ್ತಮವಾದ ಕಾರ್ಯಪ್ರಯೋಜನದ ಉದ್ದೇಶದಿಂದ; ನಿಯಮವಾನ್ ಯಮವಾನ್= ನಿಯಮ, ಯಮ ಮೊದಲಾದ ಅಷ್ಟಾಂಗಯುಕ್ತವಾದ ಯೋಗವನ್ನು; ಅತಿಷ್ಠತ್= ಆಚರಿಸಿದರು.

ಸ್ವಂತ ಪ್ರಯೋಜನಾಪೇಕ್ಷೆಯಿಂದ ಆಚರಿಸುವ ಪೂಜಾದಿಕರ್ಮಗಳು ನಿಜವಾಗಿ ಕಾಮ್ಯವೆನಿಸುವುವು; ಲೋಕಹಿತಾರ್ಥವಾಗಿ ಆಚರಿಸುವ ಕರ್ಮಗಳು ನಿಷ್ಕಾಮಕರ್ಮಗಳೇ ಆಗಿ ಸುಅರ್ಥಗಳನ್ನೇ ಕೊಡುವವು. ಬ್ರಹ್ಮದೇವರ ಯೋಗ ಅನುಷ್ಠಾನದಿಂದ ಲೋಕಕಲ್ಯಾಣ ಸಾಧನೆ; ಮುಕ್ತಿಯಲ್ಲಿ ಅವರ ಆನಂದದ ಉದ್ರೇಕ ಫಲ.

ಅಹಿಂಸಾ, ಸತ್ಯ, ಅಸ್ತೇಯ (ಕಳ್ಳತನ ಮಾಡದಿರುವಿಕೆ) ಬ್ರಹ್ಮಚರ್ಯ ದಯಾ ಆರ್ಜವ (ಋಜು ಅಥವ ಡೊಂಕಿಲ್ಲದ ನಡತೆ), ಕ್ಷಮಾ, ಧೃತಿ (ಸುಖ ದುಃಖಗಳಲ್ಲಿ ಅಚಲ ಸ್ವಭಾವ), ಮಿತಾಹಾರ, ಶೌಚ (ದೇಹಶುದ್ಧಿ, ಮನಶ್ಶುದ್ಧಿ) ಈ ಹತ್ತು 'ಯಮಗಳು'; ತಪಸ್ಸು, ಸಂತೋಷ, ಆಸ್ತಿಕ್ಯಭಾವ (ದೇವರಲ್ಲಿ ನಂಬಿಕೆ), ದಾನ, ಭಗವತ್ಪೂಜೆ, ಸಿದ್ಧಾಂತ ಶ್ರವಣ (ಸಚ್ಛಾಸ್ತ್ರ ಶ್ರವಣ), ನಾಚಿಕೆ, ಬುದ್ಧಿವಂತಿಕೆ, ಜಪ, ವ್ರತಾನುಷ್ಠಾನ ಇವು ನಿಯಮಗಳು. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ (ವಿಷಯಗಳಿಂದ ಮನಸ್ಸು ಹಿಂದಕ್ಕೆ ಸೆಳೆಯುವುದು) ಧ್ಯಾನ, ಧಾರಣ, ಸಮಾಧಿ ಇವು ಯೋಗದ ಅಷ್ಟಾಂಗಗಳು. ಭಗವಂತನ ಆಕೃತಿಯನ್ನು ಮನಸ್ಸಿನಲ್ಲಿ ನಿಲ್ಲಿಸುವುದು ಧಾರಣ; ಆಕೃತಿ ದರ್ಶನದಿಂದ ಮೈಮರೆಯುವುದು ಸಮಾಧಿ.

**ತಂನಾರದಃ ಪ್ರಿಯತಮೋ ರಿಕ್ಥಾದಾನಾಮನುವ್ರತಃ ।**
**ಶುಶ್ರೂಷಮಾಣಃ ಶೀಲೇನ ಪ್ರಶ್ರಯೇಣ ದಮೇನಚ ॥ ೪೧ ॥**

**ಮಾಯಾಂ ವಿವಿದುಷುರ್ವಿಷ್ಣೋರ್ಮಾಯೇಶಸ್ಯಮಹಾಮುನಿಃ ।**
**ಮಹಾಭಾಗವತೋರಾಜನ್ಪಿತರಂ ಪರ್ಯತೋಷಯತ್ ॥ ೪೨ ॥**

ರಿಕ್ಥಾದಾನಾಂ = ತಂದೆಯ ವಿತ್ತವನ್ನು ಅನುಭವಿಸುವವರಲ್ಲಿ(ಮಕ್ಕಳಲ್ಲಿ); ಪ್ರಿಯತಮಃ ನಾರದಃ = ಅತ್ಯಂತ ಪ್ರೀತಿಪಾತ್ರರಾದ ನಾರದರು; ತಂ = ತಂದೆಯಾದ ಬ್ರಹ್ಮದೇವರನ್ನು; ಶೀಲೇನ = ಸನ್ನಡತೆಯಿಂದ; ಪ್ರಶ್ರಯೇಣ = ಗೌರವ ಭಾವದಿಂದ ಚ = ಮತ್ತು; ದಮೇನ = ಮನೋದಾರ್ಢ್ಯದಿಂದ; ಅನು ವ್ರತಃ =

ಸಮಯಾಸಮಯಗಳನ್ನರಿತು ನಡೆದುಕೊಳ್ಳುತ್ತಾ; ಶುಶ್ರೂಷಮಾಣಃ = ಸೇವೆಮಾಡುತ್ತಾ;

ರಾಜರ್ಷಿ = ವಿಲ್ಲೈ ಪರೀಕ್ಷಿದ್ರಾಜಾ; ಮಹಾಭಾಗವತಃ = ಪರಮಭಗವದ್ಭಕ್ತರಾದ; ಮಹಾಮುನಿಃ = ದೇವರ್ಷಿವರ್ಯರಾದ ಆ ನಾರದರು; ಮಾಯೇಶಸ್ಯ = ಸಕಲಶಕ್ತಿಗಳಿಗೂ ಒಡೆಯನಾದ; ವಿಷ್ಣೋಃ = ಮಹಾವಿಷ್ಣುವಿನ; ಮಾಯಾಂ = ಸೃಷ್ಟ್ಯಾದಿಗಳಲ್ಲಿ ವ್ಯಕ್ತವಾಗುವ ಅದ್ಭುತ ಶಕ್ತಿಯನ್ನು; ವಿವಿದಿಷುಃ = ಯೋಗ್ಯತಾನುಸಾರ ಚೆನ್ನಾಗಿ ತಿಳಿಯಬೇಕೆಂಬ ಇಚ್ಛೆಯುಳ್ಳವರಾಗಿ; ಪಿತರಂ = ತಂದೆಯಾದ ಬ್ರಹ್ಮದೇವರನ್ನು; ಪರ್ಯತೋಷಯತ್ = ತಮ್ಮ ಸೇವೆಯಿಂದ ಸಂತೋಷಪಡಿಸಿದರು.

ತತ್ವಜ್ಞಾನವು ಗುರುಶ್ರುಶ್ರೂಷೆಯಿಂದಲೇ ಲಭಿಸತಕ್ಕದ್ದೆಂಬುದು ಇದರಿಂದ ನಿಶ್ಚಯವಾಗುವುದು. ಭಗವಂತನ ಮಾಹಾತ್ಮ್ಯಜ್ಞಾನವು ಯೋಗ್ಯತಾನುಸಾರ ಪೂರ್ಣವಾಗುವುದರಿಂದ ಭಕ್ತಿಯು ಅತಿಪರಿಪಕ್ವವಾಗುವುದು; ಅದು ಗುರುಗಳ ಅನುಗ್ರಹದಿಂದ ಲಭಿಸುವಂತಹುದು. ಜಡತತ್ವಗಳ ಅಭಿಮಾನಿಗಳೂ ಮಯಾಸಂಪನ್ನರು; ಮೂಲ ಪ್ರಕೃತಿಯ ಯಜಮಾನಿಯಾದ ಚಿತ್ಪ್ರಕೃತಿ (ಲಕ್ಷ್ಮಿ)ಯೂ ಮಾಯಾಸಂಪನ್ನಳು; ಶ್ರೀಹರಿಯು ಮಾಯೇಶ. ಮಾಯಾ ಎಂದರೆ ಅಸಾಧಾರಣಶಕ್ತಿ; ಇಂದ್ರಜಾಲವಲ್ಲ.

**ತುಷ್ಟಂನಿಶಮ್ಯಪಿತರಂ ಲೋಕಾನಾಂ ಪ್ರಪಿತಾಮಹಂ ।**
**ದೇವರ್ಷಿಃ ಪರಿಪಪ್ರಚ್ಛಭವಾನ್ಯನ್ಮಾನುಪೃಚ್ಛಸಿ ॥ ೪೩ ॥**

ಪಿತರಂ = ತನ್ನ ತಂದೆಯಾದ; ಲೋಕಾನಾಂ = ಲೋಕದಲ್ಲಿ ಸೃಷ್ಟರಾದ ಇತರರಿಗೆಲ್ಲಾ; ಪ್ರಪಿತಾಮಹಂ = ಮುತ್ತಜ್ಜನಾದ ಬ್ರಹ್ಮ ದೇವರು; ತುಷ್ಟಂ = ಸಂಪ್ರೀತರಾಗಿರುವುದನ್ನು; ನಿಶಮ್ಯ = ಗಮನಿಸಿ; ದೇವರ್ಷಿಃ = ದೇವರ್ಷಿಯಾದ ನಾರದರು; ಭವಾನ್ = ನೀನು; ಮಾ = ನನ್ನನ್ನು ಕುರಿತು; ಯತ್ = ಯಾವುದನ್ನು; ಅನುಪೃಚ್ಛಸಿ = ಕೇಳುತ್ತಿರುವೆಯೋ, ಅದೇ ವಿಷಯಗಳನ್ನು ಕುರಿತು; ಪಪ್ರಚ್ಛ = ಪ್ರಶ್ನೆ ಮಾಡಿದರು.

ಮಹಾವಿಷ್ಣುವಿನ ನಂತರ ನಾರದ ಸನಕಾದಿಗಳಿಗೆ ಬ್ರಹ್ಮದೇವರುತಂದೆ; ಇಂದ್ರ ಕಾಮರಿಗೆ ರುದ್ರದೇವರು ತಂದೆ; ಇಂದ್ರಾದಿ ದೇವತೆಗಳು ಇತರರಿಗೆಲ್ಲಾ ಪಿತೃಸ್ಥಾನೀಯರು; ಆದುದರಿಂದ ಬ್ರಹ್ಮದೇವರು ಜಗತ್ತಿನ ಜೀವರಿಗೆ ಮುತ್ತಜ್ಜ.

ಭಗವದ್ಭಕ್ತರೆಲ್ಲಾ ತಿಳಿಯಲಪೇಕ್ಷಿಸುವುದು ಭಗವಂತನ ದಿವ್ಯ ಮಾಹಾತ್ಮ್ಯವನ್ನೇ ಎಂಬುದು ನಾರದ ಪರೀಕ್ಷಿತರ ನಿದರ್ಶನದಿಂದ ವ್ಯಕ್ತವಾಗುತ್ತವೆ.

**ತಸ್ಮಾ ಇದಂ ಭಾಗವತಂ ಪುರಾಣಂ ದಶಲಕ್ಷಣಂ ।**
**ಪ್ರೋಕ್ತಂ ಭಗವತಾ ಪ್ರಾಹ ಪ್ರೀತಃ ಪುತ್ರಾಯ ಭೂತಕೃತ್ ॥ ೪೪ ॥**

ತಸ್ಮೈ = ತನಗೆ; ಭಗವತಾ = ಭಗವಂತನಿಂದ; ಪ್ರೋಕ್ತಂ = ಉಪದಿಷ್ಟವಾದ; ದಶಲಕ್ಷಣಂ =ಹತ್ತು ಲಕ್ಷಣಗಳಿಂದ ಯುಕ್ತವಾದ; ಇದಂ ಭಾಗವತಂ = ಈಗ ನಾನು ಹೇಳಲಿರುವ ಭಾಗವತ ಪುರಾಣವನ್ನು; ಭೂತಕೃತ್=ಭೌತಪ್ರಪಂಚವನ್ನೂ ಪ್ರಾಣಿಗಳನ್ನೂ ಸೃಷ್ಟಿಮಾಡಿದ ಬ್ರಹ್ಮದೇವರು; ಪ್ರೀತಃ = ಸೇವೆಯಿಂದ ಸಂತುಷ್ಟವಾಗಿ; ಪುತ್ರಾಯ = ಮಗನಾದ ನಾರದರಿಗೆ; ಪ್ರಾಹ = ಹೇಳಿದರು.

ಪರಿಪೂರ್ಣಜ್ಞಾನ ನಿಧಿಯಾದ ಭಗವಂತನಿಂದ ಜೀವಪ್ರಪಂಚದಲ್ಲಿ ಸರ್ವಜ್ಞರಾದ ಬ್ರಹ್ಮದೇವರಿಗೆ ಉಪದಿಷ್ಟವಾದ ಭಾಗವತ ಶಾಸ್ತ್ರವು ಅತ್ಯಂತ ಪ್ರಾಮಾಣಿಕವೆಂಬುದು ಸಿದ್ಧವಾಯಿತು. ಅಷ್ಟೇ ಅಲ್ಲದೆ, ಅದನ್ನು ಜಗತ್ತಿನಲ್ಲಿ ಪ್ರಸಿದ್ಧಿ ಪಡಿಸಿದವರು ಜ್ಞಾನಜ್ಯೇಷ್ಠರಾದ ನಾರದರು. ಅವರ ಸೂಚನೆಯಿಂದ ಭಾಗವತ ಕಥೆಯನ್ನು ರಚಿಸಿ, ತಮ್ಮ ಪ್ರಿಯ ಪುತ್ರರಾದ ಶುಕಾಚಾರ್ಯರಿಗೆ ಉಪದೇಶ ಮಾಡಿದವರು, ನಾರಾಯಣಾಭಿನ್ನರಾದ ವೇದವ್ಯಾಸದೇವರು.

'ಭೂತಕೃತ್' ಎಂಬ ಮಾತು ಗಮನಾರ್ಹವಾದುದು. ನಿಜವಾಗಿಯೂ ಇಲ್ಲದ ಜಗತ್ತನ್ನು ಕಲ್ಪಿಸಿಕೊಂಡು ಅದನ್ನು ತನ್ನಲ್ಲಿ ಆರೋಪಿಸಿಕೊಂಡು ನಿರ್ಗುಣ ಬ್ರಹ್ಮನು ಸಗುಣನಾಗಿದ್ದಾನೆಂದು ಹೇಳುವ ಮಾತಿಗೆ ಇದು ವಿರೋಧಿಯಾಗಿರುವುದು. ಅವ್ಯಕ್ತ ಪ್ರಕೃತಿಯಿಂದ ಮಹತ್ತತ್ತ್ವಾದಿಗಳನ್ನು ಸೃಷ್ಟಿಸಿದ ಬಗೆಯು ಹಿಂದೆ ವಿವರಿಸಲ್ಪಟ್ಟಿತು. ಈಗ ವಿರಾಟ್ಪುರುಷನು ಚತುರ್ಮುಖನಲ್ಲಿದ್ದು ಭೌತಪ್ರಪಂಚವನ್ನು ಸೃಷ್ಟಿಸಿದ ವಿಚಾರ ಪ್ರಸಕ್ತವಾಗಿದೆ. 'ಭೂ' ಎಂಬ ಧಾತುವಿಗೆ 'ಸತ್ತಾ' ಅಥವ 'ಇರುವಿಕೆ' ಎಂಬುದು ಅರ್ಥ. ಭೌತಪ್ರಪಂಚ ಎಂದರೆ ನಿಜವಾಗಿ ಇರುವುದು, ಭ್ರಮಾತ್ಮಕವಲ್ಲ ಎಂದಾಯಿತು.

**ನಾರದಃ ಪ್ರಾಹ ಮುನಯೇ ಸರಸ್ವತ್ಯಾಸ್ತಟೇ ನೃಪ ।**
**ಧ್ಯಾಯತೇ ಬ್ರಹ್ಮಪರಮಂ ವ್ಯಾಸಾಯಾಮಿತತೇಜಸೇ ॥ ೪೫ ॥**

ನೃಪ = ಪರೀಕ್ಷಿದ್ರಾಜಾ; ಸರಸ್ವತ್ಯಾಃ ತಟೇ = ಸರಸ್ವತೀನದಿಯ ತೀರದಲ್ಲಿ; ಪರಮಂ ಬ್ರಹ್ಮ = ಪರಬ್ರಹ್ಮನ ವಿಷಯವನ್ನು ಕುರಿತು; ಧ್ಯಾಯತೇ =

ಧ್ಯಾನಾಸಕ್ತರಾಗಿದ್ದ; ಅಮಿತ ತೇಜಸೇ = ಪೂರ್ಣತೇಜಸ್ವಿಗಳಾದ; ಮುನಯೇ ವ್ಯಾಸಾಯ = ಋಷಿವರ್ಯರಾದ ವೇದವ್ಯಾಸರಿಗೆ; ನಾರದಃ = ನಾರದರು; ಪ್ರಾಹ = ತಮ್ಮ ತಂದೆಯಿಂದ ಉಪದೇಶ ಹೊಂದಿದ ಭಾಗವತ ಶಾಸ್ತ್ರವನ್ನು ಹೇಳಿದರು.

ಇದು ಭಾಗವತ ಪರಂಪರೆಯನ್ನು ತಿಳಿಸುವ ವಿಚಾರವೇ ಹೊರತು, ವೇದವ್ಯಾಸರು ನಾರದರಿಂದ ತಿಳಿವಳಿಕೆ ಹೊಂದಿದರೆಂದು ಹೇಳುವ ಮಾತಲ್ಲ. ಏಕೆಂದರೆ, ವೇದವ್ಯಾಸರು ನಾರಾಯಣಾವತಾರರೆಂದು ಹೇಳಿದ ಮೇಲೆ ಅವರಿಗೆ ನಾರದರು ಉಪದೇಶಮಾಡಿದರೆಂದು ಹೇಳುವುದು ಅವಿವೇಕದ ಮಾತಾಗುವುದು; ಹಾಗೆ ತಿಳಿಯುವವರು ಅವಿವೇಕಿಗಳೇ ಸರಿ.

**ಯದುತಾಹಂ ತ್ವಯಾ ಪೃಷ್ಟೋ ವೈರಾಜಾತ್ಪುರುಷಾದಹಂ ।**
**ಯಥಾಸೀತ್ತದುಪಾಖ್ಯಾಸ್ಯೇ ಪ್ರಶ್ನಾನನ್ಯಾಂಶ್ಚ ಕೃತ್ಸ್ನಶಃ ॥ ೪೬ ॥**

ತ್ವಯಾ = ನಿನ್ನಿಂದ; ಅಹಂ = ನಾನು; ಯತ್ ಪೃಷ್ಟಃ = ಯಾವುದನ್ನುಕುರಿತು ಪ್ರಶ್ನಿತನಾದೆನೋ,ಅಂತಹ; ಇದಂ = ಈ ವಿಶ್ವವು; ವೈರಾಜಾತ್ ಪುರುಷಾತ್= ವಿರಾಡ್ರೂಪಿಯಾದ ಚತುರ್ಮುಖನಲ್ಲಿ ವಿರಾಡ್ರೂಪಿಯಾದ ಭಗವಂತನಿಂದ; ಯಥಾ ಆಸೀತ್ ತತ್= ಹೇಗೆ ಸೃಷ್ಟಿವಾಯಿತು, ಎಂಬುದನ್ನು; ಉಪಾಖ್ಯಾಸ್ಯೇ = ಪರಂಪರೆಯನ್ನು ಅನುಸರಿಸಿ ಹೇಳುತ್ತೇನೆ. ಉತ = ಅಲ್ಲದೆ; ಅನ್ಯಾನ್ ಪ್ರಶ್ನಾನ್ ಚ = ಇತರ ಪ್ರಶ್ನೆಗಳನ್ನೂ; ಕೃತ್ಸ್ನಶಃ = ಸಮಗ್ರವಾಗಿ; ಉಪಾಖ್ಯಾಸ್ಯೇ = ತದನುಸಾರವಾಗಿ ವಿವರಿಸುತ್ತೇನೆ.

ಭಗವಂತನಮಾಹಾತ್ಮ್ಯ ಜ್ಞಾನವು ಭಕ್ತಿಯ ಆವಿಷ್ಕಾರಕ್ಕೆ ಅವಶ್ಯಕ. ಆ ಪರಮಪುರುಷನ ಸೃಷ್ಟ್ಯಾದಿ ಅಷ್ಟಕರ್ತೃತ್ವವನ್ನು ತಿಳಿಯುವುದರಿಂದ ಮಾಹಾತ್ಮ್ಯಜ್ಞಾನ ಉಂಟಾಗುವುದು. ಆದುದರಿಂದ ಅವನು ಸೃಷ್ಟಿಸುವ ಕ್ರಮವನ್ನು ತಿಳಿಯುವುದು ಅತ್ಯಂತ ಪ್ರಯೋಜನಕರವಾದುದು. ಅದನ್ನು ತಿಳಿಯುವಾಗ, ಜೀವರ ಸ್ಥಿತಿಗತಿಗಳೂ, ಮುಖ್ಯವಾಗಿ ಅವರೆಲ್ಲರ ಅಸ್ವಾತಂತ್ರ್ಯ ಜ್ಞಾನವೂ ಉಂಟಾಗುವುದರಿಂದ ಸ್ವತಂತ್ರಕರುಣಾ ಮೂರ್ತಿಯಲ್ಲಿ ಭಕ್ತಿಯುಂಟಾಗುವುದು; ಅದು ಸುದೃಢವಾಗುವುದು.

ಇಲ್ಲಿಗೆ ಒಂಭತ್ತನೆಯ ಅಧ್ಯಾಯ ಮುಗಿಯಿತು.

---

# ದ್ವಿತೀಯ ಸ್ಕಂಧ— ಹತ್ತನೆಯ ಅಧ್ಯಾಯ ಪ್ರಾರಂಭ

॥ ಶ್ರೀ ಗುರುಭ್ಯೋನಮಃ ॥ ಹರಿಃಓಂ ॥

**ಶ್ರೀ ಶುಕಉವಾಚಃ**— ಶ್ರೀ ಶುಕಾಚಾರ್ಯರು ನುಡಿದರು

**ಅತ್ರಸರ್ಗೋ ವಿಸರ್ಗಶ್ಚ ಸ್ಥಾನಂ ಪೋಷಣಮೂತಯಃ ।**
**ಮನ್ವಂತರೇಶಾನುಕಥಾ ನಿರೋಧೋ ಮುಕ್ತಿರಾಶ್ರಯಃ ॥ ೧ ॥**

**ದಶಮಸ್ಯ ವಿಶುದ್ಧ್ಯರ್ಥಂ ನವಾನಾಮಿಹಲಕ್ಷಣಂ ।**
**ವರ್ಣಯಂತಿ ಮಹಾತ್ಮಾನಃ ಶ್ರುತೇನಾರ್ಥೇನಚಾಂಜಸಾ ॥ ೨ ॥**

ಅತ್ರ = ಈ ಭಾಗವತ ಶಾಸ್ತ್ರದಲ್ಲಿ; ಸರ್ಗಃ = ಪ್ರಾಕೃತಸೃಷ್ಟಿ; ವಿಸರ್ಗಃ = ವೈಕೃತ ಸೃಷ್ಟಿ; ಸ್ಥಾನಂ = ಸ್ಥಿತಿ; ಪೋಷಣಂ = ಭಗವಂತನ ಅನುಗ್ರಹದ ಪರಿ; ಊತಯಃ = ಕರ್ಮಗತಿಗಳು; ಮನ್ವಂತರ, ಈಶಾನು ಕಥಾಃ = ಮನ್ವಂತರಗಳ ಮತ್ತು ಚಕ್ರವರ್ತಿಗಳ ಚರಿತ್ರೆಗಳು; ನಿರೋಧಃ = ಲಯದ ಕ್ರಮ; ಮುಕ್ತಿಃ = ಜೀವರ ಮುಕ್ತಸ್ಥಿತಿ; ಮತ್ತು ಆಶ್ರಯಃ = ಸರ್ವಾಶ್ರಯಪ್ರದನ ವಿಚಾರ; ಈ ಅಂಶಗಳುಯುಕ್ತವಾಗಿವೆ ದಶಮಸ್ಯ = ಹತ್ತನೆಯದಾದ ಭಗವಂತನ ಮಾಹಾತ್ಮ್ಯ ಜ್ಞಾನದ; ವಿಶುದ್ಧ್ಯರ್ಥಂ = ಪರಿಶುದ್ಧಿ ಪ್ರಾಪ್ತಿಗಾಗಿ; ಇಹ = ಇಲ್ಲಿ ಹೇಳಿರುವ; ನವಾನಾಂ = ಒಂಬತ್ತು ಅಂಶಗಳ; ಲಕ್ಷಣಂ = ಪ್ರಕಾರ ವರ್ಣನೆಯು ಇರುವುದಾಗಿದೆ; ಮಹಾತ್ಮಾನಃ = ಜ್ಞಾನಿವರೇಣ್ಯರು; ಅಂಜಸಾ = ಮುಖ್ಯ ವೃತ್ತಿಯಿಂದ; ಶ್ರುತೇನ ಅರ್ಥೇನ = ವೇದ ಪ್ರತಿಪಾದ್ಯವಾದ ಕ್ರಮದಿಂದ; ವರ್ಣಯಂತಿ ಚ = ವಿವರಿಸುತ್ತಾರೆ ಎಂಬುದು ಸುನಿಶ್ಚಿತ.

ಭಕ್ತಿಗೆ ಆವಶ್ಯಕವಾದ ಜ್ಞಾನ ಸಂಪಾದನೆಯು ಸಾಧನೆಗಳ ಮುಖ್ಯಗುರಿ. ಅದು ಸಿದ್ಧಿಸಬೇಕಾದರೆ ಇತರ ಒಂಭತ್ತು ಲಕ್ಷಣಗಳನ್ನು ಅರಿಯುವುದು ಆವಶ್ಯಕ. ಆದುದರಿಂದ ಪ್ರತಿಯೊಂದು ಪುರಾಣವೂ ವೇದಾನುಸಾರಿಯಾಗಿ ದಶಲಕ್ಷಣ ಯುಕ್ತವಾಗಿರುವುದು.

**ಭೂತಮಾತ್ರೇಂದ್ರಿಯಧಿಯಾಂ ಜನ್ಮ ಸರ್ಗ ಉದಾಹೃತಃ ।**
**ಬ್ರಹ್ಮಣೋ ಗುಣವೈಷಮ್ಯಾ ದ್ವಿಸರ್ಗಃ ಪೌರುಷಃ ಸ್ಮೃತಃ ॥ ೩ ॥**

ಭೂತಮಾತ್ರ = ಪಾಂಚಭೌತಿಕತನ್ಮಾತ್ರಗಳು; ಇಂದ್ರಿಯ = ದಶ ಇಂದ್ರಿಯಗಳು; ಧಿಯಾಂ = ಮತ್ತು ಬುದ್ಧಿ (ಮನಸ್ಸು) ಇವುಗಳ; ಜನ್ಮ = ಸೃಷ್ಟಿಯು;

ಸರ್ಗ ಉದಾಹೃತಃ = 'ಸರ್ಗ' ಎಂದು ಕರೆಸಿಕೊಳ್ಳುತ್ತದೆ; ಗುಣ ವೈಷಮ್ಯಾತ್= ಭೌತಗುಣಗಳ ಪಂಚೀಕರಣದಿಂದ; ಬ್ರಹ್ಮಣಃ = ಬ್ರಹ್ಮನಿಂದ ಬ್ರಹ್ಮಾಂಡದೊಳಗೆ ಆದ; ಪೌರುಷಃ = ವಿರಾಟ್ಪುರುಷನ ಸೃಷ್ಟಿಯು; ವಿಸರ್ಗಃ ಸ್ಮೃತಃ = ವಿಸರ್ಗವೆಂದು ಕರೆಸಿಕೊಳ್ಳುತ್ತದೆ.

ಬ್ರಹ್ಮಾಂಡವನ್ನು ಸೃಷ್ಟಿಸುವುದಕ್ಕಿಂತ ಮುಂಚೆ ಮೂಲಪ್ರಕೃತಿಯಿಂದ ಗುಣತ್ರಯಗಳು, ಮಹತ್ತತ್ತ್ವ, ಅಹಂಕಾರತತ್ತ್ವ, ಮನಸ್ಸು, ದಶ ಇಂದ್ರಿಯ ಶಕ್ತಿಗಳು ಮತ್ತು ಶಬ್ದ ಸ್ಪರ್ಶ–ರೂಪ–ರಸ–ಗಂಧಗಳೆಂಬ ಭೌತಸೂಕ್ಷ್ಮಗಳು (ತನ್ಮಾತ್ರಗಳು), ಇವುಗಳ ಸೃಷ್ಟಿಗೆ 'ಸರ್ಗ' ಅಥವ 'ಪ್ರಾಕೃತ ಸೃಷ್ಟಿ' ಎಂದು ಹೆಸರು. ಬ್ರಹ್ಮಾಂಡವನ್ನು ಸೃಷ್ಟಿಸಿದ ನಂತರ ಅದರೊಳಗೆ ಚತುರ್ಮುಖನಲ್ಲಿ ನಿಂತು ವಿರಾಟ್ಪುರುಷನು ಪಂಚ ಮಹಾಭೂತಗಳನ್ನೂ (ಆಕಾಶ, ವಾಯು, ಅಗ್ನಿ, ಜಲ, ಭೂಮಿ) ಜೀವ ಶರೀರಗಳನ್ನೂ ಸೃಷ್ಟಿಸುವುದಕ್ಕೆ 'ವಿಸರ್ಗ', ಅಥವ 'ವೈಕೃತ ಸೃಷ್ಟಿ' ಎಂದು ಹೆಸರು.

**ಸ್ಥಿತಿರ್ವೈಕುಂಠ ವಿಜಯಃ ಪೋಷಣಂ ತದನುಗ್ರಹಃ ।**
**ಮನ್ವಂತರಾಣಿ ಸದ್ಧರ್ಮಾ ಊತಯಃ ಕರ್ಮವಾಸನಾಃ ॥ ೪ ॥**

ಸ್ಥಿತಿಃ = 'ಸ್ಥಿತಿ' ಎಂಬುದು; ವೈಕುಂಠ ವಿಜಯಃ = ದಶಾವತಾರಾದಿಗಳಿಂದ ಶ್ರೀಹರಿಯು ದುಷ್ಟಶಿಕ್ಷಣ ಶಿಷ್ಟ ರಕ್ಷಣ ಕಾರ್ಯಗಳನ್ನು ನಡೆಸುವುದು; ಪೋಷಣಂ = 'ಪೋಷಣ' ಎನ್ನುವುದು ಭಕ್ತರಲ್ಲಿ ಭಗವಂತನು ತೋರುವ ವಿಶೇಷ ಅನುಗ್ರಹವು. ಮನ್ವಂತರಾಣಿ ಸದ್ಧರ್ಮಾಃ = ಮನ್ವಂತರಗಳು ಎಂಬುದು ಸಜ್ಜನರ ಹಿತಾರ್ಥವಾಗಿ ಮನುಚಕ್ರವರ್ತಿಗಳ ಆಳ್ವಿಕೆಯಲ್ಲಿ ನಡೆಸುವ ಸದ್ಧರ್ಮಗಳು; ಊತಯಃ = ಊತಿಗಳು ಎನ್ನುವುದು ಕರ್ಮವಾಸನಾಃ = ಜೀವರ ವಿವಿಧ ಸೃಷ್ಟಿಗಳಿಗೆ ಕಾರಣಗಳಾದ ಜನ್ಮಾಂತರಗಳ ಕರ್ಮ ಸಂಸ್ಕಾರಗಳು.

ಇಲ್ಲಿ ಹೇಳಿದ ಅಂಶಗಳು ಕಥಾರೂಪವಾಗಿ ಶ್ರೀಮದ್ಭಾಗವತದಲ್ಲಿ ತುಂಬಿಕೊಂಡಿವೆ.

**ಅವತಾರಾನುಚರಿತಂ ಹರೇಶ್ಚಾಸ್ಯಾನುವರ್ತಿನಾಂ ।**
**ಪುಂಸಾಮೀಶಕಥಾ ಪ್ರೋಕ್ತಾನಾನಾಖ್ಯಾನೋಪಬೃಂಹಿತಾ ॥ ೫ ॥**

ಹರೇಃ ಅವತಾರ ಅನುಚರಿತಂ = ಶ್ರೀಹರಿಯ ಮತ್ಸ್ಯಾದಿ ಅವತಾರಗಳ ವಿವಿಧ ಲೀಲಾಪ್ರಸಂಗಗಳು; ಅಸ್ಯ ಅನುವರ್ತಿನಾಂ ಪುಂಸಾಂ = ಇವನ ಅನುಚರರಾದ ಬ್ರಹ್ಮಾದಿ

ದೇವತೆಗಳ; ಅನುಚರಿತಂ= ದಿವ್ಯ ವ್ಯಾಪಾರಗಳು; ಇವು; ನಾನಾ ಆಖ್ಯಾನ ಉಪಬೃಂಹಿತಾಃ= ಬಗೆ ಬಗೆಯ ಕಥಾ ಸರಣಿಗಳಿಂದ ಪುಷ್ಟಿಗೊಂಡು; ಈಶ ಕಥಾಃ= ಶ್ರೀಹರಿಯ ಚರಿತ್ರೆಗಳೆಂದು; ಪ್ರೋಕ್ತಾಃ= ಹೇಳಲ್ಪಟ್ಟಿವೆ.

ಶ್ರೀಹರಿಯ ಮತ್ತು ಅವನ ಅನುಚರರ ಚರಿತ್ರೆಗಳಿಗೆಲ್ಲಾ ಶ್ರೀಹರಿಕಥೆಯೆಂದೇ ಹೆಸರು; ಏಕೆಂದರೆ, ಭಕ್ತರ ಚರಿತ್ರೆಗಳಲ್ಲಿ ಕಂಡು ಬರುವುದೂ ಶ್ರೀಹರಿಯ ಮಹಿಮೆಯೇ ಆಗಿರುತ್ತದೆ.

**ನಿರೋಧೋಽಸ್ಯಾನುಶಯನಮಾತ್ಮನಃ ಸಹ ಶಕ್ತಿಭಿಃ ।**
**ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ ॥ ೬ ॥**

ಆತ್ಮನಃ ಶಕ್ತಿಭಿಃ ಸಹ= ತನ್ನ ಮತ್ತು ತನ್ನನ್ನಾಶ್ರಯಿಸಿದ ಶಕ್ತಿಗಳನ್ನು ಕೂಡಿಕೊಂಡು; ಅಸ್ಯ= ಈ ಭಗವಂತನ; ಅನುಶಯನಂ= ಜೀವಶಕ್ತಿಗಳನ್ನು ನಿದ್ರೆಗೊಳಿಸಿ ತಾನು ಯೋಗ ನಿದ್ರಾಸಕ್ತನಾಗುವುದು; ನಿರೋಧಃ= 'ನಿರೋಧಃ' ಅಥವ ಲಯ ಎನಿಸಿಕೊಳ್ಳುತ್ತದೆ. ಅನ್ಯಥಾರೂಪಂ= ಜಡತತ್ವಗಳಿಂದ ಜನ್ಮ ಜನ್ಮಾಂತರಗಳಲ್ಲಿ ಬಂದ ರೂಪಗಳನ್ನು; ಹಿತ್ವಾ= ಕಳೆದು ಕೊಂಡು; ಸ್ವರೂಪೇಣ ವ್ಯವಸ್ಥಿತಿಃ= ಸ್ವರೂಪಭೂತವಾದ ಚಿದಾನಂದರೂಪವಾಗಿ ಉಳಿದು ಸುಖಿಸುವುದು; ಮುಕ್ತಿಃ= ಮುಕ್ತಿ ಎನಿಸಿಕೊಳ್ಳುತ್ತದೆ.

ಭಗವಂತನಿಗೆ ನಿದ್ರೆಯ ಆವಶ್ಯಕತೆ ಇಲ್ಲ. ಲಯಕಾಲದಲ್ಲಿ ಅವನ ಯೋಗನಿದ್ರೆಯೆಂಬುದು ಜೀವರಿಗೆ ನಿದ್ರಾವಸ್ಥೆಯನ್ನುಂಟುಮಾಡುವುದಕ್ಕಾಗಿ. ಮುಕ್ತಿಯೆಂಬುದು ಜೀವರನ್ನು ಕುರಿತು ಹೇಳಿರುವುದೇ ಹೊರತು ಬ್ರಹ್ಮನನ್ನು ಕುರಿತದ್ದಲ್ಲ. ಅವನು ಅನಾದ್ಯನಂತ ಕಾಲಗಳಲ್ಲಿ ಸೃಷ್ಟಿಸ್ಥಿತಿ ಲಯಗಳನ್ನು ಜೀವರಿಗಾಗಿ ಮಾಡುತ್ತಲೇ ಇರುವ ನಿತ್ಯಮುಕ್ತ. ಜೀವರಿಗೆ ಅನ್ಯಥಾರೂಪವೆಂಬುದರ ಘಟನೆಯು ಅನಾದಿ ಜಡಲಿಂಗಶರೀರದ ನಿಮಿತ್ತವಾಗಿಯಾದುದರಿಂದ, ಲಿಂಗ ಭಂಗವೆಂಬುದು ಇಲ್ಲಿ ಮುಖ್ಯವಾದ ವಿಷಯ.

**ಆಭಾಸಶ್ಚ ನಿರೋಧಶ್ಚ ಯತಸ್ತತ್ತ್ರಯಮೀಯತೇ ।**
**ಸ ಆಶ್ರಯಃ ಪರಂ ಬ್ರಹ್ಮ ಪರಮಾತ್ಮೇತಿ ಶಬ್ದ್ಯತೇ ॥ ೭ ॥**

ಆಭಾಸಃ ಚ= ಜಗದ್ರೂಪವಾಗಿ ಪ್ರಕೃತಿಯು ರೂಪಾಂತರ ಹೊಂದಿಕಂಡು ಬರುವುದೂ; ನಿರೋಧಃ ಚ= ಅದರಲಯ ಕಾರ್ಯವೂ; ಯತಃ= ಯಾರಿಂದ ಎಂಬುದಾಗಿ; ತ್ರಯಃ= ಸೃಷ್ಟಿಸ್ಥಿತಿ ಲಯವೆಂಬ ಮೂರು ಬಗೆಯ ಕಾರ್ಯವು;

ಮೀಯತೇ = ವೇದಾದಿ ಶಾಸ್ತ್ರಗಳಿಂದ ತಿಳಿಯಲ್ಪಡುವುದೋ; ಸಃ = ಅವನು; ಆಶ್ರಯಃ = ಜಡಜೀವ ಪ್ರಪಂಚಕ್ಕೆ ಆಶ್ರಯನಾದವನು; ಪರಂಬ್ರಹ್ಮ = ಅವನು ಪರಬ್ರಹ್ಮ (ಚತುರ್ಮುಖನಿಂದ ಬೇರೆಯಾದವನು); ಪರಮಾತ್ಮಾ ಇತಿ ಶಬ್ದ್ಯತೇ = ಅವನಿಗೆ ಪರಮಾತ್ಮಾ ಎಂದು ಹೆಸರು.

ಜಗತ್ತು ಜಗತ್ತಾಗಿ ಕಂಡುಬರುವುದಕ್ಕೆ ಭಗವಂತನ ಅಂತಃ ಪ್ರವಿಷ್ಟರೂಪವು ಬಲಪ್ರದವೆನ್ನಬೇಕೇ ಹೊರತು; ಅವನೇ ಜಗತ್ತಿನಂತೆ ಕಾಣುವನೆಂದು ಹೇಳಬಾರದು. ಇದು ಆಶ್ರಯ ಆಶ್ರಯಿಭಾವವೇ ಹೊರತು, ಅದ್ವೈತದ ಭಾವವೂ ಅಲ್ಲ, ಅಂಶಿ ಅಂಶಭಾವವೂ ಅಲ್ಲ. ಶ್ರೀಮನ್ಮಧ್ವಾಚಾರ್ಯರ ತತ್ವಾವಾದ ಇಲ್ಲಿ ಸ್ಪಷ್ಟವಾಗಿದೆ.

**ಆಧ್ಯಾತ್ಮಿಕೋಽಯಂ ಪುರುಷಃ ಸೋಽಸಾವೇವಾಧಿದೈವಿಕಃ ।**
**ಯಸ್ತತ್ರೋಭಯ ವಿಚ್ಛೇದಃ ಸಸ್ಮೃತೋಽಹ್ಯಾಧಿಭೌತಿಕಃ** ॥ ೮ ॥

ಅಯಂಪುರುಷಃ = ಸೃಷ್ಟ್ಯಾದಿಗಳನ್ನು ನಡೆಸುವ ಈ ಮಹಾನುಭಾವನೇ; ಅಧ್ಯಾತ್ಮಿಕಃ = ಸರ್ವಪ್ರೇರಕನೂ, ಮನೋನಿಯಮಕನೂ ಆದ ಆತ್ಮಸ್ವರೂಪ ಉಳ್ಳವನು; ಸಃ ಅಸೌ ಏವ = ಈ ಸ್ವತಂತ್ರ ಪುರುಷನೇ; ಅಧಿದೈವಿಕಃ = ಇಂದ್ರಿಯಾಭಿಮಾನಿ ದೇವತೆಗಳಲ್ಲಿದ್ದು ಪ್ರೇರಿಸುವವನು; ಯತಃ = ಯಾವಕಾರಣದಿಂದ; ತತ್ರ ಉಭಯ ವಿಚ್ಛೇದಃ = ಜೀವರಲ್ಲಿ ಜೀವರಂತೆಯೂ, ಜಡವಸ್ತುಗಳಲ್ಲಿ ಆಯಾವಸ್ತುಗಳಂತೆಯೂ ಇದ್ದು ಜಡಗಳು ಜೀವರಿಂದ ಭಿನ್ನವಾದವುಗಳೆಂರು ಸ್ಪಷ್ಟವಾಗಿ ತಿಳಿಸಿಕೊಡುವನೋ, ಆ ಕಾರಣದಿಂದ; ಹಿ = ನಿಜವಾಗಿ; ಸಃ = ಅವನು; ಅಧಿಭೌತಿಕಃ = ಅಧಿಭೂತನೆಂದು; ಸ್ಮೃತಃ = ತಿಳಿಯಲ್ಪಡುತ್ತಾನೆ.

ಭಗವಂತನು ತಾನು ತಾನೇ ಆಗಿದ್ದು ಜೀವರ ಮನೋಧರ್ಮಗಳನ್ನು ನಡೆಸುವುದರಿಂದ ಅಧ್ಯಾತ್ಮನೆಂದೂ, ದೇವತೆಗಳಿಗೆ ಪ್ರೇರಕನಾಗಿರುವುದರಿಂದ ಅಧಿದೈವವೆಂದೂ, ಜಡಗಳ ಸ್ಥಿತಿಗತಿಗಳಿಗೆ ಕಾರಣನಾಗಿರುವುದರಿಂದ ಅಧಿಭೂತನೆಂದೂ ಕರೆಸಿಕೊಳ್ಳುತ್ತಾನೆ.

**ಏತದೇಕತಮಾಭಾವೇ ಯದಾನೋಪಲಭಾಮಹೇ ।**
**ತ್ರಿತಯಂ ತತ್ರಯೋವೇದ ಸ ಆತ್ಮಾಸ್ವಾಶ್ರಯಾಶ್ರಯಃ** ॥ ೯ ॥

ಏತತ್ ಏಕತಮ ಅಭಾವೇ = ಇವುಗಳಲ್ಲಿ ಯಾವ ಒಂದು ಇಲ್ಲದಿದ್ದರೂ; ಯದಾ ನ ಉಪಲಭಾಮಹೇ = ಯಾವ ಕಾರಣದಿಂದ ನಾವು ಏನನ್ನೂ ತಿಳಿಯಲಾರೆವೋ; ಆ ಕಾರಣದಿಂದ; ತತ್ರ = ಆಧಾತ್ಮಿಕ, ಅಧಿದೈವಿಕ, ಅಧಿಭೌತಿಕ ಎಂಬ ಮೂರರಲ್ಲಿ;

ತ್ರಿತಯಂ = ಆ ಮೂರನ್ನೂ; ಯಃ ವೇದ = ಯಾವಸ್ವತಂತ್ರ ಪುರುಷನು ತಿಳಿಯು ತಿಳಿಸುವನೋ; ಸಃ ಆತ್ಮಾ = ಆ ಪರಮಾತ್ಮನೇ; ಸ್ವಾಶ್ರಯ ಆಶ್ರಯಃ = ತನ್ನನ್ನು ಅವಲಂಬಿಸಿದ ಜಡಚೇತನಗಳಿಗೆ ಆಶ್ರಯನಾಗಿರುವವನು.

ಭಗವಂತನ ಸ್ವಾತಂತ್ರ್ಯವೂ, ಜಡಚೇತನಗಳ ಅಸ್ವಾತಂತ್ರ್ಯವೂ ಜೀವ–ಜಡ–ಈಶ್ವರ ಭೇದಗಳನ್ನು ಪ್ರತಿ ಪಾದಿಸುವುದಾಗಿವೆ.

**ಪುರುಷೋಂಡಂ ವಿನಿರ್ಭಿದ್ಯ ಯದಾಸೌಸವಿನಿರ್ಗತಃ ।**
**ಆತ್ಮನೋಯನಮನ್ವಿಚ್ಛನ್ನಪೋಸ್ರಾಕ್ಷೀಚ್ಛುಚಿಃ ಶುಚೀ ॥ ೧೦ ॥**

ಯದಾ = ಯಾವಾಗ; ಸಃ ಅಸೌಪುರುಷಃ = ಬಹಿರಾವಣಗಳನ್ನು ಸೃಷ್ಟಿಸಿದ ವಿಷ್ಣುವು; ಅಂಡಂ = ಬ್ರಹ್ಮಾಂಡವನ್ನು; ವಿನಿರ್ಭಿದ್ಯ = ವಿಭಾಗಮಾಡಿ; ವಿನಿರ್ಗತಃ = ತನ್ನ ವಿರಾಡ್ರೂಪವನ್ನು ಪ್ರಕಾಶಗೊಳಿಸಿದನೋ ಆಗ; ಆತ್ಮನಃ ಅಯನಂ = ತನಗೆಯೋಗ್ಯವಾದ ಆಶ್ರಯಸ್ಥಾನವನ್ನು; ಅನ್ವಿಚ್ಛನ್ = ಅಪೇಕ್ಷಿಸಿ; ಶುಚಿಃ = ನಿರ್ಮಲಾತ್ಮನಾದ ಆ ಪ್ರಭುವು; ಶುಚೀಃ = ತನ್ನ ಪೂಜೆಗೆಯೋಗ್ಯವಾದ ಪರಿಶುದ್ಧವಾದ ನೀರನ್ನು; ಅಸ್ರಾಕ್ಷೀತ್ = ಉಂಟುಮಾಡಿದನು.

ಬಹಿರಾವಣಗಳನ್ನು ಚತುರ್ಮುಖನ ಐವತ್ತು ವರ್ಷಗಳಕಾಲ ಸೃಷ್ಟಿಮಾಡಿದ ಶ್ರೀಹರಿಯು ಸೃಷ್ಟಿಯಲ್ಲಿ ಬರಬೇಕಾದ ಸಾಮಗ್ರಿಗಳನ್ನೂ ಜೀವನನ್ನೂ ತನ್ನು ದರದಲ್ಲಿಟ್ಟುಕೊಂಡು, ದೀಪದಿಂದ ದೀಪವು ಬರುವಂತೆ ರೂಪಾಂತರದಿಂದ ಬ್ರಹ್ಮಾಂಡದೊಳಗೆ ಪ್ರವೇಶ ಮಾಡಿ, ಅದರಲ್ಲಿ ತನ್ನ ವಾಸಯೋಗ್ಯವಾದ ಉದಕವನ್ನು ಸೃಷ್ಟಿಸಿ, ಅಲ್ಲಿ ಶೇಷಶಾಯಿಯಾಗಿ ಪವಡಿಸಿದನು. ಆಗ ಲಕ್ಷ್ಮೀದೇವಿಯವೇ ಶೇಷರೂಪವೆಂದು ತಿಳಿಯಬೇಕು.

**ತಾಸ್ವವಾತ್ಸೀತ್ಸ್ವಸೃಷ್ಟಾಸು ಸಹಸ್ರಪರಿವತ್ಸರಾನ್ ।**
**ತೇನ ನಾರಾಯಣೋ ನಾಮ ಯದಾಪಃ ಪುರುಷೋದ್ಭವಾಃ ॥ ೧೧ ॥**

ಸ್ವಸೃಷ್ಟಾಸು ತಾಸು = ತಾನು ಸೃಷ್ಟಿಮಾಡಿದ ಆನೀರಿನಲ್ಲಿ; ಸಹಸ್ರ ಪರಿವತ್ಸರಾನ್ = ದೇವಮಾನದ ಸಾವಿರ ವರ್ಷಗಳಕಾಲ; ಅವಾತ್ಸೀತ್ = ಇದ್ದನು; ಯತ್ = ಯಾವ ಕಾರಣದಿಂದ; ಆಪಃ = ನೀರು; ಪುರುಷೋದ್ಭವಾಃ = ಆ ವಿರಾಟ್ಪುರುಷನಿಗಾಗಿ ನಿರ್ಮಾಣವಾಯಿತೋ; ತೇನ = ಆಕಾರಣದಿಂದ; ನಾರಾಯಣಃ ನಾಮ = ಅವನಿಗೆ ನಾರಾಯಣನೆಂಬ ಹೆಸರು ಬಂದಿದೆ.

ಸಂಸ್ಕೃತದಲ್ಲಿ ನೀರು ಎಂಬುದಕ್ಕೆ ಬಹುವಚನ ಪದ ಪ್ರಯೊಗಿಸಲ್ಪಡುತ್ತದೆ. ಕನ್ನಡದಲ್ಲಿ 'ನೀರು' ಎಂದು ಹೇಳಿದೆ. ದೋಷರಹಿತ ಅಥವ ನಾಶರಹಿತವಾದುದು 'ನಾರ'; ಅದರಲ್ಲಿ ಶಯನಿಸಿರುವವನು ನಾರಾಯಣ; ನೀರಿನಲ್ಲಿದ್ದು ವ್ಯಾಪಾರಗಳನ್ನು ನಡೆಸುವವನು.

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।**
**ಯದನುಗ್ರಹತಃ ಸಂತಿ ನಸಂತಿ ಯದುಪೇಕ್ಷಯಾ ॥ ೧೨ ॥**

ದ್ರವ್ಯಂ = ಪೃಥ್ವೀ ಮೊದಲಾದ ಜಡತತ್ತ್ವಗಳು; ಚ = ಮತ್ತು; ಕರ್ಮ = ಕರ್ಮಗಳು; ಚ = ಮತ್ತು; ಕಾಲಃ = ಕಾಲವು; ಸ್ವಭಾವಃ = ವಸ್ತುಗಳ ಮತ್ತು ಜೀವರ ಸ್ವಭಾವಗಳು; ಚ = ಮತ್ತು; ಜೀವಃ ಏವ = ಜೀವರೂ ಕೂಡ; ಯತ್ ಅನುಗ್ರಹತಃ = ಆ ಪರಮ ಪುರುಷನ ಅನುಗ್ರಹದಿಂದಲೇ; ಸಂತಿ = ಅಸ್ತಿತ್ವವನ್ನು ಹೊಂದಿವೆ; ಯತ್ ಉಪೇಕ್ಷಯಾ = ಯಾವ ಅವನ ನಿರ್ಲಕ್ಷ್ಯದಿಂದ; ನ ಸಂತಿ = ಅಸ್ತಿತ್ವವನ್ನು ಕಳೆದುಕೊಳ್ಳುತ್ತವೆ.

ಜಡವಸ್ತುಗಳೂ (ದ್ರವ್ಯ, ಕರ್ಮ, ಕಾಲಗಳು) ನಿತ್ಯಗಳೇ ಆದರೂ ಸ್ವತಂತ್ರವಾಗಿ ಅಸ್ತಿತ್ವವನ್ನು ಹೊಂದಿರುವುದಿಲ್ಲ; ಅನಾದ್ಯನಂತಕಾಲಗಳಲ್ಲಿ ಭಗವಂತನನ್ನು ಆಶ್ರಯಿಸಿಕೊಂಡೇ ಇರುತ್ತವೆ ಎಂಬುದು ಇದರ ಅಭಿಪ್ರಾಯ 'ಭಗವಂತ, ತನ್ನ ಸ್ವಾಮ್ಯವನ್ನು ಹಿಂದಕ್ಕೆ ತೆಗೆದು ಕೊಳ್ಳಲಿ; ವಸ್ತುಗಳು ಇಲ್ಲವಾಗುತ್ತವೆಯೇ, ನೋಡೋಣ' ಎಂಬುದು ಹುಚ್ಚು ಪ್ರಶ್ನೆ. ಆದರೆ ಆ ಸ್ವಾಮಿಯ ಅನುಗ್ರಹ ಮರೆಯಾದಾಗ ಅವು ಇದ್ದರೂ ಸತ್ತ ಪ್ರಾಯವೇಸರಿ, ಪಾರ್ಶ್ವವಾಯು ಹೊಡೆದ ಕೈಯಂತೆ !

**ಏಕೋನಾನಾತ್ವಮನ್ವಿಚ್ಛನ್ ಯೋಗ ತಲ್ಪಾತ್ಸಮುತ್ಥಿತಃ ।**
**ವೀರ್ಯಂ ಹಿರಣ್ಮಯೋದೇವೋಮಾಯಯಾವ್ಯಸೃಜತ್ತ್ರಿಧಾ ॥ ೧೩ ॥**

ಏಕಃ = ಅದ್ವಯನಾದ ನಾರಾಯಣನು; ನಾನಾತ್ವಂ ಅನ್ವಿಚ್ಛನ್ = ನಾನಾಬಗೆಯ ವಸ್ತುಗಳನ್ನು ಸೃಷ್ಟಿಸಲು ಅವುಗಳಂತೆ ನಾನಾರೂಪಗಳನ್ನು ಪ್ರಕಟಿಸಲು ಇಚ್ಛಿಸಿದವನಾಗಿ; ಯೋಗತಲ್ಪಾತ್ = ಶೇಷತಲ್ಪದಲ್ಲಿ ಯೋಗನಿದ್ರೆಯಿಂದ; ಸಮುತ್ಥಿತಃ = ಎಚ್ಚರಗೊಂಡವನಂತೆ ಕಾಣಿಸಿಕೊಂಡು; ಹಿರಣ್ಮಯಃ ದೇವಃ = ಆನಂದ ಸ್ವರೂಪನಾದ ಆ ಸ್ವಾಮಿಯು; ಮಾಯಯಾ = ತನ್ನ ಸಾಮರ್ಥ್ಯದಿಂದ; ವೀರ್ಯಂ = ಬ್ರಹ್ಮನ ಸೃಷ್ಟಿಗೆ

ಕಾರಣವಾದ ತನ್ನ ವೀರ್ಯವನ್ನು; ತ್ರಿಧಾ = ಮೂರುಬಗೆಯಾಗಿ; ವ್ಯಸೃಜತ್ = ಹೊರಗೆಡಹಿದನು.

ಬ್ರಹ್ಮ, ಬ್ರಹ್ಮನಸಮಾಯಾ, ಬ್ರಹ್ಮನ ವೀರ್ಯ ಇವು ಬೇರೆ ಬೇರೆಯಲ್ಲ. ಜಡಸೃಷ್ಟಿಯಲ್ಲಿ ಬಂದ ಜೀವರ ವಿಷಯದಲ್ಲಿ ಇಂತಹ ಪ್ರತ್ಯೇಕ ಭಾವನೆಗಳು ಕೂಡುವುವೇ ಹೊರತು ಬ್ರಹ್ಮನ ವಿಷಯದಲ್ಲಲ್ಲ. ಅವನು ಏಕರೂಪನಾದರೂ, ಅದನ್ನು ನಾನಾಬಗೆಯಾಗಿ ಪ್ರಕಟಿಸುವ, ಅಂದರೆ, ತಾನು ನಾನಾರೂಪಗಳಲ್ಲಿ ಕಾಣಿಸಿಕೊಳ್ಳುವ ಮಹಿಮೆಯುಳ್ಳವನು, ಅವನು ಈ ಮಹಿಮೆಯ ಸ್ವರೂಪವನ್ನೇ 'ವಿಶೇಷ' ಎಂದು ಶ್ರೀ ಮಧ್ವಾಚಾರ್ಯರು ತಿಳಿಸಿರುವರು. ರೂಪರೂಪಾಂತರಗಳು ಎಲ್ಲವೂ ಪರಿಪೂರ್ಣಗಳೇ ಆಗಿದ್ದರೂ; ದ್ರವ್ಯ, ಕಾಲ, ಕರ್ಮ, ಸ್ವಭಾವ, ಜೀವಗಳ ಅಧಿಷ್ಠಾನಗಳ ನಿಮಿತ್ತದಿಂದ ಪರಿಪೂರ್ಣತೆಯು ನಿಗೂಢವಾಗಿದ್ದು ಮಿತಿಗಳಿಗೆ ಒಳಪಟ್ಟಂತೆ ಭಾಸವಾಗುವುದು.

**ಅಧಿದೈವ ಮಥಾಧ್ಯಾತ್ಮಮಧಿಭೂತಮಿತಿ ಪ್ರಭುಃ ।**
**ಪುನಸ್ತತ್ಪೌರುಷಂ ವೀರ್ಯಂ ತ್ರಿಧಾಭಿದ್ಯತ ತಚ್ಛೃಣು ॥ ೧೪ ॥**

ಅಥ = ಅನಂತರ; ಅಧಿದೈವಂ ಇತಿ = ಅಧಿದೈವವೆಂದೂ, ಅಧ್ಯಾತ್ಮಂ ಇತಿ = ಅಧ್ಯಾತ್ಮವೆಂದೂ; ಅಧಿಭೂತಂ ಇತಿ = ಅಧಿಭೂತವೆಂದೂ; ಪ್ರಭುಃ = ಸಮರ್ಥನಾದ ಶ್ರೀಮನ್ನಾರಾಯಣನು; ತತ್ ಪೌರುಷಂ ವೀರ್ಯಂ = ಬ್ರಹ್ಮನ ಸೃಷ್ಟಿಗೆ ಸಹಕಾರಿಯಾದ ತನ್ನ ಆ ವೀರ್ಯರೂಪವನ್ನು; ಪುನಃ = ಮತ್ತೆ; ತ್ರಿಧಾ = ಮೂರು ಬಗೆಯಾಗಿ; ಭಿದ್ಯತ = ವಿಭಾಗಮಾಡಿದನು. ತತ್‌ಶ್ರುಣು = ಅದರ ವಿವರವನ್ನು ಹೇಳುತ್ತೇನೆ, ಕೇಳು. ಇದು ಶುಕಾಚಾರ್ಯರ ಮಾತು.

ಭಗವಂತ ತನ್ನ ವೀರ್ಯರೂಪದಲ್ಲಿ ಮೂರು ಬಗೆಯಾದಂತೆ ತೋರಿಕೊಂಡು, ಅದರ ಪರಿಣಾಮವು ಬ್ರಹ್ಮನಲ್ಲಿಯೂ ಬ್ರಹ್ಮನ ಮಹತ್ತತ್ವಾತ್ಮಕ ಶರೀರದಲ್ಲಿಯೂ ಕಂಡುಬರುವಂತೆಯೂ ಮಾಡಿದನೆಂಬುದು ಅಭಿಪ್ರಾಯ ಇದನ್ನೇ ಬಿಂಬಕಾರ್ಯ ಎನ್ನುವುದು. ಜಗತ್ತಿನಲ್ಲಿಯೂ ಜೀವರಲ್ಲಿಯೂ ಅದರವರ ಯೋಗ್ಯತೆಗಳಿಗನು ಸಾರವಾಗಿ ಪ್ರತಿ ಫಲಿಸುವುದು ಪ್ರತಿಬಿಂಬ.

**ಅಂತಃ ಶರೀರ ಆಕಾಶೇ ಪುರುಷಸ್ಯ ವಿಚೇಷ್ಟತಃ ।**
**ಓಜಃ ಸಹೋ ಬಲಂ ಜಜ್ಞೇ ತತಃ ಪ್ರಾಣೋ**
**ಮಹಾನಭೂತ್ ॥ ೧೫ ॥**

ಅಂತಃ ಶರೀರ ಆಕಾಶೇ = ಬ್ರಹ್ಮನ ಮಹತ್ತತ್ವ ಶರೀರದ ಆಕಾಶದಲ್ಲಿ; ವಿಚೇಷ್ಟತಃ = ವ್ಯಾಪಾರ ಮಾಡಿದ; ಪುರುಷಸ್ಯ = ಪರಬ್ರಹ್ಮನಾದ ಶ್ರೀಹರಿಯ; ಓಜಃ =

ಪರಾಕ್ರಮ; ಸಹಃ = ಸಹನಶಕ್ತಿ; ಮತ್ತು; ಬಲಂ = ಕ್ರಿಯಾಸಾಮರ್ಥ್ಯವು ; ಜಜ್ಞೇ = ಪ್ರಕಟವಾಯಿತು; ತತಃ = ಆ ಓಜಸ್ಸು ಸಹನ ಬಲಗಳಿಂದ; ಮಹಾನ್ ಪ್ರಾಣಃ = ಸರ್ವೇಂದ್ರಿಯ ನಿಯಾಮಕರಾದ ಮುಖ್ಯಪ್ರಾಣರು; ಅಭೂತ್= ಜನಿಸಿದರು.

ಸೃಷ್ಟಿಕಾರ್ಯದಲ್ಲಿ ಭಗವದಧೀನರಾಗಿ ಮುಖ್ಯವಾಗಿ ಭಾಗವಹಿಸುವವರು ಬ್ರಹ್ಮದೇವರು ಮತ್ತು ಮುಖ್ಯಪ್ರಾಣರು. ಮಹತ್ತತ್ತ್ವದ ಕಿಂಚಿತ್ ರೂಪಾಂತರವು ಮುಖ್ಯಪ್ರಾಣರ ವಿಜ್ಞಾನತತ್ತ್ವಶರೀರ.

**ಅನುಪ್ರಾಣಂತಿ ಯಂ ಪ್ರಾಣಾಃ ಪ್ರಾಣಂತಂ ಸರ್ವಜಂತುಷು ।**
**ಅಪಾನಂತಮಪಾನಂತಿ ನರದೇವಮಿವಾನುಗಾಃ ॥ ೧೬ ॥**

ಸರ್ವಜಂತುಷು = ಬದುಕಿರುವ ಸರ್ವಪ್ರಾಣಿಗಳಲ್ಲಿಯೂ; ಯಂತಂ, ಪ್ರಾಣಂ = ಯಾರು ಪ್ರಮುಖರಾಗಿರುವರೋ ಆ ಮುಖ್ಯ ಪ್ರಾಣರನ್ನು; ಪ್ರಾಣಾಃ = ಇತರ ಪ್ರಾಣಶಕ್ತಿಗಳು; ಅನುಪ್ರಾಣಂತಿ = ಅನುಸರಿಸಿ ಉಚ್ಛ್ವಾಸದಿಂದ ಜೀವನಪ್ರದಗಳಾಗುತ್ತವೆ; ಅನುಗಾಃ = ಸೇವಕರು; ನರದೇವಂ ಇವ = ತಮ್ಮ ಪ್ರಭುವಾದರಾಜನನ್ನು ಅನುಸರಿಸುವಂತೆ; ತಂ ಅಪಾನಂ = ಅಪಾನನಾಮಕರಾದ ಅವರನ್ನು ಅನುಸರಿಸಿ; ಅಪಾನಂತಿ = ನಿಚ್ಛ್ವಾಸರೂಪದಲ್ಲಿ ಹೊರಬರುತ್ತವೆ.

'ಇಡಾ' ನಾಡಿಗೆ ಯಜಮಾನರಾಗಿದ್ದು ಉಚ್ಛ್ವಾಸ ಕಾರ್ಯವನ್ನೂ 'ಪಿಂಗಳಾ'ನಾಡಿಗೆ ಯಜಮಾನಿಯರಾದ ಭಾರತೀದೇವಿಯರಲ್ಲಿದ್ದು ನಿಶ್ವಾಸ ಕಾರ್ಯವನ್ನೂ ನಡೆಸುವವರು ಮುಖ್ಯ ಪ್ರಾಣದೇವರೇ ಆಗಿದ್ದಾರೆ.

**ಪ್ರಾಣೇನ ಕ್ಷಿಪತಾ ಕ್ಷುತ್ತೃಡಂತರಾ ಜಾಯತೇ ವಿಭೋಃ ।**
**ಪಿಪಾಸತೋ ಜಕ್ಷತಶ್ಚ ಪ್ರಾಙ್ಮುಖಂ ನಿರಭಿದ್ಯತ ॥ ೧೭ ॥**

ಕ್ಷಿಪತಾ = ಬಾಧಿಸುವ; ಪ್ರಾಣೇನ = ಶ್ವಾಸೋಚ್ಛ್ವಾಸರೂಪವಾದ ಪ್ರಾಣವ್ಯಾಪಾರದಿಂದ; ಅಂತರಾ ಕ್ಷುತ್ ತೃಟ್ = ಆಂತರಿಕವಾಗಿ ಹಸಿವು ಬಾಯಾರಿಕೆಗಳ ಸೂಚನೆಯು; ಜಾಯತೇ = ಉಂಟಾಗುತ್ತದೆ; ಪಿಪಾಸತಃ = ಪಾನಾಪೇಕ್ಷೆಯುಳ್ಳ; ಚ = ಮತ್ತು; ಜಕ್ಷತಃ = ಭೋಜನಾಪೇಕ್ಷೆಯುಳ್ಳ; ವಿಭೋಃ = ಮುಖ್ಯಪ್ರಾಣರ ದೆಸೆಯಿಂದ; ಪ್ರಾಕ್ = ಮೊದಲು; ಮುಖಂ = ಬಾಯಿ ಎಂಬ ಅವಯವವು; ನಿರಭಿದ್ಯತ = ಕಾಣಿಸಿಕೊಂಡಿತು.

ಪರಮಾತ್ಮನ ಸೃಷ್ಟಿಕಾರ್ಯದಲ್ಲಿ ಮುಖ್ಯ ಅಂಗಭೂತರಾದ ಪ್ರಾಣದೇವರ ವ್ಯಾಪಾರದಿಂದ ಪುರುಷಾಕಾರದ ಸೃಷ್ಟಿಹೇಗಾಯಿತೆಂಬುದನ್ನು ತಿಳಿಸುತ್ತಾರೆ. ಮಹತ್ತತ್ತ್ವ ಶರೀರ ಧಾರಣಮಾಡಿದ ಚತುರ್ಮುಖ ಬ್ರಹ್ಮದೇವರು ತಮ್ಮೊಳಗಿನ ವಿರಾಡ್ರೂಪಿಯ ಸಂಕಲ್ಪದಿಂದ ತಾವೂ ವಿರಾಡ್ರೂಪವನ್ನು ತಾಳಿದರು. ಮಹತ್ತತ್ತ್ವಕ್ಕೆ ಅತ್ಯಲ್ಪವಾಗಿ ರಜೋಗುಣವನ್ನು ಕೂಡಿಸಿದುದರಿಂದ ಉಂಟಾದ ವಿಜ್ಞಾನ ತತ್ತ್ವ ಶರೀರಧಾರಣ ಮಾಡಿದ ಮುಖ್ಯಪ್ರಾಣದೇವರು ಶ್ವಾಸೋಚ್ಛ್ವಾಸರೂಪ ಪ್ರಾಣಕ್ರಿಯೆಗೆ ಯಜಮಾನರಾಗಿ ಬ್ರಹ್ಮದೇವರೊಡಗೂಡಿ ಸೃಷ್ಟಿಕಾರ್ಯದಲ್ಲಿ ತೊಡಗಿದರು. ಇಡಾ, ಪಿಂಗಳಾನಾಡಿಗಳ ಉತ್ಪತ್ತಿಗೆ ಕಾರಣಗಳಾದ ತತ್ತ್ವವಿಶೇಷಗಳಲ್ಲಿ ಪ್ರವಿಷ್ಟರಾದ ಪ್ರಾಣದೇವರು ಹಸಿವು ನೀರಡಿಕೆಗಳ ಸೂಚನೆಯನ್ನು ಮುಂದಿಟ್ಟು ಅವುಗಳಪೂರೈಕೆಗೆ ಆವಶ್ಯಕವಾದ ವದನವನ್ನು ಮೊದಲು ಸೃಷ್ಟಿಮಾಡಿದರು. ಸೃಷ್ಟಿಯ ವಿಚಾರವನ್ನು ತಿಳಿಯುವಾಗ ತನ್ನ ಸಂಕಲ್ಪಶಕ್ತಿಯಿಂದಲೇ ಎಲ್ಲವನ್ನೂ ಸೃಷ್ಟಿಸುವ ಪುರುಷೋತ್ತಮನು ಬ್ರಹ್ಮವಾಯುಗಳ ಮುಖಾಂತರ ಸೃಷ್ಟಿಕಾರ್ಯವನ್ನು ನಡೆಸುವನೆಂಬುದನ್ನು ಮರೆಯಬಾರದು.

ಆಧುನಿಕರ ವಿಕಾಸವಾದಕ್ಕೆ ಬೇಕಾದ ಆಧಾರ ಇಲ್ಲಿದೆ. ವಸ್ತುಗಳಿಂದ ಆಕೃತಿಗಳೂ, ಕ್ರಿಯೆಗಳೂ ನಡೆಯುವುದು ನಿಜ. ಆದರೆ ಜಡಗಳಿಗೆ ಸ್ವತಃ ಪ್ರವೃತ್ತಿ ಇಲ್ಲ. ಅವುಗಳನ್ನು ನಡೆಸುವ ದೈವೀಶಕ್ತಿಗಳನ್ನೂ, ಆ ದೈವೀಶಕ್ತಿಗಳಿಗೆ ಪ್ರೇರಕವಾಗಿ ಪರಮಾತ್ಮನ ಇಚ್ಛಾಶಕ್ತಿಯನ್ನೂ ಅರಿಯದಿರುವುದು ಆಧುನಿಕ ವಿಜ್ಞಾನಿಗಳ ಮೌಢ್ಯ. ಅಧಿಭೌತಿಕದಲ್ಲಿ ಅಧ್ಯಾತ್ಮ ಅಧಿದೈವಗಳನ್ನು ತಿಳಿದು ಚಿಂತಿಸುವುದು ನಿಜವಾದ ವಿಜ್ಞಾನ. ಮುಖದ ಸೃಷ್ಟಿಮೊದಲಾದುವನ್ನು ಇಲ್ಲಿ ಹೇಳಹೊರಟಿರುವುದು ಆಧುನಿಕರ ವಿಕಾಸವಾದದಂತೆಯೇ ಇದೆ; ಆದರೆ, ಇಲ್ಲಿರುವುದು ನಿಜವಾದ ವಿಜ್ಞಾನ. ಇದು ಭಗವದ್ಭಕ್ತಿಗೆ ಸಾಧಕವಾದುದು.

**ಮುಖತಸ್ತಾಲು ನಿರ್ಭಿನ್ನಂ ಜಿಹ್ವಾತತ್ರೋಪಜಾಯತೇ ।**
**ತತೋನಾನಾರಸೋ ಜಜ್ಞೇಜಿಹ್ವಯಾ ಯೋಧಿಗಮ್ಯತೇ ॥ ೧೮ ॥**

ಮುಖತಃ = ಮೊದಲು ಸೃಷ್ಟವಾದ ಬಾಯಿಯ ವಿವರದಿಂದ; ತಾಲುಃ = ಬಾಯಿಯ ಒಳಗಿನ ಮೇಲ್ಭಾಗ ತಳಭಾಗಗಳ ಅಂಗಳು; ನಿರ್ಭಿನ್ನಂ = ಮೂಡಿತು; ತತ್ರ = ಆ ಪ್ರದೇಶದಲ್ಲಿ; ಜಿಹ್ವಾ = ನಾಲಗೆಯು; ಉಪಜಾಯತೇ = ಉಂಟಾಗುತ್ತದೆ. (ಉಂಟಾಯಿತು); ತತಃ = ಅನಂತರ; ಜಿಹ್ವಯಾ = ನಾಲಗೆಯಿಂದ; ಯಃ ಅಧಿಗಮ್ಯತೇ = ಯಾವುದು ಗ್ರಹಿಸಲ್ಪಡುವುದೋ ಅಂತಹ; ನಾನಾರಸಃ = ನಾನಾಬಗೆಯ ರಸಗ್ರಾಹೀ ನರಶಕ್ತಿ ಸಮೂಹವು; ಜಜ್ಞೇ = ಹುಟ್ಟಿತು.

ಅನ್ನಪಾನಗಳಿಂದ ದೇಹದ ಕ್ರಿಯೆಗಳೂ, ಅವುಗಳ ಪರಿಣಾಮವಾದ ಜ್ಞಾನವೂ ಉಂಟಾಗುವುದು. ಅನ್ನಪಾನ ಸ್ವೀಕಾರಕ್ಕಾಗಿ ಬಾಯಿ; ಬಾಯಿಯಲ್ಲಿ ಸ್ಥಳಾವಕಾಶಕ್ಕಾಗಿ ಅಂಗಳು; ಆಹಾರವನ್ನು ಸ್ವೀಕರಿಸಿ ನುಂಗುವುದಕ್ಕೂ ರಸಗಳನ್ನು ಗ್ರಹಿಸುವುದಕ್ಕೂ ಬೇಕಾದುದು ನಾಲಗೆ. ನಾಲಗೆಯಲ್ಲಿ ರಸಗ್ರಂಥಿಗಳು. ಇಲ್ಲಿಯೂ ಆಧುನಿಕರ ವಿಕಾಸವಾದದ ಮೂಲಾಧಾರವಿರುವುದನ್ನು ಗಮನಿಸಬೇಕು 'ಅಮೀಬಾ' ಎಂಬ ಒಂದು ಅಣುಜೀವಿಗೆ ಅವಯವಗಳು ಕಂಡುಬರುವುದಿಲ್ಲ ಆದರೆ, ಆದರಲ್ಲಿ ರಂಧ್ರುವು ಮೂಡಿ, ನೀರೊಳಗಿನ ಆಹಾರ ಗ್ರಹಣ ಮಾಡಿದ ನಂತರ ಅದು ಮುಚ್ಚಿಕೊಳ್ಳುವುದು. ಅದಕ್ಕಿಂತಲೂ ಉತ್ತಮರೀತಿಯಲ್ಲಿ ಬೆಳೆದ ಜಲಚರಪ್ರಾಣಿಗಳಲ್ಲಿ ಕ್ರಮಕ್ರಮವಾಗಿ ಬಾಯೊಳಗೆ ನಾಲಗೆ, ಅನಂತರ ಗಂಟಲು, ಹೊಟ್ಟೆ ಮೊದಲಾದವು ಕ್ರಮಕ್ರಮವಾಗಿ ಕಾಣಿಸಿಕೊಳ್ಳುವುವು. ಇವುಗಳ ಬೆಳವಣಿಗೆಯು ಮಾತ್ರ ತಾನಾಗಿಯೇ ಆಗುವ ಕುರುಡು ವಿಕಾಸವಿಲ್ಲ. ಅದು ಜ್ಞಾನಸ್ವರೂಪರಾದ ದೇವತೆಗಳ ಕಾರ್ಯ. ಆ ದೇವತೆಗಳಿಗೆಲ್ಲಾ ಯಜಮಾನರು ಮುಖ್ಯಪ್ರಾಣದೇವರು. ಚತುರ್ಮುಖ ಬ್ರಹ್ಮದೇವರ ಪುರುಷಾಕಾರವು ಸೃಷ್ಟಿಯಾಗುವ ಕ್ರಮವು ಈ ಶ್ಲೋಕಗಳಲ್ಲಿ ಉಕ್ತವಾಗಿದೆ. ಆದರೆ ಅವರ ಶರೀರ ಪಾಂಚಭೌತಿಕವಾದುದಲ್ಲ; ಕೇವಲ ಮಹತ್ತತ್ತ್ವಾತ್ಮಕವಾದುದು. ಮುಂದೆ ಜೀವಿಗಳ ಶರೀರಗಳು ಕ್ರಮವಾಗಿ ಸೃಷ್ಟಿಯಾಗುವ ವಿಧಾನವೂ ಇಲ್ಲಿ ಸೂಚಿತವಾಗಿದೆ.

**ವಿವಕ್ಷೋರ್ಮುಖತೋ ಭೂಮ್ನೋವಹ್ನಿರ್ವಾಗ್ವ್ಯಾಹೃತಂ ತಯೋಃ ।**
**ಜಲೇಚೈತಸ್ಯ ಸುಚಿರಂ ನಿರೋಧಃ ಸಮಜಾಯತ ॥ ೧೯ ॥**

ಭೂಮ್ನಃ = ವಿಶಾಲವಾದ ಆಕಾಶವುಳ್ಳ; ವಿವಕ್ಷೋಃ = ಶಬ್ದೋಚ್ಚಾರ ಮಾಡಲನುವಾದ; ಮುಖತಃ = ಬಾಯಿಂದ; ವಹ್ನಿಃ = ವಾಕ್‌ಕ್ರಿಯೆಗೆ ಅನುಕೂಲವಾದ ಅಗ್ನಿಯು, ಹುಟ್ಟಿತು; ತಯೋಃ = ಅವೆರಡರಿಂದ; ವಾಕ್ = ಮಾತು; ವ್ಯಾಹೃತಂ = ಸ್ತೋತ್ರರೂಪವಾಗಿ ಉತ್ಪನ್ನವಾಯಿತು; ಏತಸ್ಯ = ಈ ಆಕಾಶದಲ್ಲಿ ಉತ್ಪನ್ನವಾದ ಶಬ್ದ ಕಂಪನಗಳು, ಬಾಯಲ್ಲಿಯೇ; ಸುಚಿರಂ = ಬಹುಕಾಲ; ಜಲೇ = ನೀರಿನಲ್ಲಡಗಿ; ನಿರೋಧಃ = ಒತ್ತಡವು; ಸಮಜಾಯತ = ಉಂಟಾಯಿತು.

ಓಂಕಾರವನ್ನು ದೀರ್ಘಕಾಲ ಉಚ್ಚರಿಸುವಾಗ 'ಮ'ಕಾರ ಕಂಪನದ ಒತ್ತಡವು ಹೊರಗೆ ಬರಲು ಮಾರ್ಗವು ಬೇಕಾದ ಆವಶ್ಯಕತೆ ಕಂಡಿತು.

**ನಾಸಿಕೇ ನಿರಭಿದ್ಯೇತಾಂ ದೋಧೂಯತಿ ನಭಸ್ವತಿ ।**
**ತತ್ರವಾಯುರ್ಗಂಧ ವಾಹೋಘ್ರಾಣೋನಸಿ ಜಿಘೃಕ್ಷತಃ ॥ ೨೦ ॥**

ನಭಸ್ವತಿ = ಆಕಾಶದಿಂದುತ್ಪನ್ನವಾದ; ಗಂಧವಹಃ = ಗಂಧವನ್ನು ಹೊತ್ತುತರುವ; ವಾಯುಃ = ವಾಯುತತ್ತ್ವವು; ದೋಧೂಯತಿ = ಕಂಪನಬಲದಿಂದ ಎಲ್ಲಿ ಒಳಹೊರಗೆ ಚಲಿಸುವುದೋ; ತತ್ರ = ಅಲ್ಲಿ; ನಾಸಿಕೇ = ಮೂಗಿನ ರಂಧ್ರಗಳು; ನಿರಭಿದ್ಯೇತಾಂ = ಒಡೆದು ಮಾಡಿದುವು; ಜಿಘ್ರಕ್ಷತಿ = ವಾಸನೆಯನ್ನು ಆಘ್ರಾಣಿಸಬೇಕೆಂದು ಇಚ್ಛಿಸಲು; ನಸಿ = ಮೂಗಿನ ರಂಧ್ರಗಳ ಬಳಿಯಲ್ಲಿ; ಘ್ರಾಣಂ = ವಾಸನೆಯನ್ನು ಗ್ರಹಿಸುವ ಸಾಮರ್ಥ್ಯವುಳ್ಳ ಪ್ರಾಣನಿಂದ ಅಧಿಷ್ಠಿತವಾದ ನಾಸಿಕ ಇಂದ್ರಿಯವು; ಉತ್ಪನ್ನವಾಯಿತು.

ಶ್ವಾಸೋಚ್ಛ್ವಾಸಗಳಿಗೆ ಮೂಗಿನರಂಧ್ರಗಳು ಬೇಕಾಗಿರುವಂತೆ, ಗಂಧವನ್ನು ಹೊತ್ತುತರುವ ವಾಯುವಿನಲ್ಲಿನ ಗಂಧದ ಅಂಶವನ್ನು ಗ್ರಹಿಸುವುದಕ್ಕೂ ಮೂಗಿನರಂಧ್ರಗಳ ಬಳಿಯಲ್ಲಿ ಘ್ರಾಣೇಂದ್ರಿಯವು ಇರಬೇಕು. ಅದರಂತೆ ಸೃಷ್ಟಿಯಾಯಿತು.

**ಯದಾತ್ಮನಿ ನಿರಾಲೋಕ ಆತ್ಮಾನಂಚ ದಿದೃಕ್ಷತಃ ।**
**ನಿರ್ಭಿನ್ನೇ ಅಕ್ಷಿಣೀ ತಸ್ಯ ಜ್ಯೋತಿಶ್ಚಕ್ಷುರ್ಗುಣಗ್ರಹಃ ॥ ೨೧ ॥**

ಯದಾ = ಯಾವಾಗ; ಆತ್ಮನಿ = ತನ್ನ ದೇಹದಲ್ಲಿ; ನಿರಾಲೋಕಃ = ದರ್ಶನವಿಲ್ಲದವನಾಗಿ; ಆತ್ಮಾನಂ = ತನ್ನ ಶರೀರವನ್ನೂ; ಚ = ಇತರವಾದವುಗಳನ್ನೂ; ದಿದೃಕ್ಷತಃ = ಕಾಣಲು ಅಪೇಕ್ಷೆಯುಳ್ಳವನಾದನೋ ಆಗ; ತಸ್ಯ = ಅವನಿಗೆ; ಅಕ್ಷಿಣೀ = ಕಣ್ಣುಗಳೆಂಬ ಅವಯವಗಳು; ನಿರ್ಭಿನ್ನೇ = ಮೂಡಿಬಂದುವು; ಗುಣಗ್ರಹಃ = ರೂಪವನ್ನು ಗ್ರಹಿಸುವಸಾಮರ್ಥ್ಯವುಳ್ಳ; ಚಕ್ಷುಃ = ನೇತ್ರೇಂದ್ರಿಯವು; ಜ್ಯೋತಿಃ = ಸೂರ್ಯನಿಂದ ಅಧಿಷ್ಠಿತವಾದುದು.

ಇಂದ್ರಿಯ ಗೋಳಕಗಳು ಜಡ ಆಕೃತಿಗಳು. ಅವುಗಳ ಕ್ರಿಯಾಸಾಮರ್ಥ್ಯವು ನಿಜವಾಗಿ ಇಂದ್ರಿಯಗಳೆನಿಸಿ ಕೊಳ್ಳುವುವು. ಆ ಸಾಮರ್ಥ್ಯಗಳು ಬರುವುದು ಅಲ್ಲಲ್ಲಿನ ಅಧಿದೈವಗಳಿಂದ. ಇಂದ್ರಿಯಗಳಲ್ಲಿ ಸೂಕ್ಷ್ಮಶರೀರಗಳನ್ನು ಧರಿಸಿದ ದೇವತೆಗಳಿದ್ದು ಕಾರ್ಯಪ್ರವರ್ತಕರಾಗಿವರು. ಪ್ರಕೃತಸಂದರ್ಭದಲ್ಲಿ ವೈಕಾರಿಕಾದಿ ಅಹಂಕಾರ ತತ್ತ್ವಗಳ ಸೃಷ್ಟಿಯು ಗೋಳಕಗಳು ಮತ್ತು ಇಂದ್ರಿಯಗಳು ಉತ್ಪನ್ನವಾದುವೆಂದೂ; ಪ್ರಾಣ, ಸೂರ್ಯ ಮೊದಲಾದ ಹೆಸರುಗಳಿಂದ ಬ್ರಹ್ಮನೇ ವರ್ಣಿಸುತ್ತಿರಲು, ಮುಂದೆ ಆಯಾಸ್ಥಾನಗಳಲ್ಲಿರಬೇಕಾದ ದೇವತೆಗಳು ಬ್ರಹ್ಮನ ಶರೀರದಲ್ಲಿಯೇ ಇದ್ದು, ಅವರಲ್ಲಿ

ಉತ್ತಮರಾದವರು ಜಾಗ್ರತರಾಗಿ, ಬ್ರಹ್ಮನ ಶರೀರ ಸೃಷ್ಟಿಯ ಕ್ರಮವನ್ನು ನೋಡುತ್ತಿರುವರೆಂದೂ ತಿಳಿಯಬೇಕು.

**ಬೋಧ್ಯಮಾನಸ್ಯ ಋಷಿಭಿರಾತ್ಮನ ಸ್ತಜ್ಜಿಘೃಕ್ಷತಃ ।**
**ಕರ್ಣೌಚ ನಿರಭಿದ್ಯೇತಾಂ ದಿಶಃ ಶ್ರೋತ್ರಂ ಗುಣಗ್ರಹಃ ॥ ೨೨ ॥**

ಋಷಿಭಿಃ = ವೇದಾಭಿಮಾನಿಗಳಿಂದಲೂ, ತನ್ನ ಶರೀರದಲ್ಲಿರುವ ಅಗ್ನಿಮೊದಲಾದ ದೇವತೆಗಳಿಂದಲೂ; ಬೋಧ್ಯಮಾನಃ = ವೇದಗಳ ಶ್ರವಣಮಾಡೆಂದು ಸೂಚನೆಯನ್ನು ಪಡೆದು; ತತ್ ಜಿಘೃಕ್ಷತಃ = ಅದನ್ನು ಆಲಿಸಬೇಕೆಂದು ಅಪೇಕ್ಷಿಸಿದ; ಆತ್ಮನಃ = ಬ್ರಹ್ಮನ ಶರೀರಕ್ಕೆ; ಕರ್ಣೌಚ = ಕಿವಿಗಳೆಂಬ ಅವಯವಗಳೂ (ಗೋಳಕಗಳು); ನಿರಭಿದ್ಯೇತಾಂ = ಛಿದ್ರಗಳಾಗಿ ಮೂಡಿಬಂದುವು; ಗುಣಗ್ರಹಃ = ಶಬ್ದಗುಣವನ್ನು ಗ್ರಹಿಸುವ ಶ್ರೋತ್ರೇಂದ್ರಿಯವು; ದಿಶಃ = ದಿಗ್ದೇವತೆಗಳಿಂದ ಅಧಿಷ್ಠಿತವಾದುದು.

ಈ ಪ್ರಾರಂಭದ ದೆಸೆಯಲ್ಲಿ ವೇದಾಭಿಮಾನಿ ಋಷಿಗಳೆಂದರೆ ಲಕ್ಷ್ಮೀದೇವಿಯೆಂದು ತಿಳಿಯಬೇಕು. ಛಂದೋಭಿಮಾನಿ ಋಷಿಸ್ಥಾನೀಯರು ಸೃಷ್ಟಿಯಲ್ಲಿ ಬಂದ ಮೇಲೆ ಅವರಿಗೆ ಅಲ್ಲಿ ಸ್ಥಾನ ದೊರೆಯುವುದು. ದಿಗ್ದೇವತೆಗಳ ವಿಷಯವೂ ಇದರಂತೆಯೇ.

**ವಸ್ತುನೋ ಮೃದು ಕಾಠಿನ್ಯಂ ಲಘು ಗುರ್ವುಷ್ಣಶೀತತಾಂ ।**
**ಜಿಘೃಕ್ಷತಸ್ತ್ವಕ್ ನಿರ್ಭಿನ್ನಾ ತಸ್ಯಾಂ ರೋಮಮಹೀರುಹಾಃ ॥ ೨೩ ॥**

ವಸ್ತುನಃ = ಸೃಷ್ಟಿಯಲ್ಲಿರುವ ವಸ್ತುಗಳ; ಮೃದು = ಮೆತ್ತಗಿರುವಿಕೆ; ಕಾಠಿನ್ಯ = ಗಟ್ಟಿಯಾಗಿರುವಿಕೆ; ಲಘು = ಹಗುರುವಾಗಿರುವಿಕೆ; ಗುರು = ಭಾರವಾಗಿರುವಿಕೆ; ಉಷ್ಣ = ಶಾಖವಾಗಿರುವಿಕೆ; ಶೀತತಾಂ = ಹಾಗೂ ತಣ್ಣಗಿರುವಿಕೆಯನ್ನು; ಜಿಘೃಕ್ಷತಃ = ಗ್ರಹಿಸಲಿಚ್ಛಿಸಿದ ಬ್ರಹ್ಮನ ಶರೀರಕ್ಕೆ; ತ್ವಕ್ = ಚರ್ಮವೂ, ತ್ವಗಿಂದ್ರಿಯವೂ; ನಿರ್ಭಿನ್ನಾ = ಮೂಡಿಬಂದಿತು; ತಸ್ಯಾಂ = ಆ ಚರ್ಮದಲ್ಲಿ; ರೋಮ ಮಹೀರುಹಾಃ = ಕೂದಲುಗಳೆಂಬ ವನಸ್ಪತಿಗಳು ಉತ್ಪನ್ನವಾದುವು.

ತ್ವಕ್ ಎಂಬ ಹೊರಗಿನ ಪದರವೂ, ಚರ್ಮವೆಂಬ ಒಳಗಿನ ಪದರವೂಕೂಡಿ ಚರ್ಮವೆಂಬ ಪದ ವ್ಯವಹಾರವಲ್ಲಿದೆ. ಸ್ಪರ್ಶಾದಿಗಳನ್ನು ಗ್ರಹಿಸುವ ಸ್ಪರ್ಶೇಂದ್ರಿಯವೆಂಬ ಸಾಮರ್ಥ್ಯವು ಒಳಚರ್ಮಕ್ಕೆ ಸಂಬಂಧಿಸಿದ ನರಗ್ರಂಥಿಗಳಲ್ಲಿ ಇರುತ್ತದೆ. ಇದಕ್ಕೆ ಅಧೀದೇವತೆ ಸ್ಪರ್ಶವಾಯು. ನರಗ್ರಂಥಿಗಳೂ, ರೋಮ ಕೂಪಗಳೂ ಪಕ್ಕದಲ್ಲಿದ್ದು ಸಂಬಂಧ ಹೊಂದಿವೆ. ವೃಕ್ಷಗಳ ಎಲೆಗಳು ವಾಯುಗ್ರಾಹಿಗಳು. ಆದುದರಿಂದ

ರೋಮರೂಪಗಳಲ್ಲಿ ವೃಕ್ಷಗಳ ಇರುವಿಕೆ. ಒಂದೊಂದು ರೋಮವೂ ವೃಕ್ಷವೇ ಎಂದು ತಿಳಿಯಬಾರದು ರೋಮಗಳಲ್ಲಿ ವನದೇವತೆಗಳ ಸನ್ನಿಧಾನವಿರುವುದರಿಂದ ಅವು ವೃಕ್ಷಸದೃಶವಾದುವು. "ಗುರ್ವೃಷ್ಣ" ಎಂಬುದು ವೇದಪದ್ಧತಿಯ ಪ್ರಯೋಗ.

**ತತ್ರಚಾಂತರ್ಬಹಿರ್ವ್ಯಾಪ್ತ ಸ್ತ್ವಚಾಲಬ್ಧಗುಣಾವೃತಃ ।**
**ಹಸ್ತಾರುರುಹತುಸ್ತಸ್ಯ ನಾನಾಕರ್ಮ ಚಿಕೀರ್ಷಯಾ ॥ ೨೨೪ ॥**

ತತ್ರಚ = ಆ ಚರ್ಮವೆಂಬ ಅವಯವ ವಿಶೇಷದಲ್ಲಿ; ತ್ವಚಾ = ತ್ವಗಿಂದ್ರಿಯದಿಂದ; ಲಬ್ಧ ಗುಣ ಆವೃತಃ = ಉಂಟಾಗುವ ಸ್ಪರ್ಶಗುಣಕ್ಕೆ ಅಧಿದೇವತೆಯಾಗಿ; ಅಂತಃ ಬಹಿಃ = ಒಳಗೂ ಹೊರಗೂ; ವ್ಯಾಪ್ತಃ = ಸ್ಪರ್ಶವಾಯುದೇವತೆಯು ವ್ಯಾಪಿಸಿರುವನು; ನಾನಾ ಕರ್ಮಚಿಕೀರ್ಷಯಾ = ಹಿಡಿಯುವುದು, ಕೊಡುವುದು ಮೊದಲಾದ ನಾನಾಬಗೆಯ ಕರ್ಮಗಳನ್ನು ಮಾಡಲಿಚ್ಛಿಸಿದ; ತಸ್ಯ = ಆ ಬ್ರಹ್ಮನಿಗೆ; ಹಸ್ತೌ = ಕೈಗಳು; ರುರುಹತುಃ = ಬೆಳೆದು ಉಂಟಾದುವು.

ತ್ವಗಿಂದ್ರಿಯವು ಹೊರಗಿವುದು ಮಾತ್ರವಲ್ಲದೆ, ದೇಹದೊಳಗಿನ ಅವಯವಗಳಿಗೂ ಹೊದಿಕೆಯ ರೂಪದಲ್ಲಿದ್ದು ಗುರು, ಲಘು, ಶೀತೋಷ್ಣಾದಿ ಗುಣಗಳ ಪರಿಚಯ ಮಾಡಿಸಿಕೊಡುವುದು. ಇದುವರೆಗೆ ಜ್ಞಾನೇಂದ್ರಿಯಗಳ ಉತ್ಪತ್ತಿಯನ್ನು ಹೇಳಿ, ಈಗ ಹಸ್ತಗಳೇ ಮೊದಲಾದ ಕರ್ಮೇಂದ್ರಿಯಗಳ ಉತ್ಪತ್ತಿಯನ್ನು ಹೇಳುತ್ತಿದ್ದಾರೆ.

**ತಯೋಸ್ತು ಬಲವಾನಿಂದ್ರ ಆದಾನಮುಭಯಾಶ್ರಯಂ ।**
**ಗತಿಂ ಚಿಕೀರ್ಷತಃ ಪಾದೌರುರುಹಾತೇಭಿಕಾಮಿನಃ ।**
**ಪದ್ಭ್ಯಾಂ ಹವ್ಯಂ ಸ್ವಯಂ ಯಜ್ಞಃ ಕರ್ಮಯತ್ಕ್ರಿಯತೇನೃಭಿಃ ॥ ೨೫ ॥**

ತಯೋಃ ತು = ಆ ಹಸ್ತಗಳಿಂದ; ಆದಾನಂ = ಸ್ವೀಕಾರಮಾಡುವುದು; ಕೊಡುವುದು, ವಿಸರ್ಜಿಸುವುದು ಮೊದಲಾಕ್ರಿಯೆಗಳು ಯಾವುವೋ, ಅಂತಹ; ಉಭಯ ಆಶ್ರಯಂ = ಲೌಕಿಕ ವೈದಿಕ ಕರ್ಮಗಳಿಗೆ ಆಶ್ರಯವಾದ; ಬಲವಾನ್ = ಬಲಪ್ರದನಾದವನು; ಇಂದ್ರಃ = ಇಂದ್ರಾಂತರ್ಗತ ಇಂದ್ರನಾಮಕ ಭಗವಂತ; ಗತಿಂ = ಹೋಗುವ ಬರುವ ವ್ಯಾಪಾರಗಳನ್ನು; ಚಿಕೀರ್ಷತಃ ಅಭಿಕಾಮಿನಃ = ಮಾಡಲಪೇಕ್ಷೆಯುಳ್ಳ ಬ್ರಹ್ಮನಿಗೆ; ಪಾದೌ = ಪಾದಗಳು; ರುರುಹಾತೇ = ಹುಟ್ಟಿಕೊಂಡುವು; ನೃಭಿಃ = ಮಾನವರಿಂದ; ಹವ್ಯಂ ಕರ್ಮ = ಹವಿಸ್ಸನ್ನರ್ಪಿಸುವ ಹವನಾದಿ ಕಾರ್ಯಗಳು; ಯತ್ ಕ್ರಿಯತೇ = ಯಾವವು ಆ ಚರಿಸಲ್ಪಡುವುವೋ,

ಅವುಗಳಿಗೆ; ಸ್ವಯಂ ಯಜ್ಞಃ= ಉಪೇಂದ್ರನಾಮಕ ಭಗವಂತನೇ ಆಧಾರಸ್ವರೂಪನಾದವನು.

ಇಂದ್ರಶಬ್ದದಿಂದ, ಹಸ್ತಗಳಿಗೆ ಯಜಮಾನನಾದವನು ಇಂದ್ರನಾಮಕ, ಇಂದ್ರಾಂತರ್ಗತ ಭಗವಂತನೆಂದೂ, ಪಾದಗಳಿಗೆ ಇಂದ್ರ ಪುತ್ರನಾದ ಜಯಂತನ ಅಂತರ್ಯಾಮಿಯೆಂದೂ; ಯಜ್ಞಗಳಿಗೆ ಇಂದ್ರಸಹೋದರನಾಗಿ ಅವತರಿಸಿದ ಉಪೇದ್ರನೆಂದೂ ಅರ್ಥಗ್ರಹಣ ಮಾಡಬೇಕು.

**ನಿರಭಿದ್ಯತ ಶಿಶ್ನೋವೈ ಪ್ರಜಾನಂದಾಮೃತಾರ್ಥಿನಃ ।**
**ಉಪಸ್ಥ ಆಸೀತ್ಕಾಮಾನಾಂ ಪ್ರಿಯಂ ತದುಭಯಾಶ್ರಯಂ ॥ ೨೬ ॥**

ಪ್ರಜಾನಂದ ಅಮೃತ ಅರ್ಥಿನಃ = ಪ್ರಜಾಸೃಷ್ಟಿ ಕಾರ್ಯದಲ್ಲಿ ಲಭಿಸುವ ಉತ್ತಮ ಸುಖ ಮತ್ತು ಅದರ ಫಲವಾಗಿ ಲಭಿಸುವ ಮುಕ್ತಿಯಲ್ಲಿನ ಆನಂದ, ಇವುಗಳನ್ನು ಅಪೇಕ್ಷಿಸಿದ ಬ್ರಹ್ಮನಿಗೆ; ವೈ = ನಿಜವಾಗಿ ಸಾರ್ಥಕತೆಯುಳ್ಳ; ಶಿಶ್ನಃ = ಪುರುಷಾವಯವವು; ನಿರಭಿದ್ಯತ = ಮೂಡಿತು. ಕಾಮಾನಾಂ = ಪ್ರಜಾಸೃಷ್ಟಿ, ತತ್ಕಾಲದ ಸುಖ ಮತ್ತು ಮುಕ್ತಿಯ ಆನಂದ, ಇವುಗಳಿಗೆ ; ಪ್ರಿಯಂ = ಹಿತವನ್ನುಂಟುಮಾಡುವ; ಉಪಸ್ಥಃ = ಸ್ತ್ರೀಸಹಜ ಜನನೇಂದ್ರಿಯವು; ಆಸೀತ್= ಉಂಟಾಯಿತು; ತದುಭಯ ಆಶ್ರಯಂ = ಆ ಎರಡು ಅವಯವಗಳಿಗೂ ಅವುಗಳ ಕ್ರಿಯಾವಿಶೇಷದಿಂದ ಲಭಿಸುವ ಸಂತೋಷ ಮತ್ತು ಮುಕ್ತಿಯ ಆನಂದಗಳಿಗೂ ಆಶ್ರಯದಾತನಾಗಿ ಕಾಮ ರತಿಯರಂತರ್ಯಾಮಿಯಾದ ಶ್ರೀಲಕ್ಷ್ಮೀನಾರಾಯಣನು ಆವಿರ್ಭವಿಸಿದನು.

ಪ್ರಜಾಸೃಷ್ಟಿಕಾರ್ಯದಿಂದ ಅಸೃಜ್ಯ, ಸೃಜ್ಯರಾಶಿಗಳಲ್ಲಿನ ಜೀವರು ಲೋಕದಲ್ಲಿ ಹುಟ್ಟಿಬಂದು, ಸಾಧನ ಮಾಡಿಕೊಂಡು, ಮುಕ್ತರಾಗಿ ನಿತ್ಯಸುಖಾನು ಭವಿಗಳಾಗಬೇಕೆಂಬುದು ಭಗವಂತನ ದಿವ್ಯ ಸಂಕಲ್ಪ. ಸೃಷ್ಟಿಯಲ್ಲಿ ಬರಬೇಕಾದ, ಮತ್ತು ಈಗಾಗಲೇ ಬಂದು ಜನ್ಮ ಜನ್ಮಾಂತರಗಳ ಸಾಧನಪ್ರವಾಹದಲ್ಲಿರುವ ಜೀವರಿಗೆ ತಮ್ಮಸ್ವರೂಪ ಸಾಮರ್ಥ್ಯಗಳಾಗಲೀ, ಭಗವದನುಗ್ರಹದಿಂದ ಲಭಿಸುವ ಸ್ವರೂಪಾನಂದದ ಅಭಿವ್ಯಕ್ತಿಗೆ ಆಶ್ರಯವಾದ ಮುಕ್ತಸ್ಥಾನದ ವಿಷಯವಾಗಲೀ ತಿಳಿದಿರುವುದಿಲ್ಲ. ಅದರ ಪರಿಚಯವಾಗುವುದು ಸೃಷ್ಟಿಯಲ್ಲಿ ಬಂದಮೇಲೆ. ಜೀವಿಗಳು ತಾವು ಭಗವಂತನಿಂದ ಜನ್ಮ ಪಡೆದಂತೆ ಇತರ ಜೀವಿಗಳಿಗೆ ಜನ್ಮಕೊಡುವ ಸ್ತ್ರೀಸಂಗರೂಪವಾದ ಕ್ರಿಯೆಯಲ್ಲಿ ತೊಡಗಿದಾಗ ಅವರಿಗೆ ಸ್ವರೂಪಸುಖದ ಅಲ್ಪಪರಿಚಯವಾಗುವುದಲ್ಲದೆ, ಶಾಸ್ತ್ರಶ್ರವಣಜನ್ಯ ಜ್ಞಾನದಿಂದ ಮುಕ್ತಿ ಸುಖದಲ್ಲಿ ಆಸಕ್ತಿಯುಂಟಾಗುತ್ತದೆ; ಮುಕ್ತಿ

ಪ್ರದನಾದ ಭಗವಂತನಲ್ಲಿ ಸ್ನೇಹರೂಪವಾದ ಭಕ್ತಿಯು ಮೂಡುತ್ತದೆ. ಪೂರ್ಣ ಭಕ್ತಿಯೆಂಬುದು ಭಗವಂತನ ಮಾಹಾತ್ಮ್ಯಜ್ಞಾನದಿಂದ ಉಂಟಾಗುವುದು. ಆ ಜ್ಞಾನದ ಪ್ರಾರಂಭವು ಸ್ತ್ರೀಸಂಗ ಸುಖ ನೀಡುವವನ ಸ್ಮರಣೆಯಿಂದ ಉಂಟಾಗುವುದು. ಆದುದರಿಂದಲೇ ಲೌಕಿಕ ಸುಖಗಳಲ್ಲೆಲ್ಲಾ ಅತಿ ಹೆಚ್ಚು ಪ್ರಿಯವಾದದು ಸ್ತ್ರೀಪುರುಷರ ಮಿಥುನೀಭಾವ ಸುಖ. ಇದನ್ನು ಜ್ಞಾನಿಗಳು ಬಲ್ಲರು. ಅವರು ಬ್ರಹ್ಮಚರ್ಯೆಯಿಂದ ಭಗವದ್ವಿಷಯಕವಾದ ಜ್ಞಾನಸಂಪನ್ನರಾಗಿ, ಗೃಹಸ್ಥಾಶ್ರಮಧರ್ಮವನ್ನು ಪಾಲಿಸುವಾಗ, 'ನಾನು, ನನ್ನ ಶರೀರ, ನನ್ನ ಹೆಂಡತಿ', ಇತ್ಯಾದಿ ಅಜ್ಞಾನ ಕಾರ್ಯಗಳಿಲ್ಲದವರಾಗಿ ಸಂಭೋಗಕ್ರಿಯೆಯಲ್ಲಿ ನಿರತರಾಗಿರುವಾಗ, ತಮ್ಮ ಅಸ್ವಾತಂತ್ರ್ಯವನ್ನೂ ಭಗವಂತನ ಸ್ವತಂತ್ರ ಕ್ರಿಯೆಯನ್ನೂ ಮನಸ್ಸಿಗೆ ತಂದುಕೊಳ್ಳುವುದರಿಂದ, ಆಕ್ರಿಯೆಯು ಭಗವದರ್ಪಣ ರೂಪವಾದ 'ವಾಮದೇವ ಯಜ್ಞ' ಎನಿಸಿಕೊಳ್ಳುವುದು. ಜೀವರು ಕರ್ಮವಶರಾಗಿ ಎಷ್ಟೇ ಅಜ್ಞಾನ ಪೀಡಿತರಾಗಿದ್ದರೂ, ಸಂಭೋಗಕ್ರಿಯೆಯಿಂದ ಅತಿ ಸಂತೋಷವಾದಾಗಲಾದರೂ ಮೈಮರೆತು 'ಕೃಷ್ಣಾ ! ಎಂದರೆ ಸಾಕು, ಅದು ಯಜ್ಞಫಲ ಪ್ರಾಪ್ತಿಗೆ ಕಾರಣವಾಗುತ್ತದೆ.

**ಉತ್ಸಿಸೃಕ್ಷೋರ್ಧಾತು ಮಲಂ ನಿರಭಿದ್ಯತ ವೈ ಗುದಂ ।**
**ತತಃ ಪಾಯುಸ್ತತೋಮಿತ್ರ ಉತ್ಸರ್ಗಉಭಯಾಶ್ರಯಃ ॥ ೨೭ ॥**

ಧಾತುಮಲಂ = ಆಹಾರ ಪಚನಾನಂತರ ಉಳಿಯುವ ಆಹಾರ ವಸ್ತುಗಳಲ್ಲಿನ ನಿಷ್ಪ್ರಯೋಜಕ ವಸ್ತುವೆನಿಸುವ ಮಲವನ್ನು; ಉತ್ಸಿಸೃಕ್ಷೋಃ = ಹೊರಗೆ ತಳ್ಳಬೇಕೆಂಬ ಅಪೇಕ್ಷೆಯನ್ನು ಪ್ರಕಟಿಸಿದ ಬ್ರಹ್ಮನ ಶರೀರದಲ್ಲಿ; ವೈ = ಸಾರ್ಥಕವಾದ; ಗುದಂ = ಗುದ ದ್ವಾರವು; ನಿರಭಿದ್ಯತ = ಒಡಮೂಡಿತು; ತತಃ = ಆ ಕಾರಣದಿಂದಲೇ; ಪಾಯುಃ = ಗುದೇಂದ್ರಿಯದ ಕ್ರಿಯಾಶಕ್ತಿಯೂ; ತತಃ = ಆ ಶಕ್ತಿದಾತನಾದ ಅಪಾನವಾಯುದೇವನಿಗೆ ಬಲಕೊಡುವ ನಿಮಿತ್ತದಿಂದ; ಮಿತ್ರಃ = ಮಿತ್ರನಾಮಕ ಸೂರ್ಯನೂ; ಉದ್ಭವಿಸಿದರು; ಉತ್ಸರ್ಗಃ = ಮಲವಿಸರ್ಜನ ಕ್ರಿಯೆಯು; ಉಭಯಾಶ್ರಯಃ = ಕೊಳೆಯನ್ನು ಕಳೆದುಕೊಂಡು ನಿರ್ಮಲವಾಗಬೇಕು, ಅನ್ನದಸಾರರೂಪನಾದ ಭಗವಂತನನ್ನಾರಾಧಿಸಬೇಕು ಎಂಬ ಎರಡು ಉದ್ದೇಶಗಳಿಗೂ ಆಶ್ರಯವಾದುದು.

ಭೌತಶರೀರಕ್ಕೆ ಕಾರಣವಾದ ಜೀವರ ಅನಾದಿ ಲಿಂಗ ಶರೀರಗಳಲ್ಲಿಯೂ ತ್ರಿವಿಧ ಕರ್ಮಗಳಿಗೆ ಕಾರಣಗಳಾದ ಸತ್ವರಜಸ್ತಮೋ ಗುಣಗಳ ತ್ರೈವಿಧ್ಯವಿದೆ. ಪಾಂಚಭೌತಿಕ ಶರೀರಗಳು ಬಂದಾಗ ಸತ್ವಾಭಿಮಾನಿ ದೇವತೆಗಳಂತೆ ತಮೋಗುಣಾಭಿಮಾನಿ ದೈತ್ಯರನ್ನೂ,

ರಜೋಗುಣಾಭಿಮಾನಿಗಳಾದ ಮಿಶ್ರಪಕ್ಷದವರನ್ನೂ ಆ ಭಗವಂತ ನಮ್ಮ ಶರೀರಗಳಲ್ಲಿ ಯಜಮಾನರನ್ನಾಗಿ ಇಟ್ಟಿರುತ್ತಾನೆ. ಸಾತ್ವಿಕ ದೇವತೆಗಳಿಂದ ಸುಖ; ತಾಮಸ ದೈತ್ಯರಿಂದ ದುಃಖ; ರಜೋಭಿಮಾನಿಗಳಿಂದ ಸಾಂಸಾರಿಕ ಗೊಂದಲ. ಮಲವಿಸರ್ಜನ ಕ್ರಿಯೆಯಿಂದ ತಮೋಭಿಮಾನಿ ದೈತ್ಯರ ಸಂಬಂಧ ವಿಸರ್ಜನೆಯೂ, ಆಹಾರ ಸಾರಸೇವನೆಯಿಂದ ಜ್ಞಾನ ವೈರಾಗ್ಯಭಕ್ತಿಗಳಿಗೆ ನೆರವಾಗುವ ದೇವತೆಗಳ ಸಂಬಂಧ ಕಲ್ಪನೆಯೂ ಉಂಟಾಗುವುದು. ಈ ಕ್ರಿಯೆಯು ಸಾತ್ವಿಕ ಆಹಾರ ಸೇವನೆಯಿಂದ ಸಾರ್ಥಕವಾಗುವುದು. ತಾಮಸ ಆಹಾರಗಳನ್ನು ಸ್ವೀಕರಿಸಿದಾಗ, ಒಂದು ಬಗೆಯಲ್ಲಿ ಮಲವಿಸರ್ಜನೆಯಿಂದ ದೈತ್ಯರ ಸಂಬಂಧ ಕಳೆದುಕೊಂಡರೂ, ಇನ್ನೊಂದು ಬಗೆಯಲ್ಲಿ ಅವರ ಸಂಬಂಧವನ್ನು ಹೆಚ್ಚಿಸಿಕೊಂಡು ನರಳಬೇಕಾಗುವುದು. ಬ್ರಹ್ಮದೇವರ ಅತಿಶುದ್ಧ ಸಾತ್ವಿಕವೆನಿಸಿಕೊಳ್ಳುವ ಮಹತ್ತತ್ವ ಶರೀರದಲ್ಲಿ ಅತ್ಯಲ್ಪ (೧೧೧ ರಲ್ಲಿ ಒಂದೇ ಭಾಗ) ತಮೋಗುಣವಿದ್ದರೂ, ಅವರ ಸಂಬಂಧ ವಿಸರ್ಜನೆಯಂತಹ ಅವರ ಕ್ರಿಯೆಯು ಅವರರಾದ ಜೀವರ ಶರೀರ ಕಾರ್ಯಕ್ಕೆ ಪ್ರೇರಕ.

**ಆಸಿಸೃಕ್ಷೋಃ ಪುರಂ ಪುರ್ಯಾಂ ನಾಭಿದ್ವಾರ ಮಪಾವೃತಂ ।**
**ತತೋಽಪಾನಃ ಸ್ವತೋಽಮೃತ್ಯುಃ ಪೃಥಕ್ತ್ವಮುಭಯಾಶ್ರಯಂ ॥ ೨೮ ॥**

ಪುರ್ಯಾಂ = ತಾನು ಸೃಷ್ಟಿಸಬೇಕಾದ ದೇಹಾಂತರಗಳಲ್ಲಿ; ಪುರಂ = ತನಗೆ ಆವಾಸಸ್ಥಾನಂ; ಸಿಸೃಕ್ಷೋಃ = ಸೃಷ್ಟಿಸಬೇಕೆಂದು ಅಪೇಕ್ಷಿಸಿದ ಬ್ರಹ್ಮನ ದೇಹಕ್ಕೆ; ನಾಭಿದ್ವಾರಂ = ಹೊಕ್ಕುಳಿನ ಬಳಿಯ ರಂಧ್ರವು; ಅಪಾವೃತಂ = ಕಾಣಿಸಿಕೊಂಡಿತು; ತತಃ = ಅದರ ಸಂಬಂಧಿಯಾಗಿ; ಅಪಾನಃ = ಅಪಾನನಾಮಕ ವಾಯುದೇವರು; ಸ್ವತಃ = ಅಪಾನ ವಾಯುವಿಗೆ ಪ್ರೇರಿಸುವುದರಿಂದ; ಮೃತ್ಯುಃ = ದೇಹಧಾರಣ ಮಾಡಿದವರ ಮೃತ್ಯುವಿಗೂ ಕಾರಣರಾಗಿರುವುದರಿಂದ; ಪೃಥಕ್ತ್ವಂ = ಬ್ರಹ್ಮದೇವರ ದೇಹಾಂತರ ಪ್ರವೇಶವು; ಉಭಯಾಶ್ರಯಂ = ಜನನದಿಂದ ಕರ್ಮಾಚರಣೆಗಳಿಗೂ, ಅನಂತರದ ಮರಣಕ್ಕೂ ಆಶ್ರಯವಾಗಿರುವುದು.

ಇಲ್ಲಿ ಬ್ರಹ್ಮದೇವರ ಶರೀರಾಂತರ ಪ್ರಾಪ್ತಿ ಎಂಬುದು ಮುಂದೆ ಅವರು ಯೋಗಿಗಳಿಗೆ ಸುಷುಮ್ನಾ ನಾಡಿಸ್ಥಿತರಾಗಿ ಬ್ರಹ್ಮಮಾರ್ಗದರ್ಶಕರಾಗಿರುವುದಕ್ಕೂ, ನಾಭಿಯ ಕೆಳಗಿನ ನಾಡೀ ಪದ್ಮಗಳಲ್ಲಿದ್ದು ಲೌಕಿಕ ಜೀವನಕ್ಕೆ ಅವಕಾಶ ಮಾಡಿಕೊಡುವುದಕ್ಕೂ ಅನುಕೂಲಿಸುವ ಆ ಸುಷುಮ್ನಾ ನಾಡಿಯ ಸೃಷ್ಟಿ ಮತ್ತು ಅದರಲ್ಲಿ ಸ್ಥಿತಿ ಎಂದು ತಿಳಿಯಬೇಕು. ಬೆನ್ನುಮೂಳೆಯ ನಳಿಕೆಯಲ್ಲಿ, ವೃಷಣ ಆಸನಗಳ ಮಧ್ಯದಲ್ಲಿ ಪ್ರಾರಂಭವಾಗಿ, ತಲೆ ಬುರುಡೆಯೊಳಗಿನ ಮೆದುಳಿನ ವಿಶಿಷ್ಟ

ನರಕೇಂದ್ರದವರೆಗೆ ಹಬ್ಬಿನಿಂತಿರುವ ಮೆದುಳುಬಳ್ಳಿಯು ೭೨ ಸಾವಿರ ನರದ ಎಳೆಗಳ ಹುರಿಯಂತಿದೆ. ಇವುಗಳ ನಟ್ಟನಡುವೆ ಇರುವುದು, ಕುದುರೆಬಾಲದ ತುದಿಗೂದಲನ್ನು ೧೦,೦೦೦ ಎಳೆಗಳಾಗಿ ಛಿದ್ರ ಮಾಡಿದರೆ ಎಷ್ಟು ಸೂಕ್ಷ್ಮವಾಗಿರುವುದೋ ಅಷ್ಟು ಸೂಕ್ಷ್ಮವಾದ ನರದ ಎಳೆ; ಅದಕ್ಕೆ ಸುಷುಮ್ನಾ ನಾಡಿ ಎಂದು ಹೆಸರು. ಇಲ್ಲಿ ಸಾವಿರ ಎಂದರೆ ಅನೇಕಾನೇಕ ಎಂದು ಅರ್ಥ; ಕೇವಲ ಒಂದು ಸಾವಿರವೇ ಅಲ್ಲ ಇದರ ಸುತ್ತಲೂ ನಾಲ್ಕು ದಿಕ್ಕಿಗೆ ನಾಲ್ಕು ಮುಖ್ಯ ನರದ ಎಳೆಗಳಿವೆ. ಇದರಂತೆ ಇನ್ನೂ ಆರು ಎಳೆಗಳು ಸೇರಿದರೆ, ಹನ್ನೊಂದು ನರಗಳೂ, ಇನ್ನೂ ೯೦ ಎಳೆಗಳು ಸೇರಿದರೆ ೧೦೧ ಎಳೆಗಳೂ ಬೆನ್ನು ಹುರಿಯ ಮುಖ್ಯ ಎಳೆಗಳು. ಇವು ದೇಹದ ಎಲ್ಲಾ ಭಾಗಗಳಿಗೂ ಮುಟ್ಟುವ ಇತರ ೭೧,೮೯೯ ಎಳೆಗಳಿಗೆ ಸಂಬಂದಿಧಿಸಿದ್ದು, ಅವುಗಳಿಗೆ ಪ್ರೇರಕಗಳಾಗಿವೆ. ಈ ಒಂದೊಂದರಲ್ಲಿಯೂ ಒಬ್ಬೊಬ್ಬ ನದ್ಯಭಿಮಾನಿ ದೇವತೆಗಳು ಬಲ ಪ್ರದವಾಗಿರುವರು. ಹನ್ನೊಂದು ನಾಡಿಗಳ ಅಭಿಮಾನಿ ದೇವತೆಗಳು ಇತರ ಎಲ್ಲರಿಗೂ ಬಲಪ್ರದವಾಗಿರುವರು. ಇವರಲ್ಲಿ ಬ್ರಹ್ಮವಾಯುಗಳು ಅತ್ಯಂತ ಮುಖ್ಯರಾದವರು.

ಸುಷುಮ್ನಾ ನಾಡಿಗೆ ಬ್ರಹ್ಮನಾಡಿ ಎಂದೇ ಹೆಸರು. ಅದರ ಸುತ್ತಲಿನ ನಾಲ್ಕು ನಾಡಿಗಳಲ್ಲಿ ವಾಯುದೇವರು ರಕ್ಷಕರಾಗಿದ್ದಾರೆ. ಸುಷುಮ್ನಾ ನಾಡಿಗೆ ಸಂಬಂಧಿಸಿ, ನಾಭಿಯ ಕೆಳಭಾಗದಲ್ಲಿ ಆರು ದಳಗಳ ಐದು ಪದ್ಮಗಳು ಐದು ನಾಡಿಗಳಲ್ಲಿವೆ. ಅಲ್ಲಿ ವಾಯುದೇವರು ಪ್ರಧಾನರಾಗಿದ್ದು ಜೀವರ ಜನನ ಮರಣಗಳಿಗೆ ಮುಖ್ಯಕಾರಣರಾಗಿದ್ದಾರೆ, ಇವರ ಅಧೀನರಾಗಿ ಅಪಾನ ವಾಯು ಇದ್ದಾರೆ. ಅಪಾನ ವಾಯುವಿನ ಮಲವಿಸರ್ಜನ ಕಾರ್ಯ ಅತ್ಯಧಿಕವಾದಾಗ ಮರಣ ಸಂಭವಿಸುತ್ತದೆ. ಈ ಜನನ ಮರಣಕಾರ್ಯಗಳನ್ನು ಅಧೀನ ದೇವತೆಗಳ ಮುಖಾಂತರ ನಡೆಸುವುದಕ್ಕಾಗಿ ಸುಷುಮ್ನಾ ನಾಡಿಯಲ್ಲಿ ಬ್ರಹ್ಮದೇವರ ಪ್ರವೇಶ; ಮರಣವೆಂಬುದು ಅವರಿಗಲ್ಲ. ಷಡ್ದಳ ಕಮಲಗಳಿಗೂ ಸುಷುಮ್ನಾ ನಾಡಿಗೂ ಸಂಬಂಧಗೊಳಿಸುವುದು ನಾಭೀ ರಂಧ್ರದ ಸ್ಥಾನ. ಆದುದರಿಂದ, ಅದರ ಸೃಷ್ಟಿಯ ವಿಚಾರವನ್ನು ಈ ಶ್ಲೋಕದಲ್ಲಿ ಹೇಳಿದ್ದಾರೆ.

**ಆದಿತ್ಸೋರನ್ನ ಪಾನಾನಾಮಸೃಕ್ಕುಕ್ಷ್ಯಂತ್ರ ನಾಡಿಕಾಃ ।**
**ನದ್ಯಾಸ್ಸಮುದ್ರಾಶ್ಚ ತಯೋಸ್ತುಷ್ಟಿಃ ಪುಷ್ಟಿಸ್ತದಾಶ್ರಯೇ ॥ ೨೯ ॥**

ಅನ್ನಪಾನಾನಾಂ ಆದಿತ್ಸೋಃ = ದೇಹಧಾರಣೆಗಾಗಿ ಅನ್ನಪಾನಗಳನ್ನು ಸ್ವೀಕಾರ ಮಾಡಲಿಚ್ಛಿಸಿದ ಬ್ರಹ್ಮದೇವರಿಗೆ; ಅಸೃಕ್ = ರಕ್ತವಾಹಿನಿಗಳ; ಮತ್ತು ಕುಕ್ಷ್ಯಂತ್ರ = ಉದರ ಪ್ರದೇಶಕ್ಕೆ ಸಂಬಂಧಿಸಿದ; ನಾಡಿಕಾಃ = ನರಗಳು ಉಂಟಾದವು; ನದ್ಯಾಃ = ನದಿಗಳ ಅಭಿಮಾನಿ ದೇವತೆಗಳು; ಚ = ಮತ್ತು; ಸಮುದ್ರಾಃ = ಸಮುದ್ರಾಭಿಮಾನಿ

ವರುಣನೇ ಮೊದಲಾದವರೂ ಉಂಟಾದರು; ತಯೋಃ = ಆ ಎರಡು ಬಗೆಯ ನಾಡಿಗಳಿಂದ; ತೃಪ್ತಿಃ = ಸಂತುಷ್ಟಿಯು; ಪುಷ್ಟಿಃ = ದೇಹ ಬಲವೂ; ಆಗುವುವು.

ಅಭಿಮಾನಿ ದೇವತೆಗಳಿಂದ ಭೌತಿಕ ದೇಹದ ಕಾರ್ಯಗಳು ನಡೆಯುವ ರೀತಿಯು (ವಿಜ್ಞಾನವು) ಬ್ರಹ್ಮದೇವರ ಅವಯವಗಳ ಸೃಷ್ಟಿಯೆಂದು ವಿವರಿಸಲ್ಪಡುತ್ತಿದೆ. ಆಹಾರವನ್ನು ಅರಗಿಸಿಕೊಂಡು ದೇಹದ ಎಲ್ಲಾ ಭಾಗಗಳಿಗೂ ಕೊಂಡೊಯ್ಯುವುದು ರಕ್ತವಾಹಿನಿ ನಾಳಗಳ ಕೆಲಸ. ಅದು ನಡೆಯುವುದು ಅವುಗಳಿಗೆ ಸಂಬಂಧಿಸಿದ ನರಾಂಶಗಳ ದೆಸೆಯಿಂದ. ದೇಹದ ಅವಯವಾಂಶಗಳಿಗೆ ಪುಷ್ಟಿಯನ್ನುಂಟು ಮಾಡುವುದು ಅವುಗಳ ಜೊತೆಯಾಗಿಯೇ ಇರುವ ನರದೆಳೆಗಳ ಕಾರ್ಯ. ರಕ್ತಕಣಗಳ ಪೋಷಕವಾಗಿರುವ ಜಲಾಂಶದಲ್ಲಿ ನದ್ಯಭಿಮಾನಿ ದೇವತೆಗಳೂ, ಆ ಕಣಗಳಿಂದ ಪುಷ್ಟಿಯುಂಟಾಗುವಂತೆ ಮಾಡುವ ನರಗಳಲ್ಲಿನ ದ್ರವಾಂಶದಲ್ಲಿ ಸಮುದ್ರಾಭಿಮಾನಿ ದೇವತೆಗಳೂ ಇದ್ದು ಕಾರ್ಯಗಳನ್ನು ನಡೆಸುವರು.

ಜಡವಸ್ತುಗಳು ಕಾರ್ಯಗಳಿಗೆ ಅನುಕೂಲಿಸುವುವೇ ಹೊರತು ತಾವಾಗಿ ಕ್ರಮವರಿತು ಕೆಲಸ ಮಾಡಲಾರವು. ಅವುಗಳ ಕಾರ್ಯಗಳನ್ನು ಯೋಜಿಸಿ ನಡೆಸಲು ಬುದ್ಧಿಶಕ್ತಿಯುಬೇಕು. ಆ ಶಕ್ತಿಯುಳ್ಳ ದೇವತಾಂಶಗಳು ಜಡಶಕ್ತಿಗಳಿಗೆ ಪ್ರೇರಕಗಳಾಗಿರುವುದನ್ನು ಈಗಿನ ವಿಜ್ಞಾನಿಗಳು ಲಕ್ಷ್ಯಕ್ಕೆ ತಂದು ಕೊಂಡಿರುವುದಿಲ್ಲ. ಆದುದರಿಂದ ಅವರು ಜ್ಞಾನಿಗಳೇ ಹೊರತು ವಿಜ್ಞಾನಿಗಳಲ್ಲ. ಜೀವನದ ರೀತಿನೀತಿಗಳನ್ನೂ ಪ್ರಯೋಜನವನ್ನೂ ತಿಳಿಯಲು ವಿಜ್ಞಾನವು ಅತ್ಯಾವಶ್ಯಕ.

ಉದರಕ್ಕೆ ಸಂಬಂಧಿಸಿದ ನಾಡಿಗಳಿಂದ ೭೨,೦೦೦ ಕವಲುಗಳು ಹೊರಟು ದೇಹದಾದ್ಯಂತ ವ್ಯಾಪಿಸಿರುವುವು. ಈ ಎಲ್ಲಾ ನಾಡಿಗಳ ಮೂಲವಿರುವುದು ಬ್ರಹ್ಮದೇವರ ಮನೆಯಾದ ಸುಷುಮ್ನಾ ನಾಡಿಯಲ್ಲಿ; ನಿಯಂತ್ರಣ ಕೇಂದ್ರವಿರುವುದು ಈಗಿನವರು ಮೆದುಳು ಎಂದು ಕರೆಯುವ ಸಹಸ್ರಾರ ಕಮಲದಲ್ಲಿ. ಈಗಿನವರ ಅದ್ಭುತ ಸಂಶೋಧನೆಗಳನ್ನೂ, ಶಾಸ್ತ್ರಗಳ ಮಾತುಗಳನ್ನೂ ಹೊಂದಿಸಿ ನೋಡಿದಾಗ ನಿಜವಾದ ವಿಜ್ಞಾನವುಂಟಾಗಿ, ಭಗವಂತನ ಮಹಿಮೆಯನ್ನರಿಯಲು ಸಹಾಯ ಒದಗುವುದು.

**ನಿಧಿಧ್ಯಾಸೋರಾತ್ಮಮಾಯಾಂ ಹೃದಯಂ ನಿರಭಿದ್ಯತ ।**
**ತತೋಮನಶ್ಚಂದ್ರ ಇತಿ ಸಂಕಲ್ಪಃ ಕಾಮಏವಚ** ॥ ೩೦ ॥

ಆತ್ಮಮಾಯಾಂ = ಭಗವಂತನ ಸೃಷ್ಟ್ಯಾದಿ ಕ್ರಿಯೆಗಳ ಮಹಿಮೆಗಳನ್ನು; ನಿಧಿ ಧ್ಯಾಸೋಃ = ಧ್ಯಾನದಿಂದ ಭದ್ರಪಡಿಸಿಕೊಳ್ಳಲು ಇಚ್ಛಿಸಿದ ಬ್ರಹ್ಮದೇವರ ಶರೀರದ ನಾಡಿಯಲ್ಲಿ (ಸುಷುಮ್ನೆಯಲ್ಲಿ); ಹೃದಯಂ = ಹೃದಯ ಕಮಲವು; ನಿರಭಿದ್ಯತ =

ಉತ್ಪನ್ನವಾಯಿತು; ತತಃ = ಆ ಕಮಲದ ದೆಸೆಯಿಂದ; ಮನಃ = ಮನಸ್ಸಿನ ಆವಾಸ ಸ್ಥಾನವು; ನಿರಭಿದ್ಯತ = ಕಲ್ಪಿತವಾಯಿತು; ಚಂದ್ರಃ = ಚಂದ್ರನು ಮನೋಭಿಮಾನಿಯೆಂದೂ; ಚ = ಮತ್ತು; ಕಾಮಃ = ಕಾಮದೇವನು; ಸಂಕಲ್ಪಃ ಇತಿ ಏವ = ಮನದಿಚ್ಛೆಗಳಿಗೆ ಪ್ರೇರಕನೆಂದೂ, ವ್ಯವಸ್ಥೆಯಾಯಿತು.

ಅಷ್ಟವಿಧ ಪ್ರಕೃತಿ ಕಾರ್ಯಗಳನ್ನು ನಡೆಸಲು ನೇಮಕವಾಗಿ, ಸುಷುಮ್ನಾ ನಾಡಿಯ ಸುತ್ತಲೂ ಇರುವ ಎಂಟು ನರದೆಳೆಗಳಿಗೆ ಸಂಬಂಧಿಸಿ, ಎದೆಯ ಗೂಡಿನ ನೇರದಲ್ಲಿ ಅಷ್ಟದಳಯುಕ್ತವಾದ ಕಮಲದಾಕಾರವು ನಿರ್ಮಿತವಾಗಿದೆ; ಅದೇ ಹೃದಯ. ಅಲ್ಲಿಯೇ ಮನಸ್ಸಿನ ವ್ಯಾಪಾರಗಳು. ಕಾಮದೇವನು ಬಾಹ್ಯ ವಸ್ತುಗಳ ಕಡೆಗೆ ಮನಸ್ಸನ್ನು ಸೆಳೆದು ಮನೋವೃತ್ತಿಗಳನ್ನು ಕಲ್ಪಿಸುವನು. ಚಂದ್ರನು ಮನಸ್ಸನ್ನು ಪ್ರಶಾಂತಗೊಳಿಸಿ ಭಗವಂತನ ಧ್ಯಾನಧಾರಣೆಗಳಿಗೆ ಸಹಾಯಕನಾಗಿರುವನು. ಮನೋವ್ಯಾಪಾರಗಳ ಯಜಮಾನ್ಯ ಹೊಂದಿರುವವನು ಇಂದ್ರದೇವ.

ಸೃಷ್ಟಿಯ ಆರಂಭದಲ್ಲಿಯೇ ಬ್ರಹ್ಮದೇವರಿಗೆ ಮಹತ್ತತ್ತ್ವಾತ್ಮಕ ಶರೀರವ ನಿರ್ಮಾಣವಾಯಿತು. ಆ ಶರೀರವನ್ನು ಧರಿಸಿಯೇ ಅವರು ಜಲಶಾಯಿಯ ನಾಭೀ ಕಮಲದಲ್ಲಿ ಕಾಣಿಸಿಕೊಂಡರು. ಆ ತತ್ವದಿಂದಲೇ ಆದ ದೇಹದ ಅವಯವಗಳ ಶಕ್ತಿಗಳೆಲ್ಲವೂ ಅವರಲ್ಲಿದ್ದುದರಿಂದಲೇ ಅವರು ಭಗವಂತನ ಧ್ಯಾನ ಮಾಡಿ ಸೃಷ್ಟಿಯ ರಹಸ್ಯಗಳನ್ನು ಕೇಳಿ ತಿಳಿದರು. ಈಗ ಸೃಷ್ಟಿ ಮಾಡುತ್ತಿರುವುದು ಮಹತ್ತತ್ತ್ವದ ಅವರ ಸ್ಥೂಲತರ ಶರೀರ. ಅದರಿಂದಲೇ ವಿಶ್ವದ ಎಲ್ಲಾ ಪ್ರಾಣಿಗಳ ಶರೀರಗಳಲ್ಲಿಯೂ ಅವರ ಆವಾಸ. ಈ ಸಮಯದಲ್ಲಿ ಇತರ ದೇವತಾ ಶರೀರಗಳ ಸೃಷ್ಟಿ ಇನ್ನೂ ಆಗಿಲ್ಲವಾದುದರಿಂದ, ಆಯಾ ದೇವತೆಗಳ ಹೆಸರಿನಲ್ಲಿ ಬ್ರಹ್ಮವಾಯುಗಳ ಅಂತರ್ಯಾಮಿಯಾದ ಭಗವಂತನೇ ಇರುವನೆಂದು ತಿಳಿಯಬೇಕು.

**ತ್ವಕ್ ಚರ್ಮಮಾಂಸರುಧಿರ ಮೇದೋಮಜ್ಜಾಸ್ಥಿಧಾತವಃ ।**
**ಭೂಮ್ಯಪ್ತೇಜೋಮಯಾಃ ಸಪ್ತ ಪ್ರಾಣೋವ್ಯೋಮಾಂಬು**
**ವಾಯುಭಿಃ ॥ ೩೧ ॥**

ತ್ವಕ್, ಚರ್ಮ, ಮಾಂಸ, ರುಧಿರ (ರಕ್ತ), ಮೇದಸ್, ಮಜ್ಜಾ (ನರಾಂಶ), ಅಸ್ಥಿ (ಮೂಳೆ) ಎಂಬ; ಧಾತವಃ ಸಪ್ತ = ಶರೀರದ ಆಕಾರ ವ್ಯಾಪಾರಗಳಿಗೆ ಆವಶ್ಯಕವಾದ ಸಪ್ತಧಾತುಗಳು; ಭೂಮ್ಯಪ್ತೇಜೋಮಯಾಃ = ಭೂ, ಸಲಿಲ, ತೇಜಸ್ಸುಗಳೆಂಬ ಭೌತವಸ್ತುಗಳಿಂದ ಆದುವು; ವ್ಯೋಮ, ಅಂಬು, ವಾಯುಭಿಃ = ಆಕಾಶ, ನೀರು,

ವಾಯುಗಳೆಂಬ ಭೌತ ವಸ್ತುಗಳಿಂದ; ಪ್ರಾಣಃ= ಮುಖ್ಯಪ್ರಾಣನ ಅಧೀನವಾದ ಜಡವಾಯುವು ಉಂಟಾಯಿತು.

ಜಡವಾಯುವಿನಲ್ಲಿ ಆಕಾಶ ತತ್ವ, ಜಲತತ್ವ, ವಾಯುತತ್ವಗಳು ಕೂಡಿಕೊಂಡಿರುವುವೆಂದೂ, ಸಪ್ತಧಾತುಗಳಲ್ಲಿ ಇವುಗಳಿದ್ದರೂ ಅವುಗಳಲ್ಲಿ ಭೂಮಿ, ನೀರು ಮತ್ತು ತೇಜಸ್ಸಿನ ಅಂಶಗಳು ಪ್ರಧಾನವೆಂದೂ ತಿಳಿಯಬೇಕು.

**ಗುಣಾತ್ಮಕಾನೀಂದ್ರಿಯಾಣಿ ಭೂತಾದಿ ಪ್ರಭವಾಗುಣಾಃ ।**
**ಮನಃಸರ್ವವಿಕಾರಾತ್ಮಾ ಬುದ್ಧಿರ್ವಿಜ್ಞಾನರೂಪಿಣೀ ॥ ೩೨ ॥**

ಇಂದ್ರಿಯಾಣಿ = ದೇಹದ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು; ಗುಣಾತ್ಮಕಾನಿ = ಭೌತವಸ್ತುಗಳಿಂದ ನಿರ್ಮಿತವಾದವು; ಗುಣಾಃ = ಆ ಭೌತವಸ್ತುಗಳು; ಭೂತ ಆದಿ ಪ್ರಭವಾಃ = ಸತ್ವರಜಸ್ತಮೋ ಗುಣಗಳ ಮಿಶ್ರಣಗಳಿಂದ ಆದುವು; ಮನಃ = ಮನಸ್ಸು; ಸರ್ವವಿಕಾರ ಆತ್ಮಾ = ಎಲ್ಲಾ ಇಂದ್ರಿಯಗಳ ಮತ್ತು ಭಾವನೆಗಳ ರೂಪ ರೂಪಾಂತರಗಳನ್ನು ಹೊಂದುವಂತಹ ಇಂದ್ರಿಯವಾಗಿದೆ; ಬುದ್ಧಿಃ = ನಿಶ್ಚಯಾತ್ಮಕ ಬುದ್ಧಿಯು; ವಿಜ್ಞಾನ ರೂಪಿಣೀ = ವಿಜ್ಞಾನ ತತ್ವಮಯವಾಗಿದೆ.

ಮನಸ್ಸೆಂಬ ಹನ್ನೊಂದನೆಯ ಇಂದ್ರಿಯವು ಬಾಹ್ಯದಶೇಂದ್ರಿಯಗಳ ಕೇಂದ್ರವಾಗಿಯೂ, ನಿಶ್ಚಯಾತ್ಮಕ ಬುದ್ಧಿಯ ವಶವಾಗಿಯೂ ಇರುವ ಅತಿ ಮುಖ್ಯವಾದ ಇಂದ್ರಿಯವು. ಮಹತ್ತತ್ವದ ರೂಪಾಂತರ, ವಿಜ್ಞಾನ ತತ್ವ. ಅದರ ಯಜಮಾನರು ಮುಖ್ಯಪ್ರಾಣರು. ಅಲ್ಲಿಂದ ಮುಂದೆ ಸೃಷ್ಟವಾದ ಅಹಂಕಾರ ತತ್ವ ವಿಶೇಷದಿಂದ ಮನಸ್ಸಿನ ಸೃಷ್ಟಿ.

**ಏತದ್ಭಗವತೋರೂಪಂ ಸ್ಥೂಲಂ ತೇ ವ್ಯಾಹೃತಂ ಮಯಾ ।**
**ಮಹ್ಯಾದಿಭಿಶ್ಚಾವರಣೈರಷ್ಟಭಿರ್ಬಹಿರಾವೃತಂ ॥ ೩೩ ॥**

ಏತತ್= ಇದುವರೆಗೆ ಹೇಳಿದುದು; ಭಗವತಃ= ಭಗವಂತನಿಗೆ ಪ್ರತಿಮಾ ರೂಪವಾದ; ಸ್ಥೂಲಂ ರೂಪಂ = ಬ್ರಹ್ಮನ ಸ್ಥೂಲಶರೀರವೆಂಬ ರೂಪವು; ಮಯಾ = ನನ್ನಿಂದ; ತೇ = ನಿನಗೆ; ವ್ಯಾಹೃತಂ = ವಿವರಿಸಲ್ಪಟ್ಟಿತು; (ಇದು ಶುಕಾಚಾರ್ಯರ ಮಾತು); ಈ ಸ್ಥೂಲವೆನ್ನಬಹುದಾದ ಅತಿಸೂಕ್ಷ್ಮಶರೀರವು; ಮಹದಾದಿಭಿಃ = ಮಹತ್ತತ್ವವೇ ಮೊದಲಾದ; ಅಷ್ಟಭಿಃ ಆವರಣೈಃ ಚ = ಎಂಟು ಆವರಣಗಳಿಂದ; ಬಹಿಃ = ಹೊರ ಹೊರಗೆ; ಆವೃತಂ = ಆವರಿಸಲ್ಪಟ್ಟಿದೆ.

ಪಂಚಭೂತಗಳು, ಅಹಂಕಾರ ತತ್ತ್ವ, ಮಹತ್ತತ್ತ್ವ ಮತ್ತು ಅವ್ಯಕ್ತ ಅಥವ ಗುಣತ್ರಯಾತ್ಮಕವೆಂಬ ಎಂಟು ಆವರಣಗಳನ್ನುಳ್ಳದು ಬ್ರಹ್ಮದೇವರ ಸ್ಥೂಲ ಶರೀರ.

**ಅತಃ ಪರಂ ಸೂಕ್ಷ್ಮತಮಮವ್ಯಕ್ತಂ ನಿರ್ವಿಶೇಷಣಂ ।**
**ಅನಾದಿ ಮಧ್ಯ ನಿಧನಂ ನಿತ್ಯಂ ವಾಙ್ಮನಸೋಃಪರಂ ॥ ೩೪ ॥**

ಅತಃ ಪರಂ = ಈಗ ವರ್ಣಿಸಿದ ಸ್ಥೂಲರೂಪಕ್ಕಿಂತ ಬೇರೆಯಾದುದು; ಸೂಕ್ಷ್ಮತಮಂ = ಅತ್ಯಂತ ಸೂಕ್ಷ್ಮವಾದ ಭೌತಾಣುವಿಗಿಂತ ಹೆಚ್ಚು ಸೂಕ್ಷ್ಮವಾದುದು (ಅಣೋರಣೀಯಾನ್); ಅವ್ಯಕ್ತಂ = ಭೌತದೃಷ್ಟಿಗೆ ಕಾಣಿಸದಿರುವುದು; ನಿರ್ವಿಶೇಷಣಂ = ಭೌತಲಕ್ಷಣರಹಿತವಾದುದು; ಅನಾದಿ ಮಧ್ಯ ನಿಧನಂ = ಆದಿ, ಮಧ್ಯ, ಅಂತ್ಯಗಳಿಲ್ಲದಿರುವುದು; ನಿತ್ಯಂ = ಏಕ ಪ್ರಕಾರವಾಗಿರುವುದು; ವಾಙ್ಮನಸೋಃ ಪರಂ = ಮಾತುಗಳಿಗೂ, ಮನಶ್ಶಕ್ತಿಗೂ ನಿಲುಕದಿರುವುದು (ಮಹತೋ ಮಹೀಯಾನ್).

ಇದು ಭಗವಂತನ ನಿಜರೂಪ; ಬ್ರಹ್ಮದೇವರ ಶರೀರದಲ್ಲಿ ಮೂಡಿರುವುದು ಬ್ರಹ್ಮದೇವರ ಲಕ್ಷಣಗಳನ್ನು ವ್ಯಕ್ತ ಪಡಿಸುವ ಬಿಂಬರೂಪ. ಆ ಭಗವಂತ, ತನ್ನ ಪ್ರಸಾದ ಮಾತ್ರದಿಂದ ಬ್ರಹ್ಮದೇವರಿಗೆ ವಿರಾಡ್ರೂಪದಿಂದಲೂ ಇತರರಿಗೆ ಶಂಖಚಕ್ರಾದಿಗಳನ್ನು ಧರಿಸಿದ, ಅವರವರಿಗೆ ಯೋಗ್ಯವಾದ ಬಿಂಬರೂಪಗಳಿಂದಲೂ ಕಾಣಿಸಿಕೊಳ್ಳುವನು. ಜಡವಸ್ತುಗಳಿಗೂ ಅವುಗಳ ಗುಣಗಳಿಗೂ ವಿಶೇಷ್ಯ ವಿಶೇಷಣ ಭಾವವುಂಟು. ಭಗವಂತನಿಗೂ ಅವನ ಗುಣಗಳಿಗೂ ಯಾವ ವ್ಯತ್ಯಾಸವೂ ಇಲ್ಲದಿರುವುದರಿಂದ ಅವನನ್ನು 'ನಿರ್ವಿಶೇಷಣ' ಎಂದಿರುವರು. ಆದರೂ ಭಗವಂತನ ಅನಂತ ಕಲ್ಯಾಣ ಗುಣಗಳನ್ನು ಕುರಿತು ವಿವೇಚಿಸುವಾಗ ಆ ಭಗವತ್ಸ್ವರೂಪ ಸಾಮರ್ಥ್ಯವೇ ಅದ 'ವಿಶೇಷ'ವೆಂಬುದನ್ನು ಗ್ರಹಿಸಬೇಕೆಂದು ಶ್ರೀಮನ್ಮಧ್ವಾಚಾರ್ಯರು ತಿಳಿಸಿಕೊಟ್ಟಿರುವರು ಅದು ಭಿನ್ನತೆಯ ಜಡ ವಿಶೇಷಣವಲ್ಲ; ಸ್ವರೂಪವೇ ಆದ 'ವಿಶೇಷ'.

**ಅಮುನೀ ಭಗವದ್ರೂಪೇ ಮಯಾತೇಹ್ಯನು ವರ್ಣಿತೇ ।**
**ಉಭೇ ಅಪಿನಗೃಹ್ಣಂತಿ ಮಾಯಾ ಸೃಷ್ಟೇವಿಪಶ್ಚಿತಃ ॥ ೩೫ ॥**

ಅಮುನೀ ಭಗವದ್ರೂಪೇ = ಭಗವಂತನ ಸೂಕ್ಷ್ಮ, ಸ್ಥೂಲಗಳೆಂಬ ಈ ಎರಡು ಬಗೆಯ ರೂಪಗಳು; ಮಯಾ = ನನ್ನಿಂದ; ತೇ = ನಿನ್ನ ಸಲುವಾಗಿ; ಅನುವರ್ಣಿತೇ = ಕ್ರಮವಾಗಿ ವಿವರಿಸಲ್ಪಟ್ಟವು; ಮಾಯಾ ಸೃಷ್ಟೇ = ಭಗವಂತನ ಅದ್ಭುತ ಶಕ್ತಿಯಿಂದ

ನಿರ್ಮಿತವಾದ ಈ ಜಗತ್ತಿನಲ್ಲಿ; ಅವಿಪಶ್ಚಿತಃ = ಜ್ಞಾನಶೂನ್ಯರಾದವರು; ಉಭೇ ಅಪಿ = ಈ ಎರಡು ರೂಪಗಳ ವಿಚಾರವನ್ನೂ; ನಗ್ರಹ್ಣಂತಿ = ಮನಸ್ಸಿಗೆ ತಂದುಕೊಳ್ಳಲಾರರು.

ಜಡಬುದ್ಧಿಯವರಿಗೆ ಜಗತ್ತಿನಲ್ಲಿ ಕಾಣುವುದು ಕೇವಲ ಜಡರೂಪಗಳು. ಜ್ಞಾನಿಗಳಾದವರು ಭಗವಂತನ ಬ್ರಹ್ಮಾಂತರ್ಗತ ಬಿಂಬರೂಪವನ್ನೂ, ಅದನ್ನೂ ಮೀರಿದ ಅವ್ಯಕ್ತರೂಪವನ್ನು ಕುರಿತು ಅವರವರ ಯೋಗ್ಯತಾನುಸಾರ ಚಿಂತಿಸಿ ಧನ್ಯರಾಗುವರು.

**ಸವಾಚ್ಯವಾಚಕತಯಾ ಭಗವಾನ್ ಬ್ರಹ್ಮರೂಪಧೃಕ್ ।**
**ನಾಮರೂಪಕ್ರಿಯಾಧತ್ತೇ ಸಕರ್ಮಾಕರ್ಮಕಃ ಪರಃ ॥ ೩೬ ॥**

ಸಃ ಭಗವಾನ್ = ಭಗವಂತನು; ವಾಚ್ಯವಾಚಕತಯಾ = ಹೆಸರಿಸಲ್ಪಡುವುದರಿಂದಲೂ, ಕ್ರಿಯಾ ವಿಶೇಷಗಳ ವಿವರಗಳಿಗೆ ಆಶ್ರಯನಾಗಿರುವುದರಿಂದಲೂ; ಬ್ರಹ್ಮರೂಪಧೃಕ್ = ಬ್ರಹ್ಮಶಬ್ದವಾಚ್ಯವಾದ ಅಂತರ್ಬಹಿರ್ವ್ಯಾಪ್ತ ರೂಪವುಳ್ಳವನು; ನಾಮ ರೂಪಕ್ರಿಯಾಃ = ಬಗೆ ಬಗೆಯ ನಾಮ, ರೂಪ, ಕ್ರಿಯೆಗಳನ್ನು; ಧತ್ತೇ = ತನ್ನಲ್ಲಿ ಉಳ್ಳವನಾಗಿದ್ದಾನೆ; ಅವನು; ಸಕರ್ಮಾ = ಕಾರ್ಯಗಳಲ್ಲಿ ನಿರತನಾದವನು; ಅಕರ್ಮಾ = ಕರ್ಮಗಳಲ್ಲಿ ಸ್ವಪ್ರಯೋಜನಾಪೇಕ್ಷೆ ಇಲ್ಲದವನು; ಪರಃ = ಸರ್ವೋತ್ತಮನಾದವನು.

ಭಗವಂತನನ್ನು ಸರ್ವೋತ್ತಮನೆಂದಾಗ ಅವನಿಗಿಂತ ಅವರರೂ ಅಧೀನರೂ ಆದವರು ಇರುವರೆಂಬುದು ಸಿದ್ಧವಾಯಿತು. ಸ್ವಪ್ರಯೋಜನ ರಹಿತನಾಗಿ ಕೆಲಸ ಮಾಡುವುದೆಂದರೆ, ಅವರರೂ ಅಧೀನರೂ ಆದ ಜೀವರು ಅಸ್ವತಂತ್ರರೆಂದ ಹಾಗಾಯಿತು. ಅವರ ನಾಮರೂಪಕ್ರಿಯೆಗಳನ್ನು ಭಗವಂತನು ಧರಿಸಿ, ಬಿಂಬನಾಗಿ ವರ್ತಿಸಿದರೆ ಮಾತ್ರ ಜೀವರಿಗೆ ಪ್ರಯೋಜನವಾಗುವುದು; ಇಲ್ಲದಿದ್ದರೆ ಇಲ್ಲ. ಇದರಂತೆ ಜೀವರಿಗೆ ಸಾಧನ ಭೂಮಿಯಾದ ವಿಶ್ವದ ನಾಮರೂಪಕ್ರಿಯೆಗಳೂ ಅವನಿಂದಲೇ ನಡೆಯಬೇಕು. ಆದುದರಿಂದ ಸತ್ಯವಸ್ತುವಾದ ಬ್ರಹ್ಮನಿಗೆ ಪ್ರತಿಬಿಂಬಸ್ಥಾನವಾದ ಜಗತ್ತೂ ಸತ್ಯವೆಂದ ಹಾಗಾಯಿತು. ಅದು ನಿತ್ಯವಲ್ಲದಿರಬಹುದು; ಆದರೆ ವಸ್ತುತಃ ಸತ್ಯ. ಬ್ರಹ್ಮನ ನಾಮರೂಪಕ್ರಿಯೆಗಳು ಕೇವಲ ವಿಡಂಬನೆಯೇ ಹೊರತು ಸತ್ಯವಲ್ಲ ಎನ್ನುವುದಾದರೆ, ಜಗತ್ತಿನಲ್ಲಿ ಪ್ರಚಲಿತವಾಗಿ, ಜಗದ್ವಿಷಯವನ್ನೂ ಭಗವಂತನ ವಿಷಯವನ್ನೂ ತಿಳಿಸುವ ವೇದವಾಕ್ಯಗಳೂ ವಿಡಂಬನೆಯಾಗಿ, 'ಬ್ರಹ್ಮಸತ್ಯ' ಎಂಬ ಮಾತು ಅಸತ್ಯವಾಗಬೇಕಾಗುವುದು. ಆದುದರಿಂದ ಮಾಯಾವಾದವೆಂದು ಪ್ರಸಿದ್ಧವಾಗಿರುವುದು ಅಪಸಿದ್ಧಾಂತ.

ಪ್ರಜಾಪತೀನ್ಮನೂನ್ದೇವಾನೃಷೀನ್ಪಿತೃಗಣಾನ್ಪೃಥಕ್ ।
ಸಿದ್ಧಚಾರಣಗಂಧರ್ವಾನ್ವಿದ್ಯಾಧ್ರಾನ್ಸುರಗುಹ್ಯಕಾನ್ || ೩೭ ||

ಕಿಂನ್ನರಾಪ್ಸರಸೋ ನಾಗಾನ್ಸರ್ಪಾನ್ಕಿಂಪುರುಷಾನಪಿ ।
ಮಾತೃರಕ್ಷಃ ಪಿಶಾಚಾಂಶ್ಚ ಪ್ರೇತಭೂತವಿನಾಯಕಾನ್ || ೩೮ ||

ಕೂಷ್ಮಾಂಡೋನ್ಮಾದವೇತಾಲಾನ್ಯಾತುಧಾನಾನ್ಗ್ರಹಾನಪಿ ।
ಖಗಾನ್ ಮೃಗಾನ್ ಪಶೂನ್ ವೃಕ್ಷಾನ್
ಗಿರೀನ್ನೃಪಸರೀಸೃಪಾನ್ || ೩೯ ||

ಪ್ರಜಾಪತಿಗಳು ಇತ್ಯಾದಿಯಾಗಿ ಮುಂದೆ ಹೇಳುವ ಎಲ್ಲಾ ನಾಮರೂಪಗಳನ್ನೂ ಧರಿಸಿ ಭಗವಂತನು ಅವರವರ ಕಾರ್ಯಗಳನ್ನು ಸ್ವತಂತ್ರನಾಗಿ ಮಾಡುವುದರಿಂದ ಅಸ್ವತಂತ್ರರಾದ ಅವರಿಗೆ ನಾಮರೂಪಕ್ರಿಯೆಗಳ ಅನುಭವ ಉಂಟಾಗಿ, ಅವರು ತಮ್ಮ ಅನಾದಿಕಾಲದ ಅಜ್ಞಾನಾವರಕದಿಂದ ಬಿಡುಗಡೆ ಹೊಂದಿ ಸ್ವರೂಪಸ್ಥಿತಿಗಳನ್ನು ಹೊಂದಿ ವಿಹರಿಸುವರು. ಇದಕ್ಕಾಗಿ ಪ್ರಪಂಚದ ಸೃಷ್ಟಿ. ಅದು ಸ್ವತಂತ್ರನಾದ ಭಗವಂತನ ವ್ಯಾಪಾರ; ಫಲಿಸಿಗುವುದು ಜೀವರಿಗೆ.

ಸೃಷ್ಟಿಯಲ್ಲಿ ಬರುವ ಜೀವರ ನಾಮರೂಪಗಳು— ೧. ಪ್ರಜಾಪತಿಗಳು, ಮನುಗಳು, ದೇವತೆಗಳು, ೨. ಋಷಿಗಣ– ಸಿದ್ಧರು, ಚಾರಣರು, ಗಂಧರ್ವರು, ವಿದ್ಯಾಧರರು, ೩. ಸುರರು, ಗುಹ್ಯಕರು, ೪. ಕಿಂನ್ನರರು, ಅಪ್ಸರರು, ನಾಗಗಳು, ೬. ಸರ್ಪಗಳು, ೭. ಕಿಂಪುರುಷರು, ೮. ಮಾತೃಗಣದವರು, ರಕ್ಷೋಗಣದವರು, ಪಿಶಾಚಗಳು, ಪ್ರೇತಗಳು, ಭೂತಗಳು, ೯. ವಿನಾಯಕರು, ಕೂಷ್ಮಾಂಡರು, ಉನ್ಮಾದರು, ಭೇತಾಳರು, ೧೦. ಯಾತುಧಾನರು, ೧೧. ಗ್ರಹದೇವತೆಗಳು, ಪಕ್ಷಿಗಳು, ಮೃಗಗಳು, ೧೨. ವೃಕ್ಷಗಳು, ೧೩. ಪರ್ವತಗಳು ೧೪. ಸರೀಸೃಪಗಳು ಇತ್ಯಾದಿ; ನೃಪ= ಎಲೈ ಪರೀಕ್ಷಿದ್ರಾಜಾ, ಗಮನಿಸಿ ಕೇಳು–

೧. ದಕ್ಷಪ್ರಜಾಪತಿ ಮೊದಲಾದವರು, ೨. ಋಷಿಗಳಲ್ಲಿ ದೇವರ್ಷಿಗಳು, ಮಹರ್ಷಿಗಳು, ಋಷಿಗಳು ಎಂಬ ಭೇದಗಳು. ೩. ಸಾಮಾನ್ಯ ದೇವತೆಗಳು. ೪. ಮೃಗ ಮಾನವರು ಅರ್ಧ ಮೃಗ ಅರ್ಧ ಮಾನವ ಗ್ರೀಕ್ ದೇವತೆಗಳಂತೆ. ೫. ಹೆಡೆಗಳುಳ್ಳ ಹಾವುಗಳು. ೬. ಹೆಡೆಗಳಿಲ್ಲದ ಹಾವುಗಳು. ೭. ಮಾನವ ಸದೃಶ ಮೃಗಗಳು (ಕಪಿಗಳು) ೮. ಅದಿತೀದೇವಿ ಮೊದಲಾದವರು. ೯. ಆಡ್ಡಿಗಳನ್ನೊಡ್ಡುವ ಗಣದವರು. ೧೦. ರಾಕ್ಷಸರಲ್ಲಿ ವಿಭೇದ. ೧೧. ಇವರು ಹದಿನೆಂಟು ಮಂದಿ.... (ಇವರಲ್ಲಿ ಭೂಲೋಕದ ಮೇಲೆ ಪರಿಣಾಮ ಬೀರುವವರು ನವಗ್ರಹಗಳು; ಆದುದರಿಂದ 'ಪ್ಲೂಟೋ' 'ನೆಪ್ಚ್ಯೂನ್

ಮೊದಲಾದವು ಜ್ಯೋತಿಶ್ಶಾಸ್ತ್ರದಲ್ಲಿ ಗಣನೆಗೆ ಬರುವುದಿಲ್ಲ.) ಗ್ರಹಗಳು ಹನ್ನೆರಡು ಎಂದು ಶ್ರೀಮನ್ ಮಧ್ವಾಚಾರ್ಯರು ಬ್ರಹ್ಮಸೂತ್ರ ಭಾಷ್ಯದಲ್ಲಿ ಹೇಳಿದ್ದಾರೆ. ಯೂರನಸ್ ಪ್ಲೂಟೋ ನೆಪ್ಚೂನ ಗಳು ಪ್ರಾಚೀನರ ಗಮನಕ್ಕೆ ಬಾರದೆ ಇದ್ದವುಗಳಲ್ಲ. ೧೨. ವೃಕ್ಷದೇಹ ಹೊಂದಿದ ಜೀವರು. ೧೩. ಪರ್ವತಗಳಿಗೆ ಅಭಿಮಾನಿಗಳಾದ ಚೇತನರು. ೧೪. ಹರಿದಾಡುವ ಪ್ರಾಣಿಗಳು ಇತ್ಯಾದಿ.

**ದ್ವಿವಿಧಾ ಚತುರ್ವಿಧಾಶ್ಚಾನ್ಯೇ ಜಲಸ್ಥಲ ನಭೌಕಸಃ ।**
**ಕುಶಲಾಕುಶಲ ಮಿಶ್ರಾಣಾಂ ಕರ್ಮಣಾಂಗತಯೋಸ್ತ್ವಿಮಾಃ ॥ ೪೦ ॥**

ದ್ವಿವಿಧಾಃ = ಈ ಲೋಕದಲ್ಲಿ ಕಂಡುಬರುವ ಜೀವಿಗಳು ಸ್ಥಾವರ, ಜಂಗಮ ಎಂದು ಎರಡು ವಿಧವಾಗಿರುವರು; ಅನ್ಯೇ = ಇನ್ನೊಂದು ಬಗೆ ವಿಂಗಡಿಸಿದಾಗ; ಚತುರ್ವಿಧಾಃ = ಸ್ವೇದಜ, ಉದ್ಭಿಜ್ಯ, ಅಂಡಜ, ಜರಾಯುಜ ಎಂದು ನಾಲ್ಕು ಬಗೆಯಾಗಿದ್ದಾರೆ, ಜಲಸ್ಥಲ ನಭೌಕಸಃ = ಜಲಚರಗಳು, ಭೂಚರರು, ಗಗನಚರರು ಎಂತಲೂ ನಾನಾ ಬಗೆಗಳುಳ್ಳವರಾಗಿದ್ದಾರೆ; ಇಮಾಃ = ಈ ಜೀವಜಾತಿಗಳು; ಕುಶಲ, ಅಕುಶಲ, ಮಿಶ್ರಾಣಾಂ ಕರ್ಮಣಾಂ = ಪುಣ್ಯಫಲಪ್ರದಗಳು, ಪಾಪಫಲಪ್ರದಗಳು ಮತ್ತು ಮಿಶ್ರಫಲಪ್ರದಗಳು, ಅಥವಾ ಜ್ಞಾನಪೂರ್ವಕ ಮಾಡುವ ಕರ್ಮಗಳು, ಅಜ್ಞಾನದಿಂದಾಚರಿಸುವ ಕರ್ಮಗಳು ಮತ್ತು ಮಿಶ್ರಜ್ಞಾನದ ಕರ್ಮಗಳು ಎಂಬ ಕರ್ಮಗತಿಗಳಿಗೆ ಅನುಸಾರವಾಗಿ ಬಂದಿರತಕ್ಕ; ಗತಯಃ = ವಿಧಾನಗಳು.

ಜಾತಿಗಳೆಂದಾಗ ಬ್ರಾಹ್ಮಣಾದಿ ಚತುರ್ವರ್ಣಗಳೆಂದು ಮಾತ್ರ ತಿಳಿಯಬಾರದು, ಈ ಶ್ಲೋಕದಲ್ಲಿ ಸೂಚಿಸಿದ ಎಲ್ಲಾ ಬಗೆಯ ಜೀವಜಾತಿಗಳನ್ನೂ ಗಮನಕ್ಕೆ ತಂದುಕೊಳ್ಳಬೇಕು. ಜೀವರು ಹುಟ್ಟಬೇಕಾದ ಜಾತಿಗಳನ್ನು ತಾವಾಗಿ ಆರಿಸಿಕೊಂಡು ಬರುವುದಿಲ್ಲ. ಯಾವ ಯಾವ ಜಾತಿಯಲ್ಲಿ ಜನ್ಮ ಪಡೆದು ನಡೆದರೆ ಜ್ಞಾನಾಭಿವೃದ್ಧಿಯಾಗುತ್ತಾ ಹೋಗುವುದೋ ಆಯಾ ಜಾತಿಗಳಲ್ಲಿ, ಆಯಾ ಕಾಲಗಳಲ್ಲಿ ಭಗವಂತನೇ ಜನ್ಮ ಕೊಡುತ್ತಾನೆ. ತದನುಸಾರ ನಡೆದರೆ ಉತ್ತಮ ಸಂಸ್ಕಾರದಿಂದ ಮುನ್ನಡೆ; ತಪ್ಪಿನಡೆದರೆ ದುಷ್ಟ ಸಂಸ್ಕಾರದಿಂದ ಮತ್ತೆ ಹೀನ ಜಾತಿಗಳಲ್ಲಿ ಜನ್ಮವನ್ನು ಪಡೆಯಬೇಕಾಗುವುದು. ಕುಶಲ ಕರ್ಮದಿಂದ (ಭಗವಂತನ ಸಂಕಲ್ಪಾನುಸಾರ ನಡೆಯುವುದರಿಂದ ಮುನ್ನಡೆ); ಅಕುಶಲ ಕರ್ಮದಿಂದ ಜಾರಿಬೀಳುವಿಕೆ ಮಿಶ್ರಕರ್ಮಗಳಿಂದ ಮತ್ತೆ ಮತ್ತೆ ಅಲ್ಪಸ್ವಲ್ಪ ವ್ಯತ್ಯಾಸಗಳಿಂದ ಹಿಂದಿನಂತಯೇ ಹುಟ್ಟಿ ತೊಳಲಬೇಕಾಗುವುದು. ಉದಾಹರಣೆಗೆ– ಬ್ರಾಹ್ಮಣ ಜನ್ಮ ಬಂದಾಗ ಹೀನ ಕರ್ಮಗಳನ್ನಾಚರಿಸಿದರೆ, ಕರ್ಮಾನುಸಾರ ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಗಳಲ್ಲಿ ಜನ್ಮ ಉಂಟಾಗುವುದು. ಶೂದ್ರರು ತಮ್ಮ ವೃತ್ತಿಗಳನ್ನು ಶ್ರದ್ಧೆಯಿಂದ ಆಚರಿಸಿದರೆ

ಶ್ರದ್ಧೆಗನುಸಾರವಾಗಿ ಬ್ರಾಹ್ಮಣಾದಿ ಜಾತಿಗಳು ಬರುವುವು. ದೇವತಾ ಜೀವರೂ ಕೂಡ ತಮ್ಮ ತಮ್ಮ ದೇವತ್ವವನ್ನು ಪೂರ್ಣವಾಗಿ ಪಡೆಯಬೇಕಾದರೆ, ೭೪ ಲಕ್ಷ ಜೀವಜಾತಿಗಳಲ್ಲಿ ಮತ್ತೆ ಮತ್ತೆ ಹುಟ್ಟಿ, ಜ್ಞಾನಾಭಿವೃದ್ಧಿಯಿಂದ ತೇರ್ಗಡೆಯಾಗಬೇಕು. ಇದನ್ನು ಕುರಿತೇ ಕನಕದಾಸರು ''ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ, ಬಲ್ಲಿರಾ'' ಎಂದು ಉದ್ಗರಿಸಿರುವುದು.

ತಾತ್ಕಾಲಿಕ ಜಾತಿಗಳಿಂದ ಜೀವರ ಸ್ವರೂಪ ಜಾತಿಗಳನ್ನು ತಿಳಿಯುವುದು ಜ್ಞಾನಿವರೇಣ್ಯರಿಗೆ ಮಾತ್ರ ಸಾಧ್ಯ. ಈ ವಿಷಯದಲ್ಲಿಯೂ ಕನಕದಾಸರೇ ಸಾಕ್ಷಿ. ಅವರು ಸ್ವರೂಪತಃ ಅಂಡೇಕುರುಬರಲ್ಲ; ಅವರದು ಮೇಲ್ಮಟ್ಟದ ದೇವ ಜಾತಿ. ಅದನ್ನರಿತ ವ್ಯಾಸಮುನೀಂದ್ರರು ಅವರಿಗೆ ಮೊದಲು ತೀರ್ಥಕೊಟ್ಟು, ಅನಂತರ ಬ್ರಾಹ್ಮಣ ವರ್ಗದವರಿಗೆ ಕೊಡುತ್ತಿದ್ದರು.

ಈ ಮರ್ಮವನ್ನರಿಯದ ಈಗಿನ ಜನ ಜಾತಿಗಳ ವಿಷಯದಲ್ಲಿ ತಪ್ಪು ಕಲ್ಪನೆಗಳ ದೆಸೆಯಿಂದ ಗೊಂದಲವೆಬ್ಬಿಸುತ್ತಿದ್ದಾರೆ. ''ಕಾಲಾಯ ತಸ್ಮೈ ನಮಃ''.

**ಸತ್ವಂ ರಜಸ್ತಮ ಇತಿ ತಿಸ್ರಃ ಸುರನೃನಾರಕಾಃ ।**
**ತತ್ರಾಪ್ಯೇಕೈಕಶೋರಾಜನ್ಭಿದ್ಯಂತೇಗತಯಸ್ತ್ರಿಧಾ ॥ ೪೧ ॥**

ರಾಜನ್= ಪರೀಕ್ಷಿದ್ರಾಜಾ; ಸತ್ವಂ ರಜಃ ತಮಃ ಇತಿ = ಸಾತ್ವಿಕ, ರಾಜಸ, ತಾಮಸಗಳೆಂದು; ಸುರ ನರನಾರಕಾಃ = ದೇವ, ಮಾನವ, ನಾರಕಿಗಳು; ಗತಯಃ = ಗಮ್ಯ ಸ್ಥಾನಗಳು; ತಿಸ್ರಃ = ಮೂರು ಬಗೆಯಾಗಿವೆ; ತತ್ರ ಅಪಿ = ಆ ತ್ರೈವಿಧ್ಯದಲ್ಲಿಯೂ; ಏಕೈಕಶಃ = ಒಂದೊಂದನ್ನೂ ವಿಭಾಗಿಸಿ ವಿಭಾಗಿಸಿ ನೋಡುವುದರಿಂದ; ತ್ರಿಧಾ = ಮೂರು ಮೂರು ವಿಧವಾಗಿ; ಭಿದ್ಯಂತೇ = ವಿಭಾಗಗಳು ಕಂಡು ಬರುತ್ತವೆ.

ತ್ರಿವಿಧರ ಗತಿಗಳು ಎಂಬುದನ್ನು ಇಹಲೋಕದ ಕರ್ಮಗಳ ವಿಚಾರಕ್ಕೆ ಮಾತ್ರ ಅನ್ವಯಿಸಿ ಕೈ ಬಿಡುವುದು ಸರಿಯಲ್ಲ; ಅವು ಜೀವರ ಸ್ವಭಾವಗಳನ್ನೇ ಕುರಿತು ಹೇಳಿರುವುದು. ಏಕೆಂದರೆ, 'ನಾರಕಃ'.ಎಂದರೆ 'ನರಕದಲ್ಲಿ ಬೀಳುವವರಿಗೆ ಯೋಗ್ಯವಾದ' ಎಂಬ ಅರ್ಥವೇ ಹೊರತು, 'ನರಕ'ದ ಎಂದು ಆಗುವುದಿಲ್ಲ. ಅದರಂತೆ 'ದೈವೀ ಸ್ವಭಾವದವರಿಗೆ ಯೋಗ್ಯವಾದ' 'ಮಧ್ಯಮರಾದವರಿಗೆ ಯೋಗ್ಯವಾದ' ಎಂತಲೇ ಅರ್ಥವಾಗುವುದು.

ಈ ಜೀವ ತ್ರೈವಿಧ್ಯದ ವಿಚಾರವನ್ನು ಅದ್ವೈತ, ವಿಶಿಷ್ಟಾದ್ವೈತ ವೇದಾಂತಗಳು ಯಾವ ಕಾರಣದಿಂದಲೋ ಗಮನಿಸದೆ ಬಿಟ್ಟಿದ್ದಾರೆ; ಶ್ರೀಮನ್ಮಧ್ವಾಚಾರ್ಯರು ಎತ್ತಿ ಹೇಳಿದ್ದಾರೆ

ಇದನ್ನು ಕೈಬಿಟ್ಟರೆ, ಪ್ರಪಂಚದಲ್ಲಿ ಕಂಡುಬರುವ ಅನೇಕ ಜಟಿಲ ಸಮಸ್ಯೆಗಳಿಗೆ ಪರಿಹಾರ ಸಿಗದೇ ಹೋಗುವುದು.

ತ್ರೈವಿಧ್ಯ ಮತ್ತು ಅದರ ಉಪವಿಭಾಗಗಳು—

I ಮುಖ್ಯವಾಗಿ (೧) ಸಾತ್ವಿಕರು (೨) ರಾಜಸರು (೩) ತಾಮಸರು
ಭಗವದ್ಗೀತೆಯಂತೆ (ದೈವೀಸಂಪತ್ತಿನವರು) (ಮಧ್ಯಮರು) (ಆಸುರೀಸಂಪತ್ತಿನವರು)

II ಉಪವಿಭಾಗಗಳು– (ಅ) ೧. ಕಲ್ಯಾದಿ ಪ್ರಧಾನ ಅಸುರರು ತಾಮಸ ತಾಮಸರು; ೨. ಅವರ ಭೃತ್ಯರು ತಾಮಸ ರಾಜಸರು; ೩. ಅಪ್ರಸಿದ್ಧರಾದ ಅಸುರರು ತಾಮಸ ಸಾತ್ವಿಕರು; (ಬ) ೧. ಕೇವಲ ಪಾಪಾಚಾರಿಗಳಾದ ಮಾನವರು ತಾಮಸ ರಾಜಸರು; ೨. ಮಿಶ್ರ ಕರ್ಮಚಾರಿಗಳು ರಾಜಸ ರಾಜಸರು; ೩. ಪುಣ್ಯ ಜೀವಿಗಳಾದ ಮಾನವರು ರಾಜಸ ಸಾತ್ವಿಕರು. (ಸ) ೧. ಅಪ್ರಸಿದ್ಧರಾದ ಕೆಳದರ್ಜೆಯ ದೇವತೆಗಳು ಸಾತ್ವಿಕ ತಾಮಸರು; ೨. ಲೋಕದಲ್ಲಿ ಪ್ರಸಿದ್ಧರಾಗಿದ್ದರೂ ತತ್ತ್ವಾಭಿಮಾನಿಗಳಲ್ಲದ ದೇವತೆಗಳು ಸಾತ್ವಿಕ ರಾಜಸರು; ೩. ತತ್ತ್ವಗಳಿಗೆ ಯಜಮಾನರಾದ ದೇವತೆಗಳು ಸಾತ್ವಿಕ ಸಾತ್ವಿಕರು. (ಡ) ಸಾತ್ವಿಕ ಸಾತ್ವಿಕರಲ್ಲಿ ಪ್ರಭೇದಗಳು— ೧. ಗಣಪತಿಯಿಂದ ಇಂದ್ರ ಕಾಮರ ವರೆಗೆ ಉತ್ತಮ ಸಾತ್ವಿಕರು ೨. ಗರುಡ, ಶೇಷ, ರುದ್ರರೂ, ಅವರ ಪತ್ನಿಯರೂ ಪರಮ ಸಾತ್ವಿಕರು. ೩. ಬ್ರಹ್ಮ, ವಾಯುಗಳೂ, ಸರಸ್ವತೀ, ಭಾರತಿಯರೂ ಪರಮ ಸಾತ್ವಿಕ ಸಾತ್ವಿಕ ಶಿಖಾಮಣಿಗಳು. ಈ ಮೂರನೇ ಗುಂಪಿನವರಿಗೆ ಋಜುಗಳೆಂದು ಹೆಸರು. ಅವರ ಭೌತಶರೀರಗಳಲ್ಲಿ ರಜೋಗುಣವು ಅತ್ಯಲ್ಪವಾಗಿಯೂ, ತಮೋಗುಣವು ಕಂಡು ಕಾಣದಂತೆಯೂ ಇದ್ದರೂ ಕೂಡ, ಅವರಿಂದ ಪಾಪಾಚರಣೆ ಎಂಬುದು ನಡೆಯುವುದೇ ಇಲ್ಲ. ಇತರ ತತ್ತ್ವಾಭಿಮಾನಿ ದೇವತೆಗಳು ತಮ್ಮ ತಮ್ಮ ಸ್ಥಾನಗಳಲ್ಲಿ ನಿಷ್ಪಾಪಿಗಳು; ಭೂಲೋಕದಲ್ಲಿ ಸಾಧನೆಗಾಗಿ ಜನ್ಮವೆತ್ತಿ ಬಂದಾಗ ಪಾಪಾಚರಣೆಯುಂಟು. ಋಜುಗಳು ಭೂಲೋಕದಲ್ಲಿ ಜನಿಸಿದಾಗಲೂ ಕೇವಲ ಪುಣ್ಯಜೀವಿಗಳು; ಪಾಪಾಚರಣೆಯು ಇಲ್ಲವೇ ಇಲ್ಲ.

**ಯದೈಕೈಕತಮೋನ್ಯಾಭ್ಯಾಂ ಸ್ವಭಾವ ಉಪಹನ್ಯತೇ ।**
**ತದೈವೇದಂ ಜಗದ್ಧಾತಾ ಭಗವಾನ್ ಧರ್ಮರೂಪ ಧೃಕ್ ॥**
**ಪುಷ್ಣಾತಿ ಸ್ಥಾಪಯನ್ವಿಶ್ವಂ ತಿರ್ಯಙ್ನರಸುರಾತ್ಮಭಿಃ ॥ ೪೨ ॥**

ಯದಾ = ಯಾವ ಕಾಲದಲ್ಲಿ; ಏಕೈಕತಮಃ ಸ್ವಭಾವಃ = ತ್ರೈವಿಧ್ಯದಲ್ಲಿ ಒಂದೊಂದು ಬಗೆಯ ಸ್ವಭಾವವು; ಅನ್ಯಾಭ್ಯಾಂ = ಇತರ ಎರಡು ಬಗೆಯ ಸ್ವಭಾವಗಳಿಂದ; ಉಪಹನ್ಯತೇ = ಪೀಡಿತವಾಗುವುದೋ; ತದಾ ಏವ = ಆ

ಕಾಲದಲ್ಲಿಯೇ; ಜಗದ್ಧಾತಾ = ಜಗತ್ತನ್ನು ಸೃಷ್ಟಿಸಿ ಅದನ್ನು ಧರಿಸಿರುವ; ಭಗವಾನ್= ಸರ್ವಸಮರ್ಥನೂ, ಗುಣಪೂರ್ಣನೂ ಆದ ಸ್ವಾಮಿಯು; ಧರ್ಮರೂಪ ಧೃಕ್= ಧರ್ಮಗಳನ್ನು ಹಿಡಿದು ನಿಲ್ಲಿಸುವ; ತಿರ್ಯಕ್ ನರಸುರಾತ್ಮಭಿಃ = ತನ್ನ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ ರೂಪಗಳಿಂದಲೂ, ರಾಮ, ಕೃಷ್ಣಾದಿ ರೂಪಗಳಿಂದಲೂ, ವಾಮನ, ಪರಶುರಾಮ, ಬುದ್ಧ, ಕಲ್ಕಿ, ಉಪೇಂದ್ರ ಮೊದಲಾದ ರೂಪಗಳಿಂದಲೂ; ವಿಶ್ವಂ = ಈ ಜಗತ್ತನ್ನು; ಪುಷ್ಣಾತಿ = ಅನುಗ್ರಹ ಪೂರ್ವಕವಾಗಿ ಪೋಷಿಸುತ್ತಾನೆ; ಸ್ಥಾಪಯತಿ = ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ರಕ್ಷಿಸಿ ಅವರ ಧರ್ಮಗಳನ್ನು ಉಳಿಸುತ್ತಾನೆ.

ತ್ರಿವಿಧ ಜೀವರಿಗೂ ಅವರವರ ಸ್ವಭಾವಗಳ ಅಭಿವ್ಯಕ್ತಿಗೆ ಅವಕಾಶ ಮಾಡಿಕೊಡುವ ಭಗವಂತ, ತನ್ನನ್ನು ಆಶ್ರಯಿಸುವ ಪುಣ್ಯಜೀವಿಗಳನ್ನು ತನ್ನವರನ್ನಾಗಿ ಮಾಡಿಕೊಂಡು ನಿತ್ಯ ಸುಖಾಶ್ರಯವಾದ ವೈಕುಂಠದಲ್ಲಿಡುವನು. ನಾರಕಿಗಳು ದುಃಖವಿದ್ದರೂ ಹೇಯಗತಿಯೇ ತಮಗೆ ಇಷ್ಟವೆನ್ನುವುದರಿಂದ ಅವರನ್ನು ನಿತ್ಯ ನರಕದಲ್ಲಿರುಡುತ್ತಾನೆ. ಮಿಶ್ರ ಜೀವರನ್ನು ನಿತ್ಯ ಸುಖ ದುಃಖಾತ್ಮಕಗಳಾದ ಸಾಂತಾನಿಕ ಲೋಕಗಳಲ್ಲಿಡುತ್ತಾನೆ.

**ತತಃ ಕಾಲಾಗ್ನಿ ರುದ್ರಾತ್ಮಾ ಯತ್ಸೃಷ್ಟಮಿದಮಾತ್ಮನಃ ।**
**ಸನ್ನಿಯಚ್ಛತಿ ತತ್ಕಾಲೇ ಘನಾನೀಕಮಿವಾನಿಲಃ ॥ ೪೩ ॥**

ತತಃ ತತ್ಕಾಲೇ = ಪ್ರಳಯ ಕಾಲವು ಪ್ರಾಪ್ತವಾದಾಗ; ಆತ್ಮನಃ = ತನ್ನಿಂದ ಬ್ರಹ್ಮದೇವರ ಮುಖಾಂತರ; ಯತ್ ಸೃಷ್ಟಂ = ಯಾವುದು ಸೃಷ್ಟವಾಯಿತೋ; ಇದಂ = ಈ ಜಗತ್ತನ್ನು; ಕಾಲಾಗ್ನಿ ರುದ್ರಾತ್ಮಾ = ಯಮ, ಅಗ್ನಿ, ರುದ್ರರಂತರ್ಯಾಮಿಯಾದ ಸಂಕರ್ಷಣಾಖ್ಯ ಭಗವಂತನು; ಅನಿಲಃ ಘನಾನೀಕಂ ಇವ = ಗಾಳಿಯು ಮೇಘಗಳನ್ನು ಒಟ್ಟುಗೂಡಿಸುವಂತೆ; ಸನ್ನಿಯಚ್ಛತಿ = ಸಾಧನೆಗಳ ಫಲಗಳನ್ನು ಕೊಡುವುದಕ್ಕಾಗಿ ಜೀವ ಸಂಘಾತವನ್ನು ತನ್ನಲ್ಲಿ ಸೆಳೆದಿಟ್ಟುಕೊಳ್ಳುತ್ತಾನೆ.

ಪ್ರಳಯವೆಂಬುದು ಭೌತಿಕದೇಹಗಳ ಮತ್ತು ಭೂತ ಪ್ರಪಂಚದ ನಾಶವೇ ಹೊರತು ಜೀವ ಸ್ವರೂಪಗಳ ನಾಶವಲ್ಲ. ಇಲ್ಲಿ ಮೇಘಗಳನ್ನು ಗಾಳಿಯು ಒಟ್ಟುಗೂಡಿಸುವ ಹೋಲಿಕೆಯು ಅರ್ಥಪೂರ್ಣವಾದುದು. ಅದು ಜಗತ್ತಿನ ಮೂಲವಸ್ತುವಾದ ಅವ್ಯಕ್ತ ಪ್ರಕೃತಿಯ ಮತ್ತು ಜೀವರ ನಿತ್ಯಸ್ವಭಾವವನ್ನು ತಿಳಿಸುತ್ತದೆ.

**ಇತ್ಥಂ ಭಾವೇನ ಕಥಿತೋ ಭಗವಾನ್ ಭಗವತ್ತಮಃ ।**
**ನೇತ್ಥಂ ಭಾವೇನಹಿ ಪರಂ ದ್ರಷ್ಟುಮರ್ಹಂತಿಸೂರಯಃ ॥ ೪೪ ॥**

ಭಗವತ್ತಮಃ = ಭಗವಾನ್ ಎಂದು ಕರೆಸಿಕೊಳ್ಳುವ ಉತ್ತಮೋತ್ತಮರಿಗಿಂತ ಉತ್ತಮನಾದ (ಸರ್ವೋತ್ತಮನಾದ); ಭಗವಾನ್= ಸರ್ವವಿಷಯಗಳಲ್ಲಿಯೂ

ಪರಿಪೂರ್ಣನಾದ ಮಹಾವಿಷ್ಣುವು; ಇತ್ಥಂಭಾವೇನ ಕಥಿತಃ = ಸೃಷ್ಟಿಸ್ಥಿತಿಲಯಕಾರ್ಯಗಳನ್ನು ನಡೆಸುವಜೀವರ ಉದ್ಧಾರ ಕರ್ತನೆಂದು ವರ್ಣಿಸಲ್ಪಟ್ಟಿದ್ದಾನೆ; ಸೂರಯಃ = ಜ್ಞಾನಿಗಳು; ಇತ್ಥಂ ಭಾವೇನಹಿ = ಈ ಪ್ರಕಾರಗಳನ್ನು ಚಿಂತಿಸಿಯೇ; ದ್ರಷ್ಟುಂ ಅರ್ಹಂತಿ = ಪರಮಾತ್ಮನನ್ನು ಕಾಣಬಲ್ಲರು; ಪರಂ = ಶ್ರುತಿಸ್ಮೃತಿಗಳಲ್ಲಿ ವಿವರಿಸಿದ ಈ ಬಗೆಯನ್ನು ಮೀರಿ ಅಗಮ್ಯನಾಗಿರುವ ಭಗವಂತನ ಪೂರ್ಣ ಸ್ವರೂಪವನ್ನು; ದ್ರಷ್ಟುಂ = ಕಾಣಲು; ನ ಅರ್ಹಂತಿ = ಸಮರ್ಥರಾಗಿರುವುದಿಲ್ಲ.

ಭಗವತ್ತಮಃ ಎಂಬ ಪದವು ಚೇತನವಸ್ತುಗಳಲ್ಲಿ ತಾರತಮ್ಯವಿರುವುದೆಂಬುದನ್ನು ಸ್ಪಷ್ಟವಾಗಿ ತಿಳಿಸುತ್ತಿದೆ. ಇದು ಶ್ರೀ ಮಧ್ವಾಚಾರ್ಯರ ಕಲ್ಪನೆಯಲ್ಲ. ಮುಕ್ತರಾದರೂ ಜೀವರಿಗೆ ಸೃಷ್ಟ್ಯಾದಿಕರ್ತತ್ವ ಕೂಡುವುದಿಲ್ಲವೆಂದು ಅದ್ವೈತಿಗಳೂ ಒಪ್ಪುವುದರಿಂದ ಜೀವಬ್ರಹ್ಮರಲ್ಲಿ ಸ್ವರೂಪತಃ ಭೇದವುಂಟೆಂದೂ ಐಕ್ಯವೆಂದರೆ ಏಕತ್ರ ಸಂಸ್ಥಾನವೆಂದೂ ಒಪ್ಪಲೇಬೇಕಾಯಿತು. ಜ್ಞಾನಿಗಳಲ್ಲಿ ತಾರತಮ್ಯವಿರುವುದೆಂದೂ ಇಲ್ಲಿ ಕಂಡುಬರುತ್ತದೆ. ಭಗವಾನ್ ಶಬ್ದಿತರಲ್ಲಿ ತರತಮ ಭಾವವಿರುವುದೆಂದೂ, ಭಗವತ್ತಮವೆಂಬ ಶಬ್ದಪ್ರಯೋಗವು ತಿಳಿಸುತ್ತದೆ. ಮಾನುಷೋತ್ತಮರಿಗಿಂತ ಹೆಚ್ಚಾಗಿ ದೇವತೆಗಳು ಭಗವಂತನ ಮಹಿಮೆಗಳನ್ನು ಬಲ್ಲರು ದೇವೋತ್ತಮರಾದ ಗರುಡ-ಶೇಷ-ರುದ್ರರು ಇನ್ನೂ ಹೆಚ್ಚಾಗಿ ಬಲ್ಲರು. ಬ್ರಹ್ಮವಾಯುಗಳು ಮತ್ತೂ ಹೆಚ್ಚಾಗಿ ಬಲ್ಲರು. ಜೀವಕೋಟಿಯಲ್ಲಿ ಅವರು ಸರ್ವಜ್ಞರು. ಇವರಿಗಿಂತ ಹೆಚ್ಚಾಗಿ ಅತಿಶಯ ರೀತಿಯಿಂದ ಬಲ್ಲವಳು ಮಹಾಲಕ್ಷ್ಮೀ. ಆಕೆತಿಳಿದಿರುವುದೂ ಭಗವನ್ಮಹಿಮೆಯ ಲೇಶಲೇಶದಲ್ಲಿ ಲೇಶಾಂಶ ಮಾತ್ರ ......... ಸ್ವಯಮೇವಾತ್ಮನಾತ್ಮಾನಂ ವೇತ್ಥಂಪುರುಷೋತ್ತಮ. Use quotation marks ಇದೇ ಕಡೆಯ ಮಾತು ನಮಗೆ.

**ನಚಾಸ್ಯ ಜನ್ಮ ಕರ್ಮಾಣಿ ಪರಸ್ಯಾನುವಿಧೀಯತೇ ।**
**ಕರ್ತೃತ್ವಂ ಪ್ರತಿಷೇಧಾರ್ಥಂ ಮಾಯಯಾರೋಪಿತಂಹಿತತ್ ॥ ೪೫ ॥**

ಅಸ್ಯ = ಈ ಭಗವಂತನ; ಜನ್ಮ ಕರ್ಮಾಣಿ = ಅವತಾರಗಳೂ, ಧರ್ಮೋದ್ಧಾರ ಕಾರ್ಯಗಳೂ; ಪರಸ್ಯ = ತನ್ನಿಂದ ಭಿನ್ನವೂ, ಆಶ್ರಿತವೂ ಆದ ಜೀವಕೋಟಿಯ; ಪ್ರತಿಷೇಧಾರ್ಥಂ = ಬಂಧನಿವೃತ್ತಿಗಾಗಿ; ವಿಧೀಯತೇ = ಸಂಭವಿಸುತ್ತವೆ; ಆದುದರಿಂದ; ತತ್ ಕರ್ತೃತ್ವಂ = ಸೃಷ್ಟ್ಯಾದಿ ಕರ್ತೃತ್ವವು; ಹಿ = ನಿಜವಾಗಿ; ಮಾಯಾ ಆರೋಪಿತಂ ನ = ಮಿಥ್ಯಾರೋಪವಲ್ಲ; ಆದರೆ; ತತ್ = ಆ ಕರ್ಮವು; ಮಾಯಯಾ = ಸ್ವಸಾಮರ್ಥ್ಯ ವಿಶೇಷದಿಂದ; ಆರೋಪಿತಂ = ತನ್ನಲ್ಲಿ ಪ್ರಕಟ ಮಾಡಿದಂತಹುದು; ಅವನಿಗೆ; ಕರ್ತೃತ್ವಂ = ತನಗಾಗಿ ಮಾಡಿದನೆಂಬ ಕರ್ತೃತ್ವವು; ನ ಹಿ = ಇಲ್ಲವೇ ಇಲ್ಲ.

ಕಾರ್ಯಗಳನ್ನು ನಡೆಸುವವನು ಭಗವಂತ. ಫಲ ಹೊಂದುವುದು ಜೀವರು. ಫಲಪ್ರಾಪ್ತಿಯ ದೃಷ್ಟಿಯಿಂದ ಕರ್ತೃತ್ವ ಅವರದೇ ಆಯಿತು; ಭಗವಂತನಿಗೆ ಕರ್ತೃತ್ವದ ಫಲಭೋಗವಿಲ್ಲದುದರಿಂದ ಅವನು 'ಅಕರ್ತ'ನಾಗಿಯೇ ಉಳಿದುಕೊಂಡ. ಇದನ್ನು ಗಮನದಲ್ಲಿಟ್ಟುಕೊಂಡೇ ಶ್ರೀಮನ್ಮಧ್ವಾಚಾರ್ಯರು "ಜೀವೋಪಿ ಕರ್ತಾ ಫಲ ಭೋಕ್ತೃತ್ವಾತ್", "ಸರ್ವಕರ್ತಾ ನ ಕ್ರಿಯತೇ ತಂ ನಮಾಮಿ ರಮಾಪತಿಂ" ಎಂದರು.

ಭಗವಂತನು ಮಾಯಾವಾದಿಗಳು ಹೇಳುವಂತೆ, ಕೇವಲ ಕ್ರೀಡೆಗಾಗಿ ಜಗದ್ರೂಪವಾದ ನಾಟಕವನ್ನು ತನ್ನಲ್ಲಿ ಮಾನಸಿಕವಾಗಿ ಕಲ್ಪಿಸಿಕೊಳ್ಳುವನೆಂದೂ, ಆದುದರಿಂದ ಜಗತ್ತು ವಸ್ತುತಃ ಇಲ್ಲವೆಂದೂ, ಕಾಲ್ಪನಿಕ ಶಕ್ತಿಯೇ ಮಾಯೆಯೆಂದೂ ಹೇಳುವುದಾದರೆ, ಅವನನ್ನು 'ಅನಿರ್ವಾಚ್ಯ' ಎಂದು ಹೇಳುವ ಅವರ ಮಾತು ಅರ್ಥಹೀನವಾಗುವುದು, ವರ್ಣಿಸಲಾಗುವುದಿಲ್ಲವೆಂದೂ, ಬ್ರಹ್ಮನು ಕ್ರೀಡಾಸಕ್ತನೆಂದೂ ಒಂದೇ ಉಸಿರಿನಲ್ಲಿ ಹೇಳುವುದು ಸ್ವವಿರೋಧಿಯಾದ ಮಾತುಗಳು. ಆದುದರಿಂದ ಬಹುಶ್ರುತಿಗಳ ಪ್ರಮಾಣಗಳಿಂದಲೂ ಏಕತಾಬೋಧಕಗಳಾದ 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ವಾಕ್ಯಗಳಿಗೆ ಭೇದಪರವಾದ ಐಕ್ಯ ಅಥವ 'ಏಕತ್ರ ಸಂಸ್ಥಾನ' ಎಂಬ ಅರ್ಥವು ಸುಲಭ ಸಾಧ್ಯವಾಗುವುದರಿಂದಲೂ, ಪ್ರಚಲಿತವಾದ ಅದ್ವೈತವಾದವು ಸರಿಯಲ್ಲ. ಆದುದರಿಂದ 'ಮಾಯಾ ಆರೋಪ' ಎಂದರೆ 'ತನ್ನಲ್ಲಿ ವಿಶೇಷ ಶಕ್ತಿಯ ಪ್ರಕಟನೆ' ಎಂದು ಅರ್ಥ ಮಾಡಬೇಕು. 'ಬ್ರಹ್ಮನಲ್ಲಿ ಜಗತ್ತಿನ ಆರೋಪ' ಎಂದು ಹೇಳುವಾಗಲೂ ಬ್ರಹ್ಮ, ಜಗತ್ತು ಎಂಬ ಎರಡು ವಸ್ತುಗಳಿದ್ದಾಗ ಮಾತ್ರ ಆರೋಪವೆಂಬ ಮಾತು ಸಾರ್ಥಕವಾಗುವುದು. ಜಗತ್ತನ್ನು ಹೇಗೆ ಸೃಷ್ಟಿಸಿ ನಡೆಸಬೇಕೋ ಆ ರೀತಿಯ ರೂಪಕ್ರಿಯೆಗಳನ್ನು ಬ್ರಹ್ಮನು ತನ್ನಲ್ಲಿ ಪ್ರಕಟಿಸಿ, ವಸ್ತುಗಳಲ್ಲಿ ಪ್ರವಿಷ್ಟನಾಗುವುದರಿಂದ ಜಗದ್ವಸ್ತುಗಳ ಸ್ಥಿತಿಗತಿಗಳು ಸಿದ್ಧಿಸುವುವು. ಈ ದೃಷ್ಟಿಯಿಂದ ಭಗವಂತನಲ್ಲಿ ಜಗತ್ತು ಆರೋಪಿತವಾಗಿದೆ ಎಂದು ಹೇಳಲಡ್ಡಿಯಿಲ್ಲ; ಭಗವಂತ, ಸರ್ವತಂತ್ರಸ್ವತಂತ್ರನೆಂದೂ, ಉಳಿದೆಲ್ಲವೂ ಅವನನ್ನಾಶ್ರಯಿಸಿದ ಪರತಂತ್ರಗಳೆಂದೂ ಭೇದವಾದವನ್ನು ಒಪ್ಪಿದಂತೆಯೇ ಆಗುವುದು.

**ಅಯಂತು ಬ್ರಹ್ಮಣಃ ಕಲ್ಪಃ ಸವಿಕಲ್ಪ ಉದಾಹೃತಃ ।**
**ವಿಧಿಃ ಸಾಧಾರಣೋಯತ್ರ ಸರ್ಗಾಃ ಪ್ರಾಕೃತ ವೈಕೃತಾಃ ॥ ೪೬ ॥**

ಯತ್ರ = ಯಾವಲ್ಲಿ; ಪ್ರಾಕೃತ ವೈಕೃತಾಃ ಸರ್ಗಾಃ = ಬ್ರಹ್ಮಾಂಡದ ಹೊರಗಿನ ಪ್ರಾಕೃತ ಸೃಷ್ಟಿ ಮತ್ತು ಬ್ರಹ್ಮಾಂಡದೊಳಗಿನ ವೈಕೃತ ಸೃಷ್ಟಿ ಎಂಬವು; ಸಾಧಾರಣಃ ವಿಧಿಃ ತು = ಸಾಮ್ಯವುಳ್ಳ ಲಕ್ಷಣಗಳೇ ಆಗಿರುವುವು; ಅಂತಹ ಕಲ್ಪಗಳಲ್ಲಿ; ಅಯಂ = ಈ; ಬ್ರಹ್ಮಣಃ ಕಲ್ಪಃ = ಬ್ರಹ್ಮಕಲ್ಪದ ವಿಚಾರವು; ಸವಿಕಲ್ಪಃ = ಮನ್ವಂತರಾದಿ ಕಲ್ಪಗಳ ವಿಚಾರ ಸಹಿತವಾಗಿ; ಉದಾಹೃತಃ = ಹೇಳಲ್ಪಟ್ಟಿತು.

ಈ ಬ್ರಹ್ಮ ಕಲ್ಪ ಎಂದರೆ, ಶ್ರೀಶುಕಾಚಾರ್ಯರು ಪರೀಕ್ಷಿದ್ರಾಜರಿಗೆ ಉಪದೇಶ ಮಾಡುತ್ತಿರುವ ಪ್ರಪಂಚ. ಈಗ ನಾವು ಇರುವಂತಹುದು; ಎಂದರೆ, "ಧಾತಾಯಥಾ ಪೂರ್ವಂ ಅಕಲ್ಪಯತ್" ಎಂಬ ವಚನಾನುಸಾರ ಹಿಂದಿನ ಬ್ರಹ್ಮಕಲ್ಪಗಳಂತೆಯೇ ಈಗಿನ ಬ್ರಹ್ಮಕಲ್ಪವೂ ಸರ್ಗ, ವಿಸರ್ಗ, ಮನ್ವಂತರಗಳು ಮುಂತಾದ ಲಕ್ಷಣಗಳಿಂದ ಕೂಡಿರುವುದಾಗಿದೆ. ಮುಂದಿನ ಬ್ರಹ್ಮಕಲ್ಪಗಳೂ ಹೀಗೆಯೇ ನಡೆಯುವುವು. ನಿತ್ಯಗಳಾದ ವೇದಗಳೂ, ನಿತ್ಯಾನಿತ್ಯಗಳಾದ ಪುರಾಣಗಳೂ, ಶುಕಾಚಾರ್ಯರಿಂದ ಭಾಗವತ ಪುರಾಣ ಪ್ರವಚನ ಮೊದಲಾದವೂ ಪ್ರತಿಯೊಂದು ಬ್ರಹ್ಮಕಲ್ಪದಲ್ಲಿಯೂ ಬರತಕ್ಕವುಗಳಾಗಿವೆ. ಆದರೆ ಬ್ರಹ್ಮರುದ್ರೇಂದ್ರಾದಿ ಸಕಲ ಜೀವರ ಸದೃಶರಾದ ಬೇರೆ ಜೀವರು ಆಯಾಸ್ಥಾನಗಳಿಗೆ ಬರುವರೇ ಹೊರತು ಮುಕ್ತರಾದವರಲ್ಲ. ಆದುದರಿಂದ ಜಗತ್ಪ್ರವಾಹವೆಂಬುದು ಅನಾದಿ, ಅನಂತ. ಯಾವ ವ್ಯತ್ಯಾಸವೂ ಇಲ್ಲದೆ, ವ್ಯತ್ಯಾಸಗಳಿಗೆಲ್ಲಾ ಸಂಕಲ್ಪ ಮಾತ್ರದಿಂದ ಕೇವಲ ನಿಮಿತ್ತ ಕಾರಣನಾಗಿರುವವನು ಪರಬ್ರಹ್ಮನೊಬ್ಬನೇ. ಲಕ್ಷ್ಮೀದೇವಿಯೂ ಸಹ ಭಗವಂತನ ಅಧೀನಳಾಗಿ, ನಿರ್ವಿಕಾರಾಳಾಗಿಯೇ ಇದ್ದು, ಸೃಷ್ಟ್ಯಾದಿ ಕಾರ್ಯಗಳಲ್ಲಿ ಮುಖ್ಯ ಭಾಗಿನಿಯಾಗಿರುತ್ತಾಳೆ.

**ಪರಿಮಾಣಂ ಚ ಕಾಲಸ್ಯ ಕಲ್ಪಲಕ್ಷಣ ವಿಗ್ರಹಂ ।**
**ಯಥಾ ಪರಸ್ತಾದ್ವ್ಯಾಖ್ಯಾಸ್ಯೇ ಪಾದ್ಮಂ ಕಲ್ಪಮಿಮಂ ಶೃಣು ॥ ೪೭ ॥**

ಕಾಲಸ್ಯ = ಕಾಲಗತಿಯ; ಪರಿಮಾಣಂ = ಅಳತೆಯನ್ನೂ; ಚ = ಮತ್ತು; ಕಲ್ಪ ಲಕ್ಷಣ ವಿಗ್ರಹಂ = ಬ್ರಹ್ಮಕಲ್ಪದ ಲಕ್ಷಣಗಳನ್ನೂ ರೂಪಗಳನ್ನೂ; ಪರಸ್ತಾತ್ = ಇನ್ನು ಮುಂದೆ; ಯಥಾ = ಹೇಗೆ ಹೇಗೆ ಎಂಬುದನ್ನು ಕುರಿತು; ವ್ಯಾಖ್ಯಾಸ್ಯೇ = ಹೇಳುತ್ತೇನೆ; ಇಮಂ = ಈ; ಪಾದ್ಮಂ ಕಲ್ಪಂ = ಪದ್ಮಕಲ್ಪದ ವಿಚಾರವನ್ನು; ಶೃಣು = ಆಲಿಸು.

ಬ್ರಹ್ಮದೇವರ ನೂರು ವರ್ಷ ಆಯುರ್ಮಾನದಲ್ಲಿ ಮೊದಲ ಪರಾರ್ಧ ೫೦ ವರ್ಷಕಾಲ ಬ್ರಹ್ಮಾಂಡದ ಹೊರಗಿನ ಸೃಷ್ಟಿ; ೫೦ ನೇ ವರ್ಷದ ಕಡೆಯದಿನ ಬ್ರಹ್ಮಾಂಡ ಸೃಷ್ಟಿ ಮತ್ತು ಅದರೊಳಗೆ ಶ್ರೀಮನ್ನಾರಾಯಣನ ಪ್ರವೇಶ. ೫೧ ನೇ ವರ್ಷದ ಮೊದಲನೆಯ ಹಗಲು ಬ್ರಹ್ಮಾಂಡದೊಳಗೆ ವಿರಾಡ್ರೂಪದ ಆವಿರ್ಭಾವ ಮತ್ತು ಲೋಕಗಳ ಸೃಷ್ಟಿ. ಪದ್ಮಗಳ ಆಕೃತಿಗಳನ್ನು ಹೋಲುವಂತೆ ಲೋಕಗಳ ಸೃಷ್ಟಿಯಾಗಿರುವುದರಿಂದ ಇದಕ್ಕೆ ಪದ್ಮಕಲ್ಪ ಎಂಬ ಹೆಸರು. ಬ್ರಹ್ಮದೇವನ ಪ್ರತಿ ದಿವಸಕ್ಕೂ ಒಂದೊಂದು ದಿನ ಕಲ್ಪವೆಂದು ಹೆಸರು. ಇಂತಹ ದಿನಕಲ್ಪಗಳು ೩೭½ ವರ್ಷಗಳ ಕಾಲ ಸಂಭವಿಸುವುವು ಉಳಿದ ೧೨½ ವರ್ಷಗಳು ಲಯಕಾಲ. ಒಂದೊಂದು ದಿನ ಕಲ್ಪದಲ್ಲಿಯೂ ಹದಿನಾಲ್ಕು ಮನುಕಲ್ಪಗಳು ಅಡಕವಾಗುವುವು.

**ಶೌನಕ ಉವಾಚ** – ಶೌನಕರು ನುಡಿದರು.

**ಯದಾಹ ನೋ ಭವಾನ್ಸೂತಕ್ಷತ್ತಾಭಾಗವತೋತ್ತಮಃ ।**
**ಚಚಾರ ತೀರ್ಥಾನಿಭುವಸ್ತ್ಯಕ್ತ್ವಾಬಂಧೂನ್ಸುದುಸ್ತ್ಯಜಾನ್ ॥ ೪೮ ॥**

**ಕುತ್ರಕೌಷಾರವೇಸ್ತಸ್ಯ ಸಂವಾದೋಧ್ಯಾತ್ಮ ಸಂಭವಃ ।**
**ಯದ್ವಾ ಸ ಭಗವಾಂಸ್ತಸ್ಮೈಪೃಷ್ಟಸ್ತತ್ತ್ವಮುವಾಚಹ ॥ ೪೯ ॥**

**ಬ್ರೂಹಿ ನಸ್ತದಿದಂ ಸೌಮ್ಯವಿದುರಸ್ಯವಿಚೇಷ್ಟಿತಂ ।**
**ಬಂಧುತ್ಯಾಗ ನಿಮಿತ್ತಂ ಚ ಯಥೈವಾಗತವಾನ್ಪುನಃ ॥ ೫೦ ॥**

ಸೂತ = ಸೂತ ಪೌರಾಣಿಕರೇ; ಭಾಗವತೋತ್ತಮಃ = ಪರಮ ಭಗವದ್ಭಕ್ತನಾದ; ಕ್ಷತ್ತಾ = ವಿದುರನು; ಸುದುಸ್ತ್ಯಜಾನ್ = ಅಗಲಿ ಇರಲಾಗದ; ಬಂಧೂನ್ = ಬಂಧುವರ್ಗದವರನ್ನು; ತ್ಯಕ್ತ್ವಾ = ಬಿಟ್ಟು; ಭುವಃ ತೀರ್ಥಾನಿ = ಭೂಲೋಕದ ಪುಣ್ಯಕ್ಷೇತ್ರಗಳನ್ನು ಕುರಿತು; ಚಚಾರ = ಯಾತ್ರೆ ಮಾಡಿದನೆಂದು; ಭವಾನ್ = ನೀವು; ಯತ್ ಆಹ = ಏನು ಹೇಳಿದಿರೋ ॥ ೪೮ ।

ಕುತ್ರ = ಯಾವ ಸ್ಥಳದಲ್ಲಿ; ತಸ್ಯ = ಆ ವಿದುರನಿಗೆ; ಕೌಷಾರವೇಃ = ಮೈತ್ರೇಯರ ದೆಸೆಯಿಂದ; ಅಧ್ಯಾತ್ಮ ಸಂಭವಃ = ಅಧ್ಯಾತ್ಮಜ್ಞಾನಕ್ಕೆ ನೆರವಾಗುವ; ಸಂವಾದಃ = ಸಂಭಾಷಣೆಯು ನಡೆಯಿತು; ಯದ್ವಾ = ಅದೂ ಅಲ್ಲದೇ; ಪೃಷ್ಟಃ = ವಿದುರನಿಂದ ಪ್ರಶ್ನಿತರಾಗಿ; ತಸ್ಮೈ = ಅವನಿಗೆ; ಸಃ ಭಗವಾನ್ = ಮಹಾತ್ಮರಾದ ಮೈತ್ರೇಯರು; ಹ = ಸುಪ್ರಸಿದ್ಧವಾಗಿರುವಂತೆ; ತತ್ವಂ = ಭಗವತ್ತತ್ತ್ವವನ್ನು; ಉವಾಚ = ಉಪದೇಶಿಸಿದರು ? ॥ ೪೯ ॥

ಸೌಮ್ಯ = ಸಜ್ಜನಶಿರೋಮಣಿಯಾದ ಸೂತರೇ; ವಿದುರಸ್ಯ ವಿಚೇಷ್ಟಿತಂ = ವಿದುರನ ನಡವಳಿಕೆಯನ್ನೂ; ಚ = ಮತ್ತು; ಬಂಧುತ್ಯಾಗ ನಿಮಿತ್ತಂ = ಬಂಧುವರ್ಗವನ್ನು ತ್ಯಜಿಸಿದ ಕಾರಣವನ್ನೂ; ಪುನಃ ಮತ್ತೆ; ಯಥಾ ಆಗತ ಏವ = ಹಿಂದಿರುಗಿ ಬಂದನೆಂಬುದನ್ನೂ; ತದಿದಂ = ಈ ಎಲ್ಲವನ್ನೂ; ನಃ = ನಮಗೆ; ಬ್ರೂಹಿ = ಹೇಳಿರಿ. ॥ ೫೦ ॥

(ಶೌನಕಸೂತರ ಸಂವಾದ ರೂಪವಾಗಿ ನಮಗೆ ಶ್ರೀಮದ್ಭಾಗವತವು ಲಭ್ಯವಾಗಿರುವುದನ್ನು ಅಲ್ಲಲ್ಲಿ ತಿಳಿಸುವುದಲ್ಲದೆ, ಶೌನಕಾದಿಗಳ ಪ್ರಶ್ನೆಗಳಿಂದ ಭಾಗವತಗ್ರಂಥದ ಪ್ರಾಮಾಣ್ಯವನ್ನೂ ತಿಳಿಸುವುದು ಇಲ್ಲಿನ ಉದ್ದೇಶವಾಗಿದೆ.

**ಸೂತ ಉವಾಚ** – ಸೂತ ಪೌರಾಣಿಕರು ಹೇಳಿದರು.

**ರಾಜ್ಞಾ ಪರೀಕ್ಷಿತಾ ಪೃಷ್ಟೋಯದವಾದೀನ್ಮಹಾ ಮುನಿಃ ।**
**ತದ್ವೋಭಿಧಾಸ್ಯೇ ಶೃಣುತ ರಾಜ್ಞಃ ಪ್ರಶ್ನಾನುಸಾರತಃ ॥ ೫೧ ॥**

ರಾಜ್ಞಾಪರೀಕ್ಷಿತಾ = ಪರೀಕ್ಷಿದ್ರಾಜನಿಂದ; ಪೃಷ್ಟಃ = ಪ್ರಶ್ನೆಮಾಡಲ್ಪಟ್ಟವರಾಗಿ; ಮಹಾಮುನಿಃ = ಮುನಿಶ್ರೇಷ್ಠರಾದ ಶುಕಚಾರ್ಯರು; ರಾಜ್ಞಃ ಪ್ರಶ್ನಾನುಸಾರತಃ = ಆರಾಜನ ಪ್ರಶ್ನೆಗಳಿಗೆ ಅನುಸಾರವಾಗಿಯೇ; ಯತ್ ಅವಾದೀತ್ = ಏನೇನು ಹೇಳಿದರೋ; ತತ್ = ಅದನ್ನು; ವಃ = ನಿಮಗೆ; ಅಭಿಧಾಸ್ಯೇ = ಹೇಳುತ್ತೇನೆ; ಶೃಣುತ = ಕೇಳಿರಿ

ಸೂತಾಚಾರ್ಯರು ಸ್ವಕಪೋಲಕಲ್ಪಿತ ಕಥೆಗಳನ್ನು ಹೇಳಿತ್ತಿಲ್ಲವೆಂದೂ ಪರಂಪರೆಯಿಂದ ಉಪದೇಶರೂಪವಾಗಿ ಬಂದಿರುವ ಸತ್ಯಾಂಶಗಳನ್ನೇ ಹೇಳುತ್ತಿರುವರೆಂದೂ ಮನವರಿಕೆ ಮಾಡಿಕೊಡಲು ಶುಕಾಚಾರ್ಯರು ಪರೀಕ್ಷಿದ್ರಾಜರಿಗೆ ಉಪದೇಶ ಮಾಡಿದಾಗ ನನಗುಂಟಾದ ಉಪದೇಶ ಬಲದಿಂದ ಹೇಳುತ್ತೇನೆ ಎಂದಿರುವರು. ಪ್ರಶ್ನೆಗಳಿಗೆ ಅನುಸಾರವಾಗಿ ಎಂದಿರುವುದು ಬಹು ಸೂಕ್ತವಾಗಿದೆ. ಪರೀಕ್ಷಿದ್ರಾಜರೂ ಶೌನಕಾದಿಗಳೂ ಮಾಡಿದ ಪ್ರಶ್ನೆಗಳಂತಹ ಪ್ರಶ್ನೆಗಳೇ ಜಿಜ್ಞಾಸುಗಳಾದ ಎಲ್ಲರಲ್ಲಿಯೂ ಮೂಡುವುದು ಸಹಜವೇಸರಿ. ಆ ಪ್ರಶ್ನೆಗಳಿಗೆಲ್ಲಾ ಸದುತ್ತರಗಳು ಶ್ರೀಮದ್ಭಾಗವತದಲ್ಲಿ ದೊರೆಯುವುವೆಂಬುದು ಇಲ್ಲಿ ಧ್ವನಿತವಾಗಿರುವ ಮುಖ್ಯಾಂಶ.

ಈ ಕನ್ನಡ ಅನುವಾದವನ್ನೂ ವಿಶೇಷಾರ್ಥಗಳನ್ನೂ ಬರೆಯುವಾಗ ಬಹಳ ಮಟ್ಟಿಗೆ ಸುಪ್ರಸಿದ್ಧವಾದ ವಿಜಯಧ್ವಜೀಯ ವ್ಯಾಖ್ಯಾನವನ್ನೇ ಅನುಸರಿಸಿರುವುದರಿಂದ ಆಮಹನೀಯರ ಪರಿಚಯಾರ್ಥವಾಗಿ ಅವರ ಮಾತುಗಳನ್ನೇ ಈ ಕೆಳಗೆ ಕೊಡಲಾಗಿದೆ (ಶ್ರೀಮಧ್ಭಾಗವತಕ್ಕೆ ಯಾದುಪತ್ಯ ಸತ್ಯಧರ್ಮೀಯ ಮತ್ತು ಶ್ರೀವ್ಯಾಸತತ್ವಜ್ಞರ ಮಂದನಂದಿನೀ ಎಂಬ ಅಮೋಘವ್ಯಾಖ್ಯಾನ ಕೃತಿಗಳೂ ಇರುವುವು.

**ದ್ವಿತಿಯಸ್ಕಂಧಗಾಹ್ಯೇಷಾ ಪದರತ್ನಾವಲೀಮಯಾ ।**
**ಸ್ವರ್ಪಿತಾಚರಣಾಂಭೋಜೇಪದ್ಮನಾಭಸ್ಯಭಾಸತಾಂ ॥**

ಶ್ರೀವಿಜಯಧ್ವಜೀಯ ವ್ಯಾಖ್ಯಾನಕ್ಕೆ ಪದರತ್ನಾವಳೀ ಎಂದು ಹೆಸರು

ಹತ್ತನೇ ಅಧ್ಯಾಯದೊಡನೆ ದ್ವಿತೀಯ ಸ್ಕಂಧ ಸಮಾಪ್ತವಾಯಿತು

॥ ಶ್ರೀ ಕೃಷ್ಣಾರ್ಪಣಮಸ್ತು ॥

---

# ಶ್ರೀಮದ್ಭಾಗವತ – ತೃತೀಯ ಸ್ಕಂಧ ಪ್ರಾರಂಭ

## ಮೊದಲನೆಯ ಅಧ್ಯಾಯ

ಈ ಸ್ಕಂಧದಲ್ಲಿ, ಮೋಕ್ಷವನ್ನು ಬಯಸುವವರಿಗೆ ಭಕ್ತಿಯೇ ಪ್ರಧಾನ ಸಾಧನವೆಂದೂ, ಇತರ ಸಾಧನಗಳು ಭಕ್ತಿಯ ಬೆಳವಣಿಗೆಗೆ ಸಹಾಯಕಗಳೆಂದೂ ತಿಳಿಸುತ್ತಾರೆ. ಹೀಗೆಂದು ಪೀಠಿಕೆಯನ್ನು ಕೊಟ್ಟಿರುವ ಶ್ರೀ ವಿಜಯಧ್ವಜಾಚಾರ್ಯರು ಶ್ರೀಮದ್ಭಾಗವತ ಜಲರಾಶಿಯಲ್ಲಿ ತೃತೀಯಸ್ಕಂಧವು ಮಣಿಗಳ ಸಂಗ್ರಹಸ್ಥಾನವೆಂದು ವರ್ಣಿಸಿದ್ದಾರೆ. ಈ ಜಲರಾಶಿಯಲ್ಲಿ ಸ್ನಾನಮಾಡಿದವರ ಸಂಸಾರಸಾಗರವು ಬೆಂಕಿಯಲ್ಲಿ ಹಾಕಿದ ಒಣ ಇಂಧನ ನಾಶವಾದಂತೆ ಒಣಗಿ ಹೋಗುವುದೆಂದು ಅತಿ ಚಮತ್ಕಾರವಾಗಿ ಹೇಳಿದ್ದಾರೆ.

**ಶ್ರೀಶುಕ ಉವಾಚ:–** ಶ್ರೀಶುಕಾಚಾರ್ಯರು ನುಡಿದರು.

**ಏವಮೇತತ್ಪುರಾಪೃಷ್ಟೋ ಮೈತ್ರೇಯೋಭಗವಾನ್ಕಿಲ ।**
**ಕ್ಷತ್ತ್ರಾವನಂ ಪ್ರವಿಷ್ಟೇನ ತ್ಯಕ್ತ್ವಾಸ್ವಗೃಹಮೃದ್ಧಿಮತ್ ॥೧॥**

ಋದ್ಧಿಮತ್ ಸ್ವಗೃಹಂ = ಅನುಕೂಲ ಸಾಮಗ್ರಿಗಳ ಸಮೃದ್ಧಿ ಇದ್ದ ತನ್ನ ಮನೆಯನ್ನು; ತ್ಯಕ್ತ್ವಾ = ಬಿಟ್ಟು; ವನಂ ಪ್ರವಿಷ್ಟೇನ = ತೀರ್ಥಯಾತ್ರಾಕ್ರಮದಿಂದ ವನವನಾಂತರಗಳಲ್ಲಿ ಸಂಚರಿಸುತ್ತಿದ್ದ; ಕ್ಷತ್ತ್ರಾ = ವಿದುರನಿಂದ; ಏತತ್ ಏವಂ = ನೀವುಕೇಳಿದ ಇದೇ ಪ್ರಶ್ನೆಗಳನ್ನು ಇದೇ ಪ್ರಕಾರವಾಗಿ; ಭಗವಾನ್ ಮೈತ್ರೇಯಃ = ತ್ರಿಕಾಲ ಜ್ಞಾನಿಗಳಾದ ಮೈತ್ರೇಯರು; ಪೃಷ್ಟಃ ಕಿಲ = ಪ್ರಶ್ನೆಮಾಡಲ್ಪಟ್ಟರು ಎಂಬುದು ಚೋದ್ಯವಾಗಿದೆ.;

(ವಿದುರರ ಪ್ರಶ್ನೆಗಳೂ, ಶೌನಕಾದಿಗಳ ಪ್ರಶ್ನೆಗಳೂ ಒಂದೇ ಬಗೆಯಯಾದುವು ಎಂಬುದರಿಂದ ಜ್ಞಾನೇಚ್ಛುಗಳಾದ ಜಿಜ್ಞಾಸುಗಳಲ್ಲಿನ ಸಾಮ್ಯ ವ್ಯಕ್ತವಾಗುತ್ತದೆ.)

**ಪರೀಕ್ಷಿದುವಾಚ :–** ಪರೀಕ್ಷಿದ್ರಾಜರು ಪ್ರಶ್ನೆ ಮಾಡಿದರು.

**ಕುತ್ರ ಕ್ಷತ್ತುರ್ಭಗವತಾ ಮೈತ್ರೇಯೇಣಾಸ ಸಂಗಮಃ ।**
**ಕದಾ ವಾ ಸಹ ಸಂವಾದ ಏತದ್ವರ್ಣಯನಃ ಪ್ರಭೋ ॥೨॥**

(ಜೀವಿಗಳ ಸಾಧನಕ್ಷೇತ್ರವಾದ ಈ ಭರತವರ್ಷದಲ್ಲಿ ಪ್ರತಿಯೊಂದು ಕ್ಷೇತ್ರವಿಶೇಷಕ್ಕೂ, ಕಾಲವಿಶೇಷಕ್ಕೂ ಭಗವಂತನ ಅನುಗ್ರಹ ವಿಶೇಷ ಸಂಬಂಧ ವಿರುವುದರಿಂದ, ಆ ಕ್ಷೇತ್ರಗಳ ಮಹಿಮಾಶ್ರವಣ ದರ್ಶನಗಳೂ, ಕಾಲ ವಿಶೇಷಗಳ ಸ್ಮರಣೆಯೂ ಪುಣ್ಯಕರವಾಗುವುವು. ಆದುದರಿಂದ ಪ್ರಶ್ನೆಯ ಔಚಿತ್ಯ. ಅಲ್ಲದೆ, ದೇಶ ಕಾಲಗಳ ಕಥನದಿಂದ ಹೇಳತಕ್ಕ ಕಥೆಯ ಚಾರಿತ್ರಿಕಮೌಲ್ಯ ವ್ಯಕ್ತವಾಗುತ್ತದೆ.)

**ಯದಾತ್ವಯಂ ಮಂತ್ರಕೃದ್ಧೋ ಭಗವಾನಖಿಲೇಶ್ವರಃ ।**
**ಪೌರವೇಂದ್ರ ಪುರಂ ಹಿತ್ವಾ ಪ್ರವಿವೇಶಾತ್ಮ ಸಾತ್ಕೃತಂ ॥೩॥**

ಅಯಂ ನಿಖಿಲೇಶ್ವರಃ ಭಗವಾನ್ = ಐಶ್ವರ್ಯವಂತರೂ, ಗುಣನಿಧಿಯೂ ಆದ ಈ ವಿದುರರು; ಮಂತ್ರಕೃದ್ಧಃ = ಪಾಂಡವರ ಪರವಾಗಿ ಧೃತರಾಷ್ಟ್ರನಿಗೆ ವಿವೇಕದ ಮಾತುಗಳನ್ನು ಹೇಳಿ ವಿಫಲಗೊಂಡು; ಯದಾ = ಯಾವ ಸಮಯದಲ್ಲಿ; ಪೌರವೇಂದ್ರಪುರಂ ಹಿತ್ವಾ = ಪುರುವಂಶದವರ ರಾಜಧಾನಿಯಾದ ಹಸ್ತಿನಾವತಿಯನ್ನು ಬಿಟ್ಟು; ಆತ್ಮಸಾತ್ಕೃತಂ = ಉಪಪ್ಲಾವ್ಯ ನಗರವನ್ನು; ಪ್ರವಿವೇಶ = ಪ್ರವೇಶ ಮಾಡಿದರು?

(ಮಹಾಭಾರತಯುದ್ಧ ಪ್ರಾರಂಭವಾದ ಮೇಲೆ ಬಹಳಕಾಲ ವಿದುರರು ತೀರ್ಥಯಾತ್ರೆಯಲ್ಲಿದ್ದರೆಂಬುದು ಇದರಿಂದ ತಿಳಿದುಬರುತ್ತದೆ.)

**ನಹ್ಯಲ್ಪಾರ್ಥೋದಯಸ್ತಸ್ಯ ವಿದುರಸ್ಯಾಮಲಾತ್ಮನಃ ।**
**ತಸ್ಮಿನ್ವರೀಯಸಿ ಪ್ರಶ್ನಃ ಸಾಧುವಾದೋಪಬೃಂಹಿತಃ ॥೪॥**

ತಸ್ಯ ಅಮಲಾತ್ಮನಃ ವಿದುರಸ್ಯ = ನಿರ್ಮಲಾಂತಃಕರಣರಾದ ವಿದುರರಿಗೆ; ಅಲ್ಪಾರ್ಥ ಉದಯಃ ನಹಿ = ಉಂಟಾಗತಕ್ಕ ಪ್ರಯೋಜನ ಸಾಮಾನ್ಯವಾದುದಲ್ಲ; ತಸ್ಮಿನ್ = ಮೈತ್ರೇಯರಲ್ಲಿ ಅವರು ಮಾಡತಕ್ಕ; ಪ್ರಶ್ನಃ= ಪ್ರಶ್ನೆಯು; ವರೀಯಸಿ = ಗುರುತರ ಪ್ರಯೋಜನಕರವಾದುದೇ ಸರಿ; ಸಾಧುವಾದಉಪಬೃಂಹಿತಃ = ಅದು ಭಗವದ್ಭಕ್ತರಾದ ಸಜ್ಜನರ ಆಲೋಚನಾಸರಣಿಗೆ ಅನುಗುಣವಾಗಿ, ಪರಿಪೂರ್ಣವಾಗಿರುತ್ತದೆ.

(ಜ್ಞಾನಿಗಳೂ ಭಗವದ್ಭಕ್ತರೂ ಆದವರ ಸಲ್ಲಾಪಗಳನ್ನು ಕೇಳುವಾಗ ನಮ್ಮ ಮನಸ್ಸುಗಳಲ್ಲಿ ಉದ್ಭವಿಸಬಹುದಾದ ಎಷ್ಟೋ ಪ್ರಶ್ನೆಗಳಿಗೆ ಉತ್ತರಗಳು ಸಿಕ್ಕಿಬಿಡುತ್ತವೆ. ಇದು ಪರೀಕ್ಷಿದ್ರಾಜರ ಪ್ರಶಂಸೆಯ ಅಭಿಪ್ರಾಯ.)

**ಸೂತ ಉವಾಚ** :– ಸೂತಾಚಾರ್ಯರು ನುಡಿದರು.

ಸ ಏವಮೃಷಿವರ್ಯೋಽಯಂ ಪೃಷ್ಟೋರಾಜ್ಞಾ ಪರಿಕ್ಷಿತಾ ।
ಪ್ರತ್ಯಾಹತಂ ಸುಬಹುವಿತ್ಪ್ರೀತಾತ್ಮಾ ಶ್ರೂಯತಾಮಿತಿ ॥೫॥

ಅಯಂ ಸಃ ಋಷಿವರ್ಯಃ = ಮಹಾತ್ಮರಾದ ಶ್ರೀ ಶುಕಾಚಾರ್ಯರು; ರಾಜ್ಞಾ ಪರೀಕ್ಷಿತಾ = ಪರೀಕ್ಷಿದ್ರಾಜನಿಂದ; ಏವಂ ಪೃಷ್ಟಃ = ಈ ರೀತಿ ಪ್ರಶ್ನೆಮಾಡಲ್ಪಟ್ಟವರಾಗಿ; ಪ್ರೀತಾತ್ಮಾ = ಸಂತುಷ್ಟ ಚಿತ್ತರಾದ; ಸುಬಹುವಿತ್ = ಭಗವಂತನ ಪೂರ್ಣತ್ವವನ್ನು ಚೆನ್ನಾಗಿ ಬಲ್ಲವರಾದ ಅವರು; ಶ್ರೂಯ ತಾಂ ಇತಿ = ಕೇಳಯ್ಯಾ, ಸಂತೋಷದಿಂದ ಹೇಳುತ್ತೇನೆ ಎಂಬುದಾಗಿ; ತಂ = ಪರೀಕ್ಷಿದ್ರಾಜನನ್ನು ಕುರಿತು; ಪ್ರತ್ಯಾಹ = ಪ್ರತ್ಯುತ್ತರ ನೀಡಿದರು.

(ಪರೀಕ್ಷಿದ್ರಾಜನಂತಹ ಶ್ರದ್ಧಾವಂತರು ಪ್ರಶ್ನೆಮಾಡಿದಾಗ ಶುಕಾಚಾರ್ಯರಂತಹ ಪರಮ ಜ್ಞಾನಿಗಳು ಬಹಳ ಸಂತೋಷದಿಂದ ತತ್ವಗಳನ್ನು ತಿಳಿಸುತ್ತಾರೆ.)

ಶ್ರೀ ಶುಕ ಉವಾಚ :– ಶ್ರೀ ಶುಕಾಚಾರ್ಯರು ಹೇಳಲಾರಂಭಿಸಿದರು–

ಯದಾತುರಾಜಾ ಸ್ವಸುತಾನಸಾಧೂನ್ಪುಷ್ಣನ್ನಧರ್ಮೇಣ ವಿನಷ್ಟದೃಷ್ಟಿಃ।
ಭ್ರಾತುರ್ಯವಿಷ್ಠಸ್ಯ ಸುತಾನ್ವಿಬಂಧೂನ್ಪ್ರವೇಶ್ಯ ಲಾಕ್ಷಾ
ಭವನೇದದಾಹ ॥೬॥

ಯದಾ ಸಭಾಯಾಂ ಕುರುದೇವದೇವ್ಯಾಃ ಕೇಶಾಭಿಮರ್ಶಂ
ಸುತಕರ್ಮಗರ್ಹ್ಯಂ ।
ನವಾರಯಾಮಾಸ ನೃಪಃ ಸ್ನುಷಾಯಾ ಅಸ್ರೈರ್ಹರಂತ್ಯಾಃ
ಕುಚಕುಂಕುಮಾನಿ ॥೭॥

ದ್ಯೂತೇತ್ವಧರ್ಮೇಣ ಜಿತಸ್ಯಸಾಧೋಃ ಸತ್ಯಾವಲಂಬಸ್ಯ ವನಾಗತಸ್ಯ ।
ನಯಾಚತೋದಾತ್ಸಮಯೇನದಾಯಂ ತಮೋಜುಷಾಣೋ
ಯದಜಾತಶತ್ರೋಃ ॥೮॥

ಯದಾತು ಪಾರ್ಥಪ್ರಹಿತಃ ಸಭಾಯಾಂ ಜಗದ್ಗುರುರ್ಯಾನಿ
ಜಗಾದ ಕೃಷ್ಣಃ ।
ನತಾನಿ ಪುಂಸಾಮಮೃತಾಯನಾನಿ ರಾಜೋರುಮೇನೇಹತ
ಪುಣ್ಯಲೇಶಃ ॥೯॥

ಯದೋಪಹೂತೋಭವನಂ ಪ್ರವಿಷ್ಟೋ ಮಂತ್ರಾಯ

ಪೃಷ್ಟೋಕಿಲ ಪೂರ್ವಜೇನ।

ಅಥಾಹತಂ ಮಂತ್ರ ದೃಶಾಂ ವರೀಯಾನ್ಯನ್ಮಂತ್ರಿಣೋ

ವೈದುರಿಕಂ ವದಂತಿ ॥೧೦॥

ಯದಾ = ಯಾವಕಾರಣದಿಂದ; ರಾಜಾ = ರಾಜನಾದಧೃತರಾಷ್ಟ್ರನು; ಅಸಾಧೂನ್ = ಧರ್ಮಮಾರ್ಗದಿಂಡ ತಪ್ಪಿದ; ಸ್ವಸುತಾನ್ = ತನ್ನ ಮಕ್ಕಳನ್ನು; ಪುಷ್ಣನ್ = ಅವರ ತಪ್ಪುಗಳನ್ನು ಮುಚ್ಚಿಟ್ಟುಕೊಂಡು ಬಾಳುತ್ತಾ; ಅಧರ್ಮೇಣ = ಅಧರ್ಮಮಾರ್ಗದಲ್ಲಿ ಬಿದ್ದುದರಿಂದ; ವಿನಷ್ಟದೃಷ್ಟಿಃ = ದೈವೀದೃಷ್ಟಿಯನ್ನು ಕಳೆದುಕೋೀಂಡವನಾಗಿ; ಯವಿಷ್ಠಸ್ಯಭ್ರಾತುಃ = ತನ್ನ ತಮ್ಮನ; ವಿಬಂಧೂನ್ = ಇತರ ಬಂಧುಗಳಿಂದ ದೂರರಾದ; ಸುತಾನ್ = ಮಕ್ಕಳನ್ನು; ಲಾಕ್ಷಾಭವನೇ = ಅರಗಿನ ಮನೆಯಲ್ಲಿ; ಪ್ರವೇಶ್ಯ = ಪ್ರವೇಶ ಮಾಡಿಸಿ; ದದಾಹ = ಸುಡಿಸುವ ಪ್ರಯತ್ನಮಾಡಿದನೋ ॥ ೬ ॥

ಯದಾ = ಯಾವಸಂದರ್ಭದಲ್ಲಿ; ನೃಪಃ = ಧೃತರಾಷ್ಟ್ರ ರಾಜನು; ಸಭಾಯಾಂ = ತುಂಬಿದ ಸಭಾಮಧ್ಯದಲ್ಲಿ; ಅಸ್ರೈಃ = ಕಣ್ಣೀರು ಧಾರೆಗಳಿಂದ; ಕುಚಕುಂಕುಮಾನಿ = ಕುಚಾಗ್ರದ ಕುಂಕುಮ ಲೇಪವನ್ನು; ಹರಂತ್ಯಾಃ = ಕಳೆದುಕೊಳ್ಳುತ್ತಿರುವ; ಸ್ನುಷಾಯಾಃ = ಸೊಸೆಯಾದ; ದೇವ್ಯಾಃ = ಕುರುಕುಲದೇವತೆಯಾದ ದ್ರೌಪದಿಯ; ಕೇಶಾಭಿಮರ್ಶಂ = ಕೂದಲನ್ನು ಹಿಡಿದು ಎಳೆಯುವ; ಗರ್ಹ್ಯ = ಅತಿನಿಂದ್ಯವಾದ; ಸುತಕರ್ಮ = ದುರ್ಯೋಧನನಿಂದ ಪ್ರೇರಿತನಾದ ದುಶ್ಯಾಸನನ ಕಾರ್ಯವನ್ನು; ನವಾರಯಾಮಾಸ = ತಪ್ಪಿಸಲಿಲ್ಲವೋ; ಯತ್ = ಯಾವಕಾರಣದಿಂದ; ದ್ಯೂತೇತು = ಜೂಜಿನಲ್ಲಿಯಾದರೋ; ಅಧರ್ಮೇಣ ಜಿತಸ್ಯ = ಕಪಟದಾಟದಿಂದ ಸೋಲಿಸಲ್ಪಟ್ಟ; ಸಾಧೋಃ = ಸತ್ಪುರುಷನಾದ; ಸತ್ಯಾವಲಂಬಸ್ಯ = ಸತ್ಯವ್ರತನಾದ; ವನಂಗತಸ್ಯ = ವನವಾಸದಿಂದ ಹಿಂದಿರುಗಿದ; ಸಮಯೇನದಾಯಂ ಯಾಚತಃ = ನ್ಯಾಯವಾದ ದಾಯಾದ ಭಾಗವನ್ನು ಬೇಡಿದ; ಅಜಾತಶತ್ರೋಃ = ಧರ್ಮರಾಜನಿಗೆ; ತಮೋಜುಷಾಣಃ= ದುರ್ಬುದ್ಧಿಯಿಂದ ಮೋಹಿತನಾದ ಧೃತರಾಷ್ಟ್ರನು; ನ ಅದಾತ್ = ಕೋಡಲಿಲ್ಲವೋ ॥೮॥

ಯದಾ = ಯಾವ ಕಾಲದಲ್ಲಿ; ಪಾರ್ಥಪ್ರಹಿತಃ ತು = ಕುಂತೀಪುತ್ರನಿಂದ ಪ್ರಾರ್ಥಿತನಾಗಿ; ಸಭಾಯಾಂ = ಧೃತರಾಷ್ಟ್ರನ ಸಭಾಮಧ್ಯದಲ್ಲಿ; ಜಗದ್ಗುರುಃ = ಸಕಲ ಲೋಕಗಳಿಗೂ ಗುರುವಾದ; ಕೃಷ್ಣಃ = ಶ್ರೀಕೃಷ್ಣನು; ಯಾನಿ ಜಗಾದ = ಯಾವ ಹಿತವಚನಗಳನ್ನು ಹೇಳಿದನೋ; ಪುಂಸಾಂ = ಜನ್ಮವೆತ್ತಿದ ಜೀವಿಗಳಿಗೆ;

ಅಮೃತಾಯನಾನಿ = ಹಿತಕರವೂ ಮುಕ್ತಿಪ್ರದವೂ ಆದ; ತಾನಿ= ಆ ಉಪದೇಶ ವಚನಗಳನ್ನು; ಹತಪುಣ್ಯಲೇಶಃ = ಪಾಪ ಭಾರವೇ ಹೆಚ್ಚಾಗಿ, ಉಳಿದಿದ್ದ ಅತ್ಯಲ್ಪ ಪುಣ್ಯವನ್ನೂ ನೀಗಿಕೊಂಡ; ರಾಜಾ = ರಾಜನೆನಿಸಿದ ಧೃತರಾಷ್ಟ್ರನು; ನಉರುಮೇನೇ = ಗುರೂಪದೇಶವೆಂದು ಭಾವಿಸದೆ ಅಲ್ಪವೆಂದೆಣಿಸಿದನೋ ||೯||

ಯದಾ = ಯಾವಾಗ; ಪೂರ್ವಜೇನ = ಅಗ್ರಜನಾದ ಧೃತರಾಷ್ಟ್ರನಿಂದ; ಮಂತ್ರಾಯ = ಸಮಾಲೋಚನೆಗಾಗಿ; ಉಪಹೂತಃ = ಕರೆಸಲ್ಪಟ್ಟವನಾಗಿ; ಭವನಂ ಪ್ರವಿಷ್ಟಃ = ರಾಜಭವನವನ್ನು ಪ್ರವೇಶ ಮಾಡಿ; ಪೃಷ್ಟಃ = ಪ್ರಶ್ನೆ ಮಾಡಲ್ಪಟ್ಟವನಾಗಿ; ಮಂತ್ರದೃಶಾಂ ವರೀಯಾನ್ = ಸಲಹೆಗಳನ್ನು ಕೊಡಬಲ್ಲವರಲ್ಲಿ ಶ್ರೇಷ್ಠನಾದ ವಿದುರನು; ಯತ್ = ಯಾವ ಮಾತುಗಳನ್ನು; ಮಂತ್ರಿಣಃ = ಮಂತ್ರಾಲೋಚನೆಯಲ್ಲಿ ನಿಪುಣರಾದವರು; ವೈದುರಿಕಂ = ವಿದುರ ನೀತಿಯೆಂದು; ವದಂತಿ = ಹೇಳುವರೋ ಆ ಮಾತುಗಳನ್ನು; ತಂ = ಧೃತರಾಷ್ಟ್ರನನ್ನು ಕುರಿತು; ಅಥ = ಆಗ; ಆಹ = ನುಡಿದನು. ||೧೦||

(ಧೃತರಾಷ್ಟ್ರನು ಎಸಗಿದ ಅನ್ಯಾಯಗಳಲ್ಲಿ ಮುಖ್ಯ ಮುಖ್ಯವಾದುವನ್ನು ಇಲ್ಲಿ ಹೆಸರಿಸಿ, ವಿದುರನ ಅಸಹನೆಯ ಕಾರಣವನ್ನು ತಿಳಿಸಿದ್ದಾರೆ.)

**ಅಜಾತಶತ್ರೋಃ ಪ್ರತಿಯಚ್ಛದಾಯಂ ತಿತಿಕ್ಷತೋದುರ್ವಿಷ**
**ಹಂತವಾಗಃ ।**
**ಸಹಾನುಜೋಯತ್ರ ವೃಕೋದರಾಹಿಃ ಸ್ವಶತ್ರುಹಾಯಂ**
**ತ್ವಮಲಂ ಬಿಭೇಷಿ ||೧೧||**

ಯಂ = ಯಾರನ್ನು ಕುರಿತು; ತ್ವಂ = ನೀನು; ಅಲಂ = ಬಹುವಾಗಿ; ಬಿಭೇಷಿ = ಹೆದರುವೆಯೋ ಅಂತಹ ; ತವ = ನಿನಗೆ; ಸ್ವಶತ್ರುಹಾ = ನ್ಯಾಯವಾದ ದಾಯಭಾಗವನ್ನು ಕೊಡದಿರುವ ಶತ್ರುಗಳಿಗೆ ಮೃತ್ಯುಪ್ರಾಯನಾದ; ಅಗಃ = ಸುಸ್ಥಿರನಾದ; ವೃಕೋದರಾಹಿಃ = ಭೀಮಸೇನನೆಂಬ ಸರ್ಪವು; ಸಹಾನುಜಃ = ಕಾರ್ಯಸಾಧಕನಾದ ಸಹೋದರನಾಗಿರುವುದರಿಂದ; ದುರ್ವಿಷಹಂ = ಅಸಹನೀಯಗಳಾದ ಉಪಟಳಗಳನ್ನು; ತಿತಿಕ್ಷತಃ = ಸಹಿಸಿಕೊಂಡಿರುವ; ಅಜಾತಶತ್ರೋಃ = ಧರ್ಮರಾಯನಿಗೆ; ದಾಯಂ = ಕೊಡಬೇಕಾದ ಭಾಗವನ್ನು; ಪ್ರಯಚ್ಛ = ಕೊಟ್ಟುಬಿಡು.

(ಪಾಂಡವರಿಗೆ ಸಲ್ಲ ಬೇಕಾದ ಭಾಗವನ್ನು ಕೊಟ್ಟು ಬಿಡಬೇಕೆಂಬುದು ನ್ಯಾಯಸಮ್ಮತವಷ್ಟೇ ಅಲ್ಲದೆ, ಕೊಡದಿದ್ದರೂ ಭೀಮಸೇನನ ಬಲದಿಂದ ಅದು

ಕೈಬಿಟ್ಟು ಹೋಗುವುದೆಂದು ತಿಳಿವಳಿಕೆಯ ಮೊದಲನೇ ಬುದ್ಧಿವಾದ.)

**ಯದಾತು ಪಾರ್ಥಾನ್ ಭಗವಾನ್ಮುಕುಂದೋಗೃಹೀತವಾನ್**
**ಸಕ್ಷಿತಿದೇವದೇವಃ ।।**
**ಆಸ್ತೇ ಸ್ವಪುರ್ಯಾಂ ಯದುದೇವದೇವೋ ವಿನಿರ್ಜಿತಾಶೇಷನೃ**
**ದೇವದೇವಃ ।।೧೨।।**

ತು = ಅಷ್ಟೇ ಅಲ್ಲದೆ; ಕ್ಷಿತಿದೇವದೇವಃ = ಬ್ರಾಹ್ಮಣರಿಂದ ಪೂಜ್ಯನಾದ; ವಿನಿರ್ಜಿತ ಆಶೇಷ ನೃದೇವದೇವಃ = ಚಕ್ರವರ್ತಿಗಳೆನಿಸಿಕೊಳ್ಳುವವರನ್ನೆಲ್ಲಾ ಸಂಪೂರ್ಣವಾಗಿ ಜಯಿಸಿದವನಾದ; ಯದುದೇವದೇವಃ = ಯದುಕುಲಾಧಿಪ ಶ್ರೇಷ್ಠನಾದ; ಸಃ ಭಗನಾನ್ ಮುಕುಂದಃ = ಮುಕ್ತಿಪ್ರದನಾದ ಸಾಕ್ಷಾತ್ ಆ ಭಗವಂತನೇ; ಯದಾ = ಯಾವ ಕಾರಣದಂದ; ಪಾರ್ಥನ್ = ಕುಂತೀಪುತ್ರರನ್ನು; ಗೃಹೀತವಾನ್ = ತನ್ನವರೆಂದು ಅನುಗ್ರಹಪೂರ್ವಕವಾಗಿ ಸ್ವೀಕರಿಸಿರುವನೋ; ಅಲ್ಲದೆ; ಸ್ವಪುರ್ಯಾಂ = ಧರ್ಮರಾಯಾದಿಗಳಿರುವ ಉಪಪ್ಲಾವ್ಯ ನಗರದಲ್ಲಿಯೇ; ಆಸ್ತೇ = ಇರುವನೋ; ಆ ಕಾರಣದಿಂದ; (ದಾಯಭಾಗವನ್ನು ಕೊಟ್ಟು ಬಿಡುವುದು ಕ್ಷೇಮಕರ.)

(ಶ್ರೀ ಕೃಷ್ಣನ ಸಹಾಯವಿರುವವರನ್ನು ಯಾರೂ ಜಯಿಸಲಾರರು ಎಂಬುದು ಮುಖ್ಯಾಭಿಪ್ರಾಯ.)

**ಸಏಷದೋಷಃಪುರುಷದ್ವಿಡಾಸ್ತೇಗೃಹಂಪ್ರವಿಷ್ಟೋ ಯಮ**
**ಪತ್ಯಬುದ್ಧ್ಯಾ ।**
**ಪುಷ್ಣಾಸಿ ಕೃಷ್ಣಾದ್ವಿಮುಖೋಗತಶ್ರೀಸ್ತ್ಯಜಾಶ್ವಥೈನಂ ಕುಲ**
**ಕೌಶಲಾಯ ।।೧೨।।**

ಸಃ ಏಷಃ = ಈ ದುರ್ಯೋಧನನು; ದೋಷಃ = ಅತಿ ದುಷ್ಟನಾದವನು; ಪುರುಷದ್ವಿಟ್ = ಗುಣಪೂರ್ಣನಾದ ಭಗವಂತನ ದ್ವೇಷಿ; ಕೃಷ್ಣಾತ್ ವಿಮುಖಃ = ಶ್ರೀಕೃಷ್ಣನ ವಿಶ್ವಾಸಕ್ಕೆ ಪಾತ್ರನಲ್ಲದವನು; ಗತಶ್ರೀಃ= ಆದುದರಿಂದಲೇ ಲಕ್ಷ್ಮೀಕಟಾಕ್ಷಕ್ಕೆ ಅರ್ಹತೆ ಇಲ್ಲದವನು; ಗೃಹ ಪ್ರವಿಷ್ಟಃ = ನಿನ್ನ ಮನೆಯಲ್ಲಿ ಸೇರಿಕೊಂಡಿದ್ದಾನೆ; ಯಂ = ಯಾವ ಇವನನ್ನು; ಅಪತ್ಯ ಬುದ್ಧ್ಯಾ = ಮಗನೆಂಬ ಭಾವನೆಯಿಂದ; ಪುಷ್ಣಾಸಿ = ರಕ್ಷಿಸುತ್ತಿರುವಿ; ಅಥ = ಆದುದರಿಂದ; ಕುಲಕೌಶಲಾಯ = ವಂಶವನ್ನು ಉಳಿಸುವುದಕ್ಕಾಗಿ; ಏನಂ = ಇವನನ್ನು; ಆಶು = ಕಾಲವಿಳಂಬ ಮಾಡದೆ; ತ್ಯಜ = ಹೊರಗೆ ಹಾಕು.

(ಅಪತ್ಯ = ನರಕಕ್ಕೆ ಬೀಳದಂತೆ ಪುಣ್ಯಬಲದಿಂದ ರಕ್ಷಿಸುವವನು ಮಗ; ಆದರೆ, ದುರ್ಯೋಧನನು ಆ ಹೆಸರಿಗೆ ತಕ್ಕವನಲ್ಲವೆಂಬುದು ವಿದುರನ ಹೇಳಿಕೆ. ಹಿಂದಿನ ಕಾಲದ ಜನ ಗುಣವಿಮರ್ಶೆಯಿಂದಲೂ, ವಿಜ್ಞಾನ ಬಲದಿಂದಲೂ ಜೀವರ ಸ್ವರೂಪ ಲಕ್ಷಣಗಳನ್ನು ಗ್ರಹಿಸಿ, ಶಿಷ್ಟರನ್ನು ಆದರಿಸುತ್ತಲೂ, ದುಷ್ಟರನ್ನು ದೂರಮಾಡುತ್ತಲೂ ಇದ್ದರು. ಮಕ್ಕಳಿಂದಾಗಲೀ, ಬಂಧುಗಳಿಂದಾಗಲೀ ಮೋಹದಿಂದ ದುಷ್ಟರನ್ನು ಸಂರಕ್ಷಿಸುತ್ತಿರಲಿಲ್ಲ. ಈಗಿನ ಜನ ಅಂತಹ ನೀತಿಯನ್ನು ಅನುಸರಿಸದಿರುವುದರಿಂದ ಎಲ್ಲೆಲ್ಲಿಯೂ ಅನ್ಯಾಯಕ್ಕೇ ಅಗ್ರಸ್ಥಾನ ದೊರೆಯುತ್ತಿದೆ.)

**ಇತ್ಯೂಚಿವಾಂಸ್ತತ್ರ ಸುಯೋಧನೇನಪ್ರವೃದ್ಧಕೋಪಸ್ಫುರಿತಾಧರೇಣ।**
**ಅಸತ್ಕೃತಃ ಸಸ್ಪೃಹಣೀಯಶೀಲಃ ಕ್ಷತ್ತಾಸಕರ್ಣಾನುಜ ಸೌಬಲೇನ**
**॥೧೪॥**

ಇತಿ = ಈ ರೀತಿಯಾಗಿ; ಊಚಿವಾನ್ = ವಿದುರನು ಬುದ್ಧಿವಾದವನ್ನು ಹೇಳಿದನು; ತತ್ರ = ಆಸಮಯದಲ್ಲಿ; ಪ್ರವೃದ್ಧಕೋಪಸ್ಫುರಿತಾಧರೇಣ = ಅತಿಯಾದ ಕೋಪದಿಂದ ಆದುರುವ ತುಟಿಗಳುಳ್ಳ; ಸಕರ್ಣ, ಅನುಜ, ಸೌಬಲೇನ = ಕರ್ಣ, ಸಹೋದರರು, ಶಕುನಿ ಇವರಿಂದ ಸಹಿತನಾಗಿದ್ದ; ಸುಯೋಧನೇನ = ದುರ್ಯೋಧನನಿಂದ; ಸ್ಪೃಹಣೀಯಶೀಲಃ = ಅನುಕರಣ ಯೋಗ್ಯವಾದ ಸದ್ಗುಣಶಾಲಿಯಾದ; ಸಃಕ್ಷತ್ತಾ = ಆ ವಿದುರನು; ಅಸತ್ಕೃತಃ = ನಿಂದೆಗೊಳಗಾದನು.

(ಭೀಮಸೇನನಂತಹ ದಿಟ್ಟ ಸುಜೀವಿ, ದುರ್ಯೋಧನನಂತಹ ಕೆಟ್ಟ ಸ್ವಭಾವದ ಜೀವಿ, ದುರ್ಜೀವಿಗಳಿಗೆ ಹೆದರದೆ ಇದ್ದುದನ್ನು ಇದ್ದಂತೆ ಹೇಳುವ ವಿದುರನಂತಹ ಕೆಚ್ಚೆದೆಯ ಜೀವಿ, ದುಷ್ಟಸಹವಾಸದಿಂದ ಕೆಟ್ಟವನಂತೆ ವರ್ತಿಸಿದ ಕರ್ಣನಂತಹ ಸಜ್ಜೀವಿ, ಮೋಹಕ್ಕೊಳಗಾಗಿ ತೊಳಲಾಡುತ್ತಿದ್ದ ಧೃತರಾಷ್ಟ್ರನಂತಹ ಪುಣ್ಯಜೀವಿ- ಇವರು ಸ್ವಭಾವತಃ ಜೀವರಲ್ಲಿರುವ ವೈವಿಧ್ಯಗಳಿಗೆ ಉತ್ತಮ ನಿದರ್ಶನಗಳಾಗಿರುವರು.)

**ಕ ಏನಮತ್ರೋಪಜುಹಾವಜಿಹ್ಮಂ ದಾಸ್ಯಾಸ್ಸುತಂ ಯದ್ಬಲಿನೈವ ಪುಷ್ಟಃ।**
**ತಸ್ಮಿನ್ ಪ್ರತೀಪಃ ಪರಕೃತ್ಯ ಆಸ್ತೇನಿರ್ವಾಸ್ಯತಾಮಾಶು ಪುರಾಚ್ಛ್ವಸಾನಃ**
**॥೧೫॥**

ಜಿಹ್ಮಂ = ವಕ್ರಹೃದಯನಾದ; ದಾಸ್ಯಾಃಸುತಂ = ದಾಸೀಪುತ್ರನಾದ; ಏನಂ = ಇವನನ್ನು; ಅತ್ರ = ಇಲ್ಲಿಗೆ; ಕಃ = ಯಾರು, ಉಪಜುಹಾವ = ಬರಹೇಳಿದರು? ಯತ್ ಬಲಿನಾ ಏವ ಪುಷ್ಟಃ = ಯಾರ ಅನ್ನವನ್ನು ತಿಂದು ಬದುಕಿರುವನೋ; ತಸ್ಮಿನ್ = ಅವರಲ್ಲಿ; ಪ್ರತೀಪಃ = ವಿರೋಧಿಯಾಗಿ; ಪರಕೃತ್ಯಃಆಸ್ತೇ = ಅನ್ಯರಾದ

ಪಾಂಡುಪುತ್ರರಿಗೆ ಉಪಕಾರಿಯಾಗಿದ್ದಾನೆ; ಆಶು = ಕೂಡಲೇ; ಶ್ವಸಾನಃ = ಕೇವಲ ಜೀವಸಹಿತನಾಗಿ; ಪುರಾತ್ ನಿರ್ವಾಸ್ಯತಾಂ = ಇವನು ನಮ್ಮ ಪಟ್ಟಣದಿಂದ ಹೊರಗೋಡಿಸಲ್ಪಡಲಿ.

(ಇದು ದುರ್ಯೋಧನಿಂದ ನಿಂದಿತನಾದ ವಿದುರನು ತೀರ್ಥಯಾತ್ರೆಯನ್ನು ಕೈಗೊಳ್ಳಲು ಕಾರಣವಾಯಿತು)

**ಸ ಇತ್ಥಮತ್ಯುಲ್ಬಣ ಕರ್ಣಬಾಣೈರ್ಭ್ರಾತುಃ ಪುರೋಮರ್ಮ**
**ಸುತಾಡಿತೋಽಪಿ ॥**
**ಸ್ಮಯನ್ಧನುರ್ದ್ವಾರಿ ನಿಧಾಯ ಮಾಯಾಂ ಗತವ್ಯಥೋ ಯಾ**
**ದುರುಮಾನಯಾನಃ ॥೧೬॥**

ಸಃ = ಆ ವಿದುರರು; ಇತ್ಥಂ = ಈಪ್ರಕಾರವಾಗಿ; ಭ್ರಾತುಃ ಪುರಃ= ಅಣ್ಣನ ಸಮ್ಮುಖದಲ್ಲಿಯೇ; ಅತ್ಯುಲ್ಬಣ ಕರ್ಣ ಬಾಣೈಃ = ಕಿವಿಗಳಿಗೆ ತೀಕ್ಷ್ಣ ಶೂಲಪ್ರಾಯಗಳಾದ ಮಾತುಗಳಿಂದ; ಮರ್ಮಸು ತಾಡಿತಃ ಅಪಿ = ಮನಸ್ಸಿನಲ್ಲಿ ನೊಂದುಕೊಂಡರೂ; ಸ್ಮಯನ್ = ನಗುತ್ತಲೇ; ಧನುಃ = ಧನಸ್ಸನ್ನು; ದ್ವಾರಿ = ಬಾಗಿಲ ಬಳಿಯಲ್ಲಿ; ನಿಧಾಯ = ಇಟ್ಟುಬಿಟ್ಟು; ಮಾಯಾಂ = ಧೃತರಾಷ್ಟ್ರನಿಗೆ ಆದಂತೆ ಬುದ್ಧಿಗೆ ಮಂಕು ಕವಿಸುವ ಭಗವಂತನ ಬಂಧಕ ಶಕ್ತಿಯನ್ನು; ಉರುಮ್ಮಾನಯಾನಃ = ಬಹುವಾಗಿ ಪ್ರಶಂಸಿಸುತ್ತಾ; ಗತವ್ಯಥಃ = ಮನಸ್ಸಿನ ವ್ಯಥೆಯನ್ನು ನೀಗಿಕೊಂಡು; ಆಯಾತ್ = ಅರಮನೆಯನ್ನು ಬಿಟ್ಟು ಹೊರಟುಹೋದರು.

("ದುಷ್ಟರನ್ನು ಕಂಡರೆ ದೂರವಿರು" ಎಂಬ ಗಾದೆಯನ್ನು ವಿದುರರು ಅನುಸರಿಸಿದರು.)

**ಸನಿರ್ಗತಃ ಕೌರವಪುಣ್ಯಲಬ್ಧೋಗಜಾಹ್ವಯಾತ್ತೀರ್ಥಪದಃ ಪದಾನಿ।**
**ಅನ್ವಾಕ್ರಮತ್ಪುಣ್ಯ ಚಿಕೀರ್ಷಯೋರ್ವ್ಯಾಮಧಿಷ್ಠಿತೋಽಯಾನಿ**
**ಸಹಸ್ರಮೂರ್ತಿಃ ॥೧೭॥**

ಕೌರವ ಪುಣ್ಯಲಬ್ಧಃ = ಪುಣ್ಯಕೀರ್ತಿಯುಳ್ಳ ಕೌರವ ವಂಶದಲ್ಲಿ ಜನ್ಮ ಪಡೆದ; ಸಃ ತೀರ್ಥಪದಃ= ಆ ಪುಣ್ಯಶಾಲಿಯಾದ. ವಿದುರರು; ಗಜಾಹ್ವಯಾತ್ = ಪುಣ್ಯಭೂಮಿಯೇ ಆದ ಹಸ್ತಿನಾವತಿಯಿಂದ; ನಿರ್ಗತಃ ಹೊರಬಿದ್ದವರಾಗಿ; ಪುಣ್ಯಚಿಕೀರ್ಷಯಾ = ಸತ್ಕರ್ಮಾನುಷ್ಠಾನ ಮಾಡಲಿಚ್ಛಿಸಿ; ಉರ್ವ್ಯಾಂ = ಭೂಮಿಯಲ್ಲಿ; ಯಾನಿ = ಯವಯಾವ ಪ್ರದೇಶಗಳಲ್ಲಿ; ಸಹಸ್ರಮೂರ್ತಿಃ =

ವಿಶ್ವವ್ಯಾಪಿಯಾದ ಭಗವಂತನು; ಅಧಿಷ್ಠಿತಃ = ಸನ್ನಿಧಾನವನ್ನಿಟ್ಟಿರುವನೋ; (ತಾನಿ) ಪದಾನಿ = ಆ ತೀರ್ಥಕ್ಷೇತ್ರಗಳಲ್ಲಿ; ಅನ್ವಾಕ್ರಮತ್ = ಸಂಚಾರಮಾಡಿದರು.

(ಬುದ್ಧಿವಂತರು ಲೌಕಿಕ ವ್ಯವಹಾರದಲ್ಲಿರಬೇಕಾದ ಕಾಲದಲ್ಲಿಶ್ರೀ ಹರಿಸ್ಮರಣೆಯಿಂದ, ಭಗವತ್ಪೂಜೆಯೆಂದು ತಮ್ಮ ಕೆಲಸಗಳಲ್ಲಿ ತೊಡಗಿರುವರು. ಅಲ್ಲಿ ಬೇಸರದ ಪ್ರಸಂಗಗಳೊದಗಿದಾಗ, ತೀರ್ಥಯಾತ್ರೆಯಿಂದ ಭಗವಂತನ ಸ್ಮರಣೆಗೆ ಅನುಕೂಲ ಮಾಡಿಕೊಳ್ಳುವರು. ಮೊದಲನೆಯ ಬಗೆಯೇ ಹೆಚ್ಚು ಪರಿಣಾಮಕಾರಿ ಯಾದರೂ, ಅದನ್ನು ಉಳಿಸಿಕೊಳ್ಳುವುದು ಕಷ್ಟ. ಲೌಕಿಕ ವಾತಾವರಣದಲ್ಲಿ ಮನಸ್ಸಿಗೆ ಅಂಟಿದ ಕಶ್ಮಲವನ್ನು ತಿರ್ಥ ಯಾತ್ರೆ ಕಾಲದಲ್ಲಿ ಸುಲಭವಾಗಿ ಕಳೆದುಕೊಳ್ಳಬಹುದು. ಯಾವುದೇ ಪ್ರಸಂಗದಲ್ಲಾಗಲೀ, ಮುಖ್ಯವಾಗಿ ಇರಬೇಕಾದುದು ಭಗವಂತನ ಸಂಕಲ್ಪದ ಚಿಂತನೆ.)

**ವನೇಷು ಪುಣ್ಯೋಪವನಾದ್ರಿ ಕುಂಜೇಷ್ವಪಂಕತೋಯೇಷು**
**ಸರಿತ್‌ಸರಸ್ಸು ।**
**ಅನಂತ ಲಿಂಗೈಃ ಸಮಲಂಕೃತೇಷು ಚಚಾರ ತೀರ್ಥಾಯತನೇಷ್ವನನ್ಯಃ**
**॥೧೮॥**

ವನೇಷು = ತಮ್ಮ ಸೌಂದರ್ಯ ರಾಶಿಯಿಂದ ಭಗವದ್ದರ್ಶನ ಸದೃಶ ಸಂತೋಷವೀಯುವ ಅರಣ್ಯ ಪ್ರದೇಶಗಳಲ್ಲಿಯೂ; ಪುಣ್ಯೋಪವನೇಷು = ಪುಣ್ಯಕ್ಷೇತ್ರಗಳೆನಿಸಿದ ಉದ್ಯಾನಗಳಲ್ಲಿಯೂ; ಅದ್ರಿಷು = ಪರ್ವತ ಪ್ರದೇಶಗಳಲ್ಲಿಯೂ; ಕುಂಜೇಷು = ಲತಾವಿಶೇಷಗಳಿಂದ ರಮಣೀಯವಾದ ಸ್ಥಳಗಳಲ್ಲಿಯೂ; ಅಪಂಕತೋಯೇಷು = ನಿರ್ಮಲ ಜಲವಿರುವ; ಸರಿತ್ ಸರಸ್ಸು = ನದೀಸರೋವರಗಳಲ್ಲಿಯೂ ಅನಂತಲಿಂಗೈಃ = ಬಗೆಬಗೆಯ ಲಕ್ಷಣಗಳಿಂದ ಯುಕ್ತವಾದ ಹರಿಮೂರ್ತಿಗಳಿಂದ; ಸಮಲಂಕೃತೇಷು = ಸುಂದರ ದೇವಮಂದಿರ ಗಳಲ್ಲಿಯೂ; ಚಚಾರ = ಚರಿಸುತ್ತಾ ಭಗವಂತನನ್ನು ಸೇವಿಸಿದರು.

(ಕಾನನ, ಅದ್ರಿ, ಸರೋವರ, ನದಿ ಮುಂತಾದವುಗಳು ಭಗವಂತನ ಸಹಜ ಮೂರ್ತಿಗಳೆನಿಸುವುವು. ಅವು ಅವನ ಮಹಿಮಾತಿಶಯದಿಂದ ಪುಣ್ಯ ಪ್ರದಗಳಾಗಿರುವುವು. ದೇವಾಲಯಗಳಲ್ಲಿನ ಮೂರ್ತಿಗಳು ಆಹಿತ ಪ್ರತಿಮೆಗಳೆನಿಸಿ ಪೂಜಾರ್ಹಗಳಾಗಿರುವುವು. ಲೌಕಿಕ ಬಂಧನಗಳಿಂದ ನೊಂದು ಬೆಂದವರಿಗೆ ಇವು ಶಾಂತಿ ಸಮಾಧಾನಗಳನ್ನು ಒದಗಿಸಿ, ಭಗವಂತನ ಕಡೆಗೆ ಒಲವನ್ನುಂಟು ಮಾಡುವುವು.)

**ಗಾಂಪರ್ಯಟನ್ಮೇಧ್ಯವಿವಿಕ್ತವೃತ್ತಿಃಸದಾಪ್ಲುತೋಧಃಶಯನಾ ವಧೂತಃ।**
**ಅಲಕ್ಷಿತಸ್ವೈರವಧೂತಕೇಶೋವ್ರತಾನಿ ಚೇರೇ ಹರಿತೋಷಣಾನಿ॥೧೯॥**

ಗಾಂ ಪರ್ಯಟನ್ = ಭೂಪ್ರದೇಶಗಳಲ್ಲಿ ಸಂಚರಿಸುತ್ತಾ; ಮೇಧ್ಯ = ಆಹಾರಯೋಗ್ಯಗಳಾದ; ವಿವಿಕ್ತ = ವೃಕ್ಷಗಳಿಂದ ಉದುರಿದ ಪತ್ರಫಲಾದಿಗಳನ್ನು ಮಾತ್ರ ಸೇವಿಸುವ; ಸದಾಪ್ಲುತಃ = ನೀರುಗಳಲ್ಲಿ ಮೀಯುತ್ತಾ, ಮಾನಸಿಕ ಸ್ನಾನವನ್ನೂ ಆಚರಿಸುತ್ತಾ ಸದಾಪರಿಶುದ್ಧರಾಗಿ; ಅಧಃ ಶಯಾನ ಅವಧೂತಃ = ನೆಲದ ಮೇಲೆಯೇ ಮಲಗುವವರಾಗಿ; ಅವಧೂತ ಕೇಶಃ ಗಾಳಿಯಿಂದ ಕೆದರಿದ ಕೂದಲುಗಳುಳ್ಳವರಾಗಿ; ಹರಿತೋಷಣಾನಿ = ಭಗವಂತನಿಗೆ ಪ್ರೀತಿಕರಗಳಾದ; ವ್ರತಾನಿ = ಪೂಜಾ ಪದ್ಧತಿಗಳನ್ನು; ಚೇರೇ = ಅನುಸರಿಸಿದರು.

(ಸಾಮಾನ್ಯರು ತೀರ್ಥ ಯಾತ್ರೆಗಳಲ್ಲಿ ತೊಡಗುವಾಗ ದಾರಿಯವೆಚ್ಚಕ್ಕೆ ದ್ರವ್ಯವನ್ನೂ, ವಿಶ್ರಾಂತಿ ಕಾಲಕ್ಕೆ ಬೇಕಾದ ಸಲಕರಣೆಗಳನ್ನೂ ಸಂಗ್ರಹಿಸಿಕೊಂಡು ಪರಿವಾರ ಸಮೇತರಾಗಿ ತೆರಳುವರು. ಈ ರೀತಿಯಿಂದ ಅವರಿಗೆ ತೊಡಕುಗಳುಂಟು. ವಿದುರರಂತೆ ಹೊರಟವರಿಗೆ ನಿರ್ಬಾಧವಾಗಿ ತೀರ್ಥಯಾತ್ರೆಯಫಲ ದೊರೆಯುವುದು. ಅವರಿಗೆ ಪ್ರಯಾಣದ ವೆಚ್ಚವಿಲ್ಲ; ವಿಶ್ರಾಂತಿಗೆ ಸಲಕರಣೆಗಳ ಆವಶ್ಯಕತೆ ಇಲ್ಲ; ಪೂಜಾಸಾಮಗ್ರಿಗಳ ಚಿಂತೆಯು ಇಲ್ಲ. ದೇವರು ಕೊಟ್ಟ ಕಾಲುಗಳೇ ಕುದುರೆಗಳು; ಮಲಗಲು ನೆಲವೇ ಹಾಸಿಗೆ; ತಾವು ಮಾಡುವ ಸ್ನಾನವೇ ದೇವರಿಗೆ ಅಭಿಷೇಕ; ಮಾನಸಿಕ ದ್ರವ್ಯಗಳೇ ಪೂಜಾಸಾಮಗ್ರಿಗಳು; ಸಾಷ್ಟಾಂಗ ನಮಸ್ಕಾರವೇ ಸರ್ವ ಸಮರ್ಪಣೆ. ಈ ರೀತಿಯಾಗಿ ಸಂಚರಿಸುವುದು ಭಗವಂತನಿಗೆ ಅಭಿಮತವಾದ ದಿವ್ಯವ್ರತ.)

**ಇತ್ಥಂ ವ್ರಜನ್ ಭಾರತಮೇವ ವರ್ಷಂ ಕಾಲೇನ**
**ಯಾವದ್ಗತವಾನ್ಪ್ರಭಾಸಂ ।**
**ತಾವಚ್ಛಸಾಸಕ್ಷಿತಿಮೇಕ ಚಕ್ರಾಮೇಕಾತಪತ್ರಾಮಜಿತೇನಪಾರ್ಥಃ ॥೨೦॥**

ಇತ್ಥಂ = ಅವಧೂತವ್ರತನಿಷ್ಠೆಯಿಂದ; ಭಾರತಂ ಏವ ವರ್ಷಂ = ಕರ್ಮಭೂಮಿಯಲ್ಲಿ ಪವಿತ್ರಕತರವಾದ ಭಾರತ ದೇಶದಲ್ಲಿಯೇ; ವ್ರಜನ್ = ತೀರ್ಥ್ರಯಾತ್ರೆ ಮಾಡುತ್ತಾ; ಯಾವತ್ ಕಾಲೇನ = ಯಾವಕಾಲಕ್ಕೆ; ಪ್ರಭಾಸಂ ಗತವಾನ್= ವಿದುರರು ಪ್ರಭಾಸಕ್ಷೇತ್ರಕ್ಕೆ ಬಂದರೋ; ತಾವತ್ = ಆವೇಳೆಗೆ; ಪಾರ್ಥಃ = ಧರ್ಮರಾಯನು; ಏಕಚಕ್ರಾಂ = ಏಕಾಧಿಪತ್ಯಕ್ಕೆ ಒಳಗಾದ; ಕ್ಷಿತಿಂ = ನಿರ್ಭೀತಿಯಿಂದ ವಾಸಯೋಗ್ಯವಾದ ಭೂಮಿಯನ್ನು, ಏಕಾತಪತ್ರಾಂ = ಒಂದೇಶ್ವೇತಚ್ಛತ್ರದ ನೆರಳಿನಲ್ಲಿ; ಅಜಿತೇನ = ಜಗದೀಶ್ವರನಾದ ಶ್ರೀ ಕೃಷ್ಣನ ಉಪದೇಶದಂತೆ; ಶಸಾಸ = ಆಳಲು ಆರಂಭಿಸಿದ್ದನು.

(ವಿದುರರು ಅತಿ ದೀರ್ಘಕಾಲ ತೀರ್ಥಯಾತ್ರೆಯಲ್ಲಿದ್ದು ಬಿಟ್ಟರು ಎಂಬುದು

ಇದರ ಅಭಿಪ್ರಾಯ. ಇಡೀ ಭರತಖಂಡವು ಭರತವರ್ಷದ ಭಾಗವೇ ಆದರೂ, ಭಾರತ ದೇಶವನ್ನು ಬಿಟ್ಟು ಇತರ ಪ್ರದಶಗಳಲ್ಲಿ ತೀರ್ಥಕ್ಷೇತ್ರಗಳ ಪ್ರಸಕ್ತಿ ಇಲ್ಲವಾದುದರಿಂದ, ಆ ಪ್ರದೇಶಗಳು ವಾಸಯೋಗ್ಯವಲ್ಲವೆಂಬುದೂ ಇಲ್ಲಿ ಸೂಚಿತವಾಗಿದೆ.)

**ತತ್ರಾಥ ಸುಶ್ರಾವ ಸುಹೃದ್ವಿನಷ್ಟಿಂ ವನಂಯಥಾವೇಣು**
**ಜವಹ್ನಿನಾಶ್ರಯಂ।**
**ಸಂಸ್ಪರ್ಧಯಾದಗ್ಧಮಥಾನುಶೋಚನ್ ಸರಸ್ವತೀಂ ಪ್ರತ್ಯಗಿಯಾಯ**
**ತೂಷ್ಣೀಂ ॥೨೧॥**

ತತ್ರ = ಆಪ್ರಭಾಸ ಕ್ಷೇತ್ರದಲ್ಲಿ; ಅಥ = ಆಗ;ವೇಣುಜ ವಹ್ನಿನಾ = ಬಿದಿರುಗಳತಿಕ್ಕಾಟದಿಂದ ಉಂಟಾದ ಬೆಂಕಿಯಿಂದ; ಆಶ್ರಯಂ ವೇಣುವನಂ = ಬೆಂಕಿಯ ಉತ್ಪತ್ತಿಗೆ ಆಶ್ರಯವಾದ ಬಿದಿರು ಮಳೆಗಳ ಸಮೂಹವು; ಯಥಾ = ಹೇಗೆ ನಾಶವಾಗುವುದೋ ಹಾಗೆ; ಸುಹೃತ್ ವಿನಷ್ಟಿಂ = ಬಂಧುಗಳು ನಾಶವಾದ ಸಂಗತಿಯನ್ನು; ಸುಶ್ರಾವ = ವಿದುರರು ಕೇಳಿಸಿಕೊಂಡರು; ಅಥ = ಅನಂತರ; ಸಂಸ್ಪರ್ಧಯಾ = ತಮ್ಮ ತಮ್ಮಲ್ಲಿ ಜಗಳವಾಡಿ; ದಗ್ಧಂ = ವಿನಾಶಕ್ಕೆ ಒಳಗಾದ ಸಂಗತಿಯಿನ್ನು; ಅನುಶೋಚನ್ = ಮನಸ್ಸಿನಲ್ಲಿ ಮೆಲುಕು ಹಾಕುತ್ತಾ; ತೂಷ್ಣೀಂ = ಮೌನಧಾರಿಗಳಾಗಿ; ಪ್ರತ್ಯಕ್ ಸರಸ್ವತೀಂ = ಪಶ್ಚಿಮವಾಹಿನಿಯಾದ ಸರಸ್ವತೀ ನದಿಯ ಕಡೆಗೆ; ಇಯಾಯ ಹೊರಟರು.

(ಭಗವಂತನ ಸಂಕಲ್ಪದಂತೆಯೇ ಎಲ್ಲವೂ ನಡೆದು ಹೋಗುವುದೆಂಬುದನ್ನು ಬಲ್ಲವರು ಬಂಧುನಾಶ ಮೊದಲಾದ ವಾರ್ತೆಗಳಿಂದ ಅತಿಯಾಗಿ ದುಃಖಿಸುವುದಿಲ್ಲವೆಂಬುದು ಇಲ್ಲಿ ಕಂಡುಬರುತ್ತದೆ.)

**ತಸ್ಯಾಂತ್ರಿತಸ್ಯೋಶನಸೋಮನೋಶ್ಚ ಪೃಥೋರಥಾಗ್ನೇರ**
**ಸಿತಸ್ಯವಾಯೋಃ ।**
**ತೀರ್ಥಂ ಸುದಾಸಸ್ಯಗವಾಂಗುಹಸ್ಯ ಯಚ್ಛ್ರಾದ್ಧದೇವಸ್ಯಸಆಸಿಷೇವೇ**
**॥೨೨॥**

ತಸ್ಯಾಂ ತ್ರಿತಸಿ = ಆತ್ರಿವೇಣೀಸಂಗಮದಲ್ಲಿ; ಚ = ಮತ್ತು; ಉಶನಸಃ ಮನೋಃ, ಪೃಥೋಃ, ಅಥ, ಅಗ್ನೇಃ, ಅಸಿತಸ್ಯ, ವಾಯೋಃ = ಶುಕ್ರ,ಮನು, ಪೃಥು, ಅಗ್ನಿ, ಚಂದ್ರ, ವಾಯು, ಈ ದೇವತಾ ಸನ್ನಿಧಾನಗಳುಳ್ಳ; ತೀರ್ಥಂ = ಪುಣೋದಕಗಳನ್ನೂ; ಸುದಾಸಸ್ಯ, ಗವಾಂ, ಗುಹಸ್ಯ, ಯತ್ ಶ್ರಾದ್ಧ– ದೇವಸ್ಯ=

ಸುದಾಸ, ಗೋ, ಗುಹ, ಜನಾರ್ದನ, ಈ ಸನ್ನಿಧಾನಗಳ ತೀರ್ಥಂ = ಪುಣ್ಯೋದಕಗಳನ್ನೂ; ಸಃ = ವಿದುರರು; ಆಸಿಷೇವೇ = ಸ್ನಾನಾದಿಗಳಿಂದ ಸೇವಿಸಿದರು.

(ಎಲ್ಲಾ ತೀರ್ಥಕ್ಷೇತ್ರಗಳೂ ಭಗವಂತನ ಮಹಿಮಾಸ್ಪದ ಸ್ಥಾನಗಳಾದರೂ, ಅಧಿಷ್ಠಾನ ಭೇದಗಳಿಂದ ಒಂದೊಂದು ಕಡೆಯಲ್ಲಿ ಒಂದೊಂದು ಬಗೆಯ ವಿಶೇಷ ಮಹಿಮೆಯುಂಟೆಂಬುದು ಇದರ ತಾತ್ಪರ್ಯ.)

**ಅನ್ಯಾನಿ ಚೇಹದ್ವಿಜದೇವ ದೇವೈಃ ಕೃತಾನಿ ನಾನಾಯತನಾನಿ ವಿಷ್ಣೋಃ ।।**

**ಪ್ರತ್ಯಂಕಮುಖ್ಯಾಂಕಿತ ಮಂದಿರಾಣಿ ಯದ್ದರ್ಶನಾತ್ಕೃಷ್ಣ ಮನುಸ್ಮರಂತಿ ।।೨೩।।**

ಯತ್‌ದರ್ಶನಾತ್ = ಯಾವುದರ ದರ್ಶನ ಮಾತ್ರದಿಂದ; ಕೃಷ್ಣಂ ಅನುಸ್ಮರಂತಿ = ಭಕ್ತರು ಶ್ರೀಕೃಷ್ಣನ ಸ್ಮರಣೆಯನ್ನು ಮನಸ್ಸಿಗೆ ತಂದುಕೊಳ್ಳುವರೋ; ಅಂತಹ; ಇಹ = ಈ ಭರತವರ್ಷದಲ್ಲಿನ; ದ್ವಿಜದೇವ ದೇವೈಃ = ಬ್ರಾಹ್ಮಣೋತ್ತಮರಿಂದಲೂ, ದೇವತೆಗಳಿಂದಲೂ; ಕೃತಾನಿ = ನಿರ್ಮಿಸಲ್ಪಟ್ಟ; ವಿಷ್ಣೋಃ = ವಿಷ್ಣುಸಂಬಂಧಿಯಾದ; ಪ್ರತ್ಯಂಕ ಮುಖ್ಯಾಂಕಿತ ಮಂದಿರಾಣಿ = ನಾನಾ ಚಿಹ್ನೆಗಳಲ್ಲಿ ಚಕ್ರಾಯುಧ ಚಿಹ್ನೆಯು ಮುಖ್ಯವಾಗಿ ಉಳ್ಳ; ಅನ್ಯಾನಿ ಮಂದಿರಾಣಿ = ತೀರ್ಥಗಳೇ ಅಲ್ಲದೆ, ದೇವಾಲಯಗಳನ್ನೂ; ಆಸಿಷೇವೇ = ದರ್ಶನ ನಮನಾದಿಗಳಿಂದ ಸೇವಿಸಿದರು.

(ಅನ್ಯ ದೇವತೆಗಳ ಆಲಯಗಳಾದರೂ, ಘಟಿಕಾಚಲದ ಮುಖ್ಯಪ್ರಾಣನಂತೆ, ಚಕ್ರಧಾರಿಣಿಯಾದ ದುರ್ಗಾದೇವಿಯಂತೆ ಚಕ್ರಾಂಕಿತಗಳಾದ ವಿಗ್ರಹಗಳಲ್ಲಿ ವಿಷ್ಣುವಿನ ಸನ್ನಿಧಾನವೇ ಇರುವುದರಿಂದ ಅಂತಹ ದೇವಾಲಯಗಳೂ ಸೇವಿಸಲು ಯೋಗ್ಯವಾದುವೇ ಸರಿ. ಶಿವ, ಗಣಪತಿ ಮೊದಲಾದ ದೇವತೆಗಳಲ್ಲಿ ಅಂತರ್ಯಾಮಿಯಾದ ಚಕ್ರಧರನನ್ನು ಚಿಂತಿಸಿ ಸೇವಿಸಬೇಕೆಂಬುದು ವೈಷ್ಣವ ದೀಕ್ಷೆ.)

**ತತಸ್ತ್ವತಿವ್ರಜ್ಯ ಸುರಾಷ್ಟ್ರಮೃದ್ಧಂ ಸೌವೀರ ಮತ್ಸ್ಯಾನ್ ಕುರುಜಾಂಗಲಾಂಶ್ಚ ।।**

**ಕಾಲೇನ ತಾವದ್ಯಮುನಾಮುಪೇತ್ಯತತ್ರೋದ್ಧವಂ ಭಾಗವತಂ ದದರ್ಶ ।।೨೪।।**

ತತಃತು ಅತಿವ್ರಜ್ಯ = ಅಲ್ಲಿಂದ ಮುಂದೆ ಹೊರಟು; ಋದ್ಧಂ = ಸುಸಮೃದ್ಧಾದ;

ಸುರಾಷ್ಟ್ರಂ = ಸೌರಾಷ್ಟ್ರದೇಶವನ್ನೂ; ಸೌವೀರ, ಮತ್ಸ್ಯಾನ್, ಕುರುಜಾಂಗಲಾನ್, ಚ = ಸೌವೀರ, ಮತ್ಸ್ಯ, ಕುರುಜಾಂಗಲ ದೇಶಗಳನ್ನೂ; ಆಸಿಷೇವೇ = ವಿದುರರು ತೀರ್ಥಯಾತ್ರಾ ನೆವದಿಂದ ಸಂಚರಿಸಿದರು; ಕಾಲೇನ ತಾವತ್ = ಕಾಲಕ್ರಮದಲ್ಲಿ; ಯಮುನಾಂ ಉಪೇತ್ಯ = ಯಮುನಾ ನದಿಯ ತೀರಕ್ಕೆ ಬಂದು; ತತ್ರ = ಅಲ್ಲಿ; ಭಾಗವತಂ = ಭಗವದ್ಭಕ್ತರಾದ; ಉದ್ಧವಂ = ಉದ್ಧವರನ್ನು; ದದರ್ಶ = ಕಂಡರು.

(ತೀರ್ಥಯಾತ್ರಾಕಾಲಗಳಲ್ಲಿ, ತೀರ್ಥಕ್ಷೇತ್ರಗಳ ದರ್ಶನದಿಂದ ಮನಸ್ಸಿಗೆ ನೆಮ್ಮದಿಯುಂಟಾಗುವುದು ಮಾತ್ರವಲ್ಲದೆ, ಅದಕ್ಕಿಂತಲೂ ಹೆಚ್ಚಿನ ಲಾಭವು ಅಲ್ಲಲ್ಲಿ ಕಾಣಬರುವ ಭಗವದ್ಭಕ್ತರ ಸಂಗದಿಂದ ಉಂಟಾಗುವುದೆಂಬುದನ್ನು ಇಲ್ಲಿ ತಿಳಿಸಿರುವರು.)

**ಸವಾಸುದೇವಾನುಚರಂ ಪ್ರಶಾಂತಂ ಬೃಹಸ್ಪತೇರಾಪ್ತನಯಂ ಪ್ರತೀತಂ॥**
**ಆಲಿಂಗ್ಯಗಾಢಂ ಪ್ರಣಯೇನ ಭದ್ರಂ ಸ್ವಾನಾಮಪೃಚ್ಛದ್ಭಗವತ್ಪ್ರಜಾನಾಂ**
**॥೨೫॥**

ವಾಸುದೇವಾನುಚರಂ = ಭಗವತ್ತತ್ವಚಿಂತನಪರರಾದ; ಪ್ರಶಾಂತಂ = ಸ್ವಚ್ಛಮನಸ್ಕರಾದ; ಬೃಹಸ್ಪತೇಃ ಆಪ್ತನಯಂ = ಬೃಹಸ್ಪತ್ಯಾಚಾರ್ಯರಿಂದ ಉಪದೇಶಹೊಂದಿ ನಯಕೋವಿದರಾದ; ಪ್ರತೀತಂ = ಉತ್ತಮ ಖ್ಯಾತಿಯುಳ್ಳವರಾದ ಉದ್ಧವರನ್ನು; ಪ್ರಣಯೇನ = ಬಹಳ ಸ್ನೇಹದಿಂದ; ಗಾಢಂ ಆಲಿಂಗ್ಯ = ಬಿಗಿಯಾಗಿ ಅಪ್ಪಿಕೊಂಡು; ಸ್ವಾನಾಂ = ಸ್ವಕೀಯರಾದ; ಭಗವತ್ಪ್ರಜಾನಾಂ = ಭಗವಂತನಾದ ಶ್ರೀಕೃಷ್ಣನ ವಂಶೀಯರಾದವರ; ಭದ್ರಂ = ಕ್ಷೇಮ ಸಮಾಚಾರವನ್ನು; ಅಪೃಚ್ಛತ್ = ವಿಚಾರಿಸಿದರು.

(ಇಲ್ಲಿ ಉದ್ಧವರ ಗುಣಾತಿಶಯಗಳನ್ನೂ, ಸ್ನೇಹಿತರ ಸಮಾಗಮದ ವೈಖರಿಯನ್ನೂ ಗಮನಿಸಬೇಕು.)

**ಕಚ್ಚಿತ್ಪುರಾಣೌಪುರುಷೌಸ್ವನಾಭ್ಯ ಪದ್ಮಾನುವೃತ್ತ್ಯೇಹ**
**ಕಲಾವತೀರ್ಣೌ ॥**
**ಆಸಾತ ಉರ್ವ್ಯಾಃ ಕುಶಲಂ ವಿಧಾಯ ಕೃತಕ್ಷಣೌಕುಶಲಂ**
**ಶೂರಗೇಹೇ ॥೨೬॥**

ಸ್ವನಾಭ್ಯ ಪದ್ಮ್ಯ ಅನುವೃತ್ತ್ಯಾ = ಭಗವಂತನ ನಾಭೀಕಮಲ ಸಂಭವನಾದ ಬ್ರಹ್ಮನ ಪ್ರಾರ್ಥನೆಯಿಂದ; ಕೃತಕ್ಷಣೌ = ಅವಕಾಶಕಲ್ಪಿಸಿಕೊಂಡವರಾಗಿ; ಇಹ =

ಈ ಲೋಕದಲ್ಲಿ; ಕಲಾವತೀರ್ಣೌ = ಬಲರಾಮ, ಕೃಷ್ಣರು; ಉರ್ವ್ಯಾಃ ಕುಶಲಂ ವಿಧಾಯ = ಲೋಕಕ್ಷೇಮವನ್ನು ಉಂಟುಮಾಡುತ್ತಾ; ಶೂರಗೇಹೇ = ಉಗ್ರಸೇನನ ಮನೆಯಲ್ಲಿ; ಕುಶಲಂ ಆಸಾತೇ ಕಚ್ಚಿತ್ = ಕ್ಷೇಮದಿಂದ ಇರುವರಲ್ಲವೇ?

(ಭೂಭಾರಹರಣಕ್ಕಾಗಿ ಬ್ರಹ್ಮನಿಂದ ಪ್ರಾರ್ಥಿತನಾದ ಭಗವಂತ, ಆದಿಶೇಷನಲ್ಲಿ ತನ್ನ ಶುಕ್ಲಕೇಶಾಂಶವನ್ನಿಟ್ಟು ಬಲರಾಮನಾಗಿಯೂ, ಕೃಷ್ಣಕೇಶಾಂಶದಿಂದ ಸ್ವಯಮಾಗಿಯೂ ಅವತರಿಸಿ ಬಂದವನು. ಅವನ ಕ್ಷೇಮ ಎಂದರೆ ಲೋಕಕ್ಷೇಮ. ಭಗವಂತನ ಅಂಶವೆಂಬುದೂ ಪೂರ್ಣವೇ ಸರಿ ಆದರೆ, ಶುಕ್ಲಕೇಶಾಧಿಷ್ಠಾನವು ಆದಿಶೇಷ; ಕೃಷ್ಣಕೇಶಾಧಿಷ್ಠಾನವು ಸ್ವಾಭಿನ್ನ. (ತನಗೆ ತಾನೇ ಹೊರತು ಬೇರೆಯಲ್ಲ)ಈ ದೃಷ್ಟಿಯಿಂದ "ಕೃಷ್ಣಸ್ತು ಭಗವಾನ್ ಸ್ವಯಂ" ಎಂಬ ವಿವರಣೆ.)

**ಕಚ್ಚಿತ್ಕುರೂಣಾಂಪರಮಃ ಸುಹೃನ್ನೋಭೌಮಃ ಸಆಸ್ತೇಸುಖ ಮಂಗಶೌರಿಃ ।**
**ಯೋವೈ ಸ್ವಸ್ಣಾಂಪಿತೃವದ್ದದಾತಿವರಾನ್ವದಾನ್ಯೋ ವರತರ್ಪಣೇನ ॥೨೭॥**

ಅಂಗ = ಪ್ರಿಯ ಉದ್ಧಾವಾ; ಯಃವದಾನ್ಯಃ = ಯಾವ,ದಾನಶೀಲನಾದವನು; ವರತರ್ಪಣೇನ = ಹಿರಿಯರಿಗೆ ಪ್ರೀತಿಕರವಾಗಿ; ಸ್ವಸ್ಣಾಂ = ಭಗಿನೀವರ್ಗದವರಿಗೆ; ಪಿತೃವತ್ = ತಂದೆಯಂತೆ; ವರಾನ್ ದದಾತಿ = ಇಷ್ಟವಾದವುಗಳನ್ನು ತಪ್ಪದೆ ನೀಡುವನೋ; ಸಃ = ಆ; ಭೌಮಃ = ಪೂಜ್ಯನಾದ; ನಃಕುರೂಣಾಂ ಸುಹೃತ್ = ಕುರುವಂಶೀಯರಾದ ನಮಗೆ ಪ್ರಿಯನಾದ; ಶೌರಿಃ = ಶ್ರೀಕೃಷ್ಣನು; ಸುಖಂ ಆಸ್ತೇಕಚ್ಚಿತ್ = ಕ್ಷೇಮದಿಂದಿರುವನಲ್ಲವೆ?

(ಬಲರಾಮನೊಡನೆ ಕೃಷ್ಣನ ಕ್ಷೇಮ ಸಮಾಚಾರವನ್ನು ವಿಚಾರಿಸಿದುದಲ್ಲದೆ ಪ್ರತ್ಯೇಕವಾಗಿಯೂ ವಿಚಾರಿಸುವುದರಲ್ಲಿರುವ ವಿಶೇಷವನ್ನು ಗಮನಿಸಬೇಕು. ವಿಷ್ಣು ಸರ್ವೋತ್ತಮತ್ವದ ತತ್ವ ಇದರಲ್ಲಡಗಿದೆ.)

**ಕಚ್ಚಿದ್ವರೂಥಾಧಿಪತಿರ್ಯದೂನಾಂ ಪ್ರದ್ಯುಮ್ನ ಆಸ್ತೇಸುಖ ಮಂಗವಾರಃ ।**
**ಯಂರುಕ್ಮಿಣೀ ಭಾಗವತೋಭಿಲೇಭೇ ಆರಾಧ್ಯ ವಿಪ್ರಾನ್ ಸ್ಮರಮಾದಿಸರ್ಗೇ ॥೨೮॥**

ಅಂಗ = ಉದ್ಧಾವಾ; ರುಕ್ಮಿಣೀ = ರುಕ್ಮಿಣೀ ದೇವಿಯು; ಆದಿ ಸರ್ಗೇ = ಹಿಂದಿನ ಜನ್ಮದಲ್ಲಿ; ವಿಪ್ರಾನ್ ಆರಾಧ್ಯ = ಬ್ರಾಹ್ಮಣರನ್ನು ಪೂಜೆಯಿಂದ

ಸಂತೋಷಪಡಿಸಿ; ಭಾಗವತಃ = ಭಗವಂತನಾದ ಶ್ರೀಕೃಷ್ಣನ ದೆಸೆಯಿಂದ; ಯಂಸ್ಮರಂ = ಯಾವ ಮನ್ಮಥನನ್ನು ಲೇಭೇ = ಪುತ್ರನನ್ನಾಗಿ ಪಡೆದಳೋ; ಆ ವೀರಃ = ಪರಾಕ್ರಮಿಯೂ; ಯದೂನಾಂ ವರೂಥ ಅಧಿಪತಿಃ = ಯಾದವರ ಸೇನಾನಾಯಕನೂ ಆದ; ಪ್ರದ್ಯುಮ್ನಃ = ಪ್ರದ್ಯುಮ್ನನು; ಸುಖಂ ಆಸ್ತೇ ಕಚ್ಚಿತ್ = ಕ್ಷೇಮದಿಂದಿರುವನಲ್ಲನೆ?

(ರುಕ್ಮಿಣೀದೇವಿಯು ಬ್ರಾಹ್ಮಣರ ಸೇವೆಯ ಫಲವಾಗಿ ಮನ್ಮಥನನ್ನು ಪುತ್ರನನ್ನಾಗಿ ಪಡೆದಳೆಂಬುದು ಲೋಕ ಶಿಕ್ಷಣಾರ್ಥ ವಿಡಂಬನೆ)

**ಕಚ್ಚಿತ್ಸುಖಂ ಸಾತ್ವತವೃಷ್ಣಿಭೋಜದಾಶಾರ್ಹಕಾಣಾಮಧಿಪಃ ಸ ಆಸ್ತೇ।**
**ಯಮಭ್ಯಷಿಂಚಚ್ಛತಪತ್ರನೇತ್ರೋ ನೃಪಾಸನಾಧಿಂಪರಿಹೃತ್ಯ ದೂರಾತ್ ॥೨೯॥**

ಶತಪತ್ರನೇತ್ರಃ = ಕಮಲಾಕ್ಷನಾದ ಶ್ರೀಕೃಷ್ಣನು; ನೃಪಾಸನಾಧಿಂ = ಸಿಂಹಾಸನವು ಕೈಬಿಟ್ಟು ಹೋಯಿತೆಂಬ ಮನೋವ್ಯಥೆಯನ್ನು; ದೂರಾತ್ ಪರಿಹೃತ್ಯ = ಚೆನ್ನಾಗಿ ಪರಿಹರಿಸಿ; ಯಂ =ಯಾರನ್ನು; ಅಭ್ಯಷಿಂಚತ್ = ಪಟ್ಟಾಭಿಷಿಕ್ತನನ್ನಾಗಿ ಮಾಡಿದನೋ; ಸಃ = ಅಂತಹ; ಸಾತ್ವತ, ವೃಷ್ಣಿ, ಭೋಜ, ದಾಶಾರ್ಹ, ಕಾಣವಂಶೀಯರ; ಅಧಿಪಃ = ಒಡೆಯನಾದ ಉಗ್ರಸೇನನು; ಸುಖಂ ಆಸ್ತೇಕಚ್ಚಿತ್ = ಸುಖವಾಗಿರುವನಲ್ಲವೆ?

(ಕಂಸನಿಂದ ಹಿಂಸಿತನಾಗಿ, ಶ್ರೀಕೃಷ್ಣನ ಚರ್ಯೆಯಿಂದ ಬಿಡುಗಡೆ ಹೊಂದಿ ಸಿಂಹಾಸನವನ್ನು ಪಡೆದವನ ಯೋಗಕ್ಷೇಮ ವಿಚಾರವಿಲ್ಲಿದೆ.)

**ಕಚ್ಚಿದ್ಧರೇಃ ಸೌಮ್ಯ ಸುತಃ ಸದೃಕ್ಷ ಆಸ್ತೇಗ್ರಣೀ ರಥಿನಾಂ ಸಾಧುಸಾಂಬಃ।**
**ಅಸೂತಯಂ ಜಾಂಬವತೀ ವ್ರತಾಢ್ಯಾದೇವಂ ಗುಹಂ ಯೋಂಬಿಕ ಯಾಧೃತೋಗ್ರೇ ॥೩೦॥**

ಯಃ = ಯಾರು; ಅಗ್ರೇ = ಹಿಂದಿನ ಜನ್ಮದಲಿ; ಅಂಬಿಕಯಾಧೃತಃ = ಪಾರ್ವತೀ ಗರ್ಭಸಂಭೂತನಾಗಿದ್ದನೋ; ಯಂ ದೇವಂ ಗುಹಂ = ಯಾವ ಷಣ್ಮುಖ ದೇವನನ್ನು; ವ್ರತಾಢ್ಯಾ = ವ್ರತಫಲ ಪರಿಪುಷ್ಟಳಾದ; ಜಾಂಬವತೀ = ಜಾಂಬವತೀ ದೇವಿಯು; ಅಸೂತ = ಪ್ರಸವಿಸಿದಳೋ; ಸಃ = ಅಂತಹ; ಸದೃಕ್ಷಃ = ಪುತ್ರನೆನಿಸಿಕೊಳ್ಳಲು ಯೋಗ್ಯನಾದ; ಹರೇಃ ಸೌಮ್ಯಸುತಃ = ಶ್ರೀಹರಿಯ (ಕೃಷ್ಣನ) ಸೌಮ್ಯಗುಣ ಶೀಲ ಪುತ್ರನಾದ; ರಥಿನಾಂ ಅಗ್ರಣೀಃ = ರಥಿಕ ಸೇನಾನಿಗಳಲ್ಲಿ

ಪ್ರಮುಖನಾದ; ಸಾಂಬಃ = ಸಾಂಬನು; ಸಾಧು ಆಸ್ತೇಕಚ್ಚಿತ್ = ಕ್ಷೇಮದಿಂದಿರುವ ನಲ್ಲವೆ?

(ಮನ್ಮಥನು ಒಂದು ಕಡೆ ರುಕ್ಮಿಣೀ ಪುತ್ರ ಪ್ರದ್ಯುಮ್ನನಾಗಿಯೂ, ಇನ್ನೊಂದು ಕಡೆ ಜಾಂಬವತೀ ಪುತ್ರನಾದ ಸಾಂಬನಾಗಿಯೂ ಇದ್ದನೆಂಬುದರಲ್ಲಿ ಆಶ್ಚರ್ಯವೇನೂ ಇಲ್ಲ. ದೇವತೆಗಳು ಸಾಂಶರು; ಮಾನವರಂತೆ ನಿರಂಶರಲ್ಲ. ಆದುದದರಿಂದ, ಹೆಚ್ಚು ಹೆಚ್ಚು ಸಾಧನೆಗಾಗಿ, ಬೇರೆ ಬೇರೆ ಕಡೆಗಳಲ್ಲಿ ಅವರು ಏಕಕಾಲದಲ್ಲಿ ಜನ್ಮ ಪಡೆಯಬಲ್ಲವರು.)

> ಕ್ಷೇಮಂ ಸಕಚ್ಚಿದ್ಯುಯುಧಾನ ಆಸ್ತೇ ಯಃಫಲ್ಗುಣಾಲ್ಲಬ್ಧಧನೂರಹಸ್ಯಃ।
> ಲೇಭೇಂಜಸಾಧೋಕ್ಷಜಸೇವಯೈವ ಗತಂತದೀಯಾಂ
> ಯತಿಭಿರ್ದುರಾಪಾಂ ॥೩೧॥

ಯಃ = ಯಾರು; ಫಲ್ಗುಣಾತ್ = ಅರ್ಜುನನಿಂದ; ಲಬ್ಧಧನೂರಹಸ್ಯಃ = ಧನುರ್ವಿದ್ಯೆಯ ರಹಸ್ಯಗಳನ್ನು ತಿಳಿದುಕೊಂಡು; = ಅಧೋಕ್ಷಜ ಸೇವಯಾಏವ = ಶ್ರೀ ಕೃಷ್ಣನ ಸೇವೆಯನ್ನು ಎಡಬಿಡದೆ ಮಾಡುವುದರಿಂದಲೇ; ಯತಿಭಿಃ ದುರಾಪಾಂ = ಧ್ಯಾನಾಸಕ್ತ ಯೋಗಿಗಳಿಗೆ ಸಿಗಲಾರದ; ತದೀಯಾಂ ಗತಿಂ= ಆ ಭಗವಂತನ ಜ್ಞಾನವನ್ನು, ರಕ್ಷಣೆಯನ್ನು; ಅಂಜಸಾ ಲೇಭೇ = ಸುಲಭವಾಗಿ ಪಡೆದನೋ; ಅಂತಹ ಯುಯಧಾನಃ = ಸಾತ್ಯಕಿಯು; ಕ್ಷೇಮಂ ಆಸ್ತೇ ಕಚ್ಚಿತ್ = ಕ್ಷೇಮವಾಗಿರುವನಲ್ಲವೆ?

(ಭಗವಂತನ ಅನುಗ್ರಹ ಸಂಪಾದನೆಗೆ ಜ್ಞಾನಾರ್ಜನೆ, ಮನನ, ಧ್ಯಾನ ಮುಂತಾದವು ನಿರ್ದಿಷ್ಟ ಮಾರ್ಗಗಳಾದರೂ, ಮನಃಪೂರ್ವಕವಾದ ಗುರುಸೇವೆಯಿಂದಲೇ ಅದು ಲಭಿಸುವುದೆಂಬುದನ್ನು ಸಾತ್ಯಕಿಯ ನಿದರ್ಶನದಿಂದ ತಿಳಿಯಬಹುದು. ಜನ್ಮಾಂತರ ಸಂಸ್ಕಾರಗಳಿಂದ ಸಿದ್ಧರಾದವರು ಮಾತ್ರ ಹಾಗೆ ಸೇವಾನಿರತರಾಗಿ ಫಲ ಹೊಂದುವರೆಂಬುದು ರಹಸ್ಯ.)

> ಕಚ್ಚಿದ್ಬುಧಃ ಸ್ವಸ್ತ್ಯನಮೀವ ಆಸ್ತೇಶ್ವಫಲ್ಕಪುತ್ರೋಭಗವತ್ಪ್ರಪನ್ನಃ ।
> ಯಃಕೃಷ್ಣಪಾದಾಂಕಿತ ಮಾರ್ಗಪಾಂಸುಷ್ವಚೇಷ್ಟತ ಪ್ರೇಮ ವಿಭಿನ್ನ
> ಧೈರ್ಯಃ ॥೩೨॥

ಅನಮೀವಃ = ಪಾಪರಹಿತನಾದ; ಭಗವತ್ಪ್ರಪನ್ನಃ = ಭಗವದರ್ಪಿತ ಮನಸ್ಕನಾದ; ಶ್ವಫಲ್ಕ ಪುತ್ರಃ = ಶ್ವಫಲ್ಕರ ಮಗನಾದ; ಬುಧಃ = ಜ್ಞಾನಿಯಾದ ಅಕ್ರೂರನು; ಯಃ = ಯಾವ ಅವನು; ಕೃಷ್ಣಪಾದಾಂಕಿತ ಮಾರ್ಗಪಾಂಸುಷು = ಶ್ರೀ

ಕೃಷ್ಣನ ಹೆಜ್ಜೆಯ ಗುರುತುಗಳಿರುವ ನೆಲದ ಧೂಳನ್ನು ಕಂಡು; ಪ್ರೇಮ ವಿಭಿನ್ನ ಧೈರ್ಯಃ = ಭಕ್ತಿಯಭರದಿಂದ ಸಹಜನಿಲುವಿಗೆ ಬಲಕೊಡುವ ರಜೋಗುಣವನ್ನು ಕಳೆದುಕೊಂಡು; ಅಚೇಷ್ಟತ = ಆನಂದದಿಂದ ಕುಣಿದಾಡಿದನೋ; ಅಂತಹ ಹರಿಭಕ್ತನು; ಸ್ವಸ್ತಿ ಅಸ್ತೇ ಕಚ್ಚಿತ್ = ಕ್ಷೇಮದಿಂದಿರುವನಲ್ಲವೇ (ಭಗವದ್ಭಕ್ತರ ಲಕ್ಷಣವಿಲ್ಲಿ ಸುಮನೋಹರವಾಗಿ ಚಿತ್ರಿತವಾಗಿದೆ.)

**ಕಚ್ಚಿಚ್ಛಿವಂದೇವಕ ಭೋಜ ಪುತ್ರ್ಯಾವಿಷ್ಣು ಪ್ರಜಾಯಾ ಇವ**
**ದೇವಮಾತುಃ ।**

**ಯಾವೈ ಸ್ವಗರ್ಭೇಣ ಬಭಾರ ದೇವಂತ್ರಯೀೀಯಥಾ ಯಜ್ಞ**
**ವಿತಾನಮರ್ಥಂ ।।೩೩।।**

ದೇವಮಾತುಃ ಇವ = ಅದಿತೀ ದೇವಿಯಂತೆ; ಯಥಾ = ಹೇಗೆ; ತ್ರಯೀ = ವೇದಗಳು; ಯಜ್ಞವಿತಾನಂ ಅರ್ಥಂ = ಯಜ್ಞರೂಪೀ ಭಗವಂತನ ಪೂಜಾವಿಧಾಯಕ ಮಾತುಗಳ ಅರ್ಥಗಳನ್ನು ಗರ್ಭದಲ್ಲಡಗಸಿಟ್ಟುಕೊಂಡಂತೆ; ಯಾವೈ = ಯಾವ ಭಾಗ್ಯವಂತಳು; ಸ್ವಗರ್ಭೇಣ = ತನ್ನ ಉದರದಲ್ಲಿ; ದೇವಂ = ಸಕಲ ಲೋಕಗಳೊಡೆಯನನ್ನು; ಬಭಾರ = ಧರಿಸಿದಳೋ; ಅಂತಹ; ವಿಷ್ಣು ಪ್ರಜಾಯಾಃ = ಶ್ರೀಕೃಷ್ಣನ ತಾಯಿಯಾದ; ದೇವಕ ಭೋಜಪುತ್ರ್ಯಾಃ = ಭೋಜ ಕುಲತಿಲಕನಾದ ದೇವಕನ ಪುತ್ರಿಯಾದ ದೇವಕೀ ದೇವಿಯ; ಶಿವಂ ಕಚ್ಚಿತ್ = ಕ್ಷೇಮ ಸಮಾಚಾರವೇನು?

(ದೇವಕೀ ದೇವಿಯ ತಪಸ್ಸಿನ ಫಲವೆಷ್ಟು ದೊಡ್ಡದೆಂಬುದು ಇಲ್ಲಿ ವ್ಯಕ್ತವಾಗಿದೆ. ಕೇವಲ ವೇದಗಳನ್ನು ಅಭ್ಯಾಸ ಮಾಡುವುದಕ್ಕಿಂತ ವೇದಾರ್ಥ ಕೋವಿದರಾಗುವುದು ಹೇಗೆ ಶ್ಲಾಘ್ಯತರವೋ ಹಾಗೆ ಶ್ರೀಕೃಷ್ಣನನ್ನು ಪುತ್ರನನ್ನಾಗಿ ಪಡೆದುದು ಮಾತ್ರವಲ್ಲದೆ, ಅವನ ಮಹಿಮೆಗಳನ್ನು ಕಿವಿಯಾರ ಕೇಳಿ, ನಂತರ ಕಣ್ಣಾರ ಕಂಡು ಆನಂದಿಸಿದುದು ವಸುದೇವ ದೇವಕಿಯರ ಪರಮ ಭಾಗ್ಯವಲ್ಲವೆ!)

**ಅಪಿಸ್ವಿದಾಸ್ತೇ ಭಗವಾನ್ಸುಖಂವೋಯಃ ಸಾತ್ವತಾಂ**
**ಕಾಮದುಘೋನಿರುದ್ಧಃ ।**

**ಯಮಾಮನಂತಿಸ್ಮಹಿ ಶಬ್ದಯೋನಿಂ ಮನೋಮಯಂ ಸತ್ವ**
**ತುರೀಯಮರ್ಥಂ ।।೩೪।।**

ಯಃ ಭಗವಾನ್ ಅನಿರುದ್ಧಃ = ಪ್ರದ್ಯುಮ್ನ ಪುತ್ರನಾದ, ಅಥಾತ್, ಶ್ರೀಕೃಷ್ಣನ ಮೊಮ್ಮಗನಾದ, ಯಾವ ಸದ್ಗುಣ ಪೂರ್ಣನಾದ ಅನಿರುದ್ಧನು; ವಃಸಾತ್ವತಾಂ =

ಸಾತ್ವತಕುಲದವರಾದ ನಮಗೆ; ಕಾಮದುಘಃ = ಮನೋಭೀಷ್ಟಗಳನ್ನು ನೆರವೇರಿಸುವನಾಗಿರುವನೋ; ಯಂ = ಯಾರನ್ನು; ಶಬ್ದಯೋನಿಂ = ವೇದಪ್ರತಿಪಾದ್ಯನೆಂದೂ; ಸತ್ವತುರೀಯಂ ಅರ್ಥಂ = ಚಿತ್ತ, ಅಹಂಕಾರ, ಬುದ್ಧಿ ಮತ್ತು ಮನಸ್ಸು ಎಂಬ ತತ್ವ ಶ್ರೇಣಿಯಲ್ಲಿ ನಾಲ್ಕನೆಯದನ್ನಾಗಿ ಎಣಿಸುವರೋ; ಅಂತಹ; ಮನೋಮಯಂ = ಮನೋಭಿಮಾನಿಯೆಂದೂ; ಆಮನಂತಿಸ್ಮ = ಯಥಾರ್ಥವಾಗಿ ತಿಳಿಯುವರೋ; ಸುಖಂ ಆಸ್ತೇ ಅಪಿಸ್ವಿತ್ = ಅಂತಹ ಅನಿರುದ್ಧನು ಸುಖನಾಗಿರುವನಲ್ಲವೆ?

(ಕಾಮ ಪುತ್ರನಾದ ಅನಿರುದ್ಧನು ಮನೋಭಿಮಾನಿಯಾಗಿರುವುದು ಮಾತ್ರವಲ್ಲದೆ, ಅನಿರುದ್ಧನಾಮಕ ಪರಮಾತ್ಮನ ವಿಶೇಷ ಸನ್ನಿಧಾನದಿಂದ ಯುಕ್ತನಾದುದರಿಂದ ವೇದಪ್ರತಿಪಾದ್ಯತ್ವ, ಮನೋಭೀಷ್ಟದಾತೃತ್ವ ಗುಣಗಳು ಅವನಲ್ಲಿ ಹೊಂದಿಕೊಳ್ಳುತ್ತವೆ. ಅವು ಪ್ರಕಟವಾಗಿಯೂ ಇದ್ದುವೆಂಬುದು ವಿದುರರ ಮಾತುಗಳಿಂದ ತಿಳಿದುಬರುತ್ತದೆ.)

**ಅಪಿಸ್ವಿದನ್ಯೇಚ ನಿಜಾತ್ಮದೈವಮನನ್ಯವೃತ್ತ್ಯಾಸಮನುವ್ರತಾಯೇ ।**

**ಹಾರ್ದಿಕ್ಯಸತ್ಯಾತ್ಮಜ ಚಾರುದೇಷ್ಣ ಗದಾದಯಃ ಸ್ವಸ್ತಿಚರಂತಿ ಸೌಮ್ಯ ॥೩೫॥**

ನಿಜಾತ್ಮದೈವಂ = ಸರ್ವರ ಅಂತರ್ಯಾಮಿಯಾದ ಶ್ರೀಕೃಷ್ಣನನ್ನು; ಅನನ್ಯ ವೃತ್ತ್ಯಾ = ಏಕಮನಸ್ಸಿನಿಂದ; ಯೇ = ಯಾರು; ಸಮನುವ್ರತಾಃ = ಚೆನ್ನಾಗಿ ಅನುಸರಿಸಿಕೊಂಡಿರುವರೋ; ಅಂತಹ; ಅನ್ಯೇಚ = ಇನ್ನೂ ಬೇರೆಯವರಾದ; ಹಾರ್ದಿಕ್ಯ, ಸತ್ಯಭಾಮಾಸುತ, ಚಾರುದೇಷ್ಣ, ಗದಾ, ಆದಯಃ = ಈ ಮೊದಲಾದವರು; ಸೌಮ್ಯ = ಉದ್ಧವಾ; ಸ್ವಸ್ತಿ ಚರಂತಿ ಅಪಿಸ್ವಿತ್ = ಸುಖವಾಗಿ ಬಾಳಿಕೊಂಡಿರುವರಲ್ಲವೆ?

(ಶ್ರೀಕೃಷ್ಣನ ಪುತ್ರರೆನಿಸಿದ ಇವರಲ್ಲಿ ರುಕ್ಮಿಣೀ ಪುತ್ರನಾಗಿ ಜನಿಸಿದ ಚಾರುದೇಷ್ಣನು ಗಣಪತಿಯ ಅಂಶ.)

**ಅಪಿಸ್ವದೋರ್ಭ್ಯಾಂ ವಿಜಯಾಚ್ಯುತಾಭ್ಯಾಂ ಧರ್ಮೇಣಧರ್ಮಃ ಪರಿಪಾತಿ ಸೇತುಂ ।**

**ದುರ್ಯೋಧನೋಽತಪ್ಯತಯತ್ಸಭಾಯಾಂ ಸಾಮ್ರಾಜ್ಯಲಕ್ಷ್ಮ್ಯಾ ವಿಜಯಾನುವೃತ್ತ್ಯಾ ॥೩೬॥**

ದುರ್ಯೋಧನಃ = ದುಷ್ಟಬುದ್ಧಿಯ ದುರ್ಯೋಧನನು; ಸಾಮ್ರಾಜ್ಯ ಲಕ್ಷ್ಮೀವಿಜಯಾನಿವೃತ್ತ್ಯಾ = ರಾಜ್ಯಲಕ್ಷ್ಮಿಯು ವಶವಾದ ಗರ್ವದಿಂದ; ಸಭಾಯಾಂ = ರಾಜಸಭಾಮಧ್ಯದಲ್ಲಿ; ಯತ್ ಅತಪ್ಯತ = ಶ್ರೀಕೃಷ್ಣನ ಉಪದೇಶವನ್ನು ತಿರಸ್ಕರಿಸಿ ಕ್ರೋಧದಿಂದ ಚೀರಾಡಿದನೆಂಬ ಕಾರಣವಿದ್ದರೂ ಕೂಡ; ಧರ್ಮಃ = ಧರ್ಮರಾಯನು; ವಿಜಯಾಚ್ಯುತಾಭ್ಯಾಂ = ಅರ್ಜುನ ಮತ್ತು ಶ್ರೀಕೃಷ್ಣರ ಬೆಂಬಲವುಳ್ಳವನಾಗಿ; ಸ್ವದೋರ್ಭ್ಯಾಂ = ತನ್ನ ಬಾಹುಗಳ ಸಾಮರ್ಥ್ಯವನ್ನು ಬಳಸಿಕೊಂಡು; ಸೇತುಂ = ಸ್ವಧರ್ಮವನ್ನು; ಅಪಿಪರಿಪಾತಿ = ಉಳಿಸಿಕೊಂಡಿರುವನಲ್ಲವೆ?

(ಭಗವಂತನನ್ನೂ ಭಗವದ್ಭಕ್ತರನ್ನೂ ನಂಬಿಕೊಂಡಿರುವ ಸಾಧು ಪುರುಷರು ತಮಗೆ ಅನ್ಯಾಯವಾಯಿತೆಂದು ಕೆರಳದೆ ಸ್ವಧರ್ಮವನ್ನು ಉಳಿಸಿಕೊಳ್ಳುವರೆಂಬುದು ಇಲ್ಲಿ ಧ್ವನಿತವಾಗಿದೆ. ಇಲ್ಲಿ ಧರ್ಮವೆಂದರೆ ಸತ್ಯವ್ರತಾನುಷ್ಠಾನ.)

**ಕಿಂವಾಕೃತಾಘೇಷ್ವಘ ಮತ್ಯಮರ್ಷೀಭೀಮೋಹಿವದ್ದೀರ್ಘತಮಂ**
**ವ್ಯಮುಂಚತ್ ।**
**ಯಸ್ಯಾಂಘ್ರಿಪಾತಂರಣಭೂರ್ನಸೇಹೇ ಮಾರ್ಗಂಗದಾಯಾಶ್ಚ**
**ರತೋವಿಚಿತ್ರಂ ॥೩೭॥**

ಯಸ್ಯ = ಯಾರ; ಗದಾಯಾಃ ವಿಚಿತ್ರ ಮಾರ್ಗಂಚರತಃ = ಗದೆಯ ವರಸೆಗಳಿಗನುಗುಣವಾಗಿ ಚಿತ್ರ ವಿಚಿತ್ರ ರೀತಿಯಲ್ಲಿ ನಡೆದಾಡುವ; ಅಂಘ್ರಿ ಪಾತಂ = ಹೆಜ್ಜೆಯ ಬಡಿತವನ್ನು; ರಣಭೂಃ = ಯುದ್ಧಭೂಮಿಯು; ನಸೇಹೇ = ತಾಳಲು ಅಸಮರ್ಥ ವಾಯಿತೋ; ಅಂತಹ; ಕೃತ ಅಘೇಷು = ಪಾಪಾಚಾರಿಗಳಲ್ಲಿ; ಅಹಿವತ್ = ಸರ್ಪದಂತೆ; ದೀರ್ಘತಮಂ= ಬಹುಕಾಲ; ಅತ್ಯಮರ್ಷೀಃ = ಬಹಳ ಕೋಪವನ್ನು ಹೊಂದತಕ್ಕ; ಭೀಮಃ = ಭೀಮಸೇನನು; ಅಘಂ = ಪ್ರತೀಕಾರ ಬುದ್ಧಿಯನ್ನು; ವ್ಯಮುಂಚತ್ ಕಿಂವಾ = ಬಿಟ್ಟು ಶಾಂತನಾಗಿರುವನೆ?

(ದುಷ್ಟ ಶಿಕ್ಷಣ ಕಾರ್ಯದಲ್ಲಿ ಶ್ರೀಕೃಷ್ಣನಿಗೆ ಭೀಮಸೇನನು ಮುಖ್ಯಾಂಗಭೂತನೆಂಬುದು ಇಲ್ಲಿ ಧ್ವನಿತವಾಗಿದೆ.)

**ಕಚ್ಚಿದ್ಯಶೋಧಾರಥಯೂಥಪಾನಾಂ ಗಾಂಡೀವಧನ್ವೋಪರತಾರಿರಾಸ್ತೇ।**
**ಅಲಕ್ಷಿತೋಯಚ್ಛರಕೂಟಗೂಢೋಮಾಯಾಕಿರಾತೋಗಿರಿಶಸ್ತುತೋಷ**
**॥೩೮॥**

ಯತ್ = ಯಾರ; ಶರಕೂಟಗೂಢಃ = ಬಾಣಗಳ ಸಮೂಹದಿಂದ

ಮುಸುಕಿದವನಾಗಿ; ಅಲಕ್ಷಿತಃ = ಕಾಣದಂತಾದ; ಮಾಯಾಕಿರಾತಃ ಗಿರಿಶಃ = ಶಬರ ವೇಷಧಾರಿಯಾಗಿ ಬಂದ ಶಂಕರನು; ತುತೋಷ = ಸಂತುಷ್ಟನಾದನೋ; ಅಂತಹ; ರಥಯೂಥಪಾನಾಂ = ರಥಿಕರಿಗೆಲ್ಲಾ; ಯಶೋಧಾಃ = ಕೀರ್ತಿಕರನಾದ; ಗಾಂಡೀವಧನ್ವಃ = ಗಾಂಡೀವ ಧನುರ್ಧಾರಿಯಾದ ಅರ್ಜುನನು; ಉಪರತ ಆರಿಃ ಆಸ್ತೇಕಚ್ಚಿತ್ = ಶತ್ರುಗಳನ್ನು ನಿಗ್ರಹಿಸಿ ಸಮಾಧಾನದಿಂದಿರುವನಷ್ಟೇ?

(ತನ್ನ ಬಾಣಪ್ರಯೋಗ ಕೌಶಾಲದಿಂದ ಮಾಯಾ ಶಬರ ವೇಷಧಾರಿಯಾದ ಶಂಕರನನ್ನು ಮೆಚ್ಚಿಸಿ, ಪಾಶುಪತಾಸ್ತ್ರವನ್ನು ಸಂಪಾದಿಸಿದ ಅರ್ಜುನನ ಖ್ಯಾತಿಯು ವರ್ಣಿತವಾಗಿದೆ.)

**ಯಮಾವುತಸ್ವಿತ್ತ್ವಪಿತಾತ ಮಾದ್ರ್ಯಾಃ ಪಾರ್ಥೈರ್ವೃತಾ**
**ಪಕ್ಷ್ಮಭಿರಕ್ಷಿಣೀವ ।**
**ರೇಮಾತ ಉದ್ಧೃತ್ಯ ಮೃಧೇಸ್ವರಿಕ್ಥಂ ಸುಧಾಂ ಸುಪರ್ಣಾವಿವ**
**ವರ್ಜಿವಕ್ತ್ರಾತ್ ॥೩೯॥**

ಪಕ್ಷ್ಮಭಿಃ = ರೆಪ್ಪೆಗಳಿಂದ; ಅಕ್ಷಿಣೀ ಇವ = ಎರಡು ಕಣ್ಣುಗಳಂತೆ; ಪಾರ್ಥೈಃ = ಕುಂತೀಪುತ್ರರಿಂದ; ವೃತೌ = ಸಂರಕ್ಷಿತ ರಾದ; ಮಾದ್ರ್ಯಾಃ ಯಮೌ = ಮಾದ್ರೀದೇವಿಯ ಅವಳಿ ಮಕ್ಕಳಾದ ನಕುಲ ಸಹದೇವರು; ವಜ್ರಿವಕ್ತ್ರಾತ್ = ಇಂದ್ರನ ಕಡೆಯಿಂದ; ಸುಪರ್ಣೌ = ಗರುಡ ಪಕ್ಷಿಗಳು; ಸುಧಾಂ = ಅಮೃತವನ್ನು ಪಡೆದಂತೆ; ಮೇಧೇ = ಯುದ್ಧದಲ್ಲಿ; ಸ್ವರಿಕ್ಥಂ = ತಮ್ಮದಾದ ರಾಜ್ಯೈಶ್ವರ್ಯವನ್ನು; ಉದ್ಧೃತ್ಯ = ಸಂಪಾದಿಸಿ; ರೇಮಾತೇ ಉತಸ್ವಿತ್ = ಸುಖಗಳಾಗಿರುವರಲ್ಲವೆ?

(ಇಲ್ಲಿ ಪಾಂಡವ ಸಹೋದರರ ಅನ್ಯೋನ್ಯಭಾವ ಚೆನ್ನಾಗಿ ವ್ಯಕ್ತವಾಗಿದೆ. ಇಂದ್ರನಿಂದ ಅಮೃತವನ್ನು ಪಡೆದವನು ಗರುಡ. ಇಲ್ಲಿ ಇಬ್ಬರಿಗೆ ಗರುಡನ ಹೋಲಿಕೆ ಹೇಳಬೇಕಾದುದರಿಂದ, ಗರುಡರು ಎಂದಿದ್ದಾರೆ.)

**ಅಹೋಪೃಥಾಪಿ ಧ್ರಿಯತೇರ್ಭಕಾರ್ಥೇ ರಾಜರ್ಷಿವರ್ಯೇಣ**
**ವಿನಾಪಿತೇನ ।**
**ಯಸ್ತ್ವೇಕವೀರೋತಿರಥೋ ವಿಜಿಗ್ಯೇಧನುರ್ದ್ವಿತೀಯಃಕಕುಭಶ್ಚತಸ್ರಃ**
**॥೪೦॥**

ಯಃ = ಯಾರು; ಏಕವೀರಃ = ಅನ್ಯರ ಸಹಾಯವನ್ನಪೇಕ್ಷಿಸದ ವೀರನಾಗಿ; ಧನುರ್ದ್ವಿತೀಯಃ = ತನ್ನ ಧನುಸ್ಸೇ ಸಹಾಯಕವಾದ ಎರಡನೆಯ ವಸ್ತುವಾಗಿ;

ಅತಿರಥಸೇನಾನಿಯಾದ ಪಾಂಡುರಾಜನು; ಚತಸ್ರಃ ಕಕುಭಃ = ನಾಲ್ಕು ದಿಕ್ಕುಗಳನ್ನು; ವಿಜಿಗ್ಯೇ = ಜಯಿಸಿದನೋ; ತೇನ ರಾಜರ್ಷಿವರ್ಯೇಣ = ಅಂತಹ ಋಷಿಸದೃಶನಾದ ರಾಜ ಶ್ರೇಷ್ಠನಿಂದ; ವಿನಾಅಪಿ = ವಿಧುರಳಾದರೂ; ಅರ್ಭಕಾರ್ಥೇ = ಮಕ್ಕಳ ಸಲುವಾಗಿ; ಪೃಥಾ = ಕುಂತೀದೇವಿಯು; ಅಪಿಧ್ರಿಯತೇ ಅಹೋ = ಪ್ರಾಣಧಾರಣೆ ಮಾಡಿಕೊಂಡಿರುವಳಲ್ಲವೇ?

(ಹಿಂದಿನ ಕಾಲದಲ್ಲಿ ಪತಿವ್ರತೆಯರಾದ ವಿಧವೆಯರು ಸಹಗಮನ ಪದ್ಧತಿಯನ್ನು ಅನುಸರಿಸುತ್ತಿದ್ದರು. ಪಾಂಡು ರಾಜನು ಮರಣಿಸಿದಾಗ ಮಾದ್ರೀ ದೇವಿಯು ಸಹಗಮನ ಮಾಡಿದಳು. ಕುಂತೀದೇವಿಯು ಚಿಕ್ಕ ಮಕ್ಕಳ ಯೋಗಕ್ಷೇಮ ನಿರ್ವಹಣಾರೂಪವಾದ ಹರಿಸೇವೆಗಾಗಿ ಜೀವಧಾರಣೆ ಮಾಡಿಕೊಂಡಿದ್ದಳು. ಪತ್ನಿಯರಿಬ್ಬರ ಕಾರ್ಯಗಳೂ ಧರ್ಮಸಮ್ಮತವಾದುವು. ಸ್ವಾರ್ಥದಿಂದ ವಿಧಿಯನ್ನು ಮೀರುವುದು ಅಧರ್ಮ; ಶ್ರೀಹರಿಯ ಸೇವಾರ್ಥ ಮಾಡುವ ಅಧರ್ಮವೂ ಧರ್ಮಸ್ವರೂಪವೇ ಆಗುವುದು.)

**ಸೌಮ್ಯಾನು ಶೋಚೇ ತಮಧಃಪತಂತಂ ಭ್ರಾತ್ರೇಪರೇತಾಯ**
**ವಿದುದ್ರುಹೇಯಃ ।**
**ನಿರ್ಯಾಪಿತೋಯೇನ ಸುಹೃತ್ಸ್ವಪುರ್ಯಾ ಅಹಂ ಸ್ವಪುತ್ರಾನ್**
**ಸಮನುವ್ರತೇನ ॥೬೧॥**

ಯಃ = ಯಾವ ಧೃತರಾಷ್ಟ್ರನು; ಪರೇತಾಯಭ್ರಾತ್ರೇ = ಮರಣಹೊಂದಿದ ಸಹೋದರನ ವಿಷಯದಲ್ಲಿ; ವಿದುದ್ರುಹೇ = ದ್ರೋಹಮಾಡಿದನೋ; ಪುತ್ರಾನ್ ಸಮನುವ್ರತೇನ ಯೇನ = ದುಷ್ಟ ಮಕ್ಕಳ ಪಕ್ಷವನ್ನು ವಹಿಸಿರುವ ಯಾವ ಅವನಿಂದ; ಸುಹೃತ್ ಅಹಂ = ಸ್ನೇಹಪರನಾದ ನಾನು; ಸ್ವಪುರ್ಯಾ = ಸ್ವಂತಊರಿನಿಂದ; ನಿರ್ಯಾಪಿತಃ = ಹೊರಗೆ ಹಾಕಲ್ಪಟ್ಟೆನೋ; ಅಂತಹ; ಭ್ರಾತ್ರೇ = ಸಹೋದರನಿಗಾಗಿ; ತಂ ಅಧಃಪತಂತಂ = ಅವನು ಅಧೋಗತಿಗಿಳಿಯುವುದನ್ನು ಕಂಡು; ಸೌಮ್ಯ = ಅಯ್ಯಾ ಉದ್ಧವಾ; ಅನುಶೋಚೇ = ನಾನು ವ್ಯಥೆಗೀಡಾಗಿದ್ದೇನೆ.

(ಎಲ್ಲರ ಯೋಗಕ್ಷೇಮವನ್ನು ವಿಚಾರಿಸಿ, ಧೃತರಾಷ್ಟ್ರನ ವಿಷಯದಲ್ಲಿ ಅನುತಾಪವನ್ನು ಮಾತ್ರ ಸೂಚಿಸಿರುವುದು ಧೃತರಾಷ್ಟ್ರನಿಗೆ ಕ್ಷೇಮವಿಲ್ಲವೆಂಬುದನ್ನು ದೃಢೀಕರಿಸುತ್ತದೆ. ಅಜ್ಞಾನದಿಂದ ಮೋಹಕ್ಕೊಳಗಾದವರಿಗೆ ಅದೇ ಗತಿ.)

**ಸೋಹಂ ಹರೇರ್ಮರ್ತ್ಯವಿಡಂಬನೇನದೃಶೋನೃಣಾಂ ಭಾವಯತೋ**
**ವಿಧಾತುಃ ।**
**ನಾನ್ಯೋಥಲಕ್ಷ್ಯಃ ಪದವೀಂಪ್ರಸಾದಾಚ್ಚರಾಮಿಪಶ್ಯನ್**
**ಗತವಿಸ್ಮಯೋತ್ರ ॥೬೨॥**

ಸಃ ಅಹಂ = ಆ ನಾನು; ಹರೇಃ = ಶ್ರೀಕೃಷ್ಣನ; ಮರ್ತ್ಯವಿಡಂಬನೇನ = ಮನುಷ್ಯಮಾತ್ರನಂತೆ ವರ್ತಿಸುತ್ತಿರುವ ಚರ್ಯೆಯಿಂದ; ನೃಣಾಂ ದೃಶಃ = ಶ್ರೀಕೃಷ್ಣನ ಮಹಿಮೆಯನ್ನರಿಯದೆ ಸಂಸಾರದಲ್ಲಿ ತೊಳಲುವವರ ಸ್ಥಿತಿಗಳನ್ನು; ಭಾವಯತಃ = ಉಂಟುಮಾಡಿರುವ; ವಿಧಾತುಃ ಪ್ರಸಾದಾತ್ = ಆ ಸರ್ವನಿಯಾಮಕನ ದಯೆಯಿಂದ; ಅತ್ರ = ಈ ವಿಷಯದಲ್ಲಿ; ಗತವಿಸ್ಮಯಃ = ಅಚ್ಚರಿಯಿಲ್ಲದವನಾಗಿ, ನಾನ್ಯಉಪಲಕ್ಷ್ಯಃ = ಬೇರೆ ಲೌಕಿಕ ದೃಷ್ಟಿಯಿಲ್ಲದವನಾಗಿ; ಪದವೀಂ = ಅವನಿಗೆ ಸಮ್ಮತವಾದ ನಿವೃತ್ತಿಮಾರ್ಗವನ್ನು; ಚರಾಮಿ = ಅನುಸರಿಸಿ ನಡೆದಿದ್ದೇನೆ.

(ದೇವರು ಎದುರಿಗೇ ಚರಿಸುತ್ತಿದ್ದರೂ ಭ್ರಾಂತಿಯುಳ್ಳ ಜನರು ಅವನನ್ನು ಗುರುತಿಸಲಾರದೆ ತಮ್ಮ ತಮ್ಮ ಕರ್ಮಗಳಿಗನುಸಾರವಾಗಿ ಸಂಸಾರದಲ್ಲಿ ತೊಳಲುವುದು ತಪ್ಪಿದ್ದಲ್ಲ ಎಂಬ ಸತ್ಯವನ್ನರಿತು ವಿದುರರು, ಅಚ್ಚರಿಗೊಳ್ಳದೆ, ಅದು ಸಹಜವೇ ಸರಿ ಎಂದುಕೊಂಡು, ಬುದ್ಧಿವಂತರಾದ ತಾವು ನಿವೃತ್ತಿಮಾರ್ಗವನ್ನು ಅನುಸರಿಸಿದರು.)

**ನೂನಂನ್ನೃಪಾಣಾಂತ್ರಿಮದೋತ್ಪಥಾನಾಂ ಮಹೀಂ ಮುಹುಶ್ಚಾಲಯ**
**ತಾಂಚಮೂಭಿಃ ।**

**ವಧಾತ್ಪ್ರಪನ್ನಾರ್ತಿಜಿಹೀರ್ಷಯೇಶೋಹ್ಯುಪೈಕ್ಷತಾಘಂ**
**ಭಗವಾನ್ಕುರೂಣಾಂ ॥೪೩॥**

ತ್ರಿಮದೋತ್ಪಥಾನಾಂ = ವಿದ್ಯಾ,ಧನ, ಪರಿಜನ ನಿಮಿತ್ತವಾದ ಮೂರುಬಗೆಯ ಗರ್ವಗಳಿಂದ; ಉತ್ಪಥಾನಾಂ = ಧರ್ಮಮಾರ್ಗಬಿಟ್ಟು ನಡೆಯುವ; ಚಮೂಭಿಃ = ಸೇನಾಬಲಗಳಿಂದ; ಮುಹುಃ = ಮೇಲಿಂದ ಮೇಲೆ; ಮಹೀಂ ಚಾಲಯತಾಂ = ಭೂಮಿಯನ್ನು ಅಲ್ಲೋಲಕಲ್ಲೋಲ ಮಾಡುತ್ತಿರುವ; ಕುರೂಣಾಂ ನೃಪಾಣಾಂ = ಕೌರವ ರಾಜರ; ವಧಾತ್ = ಸಂಹಾರಕ್ಕೆ ಬದಲಾಗಿ; ಭಗವಾನ್ = ಸಮರ್ಥನಾದ ಶ್ರೀಕೃಷ್ಣನು; ಪ್ರಪನ್ನ ಆರ್ತಿಜಿಹೀರ್ಷಯಾ = ತನ್ನ ಭಕ್ತರ ದುಃಖಗಳನ್ನು ಕಳೆಯುವುದಕ್ಕಾಗಿ; ಉಪೇಕ್ಷತ = ನಿರ್ಲಕ್ಷಿಸಿದನು; ನೂನಂಹಿ = ಹಾಗೆ ಹೇಳುವುದೇ ಸರಿ.

(ಭಕ್ತರ ತಾತ್ಕಾಲಿಕ ದುಃಖಗಳನ್ನು ಕಳೆಯುವುದು ಒಂದು ಬಗೆಯಾದರೆ, ದುಃಖಗಳಿಗೆ ಕಾರಣರಾದ ಅಂತರಂಗದ ಶತ್ರುಗಳನ್ನು ನಿರ್ಮೂಲ ಮಾಡುವುದು ಇನ್ನೊಂದು ಬಗೆ. ವಸುದೇವಾದಿಗಳು ತಾತ್ಕಾಲಿಕ ದುಃಖವನ್ನು ಕಂಸಾದಿಗಳ ವಧೆಯಿಂದ ಕಳೆದುಕೊಂಡು, ದುರ್ಯೋಧನಾದಿಗಳಿಂದ ದುಃಖವನ್ನನುಭವಿಸುತ್ತಾ

ಅವರೊಡನೆ ಶ್ರೀಕೃಷ್ಣ ಸಹಾಯವುಳ್ಳರಾಗಿ ಸೆಣಸಾಡುವಾಗ, ಅಪರಂತರಂಗ ಶತ್ರುಗಳ ನಾಶವೂ ಆಗಿ ಹೋಗುವುದರಿಂದ, ಅದಕ್ಕೆ ಅವಕಾಶವನ್ನು ಕೊಟ್ಟು, ಶತ್ರುಗಳ ತಪ್ಪುಗಳನ್ನು ಕೂಡಲೇ ಲಕ್ಷ್ಯಕ್ಕೆ ತಂದುಕೊಳ್ಳಲಿಲ್ಲ ಎಂಬುದು ಇಲ್ಲಿನ ಅಭಿಪ್ರಾಯ. ಅಲ್ಲದೆ, ಕರ್ಣ ಮೊದಲಾದ ಸಜ್ಜನರು ದುಷ್ಟಸಹವಾಸದ ಪರಿಣಾಮದಿಂದ ಮಾಡಬಹುದಾದ ತಪ್ಪುಗಳನ್ನೆಲ್ಲಾ ಮಾಡಿ, ಕಡೆಗೆ ಅಪಜಯ ಹೊಂದಿ, ಒಳಗಿನ ಶತ್ರುಗಳ ನಾಶವನ್ನು ಕಂಡುಕೊಳ್ಳುವುದೂ ಭಗವದಿಚ್ಛೆಯೇ ಸರಿ.)

**ಅಜಸ್ಯ ಜನ್ಮೋತ್ಪಥನಾಶನಾಯ**
**ಕರ್ಮಾಣ್ಯಕರ್ತುರ್ಗ್ರಹಣಾಯಪುಂಸಾಂ।**

**ನತ್ವನ್ಯಥಾಕೋರ್ಹತಿ ದೇಹಯೋಗಂ ಪರೋಗುಣಾನಾಮುತ**
**ಕರ್ಮತಂತ್ರಂ ॥೪೪॥**

ಅಜಸ್ಯ = ಜನನಮರಣರಹಿತನಾದ ಭಗವಂತನ; ಜನ್ಮ = ಅವತಾರವು; ಉತ್ಪಥನಾಶನಾಯ = ಗರ್ವದಿಂದ ಉಬ್ಬಿದವರ ನಾಶಕ್ಕಾಗಿ ಸಂಭವಿಸುವುದು; ಅಕರ್ತುಃ ಸ್ವಾಪೇಕ್ಷೆಯಿಲ್ಲದೆ ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಅಕರ್ತನೆನಿಸುವ ಆ ಪರಮಪುರುಷನ; ಕರ್ಮಾಣಿ = ವ್ಯಾಪಾರಗಳು; ಪುಂಸಾಂ = ದೇಹಗಳಲ್ಲಿ ಬಂದು ಫಲಹೊಂದಬೇಕಾಗಿರುವ ಜೀವರ; ಗ್ರಹಣಾಯ = ಉದ್ಧಾರಕ್ಕಾಗಿಯೇ; ಕರ್ಮ ತಂತ್ರಂ = ಅದು ಕರ್ಮಗಳನ್ನು ಬೆಳಸಿ ಅಳಿಸುವ ಕ್ರಮು; ಉತ = ನಿಜ, ಅನ್ಯಥಾ = ಹಾಗಲ್ಲದ ಪಕ್ಷದಲ್ಲಿ; ದೇಹಯೋಗಂ = ಪ್ರಾಕೃತದಂತಹ ದೇಹಗಳಲ್ಲಿ ಕಾಣಿಸಿಕೊಳ್ಳುವುದನ್ನು; ಕಃ ಅರ್ಹತಿ = ಯಾರು ತಾನೇ ಇಚ್ಛಿಸುವರು; ಗುಣಾನಾಂ ಪರಃ = ಗುಣಸಂಬಂಧಗಳಿಗೆ ದೂರನಾದ ಭಗವಂತನು; ನತು ಅನ್ಯಥಾ = ಲೀಲೆಗೋಸ್ಕರವಾದರೂ ಜಡದೇಹಗಳ ರೂಪವನ್ನು ಹೊಂದುವುದೇ ಇಲ್ಲ.

(ದೇಹಗಳನ್ನು ಧರಿಸಿ, ಕರ್ಮಮಾರ್ಗದಲ್ಲಿ ನಡೆದು ಉದ್ಧಾರ ವಾಗಬೇಕಾದವರು ಜೀವರೇ ಹೊರತು ಭಗವಂತನಲ್ಲ. ಆದುದರಿಂದ, ಅವನು ದೇಹಧಾರಿಯಂತೆ ಸ್ವಸಾಮರ್ಥ್ಯದಿಂದ ಕಾಣಿಸಿದರೂ ಪ್ರಾಕೃತ ದೇಹಗಳನ್ನು ಧರಿಸುವುದಿಲ್ಲ. ಅವನಿಗೆ ಅದರ ಅಗತ್ಯವಿಲ್ಲ. ದೀಪದಿಂದ ದೀಪವು ಬಂದಂತೆ ತಾನು ಸ್ವರೂಪದಿಂದಲೇ ಬಂದು, ಲೌಕಿಕ ಪುರುಷನಂತೆ ಕಾಣಿಸಿಕೊಳ್ಳುವುದು ಸುಜೀವಿಗಳಿಗೆ ತನ್ನ ಕರುಣೆಯ ಪರಿಚಯ ಮಾಡಿಕೊಡುವುದಕ್ಕಾಗಿಯೇ ಸರಿ. ಉಳಿದೆಲ್ಲರ ಯೋಗಕ್ಷೇಮವನ್ನೂ ವಿಚಾರಿಸಿ, ಜಗತ್ತಿನ ಕ್ಷೇಮ ಸಂಗ್ರಹಕ್ಕಾಗಿಯೇ ಅವತರಿಸಿದ ಭಗವಂತನು ಕ್ಷೇಮದಿಂದಿರುವನೇ ಎಂದು ಕೇಳಲಿಲ್ಲ ಎನ್ನುವುದು ಉಚಿತವೇ ಸರಿ.)

ತಸ್ಯಪ್ರಪನ್ನಾಖಿಲ ಲೋಕಪಾನಾಮವಸ್ಥಿತಾನಾಮನುಶಾಸನೇಸ್ವೇ ।
ಅರ್ಥಾಯ ಜಾತಸ್ಯ ಯದುಷ್ವಜಸ್ಯ ವಾರ್ತಾಂಸಖೇ
ಕೀರ್ತಯತೀರ್ಥಕೀರ್ತೇಃ ॥೪೫॥

ಸ್ವೇ ಅನುಶಾಸನೇ ಅವಸ್ಥಿತಾನಾಂ = ಭಾಗವತ ಧರ್ಮದಲ್ಲಿದ್ದು ನಡೆದುಕೊಳ್ಳುವರಾದ; ಪ್ರಪನ್ನ ಅಖಿಲ ಲೋಕಪಾನಾಂ = ಭಕ್ತರಾದ ಎಲ್ಲಾ ಲೋಕಪಾಲಕರ; ಅರ್ಥಾಯ = ಕಾರ್ಯ ನಿರ್ವಾಹ ಸಾಮರ್ಥ್ಯನೀಡುವುದಕ್ಕಾಗಿ; ಯದುಷು = ಯದುಕುಲದಲ್ಲಿ; ಜಾತಸ್ಯ = ಅವತರಿಸಿದ; ತೀರ್ಥಕೀರ್ತೇಃ = ಪುಣ್ಯಪ್ರದಚರಿತ್ರನಾದ; ತಸ್ಯ = ಆ ಶ್ರೀಕೃಷ್ಣನ; ವಾರ್ತಾಂ = ಸಮಾಚಾರವನ್ನು; ಸಖೇ = ಅಯ್ಯಾ ಮಿತ್ರಾ; ಕೀರ್ತಯ = ಶ್ರವಣಮಾಡಿಸು.

(ಜೀವರ ಉದ್ಧಾರಾರ್ಥವಾಗಿ ಭಗವಂತನ ಅವತಾರವೆಂದು ಹಿಂದಿನ ಶ್ಲೋಕದಲ್ಲಿ ಹೇಳಿ, ಲೋಕಪಾಲಕರ ಹಿತಾರ್ಥವಾಗಿ ಅವತಾರವೆಂದು ಇಲ್ಲಿ ಹೇಳಿರುವುದು ಸ್ವಾರಸ್ಯಕರವಾಗಿದೆ. "ಸರ್ವ ಕರ್ತಾನಕ್ರಿಯತೇ ತಂನಮಾಮಿ ರಮಾಪತಿಂ"ಎಂದು ಶ್ರೀಮಾನ್ ಮಧ್ವಾಚಾರ್ಯರು ದ್ವಾದಶಸ್ತೋತ್ರದಲ್ಲಿ ಹೇಳಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಕೇವಲ ತನ್ನ ಸಂಕಲ್ಪಮಾತ್ರದಿಂದ ಜಗದ್ವ್ಯಾಪಾರಗಳನ್ನು ನಡೆಸುವ ಭಗವಂತನು ಮುಖ್ಯಪ್ರಾಣ ದೇವರಾದಿಯಾದ ತತ್ವಾಭಿಮಾನಿಗಳಲ್ಲಿಯೂ, ವ್ಯಕ್ತರಾಗಿ ಲೋಕಪಾಲಕರೆನಿಸುವ ಇಂದ್ರಾದಿ ಗಳಲ್ಲಿಯೂ ಇದ್ದು, ಅವರಿಗೆ ಸಾಮರ್ಥ್ಯನೀಡಿ, ಅವರ ಮುಖಾಂತರ ಸಜ್ಜನರ ಕ್ಷೇಮವನ್ನು ಸಾಧಿಸುವನು; ಉದ್ಧಾರಕಾರ್ಯದ ಪುಣ್ಯಫಲವನ್ನು ಅವರಿಗೆ ಹಂಚಿ ಅವರನ್ನು ಧನ್ಯರೆನಿಸುವನು. ತಾನು ಯಾವ ಫಲವನ್ನೂ ಅಪೇಕ್ಷಿಸುವವನಲ್ಲ. ಆದುದರಿಂದ ಕರ್ತೃತ್ವದ ಮುಖ್ಯ ಹೊಣೆಗಾರಿಕೆ ತನ್ನ ಅನುಚರರಾದ ಲೋಕಪಾಲಕರದೆಂದಾಯಿತು; ಅವರಿಗಾಗಿ ತಾನು ಸಂಕಲ್ಪ ರೂಪವಾದ ಕಾರ್ಯ ನಡೆಸಿದಂತೆಯೂ ಆಯಿತು.)

ತೃತೀಯ ಸ್ಕಂಧ, ಪ್ರಥಮಾಧ್ಯಾಯ ಮುಗಿಯಿತು.

"ಶ್ರೀಕೃಷ್ಣಾರ್ಪಣಮಸ್ತು"

---

# ಶ್ರೀಮದ್ಭಾಗವತ – ತೃತೀಯ ಸ್ಕಂಧ

## ಎರಡನೆಯ ಅಧ್ಯಾಯ

ಶ್ರೀ ಶುಕ ಉವಾಚ:– ಶ್ರೀ ಶುಕಾಯಾರ್ಯ್ಯರು ನುಡಿದರು.

**ಇತಿಭಾಗವತಃಪೃಷ್ಟಃ ಕ್ಷತ್ರಾವಾರ್ತಾಂ ಪ್ರಿಯಾಶ್ರಯಾಂ ।**
**ಪ್ರತಿವಕ್ತುಂನಚೋತ್ಸೇಹೇ ಔತ್ಕಂಠ್ಯಾತ್ಸ್ಮಾರಿತೇಶ್ವರಃ ॥೧॥**

ಇತಿ = ಹಿಂದೆ ಹೇಳಿದ ಪ್ರಕಾರವಾಗಿ; ಕ್ಷತ್ರಾ = ವಿದುರರಿಂದ; ಪ್ರಿಯಾಶ್ರಯಾಂ ವಾರ್ತಾಂ = ಅತ್ಯಂತ ಪ್ರೀತಿಗೆ ವಿಷಯನಾದ ಶ್ರೀಕೃಷ್ಣನ ವಿಚಾರವನ್ನು ಕುರಿತು; ಪೃಷ್ಟಃ = ಪ್ರಶ್ನೆಮಾಡಲ್ಪಟ್ಟ; ಭಾಗವತಃ = ಭಗವದ್ಭಕ್ತರಾದ ಉದ್ಧವರು; ಸ್ಮಾರಿತೇಶ್ವರಃ = ಸಕಲ ಲೋಕೇಶ್ವರನಾದ ಭಗವಂತನ ಮಹಿಮೆಗಳನ್ನು ಸ್ಮರಿಸಿಕೊಂಡು; ಔತ್ಕಂಠ್ಯಾತ್ = ಕಂಠವುಗದ್ಗದಿತವಾದುದರಿಂದ; ಪ್ರತಿವಕ್ತುಂ = ಉತ್ತರಕೊಡಲು; ನಚಉತ್ಸೇಹೇ = ಶಕ್ತರಾಗಲಿಲ್ಲ.

(ಭಗವಂತನ ಲೀಲಾಸ್ಮೃತಿಯಿಂದ ನಿಜಭಗವದ್ಭಕ್ತರು ಹೇಗೆ ಮೈಮರೆತು ಪರವಶರಾಗುವರೆಂಬುದು ಉದ್ಧವರ ಚರ್ಯೆಯಿಂದ ತಿಳಿದುಬರುತ್ತದೆ.)

**ಯಃಪಂಚಹಾಯನೋಮಾತ್ರಾ ಪ್ರಾತರಾಶಾಯ ಯಾಚಿತಃ ।**
**ನೈಚ್ಛತ್ತದ್ರಚಯನ್ಯಸ್ಯ ಸಪರ್ಯಾಂ ಬಾಲಲೀಲಯಾ ॥೨॥**

**ಸಕಥಂ ಸೇವಯಾತಸ್ಯ ಕಾಲೇನ ಜರಸಂಗತಃ ।**
**ಪೃಷ್ಟೇವಾರ್ತಾಂ ಪ್ರತಿಬ್ರೂಯಾದ್ಭರ್ತುಃ ಪಾದಾವನುಸ್ಮರನ್ ॥೩॥**

ಯಃ = ಯಾವ ಉದ್ಧವರು; ಪಂಚಹಾಯನಃ = ಐದುವರ್ಷದ ಬಾಲಕರಾಗಿದ್ದಾಗ; ಬಾಲಲೀಲಯಾ = ಮಕ್ಕಳಾಟದ ರೀತಿಯಲ್ಲಿ; ತಸ್ಯ ಸಪರ್ಯಾಂ = ಆ ದೇವೋತ್ತಮನ ಪೂಜೆಯ ಆಟವನ್ನು; ರಚಯನ್ = ನಡೆಸುತ್ತಾ; ಮಾತ್ರಾ = ತಾಯಿಯಿಂದ; ಪ್ರಾತರಾಶಾಯ = ಬೆಳಗಿನ ಊಟಕ್ಕೆ ಬಾರೆಂದು; ಯಾಚಿತಃ = ಅಕ್ಕರೆಯಿಂದ ಕರೆಸಿಕೊಂಡರೂ; ತತ್ ನೈಚ್ಛತ್ = ಅದನ್ನು ಅಪೇಕ್ಷಿಸಲಿಲ್ಲವೋ; ॥೨॥

ಸಃ = ಅಂತಹ ಏಕಾಂತ ಭಕ್ತರಾದ ಉದ್ಧವರು; ತಸ್ಯ ಸೇವಯಾ = ಆಭಗವಂತನ ಸೇವಾವೃತ್ತಿಯಿಂದಲೇ; ಕಾಲೇನ = ಕಾಲಕ್ರಮದಲ್ಲಿ; ಜರಸಂಗತಃ = ವೃದ್ಧಾಪ್ಯವನ್ನು ಹೊಂದಿದವರಾಗಿ; ತಸ್ಯವಾರ್ತಾಂ ಪೃಷ್ಟಃ = ಆ ಭಗವಂತನ ವಿಚಾರವಾಗಿ ಪ್ರಶ್ನಿಸಲ್ಪಟ್ಟಾಗ; ಭರ್ತುಃ ಪಾದೌ ಅನುಸ್ಮರನ್ = ಹೃದಯೇಶ್ವರನ ಪಾದ ಮಹಿಮೆಗಳನ್ನು ಸ್ಮರಿಸಿ ಪುಳಕಿತರಾಗಿರಲು; ಕಥಂ = ಹೇಗೆ ತಾನೇ; ಪ್ರತಿಬ್ರೂಯಾತ್ = ಮಾತಿಗೆ ಉತ್ತರ ಕೊಡಲು ಸಮರ್ಥರಾದರು!

(ಸಂಸ್ಕಾರ ಬಲವುಳ್ಳ ಭಕ್ತಜನರು ಬಾಲ್ಯದಲ್ಲಿಯೇ ಹರಿಸ್ಮರಣೆಯಿಂದ ಪುಳಕಿತರಾಗಿ ಲೋಕವಾರ್ತೆಯನ್ನು ಮರೆಯುವರೆಂದ ಮೇಲೆ, ಆಜನ್ಮದಲ್ಲಿ ನಿರಂತರ ಹರಿಸೇವೆಯಿಂದ ಭಕ್ತಿಯನ್ನು ಪರಿಪಕ್ವಗೊಳಿಸಿಕೊಂಡವರು ಆ ದೇವದೇವನ ಲೀಲೆಗಳನ್ನು ಸ್ಮರಿಸಿಕೊಂಡ ಕೂಡಲೇ ಆನಂದಪರವಶರಾಗಿ ಅಸಂಪ್ರಜ್ಞಾತ ಸಮಾಧಿ ಸ್ಥಿತಿಯನ್ನು ಹೊಂದಿಬಿಡುವರೆಂದು ಹೇಳಬೇಕಾಗಿಯೇ ಇಲ್ಲ;' ಹಾಗಾಯಿತು, ಉದ್ಧವರ ಸ್ಥಿತಿ.

ಭಗವಂತನಲ್ಲಿ ಭಕ್ತಿಯನ್ನೇಕೆ ಮಾಡಬೇಕೆಂಬ ಪ್ರಶ್ನೆಗೆ ಉತ್ತರ ಇಲ್ಲಿದೆ. ಲೌಕಿಕ ಜಂಜಡದಲ್ಲಿ ಸಿಕ್ಕಿಕೊಂಡಿರುವ ಜೀವರು ಇಲ್ಲಿನ ಅಲ್ಪಸ್ವಲ್ಪ ಸುಖದಿಂದ ತಮ್ಮೊಳಗಿನ ಸಹಜ ಸುಖದ ಪರಿಚಯ ಹೊಂದುವರು. ಜಂಜಡಗಳ ಸಂಬಂಧ ಅಂಟದೆಯೇ ಸರ್ವದಾ ಪೂರ್ಣಸುಖಸ್ವರೂಪನಾದ ಭಗವಂತನೊಡನೆ ಸ್ನೇಹವನ್ನು ಬೆಳೆಸಿಕೊಂಡಾಗ, ಸ್ವತಂತ್ರನೂ ಸರ್ವಸಮರ್ಥನೂ ಆದ ಆ ಸ್ವಾಮಿಯು ಜೀವರ ಲೌಕಿಕ ಸಂಬಂಧಗಳನ್ನು ಬಿಡಿಸಿ, ತನ್ನ ಬಲದಿಂದ ಅವರೊಳಗಿನ ನಿಜಸುಖವನ್ನು ಅನುಭವಕ್ಕೆ ತಂದುಕೊಡುವನು. ಇದೇ ಭಕ್ತಿಯ ಗುಟ್ಟು!)

**ಸಮುಹೂರ್ತಮಭೂತ್ತೂಷ್ಣೀಂ ಕೃಷ್ಣಾಂಘ್ರಿ ಸುಧಯಾ ಭೃಶಂ ।**
**ತೀವ್ರೇಣ ಭಕ್ತಿಯೋಗೇನ ನಿಮಗ್ನಃ ಸಾಧು ನಿರ್ವೃತಃ ॥೪॥**

ಸಃ = ಆಉದ್ಧವರು; ತೀವ್ರೇಣ ಭಕ್ತಿಯೋಗೇನ = ಸ್ವಯೋಗ್ಯತಾನುಸಾರ ಭಕ್ತಿಯ ಪರಾಕಾಷ್ಠೆಯನ್ನು ಮುಟ್ಟಿದವರಾಗಿ; ಕೃಷ್ಣಾಂಘ್ರಿ ಸುಧಯಾ ಭೃಶಂ ಮಗ್ನಃ = ಶ್ರೀ ಕೃಷ್ಣನ ಪಾದಸ್ಮರಣೆಯಿಂದುಂಟಾದ ಆನಂದಾಮೃತದಲ್ಲಿ ಪೂರ್ಣ ಮುಳುಗಿದವರಾಗಿ; ಸಾಧು ನಿರ್ವೃತಃ = ಲೌಕಿಕ ಸಂಬಂಧವನ್ನು ಪೂರ್ತಿ ಕಳೆದುಕೊಂಡು ಪೂರ್ಣಾನಂದ ಭರಿತರಾಗಿ; ಮುಹೂರ್ತಂ = ಸ್ವಲ್ಪಕಾಲ; ತೂಷ್ಣೀಂ ಅಭೂತ್ = ಸುಮ್ಮನಿದ್ದುಬಿಟ್ಟರು.

(ಉದ್ಧವರು ಕೂಡಲೇ ಉತ್ತರ ಕೊಡದೆ ಸುಮ್ಮನಿದ್ದುದಕ್ಕೆ ಲೌಕಿಕ ಸಂಬಂಧವಾದ ದುಃಖವು ಕಾರಣವಲ್ಲ, ಹರಿಸ್ಮರಣೆಯಿಂದುಟಾಂದ ಆನಂದೊದ್ರೇಕವೇ ನಿಜವಾದ ಕಾರಣ ಎಂಬುದು ಇಲ್ಲಿ ವ್ಯಕ್ತವಾಗಿದೆ.)

ಪುಲಕೋದ್ಭಿನ್ನ ಸರ್ವಾಂಗೋ ಮುಂಚನ್ಮೀಲದ್ದೃಶಾಶ್ರು ಸಃ ।
ಪೂರ್ಣಾರ್ಥೋಲಕ್ಷಿತಸ್ತೇನ ಸ್ನೇಹಪ್ರಸರ ಸಂಪ್ಲುತಃ ॥೫॥

ಪುಲಕೋದ್ಭಿನ್ನ ಸರ್ವಾಂಗಃ = ಆನಂದೋದ್ರೇಕದಿಂದ ಕಂಪಿಸುವ ದೇಹಾವಯವಗಳುಳ್ಳ; ಮುಂಚನ್ಮೀಲದ್ದೃಶಾಶ್ರುಃ = ಅರೆತೆರೆದ ಕಣ್ಣುಗಳಿಂದ ಆನಂದಾಶ್ರುವನ್ನು ಸುರಿಸುತ್ತಿರುವ; ಸಃ = ಆ ಉದ್ಧವರು; ಸ್ನೇಹಪ್ರಸರ ಸಂಪ್ಲುತಃ = ಭಕ್ತಿಪ್ರವಾಹದಲ್ಲಿ ಅವಗಾಹ ಸ್ನಾನ ಮಾಡುತ್ತಾ; ಪೂರ್ಣಾರ್ಥಃ = ಪೂರ್ಣ ಪ್ರಯೋಜನ ಹೊಂದಿದವರಾಗಿ; ತೇನ = ವಿದುರರಿಂದ; ಲಕ್ಷಿತಃ ಕಾಣಲ್ಪಟ್ಟವರಾದರು.

(ಜೀವನದ ಸಾರ್ಥಕ್ಯವನ್ನು ಪೂರ್ಣವಾಗಿ ಹೊಂದಿದ ಸ್ಥಿತಿಯಲ್ಲಿದ್ದ ಉದ್ಧವರನ್ನು ವಿದುರರು ಕಂಡರು ಎಂಬುದು ಅಭಿಪ್ರಾಯ. ವೇದಗಳು ಆಂತರಿಕ ಪ್ರಮಾಣಗಳಿಂದಲೇ ಗ್ರಾಹ್ಯಗಳೆಂದು ಸಿದ್ಧವಾಗುವುದಲ್ಲದೆ, ಜ್ಞಾನಿಗಳೂ, ಅನುಭವಿಗಳೂ ಆದ ಆಪ್ತರಿಂದಲೂ ಸಿದ್ಧವಾಗುವುದೆಂಬ ಮುಖ್ಯಾಂಶವು ಇಲ್ಲಿಗಮನಾರ್ಹ. ಈ ರೀತಿಯಲ್ಲಿ ವೇದ ಪ್ರಾಮಾಣ್ಯವನ್ನು ಒಪ್ಪಿಕೊಂಡವರು, ದೇವರಿದ್ದಾನೆಯೇ? ದೇವರನ್ನು ಕಾಣುವುದು ಸಾಧ್ಯವೇ? ಎಂಬ ಹುಚ್ಚುಪ್ರಶ್ನೆಗಳನ್ನು ಕೇಳುವುದೇ ಇಲ್ಲ. ಯೋಗ್ಯಜೀವಿಗಳು ಅನುಭವಿಗಳಾದ ಜ್ಞಾನಿಗಳನ್ನು ಕಾಣುವ ಹಂಬಲವನ್ನು ಹೊಂದಿರುತ್ತಾರೆ. ಕಂಡಾಗ, ಅವರಿಂದ ಉಪದೇಶಹೊಂದಿ ಧನ್ಯರಾಗುತ್ತಾರೆ.)

ಶನಕೈರ್ಭಗವಲ್ಲೋಕಾನ್ನೃಲೋಕಂಪುನರಾಗತಃ ।
ವಿಮೃಜ್ಯ ನೇತ್ರೇವಿದುರಂಪ್ರತ್ಯಾಹೋದ್ಧವ ಉತ್ಸ್ಮಯನ್ ॥೬॥

ಶನಕೈಃ = ಕ್ರಮಕ್ರಮವಾಗಿ; ಭಗವಲ್ಲೋಕಾತ್ = ಭಗವಂತನ ಸಂಸ್ಮರಣೆಯಿಂದ ಮೈಮರೆಸಿದ್ದ ಅಸಂಪ್ರಜ್ಞಾತ ಸಮಾಧಿಸ್ಥಿಯಿಂದ; ನೃಲೋಕಂ ಪುನರಾಗತಃ = ಬಾಂಧವ್ಯದ ಮನುಷ್ಯ ಲೋಕದ ವಿಚಾರಗಳ ಕಡೆಗೆ ಮರಳಿ; ನೇತ್ರೇವಿಮೃಜ್ಯ = ಕಣ್ಣೀರನ್ನು ಒರಸಿಕೊಂಡು; ಉತ್ಸ್ಮಯನ್ = ಮುಗುಳುನಗುತ್ತ; ವಿದುರಂ = ವಿದುರರನ್ನು ಕುರಿತು; ಉದ್ಧವಃ = ಉದ್ಧವರು; ಪ್ರತ್ಯಾಹ = ವಿದುರರ ಪ್ರಶ್ನೆಗಳಿಗೆ ಉತ್ತರ ಕೊಟ್ಟರು,

(ಅಸಂಪ್ರಜ್ಞಾತ ಸಮಾಧಿಸ್ಥಿತಿ ಎಂಬುದು ಈ ಲೋಕದಲ್ಲಿರುವಾಗಲೇ ಮುಕ್ತಿಯ ಅನುಭವದ ಪರಿಚಯವೆನ್ನಬಹುದು. ಇದು ಜೀವನ್ಮುಕ್ತಾವಸ್ಥೆ ಎನಿಸಿಕೊಳ್ಳುತ್ತದೆ. ಲಿಂಗದೇಹವಿನ್ನೂ ಬಿಟ್ಟಿರುವುದಿಲ್ಲವಾದ ಕಾರಣ, ಲೌಕಿಕ ಸಂಬಂಧಗಳೂ ಅಲ್ಪಸ್ವಲ್ಪ

ಉಳಿದುಕೊಂಡಿರುತ್ತವೆ. ಆದುದರಿಂದ ಅಂತಹ ಸಮಾಧಿ ಸ್ಥಿತಿಯು ಯಾವಾಗಲೂ ಏಕಪ್ರಕಾರವಾಗಿ ಇರುವುದಿಲ್ಲ. ಇದು ಇತರ ಸಾಧಕರ ಸೌಭಾಗ್ಯ ಫಲವೇ ಸರಿ. ಉದ್ಧವರಂತಹ ಜೀವನ್ಮುಕ್ತರ ನಿದರ್ಶನವು ಅವರಿಗೆ ದಾರಿ ದೀಪವಾಗುತ್ತದೆ.

ನಮ್ಮ ಕಾಲದಲ್ಲಿಯೂ ಶ್ರೀಪಾದರಾಜರು, ವ್ಯಾಸರಾಯರು, ಪುರಂದರದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಬಂಗಾಳದ ಕೃಷ್ಣ ಚೈತನ್ಯರು ಮೊದಲಾದ ಅಪರೋಕ್ಷೀಕೃತ ಶ್ರೀಶರ ನಿದರ್ಶನಗಳು ಹೇರಳವಾಗಿವೆ. ಅದನ್ನು ಲಕ್ಷಿಸಿ ಭಕ್ತಿ ಮಾರ್ಗವನ್ನು ಹಿಡಿಯದಿದ್ದವರು ನಿರ್ಭಾಗ್ಯರೇ ಸರಿ.)

ಉದ್ಧವ ಉವಾಚ – ಉದ್ಧವರು ಮಾತಾಡಲಾರಂಭಿಸಿದರು.

**ಕೃಷ್ಣದ್ಯುಮಣಿ ನಿಮ್ಲೋಚೇಗೀರ್ಣೇಷ್ವಜಗರೇಣಹ ।**

**ಕಿಂನುನಃ ಕುಶಲಂ ಬ್ರೂಯಾಂ ಗತಶ್ರೀಷುಯದುಷ್ವಹಂ ॥೭॥**

ಕೃಷ್ಣದ್ಯುಮಣಿ ನಿಮ್ಲೋಚೇ = ಕೃಷ್ಣನೆಂಬ ಸೂರ್ಯನು ಅಸ್ತಂಗತನಾಗಿರಲು; ಹ = ನಿಜವಾಗಿ; ಗತಶ್ರೀಷು = ನಷ್ಟವಾದ ಐಶ್ವರ್ಯವುಳ್ಳವರಾಗಿ; ಅಜಗರೇಣ = ಕಾಲಸರ್ಪದಿಂದ; ಗೀರ್ಣೇಷು = ಕಬಳಿಸಲ್ಪಟ್ಟಿರುವ; ನಃ = ನಮ್ಮ ಸಂಬಂಧಿಗಳಾದ; ಯದುಷು = ಯಾದವರ ವಿಷಯದಲ್ಲಿ; ಕುಶಲಂ = ಕ್ಷೇಮ ಸಮಾಚಾರವನ್ನು ಕುರಿತು; ಕಿಂನು ಬ್ರೂಯಾಮ್ = ಏನೆಂದು ಹೇಳಲಿ!

(ಯಾದವರ ನಾಶವನ್ನೂ, ಶ್ರೀಕೃಷ್ಣನು ಈ ಲೋಕದಿಂದ ಕಣ್ಮರೆಯಾದದನ್ನೂ ಹೇಳುವಾಗಲೂ ಕೂಡ, ಸಾಮಾನ್ಯರಂತೆ 'ಅಯ್ಯೋ ಕುಯ್ಯೋ' ಎನ್ನದೆ, 'ಶ್ರೀಕೃಷ್ಣನೆಂಬ ಸೂರ್ಯ' ಎನ್ನುವ ಶುಭ ವಾಚಕಗಳಿಂದಲೇ ಮಾತು ಪ್ರಾರಂಭಿಸಿರುವುದು ನಿಜವಾದ ಭಗವದ್ಭಕ್ತರ ಲಕ್ಷಣವನ್ನು ತಿಳಿಸುತ್ತದೆ.)

**ದುರ್ಭಗೋಬತ ಲೋಕೋಯಂ ಯದವೋನಿತರಾಮಪಿ ।**
**ಯೇಸಂವಸಂತೋನವಿದುರ್ಹರಿಂ ಮೀನಾ ಇವೋಡುಪಂ ॥೮॥**

ಯೇ = ಯಾರು; ಸಂವಸಂತಃ = ಸಮೀಪವರ್ತಿಗಳಾಗಿ ಚೆನ್ನಾಗಿ ಬಾಳಿಕೊಂಡಿದ್ದಾಗಲೂ; ಮೀನಾಃ ಉಡುಪಂ ಇವ = ನೀರಿನಲ್ಲಿ ಕಂಡುಬಂದ ಚಂದ್ರನನ್ನು ಮೀನುಗಳು ಹೇಗೋ ಹಾಗೆ; ಹರಿಂ ನವಿದುಃ = ದುಷ್ಟ ಸಂಹಾರಕ್ಕಾಗಿಯೂ, ಜ್ಞಾನೋಪದೇಶ ಮಾಡುವುದಕ್ಕಾಗಿಯೂ ಬಂದ ಶ್ರೀ ಹರಿಯನ್ನು ಯಥಾವತ್ತಾಗಿ ತಿಳಿಯಲಿಲ್ಲವೋ; ಅಂತಹ; ಅಯಂ ಲೋಕಃ = ಈ

ಲೋಕದ ಜನರು; ದುರ್ಭಗಃ = ನಷ್ಟವಾದ ಐಶ್ವರ್ಯವಳ್ಳವರು; (ಬಹುವಚನಾರ್ಥದಲ್ಲಿ ಜಾತ್ಯೇಕ ವಚನ); ಯದವಃ ಅಪಿ = ಯಾದವರೂ ಕೂಡ; ನಿತರಾಂ ದುರ್ಭಗಾಃ = ಅತ್ಯಂತ ಭಾಗ್ಯಹೀನರು; ಬತ = ನಿಜ.

(ಲೋಕದ ಭಾಗ್ಯ ಬರುತ್ತದೆ, ನಾಶವಾಗಿಹೋಗುತ್ತದೆ. ಶ್ರೀ ಕೃಷ್ಣನ ಮಹಿಮಾ ಜ್ಞಾನವೆಂಬ ಐಶ್ವರ್ಯವು ಇಹದಲ್ಲಿಯೇ ಮನಸ್ಸಿಗೆ ಸುಖಶಾಂತಿಗಳನ್ನು ಒದಗಿಸುವುದಲ್ಲದೆ, ನಿರಂತರವಾಗಿ ಉಳಿಯುತ್ತದೆ. ಶ್ರೀ ಕೃಷ್ಣನನ್ನು ಪ್ರತ್ಯಕ್ಷವಾಗಿ ಕಾಣುತ್ತಾ, ಅವನ ಮಹಿಮೆಯನ್ನು ಅಷ್ಟಿಷ್ಟು ಕಂಡು ಕೇಳಿ ತಿಳಿದಿದ್ದರೂ ಕೃಷ್ಣ ಭಕ್ತರಾಗದೆ ಉಳಿದ ಜನರೂ, ಬಂಧುಗಳಾಗಿ ಜೊತೆಯಲ್ಲಿದ್ದೂ ಅವನ ಮಹಿಮೆಯನ್ನು ತಿಳಿಯದೆ ಹೋದ ಯಾದವರೂ ನಿರ್ಭಾಗ್ಯರೆನ್ನುವುದರಲ್ಲಿ ಸಂಶಯವಿಲ್ಲ.

ಮೀನುಗಳು ನೀರಿನಲ್ಲಿ ಕಂಡು ಬರುವ ಚಂದ್ರನ ಬಿಂಬದಿಂದ ಚಂದ್ರನನ್ನು ಹೇಗೆ ತಿಳಿಯಲಾರವೋ ಹಾಗೆ ಎಂಬ ಉಪಮಾನವನ್ನು ಕೊಟ್ಟಿದ್ದಾರೆ. ಅವು ಕಾಣಲಾಗದಿರುವುದಕ್ಕೆ ನೀರಿನ ಚಲನೆ ಕಾರಣ; ಅದರಂತೆ ಜನರಿಗೆ ಸಾಂಸಾರಿಕ ಚಾಂಚಲ್ಯವು ಜ್ಞಾನಕ್ಕೆ ವಿರೋಧಿಯಾದ ಕಾರಣ.)

**ಇಂಗಿತಜ್ಞಾಃ ಪುರಪೌಢಾ ಏಕಾರಾಮಾಶ್ಚ ಸಾತ್ವತಾಃ ।**
**ಸಾತ್ವತಾಮೃಷಭಂ ಸರ್ವೇಭೂತಾವಾಸಮಮಂಸತ ॥೯॥**

ಇಂಗಿತಜ್ಞಾಃ = ಪರರ ಮನೋಗತಗಳನ್ನರಿಯಬಲ್ಲ; ಪುರಪ್ರೌಢಾಃ = ದೇಹಾಭಿಮಾನಿಗಳಾದ ಜನರು; ಏಕಾರಾಮಾ; ಚ = ಕೇವಲ ಸಂಸಾರಸುಖಗಳಲ್ಲಿ ಮಗ್ನರಾಗಿ; ಸಾತ್ವತಾಃ = ಯಾದವ ಕುಲದವರು; ಸರ್ವೇ = ಎಲ್ಲರೂ; ಭೂತಾವಾಸಂ = ಭೌತಪ್ರಪಂಚಕ್ಕೆ ಆಶ್ರಯನಾದವನನ್ನು; ಸಾತ್ವತಾಂ ಋಷಭಂ = ಸಾತ್ವತರಲ್ಲಿ ಒಬ್ಬಗಣ್ಯ ಪುರುಷನೆಂದೂ; ಭೂತಾವಾಸಂ = ಭೌತಿಕ ಶರೀರ ಉಳ್ಳವನೆಂದೂ; ಅಮಂಸತ = ತಿಳಿದು ಅಜ್ಞಾನಿಗಳಾದರು.

(ಎಲ್ಲರಿಗೂ ದೇವರನ್ನು ಕಂಡುಬಿಡಬೇಕೆಂಬ ಛಲ. ಆದರೆ, ಜೀವನ ಸಂಸ್ಕಾರ ಪೂರ್ಣವಾದಲ್ಲದೆ, ದೇವರು ಎದುರಿಗೆ ಬಂದು ಒಡನೊಡನೆ ಇದ್ದರೂ ಅವನನ್ನು ದೇವರೆಂದು ಗುರುತಿಸಲಾಗುವುದಿಲ್ಲ ವೆನ್ನುವುದಕ್ಕೆ ಶ್ರೀ ಕೃಷ್ಣಾವತಾರ, ಶ್ರೀ ರಾಮಾವತಾರಗಳ ಕಾಲದ ಜನರೇ ಸಾಕ್ಷಿ.)

**ದೇವಸ್ಯಮಾಯಯಾ ಸ್ಪೃಷ್ಟಾಯೇಚಾನ್ಯೇ ಅಸದಾಶ್ರಯಾಃ ।**
**ಭ್ರಾಮ್ಯತೇಧೀರ್ನತದ್ವಾಕ್ಯೈರಾತ್ಮನ್ಯುಪ್ತಾತ್ಮನಾಂ ಹರೌ ॥೧೦॥**

ದೇವಸ್ಯ ಮಾಯಯಾ = ಭಗವಂತನ ಬಂಧಕ ಶಕ್ತಿಯಿಂದ; ಸ್ಪೃಷ್ಟಾ = ಉಪಟಳಕ್ಕೊಳಗಾದ; ಅಸದಾಶ್ರಯಾಃ = ಆದುದರಿಂದಲೇ ಅಜ್ಞಾನಿಗಳಾಗಿ ಅಮಂಗಳ ವೈಷಯಿಕ ಪ್ರಪಂಚದಲ್ಲಿ ಲೀನರಾದ; ಯೇಚ ಅನ್ಯೇ = ಭಗವದ್ವಿಮುಖರಾದ ಬೇರೆಯವರು ಯಾರಿರುವರೋ; ತದ್ವಾಕ್ಯೈಃ = ಅವರ ಮಾತುಗಳಿಂದ; ಆತ್ಮನಿ = ಅಂತರಾತ್ಮನಾದ ಶ್ರೀಹರಿಯಲ್ಲಿ; ಉಪ್ತ ಆತ್ಮನಾಂ = ಮನಸ್ಸನ್ನು ಸ್ಥಿರಗೊಳಿಸಿ ನಿರ್ಮಲರಾದವರ; ಧೀಃ = ಬುದ್ಧಿಯು; ನಭ್ರಾಮ್ಯತೇ = ಕದಲುವುದಿಲ್ಲ.

(ಲೌಕಿಕ ಸುಖಗಳಲ್ಲಿಯೇ ಆಸಕ್ತರಾದ ಅಜ್ಞಾನಿಗಳು ಭಗವಂತನ ಮಹಿಮೆಯನ್ನು ಅರಿಯುವುದಿಲ್ಲವೆಂಬುದನ್ನು ಹಿಂದಿನ ಶ್ಲೋಕದಲ್ಲಿ ಹೇಳಿ, ಜ್ಞಾನಿಗಳಾದವರ ಲಕ್ಷಣವನ್ನು ಇಲ್ಲಿ ತಿಳಿಸಿದ್ದಾರೆ. ಅಜ್ಞಾನಿಗಳೂ, ಅರೆಬೆಂದ ಜ್ಞಾನಿಗಳೂ ಭಗವಂತನನ್ನು ಕಾಣಲಾರದೆ, ತಿಳಿಯಲೂ ಆರದೆ, ಭಗವಂತನಿರುವುದೇ ಸುಳ್ಳು ಮುಂತಾಗಿ ಹೇಳುವ ಮಾತುಗಳಿಂದ ಜ್ಞಾನಿಗಳ ಸ್ಥಿರ ಬುದ್ಧಿಯು ವ್ಯತ್ಯಾಸಹೊಂದುವುದಿಲ್ಲ. ಏಕೆಂದರೆ ಜ್ಞಾನಿಗಮ್ಯನಾದ (ಹಕಾರಾರ್ಥ) ಸಚ್ಚಿದಾನಂದ ಸ್ವರೂಪನಾದ (ರ ಕಾರಾರ್ಥ) ಶ್ರೀಹರಿಯನ್ನು ಸ್ಥಿರವಾಗಿ ನಂಬಿನೆಲೆಯಾದ ಮನಸ್ಸುಳ್ಳವರಾಗಿರುತ್ತಾರೆ. ಶ್ರೀಹರಿಯನ್ನು ನಂಬುವುದು ಕಷ್ಟ. ನಂಬಿದವರು ಬಾಹ್ಯ ಬಾಧೆಗಳಿಂದ ವಿಚಲಿತರಾಗದೆ ನೆಮ್ಮದಿಯಿಂದಿರುವುದನ್ನು ಇತರರು ಅರಿಯಲಾರದೆ, ಬಾಂಧವ್ಯದಿಂದಲೋ ಮೋಹದಿಂದಲೋ ಬುದ್ಧಿಹೇಳಲು ಯತ್ನಿಸುವುದುಂಟು. ಅವರ ಮಾತುಗಳು ಜ್ಞಾನಿಗಳ ಮೇಲೆ ಪರಿಣಾಮವನ್ನು ಬೀರುವುದಿಲ್ಲ.)

**ಪ್ರದರ್ಶ್ಯಾತಪ್ತತಪಸಾಮವಿತಪ್ತ ದೃಶಾಂನೃಣಾಂ ।**
**ಆದಾಯಾಂತರಧಾದ್ಯಸ್ತು ಸ್ವಬಿಂಬಂ ಲೋಕಲೋಚನಂ ॥೧೧॥**

ಯಃತು = ಯಾವ ಶ್ರೀ ಕೃಷ್ಣನು; ತಪ್ತ ತಪಸಾಂ = ಈ ಜನ್ಮದಲ್ಲಿ ತಪಶ್ಚರ್ಯೆಯನ್ನಾಚರಿಸದಿದ್ದರೂ ಹಿಂದಿನ ಜನ್ಮಗಳ ತಪೋಬಲವುಳ್ಳ; ಅತಪ್ತ ದೃಶಾಂ ನೃಣಾಂ = ನಾಶ ಹೊಂದದ ಜ್ಞಾನವುಳ್ಳ ಜನರಿಗೆ; ಲೋಕಲೋಚನಂ = ಲೌಕಿಕರಿಗೆ ಕಾಣುವಂತಹ (ಲೋಕದ ಜನರ ಕಣ್ಣಿಗೆ ಕಣ್ಣಾದ); ಸ್ವಬಿಂಬಂ = ತನ್ನ ಪ್ರತಿಮಾರೂಪವಾದ ಮತ್ತು ಕೇವಲ ಜ್ಞಾನಾನಂದ ಲಕ್ಷಣವುಳ್ಳ ರೂಪದ್ವಯವನ್ನು; ಆದಾಯ = ಗಮನಕ್ಕೆ ತಂದುಕೊಟ್ಟು; ಅಂತರಧಾತ್ ತು = ಇತರರಿಂದ ಆ ರೂಪದ್ವಯವನ್ನು ಮರೆಮಾಚಿದನೆಂಬುದು ನಿಜವಾದ ಸಂಗತಿ.

(ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಇರುವ ಅಂತರವನ್ನು ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಯಾರಿಗೂ ಪೂರ್ಣವಾಗಿ ಗೋಚರಿಸದೆ ಕೇವಲ ಜ್ಞಾನಾನಂದಮಯವಾಗಿರುವುದು

ಭಗವಂತನ ನಿಜರೂಪ. ಜಗತ್ತಿನಲ್ಲಿ ಜ್ಞಾನಿಗೋಚರವಾಗುವ ಶ್ರೀರಾಮ ಕೃಷ್ಣಾದಿ ದಿವ್ಯರೂಪಗಳು ಸಚ್ಚಿದಾನಂದಗಳೇ ಆದ ಪ್ರತಿಮಾ ರೂಪಗಳು. ಆ ರೂಪಗಳನ್ನು ಜ್ಞಾನಿಗಳ ಕಣ್ಣುಗಳಲ್ಲಿ ತನ್ನ ಕಣ್ಣುಗಳನ್ನಿಟ್ಟು, ನೋಡಿ ನೋಡಿಸುವನು. ಅಜ್ಞಾನಿಗಳ ಕಣ್ಣುಗಳಲ್ಲಿಯೂ ತನ್ನ ಕಣ್ಣುಗಳ ಶಕ್ತಿಯೇ ಇದ್ದರೂ, ಅವರ ಸ್ವಭಾವಗಳನ್ನನುಸರಿಸಿ ಅವರು ತನ್ನನ್ನು ನೋಡಿಯೂ ನೋಡದಂತೆ ಮಾಡಿಬಿಡುತ್ತಾನೆ.)

**ಯನ್ಮರ್ತ್ಯಲೀಲೌಪಯಿಕಂ ಸ್ವಯೋಗ ಮಾಯಾ ಬಲಂದರ್ಶಯತಾ ಗೃಹೀತಂ ।**
**ವಿಸ್ಮಾಪನಂ ಸ್ವಸ್ಯಚ ಸೌಭಗರ್ದ್ಧೇಃ ಪರಂಪದಂ ಭೂಷಣ ಭೂಷಣಾಂಗಂ ॥೧೨॥**

ಯತ್ = ಯಾವ ಶ್ರೀ ಕೃಷ್ಣರೂಪವು; ಮರ್ತ್ಯಲೀಲಾ ಔಪಯಿಕಂ = ಮನುಷ್ಯ ಲೋಕದ ಜನರಿಗೆ ಅವರಂತೆಯೇ ಬಾಲ್ಯಯೌವನಾದಿಗಳಿಗೆ ಒಳಗಾದಂತೆ ತೋರಿಸಲು ಅನುವಾದ ರೂಪವೋ, ಅದು; ಸ್ವಯೋಗ ಮಾಯಾಬಲತಃ = ವಿಕಾರಗಳಿಗೆ ಒಳಗಾಗದಿದ್ದರೂ ಆದಂತೆ ತೋರಿಸುವ ತನ್ನ ವಿಶೇಷ ಸಾಮರ್ಥ್ಯದಿಂದ; ಗೃಹೀತಂ = ಸ್ವೀಕೃತವಾದುದು; ಸ್ವಸ್ಯ = ತನ್ನ; ಸೌಭಗಋದ್ಧೇಃ = ಸೌಂದರ್ಯ ವೃದ್ಧಿಯ; ಭೂಷಣ ಭೂಷಣಾಂಗಂ = ಆಭರಣಗಳಿಗೆ ಕಾಂತಿಯನ್ನು ತಂದುಕೊಡುವಂತಿರುವ; ಪರಂಪದಂ = ಲೌಕಿಕ ದೃಷ್ಟಿಗೆ ನಿಲುಕದ ಸ್ಥಾನೀಯವೋ; ಅಂತಹ ರೂಪವು; ವಿಸ್ಮಾಪನಂ ಚ = ಸಾಮಾನ್ಯ ಜನರಿಗೆ ಮಂಕು ಕವಿಸುವಂತಹುದೇ ಆಗಿದೆ.

(ವಿಕಾರಗಳಿಗೆ ಒಳಗಾಗದಿದ್ದರೂ ಒಳಗಾದಂತೆ ತೋರಿಸುವುದೂ, ಜ್ಞಾನಿಗಳಿಗೆ ಮಾತ್ರ ಏಕಪ್ರಕಾರವಾಗಿ ಗೋಚರಿಸುವುದೂ ಆ ಭಗವಂತನ ಸಾಮರ್ಥ್ಯ ವಿಶೇಷ.)

**ಯದ್ಧರ್ಮಸೂನೋರ್ಬತ ರಾಜಸೂಯೇನಿರೀಕ್ಷ್ಯದೃಕ್ ಸ್ವಸ್ತ್ಯಯನಂ ತ್ರಿಲೋಕಃ ।**
**ಕಾರ್ತ್ಸ್ನೇನ ಚಾತ್ರ್ಯೋಪಗತಂ ವಿಧಾತುರರ್ವಾಕ್‌ಸ್ಸೃ ತೌಕೌ ಶಲಮಿತ್ಯಮನ್ಯತ ॥೧೩॥**

ಧರ್ಮ ಸೂನೋಃ = ಧರ್ಮ ರಾಯನ; ರಾಜಸೂಯೇ = ರಾಜಸೂಯಯಾಗ ಸಮಯದಲ್ಲಿ; ಯತ್ ಸಸ್ತ್ಯಯನಂದೃಕ್ = ಯಾವ ಲೋಕ ಮಂಗಳಕಾರವಾದ ದಿವ್ಯ ತೇಜೋಮಯ ಮೂರ್ತಿಯನ್ನು; ನಿರೀಕ್ಷ್ಯ = ಕಂಡು; ಆದನ್ನು; ತ್ರಿಲೋಕಃ = ಮೂರುಲೋಕದ ನಿವಾಸಿಗಳು; ಅರ್ವಾಕ್ ಸೃತೌ ಅತ್ರ =

ಈ ಭೂಲೋಕದ ಸೃಷ್ಟಿಯಲ್ಲಿ ; ಕಾರ್ತ್ಸ್ನ್ಯೇನ ಉಪಗತಂ = ಸಂಪೂರ್ಣತೆಯಿಂದ ಮೂಡಿಬಂದ; ವಿಧಾತಃ = ಬ್ರಹ್ಮನ; ಕೌಶಲಂಇತಿ = ಸೃಷ್ಟಿ ಕೌಶಲವೆಂಬುದಾಗಿ; ಅಮನ್ಯತ = ಭಾವಿಸಿದರು; ಬತ = ಆಶ್ಚರ್ಯವೇ ಸರಿ.

(ಈಗಲೂ ಅನೇಕ ಬುದ್ಧಿವಂತರು ಶ್ರೀ ಕೃಷ್ಣನನ್ನು 'ಮಾದರಿ ಮಾನವ ವ್ಯಕ್ತಿ' ಎಂದು ಭಾವಿಸುವರು. ಧರ್ಮರಾಯರ ಅಶ್ವಮೇಧದ ಸಮಯದಲ್ಲಿ ವಿರಾಜಮಾನವಾದ ಶ್ರೀ ಕೃಷ್ಣನನ್ನು ಕಂಡಾಗಲೂ, ಭೂಲೋಕದವರು ಮತ್ತು ಸ್ವರ್ಗಪಾತಾಳಾದಿ ಲೋಗಳಿಂದ ಬಂದು ಅದೃಶ್ಯರಾಗಿ ನಿಂತು ನೋಡಿದವರು ಹಾಗೆಯೇ ಭಾವಿಸಿದರಂತೆ! ಅದು ಹಾಗಾದುದು ಭಗವಂತನ ಮಾಯಾಶಕ್ತಿಯಿಂದ ಹಾಗೆ ಅವರೊಳಗೆ ನಿಂತು ನೋಡಿ ನೋಡಿಸಿದವನು ಅವನೇ!)

**ಯಸ್ಯಾನುರಾಗಪ್ಲುತ ಹಾಸರಾಸಲೀಲಾವಲೋಕಪ್ರತಿಲಬ್ಧಮಾನಾಃ।**
**ವ್ರಜಸ್ತ್ರಿಯೋದೃಗ್ಭಿರನು ಪ್ರವೃತ್ತಧಿಯೋಽವತಸ್ಥುಃ ಕಿಲಕೃತ್ಯಶೇಷಾಃ॥೧೪॥**

ಯಸ್ಯ = ಯಾವ ಶ್ರೀ ಕೃಷ್ಣನ; ಅನುರಾಗ ಪ್ಲುತ = ಪ್ರೇಮಪೂರ್ಣವಾದ; ಹಾಸರಾಸ = ಮುಗುಳ್ನಗೆಯಲ್ಲಿ ಚಿಮ್ಮುವ ಆನಂದ ರಸಯುಕ್ತವಾದ; ಲೀಲಾ ಅವಲೋಕ = ಅನುಗ್ರಹಪೂರ್ವಕ ದೃಷ್ಟಿಯಿಂದ; ಪ್ರತಿಲಬ್ಧ ಮಾನಾಃ = ಸಮ್ಮಾನಿತರಾದ; ವ್ರಜಸ್ತ್ರಿಯಃ = ವ್ರಜದನಾರಿಯರು; ದೃಗ್ಭಿಃ ಅನುಪ್ರವೃತ್ತ ಧಿಯಃ = ಕಣ್ಮನಗಳು ಒಂದುಗೂಡಿದವರಾಗಿ; ಕೃತ್ಯಶೇಷಾಃ = ಇಷ್ಟಾರ್ಥ ಪೂರ್ತಿಯಿಂದ; ಅವತಸ್ಥುಃ ಕಿಲ = ನಿಂತುಬಿಟ್ಟರಲ್ಲವೆ!

(ಶಾಸ್ತ್ರ ಸಮ್ಮತಿಯಿಂದ ಪತಿಪತ್ನಿಯರಾದವರು ಪರಪುರುಷ ಅಥವ ಪರಪತ್ನಿ ಸಂಬಂಧ ಬೆಳೆಸಿದರೆ ಅದು ವ್ಯಭಿಚಾರ. ಲೋಕದ ಸ್ತ್ರೀಪುರುಷರೆಲ್ಲರಿಗೂ ಪುರುಷೋತ್ತಮನಾದ ಶ್ರೀಹರಿಯೇ ಶಾಸ್ತ್ರ ಸಮ್ಮತನಾದ ಪತಿ. ಸೃಷ್ಟಿಗೆ ಮೊದಲು ಜೀವರಿಗೆ ಇದರ ಪರಿಚಯವಿರುವುದಿಲ್ಲ. ಲೌಕಿಕಬಂಧನ ರೂಪವಾದ ಸ್ತ್ರೀ ಪುರುಷರ ದಾಂಪತ್ಯ ಪದ್ಧತಿಯ ಅನುಸರಣೆಯಿಂದ ಪ್ರೇಮಸಂಬಂಧವಾದ ಅನುಭವ ಅಭಿವೃದ್ಧಿಯಾಗುವುದು. ಇದರ ಪ್ರಯೋಜನ, ಪರಮಾತ್ಮನಲ್ಲಿ ಪ್ರೇಮ ಸಮರ್ಪಣೆ ಮತ್ತು ತತ್ಫಲವಾದ ಕೃತಕೃತ್ಯತೆ. ಲೌಕಿಕ ಬಂಧನಕ್ಕೆ ಅಹಂಕಾರ ನಿಮಿತ್ತವಾದ ಅಭಿಮಾನ ಕಾರಣ. ಅದು ಪ್ರೇಮದ ರೀತಿನೀತಿಗಳ ಅಭ್ಯಾಸಕ್ಕಾಗಿ ಅವಶ್ಯಕವೆಂದೇ ಸರ್ವಜ್ಞನಾದ ಶ್ರೀ ಹರಿಯು ಜೀವರನ್ನು ಬಂಧನದಲ್ಲಿಟ್ಟು, ನಿಯಮಗಳಲ್ಲಿ ನಡೆಸಿ, ಉಪಕಾರ ಮಾಡುತ್ತಾನೆ. ಅಹಂಮಮತಾಭಾವವನ್ನು ನೀಗಿಕೊಂಡಾಗ ಪುರಷಪ್ರವರನಾದ ಆ ಸ್ವಾಮಿಯಲ್ಲಿ ನಿರರ್ಗಳ ಪ್ರೇಮ ಸಮರ್ಪಣೆಯು ಸಾಧ್ಯವಾಗುವುದು. ಇದು ಜನ್ಮಜನ್ಮಾಂತರಗಳ ಸಂಸ್ಕಾರ ಫಲ. ಅಂತಹ

ಸಂಸ್ಕಾರಭರಿತರಾದ ಸುಜೀವಿಗಳು ನಂದವ್ರಜದ ಸ್ತ್ರೀಯರು. ಅವರು ನಿಶ್ಶಂಕೆಯಿಂದ ಸಕಲ ಲೌಕಿಕ ಬಂಧನಗಳನ್ನೂ ಕಳಚಿಕೊಂಡು ಶ್ರೀ ಕೃಷ್ಣನಲ್ಲಿ ಆತ್ಮ ಸಮರ್ಪಣೆ ಮಾಡಿಕೊಂಡವರು; ಆ ಸ್ವಾಮಿಯ ಮಂದಹಾಸಯುಕ್ತವಾದ ಕರುಣಾದೃಷ್ಟಿಯಿಂದ ಅವರು ಪೂರ್ಣ ಕೃತಕೃತ್ಯರಾದರೆಂಬುದು ಅತ್ಯಂತ ಶ್ಲಾಘನೀಯವಾದುದು. ಇದೇ ಶ್ರೀ ಕೃಷ್ಣನ ರಾಸಲೀಲೆಯ ಮರ್ಮ.)

ಸ್ವಶಾಂತರೂಪೇಷ್ವಿತರೈಃಸ್ವರೂಪೈರಭ್ಯರ್ದ್ಯಮಾನೇಷ್ವನುಕಂಪಿತಾತ್ಮಾ ।
ಪರಾವರೇಶೋಮಹದಂಶಯುಕ್ತೋಹ್ಯಜೋಪಿಜಾತೋ
ಭಗವಾನ್ಯಥಾಗ್ನಿಃ ॥೧೫॥

ಸ್ವಶಾಂತರೂಪೇಷು = ಶಾಂತ ಸ್ವಭಾವದವರಾದ ತನ್ನವವರಲ್ಲಿ (ತನ್ನವರಲ್ಲಿರುವ ತನ್ನ ಶಾಂತ ಬಿಂಬರೂಪಗಳು); ಇತರೈಃ ರೂಪೈಃ = ಕೋಪಸ್ವಭಾವದ ದುಷ್ಟರಿಂದ (ಕೋಪಸ್ವಭಾವದವರಲ್ಲಿರುವ ತನ್ನ ಕೋಪ ಪ್ರದರ್ಶಕ ಬಿಂಬರೂಪಗಳಿಂದ); ಅಭ್ಯರ್ದ್ಯಮಾನೈಃ = ಹಿಂಸೆಗೊಳಗಾಗುತ್ತಿರಲು (ಹಿಂಸೆಗೊಳಗಾದಂತೆ ನಟಿಸುತ್ತಿರಲು); ಅನುಕಂಪಿತಾತ್ಮಾ = ದಯೆಯಿಂದ ಕೂಡಿದ ಹೃದಯವುಳ್ಳವನಾಗಿ; ಭಗವಾನ್ ಪರಾವರೇಶಃ = ಜೀವಕೋಟಿ ಈಶಕೋಟಿಗಳನ್ನು ಮೀರಿದ ಪ್ರಭುವಾದ ಶ್ರೀ ಮಹಾವಿಷ್ಣುವು; ಮಹದಂಶ ಯುಕ್ತಃ = ತನಗೆ ಮುಖ್ಯಪ್ರತಿಬಿಂಬಭೂತರಾದ ಬ್ರಹ್ಮದೇವರ ಪ್ರಾರ್ಥನೆಯಿಂದ ಯುಕ್ತನಾಗಿ; ಅಜಃ ಅಪಿ = ಇತರರಂತೆ ಜನ್ಮ ಪಡೆಯುವನಲ್ಲದಿದ್ದರೂ; ಅಗ್ನಿಃ ಯಥಾ = ಕಾಷ್ಠದಿಂದ ಅಗ್ನಿಯು ಹೊರಬರುವಂತೆ; ಜಾತಃ = ಜನಿಸಿದನು; ಹಿ = ಇದು ನಿಜವಾದ ಸಂಗತಿ.

(ದುಷ್ಟರಿಂದ ಶಿಷ್ಟರಿಗೆ ಆಗುತ್ತಿರುವ ಹಿಂಸೆಯನ್ನು ತಪ್ಪಿಸುವುದಕ್ಕಾಗಿ ಭಗವಂತನ ಅವತಾರವೆಂಬುದನ್ನಿಲ್ಲಿ ತಿಳಿಸಿದ್ದಾರೆ. "ನಹಿ ಪ್ರತಿಬಿಂಬಸ್ಯ ಕ್ರಿಯಾ; ಸಹಿ ಬಿಂಬಕ್ರಿಯಯೈವ ಕ್ರಿಯಾವಾನ್" ಎಂದಿರುವ ಪ್ರಕಾರ 'ಶಿಷ್ಟಬಿಂಬ'ನಿಗೆ 'ದುಷ್ಟಬಿಂಬ'ನಿಂದ ಹಿಂಸೆಯಾದಂತೆ ನಾಟಕವಾಡಿದರೆ ದುಷ್ಟರಿಂದ ಶಿಷ್ಟರಿಗೆ ಹಿಂಸೆಯ ಅನುಭವ ಸ್ಪರ್ಶವಾಗುತ್ತದೆ. ಅವರಿಗೆ ದುಷ್ಟರ ಸಹವಾಸವಿರುವುದನ್ನೂ, ಕರ್ಮನಿಮಿತ್ತವಾದ ಅದರ ಕಾರಣವನ್ನೂ ತಿಳಿಸುವುದಕ್ಕಾಗಿ ಈ ರೀತಿಯಾಗಿ ಭಗವಂತನು ನಟಿಸುತ್ತಾನೆ. ಕರ್ಮಗಳ ಫಲಭೋಗ ಜೀವರಿಗೇ ಹೊರತು ತನಗಲ್ಲ. ಕರ್ಮಫಲಭೋಗದಿಂದ ಜೀವರಿಗೆ ಜ್ಞಾನೋದಯ. 'ಮಹದಂಶ'ಎಂದರೆ ಬ್ರಹ್ಮದೇವರಲ್ಲಿ ಪ್ರಕಟವಾಗುವ ಭಗವಂತನ ವಿರಾಟ್‌ಬಿಂಬರೂಪ. ಕಾಷ್ಠದಲ್ಲಿ ಗುಪ್ತನಾಗಿರುವ ಅಗ್ನಿಯು ಕಾಣಿಸಿಕೊಂಡಂತೆ ಭಗವಂತನ ಅವತಾರ; ಇತರರಂತೆ ಗರ್ಭವಾಸಾದಿಗಳಿಲ್ಲ.)

ಮಾಂಖೇದಯತ್ಯೇತದಜಸ್ಯಜನ್ಮ ವಿಡಂಬನಂ ಯದ್ವಸುದೇವಗೇಹೇ ।
ವ್ರಜೇಚವಾಸೋऽ ರಿಭಯಾದಿವ ಸ್ವಯಂಪುರಾದ್ವ್ಯವಾಸೀದ್ಯ
ದನಂತವೀರ್ಯಃ ॥೧೬॥

ವಸುದೇವಗೇಹೇ = ವಸುದೇವನ ಪತ್ನಿಯಾದ ದೇವಕೀದೇವಿಯಲ್ಲಿ; ಅಸ್ಯ ಜನ್ಮ = ಈ ಶ್ರೀ ಕೃಷ್ಣನ ಜನನವೆನ್ನುವುದು; ಚ = ಮತ್ತು; ವ್ರಜೇವಾಸಃ= ಕಂಸನ ಭಯ ತಪ್ಪಿಸುವುದಕ್ಕಾಗಿ ಶಿಶುರೂಪೀ ಕೃಷ್ಣನು ನಂದವ್ರಜದಲ್ಲಿ ಬೆಳೆಯಬೇಕಾಯಿತೆನ್ನುವುದು; ಅರಿಭಯಾದಿವ = ಜರಾಸಂಧಾದಿ ಶತ್ರುಗಳ ಭಯದಿಂದಲೋ ಎನ್ನುವಂತೆ; ಸ್ವಯಂ ಪುರಾತ್ ವ್ಯವಾಸೀತ್ = ತಾನಾಗಿಯೇ ತನ್ನ ಪಟ್ಟಣದಿಂದ ಪಲಾಯನ ಮಾಡಿದನೆನ್ನುವುದು; ಏತತ್ ವಿಡಂಬನಂ = ಈ ಎಲ್ಲಾ ನಟನೆಯು; ಮಾಂ ಖೇದಯತಿ = ನನಗೆ ಭ್ರಮೆಯನ್ನುಂಟುಮಾಡುತ್ತದೆ.

(ದ್ವೇಷಿಗಳಾದ ತಮೋಯೋಗ್ಯರಿಗೆ ಭ್ರಾಂತಿಯನ್ನುಂಟುಮಾಡುವುದಕ್ಕಾಗಿ ಭಗವಂತನು ಜನಿಸಿದಂತೆ, ಬೆಳೆದಂತೆ, ಭಯಗೊಂಡಂತೆ ತೋರಿಸಿಕೊಳ್ಳುವುದು ನಿಜ. ಉತ್ತಮರಾದ ಸುಜೀವಿಗಳಿಗೆ ಅಂತಹ ಭ್ರಾಂತಿಯು ತಟ್ಟದಿದ್ದರೂ, ದುಷ್ಟತಾತ್ವಿಕರು ಸಹವಾಸಿಗಳಾಗಿ ಇದ್ದೇ ಇರುವುದರಿಂದ ಒಮ್ಮೊಮ್ಮೆ ಭಗವಂತನ ಚಮತ್ಕೃತಿಗಳನ್ನು ಆಲೋಚನೆಯಿಂದ ವಿಮರ್ಶಿಸಿ ತಿಳಿಯಬೇಕಾಗಿ ಬರುವುದು. "ಮುಹ್ಯಂತಿ ಯಂ ಸೂರಯಃ" ಎಂಬುದರ ಅಭಿಪ್ರಾಯವು ಇಲ್ಲಿ ವ್ಯಕ್ತವಾಗಿದೆ.)

ದುನೋತಿ ಚೇತಃ ಸ್ಮರತೋಮಮೈತದ್ಯದಾಹಪಾದಾವಭಿವಂದ್ಯ
ಪಿತ್ರೋಃ।
ತಾತಾಂಬಕಂ ಸಾದುರುಕಂಪಿತಾನಾಂ ಪ್ರಸೀದತನ್ನೋऽಕೃತ
ನಿಷ್ಕೃತೀನಾಂ ॥೧೭॥

ಪಿತ್ರೋಃ = ತಂದೆತಾಯಿಗಳಾದ ವಸುದೇವ ದೇವಕಿಯರ; ಪಾದೌ ಅಭಿವಂದ್ಯ = ಪಾದಗಳಿಗೆ ನಮಸ್ಕರಿಸಿ; ತಾತ = ತಂದೆಯೇ; ಅಂಬ = ತಾಯೀ; ಸಾತ್ ಉರುಕಂಪಿತಾನಾಂ = ಕಂಸನ ದೆಸೆಯಿಂದ ಬಹುವಾಗಿ ನೊಂದ ನಿಮಗಾಗಿ; ಅಕೃತ ನಿಷ್ಕೃತೀನಾಂ = ಕಂಸನ ಅಪರಾಧಕ್ಕೆ ಪ್ರತಿಮಾಡಲಾಗದಿದ್ದ; ನಃ = ನಮ್ಮ; ತತ್ = ಆತಪ್ಪಿಗಾಗಿ; ಪ್ರಸೀದ = ಕೋಪಿಸಿಕೊಳ್ಳದೆ ಪ್ರಸನ್ನರಾಗಿರಿ; ಎಂದು; ಏತತ್ ಯತ್ ಆಹ = ಶ್ರೀಕೃಷ್ಣನು ಯಾವ ಈ ಮಾತನ್ನು ಆಡಿದನೋ ಅದನ್ನು; ಸ್ಮರತಃ = ಸ್ಮರಿಸಿಕೊಳ್ಳುವ; ಮಮಚೇತಃ = ನನ್ನ ಮನವು; ದುನೋತಿ = ಚಿತ್ರವಿಚಿತ್ರ ಭಾವನೆಗಳಿಂದ ಕದಡಿಹೋಗುತ್ತಿದೆ.

(ವಸುದೇವ ದೇವಕಿಯರು ಕಂಸನಿಂದೇರ್ಪಟ್ಟ ಬಂಧನದಲ್ಲಿ ನೊಂದಬಗೆಯನ್ನೂ, ಪ್ರತೀಕಾರಮಾಡದೆ ಬಹುಕಾಲ ಅಸಹಾಯಕನಾಗಿದ್ದಂತೆ ಶ್ರೀಕೃಷ್ಣನಾಡಿದ ನುಡಿಗಳನ್ನೂ ನೆನೆಸಿಕೊಂಡು ಉದ್ಧವರ ಮನಸ್ಸು ಉದ್ವೇಗಕ್ಕೊಳಗಾಯಿತು. ವಸುದೇವ ದೇವಕಿಯರಿಗಾದ ದುಃಖವನ್ನು ಶ್ರೀಕೃಷ್ಣನು ತನ್ನ ಕಣ್ಣೀರಿನಿಂದ ಮತ್ತು ಅನುಕಂಪದ ಮಾತುಗಳಿಂದ ಪ್ರದರ್ಶಿಸಿದ ಬಗೆ ಅವರ ಮನಸ್ಸನ್ನು ಕಲಕಿಬಿಟ್ಟಿತು. ಅದೇ ನಿಟ್ಟಿನಲ್ಲಿ ಕಂಸನ ಮೇಲಿನ ಕ್ರೋಧವೂ ಉದ್ವೇಗಕ್ಕೆ ಮರೆಗು ಕೊಟ್ಟಿತು. 'ನಃ'ಎಂದಾಗ, ಶ್ರೀಕೃಷ್ಣನು ತನ್ನನ್ನೂ, ಅಣ್ಣ ಬಲರಾಮನನ್ನೂ ನಿರ್ದೇಶಿಸಿ ಹೇಳಿದನೆಂದು ತಿಳಿಯಬೇಕು.)

**ಕೋವಾ ಅಮುಷ್ಯಾಂಘ್ರಿ ಸರೋಜ ರೇಣುಂ**
**ವಿಸ್ಮರ್ತುಮೀಶೇತಪುಮಾನ್ವಿಜಿಘ್ರನ್ ।**
**ಯೋವಿಸ್ಫುರದ್ಭ್ರೂ ವಿಟಪೇನ ಭೂಮೇರ್ಭಾರಂ ಕೃತಾಂತೇನ**
**ತಿರಶ್ಚಕಾರ ॥೧೮॥**

ಯಃ = ಯಾವಶ್ರೀಕೃಷ್ಣನು; ಕೃತಾಂತೇನ = ಯಮಸದೃಶ ಭಯಂಕರವಾದ; ವಿಸ್ಫುರತ್ = ಜಾಜ್ವಲ್ಯಮಾನವಾದ; ಭ್ರೂ ವಿಟಪೇನ = ಸ್ವಲ್ಪಮಾತ್ರ ಹುಬ್ಬಿನ ಚಲನೆಯಿಂದ; ಭೂಮೇಃ ಭಾರಂ = ದೈತ್ಯ ಸಮೂಹದ ಉಪಟಳದಿಂದ ತುಂಬಿದ್ದ ಭೂಭಾರವನ್ನು; ತಿರಶ್ಚಕಾರ = ಇಳಿಸಿಬಿಟ್ಟನೋ; ಅಮುಷ್ಯ = ಅಂತಹ ಅವನ; ಅಂಘ್ರಿ ಸರೋಜ ರೇಣುಂ = ಪಾದಕಮಲದ ಪರಾಗವನ್ನು; ಜಿಘ್ರನ್ = ಮೂಸಿ ನೋಡಿ ಆನಂದಿಸಿ; ಕಃ ವಾ ಪುಮಾನ್ = ಯಾವ ಮಾನವನು ತಾನೇ; ವಿಸ್ಮರ್ತುಂ ಈಶೇತ = ಮರೆಯಬಲ್ಲನು.;

(ಭಗವದರ್ಪಿತವಾದ ತುಳಿಸೀದಳದ ವಿಚಿತ್ರ ಸುವಾಸನೆ, ಧೂಪದ ಘಮಘಮ, ಆರತಿಯ ಪ್ರಭಾಪೂರ್ಣಪ್ರಕಾಶ, ಪಂಚಾಮೃತದ ಸವಿ ಮುಂತಾದುವನ್ನು ಸೇವಿಸಿದವರಿಗೆ ಈ ಶ್ಲೋಕದ ಅರ್ಥ ಸ್ವಲ್ಪ ಮಟ್ಟಿಗೆ ಸ್ಫುರಿಸೀತು. ಸಾಕ್ಷಾತ್ ಶ್ರೀಕೃಷ್ಣನ ಕೋಮಲ ಪಾದಕಮಲದ ದರ್ಶನವೇ ಆಗಿ, ಅಪಾದಕಮಲಗಳ ಮೇಲೆ ತಲೆಯನಿಟ್ಟು ನಮಸ್ಕರಿಸಿದಾಗ ಆಗುವ ಅನುಭವ, ವರ್ಣನಾತೀತ; ಭಕ್ತ ಜನೈಕವೇದ್ಯ, ಆ ಅನುಭವ ಜನ್ಮಜನ್ಮಾಂತರಗಳಲ್ಲಿಯೂ ಮರೆಯಲಾರದಂತಹುದು. ಅದಕ್ಕೆ ಸಾಕ್ಷಿ ಉದ್ಧವರು.)

**ದೃಷ್ಟಾಭವದ್ಭಿರ್ನನು ರಾಜಸೂಯೇ ಚೈದ್ಯಸ್ಯ ಕೃಷ್ಣಂ ದ್ವಿಷತೋಽಪಿಸಿದ್ಧಿಃ । ಯಂ ಯೋಗಿನಃ ಸಂ ಸ್ಪೃಹಯಂತಿ ಸಮ್ಯಗ್ಯೋಗೇನ ಕಸ್ತದ್ವಿರಹಂ**
**ಸಹೇತ ॥೧೯॥**

ಯೋಗಿನಃ = ಶಾಸ್ತ್ರಾಭ್ಯಾಸದ ರೀತಿ ನೀತಿಗಳನ್ನು ಬಲ್ಲವರು, ಹಾಗೂ ಯೋಗಮಾರ್ಗದಿಂದ ವರ್ತಿಸುವವರು; ಯಂ = ಯಾವ ಭಗವಂತನ ಪ್ರಸಾದ ರೂಪವಾದ ಸಿದ್ಧಿಯನ್ನು; ಸಂಸ್ಪೃಹಯಂತಿ = ಬಹುವಾಗಿ ಅಪೇಕ್ಷಿಸುವರೋ; ಸಿದ್ಧಿಃ = ಅಂತಹ ಉತ್ತಮವಾದ ಸಿದ್ಧಿಯು; ಕೃಷ್ಣಂ ದ್ವಿಷತಃ ಅಪಿ = ಶ್ರೀಕೃಷ್ಣನಲ್ಲಿ ದ್ವೇಷ ಮಾಡುತ್ತಿದ್ದವನಾದರೂ; ಚೈದ್ಯಸ್ಯ = ಶಿಶುಪಾಲನಿಗೆ; ರಾಜಸೂಯೇ = ಧರ್ಮರಾಯರ ರಾಜಸೂಯಾ ಸಮಾರಂಭದಲ್ಲಿ ಲಭಿಸಿದುದು;ಭವದ್ಭಿಃ = ನಿಮ್ಮೆಲ್ಲರಿಂದಲೂ; ದೃಷ್ಟಾನನು = ನೋಡಲ್ಪಟ್ಟಿತು ಅಲ್ಲವೆ!; ತತ್ ವಿರಹಂ = ಅಂತಹ ಶ್ರೀಕೃಷ್ಣನ ಅಗಲುವಿಕೆಯನ್ನು; ಕಃ ಸಹೇತ = ಯಾವನು ತಾನೇ ಸಹಿಸಬಲ್ಲನು!

(ಸನಕಾದಿಗಳಿಂದ ಶಾಪಗ್ರಸ್ತರಾದ ಜಯವಿಜಯರಿಗೆ ಉಂಟಾದ ದುಃಖ, ಶ್ರೀಹರಿಯ ದರ್ಶನ, ಸೇವಾಮೊದಲಾದ ಭಾಗ್ಯಗಳನ್ನು ಕಳೆದುಕೊಂಡು ದೈತ್ಯಾವೇಶಯುಕ್ತರಾಗಿ ಮೂರು ಜನ್ಮ ಕಳೆಯಬೇಕಾದ ರೀತಿಯದಾಯಿತು. ದೇವರ ಸನ್ನಿಧಾನದಿಂದ ದೂರವಾದುದೇ ಶಿಕ್ಷೆ. ಹಿರಣ್ಯಕಶಿಪು, ರಾವಣ, ಶಿಶುಪಾಲಾದಿಗಳಿಗೆ ಆ ದುಃಖ ಒಳಗೆ ಕುದಿಯುತ್ತಿತ್ತು; ಮೇಲೆ ಮಾತ್ರ ದೈತ್ಯಾ ವೇಶದ ಫಲ, ಸ್ಪರ್ಧೆ, ದ್ವೇಷ. ಭಕ್ತರಂತೆ ದೇವರಲ್ಲಿ ಪ್ರೇಮ ನೈವೇದ್ಯವನ್ನು ನೀಡದೆ ದ್ವೇಷಿಸಿದರೂ, ಕೋಪಿಸಿಕೊಳ್ಳದೆ ಅವರ ದೋಷಗಳನ್ನು ಕಳೆದು ಮತ್ತೆ ತನ್ನ ಬಳಿಗೆ ಕರೆದುಕೊಂಡ ಶ್ರೀಹರಿಯನ್ನು ನಿಜ ಭಕ್ತರಾದವರು ಹೇಗೆ ತಾನೇ ಮರೆಯಲು ಸಾಧ್ಯ! ತನ್ನವರ ಕಷ್ಟಗಳನ್ನು ಕಳೆದು ದಃಖ ನಿವಾರಣೆ ಮಾಡುವುದೇ ಭಗವಂತನ ಸಂಕಲ್ಪ. ಅಂತಹ ಪ್ರಭುವನ್ನು ಮರೆತು ಕಾಲ ಕಳೆಯುವುದು ಸಂಸಾರದ ಸುಳಿಯಲ್ಲಿ ಸಿಕ್ಕಿದವರ ಹಣೆಬರಹ.)

**ತಥೈವಚಾನ್ಯೇ ನರಲೋಕ ವೀರಾಯ ಆಹವೇ ಕೃಷ್ಣ ಮುಖಾರವಿಂದಂ।**
**ನೇತ್ರೈಃ ಪಿಬಂತೋನಯನಾಭಿರಾಮಂ ಪಾರ್ಥಾಸ್ತ್ರಪೂತಾಃ**
**ಪದಮಾಪುರಸ್ಯ ॥೨೦॥**

ತಥೈವ = ಅದೇ ರೀತಿಯಾಗಿ; ಆಹವೇ = ಮಹಾಭಾರತ ಯುದ್ಧ ಕಾಲದಲ್ಲಿ; ನಯನಾಭಿರಾಮಂ = ಕಣ್ಣುಗಳಿಗೆ ಆನಂದದಾಯಕವಾದ; ಕೃಷ್ಣ ಮುಖಾರವಿಂದಂ = ಶ್ರೀಕೃಷ್ಣನ ಮುಖಕಮಲದ ಮಧುಮಯ ದರ್ಶನವನ್ನು; ನೇತ್ರೈಃ ಪಿಬಂತಃ = ಕಣ್ಣುಗಳಿಂದ ಆಸ್ವಾದಿಸಿದ; ಅನ್ಯೇ ಯೇ ನರಲೋಕ ವೀರಾಃ = ಇತರ ಮಾನವ ವೀರಾಗ್ರಣಿಗಳೂ; ಪಾರ್ಥಾಸ್ತ್ರ ಪೂತಾಃ = ಅರ್ಜುನನ ದಿವ್ಯ ಬಾಣಗಳಿಂದ ಹತರಾಗಿ ತಮ್ಮ ಪಾಪಗಳನ್ನು ನೀಗಿಕೊಂಡು; ಅಸ್ಯ ಪದಂ ಚ ಆಪುಃ = ಈ ಭಗವಂತನ

ಅನುಗ್ರಹಕ್ಕೆ ಪಾತ್ರರಾಗಿ ತಮ್ಮ ತಮ್ಮ ಪದವಿಗಳನ್ನು ಹೊಂದಿದರು; ಮುಕ್ತಿಗೆ ಅರ್ಹತೆಯನ್ನು ಪಡೆದುಕೊಂಡರು.

(ದುರ್ಯೋಧನನ ಪಕ್ಷದಲ್ಲಿ ಯುದ್ಧಮಾಡಬೇಕಾದಂತಹ ದುಷ್ಕರ್ಮ ಪೀಡಿತರಾದ ಭೀಷ್ಮ, ದ್ರೋಣ, ಕರ್ಣ, ಶಲ್ಯಾದಿ ವೀರರು ಶ್ರೀಕೃಷ್ಣನ ಮುಖಾರವಿಂದವನ್ನು ನೋಡುತ್ತಾ-ನೋಡುತ್ತಾ ಅರ್ಜುನನ ಬಾಣಗಳಿಂದ ಹತರಾದಾಗ ಅವರಿಗೆ ಅಂಟಿದ್ದ ಅಸುರಾವೇಶಗಳು ತೊಲಗಿಹೋದುವು; ಮನಸ್ಸುಗಳು ನಿರ್ಮಲವಾದುವು; ಭಗವದ್ಭಕ್ತಿಹೆಚ್ಚಿತು. ಇದರಿಂದ ನಾವು ಕಲಿಯಬೇಕಾದ ಪಾಠವೊಂದುಂಟು. ಕೇವಲ ತಾತ್ಕಾಲಿಕ ಕರ್ಮಗಳಿಂದ ನಾವು ಜನರ ಯೋಗ್ಯತೆಗಳನ್ನು ಅಳೆಯಲು ಹೋಗಬಾರದು. ದೀರ್ಘ ವಿಮರ್ಶೆಯಿಂದ ಅವರ ಗುಣ ದೋಷಗಳನ್ನು ತೂಗಿ ನೋಡಿದಲ್ಲದೆ ಆತುರದ ನಿರ್ಣಯ ಮಾಡಬಾರದು.)

**ಸ್ವಯಂತ್ವಸಾಮ್ಯಾತಿಶಯ ಸ್ತ್ರ್ಯಧೀಶಃ ಸ್ವಾರಾಜ್ಯ ಲಕ್ಷ್ಮ್ಯಾಪ್ತ ಸಮಸ್ತ ಕಾಮಃ ।**

**ಬಲಿಂಹರದ್ಭಿಃ ಸುರಲೋಕ ಪಾಲೈ: ಕಿರೀಟಕೋಟ್ಯೇಡಿತ ಪಾದಪೀಠಃ ॥೨೧॥**

ಅಸಾಮ್ಯಾತಿಶಯಃ = ತನಗೆ ಸಮಾನರೂ, ತನ್ನನ್ನು ಮೀರಿದವರೂ ಇಲ್ಲದ; ತ್ರ್ಯಧೀಶಃ = ಮೂರುಲೋಕಗಳಿಗೂ, ಅನಂತಾಸನ-ಶ್ವೇತದ್ವೀಪ-ವೈಕುಂಠಗಳೆಂಬ ಮೂರು ಮುಕ್ತ ಸ್ಥಾನಗಳಿಗೂ ಸ್ವಾಮಿಯಾದ; ಸ್ವರಾಜ್ಯ ಲಕ್ಷ್ಮ್ಯಾ = ಸರ್ವ ಸ್ವತಂತ್ರ ಲಕ್ಷಣವುಳ್ಳ ಸ್ವರೂಪ ಐಶ್ವರ್ಯದಿಂದ ಸಂಪನ್ನನಾಗಿ; ಆಪ್ತ ಸಮಸ್ತ ಕಾಮಃ = ಸ್ವಾನಂದಭರಿತನಾಗಿ, ಅದೇ ಸಮಸ್ತ ಇಷ್ಟಾರ್ಥಗಳ ಪೂರೈಕೆ ಎಂಬಂತಿರುವ; ಸ್ವಯಂ ತು = ಆ ಕೃಷ್ಣನಾದರೋ; ಕಿರೀಟಕೋಟ್ಯಾ = ಕಿರೀಟ ಧಾರಣೆ ಮಾಡಿ ಕೋಟಿಕೋಟಿ ಸಂಖ್ಯೆಯಲ್ಲಿ; ಬಲಿಂಹರದ್ಭಿಃ = ಪೂಜಾರ್ಥವಾಗಿ ಬಂದ; ಸುರಲೋಕಪಾಲೈಃ = ದೇವಲೋಕಗಳ ಮುಖ್ಯಸ್ಥರಿಂದ; ಈಡಿತಃ = ಸ್ತೋತ್ರ ಮಾಡಲ್ಪಟ್ಟ; ಪೀಠಃ = ಪಾದಗಳನ್ನು ಹೊತ್ತ ಪೀಠ ಉಳ್ಳವನಾಗಿರುವನು.

(ಭಗವಂತನು ಭಕ್ತರ ಉದ್ಧಾರಾರ್ಥವಾಗಿ ಸೃಷ್ಟ್ಯಾದಿಗಳನ್ನು ಮಾಡಿ ತನ್ನ ಅವತಾರ ಕಾರ್ಯಗಳಿಂದ ಅವರನ್ನು ಸಂರಕ್ಷಿಸುವನೇ ಹೊರತು, ತನಗಾಗಿ ಅವನು ಏನನ್ನೂ ಮಾಡಬೇಕಾಗಿಲ್ಲ. ಇದನ್ನರಿತ ದೇವಪ್ರವರರು ಕೋಟಿಕೋಟಿ ಸಂಖ್ಯೆಯಲ್ಲಿ ಬಂದು, ಅವನ ಪಾದಗಳಿಗೆ ನಮಿಸಿ ಸ್ತೋತ್ರ ಮಾಡಿ ಧನ್ಯರಾಗುವರು. ಆ

ಸ್ತೋತ್ರವಾದರೋ ತಮ್ಮ ಹೃದಯ ಶುದ್ಧಿಗಾಗಿಯೇ ಹೊರತು ಆ ಪರಮಾತ್ಮನ ಸಂತೋಷವನ್ನು ಹೆಚ್ಚಿಸುವುದಕ್ಕಾಗಿ ಅಲ್ಲ. ಮರ್ತ್ಯಲೋಕದ ಜನರಿಗೆ ಹೊಗಳಿಕೆಬೇಕು; ಆ ದೇವ ದೇವನಿಗೆ ಅದರ ಅಗತ್ಯವಿಲ್ಲ. ಭಕ್ತ ಜನರಿಗೆ ದರ್ಶನ ಕೊಡುವುದಕ್ಕಾಗಿ, ದಿವ್ಯಾಲಂಕಾರ ಭರಿತನಾಗಿ, ದಿವ್ಯವಾದ ಆಸನದಲ್ಲಿ ಕುಳಿತ, ದಿವ್ಯವಾದ ಪಾದಪೀಠದ ಮೇಲೆ ಪಾದಗಳನ್ನಿಟ್ಟುಕೊಂಡು ಶ್ರೀಕೃಷ್ಣ ಕುಳಿತಿರಲು, ಆ ಪಾದಪೀಠದ ಮಹಿಮೆಯನ್ನು ಸ್ತುತಿಸುವುದರಿಂದಲೇ ನಮ್ಮ ಇಷ್ಟಾರ್ಥಗಳೆಲ್ಲಾ ಲಭಿಸಿಬಿಡುವುವು. ಅಷ್ಟು ಘನ ಮಹಿಮನೂ, ವರ್ಣಿಸಲಸದಳನೂ ಆದವನು ಅವನು. ಇಲ್ಲಿ ಪಾದಪೀಠವೆಂಬುದು ಜಡ ವಸ್ತುವಲ್ಲ. ಲಕ್ಷ್ಮೀದೇವಿಯ ಸನ್ನಿಧಾನ ಯುಕ್ತವಾದುದು. ಅಂಭೃಣೀಸೂಕ್ತದ ಅರ್ಥವನ್ನಿಲ್ಲಿ ಅಳವಡಿಸಿಕೊಳ್ಳಬೇಕು.)

**ತತ್ತ ಸ್ಯ ಕೈಂಕರ್ಯ ಮಲಂಭೃತಾನ್ನೋ ವಿಗ್ಲಾಪಯತ್ಯಂಗ ಯದುಗ್ರ ಸೇನಂ ।**
**ತಿಷ್ಠನ್ನಿಷಣ್ಣಂ ಪರಮೇಷ್ಠಿ ಧಿಷ್ಣ್ಯೇನ್ಯಬೋಧಯದ್ದೇವ ನಿಧಾರಯೇತಿ ॥೨೨॥**

ಅಂಗ = ಅಯ್ಯಾ, ಪ್ರಿಯ ವಿದುರ; ತಿಷ್ಠನ್ = ತಾನು ನಿಂತುಕೊಂಡು; ಪರಮೇಷ್ಠಿ ಧಿಷ್ಣ್ಯೇ = ಸಿಂಹಾಸನದಲ್ಲಿ; ನಿಷಣ್ಣಂ = ಕುಳಿತ; ಉಗ್ರಸೇನಂ = ಉಗ್ರಸೇನ ಮಹಾರಾಜನನ್ನು; ಯತ್ = ಯಾವ ರೀತಿಯಲ್ಲಿ; 'ದೇವ, ನಿಧಾರಯ' ಇತಿ = 'ಮಹಾರಾಜಾ, ಪರಾಕು' ಎಂಬುದಾಗಿ ಹೇಳುತ್ತಾ; ತಸ್ಯ ಕೈಂಕರ್ಯಂ = ಉಗ್ರಸೇನ ಮಹಾರಾಜನ ಸೇವೆಯನ್ನು; ಅಲಂಭೃತಾತ್ = ಕೈಗೊಂಡುದರಿಂದ; ತತ್ = ಆ ಶ್ರೀಕೃಷ್ಣನ ಚರ್ಯೆಯು; ನಃ = ನಮ್ಮನ್ನು; ವಿಗ್ಲಾಪಯತಿ = ಮೋಹದೊಳಿಸುತ್ತದೆ.

(ಶ್ರೀಕೃಷ್ಣನ ಮಾಹಾತ್ಮ್ಯವನ್ನು ಬಲ್ಲವರೂ ಕೂಡ ಅವನ ಲೋಕವಿಡಂಬನ ಕಾರ್ಯಗಳನ್ನು ತಂಡು ಬೆರಗಾಗುತ್ತಿದ್ದರೆಂಬುದರಲ್ಲಿ ಆಶ್ಚರ್ಯವೇನಿಲ್ಲ. ಒಳಹೊರಗೆ ಬಿಂಬಕಾರ್ಯವನ್ನು ಕಾಣುವವರೆಗೆ ಮೋಹ ತಪ್ಪಿದುದಲ್ಲ. ಜೀವರು ಸತ್ವಗುಣದ ಎಲ್ಲೆಯನ್ನೂ ಮೀರಿ ಪೂರ್ಣ ಗುಣಾತೀತರಾದಲ್ಲದೆ ಅದು ಸಾಧ್ಯವಾಗುವುದಿಲ್ಲ. ಶ್ರೀಶ್ರೀಪಾದರಾಜರಂತಹ ಮಹಾನುಭಾವರಿಗೆ ಅದು ಸಾಧ್ಯ. "ನಿಜ ಮಹಾನಂದೈಕ ಮಗ್ನೋಗುರುಃ" ಎಂದು ಅವರು ಸ್ತುತಿಸಲ್ಪಟ್ಟಿದ್ದಾರೆ. ಮೋಹದಿಂದಲಾದರೂ, "ಏನಪ್ಪಾ ಇವನ ಮಹಿಮೆ, ಲೋಕಗಳಿಗೆಲ್ಲಾ ಸ್ವಾಮಿಯಾದವನು ಸಾಮಾನ್ಯ ಸೇವಕನಂತೆ ವರ್ತಿಸುತ್ತಿದ್ದಾನೆ!" ಎಂದು ಅಚ್ಚರಿಗೊಂಡರೂ, ಅದೇ ಪರಮ ಭಾಗ್ಯ.)

ಅಹೋಬಕೀಯಂ ಸ್ತನಕಾಲ ಕೂಟಂ ಜಿಘಾಂಸಯಾ

ಪಾಯಯದಪ್ಯಸಾಧ್ವೀ ।

ಲೇಭೇಗತಿಂಧಾತ್ರ್ಯುಚಿತಾಂತತೋऽನ್ಯಂ ಕಂವಾದಯಾಳುಂ ಶರಣಂ

ವ್ರಜೇಮ ॥೨೩॥

ಅಸಾಧ್ವೀ = ದುಷ್ಟಳಾದ; ಬಕೀ = ಮಾರಕಳಾದ ಪೂತಣಿಯು; ಯಂ = ಯಾವ ಶಿಶುರೂಪೀ ಕೃಷ್ಣನನ್ನು; ಜಿಘಾಂಸಯಾ = ಕೊಲ್ಲಬೇಕೆಂಬ ಛಲದಿಂದ; ಸ್ತನ ಕಾಲಕೂಟಂ = ವಿಷದ ಮೊಲೆಯನ್ನು; ಅಪಾಯಯತ್ = ಪಾನಮಾಡಿಸಿದಳೋ; ಅವಳು; ಧಾತ್ರ್ಯುಚಿತಾಂ = ಶಿಶುರಕ್ಷಕಿಯಾದ ದಾದಿಯಂತೆ; ಗತಿಂ = ಉತ್ತಮಗತಿಯನ್ನು; ಲೇಭೇ = ಹೊಂದಿದಳು; ತತಃ = ಹಾಗೆ ದುಷ್ಟ ಉದ್ದೇಶದಿಂದ ಬಂದವಳಿಗೂ ಸದ್ಗತಿಯನ್ನು ಕೊಟ್ಟ ಆ ದಯಾಳುವಿನ ಹೊರತಾಗಿ; ಕಂವಾ ದಯಾಳುಂ = ಬೇರೆ ಯಾವ ಕರುಣಾಶಾಲಿಯನ್ನು; ಶರಣಂ ವ್ರಜೇಮ = ಶರಣು ಹೊಂದೋಣ!

(ಪೂತಣಿಯ ದುಷ್ಟ ಶರೀರದಲ್ಲಿ ಊರ್ವಶೀ ಎಂಬ ದೇವತಾ ಸ್ತ್ರೀಯಳೂ ಇದ್ದಳು – ಕಂಸನಲ್ಲಿ ಭೃಗುಋಷಿಗಳು ಇದ್ದಂತೆ. ಆ ದೇವತೆಗೆ ಸದ್ಗತಿಯಾಯಿತು, ಶಿಶು ಕೃಷ್ಣನನ್ನು ತೊಡೆಯ ಮೇಲಿಟ್ಟುಕೊಂಡು ಲಾಲಿಸಿದುದರಿಂದ; ನಿಜವಾದ ಪೂತಣಿಗೆ ತಮಸ್ಸೇ ಆಯಿತು. ನಮ್ಮಲ್ಲಿಯೂ ಬಹಳ ಮಟ್ಟಿಗೆ ಅಸುರಾವೇಶಗಳಿದ್ದು, ಭಗವಂತನ ವಿಸ್ಮೃತಿ, ಭಗವದ್ವಿಷಯದಲ್ಲಿ ಅನಾದರ ಮುಂತಾದ ದೋಷಗಳಿಗೆ ಕಾರಣರಾಗಿರುವರೆಂಬುದನ್ನು ಅರಿತುಕೊಂಡು ಸದಾ ದೇವರ ಪೂಜಾ, ಸತ್ಪ್ರಸಂಗ ಮೊದಲಾದ ರೀತಿಗಳಿಂದ ಅವರ ಸಹವಾಸ ಬಿಡಿಸಿಕೊಂಡರೆ ಮಾತ್ರ ದೇವರ ದರ್ಶನವಾಗುವುದು.)

ಮನ್ಯೇಸುರಾನ್ ಭಾಗವತಾಂಸ್ತ್ರ್ಯ ಧೀಶೇ ಸಂರಂಭಮಾರ್ಗಾಭಿನಿವಿಷ್ಟ

ಚಿತ್ತಾನ್ ।

ಯೇ ಸಂಯುಗೇಚಕ್ಷತ ತಾರ್ಕ್ಷ್ಯಪುತ್ರ ಸ್ಯಾಂಸೇಸುನಾಭಾಯುಧ

ಮಾಪತಂತಂ ॥೨೪॥

ಯೇ = ಅಸುರಾವೇಶಯುಕ್ತರಾಗಿ ಶತ್ರು ಪಕ್ಷದಲ್ಲಿದ್ದು ಯುದ್ಧ ಮಾಡಿದ ಯಾರುಯಾರು; ಸಂಯುಗೇ = ಯುದ್ಧ ನಡೆಯುತ್ತಿದ್ದಾಗ; ತಾರ್ಕ್ಷ್ಯಪುತ್ರಸ್ಯ ಅಂಸೇ = ಗರುಡನ ಹೆಗಲೇರಿ ಕುಳಿತು; ಸುನಾಭ ಆಯುಧಂ = ಚಕ್ರಾಯುಧವನ್ನು ಧರಿಸಿ; ಆಪತಂತಂ = ಮೇಲೇರಿ ಬರುತ್ತಿರುವ ಶ್ರೀಕೃಷ್ಣನನ್ನು; ಅಚಕ್ಷತ = ಕಂಡರೋ;

ಆವರನ್ನು; ತ್ರ್ಯಧೀಶೇ = ಮೂರ್ಲೋಕಗಳ ಅಧಿಪತಿಯಲ್ಲಿ; ಸಂರಂಭ ಮಾರ್ಗಾಭಿನಿಷ್ಟ ಚಿತ್ತಾನ್ = ದ್ವೇಷದ ಮೂಲಕ ಭಗವಂತನಲ್ಲಿ ಹೊಂದಿಕೊಳ್ಳುವ ಮನಸ್ಕರಾದ; ಸುರಾನ್ = ದೇವತೆಗಳೆಂದು; ಮನ್ಯೇ = ಭಾವಿಸುತ್ತೇನೆ.

(ಅವರೇಕಾಯಿಹುಳುವಿನ ರೂಪದಲ್ಲಿ ಗೂಡಿನಲ್ಲಿ ಹುದುಗಿಸಲ್ಪಟ್ಟು, ಕಣಜದ ಚಿಟ್ಟೆಯ ಗುಂಯ್‌ಗುಟ್ಟುವಿಕೆಯಿಂದ ಹೆದರಿಕೆ ಸಂತಸಗಳಿಂದ ಕಾಲಕ್ರಮದಲ್ಲಿ ಆಹಾರ ದಾನದಿಂದ ಸ್ನೇಹವನ್ನು ಬೆಳೆಸಿಕೊಂಡು, ಕಣಜದ ಚಿಟ್ಟೆಯಂತೆಯೇ ರೂಪಾಂತರ ಹೊಂದಿ, ಇಪ್ಪತ್ತೆರಡನೇ ದಿವಸ ಗೂಡನ್ನು ಸೀಳಿಕೊಂಡು ರೆಕ್ಕೆಗಳನ್ನು ಬಡಿಯುತ್ತಾ ಹಾರಿ ಹೋಗುವ ಕೀಟದಂತೆ, ಜೀವರೂ ಮೊದಮೊದಲು ದೇವರಲ್ಲಿ ಭಯಸ್ನೇಹಗಳಿಂದ ಕಾಲಾಂತರದಲ್ಲಿ ಭಕ್ತಿಮಾಡುವದನ್ನು ಕಲಿತು, ಉದ್ಧೃತರಾಗುತ್ತಾರೆ. ಈ ಬಗೆಯನ್ನು "ಭ್ರಮರಕೀಟನ್ಯಾಯ" ಎನ್ನುತ್ತಾರೆ.

ಶತ್ರು ಪಕ್ಷದಲ್ಲಿದ್ದ ಅಸುರಾವೇಶಯುಕ್ತರು ಗರುಡಾರೂಢನಾಗಿ ಬಂದ ಶ್ರೀಕೃಷ್ಣನನ್ನು ಕಂಡರೇ ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಭೀಷ್ಮರಂತಹ ಉತ್ತಮ ಜ್ಞಾನಿಗಳು ಹಾಗೆಯೇ ಕಂಡಿರಬಹುದು. ಕರ್ಣನಂತಹ ಜಾಣರು ಅರ್ಜುನನ ರಥದಲ್ಲಿ ಸಾರಥಿಯಾಗಿ ಕುಳಿತ ಶ್ರೀಕೃಷ್ಣರೂಪವನ್ನೇ, ಚಕ್ರಾಯುಧನಾದ ಗರುಡಧ್ವಜ (ಕಾಲಪುರುಷ)ನೆಂದು ಭಾವಿಸಿದರೆಂಬುದು ಯುಕ್ತವಾಗಿಯೇ ಇದೆ. ಆದರಿಂದ ಅವರ ಪಾಪನಿವೃತ್ತಿ; ಸದ್ಗತಿಗೆ ಸಾಧನೆ.)

**ವಸುದೇವಸ್ಯ ದೇವಕ್ಯಾಂ ಜಾತೋಭೋಜೇಂದ್ರ ಬಂಧನೇ ।**
**ಚಿಕೀರ್ಷುರ್ಭಗವನಸ್ಯಾಃ ಶಮಜೇನಾಭಿಯಾಚಿತಃ ॥೨೫॥**

ಅಸ್ಯಾಃ = ದೇವಕೀದೇವಿಯ; ಶಮಜೇನ = ಪೂರ್ವಜನ್ಮದ ತಪಸ್ಸಿನ ಫಲವಾದ ಶಾಂತಮನಸ್ಸಿನಿಂದ; ಪ್ರಾರ್ಥಿತಃ = ಪುತ್ರತ್ವೇನ ಜನಿಸಬೇಕೆಂದು ಪ್ರಾರ್ಥಿತನಾಗಿ; ಭಗವಾನ್ = ಗುಣಪೂರ್ಣನಾದ ಜಗದೊಡೆಯನು; ಚಿಕೀರ್ಷುಃ = ಆಕೆಯ ಇಚ್ಛೆಯನ್ನು ಸಲ್ಲಿಸುವುದಕ್ಕೂ, ದುಷ್ಟಕಂಸನ ಸಂಹಾರ ಮಾಡುವುದಕ್ಕೂ ಬಂಧನದಲ್ಲಿದ್ದ; ವಸುದೇವಸ್ಯ = ವಸುದೇವನಿಗೆ; ದೇವಕ್ಯಾಂ = ದೇವಕೀದೇವಿಯಲ್ಲಿ; ಜಾತಃ = ಅವತರಿಸಿದನು.

(ಅದಿತಿಕಶ್ಯಪರು ತಮ್ಮ ತಪಸ್ಸಿನಿಂದ ದೇವರನ್ನು ಮೆಚ್ಚಿಸಿ ಆ ಮಹಾನುಭಾವನನ್ನು ಉಪೇಂದ್ರನಾಮಕನನ್ನಾಗಿ ಹಿಂದೆ ಪುತ್ರತ್ವೇನ ಪಡೆದಿದ್ದರು. ವಸುದೇವ ದೇವಕಿಯರಾಗಿ ಶ್ರೀ ಕೃಷ್ಣನನ್ನು ಪಡೆದರು. ಆ ಶಿಶುವನ್ನು ಬೆಳೆಸುವ ಭಾಗ್ಯ ಯಶೋದಾದೇವಿಗೆ ಲಭಿಸಿತು. ಆದರೆ ಅವನ ವಿವಾಹಾದಿಗಳನ್ನು ನೋಡಿ

ಸಂತೋಷಿಸುವ ಭಾಗ್ಯ ದೇವಕೀದೇವಿಯದಾಯಿತು; ಯಶೋದಾ ದೇವಿಗೆ ಇಲ್ಲವಾಯಿತು. ಆದುದರಿಂದ ಆಕೆಯು ಮುಂದೆ ಬಕುಳಾದೇವಿಯಾಗಿ ಶ್ರೀನಿವಾಸ ಕಲ್ಯಾಣದ ವೈಭವವನ್ನು ಕಂಡಳು.

ಭಗವಂತನ ಒಂದೊಂದು ಕ್ರಿಯೆಯೂ ನಾನಾ ಪ್ರಯೋಜನಗಳಿಗೆ ಕಾರಣವಾಗುವುದು. ಶ್ರೀಕೃಷ್ಣನ ಜನ್ಮದಿಂದ ವಸುದೇವ ದೇವಕಿಯರ ಬಿಡುಗಡೆಯೂ ಆಯಿತು. ಅದಕ್ಕಾಗಿಯೇ "ಶ್ರೀನಿವಾಸ ನಿನದೊಂದೇ ಕ್ರಿಯವ್ರೋ ದ್ವಂದ್ವ ದ್ವಂದ್ವವಾಯಿತು" ಎಂದರು ಹರಿದಾಸರು.)

**ತತೋನಂದವ್ರಜಮಿತಃ ಪಿತ್ರಾಕಂಸಾದ್ವಿಬಿಭ್ಯತಾ ।**

**ಏಕಾದಶ ಸಮಾಸ್ತತ್ರ ಗೂಢಾರ್ಚಿಃ ಸಬಲೋಽವಸತ್ ॥೨೬॥**

ತತಃ = ಅನಂತರ; ಕಂಸಾತ್ ಬಿಬಿಭ್ಯತಾ = ಕಂಸನ ದೆಸೆಯಿಂದ ಭೀತಿಗೊಳಗಾದ; ಪಿತ್ರಾ = ತಂದೆಯಾದ ವಸುದೇವನಿಂದ; ನಂದವ್ರಜಮಿತಃ= ನಂದವ್ರಜಕ್ಕೆ ಒಯ್ಯಲ್ಪಟ್ಟು ಅಲ್ಲಿಯೇ ಇರತಕ್ಕವನಾಗಿ; ತತ್ರ = ಅಲ್ಲಿ; ನಿಗೂಢಾರ್ಚಿಃ = ಹೆಚ್ಚು ಪ್ರಕಾಶಕ್ಕೆ ಬಾರದೆ ಗೂಢವಾಗಿರಿಸಲ್ಪಟ್ಟ ಮಹಾತ್ಮ್ಯವುಳ್ಳವನಾಗಿ; ಸಬಲಃ = ಬಲರಾಮನಿಂದ ಕೂಡಿ; ಏಕದಶ ಸಮಾಃ = ಹನ್ನೊಂದು ವರ್ಷಗಳಕಾಲ; ಅವಸತ್ = ವಾಸಮಾಡಿದನು.

(ಉದ್ಧವರು ಹೇಳಬೇಕಾದ ವಿಷಯಗಳನ್ನು ಹಿಂದುಮುಂದಾಗಿ, ಕಲಬೆರಕೆಯಾಗಿ ಹೇಳುತ್ತಿದ್ದಾರೆ. ಅದಕ್ಕೆ ಅವರ ಆಗಿನ ಮನೋದ್ವೇಗವೇ ಕಾರಣ. ಶ್ರೀ ಕೃಷ್ಣನು ಈ ಲೋಕದಿಂದ ಅದೃಶ್ಯನಾದ ವಿಚಾರವನ್ನು ಹೇಳಿಬಿಡುವುದಕ್ಕೆ ಮೊದಲು, ಶ್ರೀ ಕೃಷ್ಣನ ಬಾಲ ಲೀಲೆಯಿಂದಾರಂಭಿಸಿ ಅವನ ಚರಿತ್ರೆಯನ್ನು ಸಂಗ್ರಹವಾಗಿ ಸ್ಮರಿಸಿಕೊಂಡು ಹೇಳುತ್ತಿದ್ದಾರೆ.

ನಂದ ವ್ರಜದವರಿಗೆ ಶ್ರಿ ಕೃಷ್ಣನ ಮಹಿಮೆಯು ಅಷ್ಟಿಷ್ಟು ಕಂಡು ಬಂದರೂ ಅವರು ಮೋಹಿತರಾಗಿಯೇ ಇರುತ್ತಿದ್ದರು. ಕಾಳಿಂಗ ಮರ್ದನ, ಗೋವರ್ಧನೋದ್ಧರಣ ಮುಂತಾದವುಗಳಿಂದ ಅವರಿಗೆ ಜ್ಞಾನೋದಯವಾಗಲಾರಂಭಿಸಿತು. ಕಂಸನಿಗೂ ಶ್ರೀಕೃಷ್ಣನ ವಾರ್ತೆ ಮುಟ್ಟಲಾರಂಭಿಸಿತು.)

**ಪರಿತೋವತ್ಸಪೈರ್ವತ್ಸಾಂಶ್ಚಾರಯನ್ವ್ಯಚರದ್ಧರಿಃ ।**

**ಯಮುನೋಪವನೇ ಕೂಜದ್ದ್ವಿಜಸಂಕುಲಿತಾಂಘ್ರಿಪೇ ॥೨೭॥**

ಕೂಜತ್ = ಕಲಕಲ ಶಬ್ದಮಾಡುವ; ದ್ವಿಜಸಂಕುಲಿತ = ಪಕ್ಷಿಗಳಿಂದ ತುಂಬಿದ; ಅಂಘ್ರಿಪೇ = ವೃಕ್ಷಗಳುಳ್ಳ; ಯಮುನಾಉಪವನೇ = ಯಮುನಾತೀರದ

ವನಪ್ರದೇಶದಲ್ಲಿ; ಪರಿತಃ = ಸುತ್ತಲೂ; ವತ್ಸಪೈಃ = ಹಸುಗಳಿಂದ ಕೂಡಿಕೊಂಡ; ವತ್ಸಾನ್ = ಹಸುಗಳ ಕರುಗಳನ್ನು; ಚಾರಯನ್ = ಮೇಯಿಸಿಕೊಂಡು ತಿರುಗಾಡಿಸುತ್ತಾ; ಹರಿಃ = ಸರ್ವೋತ್ತಮನಾದ ಶ್ರೀಕೃಷ್ಣನು; ವ್ಯಚರತ್ = ಆವುಗಳೊಡನೆ ಓಡಾಡಿಕೊಂಡಿದ್ದನು.

(ದೇವಮಾನವಾದಿಗಳ ಯೋಗಕ್ಷೇಮವನ್ನು ನಿರ್ವಹಿಸುವ ಶ್ರೀ ಹರಿಯು ಸಾಮಾನ್ಯ ಪಶುಗಳ ಮತ್ತು ಅವುಗಳ ಮರಿಗಳ ಯೋಗಕ್ಷೇಮವನ್ನೂ ಆದರದಿಂದ ನೋಡಿಕೊಳ್ಳುವನೆಂಬ ಅಂಶವು ಇಲ್ಲಿ ಗಮನಾರ್ಹ. ಶಾಸ್ತ್ರಗಳ ಅವಲೋಕನದಿಂದ ಜೀವೇಶ್ವರ ಭೇದವನ್ನೂ, ವಿಷ್ಣುಸರ್ವೋತ್ತಮತ್ವವನ್ನೂ ನಿರ್ಣಯಿಸಿಕೊಳ್ಳುವುದು ಒಂದು ಬಗೆಯಾದರೆ, ಅನುಭವದಿಂದ ಅವನ ಮಹಾತ್ಮ್ಯವನ್ನು ಕಂಡು ಅವನಲ್ಲಿ ಸ್ನೇಹ ರೂಪವಾದ ಭಕ್ತಿಯನ್ನು ದೃಢಪಡಿಸಿಕೊಳ್ಳುವುದು, ಹಾಗೆ ಅನುಭವ ಪಡೆಯುತ್ತಿರುವ ದುರ್ಬಲ ಸುಜೀವಿಗಳನ್ನು ಗಮನಿಸಿ ಎಚ್ಚರಗೊಳ್ಳುವುದು ಹೆಚ್ಚು ಪ್ರಯೋಜನಕರ. ಅಂತಹ ಸನ್ನಿವೇಶ ಇಲ್ಲಿ ಚಿತ್ರಿತವಾಗಿದೆ. ಪ್ರಶಾಂತವಾದ ಯಮುನೆಯ ಪರಿಸರದ ಪ್ರಕೃತಿಯ ರಮಣೀಯ ದೃಶ್ಯ, ತಮ್ಮ ರಕ್ಷಕನನ್ನು ನಂಬಿ ನೆಮ್ಮದಿಯಿಂದ ಮೇಯುತ್ತಿರುವ ಹಸುಗಳು, ಅವುಗಳ ಆಸರೆಯಲ್ಲಿ ಜಿಗಿದಾಡುತ್ತಾ ಒಮ್ಮೊಮ್ಮೆ ಹುಲ್ಲು ಜಗಿಯುವ ಕರುಗಳು, ಇಂತಹ ವಾತಾವರಣದಲ್ಲಿ ಗೋಪಾಲಕನಂತೆ ಬಂದವನು ಲೋಕಮೋಹಕನಾದ ಬಾಲರೂಪೀ ಪುರುಷೋತ್ತಮ! ಈ ಚಿತ್ರಣವನ್ನು ಮನಸ್ಸಿಗೆ ತಂದು ಕೊಳ್ಳುವುದಕ್ಕೆ ಸದೃಶವಾದ ಉಪದೇಶ ಬೇರೆ ಉಂಟೆ!)

ಕೌಮಾರಾದರ್ಶಯಂಶ್ಚೇಷ್ಟಾಃ ಪ್ರೇಕ್ಷಣೀಯಾ ವ್ರಜೌಕಸಾಂ ।
ರುದನ್ನಿವ ಹಸನ್ಮುಗ್ಧಬಾಲಸಿಂಹಾವಲೋಕನಃ ॥೨೮॥
ಸ ಏವ ಗೋಕುಲಂ ಲಕ್ಷ್ಮ್ಯಾ ನಿಕೇತಂ ಸಿತಗೋವೃಷಂ ।
ಚಾರಯನ್ನನುಗಾನ್ಗೋಪಾನ್ ರಣದ್ವೇಣುರರೀರಮತ್ ॥೨೯॥

ರುದನ್ ಇವ ಹಸನ್ ಇವ = ಅಳುತ್ತಿದ್ದಂತೆ, ನಗುತ್ತಿದ್ದಂತೆ; ಮುಗ್ಧಃ ಇವ = ಏನೂ ಅರಿಯದ ಬಾಲಕನಂತೆ; ಬಾಲ ಸಿಂಹಾವಲೋಕನಃ = ಸಿಂಹದ ಮರಿಯಂತೆ ನೋಟ ಉಳ್ಳವನಾಗಿ; ವ್ರಜೌಕಸಾಂ = ನಂದದವ್ರಜದ ನಿವಾಸಿಗಳಿಗೆ; ಪ್ರೇಕ್ಷಣೀಯಾಃ = ನೋಡಿ ಸಂತೋಷಿಸಲು ಯೋಗ್ಯವಾದ; ಕೌಮಾರಾಃ ಚೇಷ್ಟಾಃ = ಸಣ್ಣ ಬಾಲಕರಿಗೆ ಅನುಗುಣವಾದ ವ್ಯಾಪಾರಗಳನ್ನು; ಆದರ್ಶಯನ್ = ತೋರಿಸಿಕೊಳ್ಳುತ್ತಾ; ಸಃ ಏವ = ಆ ಬಾಲಕನೇ; ಅನುಗಾನ್ ಗೋಪಾನ್ = ತನ್ನನ್ನು ಹಿಂಬಾಲಿಸಿದ ಗೋಪಾಲ ಬಾಲಕರನ್ನು; ಚಾರಯನ್ = ತನ್ನೊಡನೆ

ಕರೆದೊಯ್ಯುತ್ತಾ; ಸಿತಗೋವೃಷಂ = ಉತ್ತಮ ಲಕ್ಷಣಯುಕ್ತಗಳಾದ ಗೋವುಗಳಿಂದ ತುಂಬಿದ; ಲಕ್ಷ್ಮ್ಯಾಃ ನಿಕೇತಂ = ಸಂಪದ್ಭರಿತವಾದ (ಲಕ್ಷ್ಮೀ ಕಟಾಕ್ಷದಿಂದ ಪೋಷಿತವಾದ); ಗೋಕುಲಂ = ನಂದವ್ರಜದ ಸೀಮೆಯನ್ನು; ಅರೀರಮತ್ = ಆನಂದಭರಿತವನ್ನಾಗಿ ಮಾಡಿಸಿದನು.

(ಶ್ರೀ ಕೃಷ್ಣನ ಬಾಲಲೀಲೆಗಳನ್ನು ಮನಸ್ಸಿನಲ್ಲಿ ಚಿತ್ರಿಸಿಕೊಂಡು ಸಂತೋಷಿಸಬಹುದಾದ ಭಾಗ್ಯ ನಮ್ಮದಾದರೆ, ಅದನ್ನು ಪ್ರತ್ಯಕ್ಷವಾಗಿ ಕಂಡು ಆನಂದಿಸಿದ ನಂದವ್ರಜನಿವಾಸಿಗಳ ಭಾಗ್ಯವಿನ್ನೆಂತಹುದೆಂದು ಊಹಿಸಿಕೊಳ್ಳಬಹುದಷ್ಟೆ. ಕಾಣುವುದರ ಜೊತೆಗೆ, ಅಸದೃಶವಾದ ವೇಣುಗಾನವನ್ನು ಕೇಳಿ ಗೋಪಾಲಕರಾಗಿ ಹಿಂಬಾಲಿಸಿದರು. ರಣದ್ವೇಣುಃ = ಕೊಳಲನ್ನೂದುತ್ತಾ; ಗೋವುಗಳಾಗಿ ಸಂರಕ್ಷಿಸಲ್ಪಟ್ಟವರು ದೇವತೆಗಳೇ ಸರಿ.)

ಪ್ರಯುಕ್ತಾನ್ ಭೋಜರಾಜೇನ ಮಾಯಿನಃ ಕಾಮರೂಪಿಣಃ ।
ಲೀಲಯವ್ಯನುದತ್ತಾಂಸ್ತಾನ್ ಬಾಲಃ ಕ್ರೀಡನಕಾನಿವ ॥೩೦॥

ಭೋಜರಾಜೇನ = ಕಂಸನಿಂದ; ಪ್ರಯುಕ್ತಾನ್ = ನಿಯೋಜಿತರಾದ; ಕಾಮರೂಪಿಣಃ = ಬೇಕು ಬೇಕಾದ ರೂಪಗಳನ್ನು ಧರಿಸಬಲ್ಲ; ಮಾಯಿನಃ = ಮಾಯಾಬಲವುಳ್ಳ ಅಸುರರನ್ನು; ತಾನ್ ತಾನ್ = ಬಂದಬಂದವರನ್ನು; ಕ್ರೀಡನಕಾನ್ ಇವ = ಆಟದ ವಸ್ತುಗಳನ್ನು ಈಡಾಡುವಂತೆ; ಬಾಲಃ = ಚಿಕ್ಕ ಹುಡುಗನಾದ ಶ್ರೀ ಕೃಷ್ಣನು; ಲೀಲಯಾ = ಅನಾಯಾಸವಾಗಿ; ವ್ಯನುದತ್ = ಸಂಹರಿಸಿಬಿಟ್ಟನು.

(ರಮಣೀಯ ದೃಶ್ಯಗಳಿಗಿಂತ ಅದ್ಭುತದರ್ಶನವು ನಮ್ಮ ಮೇಲೆ ಹೆಚ್ಚು ಪರಿಣಾಮ ಬೀರುವುದಲ್ಲದೆ ಚಿರಸ್ಥಾಯಿಯೂ ಆಗುವುದು. ಬಾಲ್ಯಾವಸ್ಥೆಯಲ್ಲೇ ಶ್ರೀಕೃಷ್ಣನು ನಡೆಸಿದ ಅಸುರಸಂಹಾರ ಕಾರ್ಯಗಳಿಂದ ನಂದ ವ್ರಜದ ಸತ್ಪ್ರಜೆಗಳು ಬಹುವಾಗಿ ಪ್ರಭಾವಿತರಾದರು. ಆ ಭಗವಂತನ ಮಾಹಾತ್ಮ್ಯಜ್ಞಾನಕ್ಕೆ ಅವು ಪ್ರಥಮ ಹಂತವಾದುವು.)

ವಿಪನ್ನಾನ್ವಿಷಪಾನೇನ ನಿಗೃಹ್ಯಭುಜಗಾಧಿಪಂ ।
ಉತ್ಥಾಪ್ಯಾಪಾಯಯದ್ಗಾವಸ್ತತ್ತೋಯಂ ಪ್ರಕೃತಿಸ್ಥಿತಂ ॥೩೧॥

ಭುಜಗಾಧಿಪಂ = ಕಾಳಿಂಗ ಸರ್ಪವನ್ನು; ನಿಗೃಹ್ಯ = ದಮನಮಾಡಿ; ವಿಷಪಾನೇನ = ಯಮುನಾನದಿಯ ಮಡುವಿನ ನೀರಿನಲ್ಲಿ ಬೆರೆತಿದ್ದ ವಿಷದ ಪಾನದಿಂದ; ವಿಪನ್ನಾನ್ = ಮೃತಪ್ರಾಯವಾಗಿದ್ದ; ಗಾವಃ = ಹಸುಗಳನ್ನು; ಉತ್ಥಾಪ್ಯ

= ಜೀವಂತಗೊಳಿಸಿ ಎಬ್ಬಿಸಿ; ಪ್ರಕೃತಿ ಸ್ಥಿತಂತೋಯಂ = ಮೊದಲಿನಂತೆ (ವಿಷವಿಲ್ಲದೆ) ಪರಿಶುದ್ಧವಾದ ನೀರನ್ನು; ಅಪಾಯತ್ = ಪಾನಮಾಡಿಸಿದನು.;

(ಕಾಳಿಂಗನ ಹೆಡೆಯ ಮೇಲೆ ನಾಟ್ಯವಾಡಿದ ಮತ್ತು ಮೃತಪ್ರಾಯಗಳಾದ ಪಸುಗಳನ್ನು ಬದುಕಿಸಿದ ಶ್ರೀ ಕೃಷ್ಣನ ಚರ್ಯೆಗಳನ್ನು ನಂದವ್ರಜದ ಪ್ರಜೆಗಳು ಕಣ್ಣಾರೆ ಕಂಡು ಆ ಪ್ರಭುವಿನ ಮಹಾತ್ಮ್ಯವನ್ನು ಮನಸ್ಸಿನಲ್ಲಿ ದೃಢಮಾಡಿಕೊಂಡರು.)

ಅಯಾಜಯದ್ಗೋಸವೇನ ಗೋಪರಾಜಂ ದ್ವಿಜೋತ್ತಮೈಃ ।
ವಿತ್ತಸ್ಯಚೋರುಭಾರಸ್ಯ ಚಿಕೀರ್ಷನ್ಸದ್ವ್ಯಯಂ ವಿಭುಃ ॥೩೨॥

ವಿಭುಃ = ಲೋಕಪ್ರಭುವಾದ ಶ್ರೀಕೃಷ್ಣನು; ಉರುಭಾರಸ್ಯ = ಅಪಾರವಾಗಿದ್ದ; ವಿತ್ತಸ್ಯ = ಗೊಲ್ಲರ ಐಶ್ವರ್ಯವಾದ ಹಾಲು, ಮೊಸರು, ಬೆಣ್ಣೆ,ತುಪ್ಪಗಳ; ಸದ್ವ್ಯಯಂ ಚಿಕೀರ್ಷನ್ = ಪುಣ್ಯಕರರವಾದ ವಿನಿಯೋಗವಾಗುವಂತೆ ಮಾಡಲು; ದ್ವಿಜೋತ್ತಮೈಃ = ಶಾಸ್ತ್ರವೇತ್ತರಾದ ಬ್ರಾಹ್ಮಣರ ಮಂತ್ರ ಘೋಷಪೂರ್ವಕವಾಗಿ; ಗೋಪರಾಜಂ = ರಾಜನಾದ ನಂದಗಗೊಪನನ್ನು; ಗೋಸವೇನ = ಗವ್ಯದ್ರವ್ಯಗಳ ಸಮರ್ಪಣೆಯರೂಪವಾದ ಯಜ್ಞದಿಂದ; ಅಯಜತ್ = ಗೋವರ್ಧನಗಿರಿ ಯಂತರ್ಗತ ಪರಮಾತ್ಮನ ಪೂಜೆಯನ್ನು ಮಾಡಿಸಿ ಧನ್ಯನನ್ನಾಗಿಸಿದನು. (ಗೋಸವೇನ = ಗೋಪೂಜಾ ರೂಪಯಜ್ಞದಿಂದ; ಸದ್ವ್ಯಯಂಚಕೀರ್ಷನ್ = ಒಳ್ಳೆಯ ಕಾರ್ಯಕ್ಕೆ ವಿನಿಯೋಗವಾಗುವಂತೆ.

(ನಮ್ಮ ಜೀವನದ ನಡವಳಿಕೆಗಳನ್ನೆಲ್ಲಾ ಭಗವಂತನ ಪೂಜೆಯನ್ನಾಗಿ ಮಾಡಿಕೊಳ್ಳುವುದು ಹೇಗೆ ಎಂಬುದರ ಮರ್ಮ ಇಲ್ಲಿದೆ. ನಮ್ಮ ಜೀವನಾವಶ್ಯಕ ದ್ರವ್ಯಗಳಲ್ಲಿ ಭಗವಂತನಿರುವನೆಂದು ತಿಳಿದು ಅವುಗಳಿಗೆ ನಮಿಸುವುದು, ಆದ್ರವ್ಯಗಳನ್ನು ಭಗವಂತನ ಪೂಜೆಗೆ ವಿನಿಯೋಗಿಸುವುದು, ಇವೆರಡೂ ಉತ್ತಮ ಕ್ರಮಗಳು. ಈ ರೀತಿಯಾಗಿ ಮಾಡಲು ದೂರ ಹೋಗಬೇಕಾಗಿಲ್ಲ; ಕಾಲದ ವಿಳಂಬವಿಲ್ಲ; ಬೇರೆ ಯಾವ ಪ್ರಯಾಸವೂ ಇಲ್ಲ. ಕಣ್ಣಿಗೆ ಕಾಣದ ಬೇರೆ ದೈವವನ್ನು ಹುಡುಕಿಕಂಡು ಹೋಗಬೇಕಾಗಿಲ್ಲ. ಸಿದ್ಧವಾಗಿರುವಾಗ ಮಂತ್ರಿಮೊದಲಾದ ಮಧ್ಯವರ್ತಿಗಳನ್ನು ಕೇಳುವ ಆಗತ್ಯವಿರುವುದಿಲ್ಲ. ಹಾಗೆ, ವಿಶ್ವವ್ಯಾಪಕನಾದ ಲೋಕೇಶ್ವರನೇ ಶ್ರೀಕೃಷ್ಣರೂಪದಲ್ಲಿ ಬಂದು, ಗೋಪಾಲಕರಿಗೆ ಜೀವನಾಧಾರವಾದ ಗೋವರ್ಧನ ಪರ್ವತವೇ ಭಗವಂತನ ಅತ್ಯಂತ ಸಮೀಪದ ಪ್ರತೀಕವೆಂದು ಹೇಳಿದಾಗ, ಆ ಪರ್ವತಪ್ರತೀಕವನ್ನು ಪೂಜಿಸುವುದೇ ಸರಿಯಲ್ಲವೇ! ನಂದಗೋಪನು ಹಾಗೆಯೇ ಮಾಡಿದ. ಗೋವರ್ಧನೋದ್ಧರಣದಿಂದ ಆ ಪೂಜೆಯ ಸಾರ್ಥಕತೆಯೂ ವ್ಯಕ್ತವಾಯಿತು.

ಗೋಪೂಜಾರೂಪವಾದ ಭಗವತ್ಪೂಜೆಯನ್ನು ಮಾಡಿಸಿ ಬ್ರಾಹ್ಮಣರಿಗೆ ದಕ್ಷಿಣೆಸಹಿತವಾಗಿ ಗೋದಾನಗಳನ್ನು ಮಾಡಿಸಿದನೆಂದು ಹೇಳಬಹುದು.

**ವರ್ಷತೀಂದ್ರೇವ್ರಜಃ ಕೋಪಾದ್ಭಗ್ನ ಮಾನೇತಿವಿಹ್ವಲೇ ।**

**ಗೋತ್ರಲೀಲಾತಪತ್ರೇಣ ತ್ರಾತೋಭದ್ರಾನುಗೃಹ್ಣತಾ ॥೩೩॥**

ಭಗ್ನಮಾನೇ = ಅಪಮಾನವಾಯಿತೆಂದು ಶಂಕಿಸಿದ; ಕೋಪಾತ್ = ಕೋಪದಿಂದ; ಅತಿ ವಿಹ್ವಲೇ = ಬಹು ಉದ್ವೇಗಕ್ಕೀಡಾದ ಮನಸ್ಸಿನ; ಇಂದ್ರೇ = ಇಂದ್ರನು; ವರ್ಷತಿ = ಮಳೆಯನ್ನು ಸುರಿಸುತ್ತಿರಲು; ಭದ್ರಾನುಗೃಹ್ಣತಾ = ಮಂಗಳದಾಯಕನಾದ ಶ್ರೀಕೃಷ್ಣನಿಂದ; ಗೋತ್ರ ಲೀಲಾತಪತ್ರೇಣ = ಆಟದ ಛತ್ರಿಯಂತೆ ಎತ್ತಿಹಿಡಿದ ಪರ್ವತದಿಂದ; ವ್ರಜಃ = ನಂದವ್ರಜದ ಜನದನಸಮೂಹವು;ತ್ರಾತಃ = ರಕ್ಷಿಸಲ್ಪಟ್ಟಿತು.

(ಸಕಾಲದಲ್ಲಿ ದೇವೇಂದ್ರನ ಗರ್ವಭಂಗವೂ, ನಂದವ್ರಜದವರಿಗೆ ಶ್ರೀಕೃಷ್ಣನ ಮಹಿಮಾ ಜ್ಞಾನವೂ ಉಂಟಾಯಿತು. ಶಕಟಾಸುರನನ್ನು ವಧಿಸಿದಾಗ, ಯಮಳಾರ್ಜುನರಿದ್ದ ವೃಕ್ಷಗಳನ್ನು ಭಂಗಿಸಿದಾಗ ನಂದ ವ್ರಜದ ಜನರಿಗೆ ಶ್ರೀ ಕೃಷ್ಣನ ಮಹಿಮೆ ಅಷ್ಟಾಗಿ ತಿಳಿಯಲಿಲ್ಲ; ಅವರು ನಂಬಿಯೂ ನಂಬಲಿಲ್ಲ. ಕಾಳಿಂಗ ಮರ್ದನ, ಗೋವರ್ಧನೋದ್ಧರಣ—ಇವು ಅವರಿಗೆ ಪ್ರತ್ಯಕ್ಷ ನಿದರ್ಶನಗಳಾದವು. ಹೀಗೆ ಕ್ರಮಕ್ರಮವಾಗಿ ತನ್ನ ಮಹಿಮೆಯನ್ನು ಪರಮಾತ್ಮನು ತಿಳಿಸಿಕೊಡುವುದಕ್ಕೆ ಕಾರಣ, ಜೀವರ ಸ್ವರೂಪ ವಿಕಾಸಕ್ಕೆ ಬೇಕಾದ ಕಾಲಾವಕಾಶ – ಬೀಜವು ವೃಕ್ಷವಾಗಿ ಫಲಕೊಡುವಂತೆ!

ಪ್ರತ್ಯಕ್ಷವಾಗಿ ಕಂಡದ್ದನ್ನೂ ಮರೆತುಬಿಡುವಂತೆ ಮಾಡುವುದು ಕೂಡ ಭಗವಂತನ ಸಂಕಲ್ಪವೇ ಸರಿ. ಅದೂ ಜೀವರ ವಿಕಾಸ ದೃಷ್ಟಿಯಿಂದಲೇ ಆಗುವುದು.)

**ಶರಚ್ಛಶಿಕರೈರ್ಮೃಷ್ಟಂ ಮಾನಯನ್ ರಜನೀ ಮುಖಂ ।**

**ಗಾಯನ್ ಕಲಪದಂ ರೇಮೇಸ್ತ್ರೀಣಾಂ ಮಂಡಲ ಮಂಡನಃ ॥೩೪॥**

ಶರತ್ ಶಶಿಕರೈಃ = ಶರದೃತುವಿನ ಚಂದ್ರನ ಶುಭ್ರಕಿರಣಗಳಿಂದ; ಮೃಷ್ಟಂ = ಲೇಪಿತವಾದ; ರಜನೀ ಮುಖಂ = ರಾತ್ರಿಯ ಆರಂಭದ ಕಾಲವನ್ನು; ಮಾನಯನ್ = ಅಭಿನಂದಿಸುತ್ತಾ; ಕಲಪದಂ = ಪ್ರೇಮ ಪೂರ್ಣವಾದ ಮಾತುಗಳನ್ನು; ಗಾಯನ್ = ಇಂಪಾಗಿ ನುಡಿಯುತ್ತಾ; ಸ್ತೀಣಾಂ ಮಂಡಲ ಮಂಡನಃ = ಸುಂದರಿಯರಾದ ಸ್ತ್ರೀ ಸಮೂಹಕ್ಕೇ ಅಲಂಕಾರಪ್ರಾಯನಾದ ಶ್ರೀ ಕೃಷ್ಣನು; ರೇಮೇ = ಅವರೊಡನೆ ಕ್ರೀಡೆಯಾಡಿದನು.

(ಭಗವಂತನ ಕ್ರೀಡೆ ತನಗಾಗಿ ಅಲ್ಲ; ತನ್ನ ನಿಜ ಭಕ್ತರ ಹೃದಯಗಳಲ್ಲಿ ಆನಂದವನ್ನು ಉಕ್ಕಿಸಿ, ಅವರನ್ನು ತನ್ನಲ್ಲಿ ಪೂರ್ಣ ಅನುರಕ್ತರನ್ನಾಗಿ ಮಾಡಿಕೊಳ್ಳುವುದಕ್ಕಾಗಿ, ಸೌಂದರ್ಯಕ್ಕೆ ಹೆಸರಾದವರು ಸ್ತ್ರೀಯರು. ಅವರ ಸೌಂದರ್ಯರಾಶಿಯನ್ನೂ, ಅಲಂಕಾರಗಳನ್ನೂ ಮೀರಿಸಿದ ಸೌಂದರ್ಯರಾಶಿ, ಶ್ರೀಕೃಷ್ಣ, ಹೇಳಬೇಕಾದ ಮುಖ್ಯ ವಿಷಯವನ್ನು ಬಿಟ್ಟು ಶ್ರೀ ಕೃಷ್ಣನ ಬಾಲಲೀಲೆ ಮುಂತಾದವುಗಳನ್ನೇಕೆ ಉದ್ಧವರು ವರ್ಣಿಸುತ್ತಾ ಕುಳಿತರು ಎಂಬುದು ಸ್ವಾರಸ್ಯಪೂರ್ಣವಾದ ಸಂಗತಿ. ಬಂಧುಗಳ ಮರಣ ಮುಂತಾದ ವಾರ್ತೆಗಳಿಂದ ಮಾನವರ ಮನಸ್ಸು ಸಲ್ಲದ ಉದ್ವೇಗಕ್ಕೆ ಒಳಗಾಗುವುದು. ಅದಕ್ಕೆ ಅಭಿಮಾನವೇ ಕಾರಣ. ಪ್ರತಿಯೊಂದು ಘಟನೆಯೂ ಭಗವಂತನ ಸಂಕಲ್ಪದಿಂದ, ಜೀವರ ಹಿತಕ್ಕಾಗಿಯೇ ನಡೆಯುವುದು ಎಂಬ ಅರಿವುಳ್ಳವರ ಮನಸ್ಸು ದುಃಖದಿಂದ ಉದ್ವೇಗ ಹೊಂದದೆ, ಭಗವಂತನ ಸ್ಮರಣೆಯಿಂದ ಪ್ರಶಾಂತವಾಗುವುದು. ಅಂತಹ ಪರಿಸ್ಥಿತಿಯಲ್ಲಿದ್ದ, ವಿದುರರ ಮನಸ್ಸನ್ನು ಉದ್ಧವರು ಆ ರೀತಿ ಹದಗೊಳಿಸುತ್ತಿದ್ದರು. ಆದರೂ, ಅವರ ಮನಸ್ಸಿನಲ್ಲಿಯೂ ಒಂದು ಬಗೆಯ ಉದ್ವೇಗ ಇದ್ದೇ ಇದ್ದಿತು. ಅದು ಇರಬೇಕಾದ ಉದ್ವೇಗವೇ ನಿಜ. ಶ್ರೀಕೃಷ್ಣನ ಪ್ರತ್ಯಕ್ಷ ಸಹವಾಸ ತಪ್ಪಿತಲ್ಲಾ ಎಂಬುದು ಆ ಉದ್ವೇಗಕ್ಕೆ ಕಾರಣ. ಅವನ ಲೀಲೆಗಳ ಸ್ಮರಣೆಯಿಂದಲೇ ಅದರ ಉಪಶಮನ.)

ಇಲ್ಲಿಗೆ ಎರಡನೆಯ ಅಧ್ಯಾಯ ಮುಗಿಯಿತು.

"ಶ್ರೀ ಕೃಷ್ಣಾರ್ಪಣಮಸ್ತು"

---

# ತೃತೀಯ ಸ್ಕಂಧ

# ಮೂರನೆಯ ಅಧ್ಯಾಯ

ಉದ್ಧವ ಉವಾಚ – ಉದ್ದವರು ಹೇಳಿದರು.

ತತಃ ಸ ಆಗತ್ಯಪುರಂ ಸ್ವಪಿತ್ರೋಶ್ಚಿಕೀರ್ಷಯಾಶಾಂ ಬಲದೇವ ಸಂಯುತಃ ।
ನಿಪಾತ್ಯ ತುಂಗಾದ್ರಿಪ್ರಯೂಥನಾಥಂ ಪತಂ ವ್ಯಕರ್ಷದ್ವ್ಯಸುಮೋಜಸೋರ್ವ್ಯಾಂ ॥೧॥

ತತಃ = ಆನಂತರದಲ್ಲಿ; ಸಃ = ಆ ಶ್ರೀಕೃಷ್ಣನು; ಬಲದೇವ ಸಹಿತಃ = ಬಲರಾಮನಿಂದ ಕೂಡಿಕೊಂಡು; ಪುರಂ ಆಗತ್ಯ = ಮಥುರಾ ಪಟ್ಟಣಕ್ಕೆ ಬಂದು; ಸ್ವಪಿತ್ರೋಃ = ತನ್ನ ತಂದೆಯಾದ ವಸುದೇವನ; ಆಶಾಂ = ಅಪೇಕ್ಷೆಯನ್ನು; ಚಿಕೀರ್ಷಯನ್ = ಮಾಡುವ ಇಚ್ಛೆಯಿಂದ; ಹತಂ = ಹತಭಾಗ್ಯನಾದ (ಅಯೋಗ್ಯನಾದ); ರಿಪುಯೂಥನಾಥಂ = ದೇವಶತ್ರುಗಳ ನಾಯಕನಾದ ಕಂಸನನ್ನು; ಓಜಸಾ = ಪರಾಕ್ರಮಪ್ರದರ್ಶನದಿಂದ; ತುಂಗಾತ್ = ಎತ್ತರವಾದ ಸ್ಥಾನದಿಂದ; ನಿಪಾತ್ಯ = ಕೆಳಗುರುಳಿಸಿ; ದ್ವ್ಯಸುಂ = ಅಸುನೀಗಿದವನನ್ನಾಗಿ ಮಾಡಿ; ಉರ್ವ್ಯಾಂ = ಭೂಮಿಯಲ್ಲಿ; ವ್ಯಕರ್ಷತ್ = ಎಳೆದು ಹಾಕಿದನು.;

(ತನ್ನನ್ನು ಪತ್ನೀ ಸಹಿತಸೆರೆಯಲ್ಲಿ ಹಾಕಿದನೆಂದಾಗಲೀ, ಜನಿಸಿದ ಪುತ್ರರನ್ನು ಸಂಹರಿಸಿದನೆಂದಾಗಲೀ ಕಂಸನ ಮೇಲೆ ದ್ವೇಷಮಾಡಿದವನು ವಸುದೇವನಲ್ಲ. ಆತ ಮಹಾಜ್ಞಾನಿ. ಸೆರೆಯಲ್ಲಿ ಮರುಗುತ್ತಿದ್ದ ಉಗ್ರಸೇನ ಮಹಾರಾಜನ ವಿಷಯದಲ್ಲಿ ಮರುಕಹೊಂದಿ, ಸಜ್ಜನರಿಗೆ ಕಂಸನಿಂದ ಆಗುತ್ತಿದ್ದ ಹಿಂಸೆಯನ್ನು ಕಂಡು ಆ ಪಾಪಿಯು ನಾಶವಾಗಬಾರದೇ ಎಂದು ದೇವರಿಗೆ ಮೊರೆಯಿಡುತ್ತಿದ್ದ ಎಂಬುದು ಇದರ ಭಾವ. ಅಸುರರಿಗೆ ಬಂದ ಭಾಗ್ಯ, ಬಹುಕಾಲ ನಿಲ್ಲತಕ್ಕದ್ದಲ್ಲ; ಅವರು ಭಗವದ್ಭಕ್ತಿಯ ಭಾಗ್ಯವಿಲ್ಲದ ನಿರ್ಭಾಗ್ಯರು.)

ಸಾಂದೀಪಿನೇಃ ಸಕೃತ್ಪ್ರೋಕ್ತಂ ಬ್ರಹ್ಮಾಧೀತ್ಯ ಸವಿಸ್ತರಂ ।
ತಸ್ಮೈಪ್ರಾದಾದ್ವರಂ ಪುತ್ರಂ ಮೃತಂ ಪಂಚಜನೋದರಾತ್ ॥೨॥

ಸಾಂದೀಪಿನೇಃ = ಸಾಂಧೀಪಿನೀ ಗುರುಗಳಿಂದ; ಸಕೃತ್ ಪ್ರೋಕ್ತಂ =

ಒಂದೊಂದೇ ಬಾರಿ ಹೇಳಿದ; ಬ್ರಹ್ಮ = ವೇದಮಂತ್ರಗಳನ್ನು; ಸವಿಸ್ತಾರಂ = ಅರ್ಥವಿವರಣ ಪೂರ್ವಕವಾಗಿ; ಅಧೀತ್ಯ = ಅಧ್ಯಯನ ಮಾಡಿ; ಮೃತಂ ಪುತ್ರಂ = ಮರಣಿಸಿದ ಅವರ ಮಗನನ್ನು; ಪಂಚಜನಉದರಾತ್ = ಪಂಚಜನನೆಂಬ ರಾಕ್ಷಸನ ಹೊಟ್ಟೆಯೊಳಗಿನಿಂದ ಹೊರತಂದು; ತಸ್ಮೈ = ಆ ಗುರುಗಳಿಗೆ; ವರಂ ಪ್ರಾದಾತ್ = ಗುರುದಕ್ಷಿಯ ನೆವದಲ್ಲಿ ವರವನ್ನು ನೀಡಿದನು.

(ಲೋಕಶಿಕ್ಷಣಾರ್ಥವಾಗಿ ಶ್ರೀ ಕೃಷ್ಣನು ಗುರುಕುಲವಾಸ ಮಾಡಿದ; ಗುರುದಕ್ಷಿಣೆ ನೀಡಬೇಕಾದುದರ ವಿಧಾನವನ್ನೂ ತೋರಿಸಿದ. ಅಷ್ಟೇ ಅಲ್ಲದೆ ಅವನು ಅನನ್ಯಸಾಧಾರಣ ಪುರುಷನಾದುದರಿಂದ ತನಗೆ ವಿದ್ಯಾದಾನರೂಪವಾದ ಭಕ್ತಿ ಸಮರ್ಪಣೆಯಿಂದ ತುಷ್ಟನಾಗಿ ವರವನ್ನು ನೀಡಿದ.)

**ಸಮಾಹುತಾಭೀಷ್ಮಕಕನ್ಯಯಾಯೇಶ್ರಿಯಃ ಸವರ್ಣೇನ**
**ಜಿಹೀರ್ಷಯೈಷಾಂ ।**
**ಗಾಂಧರ್ವವೃತ್ತ್ಯಾಮಿಷತಾಂ ಸ್ವಭಾಗಂ ಜಹ್ರೇಪದಂ**
**ಮೂರ್ಧ್ನಿದಧತ್ಸುಪರ್ಣಃ ॥೩॥**

ಸವರ್ಣೇನ = ಕ್ಷತ್ರಿಯ ಕನ್ಯೆಯೆಂಬ ಕಾರಣದಿಂದ; ಭೀಷ್ಮಕಕನ್ಯಯಾ = ಭೀಷ್ಮಕ ರಾಜಕುವರಿಯಾದ ರುಕ್ಮಿಣೀದೇವಿಯ ಸ್ವಯವರ ವ್ಯಾಜದಿಂದ; ಯೇ ಸಮಾಹುತಾಃ = ಆಹ್ವಾನಿಸಲ್ಪಟ್ಟಿದ್ದ ರಾಜ–ರಾಜಕುಮಾರರ; ಶ್ರಿಯಃ = ದರ್ಪವನ್ನು; ಜಿಹೀರ್ಷಯಾ = ದಮನ ಮಾಡುವುದಕ್ಕಾಗಿ; ಮಿಷತಾಂ = ವ್ಯರ್ಥವಾದ ಆಸೆಯಿಂದ ಕಣ್ಣು ಬಿಟ್ಟುಕೊಂಡು ನೋಡುತ್ತಿದ್ದ; ಏಷಾಂ = ಇವರ; ಮೂರ್ಧ್ನಿ = ತಲೆಯ ಮೇಲೆ; ಪದಂದಧತ್ = ಕಾಲನ್ನಿಟ್ಟು.(ಅವರ ತಲೆಯ ಮೇಲೆ ಮೆಟ್ಟಿ); ಸುಪರ್ಣಃ = ಆನಂದ ಪೂರ್ಣನಾದ ಕೃಷ್ಣನೆಂಬ ಗರುಡನು; ಸ್ವಭಾಗಂ = ನ್ಯಾಯವಾಗಿ ತನ್ನದಾದ ವಸ್ತುವನ್ನು; ಗಾಂಧರ್ವ ವೃತ್ತ್ಯಾ = ಗಾಂಧರ್ವ ವಿವಾಹ ರೀತಿಯಿಂದ; ಜಹ್ರೇ = ಅಪಹರಿಸಿದನು.

(ಗರುಡಪಕ್ಷಿಯ ಪ್ರಾಬಲ್ಯದ ಉದಾಹರಣೆಯಿಂದ ಶ್ರೀ ಕೃಷ್ಣನ ಸರ್ವೋತ್ತಮತ್ವವನ್ನು ತೋರಿಸಿಕೊಟ್ಟಿದ್ದಾರೆ.)

**ಕಕುದ್ಮತೋಽವಿದ್ಧನಸೋದಮಿತ್ವಾ ಸ್ವಯಂವರೇನಾಗ್ನಜಿತೀಮುವಾಹ ।**
**ತಾನ್ ಭಗ್ನಮಾನಾನಭಿಗೃಧ್ಯತೋ**
**ಜ್ಞಾನ್ ಜಘ್ನೇಕ್ಷತಃಶಸ್ತ್ರಭೃತಶ್ಚ ಶಸ್ತ್ರೈಃ ॥೪॥**

ಅವಿದ್ಧನಸಃ = ಮೂಗುದಾರ ಹಾಕದಿರುವ; ಕಕುದ್ಮತಃ = ಗೂಳಿಗಳನ್ನು; ದಮಿತ್ವಾ = ಹತೋಟಿಗೆ ತಂದು;(ಅವುಗಳ ಕೊಬ್ಬನ್ನಡಗಿಸಿ) ಸ್ವಯಂವರೇ = ಸ್ವಯಂವರ ಪದ್ಧತಿಯಿಂದ; ಅಗ್ನಜಿತೀಂ = ನೀಲಾದೇವಿಯನ್ನು; ಉವಾಹ = ಮದುವೆಯಾದನು; ಅಭಿಘೃದ್ಯತಃ = ನೀಲಾದೇವಿಯ ಕೈಹಿಡಿಯಬೇಕೆಂದು ಅಪೇಕ್ಷಿಸಿದ; ಅಜ್ಞಾನ್ = ಮೂಢರಾದ; ಭಗ್ನ ಮನಾನ್ = ತಮ್ಮ ಅಪೇಕ್ಷೆಯನ್ನು ಈಡೇರಿಸಿಕೊಳ್ಳಲಾರದ; ತಾನ್ = ಸ್ವಯಂವರಕ್ಕೆ ಬಂದಿದ್ದವರನ್ನು; ಶಸ್ತ್ರಭೃತಃ = ಆಯುಧಗಳನ್ನು ಎತ್ತಿ ಹಿಡಿದು ಬಂದವರ; ಶಸ್ತ್ರೈಃ = ಆಯುಧಗಳಿಂದ; ಅಕ್ಷತಃ = ತಾನು ಘಾಯಗೊಳ್ಳದೆ; ಜಘ್ನೇ = ಸಂಹರಿಸಿದನು;

(ಮೊದಲನೇ ಅರ್ಧದಲ್ಲಿ ಕೊಬ್ಬಿದ ಗೂಳಿಗಳ ವಿಚಾರವನ್ನು ಹೇಳಿದ್ದರೂ, ಶಸ್ತ್ರಗಳನ್ನು ಹಿಡಿದುಬಂದವರ ವಿಚಾರ ಎರಡನೇ ಅರ್ಧದಲ್ಲಿರುವುದರಿಂದ, ತಾನ್ ಎಂದರೆ ಸ್ವಯಂವರಕ್ಕೆ ಬಂದಿದ್ದ ಇತರರು ಎಂದರ್ಥ. ಶ್ರೀಕೃಷ್ಣನನ್ನು ಯದುರಿಸಿದ ಮೂಢಪಶುಗಳಂತೆಯೇ ಅವರೂ ಕೊಬ್ಬಿದವರು ಮೂಗುದಾರವಿಲ್ಲದ ಗೂಳಿಗಳಂತೆ ಪೂರ್ವಾಪರ ಜ್ಞಾನವಿಲ್ಲದವರು.)

ಪ್ರಿಯಂಪ್ರಭುರ್ಗ್ರಾಮ್ಯ ಇವಪ್ರಿಯಾಯಾ ವಿಧಿತ್ಸುರಾರ್ಚ್ಛದ್ಯು
ತರುಂಯದರ್ಥೇ ।
ವಜ್ರ್ಯಾದ್ರವತ್ತಂ ಸಗಣೋರುಷಾಂಧಃ ಸ್ವಾರ್ಥೇಪುರಾತ್ಮೈರ್ಯಮ
ಯಾಚತಾನತಃ ।।೩।।

ವಜ್ರೀ = ದೇವೇಂದ್ರನು; ಯದರ್ಥೇ = ಯಾವ ಪಾರಿಜಾತ ವೃಕ್ಷವನ್ನು ಶಚೀದೇವಿಯ ಇಚ್ಚೆಯ ಪ್ರಕಾರ ಉಳಿಸಿಕೊಳ್ಳುವುದಕ್ಕಾಗಿ; ರುಷಾ ಅಂಧಃ = ಕೋಪದಿಂದ ಜ್ಞಾನಶೂನ್ಯನಾಗಿ; ತಂ = ಆಕೃಷ್ಣನನ್ನು; ತೈಃ = ತನ್ನ ಪರಿವಾರ ಸಹಿತನಾಗಿ; ಆದ್ರವತ್ = ಅಟ್ಟಿಸಿಕೊಂಡು ಹೋದನು; ಪ್ರಭುಃ = ಸ್ವಾನಂದ ಸಂಪೂರ್ಣನೂ ಸರ್ವ ಸ್ವಾಮಿಯೂ ಆದ ಶ್ರೀಕೃಷ್ಣನು; ಗ್ರಾಮ್ಯ ಇವ = ಗ್ರಾಮ್ಯ ಸುಖಾಪೇಕ್ಷಿಯಾದ ಪುರುಷನಂತೆ; ಪ್ರಿಯಾಯಾಃ = ಪ್ರೀತಿಪಾತ್ರಳಾದ ಸತ್ಯಭಾಮಾದೇವಿಗೆ; ಪ್ರಿಯಂವಿಧಿತ್ಸುಃ = ಪ್ರಿಯವಾದ ಕಾರ್ಯವನ್ನು ಮಾಡುವುದಕ್ಕಾಗಿ (ಇಚ್ಚೆಯನ್ನು ಸಲ್ಲಿಸುವುದಕ್ಕಾಗಿ); ದ್ಯುತರುಂ = ಸ್ವರ್ಗದ ಪಾರಿಜಾತ ವೃಕ್ಷವನ್ನು; ಆರ್ಚ್ಛತ್ = ತೆಗೆದುಕೊಂಡು ಬಂದನೋ, ಯ ಅನತಃ ಅಯಾಚತ = ಅದಕ್ಕಾಗಿ ಯಾರನ್ನು ತಲೆಬಾಗಿ ಬೇಡಿದನೋ ಅಂತಹ; ಸಃ = ಶ್ರೀಕೃಷ್ಣನು (೬ನೇ ಶ್ಲೋಕ)

(ಅಜ್ಞಾನಕಾರ್ಯವು ರುದ್ರಾದಿ ದೇವತೆಗಳನ್ನೂ ಬಿಟ್ಟದ್ದಲ್ಲವೆಂಬುದು

ಇದರಿಂದ ವ್ಯಕ್ತವಾಗುತ್ತದೆ. ಇಲ್ಲೊಂದು ವಿಶೇಶ, ಸಾಮಾನ್ಯರಿಗೆ ಬರುವ ಅಜ್ಞಾನ ಅಲ್ಪಪ್ರಮಾಣದ್ದಾದರೆ, ಮೇಲೆ ಮೇಲಿನ ದೇವತೆಗಳಿಗೆ ಅಂಟಿಕೊಳ್ಳುವ ಅಜ್ಞಾನ ಹೆಚ್ಚು ಹೆಚ್ಚು ಪ್ರಬಲ. ಆದರೆ, ಆದರಿಂದ ಮುಂದೆ ಅವರಿಗೆ ಲಭಿಸುವ ಜ್ಞಾನ ಭಕ್ತಿವೈರಾಗ್ಯಗಳೂ ಅಷ್ಟೇ ಪ್ರಬಲ. ಆವರ ಮೇಲೆ ಬೀಳುವ ಪ್ರಬಲ ಅಜ್ಞಾನಾಭಿಮಾನಿ ದೈತ್ಯರ ಮೇಲೆ ಅವರು ಹೊರಾಟ ನಡೆಸಿ ಜಯಿಸುತ್ತಾರೆ.)

**ಸತಂಮೃಧೇಖಂವಪುಷಾಗ್ರಸಂತಂ ದೃಷ್ಟಾಸುನಾಭೋನ್ಮಥಿತಂಭರಿತ್ರ್ಯಾಃ।**
**ಆಮಂತ್ರಿತಸ್ತತ್ತನಯಾಯಶೇಷಂ ದತ್ವಾ ತದಂತಃಪುರಮಾವಿವೇಶ॥೬॥**

ಸಃ = ಆ ಶ್ರೀಕೃಷ್ಣನು; ಮೃಧೇ = ಯುದ್ದದಲ್ಲಿ; ವಪುಷಾಖಂಗ್ರಸಂತಂ = ಆಕಾಶವನ್ನು ನುಂಗುವಂತೆ ಶರೀರವನ್ನು ದೊಡ್ಡದಾಗಿ ಬೆಳೆಸಿ; ಸುನಾಭೋನ್ಮಥಿತಂ = ಚಕ್ರಾಯುಧದಿಂದ ಮರ್ದನಮಾಡಲ್ಪಟ್ಟ; ಧರಿತ್ರ್ಯಾಃಸುತಂ = ಭೂಪುತ್ರನಾದ ನರಕಾಸುರನನ್ನು; ದೃಷ್ಟ್ವಾ = ಕಂಡು; ಧರಿತ್ರ್ಯಾ ಪ್ರಾರ್ಥಿತಃ = ಭೂದೇವಿಯಿಂದ ಪ್ರಾರ್ಥಿತನಾಗಿ; ತತ್ತನಯಾಯ = ನರಕಾಸುರನ ಪುತ್ರನಿಗೆ; ಶೇಷಂ = ಯುದ್ಧದಲ್ಲಿ ಗೆದ್ದ ರಾಜ್ಯವನ್ನು; ದತ್ವಾ = ಪ್ರದಾನ ಮಾಡಿ; ತದಂತಃಪುರಂ = ಆ ಅಸುರನ ಅಂತಃಪುರವನ್ನು; ಆವಿವೇಶ = ಪ್ರವೇಶಿಸಿದನು.

(ಮಾಯಾಯುದ್ಧಪ್ರವೀಣನಾದವನು ನರಕಾಸುರ; ಕ್ಷುದ್ರ ಮಂತ್ರಗಳಿಂದಲೂ; ಸಮರ ತಂತ್ರಗಳಿಂದಲೂ ಬಲಿಷ್ಠನಾಗಿದ್ದವನು. ದೇವಮಾಯೆಯ ಮುಂದೆ ಯಾವುದೂ ನಿಲ್ಲಲಾರದು)

**ತತ್ರಾ ಹೃತಾಸ್ತಾನ್ನರದೇವಕನ್ಯಾಃ ಕುಜೇನದೃಷ್ಟ್ವಾಹರಿಮಾರ್ತಬಂಧುಂ।**
**ಉತ್ಥಾಯಸದ್ಯೋಜಗೃಹುಃ ಪ್ರಹರ್ಷವ್ರೀಡಾನುರಾಗಪ್ರಹಿತಾವಲೋಕೈಃ ॥೭॥**

ತತ್ರ = ಆ ಅಂತಃಪುರದಲ್ಲಿ; ಕುಜೇನ = ಭೂಪುತ್ರನಾದ ನರಕಾಸುರನಿಂದ; ಆಹೃತಾಃ = ಅಪಹರಿಸಿ ತಂದಿರಿಸಲ್ಪಟ್ಟಿದ್ದ; ತಾಃ ನರದೇವಕನ್ಯಾಃ = ಆ ರಾಜ ಪುತ್ರಿಯರು; ಆರ್ತಬಂಧುಂ = ದೀನರ ಬಂಧುವಾದ ಶ್ರೀಕೃಷ್ಣನನ್ನು; ದೃಷ್ಟ್ವಾ = ಕಂಡು; ಉತ್ಥಾಯ = ಸಂಭ್ರಮದಿಂದ ಎದ್ದು; ಪ್ರಹರ್ಷ, ವ್ರೀಡಾ, ಅನುರಾಗ, ಪ್ರವಹಿತ, ಅವಲೋಕೈಃ = ಬಹುಸಂತೋಷ. ಲಜ್ಜಾ, ಪ್ರೇಮಗಳಿಂದ ತುಂಬಿದ ನೋಟಗಳಿಂದ; ಜಗೃಹುಃ = ಆ ಸ್ವಾಮಿಯನ್ನು ಪತಿಯೆಂದು ಭಾವಿಸಿದರು.

("ಬಂಧಕೋಭವಪಾಶೇನ ಭವಪಾಶಾಚ್ಚ ಮೋಚಕಃ" ಎಂಬುದಿಲ್ಲಿ ಸಾರ್ಥಕವಾಗಿದೆ.)

ಆಸಾಂಮುಹೂರ್ತಏಕಸ್ಮಿನ್ನಾನಾಗಾರೇಷು ಯೋಷಿತಾಂ ।
ಸವಿಧಿಂ ಜಗೃಹೇ ಪಾಣಿಂ ಪುರುರೂಪಃ ಸ್ವಮಾಯಯಾ ॥೮॥

ಸ್ವಮಾಯಯಾ = ತನ್ನ ಸಾಮರ್ಥ್ಯವಿಶೇಷದಿಂದ; ಪುರುರೂಪಃ = ಅನೇಕ ರೂಪಗಳನ್ನು ಧರಿಸಿದವನಾಗಿ; ಏಕಸ್ಮಿನ್ ಮುಹೂರ್ತೇ = ಒಂದೇ ಮುಹೂರ್ತದಲ್ಲಿ; ಸವಿಧಿಂ = ಶಾಸ್ತ್ರವಿಧಿಗನುಸಾರವಾಗಿ; ಆಸಾಂ ಯೋಷಿತಾಂ = ಈ ರಾಜಕನ್ಯೆಯರ; ಪಾಣಿಂ ಜಗೃಹೇ = ಪಾಣಿಗ್ರಹಣ ಮಾಡಿದನು. (ವಿವಾಹ ಮಾಡಿಕೊಂಡನು).

(ಇಂತಹ ಭಗವಂತನ ಮಹಿಮೆಯನ್ನು ಕಂಡ ದ್ವಾರಕಾನಗರದ ನಿವಾಸಿಗಳು ಧನ್ಯರು. ಆದರೂ, ವಸುದೇವಾದಿಗಳು ಕೆಲವರಿಗಲ್ಲದೆ ಭಗವಂತನ ಮಾಯಾ ವೈಚಿತ್ರ್ಯವು ಉಳಿದವರಿಗೆ ನೆನಪಿನಿಂದ ಜಾರಿಹೋಗುತ್ತಿದ್ದುದೂ ಆ ಜಗತ್ಕರ್ತನ ಮಾಯೆಯೇ ಸರಿ.)

ತಾಸ್ವಪತ್ಯಾನ್ಯಜನ ಯದಾತ್ಮತುಲ್ಯಾನಿ ಸರ್ವತಃ ।
ಏಕೈಕಸ್ಯಾಂದಶದಶ ಪ್ರಕೃತೇರ್ವಿಬುಭೂಷಯಾ ॥೯॥

ತಾಸು ಏಕೈಕಸ್ಯಾಂ = ಆ ಒಬ್ಬೊಬ್ಬ ಪತ್ನಿಯಲ್ಲಿಯೂ, ಸರ್ವತಃ ಆತ್ಮ ತುಲ್ಯಾನಿ = ಎಲ್ಲಾ ಬಗೆಗಳಲ್ಲಿಯೂ ತನ್ನನ್ನೇ ಹೋಲುವ; ದಶದಶ ಅಪತ್ಯಾನ್ = ಹತ್ತು ಹತ್ತು ಪುತ್ರರನ್ನು; ಪ್ರಕೃತೇಃ ವಿಬುಭೂಷಯಾ = ಆಪತ್ನಿಯರ ಸ್ವಾಭಾವಿಕ ಇಚ್ಛೆಯನ್ನು ಪೂರ್ಣಮಾಡುವುದಕ್ಕಾಗಿ; ಅಜನಯತ್ = ಉತ್ಪಾದಿಸಿದನು.

(ಬಹುಶಃ, ವೃದ್ಧಾಪ್ಯವು ಕಾಲಿಡುವವರೆಗೆ ಮಕ್ಕಳನ್ನು ಪಡೆಯಬೇಕೆಂಬ ಇಚ್ಛೆಯು ಸ್ತ್ರೀಯರಲ್ಲಿರುವುದನ್ನು ಇದು ಸೂಚಿಸುತ್ತದೆ.)

ಕಾಲಮಾಗಧ ಶಾಲ್ವಾದೀನನೀಕೈ ರುಂಧತಃಪುರಂ ।
ಅಜೀಘನತ್ಸ್ವಯಂ ದಿವ್ಯಂ ಸ್ವಪುಂಸಾಂ ತೇಜ ಆವಿಶನ್ ॥೧೦॥

ಅನೀಕೈಃ = ಸೈನ್ಯಗಳಿಂದ ಕೂಡಿ; ಪುರಂ ರುಂಧತಃ = ದ್ವಾರಕಾಪುರಕ್ಕೆ ಮುತ್ತಿಗೆ ಹಾಕಿದ; ಕಾಲ, ಮಾಗಧ, ಶಾಲ್ವ ಆದೀನ್ = ಕಾಲಯವನ, ಜರಾಸಂಧ, ಶಾಲ್ವ ಮೊದಲಾದವರನ್ನು; ಸ್ವಯಂ = ವೈಯಕ್ತಿಕವಾಗಿಯೂ; ಸ್ವಪುಂಸಾಂ = ತನ್ನಭಕ್ತರಲ್ಲಿ; ದಿವ್ಯಂ ತೇಜ ಆವಿಶನ್ = ತನ್ನ ದಿವ್ಯ ಸಾಮರ್ಥ್ಯವನ್ನು ಇರಿಸಿಯೂ; ಅಜೀಘನತ್ = ಪರಾಜಯಗೊಳಿಸಿದನು.

(ಜೀವರ ಜನನ ಮರಣಾದಿಗಳಿಗೆ ಕಾರಣನಾದವನು ಭಗವಂತನೇ ಹೊರತು ಬೇರೆಯವರಲ್ಲ ಎಂಬುದು ಇದರಿಂದ ಸಿದ್ಧವಾಯಿತು. ಮುಚುಕುಂದರಾಯನಲ್ಲಿ ತೇಜೋರೂಪದಿಂದ ತಾನೇ ಇದ್ದು ಕಾಲಯವನನನ್ನು ಸಂಹರಿಸಿದನೆಂಬುದು ಇದಕ್ಕೆ ನಿದರ್ಶನ.)

**ಶಂಬರಂ ವಿವಿದಂ ಬಾಣಂ ಮುರಂ ಬಲ್ವಲಮೇವಚ ।**
**ಅನ್ಯಾಂಶ್ಚದಂತವಕ್ರಾದೀನವಧೀತ್ಕಾಂಶ್ಚಘಾತಯನ್ ॥೧೧॥**

ಶಂಬರಂ, ವಿವಿದಂ, ಬಾಣಂ, ಮುರಂ, ಬಲ್ವಲಂ, ಏವಚ = ಈ ಹೆಸರುಗಳ ದೈತ್ಯರನ್ನೂ; ಅನ್ಯಾನ್ ಚ = ಇನ್ನೂ ಇತರರಾದ ದಂತವಕ್ತ್ರಾದೀನ್; = ದಂತವಕ್ತನೇ ಮೊದಲಾದವರನ್ನೂ; ಕಾನ್ ಚ = ಅವರಲ್ಲಿ ಕೆಲವನ್ನು ತಾನಾಗಿಯೇ; ಘಾತಯನ್ = ಸಂಹರಿಸಿ; ಇನ್ನುಳಿದವರನ್ನು ಅವಧೀತ್ = ಬೇರೆಯವರ ಮುಖಾಂತರ ಸಂಹರಿಸಿದನು.

(ಶಂಬರನನ್ನು ಪ್ರದ್ಯುಮ್ನನ ಮುಖಾಂತರವೂ, ವಿವಿದನನ್ನು ಬಲರಾಮನ ಮುಖ್ಯಾಂತರವೂ ಸಂಹಾರಮಾಡಿದನು; ಮುರ, ದಂತವಕ್ತ್ರ ಮೊದಲಾದವರನ್ನು ಶ್ರೀ ಕೃಷ್ಣನು ತಾನಾಗಿಯೇ ಸಂಹರಿಸಿದನು.)

**ಅಥತೇಭ್ರಾತೃಪುತ್ರಾಣಾಂ ಪಕ್ಷಯೋಃ ಪತಿತಾನ್ನೃಪಾನ್ ।**
**ಚಚಾಲಭೂಃ ಕುರುಕ್ಷೇತ್ರಂ ಯೇಷಾಮಾಪತತಾಂಬಲೈಃ ॥೧೨॥**

ಅಥ = ದಂತವಕ್ರಾದಿಗಳನ್ನು ವಧಿಸಿದ ನಂತರ; ಯೇಷಾಂ = ಯಾರ; ಕುರುಕ್ಷೇತ್ರಂ ಆಪತತಾಂ = ಕುರುಕ್ಷೇತ್ರಕ್ಕೆ ಬರುತ್ತಿದ್ದ; ಬಲೈಃ = ಸೈನ್ಯಗಳ ಪಾದಾಘಾತಗಳಿಂದ; ಭೂಃಚಚಾಲ = ಭೂಮಿಯುನಡುಗಿಬಿಟ್ಟಿತೋ, ಅಂತಹ; ತೇ = ನಿನ್ನ; ಭ್ರಾತೃಪುತ್ರಾಣಾಂ = ಅಣ್ಣಂದಿರ ಮಕ್ಕಳಾದ ಕೌರವರ ಮತ್ತು ಪಾಂಡವರ; ಪಕ್ಷಯೋಃ ಪತಿತಾನ್ = ಪಕ್ಷಗಳನ್ನು ಸೇರಿಕೊಂಡಿದ್ದ; ನೃಪಾನ್ = ರಾಜಗುರುಗಳಮ್ನು; (ಅಘಾತಯತ್ = ಸಂಹರಿಸಿದನು, ಎಂದರೆ, ಪರಸ್ಪರ ಹೊಡೆದಾಡಿ ಸಾಯುವಂತೆ ಮಾಡಿದನು.;)

(ಹದಿನೆಂಟು ಅಕ್ಷೋಹಿಣೀ ಸೈನ್ಯಗಳು ಮಡಿದುದರಿಂದ, ಭಾರದಿಂದ ಸೊರಗಿದ್ದ ಭೂಮಿಗೆ ನೆಮ್ಮದಿಯುಂಟಾಯಿತೆನ್ನುವುದು ಇದರ ಭಾವ. ಮೇಲ್ನೋಟಕೆ, ಇಷ್ಟು ಜನರು ಸತ್ತರಲ್ಲಾ ಎನಿಸಬಹುದು. ಎರಡೂ ಕಡೆಯ ಸೈನಿಕರ ಸ್ವಾಭಾವಿಕ ಮತ್ತು ನೈಮಿತ್ತಿಕ ಪಾಪಕರ್ಮಗಳನ್ನು ಮುರಿಯುವ ಉದ್ದೇಶದಿಂದಲೇ ಭಗವಂತನು ಮರಣದಿಂದ ಪಾಪಕಳೆದುಕೊಳ್ಳಬೇಕಾದವರನ್ನೆಲ್ಲಾ ಒಂದುಗೂಡಿಸಿ, ಸಾಯುವಂತೆ

ಮಾಡುತ್ತಾನೆ. ಕರ್ಮದ ಮರ್ಮವನ್ನರಿತವರು ಮಾತ್ರ ಭಗವಂತನ ಸಂಕಲ್ಪದ ಸಾರ್ಥಕ್ಯವನ್ನು ತಿಳಿಯಬಲ್ಲರು.)

**ಸಕರ್ಣದುಶ್ಶಾಸನ ಸೌಬಲಾನಾಂ ಕುಮಂತ್ರಪಾಕೇನ ಹತಶ್ರಿಯಾಯುಷಂ ।**
**ಸುಯೋಧನಂ ಸಾನುಚರಂಶಯಾನಂ ಭಗ್ನೋರುಮುರ್ವ್ಯಾಂ ನನಂದ ಪಶ್ಯನ್ ॥೧೩॥**

ಸಕರ್ಣದುಶ್ಶಾಸನ ಸೌಬಲಾನಾಂ = ಕರ್ಣನೂ ಸೇರಿದಂತೆ ದುಶ್ಶಾಸನ ಶಕುನಿ ಮೊದಲಾದವರ; ಕುಮಂತ್ರಪಾಕೇನ = ದುಷ್ಟಾಲೋಚನೆಗಳ ಪರಿಪೂರ್ತಿಯಿಂದ; ಹತಶ್ರಿಯಾ = ಭಾಗ್ಯಹೀನನಾಗಿ; ಹತಾಯುಷಂ = ಆಯುಃ ಕ್ಷೀಣನಾದ; ಸಾನುಚರಂ = ತನ್ನಪರಿವಾರದಿಂದ ಸಹಿತನಾಗಿ (ಹದ್ದು ಕಾಗೆ ನರಿನಾಯಿಗಳಿಂದ ಆವೃತನಾಗಿ); ಭಗ್ನೋರುಂ = ತೊಡೆಮುರಿಸಿಕೊಂಡು; ಉರ್ವ್ಯಾಂಶಯಾನಂ = ನೆಲದ ಮೇಲೆ ಬಿದ್ದಿದ್ದ; ಸುಯೋಧನಂ = ದುರ್ಯೋಧನನನ್ನು; ಪಶ್ಯನ್= ನೋಡುತ್ತಾ; ಸಃ = ಆ ಶ್ರೀಕೃಷ್ಣನು; ನನಂದ = ಸಂತೋಷಿಸಿದನು.

(ಸ್ವರೂಪತಃ ಒಳ್ಳೆಯವರು ಕೆಟ್ಟವರು ಇರುವುದನ್ನೂ ಅವರವರ ಗತಿಗಳ ಔಚಿತ್ಯವನ್ನೂ ಚೆನ್ನಾಗಿ ಅರ್ಥ ಮಾಡಿಕೊಳ್ಳದೆ, ಮಾನವ ಬುದ್ಧಿಯ ಬಲದಿಂದ ಇಂತಹ ಪ್ರಸಂಗದ ವಿಚಾರವನ್ನು ಕುರಿತು ಟೀಕಿಸುವುದು ಅವಿವೇಕ. ಯಾರಾದರೂ ತಮ್ಮ ವಿಷಯದಲ್ಲಿಯೇ ದುಷ್ಟರಿಂದ ಆದ ಅಸಹ್ಯ ಅಪಚಾರವನ್ನು ಕುರಿತು ಯೋಚಿಸಿದಾಗ, ಶ್ರೀಕೃಷ್ಣನ ಆ ನೀತಿಯನ್ನು ತಿಳಿಯಬಲ್ಲರು. ಸ್ವರೂಪ ಸ್ವಭಾವಗಳನ್ನು ತಿಳಿದು ಅವರವರಿಗೆ ತಕ್ಕ ಗತಿಗಳನ್ನು ನೀಡುವುದು ನ್ಯಾಯವೇ ಹೊರತು ಅನ್ಯಾಯವಲ್ಲವೆಂಬುದನ್ನೂ ಚೆನ್ನಾಗಿ ಬಲ್ಲವರು ಭಗವಂತ ಮತ್ತು ಭೀಮಸೇನ. ಅವರ ಅನುಗ್ರಹದಿಂದ ನಮಗೂ ಅದು ಅರ್ಥವಾಗಬೇಕು.)

**ಕಿಯಾನ್ ಭುವೋಽಯಂ ಕ್ಷಪಿತೋರು ಭಾರೋ ಯದ್ದ್ರೋಣ ಭೀಷ್ಮಾರ್ಜುನ ಭೀಮಶಲ್ಯೈಃ ।**
**ಅಷ್ಟಾದಶಾಕ್ಷೋಹಿಣಿಕೋ ಮದಂಶೈರಾಸ್ತೇಬಲಂ ದುರ್ವಿಷಹಂ ಯದೂನಾಂ ॥೧೪॥**

ದ್ರೋಣ, ಭೀಷ್ಮ, ಅರ್ಜುನ, ಭೀಮ, ಶಲ್ಯೈಃ = ದ್ರೋಣಾಚಾರ್ಯ ಭೀಷ್ಮಾಚಾರ್ಯ, ಅರ್ಜುನ, ಭೀಮಸೇನ, ಶಲ್ಯರಾಯ ಮೊದಲಾದ ಭಹುವರ್ಗ್ಗತ್ರ ರಿಂದ; ಯತ್ ಅಷ್ಟಾದಶಾಕ್ಷೌಹಿಣಿಕಃ = ಹದಿನೆಂಟು ಅಕ್ಷೋಹಿಣೀ ಸಂಖ್ಯೆಯ ಈ

ಮಹಾಭೂಭಾರವು; ಕಿಯಾನ್ = ಸ್ವಲ್ಪಮಟ್ಟಿಗೆ; ಕ್ಷಪಿತಃ = ಕಳೆದುಹೋಯಿತು; ಮದಂಶೈಃ = ನನ್ನ ಸಂತಾನವೆಂಬ ವ್ಯಾಜದಿಂದ; ಯದೂನಾಂ = ಯಾದವರ; ದುರ್ವಿಷಹಂ = ಗರ್ವಯುಕ್ತವಾದ; ಬಲಂ = ಸಮೂಹವು; ಅಸ್ತೇ = ಇನ್ನೂ ಉಳಿದಿದೆ; ಹೀಗೆಂದು ಶ್ರೀಕೃಷ್ಣನು ಅವಲೋಕಿಸಿದನು.

(ದ್ರೋಣಾಚಾರ್ಯರಿಂದಲೂ, ಭೀಷ್ಮಾಚಾರ್ಯರಿಂದಲೂ, ಶಲ್ಯರಾಯನಿಂದಲೂ (ದೇವತಾಪಕ್ಷದವರೂ, ಭಗವದ್ಭಕ್ತರೂ ಆದ ಈ ಮೂವರಿಂದ) ಪಾಂಡವ ಪಕ್ಷದಲ್ಲಿದ್ದ ಸಜ್ಜನ ಸಮೂಹದ ವಧೆಯಾಯಿತು. ಆ ಸಜ್ಜನರ ಜನ್ಮಾಂತರಗಳ ಪಾಪಸಮೂಹದ ವಧೆಯಾಯಿತು. ಆ ಸಜ್ಜನರ ಜನ್ಮಾಂತರಗಳ ಪಾಪಸಮೂಹ ಸಂಗ್ರಹಳ ನಾಶವಾದುದು ಅವರ ವಧೆಯ ಸತ್ಪ್ರಯೋಜನ. ಪುಣ್ಯ ವಿಶೇಷಗಳ ಸಂಗ್ರಹದಿಂದ ಯಾದವರಾಗಿ ಹುಟ್ಟಿದ್ದವರ ಪಾಪ ಸಂಗ್ರಹಗಳ ನಾಶವೂ ಆಗಬೇಕೆಂಬುದು ಇಲ್ಲಿ ಗಮನಾರ್ಹ.)

**ಮಿಥೋಯದೈಷಾಂಭವಿತಾವಿವಾದೋ ಮಾಧ್ವ್ಯಾಮದಾತಾಮ್ರ**
**ವಿಲೋಚನಾನಾಂ ।**
**ನೈಷಾಂವಧೋಪಾಯ ಇಯಾನ್ ಅತೋನ್ಯೋಮಯ್ಯುದ್ಯ**
**ತೇಂತರ್ದಧತೇಸ್ವಯಂಸ್ಮ ॥೧೫॥**

ಮಾಧ್ವ್ಯಾಃಮದಾತ್ = ಮದಿರಾಪಾನ ಮಾಡಿ ಮದವೇರುವುದರಿಂದ; ತಾಮ್ರವಿಲೋಚನಾನಾಂ = ಕೆಂಪೇರಿದ ಕಣ್ಣುಗಳುಳ್ಳವರಾದ; (ರಜೋಗುಣದಿಂದ ಉದ್ರಿಕ್ತರಾದ); ಏಷಾಂ = ಇವರ; ಮಿಥಃ ವಿವಾದಃ = ಪರಸ್ಪರ ಕಲಹವು; ಯದಾಭವಿತಾ = ಉಂಟಾದುದೇ ಆದರೆ; ಏಷಾಂ = ಇವರ; ವಧೋಪಾಯಃ= ಸಂಹಾರ ಮಾರ್ಗವಾಗುವುದು; ಇಯಾನ್ = ಇಷ್ಟೇ ಸರಿ; ಆತಃ ಅನ್ಯಃನ = ಇದಕ್ಕಿಂತ ಬೇರೆ ಉಪಾಯವು ಬೇಕಿಲ್ಲ; ಮಯಿಉದ್ಯತೇ = ನಾನು ಅದೃಶ್ಯನಾದಲ್ಲಿ; ಸ್ವಯಂ = ತಾವಾಗಿಯೇ; ಅಂತರ್ದಧತೇಸ್ಮ = ಮರಣಹೊಂದುವರೆಂಬುದು ನಿಶ್ಚಯ.

(ಎಲ್ಲರ ಜನನ ಮರಣಗಳಿಗೂ ಮುಖ್ಯ ಕಾರಣನಾದವನು. ಭಗವಂತ ಅವರವರ ಕರ್ಮಗತಿಗಳನ್ನನುಸರಿಸಿ ಆ ಮಹಾನುಭಾವನು ಅವರವರಿಗೆ ಇಷ್ಟವಾಗುವ ರೀತಿಗಳಲ್ಲಿ ಕ್ರಿಯೆಗಳನ್ನು ನಡೆಸುತ್ತಾನೆ.)

**ಏವಂ ಸಂಚಿಂತ್ಯಭಗವಾನ್ ಸ್ವಾರಾಜ್ಯೇಸ್ಥಾಪ್ಯಧರ್ಮಜಂ ।**
**ನಂದಯಾಮಾಸಸುಹೃದಃ ಸಾಧೂನಾಂ ವರ್ತ್ಮದರ್ಶಯನ್ ॥೧೬॥**

ಭಗವಾನ್ = ಭಗವಂತನಾದ ಶ್ರೀಕೃಷ್ಣನು; ಏವಂ ಸಂಚಿಂತ್ಯ = ಈ ರೀತಿಯಾಗಿ ಸಂಕಲ್ಪಿಸಿ; ಧರ್ಮಜಂ = ಧರ್ಮರಾಯನನ್ನು; ಸ್ವಾರಾಜ್ಯೇಸ್ಥಾಪ್ಯ = ತನಗೆ ಸಲ್ಲಬೇಕಾದ ಸ್ವರ್ಗಸದೃಶವಾದ ರಾಜಪದವಿಯಲ್ಲಿ ನಿಲ್ಲಿಸಿ; ಸಾಧೂನಾಂವರ್ತ್ಮ ದರ್ಶಯನ್ = ಸಜ್ಜನರು ಬಾಳಬೇಕಾದ ರೀತಿಯನ್ನು ತೋರಿಸಿಕೊಟ್ಟು; ಸುಹೃದಃ = ನಿರ್ಮಲ ಹೃದಯದ ಎಲ್ಲರನ್ನೂ; ನಂದಯಾಮಾಸ = ಸಂತೋಷಗೊಳಿಸಿದನು.

(ಧರ್ಮಗ್ಲಾನಿಯನ್ನು ಪರಿಹರಿಸಿ ಸದ್ಧರ್ಮವನ್ನು ಶ್ರೀಕೃಷ್ಣನು ನೆಲೆಗೊಳಿಸಿ ಅವತಾರ ಕಾರ್ಯವನ್ನು ಪೂರ್ತಿಮಾಡಿದನು.)

**ಉತ್ತರಾಯಾಂಧೃತಃಪೂರೋರ್ವಂಶಃ ಸಾಧ್ವಭಿಮನ್ಯುನಾ ।**
**ಸವೈದ್ರೋಣ್ಯಸ್ತ್ರ ಸಂಛಿನ್ನಃ ಪುನರ್ಭಗವತಾಧೃತಃ ॥೧೭॥**

ಪೂರೋಃ ವಂಶಃ = ಪುರುರಾಯನ ವಂಶಾಭಿವೃದ್ಧಿಯ ಬೀಜವು; ಉತ್ತರಾಯಾಂ = ಉತ್ತರಾದೇವಿಯ ಗರ್ಭದಲ್ಲಿ; ಅಭಿಮನ್ಯುನಾ = ಅಬಿಮನ್ಯುವಿನ ದೆಸೆಯಿಂದ; ಧೃತಃ = ಧಾರಣಮಾಡಲಟ್ಟಿತು; ಸಃವೈ = ಆಗರ್ಭಗತಶಿಶುವೇ; ದ್ರೋಣ್ಯಸ್ತ್ರ ಸಂಛಿನ್ನಃ = ಅಶ್ವತ್ಥಾಮಾಚಾರ್ಯರ ಅಸ್ತ್ರದಿಂದ ಪೀಡಿತನಾಗಿ; ಪುನಃ ಧೃತಃವೈ = ಮತ್ತೆ ಸಂರಕ್ಷಿತನಾದನು ಎಂಬುದು ಪ್ರಸಿದ್ಧವೇ.

(ಪಾಂಡವರಂತಹ ಸಜ್ಜನರಿಗೆ ಭಗವಂತನು ಹೇಗೆ ಸದಾ ಸಂರಕ್ಷಕನಾಗಿರುವನೆಂಬುದು ಇದರಿಂದ ವ್ಯಕ್ತವಾಗುವುದು.)

**ಅಯಾಜಯದ್ಧರ್ಮಸುತಮಶ್ವಮೇಧೈಸ್ತ್ರಿಭಿರ್ವಿಭುಃ ।**
**ಸೋಪಿಕ್ಷ್ಮಾಮನುಜೈರಕ್ಷನ್ ರೇಮೇಕೃಷ್ಣಮನುವ್ರತಃ ॥೧೮॥**

ವಿಭುಃ = ಕಲ್ಯಾಣ ಗುಣ ಪೂರ್ಣನಾದ ಶ್ರೀ ಕೃಷ್ಣನು; ತ್ರಿಭಿಃ ಅಶ್ವಮೇಧೈಃ = ಮೂರುಬಾರಿ ಅಶ್ವಮೇಧಯಾಗಗಳ ನೆಪದಿಂದ; ಧರ್ಮಸುತಂ = ಧರ್ಮರಾಯನನ್ನು; ಅಯಾಜಯತ್ = ಭಗವತ್ಪೂಜೆಯನ್ನು ಮಾಡಿಸಿ ಧನ್ಯನನ್ನಾಗಿಸಿದನು; ಸಃ ಅಪಿ = ಆ ಧರ್ಮರಾಯನಾದರೋ; ಅನುಜೈಃ = ಭೀಮಸೇನಾದಿ ಸಹೋದರರಿಂದ ಕೂಡಿಕೊಂಡು; ಕೃಷ್ಣಂ ಅನುವ್ರತಃ = ಶ್ರೀಕೃಷ್ಣನ ಸಲಹೆಗಳಂತೆ ನಡೆದು ಕೊಳ್ಳುತ್ತಾ; ಕ್ಷ್ಮಾಂರಕ್ಷನ್ = ಭೂಪಾಲಕನಾಗಿ; ರೇಮೇ = ಭಗವದ್ಧ್ಯಾನದಿಂದ ಸಂತುಷ್ಟನಾದನು.

(ರಜೋಗುಣ ತಮೋಗುಣ ವಿಶಿಷ್ಟರಾದ ರಾಜರು ಹೆಮ್ಮೆಯಿಂದ ರಾಜ್ಯವಾಳುತ್ತಾ, ತಮಗಿಷ್ಟವಾದವರಿಗೆ ಮಾತ್ರ ಅನುಕೂಲರಾಗಿ, ಬಹಳ ಮಟ್ಟಿಗೆ

ಪ್ರಜಾಪೀಡಕರೇ ಆಗಿರುತ್ತಾರೆ. ಧರ್ಮರಾಯನಂತಹ ರಾಜರು ಜನರನ್ನು ಧರ್ಮಮಾರ್ಗದಲ್ಲಿ ನಡೆಸುತ್ತಾ, ಭಗವತ್ಪೂಜಾರೂಪವಾಗಿ ಜನರನ್ನು ರಕ್ಷಿಸುತ್ತಾ, ಆದರಿಂದ ಸಂತೋಷ ಚಿತ್ತರಾಗಿರುವರು.)

**ಭಗವಾನಪಿ ವಿಶ್ವಾತ್ಮಾ ಲೋಕವೇದಪಥಾನುಗಃ ।**
**ಕಾಮಾನ್ಸಿಷೇವೇದ್ವಾರ್ವತ್ಯಾಮಸಕ್ತಃ ಸಾಂಖ್ಯಮಾಸ್ಥಿತಃ ॥೧೯॥**

ವಿಶ್ವಾತ್ಮಾ ಅಪಿ = ತಾನು ಜಗದಾಧಾರನಾದ ಪರಮ ಪುರುಷನೇ ಆದರೂ; ಭಗವಾನ್ = ಸ್ವಾತ್ಮಾನಂದ ಪೂರ್ಣನಾದ ಶ್ರೀಕೃಷ್ಣನು; ಲೋಕವೇದಪಥಾನುಗಃ = ಲೋಕರೂಢಿಯ ಮತ್ತು ವೇದೋಕ್ತ ಮಾರ್ಗಗಳನ್ನು ಅನುಸರಿಸುತ್ತಾ; ಸಾಂಖ್ಯಂ ಆಸ್ಥಿತಃ = ಜ್ಞಾನದ ಆಶ್ರಯದಲ್ಲಿದ್ದು; ದ್ವಾರ್ವತ್ಯಾಂ = ದ್ವಾರಕಾಪಟ್ಟಣದ ತನ್ನ ಪರಿವಾರದೊಡನೆ; ಕಾಮಾನ್ = ಧರ್ಮಾರ್ಥ ಕಾಮಗಳೆಂಬ ಪುರುಷಾರ್ಥಗಳಿಗೆ ಅನುಕೂಲಗಳಾದ ಕಾರ್ಯಗಳನ್ನು; ಅಸಕ್ತಃ = ಯಾವ ಫಲಾಪೇಕ್ಷೆಯೂ ಇಲ್ಲದೆ; ಸಿಷೇವೇ = ಆಚರಿಸಿದನು.

(ಲೋಕದ ಜನರಿಗೆ ಮಾದರಿಯಾದ ರೀತಿಯಲ್ಲಿ ನಡೆದುಕೊಂಡಂತೆ ಶ್ರೀಕೃಷ್ಣನು ತೋರಿಕೊಂಡನು. ಸಾಂಖ್ಯವೆಂದರೆ ಜ್ಞಾನವೆಂಬುದು [illegible] ಗ್ರಹಿಸಬೇಕಾದ ಅರ್ಥ. ಇತರ ಜೀವರು ಜ್ಞಾನಮಾರ್ಗವನ್ನು ಅರ್ಥಮಾಡಿಕೊಂಡು ಅದರಂತೆ ವರ್ತಿಸಬೇಕು. ಸ್ವಯಂ ಪರಿಪೂರ್ಣ ಜ್ಞಾನ ಸ್ವರೂಪನಾದ ಶ್ರೀಕೃಷ್ಣನು ಅದಕ್ಕಾಗಿ ಪ್ರಯತ್ನಿಸಬೇಕಾಗಿಲ್ಲ. ಜ್ಞಾನ ಮಾರ್ಗವೆಂಬುದು ಅವನಿಗೆ ಸಹಜವೇ ಆದುದು; ಆದುದರಿಂದಲೇ ಅಸಕ್ತಃ ಎಂದು ಹೇಳಿದರು.)

**ಸ್ನಿಗ್ಧ ಸ್ಮಿತಾವಲೋಕೇನ ವಾಚಾಪೀಯೂಷ ಕಲ್ಪಯಾ ।**
**ಚರಿತ್ರೇಣಾನವದ್ಯೇನ ಶ್ರೀನಿಕೇತೇನಚಾತ್ಮನಾ ॥೨೦॥**

**ಇಮಂ ಲೋಕಮಮುಂಚೈವ ರಮಯನ್ಸುತರಾಂಯದೂನ್ ।**
**ರೇಮೇಕ್ಷಣದಯಾದತ್ತಕ್ಷಣ ಸ್ತ್ರೀಕ್ಷಣ ಸೌಹೃದಃ ॥೨೧॥**

ಸ್ನಿಗ್ಧ ಸ್ಮಿತ ಅವಲೋಕೇನ = ಸ್ನೇಹ ಪೂರ್ಣವಾದ ಮಂದಹಾಸಯುಕ್ತವಾದ ನೋಟದಿಂದ ; ಪೀಯೂಷ ಕಲ್ಪಯಾವಾಚಾ = ಅಮೃತ ಸದೃಶವಾದ ಮಾತುಗಳಿಂದ ; ಅನವದ್ಯೇನ ಚರಿತ್ರೇಣ = ನಿರ್ದೋಷವಾದ ನಡವಳಿಕೆಯಿಂದ; ಶ್ರೀನಿಕೇತೇನ ಆತ್ಮನಾಚ = ಲಕ್ಷ್ಮೀದೇವಿಗೆ ಆವಾಸ ಸ್ಥಾನವಾದ ಹೃದಯದ ಸೌಹಾರ್ದ ಪ್ರಭೇಯಿಂದಲೂ; ಇಮಂ ಲೋಕಂ = ಈ ಲೋಕದವರನ್ನೂ;

ಅಮುಂಚ ಏವ = ಸ್ವರ್ಗಾದಿ ಲೋಕಗಳವರನ್ನೂ; ಸುತಾರಾಂ; ಎಲ್ಲಕ್ಕಿಂತ ಹೆಚ್ಚಾಗಿ; ಯದೂನ್ = ಯಾದವರನ್ನೂ; ರಮಯನ್ = ಸಂತೋಷಪಡಿಸುತ್ತಾ; ಕ್ಷಣದಯಾ ದತ್ತಕ್ಷಣಃ = ರಾತ್ರಿಯ ಕಾಲದಲ್ಲಿ ಅವಕಾಶವನ್ನು ಕಲ್ಪಿಸಿಕೊಂಡು; ಸ್ತ್ರೀಕ್ಷಣ ಸಾಪ್ಹದಃ = ಕ್ಷಣಕಾಲ ಸ್ತ್ರಿಯರೋಡನೆ ಸ್ನೇಹವುಳ್ಳವನಾಗಿ; ರೇಮೇ = ಸುಖವನ್ನು ಅನುಭವಿಸಿದಂತೆ ವರ್ತಿಸಿದನು.

(ಶ್ರೀಕೃಷ್ಣನು ಅಪ್ರಾಕೃತ ಶರೀರಿಯಾದುದರಿಂದ ಅವನ ಕ್ರೀಡೆಯು ವಿಡಂಬನೆಯೇ ಹೊರತು ಅವನು ಗ್ರಾಮ್ಯ ಕ್ರೀಡಾಸಕ್ತನೇಂದು ತಿಳಿಯಬಾರದು. ಆ ಮಹಾನುಭಾವನು ಅಪ್ರಾಕೃತ ರೀತಿಯಲ್ಲಿ ಕ್ರೀಡಿಸಿದಂತೆ ನಟಿಸುವಾಗಲೇ ತನ್ನ ಮಾಯಾ ಪ್ರಭಾವದಿಂದ ಪ್ರಾಕೃತ ರೇತಸ್ಸನ್ನು ಸೃಷ್ಟಿಸಿ, ತನ್ನ ಮಹಿಷಿಯರ ಗರ್ಭದಲ್ಲಿಟ್ಟು, ಯದು ಸಂತಾನಕ್ಕೆ ಕಾರಣನಾದಂತೆ ತೋರಿಕೊಂಡನೆಂದು ತಿಳಿಯಬೇಕು. ಇಂತಹ ಅದ್ಭುತ ಮಹಿಮನ ಚರಿತ್ರೆಗಳನ್ನು ಕಾಣಲು ಸ್ವರ್ಗಾದಿ ಲೋಕಗಳ ದೇವತೆಗಳೂ ಉತ್ಸುಕರಾಗಿರುತ್ತಿದ್ದರು.)

ತಸ್ಯೇತ್ಥಂ ರಮಮಾಣಸ್ಯ ಸಂವತ್ಸರ ಗಣಾನ್ಬಹೂನ್ ।
ಗೃಹ ಮೇಧೇಷು ಯೋಗೇಷು ವಿರಾಗಃ ಸಮಜಾಯತ ॥೨೨॥

ಇತ್ಥಂ = ಈ ಪ್ರಕಾರವಾಗಿ = ; ಬಹೂನ್ ಸಂವತ್ಸರ ಗಣಾನ್ = ಅನೇಕಾನೇಕ ವರ್ಷಗಳ ಕಾಲ; ರಮಮಾಣಸ್ಯ = ಸುಖವಾಗಿದ್ದಂತೆ ಕಾಣಿಸಿಕೊಂಡ; ತಸ್ಯ = ಆ ಶ್ರೀಕೃಷ್ಣನಿಗೆ; ಗೃಹ ಮೇಧೇಷು ಯೊಗೇಷು = ಗೃಹಸ್ಥರು ಭಗವತ್ಪೂಜಾರೂಪವಾಗಿ ಆಚರಿಸಬೇಕಾದ ಕುಶಲ ಕಾರ್ಯಗಳಲ್ಲಿ; ವಿರಾಗಃ ಸಮಜಾಯತ = ಪೂರ್ಣವೈರಾಗ್ಯ ಉಂಟಾಯಿತು (ಎಂಬಂತೆ ಲೋಕದ ಜನರಿಗೆ ಮಾದರಿಯನ್ನು ಕಲ್ಪಿಸಿದನು).

(ಜೀವರು ತಮ್ಮ ಅನಾದಿ ಕಾಲದ ಅಜ್ಞಾನವನ್ನು ನೀಗಿಕೊಂಡು ಸ್ವರೂಪ ಸುಖವನ್ನನುಭವಿಸಬೇಕಾದರೆ, ಮೊದಲು ಈ ಲೋಕದಲ್ಲಿ ಕಷ್ಟ ಸುಖಗಳ ಅನುಭವ ಪಡೆಯುವುದಕ್ಕಾಗಿ ಸಂಸಾರ ಸಂಬಂಧವಾದ ಕಾರ್ಯಗಳಲ್ಲಿ ಆಸಕ್ತಿ ವಹಿಸಕಬೇಕು. ಆದರೆ, ಕಡೆತನಕ ಅದರಲ್ಲಿಯೇ ಮುಳುಗಿರಬಾರದು; ವಯೋಧರ್ಮಗಳನ್ನೂ ಆಶ್ರಮಧರ್ಮಗಳನ್ನೂ ಅರಿತುಕೊಂಡು ವೈರಾಗ್ಯವನ್ನು ಹೊಂದಬೇಕು. ಈ ಲೋಕವನ್ನು ಬಿಡುವ ಮನಸ್ಸಾದರಲ್ಲವೇ ಪರಲೋಕಕ್ಕೆ ಪ್ರಯಾಣ ಸಾಧ್ಯವಾಗವುದು!)

**ದೈವಾಧೀನೇಷು ಕಾಮೇಷು ದೈವಾಧೀನಃ ಸ್ವಯಂ ಪುಮಾನ್ ।**
**ಕೋವಿಶ್ರಂಭೇತ ಯೋಗೇನ ಯೋಗೇಶ್ವರಮನುವ್ರತಃ ॥೨೩॥**

ಸ್ವಯಂ ದೈವಾಧೀನಃ ಪುಮಾನ್ = ಸ್ವಾತಂತ್ರ್ಯವಿಲ್ಲದೆ ತಾನೇ ದೇವರ ಸಂಕಲ್ಪಕ್ಕೆ ಅಧೀನನಾದ ಪುರುಷನು; ಯೋಗೇಶ್ವರಂ = ಯೋಗಮಾರ್ಗಾನುವರ್ತಿಗಳಿಗೆ ಫಲಪ್ರದನಾದ ಸ್ವಾಮಿಯನ್ನು; ಯೋಗೇನ ಅನುವ್ರತಃ = ಶ್ರವಣ ಮನನ ಧ್ಯಾನಾದಿ ಯೋಗೋಪಾಯಗಳಿಂದ ಹೊಂದಿಕೊಂಡವನು; ದೈವಾಧೀನೇಷು ಕಾಮೇಷು = ದೇವರ ಸಂಕಲ್ಪಾನುಸಾರ ಕೆಲಕೆಲವು ಕಾಲಗಳಿಗೆ ಮಾತ್ರ ಸೀಮಿತಗಳಾದ ಲೌಕಿಕ ಸುಖಗಳಲ್ಲಿ; ಕಃ = ಯಾವನು; ವಿಶ್ರಂಭೇತ = ಅಂಟಿಕೊಂಡಿರಲು ಇಚ್ಛೆಸುವನು?

(ನಿತ್ಯ ಸುಖವು ದೊರೆಯಬೇಕಾದರೆ ದೇಹಗಳೂ, ಲೌಕಿಕ ಸುಖಗಳೂ ನಶ್ವರಗಳೆಂಬ ಜ್ಞಾನವು ದೃಢವಾಗಬೇಕು. ಇಹದ ವಿಷಯಗಳಲ್ಲಿ ಸಕಾಲದಲ್ಲಿಯಾದರೂ ವೈರಾಗ್ಯವನ್ನು ಹೊಂದಬೇಕು)

**ಪುರ್ಯಾಂ ಕದಾಚಿ ತ್ಕ್ರೀಡದ್ಭಿರ್ಯದು ಭೋಜ ಕುಮಾರಕೈಃ ।**
**ಕೋಪಿತಾಮುನಯಃ ಶೇಪುರ್ಭಗವನ್ಮತ ಕೋವಿದಾಃ ॥೨೪॥**

ಪುರ್ಯಾಂ = ದ್ವಾರಕಾನಗರದಲ್ಲಿ; ಕದಾಚಿತ್ = ಯಾವಾಗಲೋ ಒಮ್ಮೆ; ಕ್ರೀಡದ್ಭಿಃ = ಆಟದಲ್ಲಿ ತೊಡಗಿದ್ದ; ಯದುಭೋಜ ಕುಮಾರಕೈಃ = ಯಾದವಕುಲ ಭೋಜಕುಲದ ಹುಡುಗರಿಂದ; ಕೋಪಿತಾಃ = ಕೋಪಗೊಂಡ; ಭಗವನ್ಮತ ಕೋವಿದಾಃ = ಭಗವಂತನ ಸಂಕಲ್ಪವನ್ನು ಬಲ್ಲವರಾದ; ಮುನಯಃ = ತಪಸ್ವಿಗಳು; ಶೇಪುಃ = ಶಾಪವನ್ನು ಕೊಟ್ಟರು.

(ಜ್ಞಾನಿಗಳಾದ ತಪಸ್ವಿಗಳಿಗೆ ಕೋಪ ಬರುವಂತೆ ಆಡಿದ ಆಟ ಮೃತ್ಯುವಿಗೆ ಆಹ್ವಾನ ಕೊಟ್ಟಂತಾಯಿತು. ಶಾಪವನ್ನು ಕೊಟ್ಟ ಮುನಿಗಳು ಭಗವತ್ಸಂಕಲ್ಪವನ್ನರಿತು ವರ್ತಿಸಿದುದರಿಂದ ಅವರ ಕೋಪವು ಸಾರ್ಥಕವಾಗಿ ಭಗವತ್ಪೂಜೆಯೇ ಆಯಿತು; ಅವರ ಪುಣ್ಯಹಾನಿಯಾಗಲಿಲ್ಲ. ಸರಿಯಾಗಿ ಉಪಯೊಗಿಸಿದ ಅವಗುಣವೂ ಸದ್ಗುಣವಾಗುವುದಕ್ಕೆ ಇದು ನಿದರ್ಶನ.)

**ತತಃ ಕತಿಪಯೈರ್ಮಾಸೈರ್ವೃಷ್ಣಿ ಭೋಜಾಂಧಕಾದಯಃ ।**
**ಯಯುಃ ಪ್ರಭಾಸಂ ಸಂಹೃಷ್ಟಾರಥೈರ್ದೈವ ವಿಮೋಹಿತಾಃ ॥೨೫॥**

ತತಃ = ಅನಂತರ; ಕತಿಪಯೈಃ ಮಾಸೈಃ = ಕೆಲವು ವರ್ಷಗಳು ಕಳೆದ ಮೇಲೆ; ವೃಷ್ಣಿ, ಭೋಜ, ಅಂಧಕ ಆದಯಃ = ಇಲ್ಲಿ ಹೇಳಿದ ವಂಶೀಯರು; ದೈವ ವಿಮೋಹಿತಾಃ = ವಿಧಿಯಿಂದ ಮೋಹಿತರಾಗಿ; ಸಂಹೃಷ್ಟಾಃ = ಹರ್ಷಭರಿತರಾಗಿ;

ರಥೈಃ = ಸಜ್ಜಾದ ರಥಗಳಲ್ಲಿ ಕುಳಿತು; ಪ್ರಭಾಸಂ ಯಯುಃ = ಪ್ರಭಾಸ ಕ್ಷೇತ್ರವನ್ನು ಕುರಿತು ಪ್ರಯಾಣ ಮಾಡಿದರು.

(ಮುಂದ ನಡೆದೇ ನಡೆಯುವ ಸಂಗತಿಯನ್ನು ಇಂದೇ ನಡೆಯಿತೆಂಬಂತೆ ಇಲ್ಲಿ ಹೇಳಿದ್ದಾರೆ. ಮಾಸಗಳೆಂದರೆ ವರ್ಷಗಳೆಂದು ಈ ಸಂದರ್ಭದಲ್ಲಿ ಅರ್ಥ ಮಾಡಿಕೊಳ್ಳಬೇಕು. ಮುಂದೆ ಕಾದಿರುವುದು ಮರಣವಾದರೂ ಪ್ರಯಾಣ ಮಾಡುವಾಗ ಹರ್ಷಭರಾತರಾಗಿದ್ದರೆನ್ನುವುದು ವಿಧಿಯ ಕೈವಾಡವನ್ನು ವ್ಯಕ್ತಗೊಳಿಸುತ್ತದೆ.)

**ತತ್ರ ಸ್ನಾತ್ವಾ ಪಿತೃೄನ್ ದೇವಾನ್ ಋಷೀಂಶ್ಚೈವ ತದಂಭಸಾ ।**
**ತರ್ಪಯಿತ್ವಾಥ ವಿಪ್ರೇಭ್ಯೋಗವೋಬಹುಗುಣಾನ್‌ದದುಃ ॥೨೬॥**

ತತ್ರ = ಪ್ರಭಾಸ ತೀರ್ಥದಲ್ಲಿ; ಸ್ನಾತ್ವಾ = ವಿಧಿಪೂರ್ವಕವಾಗಿ ಸ್ನಾನಮಾಡಿ; ತದಂಭಸಾ = ಆ ನೀರಿನಿಂದ; ಪಿತೃೄನ್, ದೇವಾನ್, ಋಷೀನ್ ಚ ಏವ = ದೇವ, ಋಷಿ, ಪಿತೃಗಳನ್ನು; ತರ್ಪಯಿತ್ವಾ = ತರ್ಪಣ ಕೊಟ್ಟು ಪೂಜಿಸಿ; ವಿಪ್ರೇಭ್ಯಃ = ಬ್ರಾಹ್ಮಣರಿಗೆ; ಬಹು ಗುಣಾನ್ ಗಾವಃ = ಉತ್ತಮ ಗುಣಗಳುಳ್ಳ ಹಸುಗಳನ್ನು; ದದುಃ = ದಾನವಾಗಿ ಕೊಟ್ಟರು.

(ಮರಣವು ಸಂಭವಿಸುವುದು ತಿಳಿಯದಿದ್ದರೂ, ಮರಣ ಹೊಂದುವುದಕ್ಕೆ ಮುಂಚೆ ಯಾದವರ ಕೈಯಲ್ಲಿ ಪೂಜಾದಿ ಕಾರ್ಯಗಳನ್ನು ಮಾಡಿಸಿದ ವಿಧಿಯ ಲೀಲೆ ಮೆಚ್ಚತಕ್ಕದ್ದಲ್ಲವೆ!)

**ಹಿರಣ್ಯಂ ರಜತಂ ಶಯ್ಯಾಂ ವಾಸಾಂಸ್ಯಜಿನ ಕಂಬಲಾನ್ ।**
**ಹಯಾನ್ರಥಾನಿಭಾನ್ಕನ್ಯಾಂ ಧರಾಂ ವೃತ್ತಿಕರೀಮಪಿ ॥೨೭॥**

ಹಿರಣ್ಯಂ = ಬಂಗಾರವನ್ನು; ರಜತಂ = ಬೆಳ್ಳಿಯನ್ನು; ಶಯ್ಯಾಂ = ಹಾಸುಗೆಯನ್ನು; ವಾಸಾಂಸಿ = ಉಡುವ, ಹೊದೆಯುವ ವಸ್ತುಗಳನ್ನು; ಅಜಿನ ಕಂಬಲಾನ್ = ಕೃಷ್ಣಾಜಿನಗಳನ್ನೂ ಕಂಬಳಿಗಳನ್ನೂ; ಹಯಾನ್ = ಕುದುರೆಗಳನ್ನೂ; ರಥಾನ್ = ವಾಹನ ರಥಗಳನ್ನೂ; ಇಭಾನ್ = ಆನೆಗಳನ್ನೂ; ಕನ್ಯಾಂ = ಕನ್ಯೆಯರನ್ನೂ; ವೃತ್ತಿಕರೀಂ ಧರಾಂ ಅಪಿ = ಜೀವನಾಧಾರವಾದ ಭೂಮಿಯನ್ನೂ; ದದುಃ = ದಾನವಾಗಿ ಕೊಟ್ಟರು.

(ಕನ್ಯಾಂ = ಜಾತ್ಯೇತವಚನ. ಮರಣಾನಂತರ ಏನೇನನ್ನು ಪಿತೃಕಾರ್ಯಮಾಡುವವರು ದಾನ ಮಾಡುವವರೋ ಅಂತಹ ದಾನಗಳನ್ನು

ಯಾದವಾದಿಗಳು ತಾವೇ ಕೊಟ್ಟುಬಿಟ್ಟರು. ಇದೂ ದೈವ ಮಾಯೆಯೇ ಸರಿ. ದಾನ ಕೊಡವ ವಸ್ತುಗಳ ಸಾರ್ಥಕತೆಯನ್ನು ವ್ಯಾಖ್ಯಾನಕಾರರಾದ ಶ್ರೀ ವಿಜಯಧ್ವಜಾಚಾರ್ಯರು ವಿವರಿಸಿದ್ದಾರೆ. ಹಿ = ಹಿನೋತಿ (ದುಃಖವನ್ನು ಕಳೆಯುತ್ತದೆ), ರಾತಿ = ಸುಖವನ್ನು ಕೊಡುತ್ತದೆ, ಆದುದರಿಂದ 'ಹಿರಣ್ಯ'. ರಜ = ರಾಗವನ್ನು (ಅನುರಾಗವನ್ನು), ತ = ತನೋತಿ(ತಂದುಕೊಡುತ್ತದೆ), 'ರಜತ', ಇತ್ಯಾದಿ.)

**ಅನ್ನಂಚೋರುರಸಂತೇಭ್ಯೋದತ್ವಾ ಭಗವದರ್ಪಣಂ।**
**ಗೋವಿಪ್ರಾರ್ಥಾಸವಃ ಶೂರಾಃಪ್ರಣೇಮುರ್ಭುವಿ ಮೂರ್ಧಭಿಃ ॥೨೮॥**

ಭಗವದರ್ಪಣಂ = ಬ್ರಹ್ಮಾರ್ಪಣವಾಗುವ ರೀತಿಯಲ್ಲಿ; ಉರುರಸಂ = ಷಡ್ರಸೋಪೇತವಾದ; ಅನ್ನಂ = ಭೋಜನದ್ರವ್ಯಗಳನ್ನು; ತೇಭ್ಯಃ = ಬ್ರಾಹ್ಮಣರಿಗೆ; ದತ್ವಾ = ಅರ್ಪಿಸಿ; ಗೋವಿಪ್ರಾರ್ಥ ಅಸವಃ = ಗೋಬ್ರಾಹ್ಮಣರ ಸೇವೆಗೆ ಮೀಸಲಾದ ಪ್ರಾಣಗಳುಳ್ಳ; ಶೂರಾಃ = ಆ ದಾನಶೂರರು; ಭುವಿ ಮೂರ್ಧಭಿಃ = ನೆಲದ ಮೇಲೆ ತಲೆಯಿಟ್ಟು (ಭಕ್ತಿಯಿಂದ); ಪ್ರಣೇಮುಃ = ನಮಸ್ಕಾರ ಮಾಡಿದರು.

(ತ್ರಿಗುಣಾತ್ಮಕವಾದ ಶರೀರದಲ್ಲಿ ತ್ರಿವಿಧಕರ್ಮಗಳನ್ನಾಚರಿಸಿ ತೇರ್ಗಡೆಯಾಗಬೇಕಾದ ಜೀವರು ಭಗವಂತನ ಸಂಕಲ್ಪನುಸಾರ ಪುಣ್ಯಪಾಪಗಳನ್ನು ಆಚರಿಸದೆ ಇರಲಾಗುವುದಿಲ್ಲ. ಅವರ ಸದ್ಗತಿ ದುರ್ಗತಿಗಳಿಗೆ ಜೀವರ ಮೂಲ ಸ್ವಭಾವಗಳು ಕಾರಣಗಳೇ ಹೊರತು ಅವರು ಆಚರಿಸುವ ಸತ್ಕರ್ಮದುಷ್ಕರ್ಮಗಳಲ್ಲ. ದಿನದಿನಕ್ಕೂ ಕೆಡುತ್ತಿರುವ ಕಲಿಯುಗದಲ್ಲಿ ಈ ಮಾತು ನೆನಪಿನಲ್ಲಿಡಬೇಕು. ಬಾಹ್ಯಕರ್ಮಗಳಿಂದ ನಾವು ಜವರ ಯೋಗ್ಯತೆಗಳನ್ನು ನಿರ್ಧರಿಸಲಾಗುವುದಿಲ್ಲ; ಬಹುಕಾಲದ ಪರಿಚಯದಿಂದ ಅಥವ ದಿವ್ಯಜ್ಞಾನದಿಂದ ಮಾತ್ರ ಅದನ್ನು ತಿಳಿದು ವರ್ತಿಸಬಹುದು.)

ಇಲ್ಲಿಗೆ ಮೂರನೆಯ ಅಧ್ಯಾಯ ಮುಗಿಯಿತು

**"ಶ್ರೀಕೃಷ್ಣಾರ್ಪಣಮಸ್ತು"**

---

# ಶ್ರೀಮದ್ಭಾಗವತ – ತೃತೀಯ ಸ್ಕಂಧ

# ನಾಲ್ಕನೆಯ ಅಧ್ಯಾಯ

ಉದ್ಧವ ಉವಾಚ – ಉದ್ಧವರು ಹೇಳಿದರು.

**ಅಥತೇತದನುಜ್ಞಾತಾಭುಕ್ತ್ವಾ ಪೀತ್ವಾಚವಾರುಣೀಂ ।**
**ತಯಾವಿಭ್ರಂಶಿತ ಜ್ಞಾನಾದುರುಕ್ತೈರ್ಮರ್ಮಪಸ್ಪೃಶುಃ ॥೧॥**

ಅಥ = ಬ್ರಾಹ್ಮಣರನ್ನು ದಾನ ಭೋಜನಗಳಿಂದ ಪೂಜಿಸಿದ ನಂತರ; ತೇ = ಆ ಯಾದವಾದಿಗಳು; ತದನುಜ್ಞಾತಾಃ = ಬ್ರಹ್ಮಣರಿಂದ ಅನುಜ್ಞೆಯನ್ನು ಪಡೆದು; ಭುಕ್ತ್ವಾ = ತಾವೂ ಊಟಮಾಡಿ; ಚ = ಮತ್ತು;ವಾರುಣೀಂಪೀತ್ವಾ = ಮದಿರಾಪಾನಮಾಡಿ; ತಯಾ = ಅದರ ಮತ್ತಿನಿಂದ; ವಿಭ್ರಂಶಿತ ಜ್ಞಾನಾಃ ವಿವೇಕಶೂನ್ಯರಾಗಿ; ದುರುಕ್ತೈ = ಬಾಯಿಗೆ ಬಂದಂತೆ ಕೆಟ್ಟ ಮಾತುಗಳನ್ನಾಡುತ್ತಾ; ಮರ್ಮಪಸ್ಪೃಶುಃ = ಒಬ್ಬರನ್ನೊಬ್ಬರು ಕೆರಳಿಸಿದರು.

(ಇಲ್ಲಿ ಮದಿರಾಪಾನಮಾಡಿದವರು ಕ್ಷತ್ರಿಯರು; ಬ್ರಾಹ್ಮಣರಲ್ಲ ಎಂಬುದನ್ನು ಗಮನಿಸಬೇಕು. ಯಾದವಾದಿಗಳು ಪರಸ್ಪರ ಬಡಿದಾಡಿ ಸಾಯುವಾಗ ಅವರಿಗೆ ನೋವಿನ ಅರಿವು ಉಂಟಾಗದಿರಲೆಂದೇ ಭಗವಂತನು ಅವರಿಗೆ ಮದಿರಾಪಾನಮಾಡುವ ಬುದ್ಧಿಯನ್ನೆಬ್ಬಿಸಿದನೆಂದು ಹೇಳಬೇಕು.)

**ತೇಷಾಂ ಮೈರೇಯ ದೋಷೇಣ ವಿಷಮೀಕೃತಚೇತಸಾಂ ।**
**ನಿಮ್ಲೋಚತಿ ರವಾವಾಸೀದ್ವೇಣೂನಾಮಿವಮರ್ದನಂ ॥೨॥**

ಮೈರೇಯ ದೋಷೇಣ = ಮದ್ಯಪಾನದ ದುಷ್ಪರಿಣಾಮದಿಂದ; ವಿಷಮೀಕೃತ ಚೇತಸಾಂ = ವಿಕೃತವಾದ ಮನಸ್ಸಿನವರಿಗೆ; ರವೌನಿಮ್ಲೋಚತಿ = ಸೂರ್ಯನು ಅಸ್ತಂಗತನಾಗುತ್ತಿರಲು; ವೇಣೂನಾಂ ಇವ = ಬಿದಿರು ಮಳೆಗಳಿಗೆ ಆದಂತೆ; ಮರ್ದನಂ = ನಾಶವು; ಆಸೀತ್ = ಉಂಟಾಯಿತು. (ಉಂಟಾಗುವುದು ಎಂಬ ಭವಿಷ್ಯವಚನ.)

(ರವಿಯ ಅಸ್ತಮಯ ಸಮಯದಲ್ಲಿ ಯದುವಂಶದವರ ಅಸ್ತಮಯವೂ ಆಗಿಹೋಯಿತು ಎಂಬುದು ಕಾವ್ಯಸೌಂದರ್ಯ ಲಕ್ಷಣವಾಗಿರುವುದಲ್ಲದೆ, ಅವರನಾಶವು ಎಷ್ಟು ಬೇಗನೆ ಆಗಿ ಹೋಗಿಯಿತೆಂಬುದು ಓದುಗರಿಗೆ ಎಚ್ಚರದ ಮಾತಾಗಿದೆ.)

**ಭಗವಾನಾತ್ಮಮಾಯಾಯಾಗತಿಂತಾಮವಲೋಕ್ಯಸಃ ।**

**ಸರಸ್ವತೀಮುಪಸ್ಪೃಶ್ಯ ವೃಕ್ಷಮೂಲಮುಪಾವಿಶತ್ ॥೩॥**

ಸಃಭಗವಾನ್ = ಪುರುಷೋತ್ತಮನಾದ ಶ್ರೀಕೃಷ್ಣನು; ತಾಂಗತಿಂ = ಯಾದವರಿಗೆ ಉಂಟಾಗುವ ಮಾರಣಕಲಹದ ವಿಚಾರವನ್ನು ಸ್ವಮಾಯಯಾ = ತನ್ನ ಸಾಮರ್ಥ್ಯ ಸಂಕಲ್ಪದಿಂದಾಗುವುದನ್ನು; ಅವಲೋಕ್ಯ = ನಿರೀಕ್ಷಿಸಿ; ಸರಸ್ವತೀಂ ಉಪಸ್ಪೃಶ್ಯ = ಸರಸ್ವತೀ ನದಿಯ ನೀರಿನಿಂದ ಆಚಮನಾದಿಗಳನ್ನು ಮಾಡಿ; ವೃಕ್ಷಮೂಲಂ ಉಪಾವಿಶತ್ = ಒಂದು ವೃಕ್ಷದ ಕೆಳಗೆ ಕುಳಿತುಕೊಂಡನು.

(ಲೋಕಗುರುವಾದ ಶ್ರೀ ಕೃಷ್ಣನು ಲೋಕಶಿಕ್ಷಾರ್ಥವಾಗಿ ಆಚಮನಾದಿಗಳನ್ನು ಮಾಡಿದನು. ಉದ್ಧವರದನ್ನು ನೋಡುತ್ತಿದ್ದರು. ಭೂತಪ್ರಪಂಚದ ಅಧಿದೇವತೆಗಳೂ ನೋಡುತ್ತಿದ್ದರು.)

**ಅಹಂಚೋಕ್ತೋಭಗವತಾ ಪ್ರಸನ್ನಾರ್ತಿಹರೇಣಹ ।**

**ಬದರೀಂತ್ವಂ ಪ್ರಯಾಹೀತಿ ಸ್ವಕುಲಂ ಸಂಜಿಹೀರ್ಷುಣಾ ॥೪॥**

ಸ್ವಕುಲಂ ಸಂ ಜಿಹೀರ್ಷುಣಾ = ತನ್ನ ಯಾದವ ಕುಲದವರನ್ನು ಸಂಹರಿಸಲಿಚ್ಛಿಸಿದ: ಪ್ರಸನ್ನ ಆರ್ತಿಹರೇಣ = ತನ್ನ ಭಕ್ತರ ದುಃಖಗಳನ್ನು ಕಳೆದುಬಿಡುವ; ಭಗವತಾ = ಭಗವಂತನಾದ ಶ್ರೀಕೃಷ್ಣನಿಂದ; ತ್ವಂಬದರೀಂ ಪ್ರಯಾಹಿ = 'ನೀನು ಬದರೀಕ್ಷೇತ್ರಕ್ಕೆ ಹೋಗು' ಎಂದು; ಅಹಂಚ = ನಾನು; ಉಕ್ತಃ = ಆದೇಶಿಸಲ್ಪಟ್ಟೆನು.

(ಯಾವ ಹೊತ್ತಿನಲ್ಲಿ ಏನಾಗುಬೆಕು. ಯಾರುಯಾರು ಎಲ್ಲೆಲ್ಲಿರಬೇಕು ಎಂಬ ಎಲ್ಲವೂ ಭಗವತ್ ಸಂಕಲ್ಪಕ್ಕೆ ಅಧೀನವೇ ಆದುದು)

**ಅಥಾಪಿ ತದಭಿಪ್ರೇತಂ ಜಾನನ್ನಹಮರಿಂದಮ।**

**ಪೃಷ್ಠತೋನ್ವಗಮಂ ಭರ್ತುಃ ಪಾದವಿಶ್ಲೇಷಣಾಕ್ಷಮಃ ॥೫॥**

ಅರಿಂದಮ = ಅಯ್ಯಾ ಶುದ್ಧಮನಸ್ಕನಾದ ವಿದುರಾ; ಅಥ = ಹಾಗೆ ಹೇಳಿದ ಮೇಲೆಯೂ; ತದಭಿಪ್ರೇತಂ ಜಾನನ್ ಅಪಿ = ಭಗವಂತನ ಇಚ್ಛೆಯನ್ನು ತಿಳಿದೂ ಕೂಡ; ಪಾದ ವಿಶ್ಲೇಷಣಾಕ್ಷಮಃ = ಜಗತ್ಸ್ವಾಮಿಯಾದ ಶ್ರೀಕೃಷ್ಣನ; ಪಾದಗಳ

ಸಾನ್ನಿಧ್ಯವನ್ನು ಬಿಟ್ಟಿರಲು ಮನಸ್ಸಿನಲ್ಲದೆ; ಪೃಷ್ಠತಃ ಅನ್ವಗಮಂ = ಆ ಸ್ವಾಮಿಯನ್ನು ಹಿಂಬಾಲಿಸಿ ಹೊರಟೆನು.

(ಇದು ಶ್ರೀಕೃಷ್ಣನು ವೃಕ್ಷಮೂಲವನ್ನಾಶ್ರಯಿಸುವುದಕ್ಕೆ ಮೊದಲು ನಡೆದ ಸಂಗತಿ. ಉದ್ಧವನಿಗೆ ಹೇಳಿ ಹೊರಟನಂತರ ಕೂಡಲೇ ಆ ಭಕ್ತನು ಹಿಂಬಾಲಿಸಿ ಹೊರಟಿರಬಹುದು.)

ಅದ್ರಾಕ್ಷಮೇಕಮಾಸೀನಂ ವಿಚಿನ್ವನ್ದಯಿತಂ ಪತಿಂ ।
ಶ್ರೀನಿಕತಂ ಸರಸ್ವತ್ಯಾಂ ಕೃತಕೇತಮಕೇತನಂ ॥೬॥

ದಯಿತಂ = ದಯಾಮಯನಾದ; ಪತಿಂ = ಸಕಲ ಲೋಕರಕ್ಷಕನಾದ ಸ್ವಾಮಿಯನ್ನು; ವಿಚಿನ್ವನ್ = ಹುಡುಕುತ್ತಾ ಹೊರಟು; ಅಕೇತನಂ = ಅನ್ಯಾಶ್ರಯದ ಅಪೇಕ್ಷೆಯಿಲ್ಲದ; ಶ್ರೀನಿಕೇತಂ = ಲಕ್ಷ್ಮೀದೇವಿಗೆ ಆಶ್ರಯನಾದ ಶ್ರೀ ಕೃಷ್ಣನನ್ನು; ಸರಸ್ವತ್ಯಾಂ = ಸರಸ್ವತೀ ನದಿಯ ತೀರದಲ್ಲಿ; ಕೃತಕೇತಂ = ಸ್ಥಾನಪಡೆದು; ಏಕಂ ಆಸೀನಂ = ಏಕಾಕಿಯಾಗಿ ಕುಳಿತಿರುವುದನ್ನು; ಅದ್ರಾಕ್ಷಂ = ಕಂಡೆನು.

(ಶ್ರೀಕೃಷ್ಣನು ಈ ಲೋಕದಿಂದ ಕಣ್ಮರೆಯಾಗುವ ಸಂದರ್ಭವು ಉದ್ಧವರಿಗೆ ಮನವರಿಕೆಯಾಗಿದ್ದುದರಿಂದ, ಇನ್ನು ಮುಂದೆ ಸಾಕಾರನಾದ ಆ ಮೂರ್ತಿಯನ್ನು ಕಾಣುವ ಅವಕಾಶವಿಲ್ಲವಲ್ಲಾ ಎಂದು ಆ ಸ್ವಾಮಿಯನ್ನು ಅನ್ಯಾಶ್ರಯದ ಅಪೇಕ್ಷೆಯಿಲ್ಲದ ಲಕ್ಷ್ಮೀಪತಿಯೆಂದು ಸ್ಮರಿಸಿರಬೇಕು.)

**ಶ್ಯಾಮಾವದಾತಂ ವಿರಜಂ ಪ್ರಶಾಂತಾರುಣ ಲೋಚನಂ ।**
**ದೋರ್ಭಿಶ್ಚತುರ್ಭಿರ್ವಿದಿತಂ ಪೀತ ಕೌಶಾಂಬರೇಣಚ ॥೭॥**

**ವಾಮ ಊರಾವಧಿಶ್ರಿತ್ಯದಕ್ಷಿಣಾಂಘ್ರಿಸರೋರುಹಂ ।**
**ಅಪಾಶ್ರಿತಾರ್ಭಕಾವಸ್ಥಮ ಕೃಶಂ ತ್ಯಕ್ತಪಿಪ್ಪಲಂ ॥೮॥**

ಶ್ಯಾಮಾವದಾತಂ = ನಿರ್ಮಲವೂ ಕಾಂತಿಭರಿತವೂ ಆದ ಕೃಷ್ಣವರ್ಣವುಳ್ಳ; ವಿರಜಂ = ಪ್ರಶಾಂತವಾದ; ಅರುಣಲೋಚನಂ = ನಸುಗೆಂಪಿನಂಚುಗಳುಳ್ಳ ಕಣ್ಣುಗಳಿಂದ ಶೋಭಿಸವ; ಚತುರ್ಭಿಃದೋರ್ಭಿಃ ವಿದಿತಂ = ನಾಲ್ಕು ತೋಳುಗಳಿಂದ ಶೋಭಿಸವ; ಚ = ಮತ್ತು; ಪೀತಕೌಶಾಂಬರೇಣ = ಉತ್ತಮವಾದ ರೇಷ್ಮೆಯ ಪೀತಾಂಬರದಿಂದ ಅಲಂಕೃತನಾದ;

ದಕ್ಷಿಣಾಂಘ್ರಿ ಸರೋರುಹಂ = ಬಲದ ಪಾದಕಮಲವನ್ನು; ವಾಮಊರೌ ಅಧಿಶ್ರಿತ್ಯ = ಎಡತೊಡೆಯಮೇಲೆ ಇಟ್ಟು ಕೊಂಡಿರುವ; ಅಪಾಶ್ರಿತಂ ಅರ್ಭಕಾವಸ್ಥಂ = ಶಿಶುವಾಗಿ ಅವತಾರಮಾಡಿದಾಗ ಕಾಣಿಸಿದ ರೂಪವುಳ್ಳ; ಅಕೃಶಂ = ಪರಿಪೂರ್ಣಕಾರವುಳ್ಳ; ತ್ಯಕ್ತಪಿಪ್ಪಲಂ = ಜಗದ್ವೃಕ್ಷಾಖ್ಯ ಪ್ರಪಂಚದ ಕಾರ್ಯ ಕಲಾಪಗಳಿಂದ ವಿರಮಿಸಿದ ಸ್ಥಿತಿಯಲ್ಲಿರುವ ಶ್ರೀಕೃಷ್ಣನನ್ನು; (ಅದ್ರಾಕ್ಷಂ = ಕಂಡೆನು.)

(ನಿತ್ಯನೂತನಾಕಾರವೆಂಬಂತೆ ರಂಜಿಸುವ ಭಗವಂತನನ್ನು ಎಷ್ಟು ವರ್ಣಿಸಿದರೂ ಭಕ್ತರಿಗೆ ತೃಪ್ತಿಯೆಂಬುದಿಲ್ಲ. ಆ ದಿವ್ಯಾಕಾರವೆಂಬ ಅಮೃತವನ್ನು ನೇತ್ರಗಳಿಂದ ಪಾನಮಾಡಿ ಸುಖಿಸುವವರಿಗೆ ಅದರ ರುಚಿ ತಿಳಿದೀತು. ಶಿಶುವಾಗಿ ಅವತಾರ ಮಾಡಿದಾಗ ವಸುದೇವ ದೇವಕಿಯರಿಗೆ ಚತುರ್ಭುಜನಾಗಿ, ದಿವ್ಯಾಲಂಕಾರ ಯುಕ್ತನಾಗಿ ಕಂಡಂತೆ ಈಗ ಉದ್ಧವರಿಗೆ ಕಾಣಿಸಿದ್ದಾನೆ. ಅರ್ಜುನರಿಗೂ ಆಗಾಗ ಅದೇ ರೂಪದಿಂದ ದರ್ಶನ ಕೊಡುತ್ತಿದ್ದನೆಂಬುದು ಭಗವದ್ಗೀತೆಯ ಹನ್ನೊಂದನೇ ಅಧ್ಯಾಯದಿಂದ ತಿಳಿದುಬರುತ್ತದೆ.)

> ತಸ್ಮಿನ್ಮಹಾಭಾಗವತೋ ದ್ವೈಪಾಯನ ಸುಹೃತ್ಸಖಾ।
> ಲೋಕಾನನುಚರನ್ಸಿದ್ಧ ಆಸಸಾದ ಯದೃಚ್ಛಯಾ ॥೯॥

ತಸ್ಮಿನ್ = ಆ ಸಮಯದಲ್ಲಿ; ದ್ವೈಪಾಯನ ಸುಹೃತ್ ಸಖಾ = ವೇದ ವ್ಯಾಸದೇವರಿಗೆ ಅತ್ಯಂತ ಪ್ರೀತಿಪಾತ್ರರಾದ; ಸಿದ್ಧಃ = ಜೀವನ್ಮುಕ್ತರಾದ; ಲೋಕಾನ್ ಅನುಚರನ್ = ಲೋಕಸಂಚಾರದಲ್ಲಿ ನಿರತರಾಗಿದ್ದ ಮೈತ್ರೇಯರು; ಯದೃಚ್ಛಯಾ = ಅನಿರೀಕ್ಷಿತವಾಗಿ; ಆಸಸಾದ = ಭಗವಂತನಾದ ಶ್ರೀ ಕೃಷ್ಣನ ಬಳಿಗೆ ಬಂದರು.

(ಇಲ್ಲಿಯೂ ಶ್ರೀಕೃಷ್ಣನ ಸಂಕಲ್ಪವನ್ನು ಗುರುತಿಸಬೇಕು. "ತೇನವಿನಾತೃಣಮಪಿ ನಚಲತಿ" ಎಂಬುದನ್ನು ಸ್ಮರಿಸಬೇಕು.)

> ತಸ್ಯಾನುರಕ್ತಸ್ಯ ಮುನೇರ್ಮುಕುಂದಃ ಪ್ರಮೋದಭಾರಾನತ ಕಂಧರಸ್ಯ ।
> ಆಶೃಣ್ವತೋಮಾಮನುರಾಗಹಾಸ ಸಮೀಕ್ಷಯಾವಿಶ್ರಮಯನ್ನುವಾಚ ॥೧೦॥

ಮಾಂ = ನನ್ನನ್ನು; ಅನುರಾಗ ಹಾಸ ಸಮೀಕ್ಷಯಾ = ಅನುರಾಗ ಯುಕ್ತವಾದ ಮಂದಹಾಸದಿಂದ ನೋಡುತ್ತಾ; ವಿಶ್ರಮಯನ್ = ನನ್ನ ಸಂಸಾರ ಸಂಬಂಧವಾದ ಗ್ಲಾನಿಯನ್ನು ದೂರಮಾಡುತ್ತಾ; ಪ್ರಮೋದ ಭಾರಾನತ ಕಂಧರಸ್ಯ = ಶ್ರೀಕೃಷ್ಣನ ದರ್ಶನದಿಂದದುಂಟಾದ ಆನಂದಾತಿಶಯದಿಂದ ತಲೆಬಾಗಿನಿಂತ; ಅನುರಕ್ತಸ್ಯ =

ಭಕ್ತನಾದ; ಅಶ್ರುಣ್ವತಃ = ಮಾತುಗಳನ್ನು ಆಲಿಸುತ್ತಿದ್ದ; ತಸ್ಯಮುನೇಃ = ಆ ಮೈತ್ರೇಯರನ್ನು ಕುರಿತು; ಮುಕುಂದಃ = ಮುಕ್ತಿಪ್ರದನಾದ ಶ್ರೀ ಕೃಷ್ಣನು; ಉವಾಚ = ಮಾತನಾಡಿದನು.

(ಭಗವದ್ಭಕ್ತರು ಭಗವಂತನನ್ನು ಕಂಡಾಗ, ಆ ಸ್ವಾಮಿಯು ಪ್ರಸನ್ನತೆಯನ್ನು ಬೀರಿದಾಗಿನ, ಆ ಸನ್ನಿವೇಶವನ್ನು ಊಹಿಸಿ ತಿಳಿಯಬೇಕು.)

ಶ್ರೀಭಗವಾನುವಾಚಃ – ಶ್ರೀಕೃಷ್ಣನು ನುಡಿದನು.

ವೇದಾಹಮಂತರ್ಮನಸೀಪ್ಸಿತಂತೇದದಾಮಿಯತ್ತದ್ದುರವಾಪಮನ್ಯೈಃ ।
ಸತ್ರೇಪುರಾವಿಶ್ವಸೃಜಾಂ ಮುನೀನಾಂ ಮತ್ಸಿದ್ಧಿಕಾಮೇನ
ವಸೋತ್ವಯೇಷ್ಟಃ
॥೧೧॥

ವಸೋ = ಭಕ್ತಶ್ರೇಷ್ಠನಾದ ಮೈತ್ರೇಯಾ; ತೇ ಅಂತರ್ಮನಸಿ ಈಪ್ಸಿತಂ = ನೀನು ಮನಸ್ಸಿನಲ್ಲಿಯಾವ ಅಪೇಕ್ಷೆಯನ್ನು ಹೊಂದಿರುವೆಯೋ ಅದನ್ನು; ಅಹಂ ವೇದ = ನಾನುಬಲ್ಲೆ; ಅನ್ಯೈಃ ದುರವಾಪಂ ಯತ್ತತ್ = ಅಯೋಗ್ಯರಿಂದ ಪಡೆಯಲಾಗದ ಆ ತತ್ವಜ್ಞಾನವನ್ನು; ತೇ = ನಿನಗೆ; ದದಾಮಿ = ಉಪದೇಶಿಸುತ್ತೇನೆ; ಪುರಾ = ಹಿಂದಿನ ಜನ್ಮದಲ್ಲಿ; ಮತ್ಸಿದ್ಧಿ ಕಾಮೇನ = ನನ್ನ ಅನುಗ್ರಹ ಸಂಪಾದನೆಯ ಸಿದ್ಧಿಗಾಗಿ; ತ್ವಯಾ = ನಿನ್ನಿಂದ; ಇಷ್ಟಃ = ನಾನು ಪೂಜಿತನಾಗಿದ್ದೇನೆ.

(ಜನ್ಮಾಂತರದಲ್ಲಿ ಮಾಡಿದ ಪೂಜಾಫಲವು ಮೈತ್ರೇಯರಿಗೆ ಈಗ ದೊರೆಯುತ್ತಿದೆ. "ನದೇವ ತೋಷಣಂ ವೃಥಾ" ದೇವರನ್ನು ಪೂಜಿಸುವುದು ಎಂದಿಗೂ ಫಲ ಕೊಡದೆ ವ್ಯರ್ಥವಾಗುವುದಿಲ್ಲ; ಆದರೆ ಭಗವದಿಚ್ಛೆಯಿಂದ ಸಕಾಲದಲ್ಲಿ ದೊರೆಯುವುದು ಎಂಬ ನಂಬಿಕೆ ಇರಬೇಕು.)

ಸಏಷಸಾಧೋಚರಮೋಭವಾನಾಮಾಸಾದಿತಸ್ತೇಮದನುಗ್ರ
ಹೋಯಂ ।
ಯನ್ಮಾಂನೃಲೋಕಂರಹಉತ್ಸೃಜಂತಂ
ದಿಷ್ಟ್ಯಾದದೃಶ್ವಾನ್ವಿಶದಾನುವೃತ್ತ್ಯಾ ॥೧೨॥

ನೃಲೋಕಂ = ಈ ಮರ್ತ್ಯಲೋಕವನ್ನು; ಉತ್ಸೃಜಂತಂ = ಬಿಟ್ಟು ಅದೃಶ್ಯನಾಗುತ್ತಿರುವ; ಮಾಂ = ನನ್ನನ್ನು; ವಿಶದ ಅನುವೃತ್ತ್ಯಾ = ಅನುಸರಿಸಿ ಬಂದ ಉತ್ತಮವಾದ ಸೇವಾವೃತ್ತಿಯಿಂದ; ದಿಷ್ಟ್ಯಾ = ಪುಣ್ಯವಶದಿಂದ; ಯತ್

ರಹಸಿದದೃಶ್ವಾನ್ = ಗೋಪ್ಯವಾಗಿ ಕಂಡೆಯಾದುದರಿಂದ; ಸಾಧೋ = ಭಕ್ತಶ್ರೇಷ್ಠನಾದ ಉದ್ಧವಾ; ಸಃಏಷಃ = ಆ ಇಂತಹ; ಭವಾನಾಂ ಚರಮಃ = ಸಾಂಸಾರಿಕವಾದ ಕಡೆಯ ದೇಹವು; ತೇ ಆಸಾದಿತಃ = ನಿನಗೆ ಪ್ರಾಪ್ತವಾಯಿತು; ಅಯಂ = ಇದು; ಮತ್ ಅನುಗ್ರಹಃ = ನನ್ನ ಅನುಗ್ರಹವಿಶೇಷವೆಂದು ತಿಳಿ.

(ಕಡೆಯ ಜನ್ಮವನ್ನು ಮುಟ್ಟಿದ ಮುಕ್ತಿಯೋಗ್ಯಜೀವರಿಗೆ ಈ ರೀತಿಯಾಗಿ ಭಗವಂತನ ದರ್ಶನ–ಅನುಗ್ರಹಗಳು ಉಂಟಾಗುವುವು.)

**ಪುರಾಮಯಾಪ್ರೋಕ್ತಮಜಾಯನಾಭ್ಯೇಪದ್ಮೇನಿಷಣ್ಣಾಯ ಮಮಾದಿ ಸರ್ಗೇ।**
**ಜ್ಞಾನಂಪರಂ ಮನ್ಮಹಿಮಾವಭಾಸಂ ಯತ್ಸೂರಯೋ ಭಾಗವತಂವದಂತಿ ॥೧೩॥**
**ಇತ್ಯಾದರೋಕ್ತಃ ಪರಮಸ್ಯಪುಂಸಃ ಪ್ರತೀಕ್ಷಣಾನುಗ್ರಹಭಾಜನೋಽಹಂ ।**
**ಸ್ನೇಹೋತ್ಥರೋಮಾಸ್ಖಲಿತಾಕ್ಷರಸ್ತಂ ಮುಂಚನ್ ಶುಚಃ ಪ್ರಾಂಜಲಿರಾಬಭಾಷೇ ॥೧೪॥**

ಯತ್ = ಯಾವುದನ್ನು; ಸೂರಯಃ = ಬುದ್ಧಿವಂತರು; ಭಾಗವತಂ= ಭಗವಂತನಪರವೇ ಆದುದೆಂದು; ವದಂತಿ = ಹೇಳುವರೋ; ಮನ್ಮಹಿಮಾವ ಭಾಸಂ = ನನ್ನ ದಿವ್ಯ ಮಹಿಮೆಯನ್ನು ತಿಳಿಸುವ; ಜ್ಞಾನಂ = ತಿಳಿಯಬೇಕಾದುದು; ಪುರಾ = ಹಿಂದೆ; ನಾಭ್ಯೇಪದ್ಮೇ ನಿಷಣ್ಣಾಯ = ನನ್ನ ನಾಭಿಯಿಂದ; ಉತ್ಪನ್ನವಾದ ಕಮಲದಲ್ಲಿ ಕುಳಿತಿದ್ದಂತಹ; ಅಜಾಯ = ಚತುರ್ಮುಖನಿಗೆ; ಮಯಾ = ನನ್ನಿಂದ; ಪ್ರೋಕ್ತಂ = ಹೇಳಲ್ಪಟ್ಟಿತು.

ಇತಿ ಆದರೋಕ್ತಃ ಅಹಂ = ಈ ರೀತಿಯಾಗಿ ಪ್ರೇಮದಿಂದ ನುಡಿಯಲ್ಪಟ್ಟ ನಾನು; ಪರಮಸ್ಯ ಪುಂಸಃ = ಪುರುಷೋತ್ತಮನ; ಪ್ರತಿಕ್ಷಾ ಅನುಗ್ರಹ ಭಾಜನಃ = ಕರುಣಾದೃಷ್ಟಿ ಮತ್ತು ಅನುಗ್ರಹಕ್ಕೆ ಪಾತ್ರನಾಗಿ; ಸ್ನೇಹೋತ್ಥ = ಭಕ್ತಿಯಿಂದ ಉಂಟಾದ; ರೋಮಾಃ = ರೋಮಾಂಚನವುಳ್ಳವನಾಗಿ; ಸ್ಖಲಿತಾಕ್ಷರಃ= ತೊದಲ್ನುಡಿಯಿಂದ; ಶುಚಃಮುಂಚನ್ = ಆನಂದಾಶ್ರುವನ್ನು ಸುರಿಸುತ್ತಾ; ಪ್ರಾಂಜಲಿಃ = ಕೈಮುಗಿದುಕೊಂಡು; ತಂ = ಆಭಗವಂತನನ್ನು ಕುರಿತು; ಆಬಭಾಷೆ = ಮಾತಾಡಿದೆನು. ॥೧೪॥

(ಭಾಗವತ ಶಾಸ್ತ್ರವನ್ನು ಭಗವಂತನೇ ತನ್ನ ನಾಭೀಕಮಲದಲ್ಲಿ ಜನಿಸಿದ

ಪುತ್ರನಾದ ಬ್ರಹ್ಮನಿಗೆ ಉಪದೇಶಿಸಿದನೆನ್ನುವುದರಿಂದ ಅದು ಅತ್ಯಂತ ಆದರಣೀಯವಾದುದೆಂದು ಹೇಳಿದ ಹಾಗಾಯಿತು. ಆ ಭಗವಂತನು ತಾನಾಗಿಯೇ ಒಲಿದು ತನ್ನ ಭಕ್ತರಿಗೆ ವಿಶೇಷ ಅನುಭವನ್ನು ಕೊಟ್ಟು, ಶ್ರದ್ಧಾಭಕ್ತಿಗಳನ್ನು ಹೆಚ್ಚಿಸಿ, ತನ್ನವರನ್ನಾಗಿ ಮಾಡಿಕೊಳ್ಳುವನೆಂಬುದಕ್ಕೆ ಉದ್ಧವರ ಉದಾಹರಣೆಯು ಸಾಕ್ಷಿಯಾಗಿದೆ.)

**ಕೋನ್ವೀಶತೇಪಾದಸರೋಜಭಾಜಾಂ ಸುದುರ್ಲಭೋರ್ಥೇಷು ಚತುರ್ಷ್ವಪೀಹ ।**
**ತಥಾಪಿನಾಹಂ ಪ್ರವೃಣೋಮಿಭೂಮನ್ ಭವತ್ಪದಾಂಭೋಜನಿಷೇವಣೋತ್ಸುಕಃ ॥೧೫॥**

ಈಶ = ಸ್ವಾಮೀ; ತೇ ಪಾದಸರೋಜಭಾಜಾಂ = ನಿನ್ನ ಪಾದ ಕಮಲಗಳನ್ನು ಆಶ್ರಯಿಸಿದವರಿಗೆ; ಇಹ = ಇಲ್ಲಿ; ಚತುರ್ಷುಅಪಿ ಅರ್ಥೇಷು = ಧರ್ಮ ಅರ್ಥಕಾಮ ಮೋಕ್ಷಗಳೆಂಬ ಪುರುಷಾರ್ಥಗಳಲ್ಲಿ; ಕಃ ಸುದುರ್ಲಭಃನು = ಯಾವುದು ತಾನೇ ದೊರೆಯಲಾರದು; ತಧಾ ಅಪಿ = ಹಾಗಿದ್ದರೂ; ಭೂಮನ್ = ಸಕಲಗುಣಸಂಪನ್ನನಾದ ಪ್ರಭೋ; ಭವತ್ ಪಾದಾಂಭೋಜ ನಿಷೇವಣೋತ್ಸುಕಃ = ನಿನ್ನ ಪಾದಕಮಲಗಳ ಸೇವೆಯಲ್ಲಿಯೇ ಆಸಕ್ತವಾದ ಮನಸ್ಸುಳ್ಳ; ಅಹಂ = ನಾನು; ನಪ್ರವೃಣೋಮಿ = ಹೆಚ್ಚಾಗಿ ಬೇರೆ ಏನನ್ನೂ ಬೇಡುವುದಿಲ್ಲ.

(ಸದಾ ಭಗವಂತನ ಸ್ಮರಣೆ, ಸನ್ನಿಧಾನ ಸಮೀಪವಾಸಗಳಿಂದ ದೊರೆಯುವ ಆನಂದವು ವಿಸ್ಮೃತಿ ವಿಯೋಗಗಳಿಂದ ದೊರೆಯುವುದಿಲ್ಲವೆಂಬುದು ನಿಶ್ಚಿತನಾದ ಭಾವ. ಸುಖಸಲಕರಣೆಗಳು ಹೇರಳವಾಗಿದ್ದರೂ, ಅಸ್ವತಂತ್ರರಾದ ಜೀವರಲ್ಲಿ ಬಿಂಬನಾಗಿ ವ್ಯಾಪಾರ ಮಾಡುವ ಭಗವಂತನ ಸಾನ್ನಿಧ್ಯವಿಲ್ಲದಿದ್ದರೆ ಸುಖಸಾಮಗ್ರಿಗಳಿಂದ ಆಜೀವರಿಗೆ ಪ್ರಯೋಜನವೇನೂ ಆಗುವುದಿಲ್ಲ.)

ಸ್ವರೂಪವೇ ಆನಂದವಾಗಿ ಉಳ್ಳ ಜೀವರು ಅದನ್ನರಿತು ಅನುಭವಿಸಲಾರದೆ ಇರಲಾಗಿ ಬಿಂಬನಾದ ಸ್ವತಂತ್ರನು ಸುಖಸಾಮಗ್ರಿಗಳಲ್ಲಿ ಪ್ರವಿಷ್ಟನಾಗಿ ಆಕರ್ಷಿಸುತ್ತಾ, ಜೀವರ ಸ್ವರೂಪಶಕ್ತಿಯಲ್ಲಿ ಪ್ರವಿಷ್ಟನಾಗಿ ತಾನು ಅನುಭವಿಸಿದಂತೆ ಮಾಡಲು ಜೀವರ ಆನಂದ ಅನುಭವ ಲಭಿಸುವುದು. ಆದುದರಿಂದ ಆನಂದದ ಅಭ್ಯಾಸಕ್ಕಾಗಿ ಉಪಯೋಗಿಸುವ ಸಲಕರಣೆಗಳನ್ನು ಯಾವ ಜ್ಞಾನಿಯು ತಾನೇ ಅಪೇಕ್ಷಿಸಿಯಾನು.

**ಕರ್ಮಾಣ್ಯನೀಹಸ್ಯಭವೋಭವಸ್ಯತೇ ದುರ್ಗಾಶ್ರಯೋಥಾರಿಭಯಾತ್ಪಲಾಯನಂ ।**
**ಕಾಲಾತ್ಮನೋಯತ್ಪ್ರಮದಾಯುತಾಶ್ರಯಃ ಸ್ವಾತ್ಮನ್ ರತೇಃ ಖಿದ್ಯತಿಧೀರ್ವಿದಾಮಪಿ ॥೧೬॥**

ಅನೀಹಸ್ಯತೇ = ಯಾವ ಬಗೆಯ ಅಪೇಕ್ಷೆಯೂ ಇಲ್ಲದ ನಿನಗೆ; ಕರ್ಮಾಣಿ = ಕರ್ಮಾಚರಣೆಗಳ ನಿಯಮವು; ಅಭವಸ್ಯ = ಜನ್ಮರಹಿತನಾದವನಿಗೆ; ಭವಃ = ಜನನ ಮರಣಾದಿ ಸಂಭವವು; ಕಾಲಾತ್ಮನಃ = ಕಾಲಸ್ವರೂಪನೇ ಆಗಿ ಇತರರಿಗೆ ಮರಣ ಭಯವನ್ನುಂಟುಮಾಡುವವನಿಗೆ; ದುರ್ಗಾಶ್ರಯಃ = ಭಯದಿಂದಲೋ ಎಂಬಂತೆ ದುರ್ಗವನ್ನು ಕಟ್ಟಿಕೊಂಡು ಅದರಲ್ಲಿರುವುದು; ಅರಿಭಯಾತ್ = ಜರಾಸಂಧಾದಿಗಳ ಭಯದಿಂದ; ಪಲಾಯನಂ = ಓಡಿಹೋದಂತೆ ತೋರಿಸುವುದು; ಸ್ವಾತ್ಮನ್ರತೇಃ = ಸ್ವರೂಪಾನಂದಭರಿತನಾದ ನಿನಗೆ; ಅಯುತಪ್ರಮದಾ ಆಶ್ರಯಃ = ಹತ್ತು ಸಾವಿರ ಹೆಂಗಸರಲ್ಲಿ ಪ್ರೇಮ ಸಂಬಂಧವಾದ ಆಶ್ರಯವು; ವಿದಾಂ ಅಪಿ ಧೀಃ = ಜ್ಞಾನಿಗಳ ಮನಸ್ಸನ್ನೂ ಕೂಡ; ವಿದ್ಯತಿ = ಮೋಹಗೊಳಿಸುತ್ತದೆ.

(ಈ ಲೋಕದಿಂದ ಕಣ್ಮರೆಯಾಗುವ ಭಗವಂತನ ಸನ್ನಿಧಾನದ ಸಾಮೀಪ್ಯವಿಲ್ಲದೆ ಇರುವುದು ಹೇಗೆಂಬ ಆತಂಕವು ಉದ್ಧವರ ಮನಸ್ಸಿನಲ್ಲಿ ತಳಮಳ ವುಂಟುಮಾಡುತ್ತಿದ್ದರೂ, ಸಮಾಧಾನ ತಂದುಕೊಳ್ಳುವ ಬಗೆಯನ್ನು ತಾವೇ ಆಡಿತೋರಿಸುತ್ತಿರುವುದು, ಭಕ್ತಜನರಿಗೆ ಮಾದರಿಯಾಗದೆ. ಈ ಒಂದು ಶ್ಲೋಕದಲ್ಲಿ ಶ್ರೀಕೃಷ್ಣನು ಜನ್ಮಾರಾಭ್ಯ ಮಾಡಿದುದೆಲ್ಲಾ ಲೋಕಶಿಕ್ಷಣಾರ್ಥವಾಗಿ, ತನ್ನ ಮಹಿಮೆಯನ್ನು ತಿಳಿಸುವುದಕ್ಕಾಗಿ, ಭಕ್ತರ ಮನಸ್ಸನ್ನು ತನ್ನ ಕಡೆಗೆ ಸೆಳೆದುಕೊಳ್ಳುವುದಕ್ಕಾಗಿ, ದುಷ್ಟಜನರಿಗೆ ತಪ್ಪುಕಲ್ಪನೆಗಳನ್ನುಂಟುಮಾಡಿ ಅವರವರ ಗತಿಗಳನ್ನು ಮುಟ್ಟಿಸುವುದಕ್ಕಾಗಿ, ಜ್ಞಾನಿಗಳಿಗೂ ಮೋಹವನ್ನುಂಟುಮಾಡಿ ಅವರಿಗೆ ಎಚ್ಚರಿಕೆಯನ್ನು ನೀಡುವುದಕ್ಕಾಗಿ ಎಂಬುದನ್ನು ತಿಳಿಸುತ್ತಾ, ಭಗವಂತನು ಜನ್ಮಾದಿ ದೋಷರಹಿತ, ಕರ್ಮಬಂಧನದೂರ, ನಿರ್ಭೀತ, ಸ್ವರಮಣ, ಆದುದರಿಂದಲೇ ದೋಷನಿವಾರಕ, ಬಂಧನ ಮೋಚಕ, ಭಯವಿನಾಶಕ, ಸ್ವರೂಪಾನಂದದಾಯಕ, ಆದುದರಿಂದಲೇ ಸ್ವರೂಪಪಧ್ಯನ್ಮಂದಿರವಾಸಿ ಎಂಬುದನ್ನು ಮನವರಿಕೆ ಮಾಡಿಕಟ್ಟು ಮನಸ್ಸಿನ ತಳಮಳ ನೀಗುವ ಹಾಗೆ ಮಾಡಿದ್ದಾರೆ. ಆದರೂ ಇಂತಹ ಜ್ಞಾನ ಮಾತ್ರದಿಂದ ಸಮಾಧಾನ ದೊರೆಯುವುದಿಲ್ಲ. ಅದಕ್ಕೆ ಭಗವಂತನೊಡನೆ ನಿಕಟ ಬಾಂಧವ್ಯವನ್ನು ಕುದುರಿಸುವ ಭಕ್ತಿಯು ಅಗತ್ಯ. ಅದು ಶ್ರೀಹರಿಯದರ್ಶನ ಪೂಜಾದಿಗಳಿಂದ ಅಭಿವೃದ್ಧಿಯಾಗುವಂತಹುದು. ಈ ಕಾರಣದಿದಲೇ ಉದ್ಧವರು ಹಿಂದಿನ ಶ್ಲೋಕದಲ್ಲಿ ಹೇಳಿದಂತೆ "ನಿನ್ನ ಪಾದಸೇವೆಯನ್ನೇ ಬಯಸುತ್ತೇನೆ" ಎಂದ ಹೇಳಿರುವುದು. ಕಣ್ಮರೆಯಾದ ಮೇಲೆ ಇಂತಹ ಪಾದಸೇವೆ ದೊರಕುವುದಾದರೂ ಹೇಗೆ? ಅಂತರಂಗದಲ್ಲಿ ಸುಜ್ಞಾನಪೂರ್ವಕವಾಗಿ ಶ್ರೀಹರಿಮೂರ್ತಿಯನ್ನು ಸ್ಥಾಪಿಸಿಕೊಂಡು ಮಾನಸ ಪೂಜೆ ಮಾಡುವುದರಿಂದ ಅದು ಸಾಧ್ಯ. ಉದ್ಧವರು ಅದನ್ನೇ ಅಪೇಕ್ಷಿಸಿರಬೇಕು.)

ಮಂತ್ರೇಷು ಮಾಂವಾಉಪಹೂಯಯತ್ತ್ವಮಕುಂಠಿತಾಖಂಡ
ಸದಾತ್ಮಬೋಧಃ।
ಪೃಚ್ಛೇಃ ಪ್ರಭೋಮುಗ್ಧಇವಾಪ್ರಮತ್ತಸ್ತನ್ನೋಮನೋಮೋಹಯತೀವ
ದೇವ ।।೧೭।।

ಪ್ರಭೋ = ಸರ್ವಸಮರ್ಥನಾದ; ದೇವ = ಸ್ವಾಮೀ; ಅಕುಂಠಿತ ಅಖಂಡ ಸದಾತ್ಮಬೋಧಃ = ದೋಷರಹಿತವಾದ ಪೂರ್ಣ ಸಚ್ಚಿದಾನಂದ ವಿಗ್ರಹನಾದ; ಅಪ್ರಮತ್ತಃ = ಮೋಹದೂರನಾದ; ತ್ವಂ = ನೀನು; ಮುಗ್ಧಃ ಇವ = ಅಲ್ಪಜ್ಞನಂತೆ; ಮಂತ್ರೇಷು = ಸಮಸ್ಯೆಗಳ ಪರಿಹಾರವನ್ನು ಕುರಿತು ಆಲೋಚಿಸುವಾಗ; ಮಾಂವಾ = ನನ್ನನ್ನಾಗಲೀ ಅಕ್ರೂರಾದಿಗಳನ್ನಾಗಲೀ; ಉಪಹೂಯ = ಕರೆಸಿಕೊಂಡು; ಯತ್ ಪೃಚ್ಛೇಃ = ಯಾವರೀತಿ ಸಲಹೆಗಳನ್ನು ಕೇಳುತ್ತಿದ್ದೆಯೋ; ತತ್ = ಆ ನಿನ್ನ ಚರ್ಯೆಯು; ನಃಮನಃ = ನಮ್ಮ ಮನಸ್ಸುಗಳನ್ನು; ಮೋಹಯತಿ ಇವ = ಮೋಹಗೊಳಿಸುವಂತೆ ಇರತಕ್ಕವುಗಳು.

(ಬ್ರಹ್ಮಾದಿ ದೇವತೆಗಳಿಗೂ, ರಮಾದೇವಿಯರಿಗೂ ನಿಲುಕದ ದಿವ್ಯಮಾಹಾತ್ಮ್ಯೆಗಳುಳ್ಳ ಶ್ರೀಹರಿಯು, ಸಾಮಾನ್ಯ ಜನರೊಡನೆ ಅತಿ ಸಾಮಾನ್ಯನಂತೆ ವರ್ತಿಸುವಾಗ ಅವನನ್ನು ಲೋಕೈಕಪ್ರಭುವಾದ ಪರಮಾತ್ಮನೆಂದು ಗುರುತಿಸಿ ಮರೆಯದಿರುವುದು ಬಹುಕಷ್ಟವೆಂಬುದನ್ನಿಲ್ಲಿ ತಿಳಿಸಿ ಕೊಟ್ಟಿದ್ದಾರೆ. ಹಾಗೆ, ದೂರಾತ್ ದೂರತರನಾದ ಸ್ವಾಮಿಯು ಸುಲಭರಲ್ಲಿ ಅತಿ ಸುಲಭನಾಗಿ ನಮ್ಮೊಡನಾಡಿ ಆದರಿಸುವುದು ಕೂಡ ಇತರರಿಗೆ ಸಾಧ್ಯವಲ್ಲದ ದಿವ್ಯ ಮಾಹಾತ್ಮ್ಯವಲ್ಲವೆ!)

ಜ್ಞಾನಂಪರಂ ಸ್ವಾತ್ಮರಹಃ ಪ್ರಕಾಶಂ ಪ್ರೋವಾಚಕಸ್ಮೈ ಭಗವಾನ್ಸಮಗ್ರಂ।
ಅಪಿಕ್ಷಮಂನೋಗ್ರಹಣಾಯಭರ್ತರ್ವೇದಾಂಜಸಾ ಯದ್ವೃಜಿನಂತ
ರೇಮ ।।೧೮।।

ಸ್ವಾತ್ಮರಹಃ = ನಿನಗೆ ಮಾತ್ರ ತಿಳಿಯುವಂತಹ ರಹಸ್ಯವಾದ; ಪರಂ = ಸರ್ವೋತ್ಕೃಷ್ಟವಾದ; ಜ್ಞಾನಂ = ತಿಳಿಯಬೇಕಾದುದನ್ನು; ಕಸ್ಮೈ = ಬ್ರಹ್ಮದೇವನಿಗೆ; ಭಗವಾನ್ = ಸಕಲಗುಣ ಪರಿಪೂರ್ಣನಾದ ಶ್ರೀಹರಿಯು; ಸಮಗ್ರಂ ಅಬ್ರಹ್ಮದೇವನು ತಿಳಿಯಬಹುದಾದ ಎಲ್ಲವನ್ನೂ; ಪ್ರಕಾಶಂ = ಸ್ಪಷ್ಟವಾಗಿ ಪ್ರೋವಾಚ ಹೇಳಿದನು; ಭರ್ತ = ಸಕಲಾಧಾರನಾದ ಶ್ರೀಹರಿಯೇ ಆದ ನೀನು; ನಃಗ್ರಹಣಾಯ = ನಮ್ಮ ಗ್ರಹಿಕೆಗೆ; ಕ್ಷಮಂ ಅಪಿ = ಮಿತಿಯನ್ನೂ ಕೂಡ; ವೇದ ಬಲ್ಲವನಾಗಿರುವಿ (ಆದುದರಿಂದ); ಅಂಜಸಾ = ನಿಜವಾಗಿ; ಯತ್ ವೃಜನಂತರೇಮ = ಯಾವ

ಜ್ಞಾನದಿಂದ ದೋಷಪೂರ್ಣವಾದ ಸಂಸಾರ ಸಾಗರವನ್ನು ದಾಟಬಲ್ಲೆವೋ; (ಅದನ್ನು); ಉಪದಿಶ = ತಿಳಿಸಿಕೊಡು.

("ಸ್ವಯಮೇವಾತ್ಮನಾತ್ಮಾನಂ ವೇತ್ಥತ್ವಂ ಪುರುಷೋತ್ತಮ" ಎಂದು ಅರ್ಜುನರು ಹೇಳಿರುವಂತೆ ಭಗವಂತನ ಜ್ಞಾನರಹಸ್ಯಗಳನ್ನು ಆ ಭಾಗವಂತನು ಮಾತ್ರ ಬಲ್ಲ. ಇತರರು ಆ ಸ್ವಾಮಿಯು ಅವರವರ ಯೋಗ್ಯತಾನುಸಾರ ತಿಳಿಸಿಕೊಟ್ಟಷ್ಟನ್ನು ಮಾತ್ರ ತಿಳಿಯಬಲ್ಲರು. ಹಾಗೆ ತಿಳಿದು ಬಂದುದರಲ್ಲಿ ಅಜ್ಞಾನಸಂಬಂಧವಾದ ಊಹಾಪೋಹಗಳಿಗೆ ಅವಕಾಶವಿಲ್ಲ. ತಿಳಿದಿರುವುದು ಅಪೂರ್ಣವೆಂಬ ಕೊರತೆ ಇದ್ದರೂ, ತಿಳಿದಿರುವುದು ಪೂರ್ಣಸತ್ಯವೇ ಆಗಿರುವುದು.)

ಇತ್ಯಾವೇದಿತಹಾರ್ದಾಯ ಮಹ್ಯಂ ಸಭಗವಾನ್ ಪರಃ ।
ಆದಿದೇಶಾರವಿಂದಾಕ್ಷ ಆತ್ಮನಃ ಪರಮಾಂಸ್ಥಿತಿಂ ॥೧೯॥

ಇತಿ = ಈ ರೀತಿಯಾಗಿ; ಆವೇದಿತ ಹಾರ್ದಾಯ = ಮನೋಗತವಾದ ಇಚ್ಛೆಯನ್ನು ನಿವೇದಿಸಿಕೊಂಡ; ಮಹ್ಯಂ = ನನಗೆ; ಅರವಿಂದಾಕ್ಷಃ = ಕಮಲನಯನನಾದ; ಸಃಪರಃಭಗವಾನ್ = ಸರ್ವೋತ್ತಮ ಪುರುಷನಾದ ಭಗವಂತನು; ಆತ್ಮನಃ = ತನ್ನ; ಪರಮಾಂಸ್ಥಿತಿಂ = ತಾರತಮ್ಯಕ್ರಮದಲ್ಲಿ ಸಕಲರನ್ನೂ ಮೀರಿ ಇರುವ ಪರಿಯನ್ನು; ಆದಿದೇಶ = ತಿಳಿಸಿಕೊಟ್ಟನು.

(ಜಗತ್ತಿನಲ್ಲಿ ಕಂಡುಬರುವುದು ಜಡಗಳು, ಚೇತನಗಳು. ಚೇತನಪ್ರಪಂಚದಲ್ಲಿ ಜ್ಞಾನ–ಬಲಗಳ ದೃಷ್ಟಿಯಿಂದ ತಾರತಮ್ಯವಿರುವುದು ಪ್ರತ್ಯಕ್ಷ, ಅನುಮಾನ, ಆಗಮಗಳಿಂದ ಸಿದ್ಧವಾದುದು. ಚೇತನಪ್ರಪಂಚದಲ್ಲಿ ಸ್ವತಂತ್ರವಸ್ತುವೆಂದರೆ ಪರಮಾತ್ಮನೊಬ್ಬನೇ. ಜಡವಸ್ತುಗಳಿಗೂ, ಇತರ ಎಲ್ಲಾ ಚೇತನರಿಗೂ ಅವನು ಆಶ್ರಯದಾತ. ಚೇತನರ ಗುಂಪಿನಲ್ಲಿ ಬ್ರಹ್ಮಪದವಿಗೆ ಬರುವವರು ಶ್ರೇಷ್ಠರು; ಜೀವೋತ್ತಮರೆಂಬ ಸಂಕೇತ ಅವರಿಗುಂಟು. ಪರಮಾತ್ಮನ ನಿತ್ಯಸಹಚಾರಿಣಿಯಾದ ರಮಾದೇವಿಯು ಜೀವರ ಗುಂಪಿನಿಂದ ವಿಲಕ್ಷಣವಾಗಿ ನಿತ್ಯಮುಕ್ತಳೂ, ಅತಿಶಯ ಜ್ಞಾನಪೂರ್ಣಳೂ ಆಗಿದ್ದರೂ, ಪರಮಾತ್ಮನನ್ನು ಪೂರ್ಣವಾಗಿ ತಿಳಿಯಲಾರಳು ಎಂದಾಗ,ಆ ಪರಮಾತ್ಮನ ಜ್ಞಾನವು ಎಷ್ಟು ಅಗಾಧವಾದುದು, ರಹಸ್ಯಮಯ ವಾದುದು ಎಂಬುದು ವ್ಯಕ್ತವಾಗುತ್ತದೆ. ಆದರೂ, ಮುಕ್ತಿಯೋಗ್ಯ ಜೀವರಿಗೆ ಅವರವರ ಯೋಗ್ಯತಾನುಸಾರವಾಗಿ ಆ ಜ್ಞಾನವು ಲಭಿಸುತ್ತದೆ. ಆದರಿಂದಲೇ ಜೀವರು ತಮ್ಮ ಸ್ವರೂಪವನ್ನು ತಿಳಿದು, ಬಿಂಬಕ್ರಿಯೆಯಿಂದ ತಮ್ಮ ಸ್ವರೂಪಭೂತವಾದ ಆನಂದವನ್ನು ಅನುಭವಿಸಬಲ್ಲರು.)

**ಸಏವಮಾರಾಧಿತಪಾದತೀರ್ಥಾದಧೀತ ತತ್ತ್ವಾತ್ಮ ವಿಬೋಧಮಾರ್ಗಃ।**
**ಪ್ರಣಮ್ಯಪಾದೌಪರಿವೃತ್ಯದೇವಮಿಹಾಗತೋಽಹಂ ವಿರಹಾತುರಾತ್ಮಾ**
**॥೨೦॥**

ಏವಂ = ಹಿಂದೆ ಹೇಳಿದ ಪ್ರಕಾರವಾಗಿ; ಆರಾಧಿತ ಪಾದತೀರ್ಥಾತ್ = ಆರಾಧಿಸಿಲ್ಪಟ್ಟ ಪವಿತ್ರಪಾದಗಳುಳ್ಳವನಾದ ಶ್ರೀಕೃಷ್ಣನಿಂದ; ಅಧೀತ = ವಿಚಾರಪೂರ್ವಕವಾಗಿ ತಿಳಿಯಲ್ಪಟ್ಟ; ತತ್ವಆತ್ಮವಿಭೋಧಮಾರ್ಗಃ = ಭಗವತ್ತತ್ವದ ದೆಸೆಯಿಂದ ಸ್ವಂತ ಸ್ವರೂಪವನ್ನು ತಿಳಿದು ಕೃತಾರ್ಥನಾಗುವ ರೀತಿಯನ್ನು ಗ್ರಹಿಸಿದ; ಸಃಅಹಂ = ಆನಾನು; ದೇವಂ = ಆ ಸ್ವಾಮಿಯನ್ನು ಉದ್ದೇಶಿಸಿ; ಪರಿವೃತ್ಯ = ಪ್ರದಕ್ಷಿಣೆಮಾಡಿ; ಪಾದೌಪ್ರಣಮ್ಯ = ಪಾದಗಳಿಗೆ ನಮಸ್ಕಾರ ಮಾಡಿ; ವಿರಹಾತುರಾತ್ಮಾ = ಪ್ರತ್ಯಕ್ಷಸಾನ್ನಿಧ್ಯವನ್ನು ಕಳೆದುಕೊಂಡ ಕಾರಣ ಖೇದಗೊಂಡವನಾಗಿ; ಇಹಆಗತಃ = ಬದರಿಕಾಶ್ರಮಕ್ಕೆ ಪ್ರಯಾಣ ಮಾಡುತ್ತಾ ಯಮುನಾ ತೀರಕ್ಕೆ ಬಂದು ಇದ್ದೇನೆ.

(ಕಾಲ ರೂಪಿಯೂ, ಕಾಲನಿಯಾಮಕನೂ ಆದ ಭಗವಂತನ ಸದಿಚ್ಛೆಯಂತೆ ಎಲ್ಲವೂ ನಡೆದು ಹೋಗಲೇಬೇಕು. ಶ್ರೀಕೃಷ್ಣನು ಲೋಕದಿಂದ ಕಣ್ಮರೆಯಾಗುವುದು ನಿಶ್ಚಿತ; ಆ ಭಗವಂತನ ಆಜ್ಞೆಯಂತೆ ವಿದುರರು ಬದರಿಕಾಶ್ರಮಕ್ಕೆ ಹೋಗಿ ನಿಲ್ಲಬೇಕಾದುದೂ ನಿಶ್ಚಿತ. ಅವರು ಭಗವಂತನಿಂದಲೇ ನೇರವಾಗಿ ತತ್ವೋಪದೇಶ ಹೊಂದಿದರು; ನಿಜ. ಆದರೆ, ಅದು ಅಭ್ಯಾಸಕ್ಕೆ ಬಂದಲ್ಲದೆ ಮನಶ್ಶಾಂತಿ ಉಂಟಾಗುವುದಿಲ್ಲ. ಆದುದರಿಂದಲೇ ಶ್ರೀಕೃಷ್ಣನನ್ನಗಲಿ ಬಂದುದರಿಂದ ಮನಸ್ಸು ಸ್ವಲ್ಪಮಟ್ಟಿಗೆ ಖೇದಯುಕ್ತವಾಗಿಯೇ ಉಳಿದಿದೆ–ಗೋಪಿಕಾಸ್ತ್ರೀಯರಿಗೆ ಆದಂತೆ ನಿರಂತರ ತತ್ವಚಿಂತನೆಯಿಂದ ಆ ಖೇದವು ಅಳಿಸಿಹೋಗುವುದು. ಅದಕ್ಕಾಗಿಯೇ ಬದರಿಕಾಶ್ರಮದಂತಹ ಪವಿತ್ರ ಸ್ಥಳದಲ್ಲಿ ಧ್ಯಾನರೂಪತಪಸ್ಸು. ಸಾಧನೆಯ ಪರಿಪೂರ್ತಿಯ ಹಂತ–ಸತ್ವಗುಣವನ್ನೂ ಮೀರಿ ನೈರ್ಗುಣ್ಯಭಾವವನ್ನು, ಎಂದರೆ, ಕೇವಲ ಸ್ವರೂಪೇಂದ್ರಿಯಗಳು ವ್ಯಾಪಾರ ನಿರ್ವಹಿಸುತ್ತಿರುವುದನ್ನು ಅನುಭವಿಸುವ ಸ್ಥಿತಿ. ಅದು ಸಿದ್ಧಿಸಿದಾಗಲೇ, "ನೋಡುವವನನ್ನು ನೋಡಬಹುದು", ಮುಕ್ತಿಯನಂತರ ನಮ್ಮ ಸ್ವರೂಪದ ಕಣ್ಣಿನಲ್ಲಿಯೂ ಸ್ವತಂತ್ರನಾದ ಭಗವಂತ ತನ್ನ ಕಣ್ಣನ್ನಿಟ್ಟು ನೋಡಿದಾಗ ನಾವು ಅವನನ್ನು ನಮ್ಮೊಳಗೇ ಕಾಣುವೆವು; ಅವನು ತನ್ನನ್ನು ತಾನೇ ಕಂಡಂತೆ ನಮ್ಮನ್ನು ನಾವೇ ಕಾಣುವೆವು.)

**ಸೋಹಂತ್ವದ್ದರ್ಶನಾಹ್ಲಾದ ವಿಯೋಗಾರ್ತಿಯುತಃ ಪ್ರಭೋ।**
**ಗಮಿಷ್ಯೇದಯಿತಂ ತಸ್ಯಬದರ್ಯಾಶ್ರಮ ಮಂಡಲಂ ॥೨೧॥**

यत्रनारायणोदेवो नरश्चभगवानृषिः ।
मृदुतीव्रं तपोदीर्घं तेपातेलोकभावनौ ॥२२॥

ಪ್ರಭೋ = ಅಯ್ಯಾ, ವಿದುರಾ, ತ್ವದ್ದರ್ಶನ ಆಹ್ಲಾದ, ವಿಯೋಗ ಆರ್ತಿ, ಯುತಃ = ನಿನ್ನ ದರ್ಶನದಿಂದ ಸಂತೋಷವೂ, ಶ್ರೀಕೃಷ್ಣನ ಅಗಲುವಿಕೆಯಿಂದ ಖಿನ್ನತೆಯೂ ಉಳ್ಳ; ಸಃಅಹಂ = ಅಂತಹ ಸ್ಥಿತಿಯಲ್ಲಿರುವ ನಾನು;

ಯತ್ರ = ಯಾವಲ್ಲಿ; ದೇವಃ ನಾರಾಯಣಃ = ಯಮಧರ್ಮಪುತ್ರನಂತೆ ಅವತರಿಸಿದ ನಾರಾಯಣನಾಮಕ ಭಗವಂತನೂ; ಚ = ಮತ್ತು; ಋಷಿಃ = ಋಷಿಚರ್ಯೆಯಲ್ಲಿರುವ; ಭಗವಾನ್ = ಭಗವದಂಶ ಯುಕ್ತನಾದ; ನರಃ = ಶೇಷದೇವನೂ; ಲೋಕಭಾವನೌ = ಲೋಕದ ಯೋಗಿವರೇಣ್ಯರಿಗೆ ಮಾದರಿಯಾಗುವಂತೆ; ಮೃದು = ಲೋಕಕಲ್ಯಾಣಕರವಾದ; ತೀವ್ರಂ = ಇತರರಿಗೆ ಅತಿಕಠಿಣವೆನಿಸುವ; ತಪಃ = ಧ್ಯಾನರೂಪವಾದ ತಪಶ್ಚರ್ಯೆಯನ್ನು; ದೀರ್ಘಂ = ಬಹುಕಾಲದವರೆಗೆ; ತೇಪಾತೇ = ತಪಸ್ವಿಗಳ ರೀತಿಯಲ್ಲಿ ಆಚರಿಸುವರೋ; ತಸ್ಯ = ಆಭಗವಂತನಿಂದ ಅಧಿಷ್ಠಿತವಾದ; ದಯಿತಂ = ಅವನಿಗೆ ಪ್ರಿಯವೆನಿಸುವ; ತಂ ಬದರ್ಯಾಶ್ರಮ ಮಂಡಲಂ = ಆಬದರಿಕಾಶ್ರಮದ ಪ್ರದೇಶವನ್ನು ಕುರಿತು; ಗಮಿಷ್ಯೇ = ಪ್ರಯಾಣ ಮಾಡುತ್ತೇನೆ. ॥೨೧, ೨೨॥

ಉದ್ಧವರು ಪ್ರಯಾಣ ಮಾಡುತ್ತಿರುವುದು ಬದರಿಕಾಶ್ರಮದ ಬಳಿಯ ಕಲಾಪವೆಂಬ ಗ್ರಾಮಕ್ಕೆಂದು ಶ್ರೀವಿಜಯಧ್ವಜಾರ್ಯರು ತಮ್ಮ ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ. ಅಂದರೆ, ಇಲ್ಲಿ ಹೇಳಿರುವ ಬದರಿಕಾಶ್ರಮವು ಭಾರತದೇಶಕ್ಕೆ ಮೇರೆಯಾಗಿರುವ ಹಿಮಾಲಯದಲ್ಲಿರುವುದು. ಆದರೆ,ಇದೇ ಶ್ರೀಮದ್ಭಾಗವತದ ಪಂಚಮಸ್ಕಂಧದಲ್ಲಿ ಇನ್ನೊಂದು ಮಹಾಬದರಿಯ ವಿಚಾರವು ತಿಳಿದು ಬರುವುದೆಂಬುದನ್ನು ನೆನಪಿನಲ್ಲಿಡಬೇಕು. ಜಂಬೂದ್ವೀಪದ ದಕ್ಷಿಣ ಭಾಗದಲ್ಲಿ ೯೦೦೦ ಯೋಜನ (೫೪೦೦೦ ಮೈಲಿ) ವಿಸ್ತಾರವಾಗಿರುವುದು ಭರತವರ್ಷ. ಅದರ ಮೇರೆಯಾಗಿರುವುದು ೨೦೦೦ ಯೋಜನ ಅಗಲವಾಗಿಯೂ, ೧೦,೦೦೦ ಯೋಜನ ಎತ್ತರವಾಗಿಯೂ, ೮೧೦೦೦ ಯೋಜನಉದ್ದವಾಗಿಯೂ, ಇರುವ ನಿಜವಾದ ಹಿಮಾಲಯ. ಅಲ್ಲಿಯೂ ನರನಾರಾಯಣಾಶ್ರಮ, ಬದರಿಕಾಶ್ರಮ ಮತ್ತು ಕೈಲಾಸಮಂದಿರಗಳಿರುವುವು. ಈಗಲೂ ನಾರದಾದಿ ಋಷಿಗಳು ಅಲ್ಲಿರುವ ನರನಾರಾಯಣ ರೂಪಿಯಿಂದ ತಪಶ್ಚರ್ಯೆಯ ಹೆಚ್ಚು ಹೆಚ್ಚು ರಹಸ್ಯಗಳ ನ್ನರಿತುಕೊಂಡು, ಭರತವರ್ಷದಾದ್ಯಂತ ಅಲ್ಲಲ್ಲಿ ತಪಸ್ಸು ಮಾಡಿಕೊಂಡಿರುವ ಇತರ ಋಷಿಮುನಿಗಳಿಗೆ ಉಪದೇಶ ಮಾಡುತ್ತಿರುವರು.)

ಶ್ರೀಶುಕ ಉವಾಚ – ಪರೀಕ್ಷಿದ್ರಾಜನನ್ನು ಕುರಿತು ಶ್ರೀ ಶುಕಾಚಾರ್ಯರು ಹೇಳಿದರು.

**ಇತ್ಯುದ್ಧವಾದುಪಾಕರ್ಣ್ಯ ಸುಹೃದಾಂದುಸ್ಸಹಂ ವಧಂ ।**

**ಜ್ಞಾನೇನಾಶಯಮಯತ್‌ಕ್ಷತ್ತಾ ಶೋಕಮುತ್ಪತಿತಂ ಬುಧಃ ॥೨೩॥**

ಇತಿ = ಇದುವರೆಗೆ ಹೇಳಿದ ಪ್ರಕಾರ; ಸುಹೃದಾಂ = ಆಪ್ತಬಾಂಧವರ; ದುಸ್ಸಹಂ ವಧಂ = ದುರ್ಮರಣದ ವಿಚಾರವನ್ನು; ಉದ್ಧವಾತ್ = ಉದ್ಧವರ ಕಡೆಯಿಂದ; ಉಪಾಕರ್ಣ್ಯ = ಕೇಳಿ; ಬುಧಃ = ತಿಳಿವಳಿಕೆಯುಳ್ಳ; ಕ್ಷತ್ತಾ = ವಿದುರರು; ಉತ್ಪತಿತಂ ಶೋಕಂ = ಉಕ್ಕಿಬಂದ ದುಃಖವನ್ನು; ಜ್ಞಾನೇನ = ಸ್ವತಂತ್ರನಾದ ಭಗವಂತನ ಸತ್ಸಂಕಲ್ಪದ ವಿಚಾರದಂದ; ಅಶಮಯತ್ = ಕಳೆದುಕೊಂಡರು.

ಅಭಿಮಾನವು ದುಃಖಕ್ಕೆ ಕಾರಣ. ತತ್ವಜ್ಞಾನ ಉಂಟಾದಾಗ ದುಃಖಕ್ಕೆ ಕಾರಣವಿರುವುದಿಲ್ಲ. ಬ್ರಹ್ಮಾಂಡ ಪುರಾಣದ ಪ್ರೇತಕಾಂಡವು ಇದಕ್ಕೆ ನಿದರ್ಶನ.)

**ಸತೇ ಮಹಾಭಾಗವತಂ ವ್ರಜಂತಂ ಕೌರವರ್ಷಭಃ ।**

**ವಿಶ್ರಂಭಾದಭ್ಯದತ್ತೇದಂ ಮುಖ್ಯಂ ಕೃಷ್ಣಪರಿಗ್ರಹೇ ॥೨೪॥**

ಸಃಕೌರವರ್ಷಭಃ = ಕೌರವರಲ್ಲಿ ಉತ್ತಮರಾದ ವಿದುರರು; ವ್ರಜಂತಂ = ಪ್ರಯಾಣಕ್ಕೆ ಸಿದ್ಧರಾದ; ಮಹಾಭಾಗವತಂ = ಭಗವದ್ಭಕ್ತರಲ್ಲಿ ಶ್ರೇಷ್ಠರಾದ; (ಪ್ರಮುಖರಾದ) ಉದ್ಧವರನ್ನು ಕುರಿತು; ವಿಶ್ರಂಭಾತ್ = ವಿಶ್ವಾಸದಿಂದ; ಇದಂ = ಮುಂದೆ ಹೇಳುವಂತೆ; ಅಭ್ಯದತ್ತ = ಹೇಳಿದರು.

(ತತ್ವಜ್ಞಾನದ ಪ್ರಯೋಜನವು ದುಃಖೋಪಶಮನ ಮಾತ್ರವಲ್ಲ; ಅದಕ್ಕೆ ಪೂರಕವಾದ ಭಗವಂತನ ಸ್ವಾಂತಂತ್ರ್ಯಾದಿ ಗುಣಗಳ ಸ್ಪಷ್ಟವಾದ ತಿಳಿವಳಿಕೆ. ಅದು ನಿಜಭಕ್ತರಿಂದ ಮಾತ್ರ ತಿಳಿಯಲು ಸಾಧ್ಯ; ಆದುದರಿಂದ ಉದ್ಧವರನ್ನು ಕುರಿತು ಪ್ರಶ್ನೆ.)

**ಜ್ಞಾನಂಪರಂಸ್ವಾತ್ಮರಹಃ ಪ್ರಕಾಶಂ ಯದಾಹಯೋಗೇಶ್ವರಈಶ್ವರಸ್ತೇ।**

**ವಕ್ತುಂಭವಾನ್ನೋಽರ್ಹತಿ ಯದ್ಧಿವಿಷ್ಣೋರ್ಭೃತ್ಯಾಃ**

**ಸ್ವಭೃತ್ಯಾರ್ಥಕೃತಶ್ಚರಂತಿ ॥೨೫॥**

ಹಿ = ನಿಜವಾಗಿ; ವಿಷ್ಣುಭೃತ್ಯಾಃ = ಭಗವದ್ಭಕ್ತರು; ಯತ್ಸ್ವಭೃತ್ಯಾರ್ಥಕೃತಃ = ತಮ್ಮ ಶಿಷ್ಯವರ್ಗದವರ ಹಿತಾರ್ಥವಾಗಿ ಚರಂತಿ = ಸಂಚಾರಮಾಡುತ್ತಾರೆ;

ಯೋಗೇಶ್ವರಃ = ಯೋಗವಿದ್ಯಾವಿದರಿಗೆ ಸ್ವಾಮಿಯಾದ; ಈಶ್ವರಃ = ಜಗತ್ಸ್ವಾಮಿಯಾದ ಶ್ರೀಕೃಷ್ಣನು; ಯತ್ = ಯಾವ; ಸ್ವಾತ್ಮರಹಃ ಪ್ರಕಾಶಂ = ತನ್ನ ಅಂತರಂಗದ ಮಾಹಾತ್ಮ್ಯ ವಿಷಯವನ್ನು ತಿಳಿಸಿಕೊಡುವ; ಪರಂ = ಸರ್ವೋತ್ಕೃಷ್ಟವಾದ; ಜ್ಞಾನಂ = ವಿಶಿಷ್ಟಜ್ಞಾನವನ್ನು; ತೇ = ನಿಮಗೆ; ಆಹ = ಉಪದೇಶಿಸಿದನೋ, ಅದನ್ನು; ನಃ = ನಮಗೆ; ವಕ್ತುಂ = ತಿಳಿಸಿಕೊಡುವುದಕ್ಕೆ; ಭವಾನ್ = ನೀವು; ಅರ್ಹತಿ = ಸಮರ್ಥರಾಗಿದ್ದೀರಿ.

(ಜಗತ್ತಿನ ಆಗುಹೋಗುಗಳನ್ನು ತಿಳಿಯುವುದು ಜಗತ್ತಂತ್ರ ನಿರ್ವಾಹಕನಾದ ಭಗವಂತನ ಆಶಯವನ್ನೂ, ಅವನ ಮಹಿಮೆಯನ್ನೂ ತಿಳಿಯುವುದಕ್ಕಾಗಿಯೇ, ಕಾಲ ಕಳೆಯುವುದಕ್ಕಾಗಿ ಅಲ್ಲ. ಕೌರವರ ನಾಶ, ಯಾದವರ ನಾಶ ಮೊದಲಾದ ವಿಚಾರಗಳ ಹಿನ್ನೆಲೆಯಾದ ಭಗವಂತನ ಸಂಕಲ್ಪವನ್ನೂ, ಅವನ ಆಶಯವನ್ನೂ ತಿಳಿಯಬೇಕಾದುದು ಮುಖ್ಯ; ಅದೇ ಜೀವನಸಾರ್ಥಕ್ಯ. ಅದಕ್ಕಾಗಿ ವಿದುರಉದ್ಧವರ ಸಮಾಗಮ, ಅದನ್ನರಿತ ವಿದುರರು ಯುಕ್ತವಾದ ಪ್ರಶ್ನೆಯನ್ನೇ ಮಾಡಿದ್ದಾರೆ.)

**ಉದ್ಧವ ಉವಾಚಃ** – ಉದ್ಧವರು ಹೇಳಿದರು.

**ನನುತೇ ತತ್ವಸಂರಾದ್ಧಋಷಿಃ ಕೌಷಾರವೋಂತಿಕೇ ।**
**ಸಾಕ್ಷಾದ್ಭಗವತಾದಿಷ್ಟೋಮರ್ತ್ಯಲೋಕಂ ಜಿಹಾಸತಾ ॥೨೬॥**

ಮರ್ತ್ಯಲೋಕಂ ಜಿಹಾಸತಾ = ಈ ಭೂಲೋಕವನ್ನು ಬಿಟ್ಟು ಕಣ್ಮರೆಯಾಗಲಿಚ್ಛಿಸಿದ; ಸಾಕ್ಷಾತ್ ಭಗವತಾ = ನೇರವಾಗಿ ಶ್ರೀಕೃಷ್ಣ ಭಗವಾನನಿಂದಲೇ; ಅಂತಿಕೇ = ನನ್ನಂತೆ ಬಳಿಯಲ್ಲಿಯೇ ಇದ್ದು; ಉಪದಿಷ್ಟಃ = ಉಪದೇಶಹೊಂದಿದ; ಋಷಿಃ ಕೌಷಾರವಃ = ಮೈತ್ರೇಯ ಮುನಿಗಳು; ತತ್ವಸಂರಾದ್ಧಃನನು = ತತ್ವಸಿದ್ಧಿಯನ್ನು ಪಡೆದವರಾಗಿರುವರಷ್ಟೇ; ತೇ = ನಿನಗೆ, ಅವರಿಂದ ಉಪದೇಶವಾಗುವುದು.

(ಯಾರಿಗೆ ಯಾರಿಂದ ಉಪದೇಶವಾಗಬೇಕೆಂಬುದು ಭಗವಂತನ ನಿಯಮಕ್ಕೆ ಒಳಪಟ್ಟುದು. ಆದುದರಿಂದ ಉದ್ಧವರು ಹಾಗೆ ಹೇಳಿದರು.)

**ಸೂತ ಉವಾಚಃ** – ಶೌನಕಾದಿಗಳನ್ನು ಕುರಿತು ಸೂತರು ಹೇಳಿದರು.

**ಇತಿಸಹವಿದುರೇಣ ವಿಶ್ವಮೂರ್ತೇರ್ಗುಣಕಥಯಾ**
**ಸುಧಯಾಪ್ಲುತೋರುತಾಪಃ ।**
**ಕ್ಷಣಮಿವ ಪುಲಿನೇಯಮಸ್ವಸುಸ್ತಾಂ ಸಮುಷಿತಔಪಗವಿರ್ನಿಶಾಂತ**
**ತೋಗಾತ್ ॥೨೭॥**

ಇತಿ = ಇದುವರೆಗೆ ಹೇಳಿದ ಪ್ರಕಾರವಾಗಿ; ವಿದುರೇಣ ಸಹ = ವಿದುರರೊಡನೆ; ವಿಶ್ವಮೂರ್ತೇಃ = ಸರ್ವಾಂತರ್ಯಾಮಿಯಾದ ಭಗವಂತನ; ಕಥಯಾಸುಧಯಾ = ಗುಣಾನುವರ್ಣನಾ ರೂಪವಾದ ಅಮೃತದಿಂದ; ಆಪ್ಲುತ ಉರುತಾಪಃ = ಸಂಸಾರಸಂಬಂಧವಾದ ದುಃಖವನ್ನು ಕಳೆದುಕೊಂಡವರಾಗಿ; ಔಪಗವಿಃ = ಉದ್ಧವರು; ಯಮಸ್ವಸುಃ = ಯಮುನಾ ನದಿಯ; ಪುಲಿನೇ = ಮರಳಿನ ಮೇಲೆ; ಸಮುಷಿತಃ = ಮಲಗಿದವರಾಗಿ; ತಾಂನಿಶಾಂ = ಆ ರಾತ್ರಿಯನ್ನು; ತತಃ = ಕಥಾಲಾಪದಿಂದ; ಕ್ಷಣಮಿವ = ಅತ್ಯಲ್ಪಕಾಲದಂತೆ; ಅಗಾತ್ = ಕಳೆದರು.

("ಬಲ್ಲವರೇ ಬಲ್ಲರು, ಬೆಲ್ಲದ ಸವಿಯ" ಎಂಬಂತೆ, ಭಗವದ್ಭಕ್ತರು ಸಂಧಿಸಿದಾಗ, ಹಗಲುರಾತ್ರಿಯೆನ್ನುವ ಪರಿವೆ ಇಲ್ಲದೆ ಅವರು ಹೇಗೆ ಭಗವಂತನ ಮಹಿಮೆಯನ್ನು ಕುರಿತು ಮಾತುಕಥೆಗಳಿಂದ ಸಂತುಷ್ಟರಾಗಿ ಬಾಹ್ಯಪ್ರಪಂಚವನ್ನು ಮರೆತಿರುತ್ತಾರೆ ಎಂಬುದನ್ನು ಅನುಭವದಿಂದ ಮಾತ್ರ ತಿಳಿಯಲು ಸಾಧ್ಯ.)

**ರಾಜೋವಾಚಃ– ಪರೀಕ್ಷಿದ್ರಾಜರು ಶುಕಾಚಾರ್ಯರನ್ನು ಕುರಿತು ಹೇಳಿದರು.**

**ನಿಧನಮುಪಗತೇಷು ವೃಷ್ಣಿಭೋಜೇಷ್ವಧಿರಥ ಯೂಥಪ**
**ಯೂಥಪೇಷು ಮುಖ್ಯಃ ।**
**ಸತುಕಥಮವಶಿಷ್ಟ ಉದ್ಧವೋ ಯದ್ಧರಿರಪಿ ತತ್ಯಜ ಆಕೃತಿಂತ್ರ್ಯಧೀಶಃ**
**॥೨೮॥**

ವೃಷ್ಣಿಭೋಜೇಷು = ವೃಷ್ಣಿಕುಲದವರು, ಭೋಜಕುಲದವರು ಮೊದಲಾದವರೆಲ್ಲಾ; ನಿಧನಂ ಉಪಗತೇಷು = ದೇಹತ್ಯಾಗ ರೂಪವಾದ ಮರಣಹೊಂದಿರಲು; ಅಧಿರಥಯೂಥಪ–ಯೂಥಪೇಷು = ಅಧಿರಥರ ಗುಂಪುಗಳನಾಯಕರ ಗುಂಪುಗಳಿಗೆ ಯಾಜಮಾನರಾದವರಲ್ಲಿ; ಮುಖ್ಯಃ = ಗಣ್ಯರಾದ; ಸಃಉದ್ಧವಃತು = ಆ ಉದ್ಧವರು ಮಾತ್ರವೇ; ತ್ರ್ಯಧೀಶಃ ಹರಿಃಅಪಿ = ಮೂರು ಮುಕ್ತ ಸ್ಥಾನಗಳಿಗೂ ಅಧಿಪತಿಯಾದ ಶ್ರೀಕೃಷ್ಣನೂ ಕೂಡ; ಯತ್ ಆಕೃತಿಂ ತತ್ಯಜಃ = ಭೂಲೋಕವನ್ನು ಬಿಟ್ಟು ಕಣ್ಮರೆಯಾದ ಮೇಲೆ; ಕಥಂ ಅವಶಿಷ್ಟಃ = ಹೇಗೆ, ಯಾವ ಕಾರಣದಿಂದ ಉಳಿದುಕೊಂಡರು?

(ಹೀಗೆ, ಒಂದೊಂದು ಘಟನೆಯಲ್ಲಿಯೂ ವಿಮರ್ಶೆಮಾಡಿ ಶ್ರೀಹರಿಯ ಸಂಕಲ್ಪವನ್ನು ಅರಿತುಕೊಳ್ಳುವುದು ಪರೀಕ್ಷಿದ್ರಾಜರಂತಹ ವಿವೇಕಿಗಳ ಲಕ್ಷಣ. 'ಆಕೃತಿಂ' ಎಂದರೆ ಶ್ರೀಕೃಷ್ಣನ ದೇಹದ ಆಕೃತಿಯನ್ನು ಎಂದು ಅರ್ಥಮಾಡಿದರೆ 'ಆಕೃತಿ' ಎಂಬ ಮಾತಿಗೆ ಕೋಶದಲ್ಲಿರುವ 'ಪೃಥ್ವಿ' ಎಂಬ ಅರ್ಥವನ್ನು

ಶ್ರೀವಿಜಯಧ್ವಜಾಚರ್ಯರು ಸಾರ್ಥಕವಾಗಿ ಬಳಸಿ, ಶಾಸ್ತ್ರಾಧಾರವನ್ನೂ ಉದಾಹರಿಸಿದ್ದಾರೆ.

"ಪೃಥಿವೀಲೋಕಸಂತ್ಯಾಗೋದೇಹತ್ಯಾಗೋಹರೇಃ ಸ್ಮೃತಃ ।
ನಿತ್ಯಾನಂದಸ್ವರೂಪತ್ವಾದನ್ಯೋನೈವೋಪಲಕ್ಷ್ಯತೇ ॥
ದರ್ಶಯನ್ ಜನಮೋಹಾಯ ಸದೃಶೀತತ್ತದಾಕೃತಿಂ ।
ನಟವದ್ಭಗವಾನ್ವಿಷ್ಣುಃ ಪರಜ್ಞಾನಾಕೃತಿಃ ಸದಾ ॥"

ಶ್ರೀಕೃಷ್ಣನು ತನ್ನಂತೆ ಒಂದು ಜಡಾಕೃತಿಯನ್ನು ನಿರ್ಮಿಸಿ, ಬಿಟ್ಟು, ತಾನು ಅಂತರ್ಧಾನ ಹೊಂದಿದನು.)

ಶ್ರೀಶುಕ ಉವಾಚಃ – ಶ್ರೀಶುಕಾಚಾರ್ಯರು ನುಡಿದರು.

ಬ್ರಹ್ಮಶಾಪಾಪದೇಶೇನ ಕಾಲೇನಾಮೋಘ ವಾಂಛಿತಃ।
ಸಂಹೃತ್ಯ ಸ್ವಕುಲಂನೂನಂತ್ಯಕ್ಷ್ಯನ್ದೇಹ ಮಚಿಂತಯತ್ ॥೨೯॥

ಅಮೋಘವಾಂಛಿತಃ = ವ್ಯರ್ಥವಲ್ಲದ, ಎಂದರೆ, ಸತ್ಯಸಂಕಲ್ಪನಾದ ಶ್ರೀಕೃಷ್ಣನು; ಬ್ರಹ್ಮಶಾಪಾಪದೇಶೇನ = ಬ್ರಾಹ್ಮಣರ ಶಾಪದ ನೆವದಿಂದ; ಕಾಲೇನ = ಕಾಲರೂಪೀಮೃತ್ಯುವಿನ ಕಡೆಯಿಂದ; ಸ್ವಕುಲಂ = ತನ್ನವಂಶದವರನ್ನು; ಸಂಹೃತ್ಯ = ಸಂಹಾರಮಾಡಿಸಿ; ದೇಹಂ ತ್ಯಕ್ಷನ್ = ಈ ಲೋಕದಿಂದ ಕಣ್ಮರೆಯಾಗುವಾಗ; ನೂನಂ = ನಿಶ್ಚಯವಾದ ರೀತಿಯಲ್ಲಿ; ಅಚಿಂತಯತ್ = ಸಂಕಲ್ಪಮಾಡಿದನು.

(ಇಲ್ಲಿ ಶ್ರೀಕೃಷ್ಣನ ದೇಹವೆಂದರೆ ವಿರಾಟ್ಪುರುಷನಾದ ಅವನ ಭೂಪ್ರದೇಶವೆಂದು ತಿಳಿಯಬೇಕು. ಹಿತಾರ್ಥವಾಗಿ ಅವನು ಮಾಡುವ ಸಂಕಲ್ಪ ಅವನು ಆಲೋಚಿಸಿದು ಎಂದರೂ ಸಂಕಲ್ಪ. ಅವನು ಆಲೋಚಿಸಿದನು ಎಂದರೂ ಸಂಕಲ್ಪಮಾಡಿದನೆಂತಲೇ ಅರ್ಥ. ಭಗವಂತನಿಗೆ ಆಲೋಚನೆಯ ಅಗತ್ಯವಿಲ್ಲ.)

ಅಸ್ಮಾಲ್ಲೋಕಾದುಪರತೇಮಯಿ ಜ್ಞಾನಂ ಮದಾಶ್ರಯಂ ।
ಅರ್ಹತ್ಯುದ್ಧವಏವಾದ್ಧಾ ಸಂಪ್ರತ್ಯಾತ್ಮವತಾಂ ಪರಃ ॥೩೦॥

ಮಯಿ ಅಸ್ಮತ್ ಲೋಕಾತ್ ಉಪರತೇ = ನಾನು ಈ ಲೋಕದಿಂದ ಮರೆಯಾಗಿ ಹೋಗಲು; ಸಂಪ್ರತಿ = ಈಗ; ಆತ್ಮವತಾಂ ಪರಃ = ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ; ಉದ್ಧವಃ ಏವ = ಉದ್ಧವನು ಮಾತ್ರವೇ; ಅದ್ಧಾ = ನಿಜವಾಗಿ; ಮದಾಶ್ರಯಂ ಜ್ಞಾನಂ = ನನ್ನಿಂದಲೇ ದೊರೆಯಬೇಕಾದ ನನ್ನ ವಿಷಯಕವಾದ ಜ್ಞಾನವನ್ನು; ಅರ್ಹತಿ = ಹೊಂದಲು ಯೋಗ್ಯನಾಗಿದ್ದಾನೆ.

(ಒಂದೊಂದು ಕಾಲಾವಧಿಯಲ್ಲಿಯೂ ಜ್ಞಾನಿಗಳಾದವರು ವಿರಳ. ಆದರಲ್ಲಿಯೂ ಬ್ರಹ್ಮಜ್ಞಾನಿಗಳು ಅತ್ಯಂತ ವಿರಳ. ಅವರಲ್ಲಿಯೂ ಅತ್ಯಂತ ಶ್ರೇಷ್ಠರಾದವರು ಒಬ್ಬಿಬ್ಬರು ಮಾತ್ರ ಇರುವರೆಂಬುದು ಗಮನೀಯವಾದ ಅಂಶ.)

**ನೋದ್ಧವೋಣ್ವಪಿ ಮನ್ನ್ಯೂನೋ ಯದ್ಗುಣೈರ್ನಿರ್ಜಿತ ಪ್ರಭುಃ ।**
**ಅತೋಮದ್ವಯುನರ್ಲೋಕಂ ಗ್ರಾಹಯನ್ನಿಹತಿಷ್ಠತು ॥೩೧॥**

ಯದ್ಗುಣೈಃ = ಯಾರ ಭಕ್ತ್ಯಾದಿ ಗುಣಗಳಿಂದ; ಪ್ರಭುಃ = ಲೋಕೇಶ್ವರನಾದ ನಾನು; ನಿರ್ಜಿತಃ = ವಶೀಕೃತನಾಗಿರುವೆನೋ; ಅಂತಹ; ಉದ್ಧವಃ = ಉದ್ಧವನು; ಅಣುಃ ಅಪಿ = ಲೇಶಮಾತ್ರವೂ; ಮನ್ನ್ಯೂನಃನ = ನನಗಿಂತ ಕಡಿಮೆಯಾದವನಾಗಿಲ್ಲ; ಅತಃ = ಆದುದರಿಂದ; ಮದ್ವತ್ = ನನ್ನಂತೆ; ಪುನಃ = ಇನ್ನು ಮುಂದೆ; ಲೋಕಂಗ್ರಾಹಯನ್ = ಲೋಕದ ಸಜ್ಜನರನ್ನು ಬ್ರಹ್ಮಜ್ಞಾನಮಾರ್ಗದಲ್ಲಿ ನಡೆಸುತ್ತಾ; ಇಹ = ಈ ಲೋಕದಲ್ಲಿ; ತಿಷ್ಠತು = ಉಳಿದಿರಲಿ; (ಹೀಗೆಂದು ಶ್ರೀಕೃಷ್ಣನು ಸಂಕಲ್ಪಿಸಿದನು.)

(ಇಲ್ಲಿ ಉದ್ಧವರು ಭಗವಂತನಿಗೆ ಸಮನೆಂಬಂತೆ ಹೇಳಿದಾಗ ಅಜ್ಞಜನರು ಸುಲಭವಾಗಿ ಮೋಸಹೋಗಬಹುದು. ನಿಜಸ್ಥಿತಿಯು ಅದಲ್ಲ. ಭಗವಂತನ ದೃಷ್ಟಿಯಲ್ಲಿ ಉದ್ಧವರು ಅಣುಪ್ರಾಯರಾದರೂ, ಅವರಲ್ಲಿ ಭಗವಂತನು ಉದ್ಬೋಧಗೊಳಿಸಿರುವ ಜ್ಞಾನದ ದೃಷ್ಟಿಯಿಂದ, ಉಪದೇಶಕ್ಕೆ ಅರ್ಹರಾದ ಸಜ್ಜನರಿಗೆ ಅವರು ಭಗವಂತನಿಗೆ ಸಮನೇ ಎಂಬಂತಹ ಕೇವಲ ಗೌರವಕ್ಕೆ ಅರ್ಹರಷ್ಟೇ. ಯಾದವರಾದಿಯಾಗಿ ಎಲ್ಲರೂ ನಾಶವಾದರೂ ಉದ್ಧವರನ್ನು ಉಳಿಸಿದುದಕ್ಕೆ ಇದು ಕಾರಣ.)

**ಏವಂತ್ರಿಲೋಕ ಗುರುಣಾಸಂದಿಷ್ಟಃಶಬ್ದಯೋನಿನಾ ।**
**ಬದರ್ಯಾಶ್ರಮಮಾಸಾದ್ಯ ಹರಿಮೀಜೇ ಸಮಾಧಿನಾ ॥೩೨॥**

ಏವಂ = ಈ ಪ್ರಕಾರವಾಗಿ; ಶಬ್ದಯೋನಿನಾ = ಪ್ರಣವಸ್ವರೂಪನಾದ; (ಪ್ರಣವಾಶ್ರಯನಾದ) ತ್ರಿಲೋಕಗುರುಣಾ = ಸಕಲ ಲೋಕಗಳಿಗೂ ಅಧಿಪತಿಯಾದ ಶ್ರೀಕೃಷ್ಣನಿಂದ; ಸಂದಿಷ್ಟಃ = ಆಜ್ಞಾಪಿಸಲ್ಪಟ್ಟವರಾಗಿ; ಬದರ್ಯಾಂ = ಬದರೀಕ್ಷೇತ್ರದ ಪರಿಸರದಲ್ಲಿ; ಆಶ್ರಮಂ ಆಸಾದ್ಯ = ಆಶ್ರಮವನ್ನು ಮಾಡಿಕೊಂಡು; ಸಮಾಧಿನಾ = ಏಕಾಗ್ರತೆಯಿಂದ; ಶಬ್ದಯೋನಿನಾ = ವೇದೋಕ್ತಮಾರ್ಗದಿಂದ; ಹರಿಂಈಜೇ = ಉದ್ಧವರು ಶ್ರೀಹರಿಯನ್ನು ಆರಾಧಿಸಿದರು.

(ವೇದೋಕ್ತಮಾರ್ಗವೆಂದರೆ, ಉಪನಿಷತ್ತುಗಳಿಂದ ತಿಳಿದುಬರುವ ಅಂತರಂಗೋಪಾಸನೆಯ ಜ್ಞಾನಮಾರ್ಗ. ಉದ್ಧವರು ಅಂತರಂಗದಲ್ಲಿ

ಶ್ರೀಹರಿಯನ್ನು ಬಗೆಬಗೆಯಾಗಿ ಧ್ಯಾನಮಾಡುತ್ತಾ, ಶ್ರೀಹರಿಯಿಚ್ಛೆಯಂತೆ ಒದಗಿಬಂದ ಸುಜೀವಿಗಳಿಗೆ ಜ್ಞಾನೋಪದೇಶಮಾಡುತ್ತಾ ಬದರಿಕಾಶ್ರಮ ದಲ್ಲಿದ್ದರೆಂದು ತಿಳಿಯಬೇಕು.)

ವಿದುರೋಽಪ್ಯುದ್ಧವಾಚ್ಛ್ರುತ್ವಾ ಕೃಷ್ಣಸ್ಯ ಪರಮಾತ್ಮನಃ ।
ಕ್ರೀಡಯೋಪಾತ್ತದೇಹಸ್ಯ ಕರ್ಮಾಣಿಶ್ಲಾಘಿತಾನಿಚ ॥೩೩॥

ದೇಹನ್ಯಾಸಂಚ ತಸ್ಯೈವಂ ಧೀರಾಣಾಂಧೈರ್ಯವರ್ಧನಂ।
ಅನ್ಯೇಷಾಂದುಷ್ಕರತರಂ ಪಶೂನಾಂ ವಿಕ್ಲವಾತ್ಮನಾಂ ॥೩೪॥

ಆತ್ಮಾನಂಚ ಕುರುಶ್ರೇಷ್ಠ ಕೃಷ್ಣೇನ ಮನಸೇಕ್ಷಿತಂ।
ಧ್ಯಾಯನ್ಗತೇ ಭಗವತೇ ರುರೋದ ಪ್ರೇಮವಿಹ್ವಲಃ ॥೩೫॥

ಕ್ರೀಡಯಾಉಪಾತ್ತ ದೇಹಸ್ಯಃ = ಜಗದ್ರೂಪವಾದ ಲೀಲೆಗಾಗಿ ದೇಹಉಳ್ಳವನಂತೆ ತೋರಿಕೊಂಡ; ಪರಮಾತ್ಮನಃ ಕೃಷ್ಣಸ್ಯ = ಜೀವರಿಗಿಂತ ಭಿನ್ನನಾಗಿ ಸರ್ವೋತ್ತಮನಾದ ಶ್ರೀಕೃಷ್ಣನ; ಶ್ಲಾಘಿತಾನಿ ಚ ಕರ್ಮಾಣಿ = ಭಕ್ತಜನರಿಂದ ಪ್ರಶಂಸಿಸಲ್ಪಟ್ಟ ದುಷ್ಟಸಂಹಾರಾದಿ ಕಾರ್ಯಗಳನ್ನು ಕುರಿತು; ಉದ್ಧವಾತ್ ಶ್ರುತ್ವಾ = ಉದ್ಧವರ ಬಾಯಿಂದ ಕೇಳಿತಿಳಿದು; ॥೩೩॥

ಧೀರಾಣಾಂ = ಬುದ್ಧಿಯಿಂದ ಆಲೋಚಿಸತಕ್ಕರಿಗೆ; ಧೈರ್ಯವರ್ಧನಂ= ಅಂತರಂಗಧ್ಯಾನದಿಂದ ದೃಢಭಕ್ತಿಯನ್ನು ಹೆಚ್ಚಿಸುವ; ವಿಕ್ಲವಾತ್ಮನಾಂಪಶೂನಾಂ = ಪಶುಬುದ್ಧಿಯ ಅಜ್ಞಾನಿಗಳಿಗೆ; ದುಷ್ಕರತರಂ = ಅರ್ಥಮಾಡಿಕೊಳ್ಳಲು ದುಸ್ಸಾಧ್ಯವಾದ; ತಸ್ಯ ಏವಂ ದೇಹನ್ಯಾಸಂಚ = ಆಶ್ರೀಕೃಷ್ಣನ ದೇಹತ್ಯಾಗವೆನ್ನುವ ಕಣ್ಮರೆಯಾಗುವಿಕೆಯನ್ನೂ; (ಶ್ರುತ್ವಾ= ಕೇಳಿ) ॥೩೪॥

ಕುರುಶ್ರೇಷ್ಠಾ= ಓ ಪರೀಕ್ಷಿದ್ರಾಜಾ; ಭಗವತೇ ಗತೇ = ಭಕ್ತವರೇಣ್ಯರಾದ ಉದ್ಧವರು ಮುಂದಕ್ಕೆ ಪ್ರಯಾಣಮಾಡಲು; ಮನಸಾಈಕ್ಷಿತಂ = ಮಾನಸಿಕವಾಗಿ ಕಾಣುವ (ಮನಸ್ಸಿಗೆ ಅಪೇಕ್ಷಿತವಾದ); ಕೃಷ್ಣೇನ = ಶ್ರೀಕೃಷ್ಣನ ರೂಪಧಾರಣೆಯಿಂದ; ಆತ್ಮಾನಂ ಚ ಧ್ಯಾಯನ್ = ತಮ್ಮ ಬಿಂಬರೂಪಿಯಾದ ಅಂತರಾತ್ಮನನ್ನು ಧ್ಯಾನ ಮಾಡುತ್ತಾ; ಪ್ರೇಮವಿಹ್ವಲಃ = ಭಕ್ತಿಯ ಉದ್ರೇಕದಿಂದ; ರುರೋದ = ವಿದುರರು ಪ್ರೇಮಶ್ರುಗಳನ್ನು ಸುರಿಸುತ್ತಾ ಅತ್ತುಬಿಟ್ಟರು.; ॥೩೫॥

(ಸಾಂಸಾರಿಕ ಕ್ಲೇಶಗಳಿಂದ ನೊಂದುಬೆಂದ ಸಜ್ಜನರಿಗೆ ಅವರು ಅಪೇಕ್ಷಿಸುವ ಭಗವಂತನ ದರ್ಶನವಾದಾಗ ಆಗುವ ಸಂತಸ ಅಷ್ಟಿಷ್ಟಲ್ಲ. ಆ ಭಗವಂತನ ರೂಪವು

ಕಣ್ಮರೆಯಾಗಿ ಹೋದಾಗ ಆಗುವ ಕ್ಲೇಶವೂ ಅಷ್ಟೆ ಗುರುತರವಾದುದು. ಆದರೆ, ಬಾಹ್ಯದಲ್ಲಿ ಭಗವಂತನ ರೂಪವನ್ನು ಕಾಣುವುದು ಮನೋದಾರ್ಢ್ಯಕ್ಕಾಗಿ. ಅಂತಹ ದಾರ್ಢ್ಯದಿಂದ ಧ್ಯಾನ ಮಾಡುತ್ತಾ ಬುದ್ಧಿಮಾರ್ಗವನ್ನು ಹಿಡಿದು ಸ್ವರೂಪಹೃದಯದಲ್ಲಿಯೇ ಆ ಭಗವಂತನನ್ನು ಕಾಣಬೇಕಾದುದು ಅಗತ್ಯಕರ್ತವ್ಯ. ಅದೇ ಪರಮ ಗುರಿ.)

**ಕಾಲಿಂದ್ಯಾಃ ಕತಿಭಿರ್ವಿದ್ವಾನಹೋಭಿರ್ಭರತರ್ಷಭ ।**
**ಪ್ರಾಪದ್ಯತದ್ಯುಸರಿತಂಯತ್ರ ಮಿತ್ರಾಸುತೋಮುನಿಃ ॥೩೬॥**

ಭರತರ್ಷಭ = ಭರತಕುಲ ಪ್ರದೀಪನಾದ ಪರೀಕ್ಷಿದ್ರಾಜಾ; ವಿದ್ವಾನ್ = ಧೀಮಂತರಾದ ವಿದುರರು; ಕತಿಭಿಃ ಅಹೋಭಿಃ = ಕೆಲವು ದಿನಗಳು ಪ್ರಯಾಣಮಾಡಿ; ಕಾಲಿಂದ್ಯಾಃ = ಯಮುನಾತೀರದಿಂದ; ಯತ್ರ = ಎಲ್ಲಿ; ಮಿತ್ರಾಸುತಃ ಮುನಿಃ = ಜ್ಞಾನಿವರೇಣ್ಯರಾದ ಮೈತ್ರೇಯರು ಇದ್ದರೋ ಅಂತಹ; ದ್ಯುಸರಿತಂ = ಗಂಗಾನದಿಯ ಪ್ರದೇಶವನ್ನು; ಪ್ರಾಪದ್ಯತ = ಸೇರಿದರು.

(ವೇದಾದಿಗ್ರಂಥಗಳಿಂದ ಗುರುಮುಖೇನ ಜ್ಞಾನವನ್ನು ಸಂಪಾದಿಸುವುದು, ಯೋಗಬಲದಿಂದ ಭಗವಂತನ ರೂಪವನ್ನು ಸ್ಥೂಲ ಹೃದಯದಲ್ಲಿ ಕಾಣುವುದು ನಂತರ ಸ್ವರೂಪ ಹೃದಯದಲ್ಲಿಯೇ ತಮ್ಮಲ್ಲಿ ತಮ್ಮಂತೆ ಇದ್ದು ವ್ಯಾಪಾರಗಳನ್ನು ಮಾಡುವ, ಬಿಂಬವೆನಿಸುವ ಭಗವಂತನನ್ನು ತಿಳಿದುಕಾಣುವುದು– ಇವು ಜ್ಞಾನ ಸಿದ್ಧಿಯ ಹಂತಗಳು. ಕಡೆಯ ಹಂತವನ್ನು ಮುಟ್ಟಿದ ಮೇಲೆಯೂ ಮೈತ್ರೇಯರಂತಹ ಅನುಭವಿಗಳಿಂದ ವಿದುರರಂತಹ ಧೀರರು ತಿಳಿಯಬೇಕಾದ ರಹಸ್ಯಗಳು ಉಳಿದೇ ಇರುತ್ತವೆ. ಆದುದರಿಂದಲೇ ಜ್ಞಾನಾರ್ಜನೆಗೆ ಮಿತಿಯಿಲ್ಲವೆನ್ನುವುದು. ಅವರವರ ಸ್ವರೂಪಯೋಗ್ಯತೆಗಳಿಗೆ ಅನುಗುಣವಾಗಿ, ಕಡೆಯ ದೇಹವು ಬಂದಾಗಲೂ, ದೊಡ್ಡವರಿಂದ ತಿಳಿಯುತ್ತಲೇ ಇರಬೇಕು. ಜೀವನ್ಮುಕ್ತರಾದ ಮೇಲೆ, ಲಿಂಗಭಂಗವು ಆಗುವವರೆಗೆ, ಊರ್ಧ್ವಲೋಕಗಳಲ್ಲಿದ್ದು ಅಲ್ಲಿನ ಸಹಚರ್ಯದಿಂದ ಜ್ಞಾನವನ್ನು ಸ್ವರೂಪದಲ್ಲಿ ಚೆನ್ನಾಗಿ ರೂಢಿಸಿಕೊಳ್ಳಬೇಕು.)

## ನಾಲ್ಕನೆಯ ಅಧ್ಯಾಯ ಮುಗಿಯಿತು.

## "ಶ್ರೀಕೃಷ್ಣಾರ್ಪಣಮಸ್ತು"

---

# ಶ್ರೀಮದ್ಭಾಗವತ – ತೃತೀಯ ಸ್ಕಂಧ

# ಐದನೆಯ ಅಧ್ಯಾಯ

ಶ್ರೀಶುಕಉವಾಚಃ – ಶ್ರೀಶುಕಾಚಾರ್ಯರು ನುಡಿದರು.

**ದ್ವಾರಿದ್ಯುನದ್ಯಾಋಷಭಃ ಕುರೂಣಾಂ ಮೈತ್ರೇಯಮಾ**
**ಸೀನಮಗಾಧಬೋಧಂ ।**
**ಕ್ಷತ್ತಾಭಿಸೃತ್ಯಾಚ್ಯುತಭಾವಶುದ್ಧಃ ಪಪ್ರಚ್ಛಸೌಶೀಲ್ಯ ಗುಣಾತಿತೃಪ್ತಂ ॥೧॥**

ಕುರೂಣಾಂ ಋಷಭಃ = ಕೌರವ ಕುಲದಲ್ಲಿ ಸುಜ್ಞಾನಗ್ರಹಣ ಯೋಗ್ಯತೆಯಿಂದ ಅಗ್ರಗಣ್ಯರಾದ; ಕ್ಷತ್ತಾ = ವಿದುರರು; ದ್ಯುನದ್ಯಾಃ ದ್ವಾರಿ = ಗಂಗಾನದಿಯ ಪ್ರವಾಹ ಪ್ರಾರಂಭವಾಗುವ ಕಡೆಯಲ್ಲಿ; ಆಸೀನಂ = ಕುಳಿತಿದ್ದ; ಅಗಾಧ ಬೋಧಂ = ಅಪಾರಜ್ಞಾನ ನಿಧಿಯಾದ; ಸೌಶೀಲ್ಯಗುಣಾತಿತೃಪ್ತಂ = ವಿದುರರ ಸೌಶೀಲ್ಯ ಗುಣಗಳಿಂದ ಸುಪ್ರೀತರಾದ; ಮೈತ್ರೇಯಂ = ಮೈತ್ರೇಯರನ್ನು; ಅಭಿಸೃತ್ಯ = ಭಗವಂತನ ಲೀಲಾಸ್ಮೃತಿಯಿಂದ ಭಕ್ತಿಭರಿತವಾದ ಮನಸ್ಸಿನಿಂದ ಸಮೀಪಿಸಿ; ಪಪ್ರಚ್ಛ = ಜ್ಞಾನೋಪದೇಶ ನೀಡಬೇಕೆಂದು ಬೇಡಿದರು.

(ಭಗವದ್ವಿಷಯಕವಾದ ಜ್ಞಾನವು ಕೇವಲ ಪಾಠಪ್ರವಚನಗಳಿಂದಲೇ ಲಭಿಸುವುದಿಲ್ಲ. ಪಾಠಪ್ರವಚನಗಳು, ಮನನ ಮಂಥನ ಮುಂತಾದವು ಅಗತ್ಯ. ಆದರೆ, ಜ್ಞಾನಸಿದ್ಧಿಯಾಗಬೇಕಾದರೆ ಗುರೂಪದೇಶವೇ ಆಗಬೇಕು. ಗುರುಗಳು ತಮ್ಮ ಅನುಭವದ ಸಾರವನ್ನು ಶಿಷ್ಯರಿಗೆ ಯಥಾಯೋಗ್ಯವಾಗಿ ಧಾರೆಪಿರೆಯುತ್ತಾರೆ.)

ವಿದುರ ಉವಾಚಃ – ವಿದುರರು ಮಾತಾಡಿದರು.

**ಸುಖಾಯಕರ್ಮಾಣಿ ಕರೋತಿಲೋಕೋನತೈಃ ಸುಖಂನಾನ್ಯದು**
**ಪಾರಮಂವಾ ।**
**ವಿಂದೇತ ಭೂಯಸ್ತತಏವ ದುಃಖಂಯದತ್ರಯುಕ್ತಂ ಭಗವಾನ್ವದೇನ್ನಃ**
**॥೨॥**

ಲೋಕಃ = ಲೋಕದ ಜನರು; ಸುಖಾಯ = ಸುಖದ ಪ್ರಾಪ್ತಿಗಾಗಿ; ಕರ್ಮಾಣಿ

= ಯಜ್ಞ, ಪೂಜೆ ಮುಂತಾದ ಬಗೆ ಬಗೆಯ ಕರ್ಮಗಳನ್ನು; ಕರೋತಿ = ಮಾಡುತ್ತಾರೆ; ತೈಃ = ಅವುಗಳಿಂದ; ಸುಖಂ ನವಿಂದೇತ = ನಿಜವಾಗಿ ಸುಖದೊರೆಯುವುದಿಲ್ಲ; ಅನ್ಯತ್ = ಇನ್ನೊಂದು ಉದ್ದೇಶಿತವಾದ ದುಃಖದ; ಉಪಾರಮಂ ವಾ = ದುಃಖದ ನಿವೃತ್ತಿಯೂಕೂಡ; ನವಿಂದೇತ = ಪ್ರಾಪ್ತಿಯಾಗುವುದಿಲ್ಲ; ತತಃ = ಆ ಕರ್ಮಗಳಿಂದ; ಭೂಯಃ = ಹೆಚ್ಚಾಗಿ; ದುಃಖಂ ಏವ ವಿಂದೇತ = ದುಃಖವನ್ನೇ ಹೊಂದುತ್ತಾರೆ; ಅತ್ರಯತ್ ಯುಕ್ತಂ = ಈ ವಿಷಯದಲ್ಲಿ ಮಾಡಬೇಕಾದುದು ಯಾವುದೋ ಅದನ್ನು; ಭಗವಾನ್ = ಜ್ಞಾನನಿಧಿಗಳಾದ ತಾವು; ನಃ = ನಮಗೆ; ವದೇತ್ = ಉಪದೇಶಮಾಡಬೇಕು.

(ಯಜ್ಞಯಾಗಾದಿಗಳು, ಪೂಜಾಪುರಸ್ಕಾರಾದಿಗಳು ವ್ಯರ್ಥವೇ ಎಂದರೆ, ಅದುಹಾಗಲ್ಲ. ಸುಖದಾತನಾದ ಭಗವಂತನ ಕಡೆಗೆ ಮನಸ್ಸು ತಿರುಗುವಂತೆ ಮಾಡಲು ಆ ಕರ್ಮಗಳು ಸಾಧಕಗಳೇ ಹೋರತು, ನಿರಂತರ ಸುಖದಾಯಕಗಳಲ್ಲ. ಅವುಗಳಿಂದ ದೊರೆಯುವ ಸುಖವು ಅಲ್ಪ. ಕ್ಷಣಿಕ. ಉಳಿಯುವುದು ಕೇವಲ ದುಃಖ. ಆ ಕರ್ಮಗಳಿಂದ ದುಃಖ ನಿವಾರಣೆಯಾಗುವುದಿಲ್ಲ. ತಾತ್ಕಾಲಿಕ ಸುಖದಿಂದ ದುಃಖವು ತಾತ್ಕಾಲಿಕವಾಗಿ ಮರೆಯಬಹುದೇ ಹೊರತು ಅದು ನಾಶವಾಗುವುದಿಲ್ಲ. ಸಂಸಾರ ವೆಂಬುದು ಬಹಳ ಮಟ್ಟಿಗೆ ದುಃಖ ಸಾಗರವೇ ಆದುದರಿಂದ ಕರ್ತವ್ಯವೇನು ಎಂಬ ಪ್ರಶ್ನೆಯು ಉಚಿತ. ವಿದುರರು 'ನಮಗೆ' ಎಂದಿರುವುದು ಲೋಕಹಿತಕ್ಕಾಗಿ ಎಂಬ ಅರ್ಥದಲ್ಲಿ.)

**ಜನಸ್ಯಕೃಷ್ಣಾದ್ವಿಮುಖಸ್ಯದೈವಾದಧರ್ಮಶೀಲಸ್ಯ ಸುದುಃಖಿತಸ್ಯ ।**
**ಅನುಗ್ರಹಾಯೇಹ ಚರಂತಿ ನೂನಂ ಭೂತಾನಿಭವ್ಯಾನಿ ಜನಾರ್ದನಸ್ಯ ॥೩॥**

ದೈವಾತ್ ಕೃಷ್ಣಾತ್ = ಭಗವಂತನಾದ ಶ್ರೀಕೃಷ್ಣನಿಂದ; ವಿಮುಖಸ್ಯ = ಅನ್ಯವಾದ ಕಡೆಗೆ ಮನಸ್ಸುಳ್ಳ; ಅಧರ್ಮಶೀಲಸ್ಯ = ಧರ್ಮವಿರುದ್ಧವಾದ ನಡತೆಗಳುಳ್ಳ; ಸುದುಃಖಿತಸ್ಯ ಜನಸ್ಯ = ದುಃಖಕ್ಕೆ ಈಡಾದ ಸಜ್ಜನರ; ಅನುಗ್ರಹಾಯ = ಉದ್ಧಾರಕ್ಕಾಗಿ; ನೂನಂ = ನಿಜವಾಗಿಯೂ; ಭವ್ಯಾನಿ = ಮಂಗಳ ಸ್ವರೂಪರಾದ; ಜನಾರ್ದನಸ್ಯಭೂತಾನಿ = ಭಗವದ್ಭಕ್ತರಾದ ಜೀವನ್ಮುಕ್ತರು; ಇಹ = ಈ ಲೋಕದಲ್ಲಿ; ಚರಂತಿ = ಸಂಚರಿಸುತ್ತಿರುತ್ತಾರೆ.

(ಸುಜೀವಿಗಳಾದರೂ ಅಭ್ಯಾಸದ ಕಾಲದಲ್ಲಿ ದುಃಖವನ್ನು ಕಳೆದುಕೊಂಡು ಸುಖದಿಂದಿರಲು ವಿವಿಧ ಪ್ರಯತ್ನಗಳನ್ನು ಮಾಡುವರೇ ಹೋರತು ಭಗವಂತನೇ ನಿಜಸುಖದಾಯಕನೆಂಬ ಜ್ಞಾನ ಅವರಿಗೆ ಸ್ಪಷ್ಟವಾಗಿರುವದಿಲ್ಲ. ಸುಖಕ್ಕಾಗಿ

ಅಧರ್ಮದಿಂದ ವರ್ತಿಸುವುದಕ್ಕೂ ಅವರು ಹಿಂದೆಗೆಯುವುದಿಲ್ಲ. ಆದರೂ ದುಃಖವು ಅತಿಹೆಚ್ಚಾದಾಗ, "ಸಂಕಟ ಬಂದಾಗ ವೆಂಕಟರಮಣ" ಎಂದಂತೆ ದೇವರಕಡೆಗೆ ಮನಸ್ಸು ತಿರುಗುವುದುಂಟು. ಅಂತಹ ಸುಜೀವಿಗಳಿಗೆ ಬೇಕಾಗಿರುವುದು ಉಪದೇಶ. ಅವರ ಉದ್ಧಾರಕ್ಕಾಗಿ ತೇರ್ಗಡೆಹೊಂದಿದ ಭಗವದ್ಭಕ್ತರು ಅಲ್ಲಲ್ಲಿ ನಿಗೂಢ ವಾಗಿರುತ್ತಾರೆ.)

**ತತ್ಸಾಧುವರ್ಯಾದಿಶಶರ್ಮವತ್ಮಸಂರಾಧಿತೋಭಗವಾನ್ಯೇನಪುಂಸಾಂ।**
**ಹೃದಿಸ್ಥಿತೋಯಚ್ಛತಿಭಕ್ತಿಪೂತೇಜ್ಞಾನಂ ಸ್ವಸತ್ತಾಧಿಗಮಂಪುರಾಣಂ॥೪॥**

ಸಾಧುವರ್ಯ = ಭಕ್ತವರೇಣ್ಯರಾದ ಮೈತ್ರೇಯರೇ; ತತ್ = ಸುಜನರಿಗೆ ಉಪದೇಶಮಾಡುವುದಕ್ಕಾಗಿಯೇ ನೀವು ಭಗವಂತನಿಂದ ಆದಿಷ್ಟರಾಗುವುದರಿಂದ; ಯೇನ = ಯಾವ ರೀತಿಯಿಂದ; ಪುಂಸಾಂ = ಸುಜೀವಿಗಳಿಗೆ; ಸಂರಾಧಿತಃ ಭಗವಾನ್ = ಭಕ್ತಿಯಿಂದ ಪೂಜಿತನಾದ ಭಗವಂತನು; ಹೃದಿಸ್ಥಿತಃ = ಹೃದಯಕಮಲದಲ್ಲಿಯೇ ಕಾಣಿಸಿಕೊಂಡು; ಪುರಾಣಂ = ಗುರುಪರಂಪರೆಯ ಉಪದೇಶದಿಂದಲೇ ಲಭಿಸಬಹುದಾದ; ಸ್ವಸತ್ತಾಧಿಗಮಂ = ಸ್ವತಂತ್ರನಾದ ತನ್ನ ಕಾರುಣ್ಯವನ್ನು ಕಾಣುವಂತಹ; ಜ್ಞಾನಂ = ಸ್ವರೂಪಜ್ಞಾನವನ್ನು; ಭಕ್ತಿಪೂತೇ = ಭಕ್ತಿಮಾರ್ಗಾನುಸರಣೆಯಿಂದ ಪರಿಶುದ್ಧರಾದವರಿಗೆ; ಯಚ್ಛತಿ = ನೀಡುವನೋ; (ಅಂತಹ) ಶರ್ಮ ವತ್ಮಂ = ನಿಜಸುಖಲಾಭದ ಮಾರ್ಗವನ್ನು; ಆದಿಶ = ಉಪದೇಶಿಸಿರಿ.

ಸೃಷ್ಟಿಗೆ ಪೂರ್ವದಲ್ಲಿ ತಮ್ಮನ್ನು ತಾವು ಅರಿಯದೆ ಮೂರ್ಛಿತರಂತೆ ಬಿದ್ದಿರುವ ಸುಜೀವಿಗಳನ್ನು ಎಚ್ಚರಗೊಳಿಸಿ, ಸೃಷ್ಟಿಯಲ್ಲಿ ತಂದು, ಸುಖದುಃಖಗಳನ್ನು ಉಣಿಸಿ, ಸುಖದ ಹಂಬಲವನ್ನುಂಟುಮಾಡಿ ಅದನ್ನು ನೀಡುವುದೇ ಭಗವಂತನ ಕಾರಣ್ಯಾತಿಶಯ. ನಿರ್ದುಃಖ ಸುಖ ಲಾಭವಾಗಬೇಕಾದರೆ ಭಗವಂತನಲ್ಲಿ ಭಕ್ತಿಯನ್ನು ಹೊಂದಬೇಕು. ಜ್ಞಾನಿಗಳಾದ ಭಕ್ತವರೇಣ್ಯರು ಪರಂಪರಾ ಉಪದೇಶದಿಂದ ಲಭ್ಯವಾದ ಭಕ್ತಿಮಾರ್ಗದ ಮರ್ಮಗಳನ್ನು ಉಪದೇಶಮಾಡಿದಲ್ಲದೆ ಭಕ್ತಿಯು ಸ್ಥಿರವಾಗುವುದಿಲ್ಲ; ಸಾರ್ಥಕವಾಗುವುದಿಲ್ಲ. ಭಕ್ತಿಯ ಪರಾಕಾಷ್ಠತೆಯು ಹೃದಯದಲ್ಲಿ ಬಿಂಬನ ವ್ಯಾಪಾರವನ್ನು ಕಂಡುಹಿಗ್ಗುವುದರಲ್ಲಿ ಪರ್ಯವಸಾನ ಹೊಂದುವುದು. ಇಂತಹ ಸಿದ್ಧಿಯು ಗುರೂಪದೇಶದಿಂದ ಮಾತ್ರ ಲಭ್ಯವಾಗುವುದು.)

**ಕರೋತಿ ಕರ್ಮಾಣಿ ಕೃತಾವತಾರೋಯಾನ್ಯಾತ್ಮತಂತ್ರೋಭಗವಾಂ**
**ಸ್ತ್ರ್ಯಧೀಶಃ ।**

**ಯಥಾಸಸರ್ಜಾಗ್ರಮಿದಂ ನಿರೀಹಃ ಸಂಸ್ಥಾಪ್ಯವೃತ್ತಿಂಜಗತೋವಿಧತ್ತೇ**
**||೫||**

ಆತ್ಮತಂತ್ರಃ = ಅನ್ಯಾಧೀನನಲ್ಲದೆ ಸ್ವತಂತ್ರನಾದ; ತ್ರ್ಯಧೀಶಃ = ತ್ರಿಗುಣಾತ್ಮಕವಾದ ಪ್ರಪಂಚದಲ್ಲಿ ತ್ರಿವಿಧ ಜೀವರನ್ನಿಟ್ಟು, ತ್ರಿಲೋಕಾಧಿಪತಿಯಾಗಿ, ತ್ರಿವಿಧಗತಿಗಳನ್ನು ನೀಡುವ, ವೈಕುಂಠಾದಿ ಮೂರುಸ್ಥಾನಗಳಿಗೆ ಅಧಿಪತಿಯಾದ; ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನು; ಕೃತಾವತಾರಃ = ಅಧರ್ಮವನ್ನು ಹಿಂಗಿಸಿ ಧರ್ಮವನ್ನು ಉದ್ಧರಿಸುವುದಕ್ಕಾಗಿ ನಾನಾವತಾರಗಳನ್ನೆತ್ತಿ; ಯಾನಿ = ಯಾವಯಾವ; ಕರ್ಮಾಣಿ = ಲೀಲಾಕಾರ್ಯಗಳನ್ನು; ಕರೋತಿ = ಮಾಡುವನು ನಿರೀಹಃ = ಯಾವ ಬಗೆಯ ಲಾಭದ ಅಪೇಕ್ಷೆಯೂ ಇಲ್ಲದವನಾದರೂ; ಇದಂ = ಈ ಜಗತ್ತನ್ನು; ಅಗ್ರೇ = ಮೊದಲು; ಯಥಾ = ಹೇಗೆ; ಸಸರ್ಜ = ಸೃಷ್ಟಿಮಾಡಿದನು; ಸಂಸ್ಥಾಪ್ಯ = ಸ್ಥಿರಗೊಳಿಸಿ; ಜಗತಃ ಪ್ರವೃತ್ತಂ = ಜಗತ್ತಿನ ನಡವಳಿಕೆಯನ್ನು; ವಿಧತ್ತೇ = ಕ್ರಮಗೊಳಿಸುತ್ತಾನೆ?

(ಸುಖಬೇಕು, ದುಃಖಬೇಡ ಎನ್ನುವ ಜೀವರು, ಸುಖಪ್ರದಾತನಾದ ಭಗವಂತನಲ್ಲಿ ಭಕ್ತಿಯನ್ನು ಹೊಂದಿ ಉದ್ಧೃತರಾಗಬೇಕಾದರೆ, ನಿರಪೇಕ್ಷನಾದ ಭಗವಂತ ಸೃಷ್ಟಿಯನ್ನೇಕೆ ಮಾಡುವನು ಹೇಗೆ ನಡೆಸುವನು ಎಂಬುದನ್ನು ತಿಳಿಯಬೇಕು. ಅದಕ್ಕಾಗಿ ವಿದುರರು ಇಂತಹ ಪ್ರಶ್ನೆಯನ್ನು ಎತ್ತಿರುವರು.)

**ಯಥಾಪುನಃಸ್ವೇಖ ಇದಂ ನಿವೇಶ್ಯ ಶೇತೇಗುಹಾಯಾಂ ಸನಿವೃತ್ತವೃತ್ತಿಃ।**
**ಯೋಗೇಶ್ವರಾಧೀಶ್ವರ ಏಕ ಏತದನುಪ್ರವಿಷ್ಟೋಬಹುಧಾ**
**ಯಥಾಸೀತ್ ||೬||**

ಸಃ = ಆ ಭಗವಂತನು; ಪುನಃ = ಸೃಷ್ಟಿಯ ಕಡೆಯಲ್ಲಿ; ಯಥಾ = ಹೇಗೆ; ಸ್ವೇ = ತನ್ನ; ಖೇ ಗುಹಾಯಾಂ = ಉದರವೆಂಬ ಆಕಾಶದಲ್ಲಿ; ಇದಂ = ಈ ಜಗತ್ತನ್ನು; ನಿವೇಶ್ಯ = ಇಟ್ಟುಕೊಂಡು; ನಿವೃತ್ತವೃತ್ತಿಃ = ವ್ಯಾಪಾರರಹಿತನಾಗಿ; ಶೇತೇ = ವಿಶ್ರಮಿಸುತ್ತಾನೆ; ಏಕಃ = ಒಬ್ಬನೇ ಆಗಿರುವ ತಾನು; ಯೋಗೇಶ್ವರ ಅಧೀಶ್ವರಃ = ಬಹುಸಮರ್ಥರಿಗೂ ಸಾಮರ್ಥ್ಯ ನೀಡುವವನಾಗಿ; ಯಥಾ = ಹೇಗೆ; ಏತತ್ = ಈ ಜಗತ್ತನ್ನು; ಅನುಪ್ರವಿಷ್ಟಃ = ತತ್ತದ್ರೀತಿಯಲ್ಲಿ ಪ್ರವೇಶಿಸಿದವನಾಗಿ; ಬಹುಧಾ ಆಸೀತ್ = ನಾನಾ ರೂಪನಾಮಗಳನ್ನು ಹೊಂದಿದನು?

(ಪ್ರಚಲಿತವಾದ ಅದ್ವೈತವನ್ನು ಸರಿಯೆಂದು ಹೇಳುವವರು ಈ ಶ್ಲೋಕದಲ್ಲಿ ಹೇಳಿರುವ ವಿಷಯಗಳನ್ನು ಚೆನ್ನಾಗಿ ಗಮನಿಸಬೇಕು. ಜಗತ್ ಸೃಷ್ಟ್ಯಾದಿ ಕಾರ್ಯಗಳು

ಪ್ರವಾಹದಂತೆ ಅನಾದ್ಯನಂತವಪಾದವು. ಪ್ರಳಯಕಾಲದಲ್ಲಿ ಜಗದ್ವಸ್ತುಗಳೂ, ಜಗತ್ತಿನಲ್ಲಿ ಹುಟ್ಟಿಬಂದ ಜೀವರೂ ಭಗವಂತನೊಡನೆ ಒಂದಾದ ಮಾತಿಗೆ ಅವಕಾಶವಿಲ್ಲ. ಜ್ಞಾನದಿಂದ ಮುಕ್ತರಾದ ಜೀವರೆನಿಸಿದ್ದ ಬ್ರಹ್ಮರು ಬ್ರಹ್ಮನೇ ಆದರೆಂದು ಹೇಳುವುದಾದರೆ, ಅವರು ಅಜ್ಞಾನ ಬಂಧನಕ್ಕೆ ಯಾವಾಗ, ಏಕೆ ಸಿಕ್ಕಿದರು, ಅಥವ ಬ್ರಹ್ಮನು ತಾನೇ ಬಂಧನದಲ್ಲಿ ಸಿಕ್ಕಿದಂತೆ ಯಾವಾಗ, ಏಕೆ ಪ್ರವೃತ್ತನಾದ ಎಂಬ ಪ್ರಶ್ನೆಯಾದರೂ ಉತ್ತರವನ್ನಪೇಕ್ಷಿಸುತ್ತದೆ. ಅನಾದಿ ಎಂಬ ಮಾತಿಗೆ ಅನಿರ್ದಿಷ್ಟ ಎಂಬ ಅರ್ಥವನ್ನು ಕಲ್ಪಿಸಿದರೂ, ನಿರ್ಗುಣನಾದವನು, ನಿತ್ಯಾನಂದ ಸ್ವರೂಪನಾದವನು ಏಕೆ ಕ್ರೀಡಾಸಕ್ತನಾದನೆಂಬ ಪ್ರಶ್ನೆ ಉಳಿದೇಉಳಿಯುತ್ತದೆ. ಅನಿರ್ವಚನೀಯನೆಂದೂ, ಕ್ರೀಡಾಸಕ್ತನೆಂದೂ ಒಂದೇ ಉಸಿರಿನಲ್ಲಿ ಹೇಳುವುದು ಸ್ವವಿರೋಧಿಯಾಗುತ್ತದೆ. ಆದುದರಿಂದ ಶ್ರೀ ಮನ್ಮಧ್ವಾಚಾರ್ಯರು ಶಾಸ್ತ್ರವಚನಗಳಿಂದಲೇ ವಿವರಿಸಿರುವ ಆಶ್ರಯ–ಆಶ್ರಯಿ ಭಾವವನ್ನೂ, ಸ್ವತಂತ್ರ ಅಸ್ವತಂತ್ರ ಲಕ್ಷಣವನ್ನೂ ಒಪ್ಪಲೇ ಬೇಕು.)

**ಕ್ರೀಡನ್ವಿಧತ್ತೇದ್ವಿಜ ಗೋಸುರಾಣಾಂ ಕ್ಷೇಮಾಯ ಕರ್ಮಾಣ್ಯವತಾರ ಭೇದೈಃ ।**
**ಮನೋನತೃಪ್ಯತ್ಯಪಿ ಶೃಣ್ವತಾಂ ನಃ ಸುಶ್ಲೋಕ ಮೌಳೇಶ್ಚರಿತಾಮೃತಾನಿ ॥೭॥**

ಕ್ರೀಡನ್ = ಜಗತ್ ಸೃಷ್ಟ್ಯಾದಿ ಕ್ರೀಡೆಯನ್ನು ಆಚರಿಸುತ್ತಾ; ಅವತಾರ ಭೇದೈಃ = ಬಗೆ ಬಗೆಯ ಅವತಾರಗಗಳನ್ನು ಮಾಡಿ; ದ್ವಿಜ ಗೋಸುರಾಣಾಂ = ಕರ್ಮನಿಷ್ಠರೂ, ಗೋಸದೃಶರೂ ಆದ ದೈವೀ ಸಂಪತ್ತಿನ ಜೀವರ; ಕ್ಷೇಮಾಯ = ಮಂಗಳ ಸಾಧನೆಗಾಗಿ; ಕರ್ಮಾಣಿ ವಿಧತ್ತೇ = ವಿವಿಧ ವ್ಯಾಪಾರಗಳನ್ನು ಶ್ರೀ ಹರಿಯು ಮಾಡುವನು; ಸುಶ್ಲೋಕಮೌಳೇಃ = ಕೀರ್ತಿ ಭಾಜನರಾದ ದೇವತೆಗಳಿಗೆ ಸಿರೋರತ್ನಪ್ರಾಯನಾದ ಭಗವಂತನ; ಚರಿತಾಮೃತಾನಿ = ಅಮೃತದಂತಹ ಲೀಲಾ ಪ್ರಸಂಗಗಳನ್ನು; ಶೃಣ್ವತಾಂ ಅಪಿ = ಎಷ್ಟು ಕೇಳಿದರೂ; ನಃ ಮನಃ = ನಮ್ಮ ಮನಸ್ಸು; ನತೃಪ್ಯತಿ = ತೃಪ್ತಿ ಹೊಂದುವುದಿಲ್ಲ.

(ಜಗತ್ ಸೃಷ್ಟ್ಯಾದಿಗಳು ಭಗವಂತನ ಕ್ರೀಡೆ ಎಂಬ ಉತ್ತರವನ್ನು ತಾವೇ ಕೊಡುತ್ತಿದ್ದರೂ, ವಿದುರರರು ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಏಕೆ ಪ್ರಶ್ನೆ ಮಾಡಿದರು ಎನ್ನಬಹುದು. ಆದರೆ, ಆ ಕ್ರೀಡೇಯ ರಹಸ್ಯವನ್ನು ಮೈತ್ರೇಯ ರಂತಹ ಅನುಭವಿಗಳಿಂದ ಚೆನ್ನಾಗಿ ತಿಳಿಯಬೇಕೆಂಬುದು ಪ್ರಶ್ನೆಯ ಉದ್ದೇಶ. ಶಾಸ್ತ್ರಾಧ್ಯಯನ ಮತ್ತು ಸತ್ಕರ್ಮಾಚರಣೆಗಳು ಹೃದಯ ಕಮಲದಲ್ಲಿ ಭಗವಂತನನ್ನು ಅಪರೋಕ್ಷೀಕರಿಸಿಕೊಳ್ಳಲು ಸಾಧಕವಾಗುತ್ತವೆ. ಆದರೆ, ನಿರಂತರ ಬಿಂಬ ವ್ಯಾಪಾರ

ಸ್ಮರಣೆ ದರ್ಶನಗಳು ಸಿದ್ಧಸಸಬೇಕಾದರೆ ಮೈಮರೆಸುವಂತಹ ಭಗವಂತನ ದಿವ್ಯ ಕಥೆಗಳನ್ನು ಕೇಳುತ್ತಿರಬೇಕು, ಹೇಳುತ್ತಿರಬೇಕು ಮತ್ತು ಸತ್ಸಹವಾಸದಲ್ಲಿ ಕಾಲಯಾಪನೆ ಮಾಡಬೇಕು.)

**ಯೈಸ್ತತ್ವ ಭೇದೈರಧಿಲೊಕ ನಾಥೋ ಲೋಕಾನ್ ಸಮಸ್ತಾನ್ ಸಹ ಲೋಕ ಪಾಲಾನ್।**
**ಅಚೀಕ್ಲೃಪದ್ಯತ್ರಹಿ ಸರ್ವಸತ್ವ ನಿಕಾಯ ಭೇದೋಧಿಕೃತಃ ಪ್ರತೀಕಃ ॥೮॥**

ಯತ್ರ = ಯಾವ ಈ ವಿಶ್ವದಲ್ಲಿ; ಅಧಿಕೃತಃ = ಯೋಗ್ಯತಾಭೇದಗಳಿಗೆ ತಕ್ಕಂತೆ; ಸರ್ವ ಸತ್ವನಿಕಾಯ ಭೇದಃ = ಭಿನ್ನವಿಭಿನ್ನಗಳಾದ ಎಲ್ಲಾ ಪ್ರಾಣಿ ವರ್ಗಗಳ ವಿಚಾರವು; ಪ್ರತೀತಃ = ಪ್ರಮಾಣಗಳಿಂದ ತಿಳಿಯಲ್ಪಟ್ಟಿದೆಯೋ; ಅಂತಹ; ಸಮಸ್ತಲೋಕಾನ್ = ಬ್ರಹ್ಮಾಂಡಾದಿ ದೇಶಗಳನ್ನು; ಸಹ ಲೋಕ ಪಾಲಾನ್ = ಆಯಾ ಲೋಕಗಳ ಅಧಿಪತಿಗಳ ಸಹಿತವಾಗಿ; ಅಧಿ ಲೋಕನಾಥಃ = ಸಕಲ ಲೋಕಗಳಿಗೂ ಸ್ವಮಿಯಾದ ಶ್ರೀಹರಿಯು; ಯೈಃ ತತ್ವಭೇದೈಃ = ಯಾವ ಯಾವ ಬೇರೆ ಬೇರೆ ತತ್ವಗಳ ಸಮ್ಮೇಳನದಿಂದ; ಅಚೀಕ್ಲೃಪತ್ = ಸೃಷ್ಟಿ ಮಾಡಿದನು!

(ಸೃಷ್ಟಿಯು ಮಹದಾದಿ ತತ್ವಗಳಿಂದ ಆಗಿರುವುದರಿಂದ, ಮಹತ್ತತ್ವಾಭಿ ಮಾನಿಯು ಬ್ರಹ್ಮನಾದುದರಿಂದ, ಸೃಷ್ಟಿ ಮಾಡಿದವನು ಶ್ರೀಹರಿಯೇ ಎಂಬುದು ನಿಶ್ಚಿತವಾಯಿತು. ತತ್ವಗಳು, ಅಧಿಪತಿಗಳು, ಜೀವಿಗಳ ಭೇದಗಳು ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಮತ್ತು ಇವುಗಳನ್ನಲ್ಲಾ ಸೃಷ್ಟಿಯಲ್ಲಿ ತಂದವನು ಶ್ರೀಹರಿಯೆಂದು ಹೇಳಿರುವುದರಿಂದ, ಈಶ ಜೀವ ಭೇದ, ಈಶ ಜಡಭೇದ, ಜೀವ ಜೀವ ಭೇದ, ಜೀವ ಜಡಭೇದ ಮತ್ತು ಜಡ ಜಡ ಭೇದವೆಂಬ ಪಂಚ ಭೇದವು ಸೂಚಿಸಲ್ಪಟ್ಟಿದೆ).

**ಯೇನ ಪ್ರಜಾನಾಮುತ ಆತ್ಮಕರ್ಮರೂಪಾಭಿಧಾನೇನ ಭಿದಾಂವ್ಯಧತ್ತ।**
**ನಾರಾಯಣೋ ವಿಶ್ವ ಸೃಗಾತ್ಮಯೋನಿ ರೇತಚ್ಚನೋವರ್ಣಯ ವಿಪ್ರವರ್ಯ ॥೯॥**

ಆತ್ಮಯೋನಿಃ = ತನ್ನಿಂದ ತಾನೇ ಸೃಷ್ಟಿಯಾದಂತೆ ಪ್ರಕಟವಾಗುವ ಮತ್ತು ಆತ್ಮ ಶಬ್ದವಾಚ್ಯನಾದ ಬ್ರಹ್ಮನ ಜನ್ಮಕ್ಕೆ ಕಾರಣನಾದ; ವಿಶ್ವಸೃಕ್ = ವಿಶ್ವವನ್ನು ಸೃಷ್ಟಿಸುವ; ನಾರಾಯಣಃ = ಶ್ರೀಮನ್ನಾರಾಯಣನು; ಯೇನ = ಯಾವ ಮೂಲ

ಕಾರಣಗಳಿಂದ ಕಾಣುವ ರೂಪಗಳೂ, ವ್ಯಕ್ತಿಗಳ ಮತ್ತು ವಸ್ತುಗಳ ಹೆಸರುಗಳೂ ಇರುವಂತೆ; ವ್ಯಧತ್ತ = ಸೃಷ್ಟಿ ಮಾಡಿದನು; ಉತ = ನಿಶ್ಚಯವಾಗುವ ರೀತಿಯಲ್ಲಿ; ಏತಚ್ಚ = ಈ ಎಲ್ಲವನ್ನೂ; ವಿಪ್ರವರ್ಯ = ಜ್ಞಾನಿವರೇಣ್ಯರಾದ ಮೈತ್ರೇಯರೇ; ನಃ =ನಮಗೆ; ವರ್ಣಯ = ವಿವರವಾಗಿ ಹೇಳಿರಿ.

(ಪ್ರಪಂಚದಲ್ಲಿ ಕಂಡು ಬರುವ ಜೀವ ಜಡ ವೈವಿಧ್ಯಗಳಿಗೆ ಕಾರಣವೇನು ಎಂಬುದು ಪ್ರಶ್ನೆಯ ಅಭಿಪ್ರಾಯ).

ಪರಾವರೇಷಾಂ ಭಗವನ್ಕೃತಾನಿ ಶ್ರುತಾನಿ ಮೇ ವ್ಯಾಸ
ಮುಖಾದಭೀಕ್ಷ್ಣಂ
ನತೃಪ್ನುಮಃ ಕರ್ಣಸುಖಾವಹಾನಾಂ ತೇಷಾಮೃತೇ
ಕೃಷ್ಣಕಥಾಮೃತೌಘಾತ್ ॥೧೦॥

ಭಗವನ್ = ಮಹಾನುಭಾವರೇ; ಪರಾವರೇಷಾಂ = ಭಗವದ್ಭಕ್ತಶಿಖಾಮಣಿಗಳಾದ ಬ್ರಹ್ಮಾದಿ ಮಾನವಾಂತ ಜೀವಿಗಳ; ಕೃತಾನಿ = ಭಗವಂತನಲ್ಲಿ ನಿಷ್ಠೆಯಿಂದ ಆಚರಿಸಲ್ಪಟ್ಟ ವಿಷಯಗಳನ್ನು; ವ್ಯಾಸ ಮುಖಾತ್ = ವೇದವ್ಯಾಸದೇವರ ಬಾಯಿಂದ; ಅಭೀಕ್ಷ್ಣಂ = ಅನೇಕಬಾರಿ; ಮೇ = ನನ್ನಿಂದ; ಶ್ರುತಂ ಶ್ರವಣಮಾಡಲ್ಪಟ್ಟಿದೆ; ಕರ್ಣಸುಖಾವಹಾ = ಶ್ರವಣದಿಂದ ಸುಖವನ್ನುಂಟು ಮಾಡುವ; ತೇಷಾಂ = ಉಕ್ತವಾದ ಭಗವದ್ಭಕ್ತರ ಕಥೆಗಳಲ್ಲಿ; ಕೃಷ್ಣಕಥಾಮೃತ ಓಘಾತ್ = ಶ್ರೀ ಕೃಷ್ಣನ ಅನುಗ್ರಹ ರೂಪವಾದ ಕಥಾಮೃತ ಪ್ರವಾಹ ವಿರುವುದರಿಂದ; ನತೃಪ್ನುಮಃ = ನಮಗೆ ಸಾಕೆನಿಸುವುದಿಲ್ಲ; ಇನ್ನೂ ಬೇಕು, ಮತ್ತೂ ಬೇಕು ಎಂಬ ಉತ್ಸುಕತೆಯನ್ನೇ ಕೆರಳಿಸುವುವು.

(ಕೇವಲ ಜಗದ್ವಿಚಾರವನ್ನಾಗಲೀ, ಈ ಜಗತ್ತಿನ ಜೀವರ ಚರಿತ್ರೆಗಳನ್ನಾಗಲೀ ತಿಳಿಯುವುದರಿಂದ ನಿಜವಾಗಿ ಯಾವ ಪ್ರಯೋಜನವೂ ಇಲ್ಲ. ಆದರೆ, ಅವುಗಳಲ್ಲಿ ಭಗವಂತನ ವಿಚಾರವು ಹಾಸು ಹೊಕ್ಕಾಗಿ ತುಂಬಿಕೊಂಡಾಗ ಅವು ಆನಂದದಾಯಕಗಳಾಗಿ ಮುಕ್ತಿಗೆ ಕಾರಣವಾಗುವುವು)

ಕಸ್ತೃಪ್ನುಯಾತ್ತೀರ್ಥಪದೋಭಿಧಾನಾತ್ಸತ್ರೇಷುವಃ ಸೂರಿಭಿರೀಡ್ಯ
ಮಾನಾತ್ ।
ಯಃ ಕರ್ಣನಾಡೀಂ ಪುರುಷಸ್ಯಯಾಂತೋ ಭಯಪ್ರದಾಂ ಗೇಹರತಿಂ
ಛಿನತ್ತಿ ॥೧೧॥

ಯಃ = ಯಾವ ಶ್ರೀಹರಿಯು; ಪುರುಷಸ್ಯ = ಮಾನವನ; ಕರ್ಣನಾಡೀಂ ಯಾತಃ = ಕಿವಿಯ ಕುಹರದ ಮೂಲಕ ಪ್ರವೇಶ ಮಾಡಿ; ಭಯಪ್ರದಾಂ = ನಾನಾ ಬಗೆಯಲ್ಲಿ ಭಯವುಂಟುಮಾಡುವ; ಗೇಹರತಿಂ = ಮನೆ, ಮಕ್ಕಳು, ಪತ್ನಿ ಮುಂತಾದ ವಿಷಯಗಳಲ್ಲಿ; ಛಿನತ್ತಿ = ಕತ್ತರಿಸಿ ಹಾಕುತ್ತದೆ. ವಃ = ನಿಮ್ಮಂತಹವರು ನಡೆಸುವ; ಸತ್ರೇಷು = ಜ್ಞಾನಯಜ್ಞ ಸಮಾರಂಭಗಳಲ್ಲಿ; ಸೂರಿಭಿಃ = ಜ್ಞಾನಿಗಳಾದ ಸೂತಪೌರಾಣಿಕರಂಥವರಿಂದ; ಈಢ್ಯಮಾನಾತ್ = ಸ್ತುತಿಸಲ್ಪಡುವಂತಹ; ತೀರ್ಥ ಪದಃ ಅಭಿಧಾನಾತ್ = ಪವಿತ್ರ ಪಾದಗಳುಳ್ಳವನ ಗುಣಗಾನ ರಸಾಯನದಿಂದ; ಕಃ = ಯಾವ ಭಕ್ತನು ತನೇ; ತೃಪ್ನುಯಾತ್ = ತೃಪ್ತಿಹೊಂದಿ ಸಾಕೆಂದು ವಿರಮಿಸಿಯಾನು?

(ವೈರಾಗ್ಯವು ಮುಕ್ತಿಗೆ ಅತ್ಯಾವಶ್ಯಕ. ಶ್ರೀ ಕೃಷ್ಣಕಥಾಮೃತಪಾನದಿಂದ ಅದು ಲಭಿಸುವುದು. ಸಂಸಾರಾವಸ್ಥೆಯಲ್ಲಿ ದೊರೆಯುವ, ದುಃಖದಿಂದೊಡಗೂಡಿದ ಸುಖವು ಅಪೇಕ್ಷಣೀಯವಲ್ಲವೆಂಬ ವೈರಾಗ್ಯಬುದ್ಧಿಯು ಶ್ರೀಹರಿಯ ಗುಣಗಾನ ಶ್ರವಣದಿಂದ ಉಂಟಾಗುವುದು.)

**ಮುನಿರ್ವಿವಕ್ಷುರ್ಭಗವದ್ಗುಣಾನಾಂ ಸಖಾಪಿತೇಭಾರತಮಾಹ ಕೃಷ್ಣಃ।**
**ಯಸ್ಮಿನ್ನೃಣಾಂ ಗ್ರಾಮ್ಯ ಸುಖಾನುವಾದ್ಯೈರ್ಮತಿರ್ಗೃಹೀತಾ ನಹರೇಃ**
**ಕಥಾಯಾಂ ॥೧೨॥**

ಭಗವದ್ಗುಣಾನಾಂ ವಿವಕ್ಷುಃ = ಭಗವಂತನ ಗುಣಗಾನ ಮಾಡಲಿಚ್ಛಿಸಿದ; ತೇಸಖಾ = ನಿಮ್ಮ ಮಿತ್ರರಾದ; ಕೃಷ್ಣಃ = ವಾಸಿಷ್ಟ ಕೃಷ್ಣರು (ವೇದವ್ಯಾಸರು); ಮುನಿಃ ಅಪಿ = ಸರ್ವಜ್ಞರೇ ಆದರೂ; ಗ್ರಾಮ್ಯ ಸುಖಾನುವಾದ್ಯೈಃ = ಲೌಕಿಕ ಸುಖಲಾಭಗಳ ವರ್ಣನೆ ಇರುವುದರಿಂದ; ನೃಣಾಂಮತಿಃ = ಜನ ಸಾಮಾನ್ಯರ ಬುದ್ಧಿಯು; ಹರೇಃ ಕಥಾಯಾಂ = ಶ್ರೀಹರಿಯ ಮಹಿಮಾ ವರ್ಣನೆಯಲ್ಲಿ; ನಗೃಹೀತಾ = ಹಿಡಿದು ನಿಲ್ಲುವುದಿಲ್ಲವೋ. ಅಂತಹ ಭಾರತಂ = ಮಹಾಭಾರತದ ಕಥೆಯನ್ನು; ಆಹ = ಹೇಳಿದರು.

(ಇದು ಜನಸಾಮಾನ್ಯರಿಗೆ ಅನ್ವಯಿಸುವ ಮಾತು. ಶ್ರದ್ಧೆಯಿಂದ ಮಹಾಭಾರತದ ಕಥೆಯನ್ನು ಶ್ರವಣ ಮಾಡುವ ಭಕ್ತಜನರ ಬುದ್ಧಿಯು ಶ್ರೀಕೃಷ್ಣನ ಮಹಿಮಾವರ್ಣನೆಯಲ್ಲಿ ಆಸಕ್ತವಾಗುವುದೇ ಹೊರತು ಇತರ ಕಥಾಭಾಗಗಳಲ್ಲಲ್ಲ ವೆಂಬುದನ್ನು ಬಲ್ಲವರು ಸರ್ವಜ್ಞರಾದ ವೇದವ್ಯಾಸದೇವರು. ಆದುದರಿಂದ ಮಹಾಭಾರತವನ್ನವರು ಹೇಳಿದರು. "ಭಗವದ್ಗುಣಾನಾಂ ವಿವಕ್ಷುಃ" ಎಂಬ ಮಾತು ಇಲ್ಲಿ ಮುಖ್ಯವಾದುದು, ಅದರಂತೆ "ಮುನಿಃ" ಎಂಬುದೂ ಕೂಡ. ಜ್ಞಾನ ಭಕ್ತಿ ವೈರಾಗ್ಯ ಸಂಪಾದನೆಗೆ ಮಹಾಭಾರತವೇ ಸರ್ವಶ್ರೇಷ್ಠವಾದ ಗ್ರಂಥವೆಂದು ಹೇಳುವ

ಪ್ರಮಾಣವಿದೆ — "ಭಾರತಾನ್ನಪರಂ ವಿಷ್ಣೋರ್ಮಹಿಮಾವಾಚಕಂಕ್ವಚಿತ್ । ಭಾರತಾನ್ನ ವಿರಾಗಾಯ ಭಾರತಾನ್ನ ವಿಮುಕ್ತಯೇ॥" ಮುಂದಿನ ಶ್ಲೋಕದಲ್ಲಿ ಈ ಅಂಶವು ಸ್ಪಷ್ಟವಾಗಿದೆ.)

**ಸಾಶ್ರದ್ಧಮಾನಸ್ಯ ವಿವರ್ಧಮಾನಾ ವಿರಕ್ತಿಮನ್ಯತ್ರ ಕರೋತಿಪುಂಸಃ।**
**ಹರೇಃ ಸದಾನುಸ್ಮೃತಿ ನಿರ್ವೃತಸ್ಯ ಸಮಸ್ತದುಃಖಾತ್ಯಯಮಾಶುಧತ್ತೇ**
**॥೧೩॥**

ಶ್ರದ್ಧಮಾನಸ್ಯ = ಶ್ರದ್ಧೆಯಿಂದ ಮಹಾಭಾರತವನ್ನು ಶ್ರವಣಮಾಡುವ; ಪುಂಸಃ = ಪುರುಷನ; ವಿವರ್ಧಮಾನಾ = ವಿಕಾಸಹೊಂದುವ; ಸಾ = ಆ ಬುದ್ಧಿಯು; ಅನ್ಯತ್ರ = ಭಗವದ್ವಿಷಯವಲ್ಲದ ಬೇರೆಯವುಗಳಲ್ಲಿ; ವಿರಕ್ತಿಂ = ಜಿಹಾಸೆಯನ್ನು; ಕರೋತಿ = ಉಂಟುಮಾಡುತ್ತದೆ; ಸದಾ = ಯಾವಾಗಲೂ; ಹರೇಃ ಅನುಸ್ಮೃತಿ ನಿರ್ವೃತಸ್ಯ = ಎಡಬಿಡದೆ ಶ್ರೀಹರಿಯ ಸ್ಮರಣೆಯಿಂದ; ಸುಖಿಸುವವನ ವಿಷಯದಲ್ಲಿ; ಆಶು = ಶೀಘ್ರವಾಗಿ; ಸಮಸ್ತ ದುಃಖಾತ್ಯಯಂ = ಸಕಲ ವಿಧಗಳಾದ ದುಃಖಗಳ ಅಂತ್ಯವನ್ನು; ಧತ್ತೇ = ಉಂಟುಮಾಡುತ್ತದೆ.

(ಮಹಾಭಾರತವನ್ನು ಶ್ರದ್ಧೆಯಿಂದ ಅಭ್ಯಾಸ ಮಾಡುವವರಿಗೆ ವೈರಾಗ್ಯ, ಭಕ್ತಿ, ಭಗವದಪರೋಕ್ಷದಿಂದ ಒದಗುವ ಸಂತಸ ಮತ್ತು ದುಃಖಸ್ಪರ್ಶವೇ ಇಲ್ಲದ ಸಮಾಧಿಸ್ಥಿತಿ ಇವುಗಳು ಬೇಗನೆ ಸಿದ್ಧಿಸುತ್ತವೆ.)

**ತಾಂಶ್ಪೋಚ್ಯ ಶೋಚ್ಯಾನವಿದೋನು ಶೋಚೇಹರೇಃ ಕಥಾಯಾಂ**
**ವಿಮುಖಾನಘೇನ ।**
**ಕ್ಷಿಣೋತಿ ದೇವೋಽನಿಮಿಷಸ್ತು ತೇಷಾಮಾಯುರ್ವೃಥಾ**
**ವಾದಗತಿಸ್ಮೃತೀನಾಂ ॥೧೪॥**

ಹರೇಃಕಥಾಯಾಂ = ಶ್ರೀಹರಿ ಕಥಾಶ್ರವಣದ ವಿಷಯದಲ್ಲಿ; ಅಘೇನ = ವ್ಯಸನಗಳ ನಿಮಿತ್ತವಾಗಿ; ವಿಮುಖಾನ್ = ಶ್ರದ್ಧೆಯಿಲ್ಲದ; ಶೋಚ್ಯಶೋಚ್ಯಾನ್ = ದೀನರಲ್ಲಿ ದೀನರಾದ; ತಾನ್ ಅವಿದಃ = ಆ ಅಜ್ಞಜನರನ್ನು ಕುರಿತು; ಅನುಶೋಚೇ = ಚಿಂತಿಸುತ್ತೇನೆ; ವೃಥಾವಾದಗತಿಸ್ಮೃತೀನಾಂ = ವ್ಯರ್ಥವಾದ ಚರ್ಚೆ, ಆಚರಣೆ, ಭಾವನೆಗಳಿಂದ ಕೂಡಿದ; ತೇಷಾಂ = ಅಂತಹ ಅಜ್ಞಜನರ; ಆಯುಃ = ಆಯುಷ್ಯವನ್ನು; ಅನಿಮಿಷಃ ದೇವಃ = ಕಾಲಾಖ್ಯ ಪರಮಾತ್ಮನು; ವೃಥಾಕ್ಷಿಣೋತಿ = ವ್ಯರ್ಥವಾಗಿಯೇ ಕಳೆದು ಬಿಡುತ್ತಾನೆ.

(ದುರ್ಗತಿ ಸದ್ಗತಿಗಳಿಗೆ ಜನರ ಸ್ವಭಾವ ಮತ್ತು ಆಚರಣೆಗಳೇ ಕಾರಣ. ಅವುಗಳಿಗನುಸಾರವಾಗಿ ಗತಿಪ್ರದನಾದವನು ನಿಷ್ಪಕ್ಷಪಾತಿಯಾದ ಪರಮಾತ್ಮ ಎಂಬುದು ಇಲ್ಲಿ ಸ್ಪಷ್ಟವಾಗಿದೆ. ಶ್ರದ್ಧೆಯನ್ನು ಕೊಡುವವನೂ, ಬಿಡುವವನೂ ಪರಮಾತ್ಮನೇ ಅಲ್ಲವೆ ಎಂದರೆ, ಜೀವರ ಸ್ವರೂಪಗಳಲ್ಲಿ ನಿಂತು ಹೇಳಿದ ಮಾತನ್ನು ಕೇಳಿ ಅದರಂತೆ ಆಚರಿಸುವ, ಅಥವ ಬಿಡುವ ವಿಷಯವು ಜೀವರ ಸ್ವಭಾವಾನುಮತಿಯಿಂದ ಎಂಬುದು ಆಳವಾಗಿ ಆಲೋಚಿಸಿ ಗ್ರಹಿಸಬೇಕಾದ ಇನ್ನೊಂದು ಉತ್ತರ.

ಭಗವಂತನ ವಿಷಯದಲ್ಲಿ ಮನಸ್ಸು ನಿಲ್ಲದಿರುವುದಕ್ಕೆ ನಾನಾ ಬಗೆಯ ವ್ಯಸನಗಳು (ದುಷ್ಟಅಪೇಕ್ಷೆಗಳು) ಕಾರಣ; ಅವು ಕರ್ಮನಿಮಿತ್ತವಾದುವು. ಕರ್ಮಗಳನ್ನೆಬ್ಬಿಸಿ, ಕಳೆದು, ಉಪಕರಿಸುವುದು ಭಗವಂತನ ಕಾರುಣ್ಯ.)

**ತದಸ್ಯ ಕಾಷಾರವ ಶರ್ಮದಾತುರ್ಹರೇಃ ಕಥಾಮೇವಕಥಾಸುಸಾರಂ।**
**ಉದ್ಧೃತ್ಯಪುಷ್ಪೇಭ್ಯ ಇವಾರ್ತ ಬಂಧೋ ಶಿವಾಯನಃ ಕೀರ್ತಯ**
**ತೀರ್ಥಕೀರ್ತೇಃ ॥೧೫॥**

ತತ್ = ಹರಿಕಥಾ ವಿಮುಖರಾದವರ ಆಯುಷ್ಯವು ವ್ಯರ್ಥವಾದುದರಿಂದ; ಆರ್ತಬಂಧೋ = ಭಕ್ತ್ಯರ್ಥವಾಗಿ ಬಳಲುವವರಿಗೆ ಪ್ರಿಯರಾದ; ಕೌಷಾರವ = ಮೈತ್ರೇಯರೇ; ಪುಷ್ಪೇಭ್ಯಃ ಇವ = ದುಂಬಿಗಳು ಪುಷ್ಪಗಳಿಂದ ಮಧುವನ್ನು ಸಂಗ್ರಹಿಸುವಂತೆ; ಉದ್ಧೃತ್ಯ = ಭಾರತಮಹಾಸರೋವರದ ಪುಷ್ಪಗಳಿಂದ ಸಾರವನ್ನು ತೆಗೆದು ಸಂಗ್ರಹಿಸಿ; ತೀರ್ಥಕೀರ್ತೇಃ = ಪವಿತ್ರ ಚರಿತ್ರನಾದ; ಶರ್ಮದಾತುಃ = ಮೋಕ್ಷಸುಖ ಪ್ರದನಾದ; ಹರೇಃ = ಶ್ರೀಹರಿಯ; ಕಥಾಸುಸಾರಂ = ಎಲ್ಲಾ ಬಗೆಯ ಕಥೆಗಳಲ್ಲಿಯೂ ಸಾರಭೂತವಾಗಿ ತುಂಬಿಕೊಂಡಿರುವ; ಕಥಾಮ್ಏವ = ಮಹಿಮಾನುವರ್ಣನೆಯನ್ನೇ; ನಃ = ನಮ್ಮ; ಶಿವಾಯ = ಒಳಿತಿಗಾಗಿ; ಕಥಯ = ಹೇಳಿರಿ.

(ಈ ಹೇಳಿ ಕೇಳುವ ಸಂದರ್ಭವು ಜೀವರಲ್ಲಿ ತಾರತಮ್ಯವನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಪೂರ್ಣ ಸರ್ವಜ್ಞರು ಯಾರೂ ಅಲ್ಲದಿದ್ದರೂ, ಒಬ್ಬರಿಗಿಂತ ಒಬ್ಬರು ಹೆಚ್ಚಾಗಿ ತಿಳಿದವರು, ತಿಳಿಯುವಂತೆ ಹೇಳಬಲ್ಲವರು ಎಂಬುದು ಇದರಿಂದ ವ್ಯಕ್ತವಾಗಿದೆ. ಅಲ್ಲದೆ, ಒಬ್ಬೊಬ್ಬರಿಂದ ಕೇಳುವಾಗಲೂ, ಒಂದೊಂದು ಹೊಸ ವಿಷಯವಾಗಲೀ, ಹೊಸ ರೀತಿಯ ವಿವರಣೆಯಾಗಲೀ ದೊರೆಯುವುದೆಂಬುದೂ ಇಲ್ಲಿ ಧ್ವನಿತವಾಗಿದೆ. ಆದುದರಿಂದಲೇ, ವಿದುರರಂತಹ ಪ್ರಾಜ್ಞರು ಮೈತ್ರೇಯರಂತಹ ಜ್ಞಾನಿಬಂಧುಗಳನ್ನು ಗುರೂಪಸತ್ತಿಯಕ್ರಮದಿಂದ ಕೇಳಿ ತಿಳಿಯಲಿಚ್ಛಿಸಿದ್ದಾರೆ.)

**ಸವಿಶ್ವ ಜನ್ಮ ಸ್ಥಿತಿ ಸಂಯಮಾರ್ಥೇಕೃತಾವತಾರಃ ಪ್ರಗೃಹೀತ ಶಕ್ತಿಃ ।**
**ಚಕಾರಕರ್ಮಾಣ್ಯತಿ ಪೂರುಷಾಣಿಯಾನೀಶ್ವರಃ ಕೀರ್ತಯ ತಾನಿ ಮಹ್ಯಂ ॥೧೬॥**

ಸಃ ಈಶ್ವರಃ = ಬ್ರಹ್ಮರುದ್ರಾದಿಗಳಿಗೆ ಒಡೆಯನಾದ ಆಶ್ರೀ ಹರಿಯು; ವಿಶ್ವ ಜನ್ಮಸ್ಥಿತಿ ಸಂಯಮಾರ್ಥೇ = ಜಗತ್ತಿನ ಸೃಷ್ಟಿಸ್ಥಿತಿ–ಸಂಹಾರಕಾರ್ಯಗಳಿಗಾಗಿ; ಕೃತ ಅವತಾರಃ = ತನ್ನ ವಾಸುದೇವಾದಿ ರೂಪರೂಪಾಂತರಗಳನ್ನು ಪ್ರಕಟಿಸಿದವನು; ಪ್ರಗೃಹೀತಶಕ್ತಿಃ = ತನ್ನ ಸಾಮರ್ಥ್ಯವನ್ನು ಮಾಯಾಶಕ್ತಿಯಲ್ಲಿ ಸಮಾವೇಶಗೊಳಿಸಿದವನು; ಯಾನಿ = ಯಾವಯಾವ; ಅತಿಪೂರುಷಾಣಿ = ಬ್ರಹ್ಮಾದಿ ಪುರುಷರಿಗೆ ಅಸಾಧ್ಯವಾದಂತಹ; ಕರ್ಮಾಣಿ = ಲೀಲಾಕಾರ್ಯಗಳನ್ನು; ಚಕಾರ ಮಾಡಿದನೋ; ತಾನಿ = ಅವುಗಳನ್ನು; ಮಹ್ಯಂ = ನನಗೆ; ಕೀರ್ತಯ = ಹೇಳಿರಿ.

(ಭಗವಂತನ ಗುಣಾತಿಶಯಗಳನ್ನು ಪಟ್ಟಿಮಾಡಿ ಹೇಳುವುದು ಒಂದು ಕ್ರಮವಾದರೆ, ಅವನ ಲೀಲಾಕಾರ್ಯಗಳಲ್ಲಿ ಆ ಗುಣಗಳ ಪರಿಚಯಮಾಡಿಸುವುದು ಹೆಚ್ಚು ಪರಿಣಾಮಕಾರಿಯಾದುದು. ಆದುದರಿಂದಲೇ ಮಕ್ಕಳಿಗೂ ದೊಡ್ಡವರಿಗೂ ಕಥೆಗಳಲ್ಲಿ ಹೆಚ್ಚು ಆಸಕ್ತಿ. ಅಂತಹ ಆಸಕ್ತಿಯನ್ನು ತಣಿಸುವ–ಸಾಮರ್ಥ್ಯವು ಭಾರತ, ಭಾಗವತ ಕಥೆಗಳಲ್ಲಿದೆ.

ಭಗವಂತನ ಸೃಷ್ಟ್ಯಾದಿ ಕಾರ್ಯಗಳೂ, ಅವತಾರಲೀಲೆಗಳೂ ಜಗತ್ತಿನಲ್ಲಿ ಜನ್ಮ ಪಡೆದುಬರುವ ಜೀವರಿಗಾಗಿಯೇ ಹೊರತು ತಾನು ಆಟವಾಡಬೇಕೆಂಬ ಬಯಕೆಯು ಭಗವಂತನಿಗಿಲ್ಲವೆಂಬುದು ಇಲ್ಲಿ ತಿಳಿಯಬರುತ್ತದೆ. ಶಕ್ತಿ ಗ್ರಹಣವೆಂಬುದು ಭಗವಂತನ ಸಾಮರ್ಥ್ಯ ಪ್ರಕಟಣೆಯೂ ಹೌದು; ಆ ಮಹಾನುಭಾವನ ಸಹಚಾರಿಣಿಯಾದ, ಶಕ್ತಿ ಸ್ವರೂಪಿಣಿಯಾದ ಜಗನ್ಮಾತೆಯ ಶಕ್ತಿಯ ಪ್ರಚೋದನೆಯೂ ಹೌದು. ಹಾಗೆಮಾಡುವುದು ಶಕ್ತಿಯ ಪ್ರಯೋಜನಕ್ಕಲ್ಲ; ಲಕ್ಷ್ಮೀದೇವಿಗೆ ಸಂತಸವನ್ನುಂಟುಮಾಡುವುದಕ್ಕಾಗಿ. "ಇದು ತನಗೆ ಲೀಲೆ, ಮಹಲಕ್ಷ್ಮಿಗೆ ಮಹದೈಶ್ವರ್ಯದಾಸ್ಪದ"ವೆಂದು ಶ್ರೀವಾದಿರಾಜ ಗುರುವರೇಣ್ಯರು ತಮ್ಮ ವೈಕುಂಠವರ್ಣನೆಯಲ್ಲಿ ಈ ಅರ್ಥವನ್ನು ಸ್ಪಷ್ಟಗೊಳಿಸಿರುವರು. ಸೃಷ್ಟಿ ಸ್ಥಿತಿ ಸಂಹಾರ ಕಾರ್ಯಗಳೆಲ್ಲವೂ ಒಬ್ಬ ಜಗದೊಡೆಯನಿಂದಲೇ ಆಗುವುದು; ಸೃಷ್ಟಿಯಲ್ಲಿ ಬ್ರಹ್ಮನೂ, ಸಂಹಾರಕಾರ್ಯದಲ್ಲಿ ರುದ್ರನೂ ಭಗವಂತನ ಅಧೀನರು; ಅವನಿಂದ ನಿಯಮ್ಯರು ಎಂಬುದು ಇಲ್ಲಿ ತಿಳಿದುಬರುತ್ತದೆ.)

ಶ್ರೀ ಶುಕ ಉವಾಚಃ – ಶುಕಾಚಾರ್ಯರು ಹೇಳಿದರು.

**ಸಏವಂ ಭಗವಾನ್ ಪೃಷ್ಟಃ ಕ್ಷತ್ರಾಕೌಷಾರವಿರ್ಮುನಿಃ ।**
**ಪುಂಸಾಂ ನಿಃಶ್ರೇಯಸಾರ್ಥಾಯ ತಮಾಹ ಬಹುಮಾನಯನ್ ॥೧೭॥**

ಏವಂ = ಈ ಪ್ರಕಾರವಾಗಿ; ಕ್ಷತ್ರಾ = ವಿದುರರಿಂದ; ಪೃಷ್ಟಃ = ಪ್ರಶ್ನಿಸಲ್ಪಟ್ಟ; ಸಃ = ಆ; ಮುನಿಃ = ಜ್ಞಾನ ನಿಧಿಗಳಾದ; ಭಗವಾನ್ = ಮಹಾಗುಣಶಾಲಿಗಳಾದ; ಕೌಷಾರವಿಃ = ಮೈತ್ರೇಯರು; ತಂ = ವಿದುರರನ್ನು; ಬಹುಮಾನಯನ್ = ಆದರದಿಂದ ಕಂಡು; ಪುಂಸಾಂ = ಭಕ್ತಜನರ; ನಿಃಶ್ರೇಯಸಾಯ ಮೋಕ್ಷಾದಿ ಪುರುಷಾರ್ಥಗಳ ಪ್ರಯೋಜನಕ್ಕಾಗಿ; ಆಹ = ಹೇಳಿದರು.

(ವಿದುರಂತಹ ಉತ್ಸಾಹಿಗಳು ಕೇಳುವುದು, ಮೈತ್ರೇಯರಂತಹ ಪ್ರಾಜ್ಞರು ಹೇಳುವುದು, ಇದು ವೇದಾದಿಗಳ ನಿಜಾರ್ಥವು ಮೂಡಿಬಂದಿರುವ ಪರಂಪರೆಯ ಕ್ರಮ. ಇಂತಹ ಪರಂಪರಾಗತ ಅರ್ಥಗಳನ್ನು ಗ್ರಹಿಸದೆ ಸ್ವಂತ ಬುದ್ಧಿಯಿಂದ ವೇದಾದಿಗಳನ್ನು ಅರಿತುಕೊಳ್ಳಲು ಮುಂದಾಗುವುದು ದುಃಸಾಹಸ).

ಮೈತ್ರೇಯ ಉವಾಚಃ — ಮೈತ್ರೇಯರು ಹೇಳಲಾರಂಭಿಸಿದರು.

**ಸಾಧುಪೃಷ್ಟಂ ತ್ವಯಾ ಸಾಧೋಲೋಕಾನ್ಸಾಧ್ವನುಗೃಹ್ಣತಾ ।**
**ಕೀರ್ತಿಂ ವಿತನ್ವತಾ ಲೋಕೇ ಆತ್ಮನೋಧೋಕ್ಷಜನ್ಮನಃ ॥೧೮॥**

ಸಾಧೋ = ಸಜ್ಜನ ಶಿರೋಮಣಿಯಾದ ವಿದುರಾ; ಆತ್ಮನಃ = ಜಗದಂತರಾತ್ಮಕನ; ಲೋಕಾನ್ ಸಾಧು ಅನುಗೃಹ್ಣತಾ = ಲೋಕದ ಜನರನ್ನು ಚೆನ್ನಾಗಿ ಅನುಗೃಹೀತರನ್ನಾಗಿ ಮಾಡುವ ಆಕಾಂಕ್ಷೆಯುಳ್ಳ; ತ್ವಯಾ = ನಿನ್ನಿಂದ ಅಧೋಕ್ಷಜನ್ಮನಃ ಕೀರ್ತಿಂ ಲೋಕೇ ವಿತನ್ವತಾ = ಲೋಕದಲ್ಲಿ ಪರಮಾತ್ಮನ ಕೀರ್ತಿಯನ್ನು ಹರಡಲು; ಸಾಧುಪೃಷ್ಟಂ = ಉತ್ತಮವಾದ ರೀತಿಯಲ್ಲಿ ಪ್ರಶ್ನೆಮಾಡಲ್ಪಟ್ಟಿದೆ.

(ಸಜ್ಜನರಾದವರು ಬಲ್ಲವರಿಂದ ಜ್ಞಾನಸಂಗ್ರಹ ಮಾಡಿ ತಾವು ಉದ್ಧೃತರಾಗುವುದಲ್ಲದೆ, ಲೋಕೋದ್ಧಾರ ಕಾರ್ಯದಲ್ಲಿಯೂ ತೊಡಗುವರು. 'ಅಕ್ಷಜ' ಎಂದರೆ ಜ್ಞಾನ; ಅದನ್ನು ಕೆಳಮುಖವಾಗಿ, ಎಂದರೆ, ಲೋಕದ ಕಡೆಗೆ ತಿರುಗಿಸಿ, ಲೌಕಿಕ ಅನುಭಗಳ ಮೂಲಕ ತನ್ನ ಇರವಿಕೆಯನ್ನು ತಿಳಿಸಿಕೊಡುತ್ತಿರುವುದರಿಂದ ಮನಸ್ಸಿಗೆ ಸ್ವಾಮಿಯಾದ ಸಂಕರ್ಷಣ ಮೂರ್ತಿಗೆ 'ಅಧೋಕ್ಷಜ' ಎಂದು ಹೆಸರು. ಅವನೇ ತನ್ನ ವಾಸುದೇವ ರೂಪದೊಡನೆ ಏಕೀಭವಿಸಿ ಮನಸ್ಸನ್ನು ಮೇಲ್ಮುಖವಾಗಿ ಮಾಡಿದಾಗ ಜೀವರಿಗೆ ತಮ್ಮ ಸ್ವರೂಪದ ಮತ್ತು ಸ್ವರೂಪ ಸ್ವಾಮಿಯಾದ ಬಿಂಬನ ಜ್ಞಾನ ಉಂಟಾಗುವುದು.)

**ನೈತಚ್ಚಿತ್ರಂತ್ವಯಿಕ್ಷತ್ತರ್ಬಾದರಾಯಣ ವೀರ್ಯಜೇ ।**
**ಗೃಹೀತೋನನ್ಯ ಭಾವೇನ ಯತ್ತ್ವಯಾಹರೀಶ್ವರಃ ॥೧೯॥**

ಕ್ಷತ್ತಃ = ಅಯ್ಯಾ ವಿದುರಾ; ಬಾದರಾಯಣ ವೀರ್ಯಜೇ = ವೇದವ್ಯಾಸರ

ಸ್ಪರ್ಶಮಾತ್ರದಿಂದ ಸಂತಾನರೂಪವಾಗಿ ಜನಿಸಿದ; ತ್ವಯಿ = ನಿನ್ನಲ್ಲಿ; ಏತತ್ ನಚಿತ್ರಂ = ಇಂತಹ ಪ್ರಶ್ನೆಗಳು ಉಂಟಾದುದು ಆಶ್ಚರ್ಯವೇನಲ್ಲ; ಯತ್ = ಯಾವ ಕಾರಣದಿಂದ ಎಂದರೆ; ತ್ವಯಾ = ವೇದವ್ಯಾಸರ ಪುತ್ರನಾದ ನಿನ್ನಿಂದ; ಅನನ್ಯಭಾವೇನ = ಏಕಾಂತ ಭಕ್ತಿಯಿಂದ; ಈಶ್ವರಃ ಹರಿಃ = ಲೋಕೇಶನಾದ ಹರಿಯು; ಗೃಹೀತಃ = ಒಳಮೂಡಿಸಲ್ಪಟ್ಟವನಾಗಿದ್ದಾನೆ.

ಪುತ್ರಸಂತಾನವು ಸಂಕಲ್ಪ, ಸ್ಪರ್ಶ, ವೀರ್ಯಾಧಾನವೆಂಬ ಕ್ರಮಗಳಿಂದ ಸಂಭವಿಸುವುದು. ಬಾದರಾಯಣರು ಶ್ರೀಮನ್ನಾರಾಯಣಾವತಾರರಾದುದರಿಂದ, ಪ್ರಾಕೃತವೀರ್ಯ ನಿಕ್ಷೇಪವೆಂದು ತಿಳಿಯಬಾರದು. ಕೇವಲ ಆ ಸ್ವಾಮಿಯ ಸಂಕಲ್ಪ ಸ್ಪರ್ಶದಿಂದ ಉತ್ಪನ್ನರಾದ ವಿದುರರಲ್ಲಿ ಒಂದು ರೂಪದಿಂದ ಆ ಸ್ವಾಮಿಯೇ ಪ್ರವಿಷ್ಟನಾಗಿ ನಿಂತನೆಂದು ತಿಳಿಯಬೇಕು.

**ಮಾಂಡವ್ಯಶಾಪಾದ್ಭಗವಾನ್ ಪ್ರಜಾಸಂಯಮನೋಯಮಃ ।**
**ಭ್ರಾತುಃ ಕ್ಷೇತ್ರೇ ಭುಜಿಷ್ಯಾಯಾಂ ಜಾತಃ ಸತ್ಯವತೀಸುತಾತ್ ॥೨೦॥**

ಭಗವಾನ್ = ದೈವಾಂಶ ರೂಪನಾದ ನೀನು; ಮಾಂಡವ್ಯ ಶಾಪಾತ್ = ಮಾಂಡವ್ಯರು ಕೊಟ್ಟಶಾಪದ ನಿಮಿತ್ತದಿಂದ; ಭ್ರಾತುಃ = ವೇದವ್ಯಾಸರ ಸಹೋದರ ನಾದ ವಿಚಿತ್ರ ವೀರ್ಯನ; ಕ್ಷೇತ್ರೇ = ಉಪಪತ್ನಿಯಾದ; ಭುಜಿಷ್ಯಾಯಾಂ = ದಾಸಿಯ ಉದರದಲ್ಲಿ; ಸತ್ಯವತೀ ಸುತಾತ್ = ಸತ್ಯವತೀ ಪುತ್ರರೆನಿಸಿದ ವೇದವ್ಯಾಸರಿಂದ; ಜಾತಃ = ಜನ್ಮವನ್ನು ಪಡೆದ; ಪ್ರಜಾಸಂಯಮನಃ = ಪ್ರಜೆಗಳ ಕರ್ಮಾನುಗುಣವಾಗಿ ಶಿಕ್ಷಿಸುವ; ಯಮಃ = ಯಮರಾಯನ ಅವತಾರ ನಾಗಿರುವಿ.

(ದೈವಾಂಶ ಸಂಭೂತರೂ, ವೇದವ್ಯಾಸ ಪುತ್ರರೂ ಆದುದರಿಂದಲೇ ವಿದುರರು ದಿವ್ಯಜ್ಞಾನಿಗಳಾಗಿ, ಲೋಕೋದ್ಧಾರಕರಗಳಾದ ಪ್ರಶ್ನೆಗಳನ್ನು ಮೈತ್ರೇಯರ ಮುಂದೆ ಇರಿಸಿದರು.)

**ಭಗವಾನ್ ಭಗವತೋನಿತ್ಯಂ ಸಮ್ಮತಃ ಸಾನುಗಸ್ಯಹಿ ।**
**ಜ್ಞಾನೋಪದೇಶಾಯಚ ಮಾಮಾದಿಶದ್ಭಗವಾನ್ ವ್ರಜನ್ ॥೨೧॥**

ಭವಾನ್ = ನೀನು; ಸಾನುಗಸ್ಯ = ಸಪರಿವಾರನಾದ; ಭಗವತಃ = ಶ್ರೀಹರಿಗೆ; ನಿತ್ಯಂ = ಯಾವಾಗಲೂ; ಸಮ್ಮತಃ = ಪ್ರಿಯನಾದವನು; ಚ = ಮತ್ತು (ಆದುದರಿಂದ); ಭಗವಾನ್ = ಶ್ರೀಕೃಷ್ಣನು; ವ್ರಜನ್ = ತನ್ನ ಲೋಕವನ್ನು ಕುರಿತು ಪ್ರಯಾಣಮಾಡುವ ಸಮಯದಲ್ಲಿ; ಜ್ಞಾನೋಪದೇಶಾಯ = ನಿನಗೂ

ಇತರರಿಗೂ ರಹಸ್ಯ ಜ್ಞಾನವನ್ನು ತಿಳಿಸಿಕೊಡಬೇಕೆಂದು; ಮಾಂ = ನನ್ನನ್ನು ಕುರಿತು; ಆದಿದೇಶ = ಆಜ್ಞಾಪಿಸಿದನು; (ಹಿ = ಹೀಗೆ ಹೇಳುವುದಕ್ಕೆ ಗ್ರಂಥಾಂತರದಲ್ಲಿ ಆಧಾರವಿದೆ);

(ರಹಸ್ಯ ಜ್ಞಾನೋಪದೇಶವು ಭಗವಂತನ ನಿಯಾಮಕದಿಂದಲೇ ಹೀಗೆ ಪರಂಪರಾಗತವಾಗಿ ಬರುವುದು. ಯೋಗ್ಯರಾದವರು ಅದನ್ನು ನಿರೀಕ್ಷಿಸಬೇಕೇ ಹೊರತು, ಆತುರದಿಂದ ಅಯೋಗ್ಯರೀತಿಯಲ್ಲಿ ಉಪದೇಶ ಹೊಂದಬಾರದು).

ಅಥ ತೇ ಭಗವಲ್ಲೀಲಾಯೋಗಮಾಯೋಪಬೃಂಹಿತಾಃ ।
ವಿಶ್ವಸ್ಥಿತ್ಯುದ್ಭವಾಂತಾರ್ಥಾ ವರ್ಣಯಾಮ್ಯನುಪೂರ್ವಶಃ ॥೨೨॥

ಅಥ = ನೀನು ಭಗವಂತನಿಗೆ ಸಮ್ಮತನೂ, ಜ್ಞಾನೇಚ್ಛುವೂ ಆಗಿರುವುದರಿಂದ; ಯೋಗಮಾಯಾ ಉಪಬೃಂಹಿತಾಃ = ಭಗಂತನ ಅಚಿಂತ್ಯಾದ್ಭುತಶಕ್ತಿದ್ಯೋತಕಗಳಾದ; ವಿಶ್ವಸ್ಥಿತಿ ಉದ್ಭವ ಅಂತ ಅರ್ಥಾಃ ಭಗವಲ್ಲೀಲಾಃ = ಭಗವಂತನ ದಿವ್ಯ ಕ್ರೀಡೆಗಳನ್ನು; ಅನುಪೂರ್ವಶಃ = ಕ್ರಮಬದ್ಧವಾದ ರೀತಿಯಲ್ಲಿ; ತೇ = ನಿನಗೆ; ವರ್ಣಯಾಮಿ = ವಿವರಿಸುತ್ತೇನೆ.

(ಮಾನವ ಬುದ್ಧಿಯನ್ನೆಲ್ಲಾ ಉಪಯೋಗಿಸಿ ಜಗತ್ತಿನ ಬಾಹ್ಯ ವ್ಯಾಪಾರಗಳನ್ನು ಕಂಡು ಕೊಳ್ಳಬಹುದೇ ಹೊರತು, ಅದರ ಹಿನ್ನೆಲೆಯಲ್ಲಿರುವ ದೈವೀ ಪ್ರಪಂಚದ ವಿಷಯವನ್ನಾಗಲೀ, ಸೃಷ್ಟಿಯ ಕ್ರಮಬದ್ಧತೆ ಮತ್ತು ಪ್ರಯೋಜನಗಳನ್ನಾಗಲೀ ತಿಳಿಯಲಾಗುವುದಿಲ್ಲ. ಅದು ವೈದಿಕಾರ್ಥಗಳನ್ನು ಬಲ್ಲ ರಹಸ್ಯಜ್ಞರ ಉಪದೇಶದಿಂದಲೇ ತಿಳಿಯಬೇಕು. ಆದುದರಿಂದ ಆಧುನಿಕ ವಿಜ್ಞಾನಕ್ಕೇ ಅಂಟಿಕೊಂಡು, ನಿಜವಾದ ವಿಜ್ಞಾನವನ್ನು ಕೈಬಿಟ್ಟು ತೊಳಲುವುದು ಮೂರ್ಖತನವಲ್ಲದೆ ಬೇರೆಯಲ್ಲ. ವಿಜ್ಞಾನ ಮಾನಿಗಳು ಕಣ್ಣಿದ್ದೂ ಕುರುಡರು. ಭಾಗವತಾದಿ ಶಾಸ್ತ್ರಗಳನ್ನು ಅವರು ಕಾಣುವವರಲ್ಲ; ಅವು ಭಗವದ್ಭಕ್ತರಿಗೆ ಮಾತ್ರ ಮೀಸಲು.)

ಐದನೆಯ ಅಧ್ಯಾಯ ಮುಗಿಯಿತು.

---

# ತೃತೀಯ ಸ್ಕಂಧ

## ಆರನೆಯ ಅಧ್ಯಾಯ

ಮೈತ್ರೇಯ ಉವಾಚಃ — ಮೈತ್ರೇಯರು ಹೇಳಲಾರಂಭಿಸಿದರು.

ಭಗವಾನೇಕ ಆಸೇದಮಗ್ರ ಆತ್ಮಾತ್ಮನಾಂವಿಭುಃ ।
ಆತ್ಮೇಚ್ಛಾನುಗತೋಹ್ಯಾತ್ಮಾ ನಾನಾಶಕ್ತ್ಯುಪಲಕ್ಷಿತಃ ॥೧॥

ಇದಮ್ ಅಗ್ರೇ = ಈ ಜಗತ್ತು ಸೃಷ್ಟಿಯಾಗುವುದಕ್ಕೆ ಮೊದಲು; ಆತ್ಮನಾಂವಿಭುಃ = ಜೀವಾತ್ಮರಿಗೆ ಸ್ವಾಮಿಯಾದ; ನಾನಾ ಶಕ್ತಿ ಉಪಲಕ್ಷಿತಃ = ಪ್ರಣವ, ಕಾಲ, ಪ್ರಕೃತಿ ಮೊದಲಾದ ನಾನಾ ಶಕ್ತಿಗಳಿಗೆ ಅಧಿಪತಿಯಾದ; ಆತ್ಮೇಚ್ಛಾನುಗತಃ ಆತ್ಮಾ = ಸ್ವಯಂ ಪ್ರೇರಿತನಾಗಿ ಸೃಷ್ಟಿಸಬೇಕೆಂಬ ಇಚ್ಛೆಯುಳ್ಳ ಮನಸ್ಕನಾದ; ಭಗವಾನ್ = ಗುಣಪೂರ್ಣನಾದ; ಆತ್ಮಾ= ಪರಮಾತ್ಮನು; ಏಕಃ = ಒಬ್ಬನೇ; ಆಸೀತ್ ಹಿ = ಇದ್ದನೆಂಬುದು ಸತ್ಯ.

(ಇದ್ದವನು ಒಬ್ಬನೇ ಎಂಬುದನ್ನು ವಿವೇಚಿಸದೆ ಅರ್ಥೈಸಿದರೆ ಅವನೇ ಜೀವರಾದ, ಅವನೇ ಜಗದ್ವಸ್ತುಗಳಾದ ಎಂದು ಹೇಳಬೇಕಾಗುತ್ತದೆ; ಜಗತ್ತಿನಲ್ಲಿ ಕಂಡುಬರುವ ಅಪೂರ್ಣತೆ, ದುಃಖ ಮೊದಲಾದವು ಅವನಲ್ಲಿಯೇ ಕಂಡು ಬರುವುವೆಂಬ ತಪ್ಪು ಕಲ್ಪನೆಗೆ ಅವಕಾಶವಾಗುತ್ತದೆ. ಅದು ಸರಿಯಲ್ಲ. ಈ ಶ್ಲೋಕದಲ್ಲಿಯೇ, ಅವನ ಅಧೀನವಾಗಿ ಜೀವರೂ, ಇತರ ಕಾರಣವಸ್ತುಗಳೂ ಇದ್ದುವೆಂಬುದು ಸ್ಪಷ್ಟವಾಗಿದೆ. ಜಗದ್ವಸ್ತುಗಳೂ, ದೇಹಧಾರಿಗಳಾದ ಜೀವರೂ ಇದ್ದು ವ್ಯಾಪಾರಗಳು ನಡೆಯುವುದು ಜಗತ್ತಿನಲ್ಲಿ. ಅದು ಇಲ್ಲದಿದ್ದಾಗ ನಿರ್ವ್ಯಾಪಾರವಾದ ಆ ಎಲ್ಲವೂ, ಎಲ್ಲರೂ ಇಲ್ಲದಂತೆಯೇ ಸರಿ. ಅವುಗಳ ಸೃಷ್ಟಿಯೂ ಕೂಡ ಕರುಣಾಮಯನಾದ ಭಗವಂತನ ಇಚ್ಛೆಯಿಂದ ಆಗುವುದೇ ಹೊರತು ಜೀವರ ಇಚ್ಛೆಯಿಂದಲ್ಲ; ಜಡಗಳಿಗೆ ಇಚ್ಛೆಯೆಂಬುದೇ ಇಲ್ಲ. ಆದುದರಿಂದ, ಪರಮಾತ್ಮ, ಜೀವರು, ಜಡಮೂಲಗಳು– ಇವು ನಿತ್ಯವಿಭಿನ್ನ ವಸ್ತುಗಳು. ಕಡೆಯ ಎರಡು ಪರಮಾತ್ಮನನ್ನು ಆಶ್ರಯಿಸಿಕೊಂಡೇ ಇರತಕ್ಕವು.)

ಸವಾ ಏಷತದಾದ್ರಷ್ಟಾ ನಾಪಶ್ಯದ್ವಿಶ್ವಮೇಕರಾಟ್ ।
ಮೇನೇಸಂತಮಿವಾತ್ಮಾನಂ ಸುಪ್ತಶಕ್ತಿರಸುಪ್ತತದೃಕ್ ॥೨॥

ತದಾ = ಆ ಮಹಾಪ್ರಳಯ ಕಾಲದಲ್ಲಿ; ಏಕರಾಟ್ = ಜಡಗಳಿಗೂ ಜೀವರಿಗೂ ಏಕೈಕ ಸ್ವಾಮಿಯಾದ; ಸಃ ಏಷಃವಾ = ಆ ಒಬ್ಬನೇ; ದ್ರಷ್ಟಾ = ಎಚ್ಚರಿಕೆಯುಳ್ಳವನಾಗಿ ನೋಡಬಲ್ಲವನಾದ ಪ್ರಭವು; ವಿಶ್ವಂ = ಜಗತ್ತನ್ನು; ನಅಪಶ್ಯತ್ = ಲಯಗೊಳಿಸಿ, ದೃಷ್ಟಿಗೋಚರವಲ್ಲದಂತೆ ಮಾಡಿದ್ದನು; ಸುಪ್ತಶಕ್ತಿಃ = ತನ್ನ ಸ್ವಾಮರ್ಥ್ಯವನ್ನು ಪ್ರವೇಶಗೊಳಿಸಿದಿದ್ದ ಕಾರಣ ಇತರ ಶಕ್ತಿಗಳೆಲ್ಲವೂ ನಿಶ್ಚೇಷ್ಟಿತ ವಾಗುವಂತೆ ಮಾಡಿ, ನಿದ್ರಿಸುವವನಂತೆ ಇದ್ದು; ಅಸುಪ್ತ ದೃಕ್ = ತಾನು ಮಾತ್ರ ಎಚ್ಚರವುಳ್ಳವನೇ ಆಗಿ; ಆತ್ಮಾನಂ = ತನ್ನನ್ನು ತಾನು; ಸಂತಂ ಇವ = ಇರತಕ್ಕವನನ್ನಾಗಿಯೇ; ಮೇನೇ =.ತಿಳಿದಿದ್ದನು.

(ಪರಮಾತ್ಮನು ತನ್ನ ಉದರದಲ್ಲಿದ್ದ ಹಿರಿಯ ಜೀವರಿಗೆ ಯೋಗನಿದ್ರೆಯನ್ನೂ, ಇತರ ಜೀವರಿಗೆ ವಿಶ್ರಾಂತಿದಾಯಕವಾದ ನಿದ್ರೆಯನ್ನೂ ಉಂಟುಮಾಡುವುದಕ್ಕಾಗಿ ತಾನೂ ನಿದ್ರಿಸುವವನಂತೆ ಇದ್ದರೂ ಆ ಪ್ರಭುವಿಗೆ ನಿಜವಾದ ನಿದ್ರೆಯೆಂಬುದಿಲ್ಲವಾದ ಕಾರಣ ಅವನು ಎಚ್ಚರದಿಂದಲೇ ಇದ್ದು ತನ್ನನ್ನೂ ತನ್ನ ಆಧೀನವಾದ ಎಲ್ಲವನ್ನೂ ತಿಳಿದೇ ಇದ್ದನು.

"ಆತ್ಮಾನಂ ಅಸಂತಂ ಇವ ಮೇನೇ" ಎಂದು ಪದವಿಭಾಗ ಮಾಡಿದಾಗ, ಜನಸಮೂಹವು ಇದ್ದರೂ, ತನ್ನ ವ್ಯಾಪಾರವಿಲ್ಲದೆ ಅವರು ನಿರ್ವ್ಯಾಪಾರರಾದುದರಿಂದ ಇಲ್ಲದಂತೆಯೇ ಸರಿ ಎಂಬುದನ್ನೂ ಬಲ್ಲವನಾಗಿದ್ದವು. ಎಂದು ತಿಳಿಯಬೇಕು. ಆ ಸಮಯದಲ್ಲಿ ಜೀವರಿಗೆ ತಾವಿರುವುದು ತಿಳಿಯದು; ಆದರೆ ಅವರ ಇರುವಿಕೆಯನ್ನು ಭಗವಂತನು ಬಲ್ಲ.

"ಸುಪ್ತ ಶಕ್ತಿಃ" ಎಂದಾಗ, ಶಕ್ತಿ ಸ್ವರೂಪಿಣಿಯಾದ ಲಕ್ಷ್ಮೀದೇವಿಯು, ತನ್ನ ಯಜಮಾನನ ಆಲಿಂಗನದಲ್ಲಿ ಮೈಮರೆತಿದ್ದಳೆಂದೂ ಹೇಳಬಹುದು.)

**ಸಾವಾ ಏತಸ್ಯ ಸಂದ್ರಷ್ಟುಃ ಶಕ್ತಿಃ ಸದಸದಾತ್ಮಿಕಾ ।**
**ಮಾಯಾನಾಮಮಹಾಭಾಗ ಯಯೇದಂ ನಿರ್ಮಮೇ ವಿಭುಃ ॥೩॥**

ಮಹಾಭಾಗ = ಬುದ್ಧಿವಂತನೂ, ಮಹಾಭಾಗ್ಯಶಾಲಿಯೂ ಆದ ವಿದುರಾ; ವಿಭುಃ = ಸರ್ವ ಸಮರ್ಥನಾದ ಭಗವಂತನು; ಯಯಾ = ಯವುದರಿಂದ; ಇದಂ = ಈ ಜಗತ್ತನ್ನು; ನಿರ್ಮಮೇ = ಸೃಷ್ಟಿಸಿದನೋ; ಸಾವಾ = ಅದೇ; ಸದಸದಾತ್ಮಿಕಾ = ವ್ಯಕ್ತ ಮತ್ತು ಅವ್ಯಕ್ತ ರೂಪಗಳಿಂದಿರತಕ್ಕ; ಮಾಯಾ ನಾಮ = ಮಾಯೆಯೆಂದು ಕರೆಸಿಕೊಳ್ಳುವ; ಏತಸ್ಯ = ಜಗತ್ಕಾರಣ ಸಮೂಹದ; ಸಂದ್ರಷ್ಟುಃ = ಪರಿಜ್ಞಾನವುಳ್ಳ ಸ್ವತಂತ್ರನ; ಶಕ್ತಿಃ = ಸಾಮರ್ಥ್ಯವೆನ್ನುವುದು.

ಮಾಯಾ ಎಂಬ ಪದವನ್ನು ಮೂರು ಬಗೆಯಾಗಿ ಅರ್ಥಮಾಡಿ ಕೊಳ್ಳಬೇಕಾದ ಅವಶ್ಯಕತೆಯು ಇಲ್ಲಿದೆ.

(೧) ಜಡಮಾಯಾ– ಜಗತ್ತಿನಲ್ಲಿ ಬರುವ ಜೀವರಿಗೆ ಅಜ್ಞಾನವನ್ನು ಕವಿಸಲು ಉಪಯೋಗಿಸುವ ವಸ್ತು, ಮೂಲಪ್ರಕೃತಿ. ಅದು ಮಹತ್ತತ್ತ್ವಾದಿ ರೂಪರೂಪಾಂತರಗಳಿಂದ ವ್ಯಕ್ತವಾದಾಗ 'ಸತ್' (ಇರುವುದು) ಎನಿಸಿಕೊಳ್ಳುವುದು. ಲಯಕಾಲದಲ್ಲಿ ಮೂಲದಲ್ಲಡಗಿ ಇಲ್ಲವಾಗುವುದರಿಂದ 'ಅಸತ್' ಎನಿಸಿಕೊಳ್ಳುವುದು.

(೨) ಚಿತ್ಪ್ರಕೃತಿ – ಮೂಲ ಪ್ರಕೃತಿಯ ಯಜಮಾನಿ, ಶಕ್ತಿ ಸ್ವರೂಪಿಣಿಯಾದ ಮಹಾಲಕ್ಷ್ಮಿ; ವ್ಯಕ್ತವಾದ ಜಗತ್ತಿನಲ್ಲಿ ಸದ್ರೂಪಳಾಗಿಯೂ, ಅವ್ಯಕ್ತದಲ್ಲಿ ಅಸತ್ ಎಂಬ ಹೆಸರಿನಿಂದಲೂ ಇರುವಳು. ಇಲ್ಲಿ 'ಅಸತ್' ಎಂದರೆ, ಅಸದ್ವಸ್ತುವಿನ ಯಜಮಾನಿ ಎಂದರ್ಥ.

(೩) ಜಡಪ್ರಕೃತಿ ಮತ್ತು ಚಿತ್ಪ್ರಕೃತಿಗಳ ಜೀವಾಳವಾಗಿರುವುದು ಪರಮಾತ್ಮನ ಅಚಿಂತ್ಯಾದ್ಭುತ ಶಕ್ತಿ – ಅದಕ್ಕೂ ಮಾಯಾ ಎಂಬ ಹೆಸರುಂಟು. ಜಗತ್ತಿನ ವ್ಯಾಪಾರಗಳಿಂದ ಅವನನ್ನು ತಿಳಿಯಬಹುದಾದುದರಿಂದ, ಸದ್ರೂಪ; ಲಯಕಾಲದಲ್ಲಿ ಜೀವರ ತಿಳಿವಳಿಕೆಗೆ ಅಸದ್ರೂಪ. ಮೊದಲಿನ ಎರಡರಲ್ಲಿಯೂ ಭಗವನ್ಮಾಯೆಯೇ ಸ್ವತಂತ್ರವಾದುದರಿಂದ ಮಾಯಾಶಕ್ತಿ ಎಂದರೆ ಮುಖ್ಯವಾಗಿ ಭಗವತ್ಪರವಾಗಿಯೇ ಅರ್ಥಮಾಡಬೇಕು.

**ಕಾಲವೃತ್ತ್ಯಾಂತು ಮಾಯಾಯಾಂ ಗುಣಮಯ್ಯಾಮಧೋಕ್ಷಜಃ ।**
**ಪುರುಷೇಣಾತ್ಮಭೂತೇನ ವೀರ್ಯಮಾಧತ್ತ ವೀರ್ಯವಾನ್ ॥೪॥**

ಅಧೋಕ್ಷಜಃ = ಅಧೋಕ್ಷಜ ನಾಮಕ ಪರಮಾತ್ಮನು; ಕಾಲವೃತ್ತ್ಯಾಂ = ವಸ್ತುಗಳಿಗೆ ಪರಿಣಾಮ ಉಂಟುಮಾಡುವ ಕಾಲವೆಂಬ ಭಾವಾತ್ಮಕ ವಸ್ತುನಿಷ್ಠಳಾದ; ಗುಣಮಯ್ಯಾಂ ಮಾಯಾಯಾಂತು = ಜಡಗುಣಾಭಿಮಾನಿನಿಯಾದ ರಮಾದೇವಿಯಲ್ಲಿ (ಜಡಗುಣದಲ್ಲಿ ತದ್ರೂಪದಿಂದ ವ್ಯಾಪ್ತಳಾದ ತನ್ನ ಆ ಪತ್ನಿಯಲ್ಲಿ); ಆತ್ಮಭೂತೇನ = ತನ್ನ ಸಂಕಲ್ಪ ರೂಪವಾದ; ಪುರುಷೇಣ = ಪೌರುಷ ಶಕ್ತಿಯಿಂದ; ವೀರ್ಯವಾನ್ = ವಿಚಿತ್ರಸಾಮರ್ಥ್ಯವುಳ್ಳವನಾದ ಭಗವಂತನು; ವೀರ್ಯಂ = ಪರಿಣಾಮ ಬೀರುವ ತನ್ನ ಸಂಕಲ್ಪವನ್ನು; ಅಧತ್ತ = ಪ್ರವೇಶಗೊಳಿಸಿದನು.

(ಕಾಲವೆಂಬುದು ಸತ್ವರಜಸ್ತಮೋಗುಣಗಳಂತಹ ದ್ರವ್ಯವಲ್ಲದಿದ್ದರೂ ಅವುಗಳಲ್ಲಿ ಪರಿಣಾಮವನ್ನು ಕ್ರಮಕ್ರಮವಾಗಿ ಉಂಟುಮಾಡುವ ಭಾವನಾತ್ಮಕ ವಸ್ತು. ಅದರ ಯಜಮಾನಿ, ಶ್ರೀಮನ್ನಾರಾಯಣನ ಅಧೀನಳಾದ ರಮಾದೇವಿ. ಜಡಗುಣಗಳಿಗೂ

ಆಕೆಯು ಅಭಿಮಾನಿ. ಜಗತ್ತನ್ನು ಸೃಷ್ಟಿಸಬೇಕೆಂದು ಭಗವಂತನ ಸಂಕಲ್ಪಾನುಸಾರ ಆಕೆಯಲ್ಲಿ ಇಚ್ಛೆಯು ಮೂಡುವುದು. ಆ ಇಚ್ಛೆಯನ್ನು ಪೂರ್ಣಮಾಡಲು ಆ ಶಕ್ತಿ ಸ್ವರೂಪಿಣಿಯಲ್ಲಿ ಸಾಮರ್ಥ್ಯವನ್ನು ತುಂಬುವ ಭಗವಂತನ ಸಂಕಲ್ಪದ ಆವಿರ್ಭಾವವು ವೀರ್ಯ ನಿಕ್ಷೇಪವೆಂಬಕ್ರಿಯೆ. ಆ ಕ್ರಿಯೆಯು ಸಮಷ್ಠಿತಿಯಲ್ಲಿದ್ದ ಜಡಪ್ರಕೃತಿಯಲ್ಲಿ ಕ್ಷೋಭೆಯನ್ನುಂಟುಮಾಡುವುದು; ಮುಂದಿನ ಪರಿಣಾಮಗಳಿಗೆ ಕಾರಣವಾಗುವುದು.)

**ತತೋಽಭವನ್ಮಹತ್ತತ್ವಮವ್ಯಕ್ತಾತ್ಕಾಲಚೋದಿತಾತ್ ।**
**ವಿಜ್ಞಾನಾತ್ಮಾತ್ಮ ದೇಹಸ್ಥಂ ವಿಶ್ವಂ ವ್ಯಂಜಂಸ್ತಮೋಽನುದನ್ ॥೫॥**

ಕಾಲಚೋದಿತಾತ್ = ಕ್ರಮಕ್ರಮವಾಗಿ ಪರಿಣಾಮಗಳನ್ನುಂಟುಮಾಡುವ ಭಗವದಿಚ್ಛಾರೂಪವಾದ ಕಾಲಶಕ್ತಿಯಿಂದ ಪ್ರಚೋದಿತವಾದ; ಅವ್ಯಕ್ತಾತ್ ತತಃ = ವಿಕಾರ ಹೊಂದದೆ ಅತಿಸೂಕ್ಷ್ಮರೂಪದಲ್ಲಿದ್ದ ಪ್ರಕೃತಿಯ ವಿಕಾರದಿಂದ (ತದಭಿಮಾನಿಗಳಾದ ರಮಾದೇವಿಯರ ದೆಸೆಯಿಂದ); ತಮಃನುದನ್ = ಹೊರಗಿನ ಕತ್ತಲೆಯ ಆವರಣವನ್ನು ಕಳೆದು; ವಿಶ್ವಂ ವ್ಯಂಜನ್ = ಜಗತ್ತನ್ನು ಸೃಷ್ಟಿಸಲು; ಆತ್ಮದೇಹಸ್ಥಂ = ತನ್ನ ಶರೀರದಲ್ಲಿ ಆಶ್ರಯ ಹೊಂದಿದ್ದ ವಿಶ್ವದ ಸೃಷ್ಟಿಕರ್ತನನ್ನು; ವ್ಯಂಜನ್ = ಪ್ರಕಾಶಗೊಳಿಸುತ್ತಾ; ವಿಜ್ಞಾನಾತ್ಮಾ = ಸ್ವರೂಪತಃ ವಿಶೇಷಜ್ಞಾನವುಳ್ಳ ಚತುರ್ಮುಖನ ಶರೀರಭೂತವಾದ; ಮಹತ್ತತ್ವಂ = ಮಹತ್ತತ್ವವೆಂಬ ಪ್ರಕೃತಿಯ ರೂಪಾಂತರವು; ಅಭವತ್ = ಉಂಟಾಯಿತು.

(ಅವ್ಯಕ್ತ ಪ್ರಕೃತಿಯ ಆಲೋಡನೆಯಿಂದ ಹೊರಬಂದ ಸತ್ವ, ರಜ, ತಮಗಳೆಂಬ ಗುಣತ್ರಯದ ಮೊಟ್ಟಮೊದಲನೆಯ ಮಿಶ್ರಣದಿಂದ ಉಂಟಾದ ವಸ್ತುವಿಗೆ ಮಹತ್ತತ್ವ ಎಂದು ಹೆಸರು. ಆದರಿಂದ ಚತುರ್ಮುಖ ಬ್ರಹ್ಮದೇವರಿಗೆ ದೇಹವು ಪ್ರಾಪ್ತಿಯಾಯಿತು. ಆ ಪದವಿಗೆ ಬಂದ ಮುಖ್ಯಪ್ರಾಣರು ಇತರ ಜೀವಿಗಳಂತೆ ಅಜ್ಞಾನಕ್ಕೆ ಒಳಗಾಗದೆ ಸೃಷ್ಟಿಗೆ ಮುಂಚೆಯೂ ವಿಶೇಷ ಜ್ಞಾನವುಳ್ಳವರಾದುದರಿಂದ ತಮಗೆ ಪ್ರಾಪ್ತವಾದ ಶರೀರವನ್ನು ಸ್ವೀಕರಿಸಿದರೂ, ತಮ್ಮೊಳಗಿನ ವಿಶ್ವಕರ್ತನ ಸ್ಮರಣೆಯಿಂದ ದೇಹಾಭಿಮಾನವಿಲ್ಲದವರಾಗಿದ್ದರು ಎಂಬುದು ತಾತ್ಪರ್ಯ. ಇತರರಿಗೆ ಅಜ್ಞಾನವನ್ನುಂಟುಮಾಡುವ ಪ್ರಾಕೃತ ಶರೀರವು ಅವರಿಗೆ ಬಂಧಕವಾಗದಂತೆ ಅವರ ಅಂತರ್ಯಾಮಿಯು ಅಂತಃ ಪ್ರೇರಕನಾಗಿ ವ್ಯಕ್ತನಾದುದು ಸೂರ್ಯೋದಯವಾಗಿ, ಕತ್ತಲೆಯು ದೂರವಾದಂತೆ.)

**ಸೋಽಪ್ಯಂಶಗುಣ ಕಾಲಾತ್ಮಾ ಭಗವದ್ದೃಷ್ಟಿ ಗೋಚರಃ ।**
**ಆತ್ಮಾನಂ ವ್ಯಕರೋದಾತ್ಮಾ ವಿಶ್ವಸ್ಯಾಸ್ಯ ಸಿಸೃಕ್ಷಯಾ ॥೬॥**

ಅಂಶ ಗುಣ ಕಾಲ ಆತ್ಮಾ = ಜೀವರುಗಳಿಗೂ, ತಮ್ಮ ವಶಕ್ಕೆ ಬಂದ ಮಹತ್ತತ್ತ್ವ ವಸ್ತುಗಳಲ್ಲಿ ಪರಿಣಾಮವನ್ನುಂಟು ಮಾಡುವ ಕಾಲ ಜ್ಞಾನಕ್ಕೂ ಅಭಿಮಾನಿಗಳೆನಿಸಿದ; ಸಃ ಆತ್ಮಾ ಅಪಿ = ಆ ಬ್ರಹ್ಮದೇವರಾದರೋ; ಭಗವದ್ದೃಷ್ಟಿ ಗೋಚರಃ = ಭಗವಂತನ ಪ್ರಸಾದಕ್ಕೆ ಪಾತ್ರರಾಗಿರುವುದನ್ನು ಸ್ಮರಣೆಯಲ್ಲಿಟ್ಟುಕೊಂಡು; ಅಸ್ಯ ವಿಶ್ವಸ್ಯ = ಈ ಜಗತ್ತಿನ; ಸಿಸೃಕ್ಷಯಾ = ಸೃಷ್ಟಿಯ ಅಪೇಕ್ಷೆಯಿಂದ; ಆತ್ಮಾನಂ ವ್ಯಕರೋತ್ = ಮಹತ್ತತ್ತ್ವದ ಮುಂದಿನ ಪ್ರಕೃತಿ ವಿಕಾರಗಳನ್ನು ರಚಿಸಿದರು.

(ಭಗವದ್ದೃಷ್ಟಿ ಗೋಚರಃ ಎಂಬುದು ಇಲ್ಲಿ ಅತಿ ಮುಖ್ಯವಾದ ಅಂಶ. ತಮ್ಮ ಅಸ್ವತಂತ್ರ ಸ್ವರೂಪ ಶಕ್ತಿಯಲ್ಲಿ, ಸ್ವತಂತ್ರನಾದ ಭಗವಂತ, ತನ್ನ ಸಂಕಲ್ಪ ಶಕ್ತಿಯನ್ನಿಟ್ಟು ಜಗತ್ಸೃಷ್ಟಿಕಾರ್ಯವನ್ನು ತಾನೇ ಮಾಡುತ್ತಿರುವನೆಂಬುದನ್ನು ಬ್ರಹ್ಮದೇವರು ಪೂರ್ಣವಾಗಿ ಬಲ್ಲವರಾಗಿದ್ದುದರಿಂದ, "ನಾಹಂ ಕರ್ತಾ, ಹರಿಃ ಕರ್ತಾ" ಎಂಬುದೇ ಅವರ ಅನುಸಂಧಾನವಾಗಿದ್ದಿತು. ತಮಗೆ ಬಂದ ಶರೀರವು ಪೂರ್ಣವಾಗಿದ್ದಿತು; ಜಗತ್ಸೃಷ್ಟಿ ಕಾರ್ಯವನ್ನು ಮಾಡುತ್ತಿರುವವನೂ ಆ ಭಗವಂಗವಂತನೇ, ತಾವು ನಿಮಿತ್ತ ಮಾತ್ರರು ಎಂಬುದನ್ನೂ ಬಲ್ಲವರಾಗಿದ್ದರು. ಅದು ಆತ್ಮ ಸಮರ್ಪಣೆಯ ಪರಾಕಾಷ್ಠತೆ.)

**ಮಹತ್ತತ್ತ್ವಾದ್ವಿಕುರ್ವಾಣಾದಹಂ ತತ್ವಮಜಾಯತ ।**
**ಕಾರ್ಯ ಕಾರಣ ಕರ್ತಾತ್ಮಾ ಭೂತೇಂದ್ರಿಯ ಮನೋಭವಃ ॥೭॥**

ವಿಕುರ್ವಾಣಾತ್ ಮಹತ್ತತ್ತ್ವಾತ್ = ಬ್ರಹ್ಮದೇವರ ಶರೀರಕ್ಕಾಗಿ ನಿರ್ಮಾಣವಾದ ಮಹತ್ತತ್ವಕ್ಕೆ ತ್ರಿಗುಣಗಳನ್ನು ಬೇಕಾದ ಪ್ರಮಾಣಗಳಲ್ಲಿ ಬೆರೆಸಿ ವಿಕಾರಗೊಳಿಸಿದುದರಿಂದ;ಕಾರ್ಯ ಕಾರಣ ಕರ್ತಾತ್ಮಾ = ಸೂಕ್ಷ್ಮ ಕಾರ್ಯ ರೂಪವಾದ ದೇಹಕ್ಕೂ, ಕಾರಣ ರೂಪವಾದ ಇಂದ್ರಿಯಗಳಿಗೂ, ಕರ್ತೃರೂಪವಾದ ಮನಸಸ್ಸಿಗೂ ಉತ್ಪತ್ತಿ ಸ್ಥಾನವಾದ; ಮತ್ತು; ಭೂತೇಂದ್ರಿಯ ಮನೋ ಭವಃ = ಭೌತಿಕ ದೇಹಾದಿ ವಸ್ತುಗಳು, ಭೌತಿಕ ಇಂದ್ರಿಯಗಳು ಮತ್ತು ಭೌತಿಕ ಮನಸ್ಸಿಗೆ ಉತ್ಪತ್ತಿ ಸ್ಥಾನವಾದ; ಅಹಂತತ್ವಂ = ಅಹಂಕಾರ ತತ್ತ್ವವು; ಅಜಾಯತ = ಉಂಟಾಯಿತು.

(೧೦೦ ಸತ್ವ, ಹತ್ತುರಜ ಮತ್ತು ಒಂದು ತಮದ ಮಿಶ್ರಣದಿಂದಾದ, ಶುದ್ಧ ಸತ್ವಾತ್ಮಕವಾದ ಬ್ರಹ್ಮದೇವರ ಮಹತ್ತತ್ವ ಶರೀರದಲ್ಲಿ 'ನಾನು,' 'ನನ್ನದು' ಎಂಬ ತಪ್ಪು ಕಲ್ಪನೆಗೆ ಅವಕಾಶವಿಲ್ಲ. ಆ ಮಹತ್ತತ್ವಕ್ಕೆ ಸ್ವಲ್ಪವೇ ಸತ್ವಗುಣವನ್ನೂ, ಹೆಚ್ಚಾಗಿ ರಜೋಗುಣ ತಮೋಗುಣಗಳನ್ನೂ ಬೆರೆಸುವುದರಿಂದ ಅವು ಅಜ್ಞಾನಕ್ಕೆ ಕಾರಣಗಳಾಗಿ 'ನಾನು,' 'ನನ್ನದು'ಎಂಬ ಅಭಿಮಾನವನ್ನು ಹುಟ್ಟಿಸುವುವು. ಈ ರೀತಿಯ ಅಭಿಮಾನ

ಬಂಧನದಿಂದ ಬಾಹ್ಯಪ್ರಪಂಚಕ್ಕೂ, ಶರೀರ ಧಾರಣೆ ಮಾಡಿ ಬರುವ ಜೀವರಿಗೂ ಸಂಬಂಧವನ್ನು ಕಲ್ಪಿಸಿ, ಸುಖದುಃಖಗಳ ಅನುಭವದಿಂದ ಜ್ಞಾನ ಉಂಟಾಗುವಂತೆ ಮಾಡುವುದೇ ಭಗವಂತನ ಸಂಕಲ್ಪ. ಸೂಕ್ಷ್ಮತತ್ವಗಳೂ, ಸ್ಥೂಲತತ್ವಗಳೂ ಉಂಟಾಗುವ ಕ್ರಮವನ್ನು ಮುಂದೆ ಹೇಳುತ್ತಾರೆ.)

ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿಧಾ ।
ಅಹಂ ತತ್ವಾದ್ವಿಕುರ್ವಾಣಾನ್ಮನೋ ವೈಕಾರಿಕಾದಭೂತ್ ॥೮॥

ಅಹಂ = ಈ ಅಹಂಕಾರತತ್ವವು; ವೈಕಾರಿಕಃ, ತೈಜಸಃ, ಚ, ತಾಮಸಃ ಚ, ಇತಿ = ವೈಕಾರಿಕ, ತೈಜಸ, ತಾಮಸ ಎಂಬುದಾಗಿ; ತ್ರಿಧಾ = ಮೂರು ವಿಧವಾಗಿ ಉಂಟಾದುದು; ವಿಕುರ್ವಾಣಾತ್ = ಜೀವ ಜಡ ಕಾಲಾಭಿಮಾನಿಗಳಾದ ಬ್ರಹ್ಮದೇವರಿಂದ ವಿಕಾರಗೊಳಿಸಲ್ಪಟ್ಟ; ವೈಕಾರಿಕಾತ್ ಅಹಂ ತತ್ವಾತ್ = ವೈಕಾರಿಕ ಅಹಂಕಾರದಿಂದ; ಮನಃ ಅಭೂತ್ = ಸೂಕ್ಷ್ಮ ಮನಸ್ತತ್ವವು ಉಂಟಾಯಿತು.

(ಮನಸ್ತತ್ವವೆಂಬುದು ಅಹಂಕಾರ ತತ್ವದ ಒಂದು ರೂಪಾಂತರ.)

ವೈಕಾರಿಕಾಶ್ಚಯೇದೇವಾ ಅರ್ಥಾಭಿವ್ಯಂಜನಂ ಯತಃ ।
ತೈಜಸಾನೀಂದ್ರಿಯಾಣ್ಯೇವ ಜ್ಞಾನ ಕರ್ಮಮಯಾನಿಚ ॥೯॥

ಯತಃ = ಯಾರಿಂದ; ಅರ್ಥ ಅಭಿವ್ಯಂಜನಂ = ಅನುಭವಕ್ಕೆ ಬಂದ ಬಾಹ್ಯ ವಿಷಯಗಳ ಅರಿವು ಉಂಟಾಗುವುದೋ; ಆ; ಯೇ ದೇವಾಃ = ಯಾವ ದೇವತೆಗಳು ಉಂಟೋ; ಅವರು (ಅವರ ಸೂಕ್ಷ್ಮ ಶರೀರಗಳು;) ವೈಕಾರಿಕಾಃ ಚ = ವೈಕಾರಿಕ ಅಹಂತತ್ವದಿಂದಲೇ ಉತ್ಪನ್ನರಾದವರು; ಚ = ಮತ್ತು; ಜ್ಞಾನ ಕರ್ಮಮಯಾನಿ ಇಂದ್ರಿಯಾಣಿ = ಜ್ಞಾನ ಪ್ರಧಾನಗಳಾದ ಕಿವಿಯ ಸಾಮರ್ಥ್ಯ ಮೊದಲಾದವೂ, ಕರ್ಮಪ್ರಧಾನಗಳಾದ ನಾಲಗೆಯ ಸಾಮರ್ಥ್ಯ ಮದಲಾದವೂ, ಅವುಗಳ ಅಭಿಮಾನಿಗಳಾದ ದೇವತೆಗಳೂ; ತೈಜಸಾನಿ = ರಜೋಗುಣವು ಹೆಚ್ಚಾಗಿ ಉಳ್ಳ ತೈಜಸ ಅಹಂಕಾರತತ್ವದಿಂದ ಉಂಟಾದವು.

(ಇಲ್ಲಿ ಇಂದ್ರಿಯಗಳು ಎಂದರೆ, ನಮಗೆ ಗೋಚರಿಸುವ ಇಂದ್ರಿಯಸಾಧನಗಳ ಹಿನ್ನೆಲೆಯ ಶಕ್ತಿ ವಿಶೇಷಗಳು, ಅವುಗಳ ಅಭಿಮಾನಿಗಳಾದ ದೇವತೆಗಳು. ಬ್ರಾಹ್ಯ ಇಂದ್ರಿಯಗಳ ಮತ್ತು ಅವುಗಳ ನಿಯಾಮಕರ ವಿಚಾರವನ್ನಿಲ್ಲಿ ಹೇಳಿದ್ದಾರೆ. ಇವರ ವ್ಯಾಪಾರ ಕಂಡುಬರುವುದು ನರ ಮಂಡಲದ ಮೂಲಕ. ಈ ದೇವತೆಗಗಳು ಮನಸ್ಸಿನ ಉದ್ದೇಶಗಳನ್ನು ಇಂದ್ರಿಯಗಳಲ್ಲಿ ಕಾರ್ಯರೂಪಕ್ಕೆ ತಂದು, ಜ್ಞಾನೇಂದ್ರಿಯಗಳಿಂದ ಬರುವ ಸಂಕೇತಗಳನ್ನು ಮನಸ್ಸಿಗೆ ಮುಟ್ಟಿಸುವರು. ಮನಸ್ಸಿಗೆ ಅಭಿಮಾನಿಗಳಾದ

ದೇವತೆಗಳು ಆ ಸಂಕೇತಗಳ ಅರ್ಥಗಳನ್ನು ಬಿಡಿಸಿ ಅಹಂಕಾರ ತತ್ತ್ವದಲ್ಲಿ ತಮ್ಮ ಮೇಲೆ ಯಾಜಮಾನ್ಯವುಳ್ಳ ಪಾರ್ವತೀದೇವಿಯರಿಗೆ ತಲುಪಿಸುವರು. ಅವರು ಅವುಗಳನ್ನು ಕ್ರಮಬದ್ಧವಾಗಿ ಸಂಗ್ರಹಿಸಿ, " ನಾನು ತಿಳಿದೆ" ಎನಿಸುವ ಮುಖ್ಯ ಅಹಂ ತತ್ತ್ವಾಭಿಮಾನಿಗಳಾದ ತಮ್ಮ ಯಜಮಾನರಾದ ರುದ್ರದೇವರಿಗೆ ಅರ್ಪಿಸುವರು. ಈಗಿನ ವಿಜ್ಞಾನಿಗಳು ಜ್ಞಾನ ಕಾರ್ಯವು ಹೇಗೆ ನಡೆಯುವುದೆಂಬುದನ್ನು ನರಮಂಡಲದ ವಿಶ್ಲೇಷಣೆಯಿಂದ ಕಂಡುಹಿಡಿದಿದ್ದರೂ, ಜ್ಞಾನಗ್ರಾಹಿಯಾದ ಮನಸ್ಸೆಂಬುದರ ನಿಜಸ್ಥಿತಿಯನ್ನರಿಯರು. 'ಜ್ಞಾನಿ' ಎನಿಸುವ ಶರೀರಮಾನಿಯಾದ ಜೀವವ್ಯಕ್ತಿಯ ವಿಚಾರ ಅವರಿಗೆ ತಿಳಿಯದೇ ತಿಳಿಯದು. "ನಾನು" ಎನ್ನುತ್ತಾರೆ. "ನಾನು" ಎಂದರೆ ಯಾವು ಎಂಬುದು ತಿಳಿಯದು. ಇನ್ನು, ದೇವತಾಪ್ರಪಂಚದ ವಿಷಯವಾದರೂ ಅವರಿಗೆ ಹೇಗೆ ತಿಳಿದೀತು!)

**ತಾಮಸೋ ಭೂತಸೂಕ್ಷ್ಮಾದಿರ್ಯತಃ ಖಂ ಲಿಂಗಮಾತ್ಮನಃ ॥೧೦॥**

ತಾಮಸಃ = ತಾಮಸಾಹಂಕಾರವು; ಸೂಕ್ಷ್ಮ ಭೂತಾದಿಃ = ಸೂಕ್ಷ್ಮ ಭೌತಿಕ ವಸ್ತುಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚತನ್ಮಾತ್ರಗಳಿಗೆ ಉತ್ಪತ್ತಿ ಸ್ಥಾನವು; ಆತ್ಮನಃ = ಪರಮಾತ್ಮನ; ಲಿಂಗಂ = ಲಕ್ಷಣವಾದ; ಖಂ = ಆಕಾಶವು; ಯತಃ = ಯಾವ ತನ್ಮಾತ್ರಗಳ ಪಂಚೀಕರಣದಿಂದ; (ಅಭೂತ್ = ಉಂಟಾಯಿತು.)

(ಕಟ್ಟಿಗೆಯಲ್ಲಿ ಬೆಂಕಿ ಅಡಗಿರುವ ಹಾಗೆ ಆಕಾಶದಲ್ಲಿ ಶಬ್ದವೂ, ವಾಯುವಿನಲ್ಲಿ ಸ್ಪರ್ಶವೂ, ತೇಜಸ್ಸಿನಲ್ಲಿ ರೂಪವೂ, ಜಲದಲ್ಲಿ ರಸವೂ, ಭೂಮಿಯಲ್ಲಿ ಗಂಧವೂ ಅಡಗಿವೆ. 120 ಶಬ್ದ ತನ್ಮಾತ್ರದೊಡನೆ 20, 20 ಇತರ ತನ್ಮಾತ್ರಗಳು ಪಂಚೀಕರಣ ಕ್ರಮದಿಂದ ಬೆರಕೆಯಾದಾಗ ಗೋಚರಿಸುವ ಆಕಾಶವು ಉಂಟಾಗುತ್ತದೆ. ಇದರಂತೆ 120 ಸ್ಪರ್ಶತನ್ಮಾತ್ರದೊಂದಿಗೆ 20-20 ಬೇರೆ ತನ್ಮಾತ್ರಗಳ ಬೆರಕೆಯಿಂದ ವಾಯುವಿನ ಉತ್ಪತ್ತಿ. ಹೀಗೆ ಪಂಚ ಮಹಾಭೂತಗಳ ಸೃಷ್ಟಿ.

ಆಕಾಶವೆಂದು ನಾವು ಗುರುತಿಸುತ್ತೇವೆ. ಆದರೆ ಅದು ಏನು ಎಂದು ಹೇಳಲು ಬರುವುದಿಲ್ಲ. ಅದೇ ಪರಬ್ರಹ್ಮನ ಲಕ್ಷಣ. ಅವನಿರುವುದು ಗೊತ್ತು; ಆದರೆ ಹೇಗಿರುವನೆಂಬುದು ತಿಳಿಯದು. ಆದರೂ, ಆಕಾಶದಲ್ಲಿ ಉತ್ಪತ್ತಿಯಾಗುವ ಶಬ್ದವು, ಎಂದರೆ, ಓಂಕಾರದ ವಿಸ್ತಾರವವು, ಋಷಿಗಳಿಗೆ ವೇದಗಳ ರೂಪದಲ್ಲಿ ಗೋಚರಿಸುವುದು. ಅದರಿಂದ ಪರಬ್ರಹ್ಮನ ವಿಚಾರವನ್ನು ಅವರವರ ಯೋಗ್ಯತಾನುಸಾರವಾಗಿ ತಿಳಿಯಬಹುದು. ಈ ಕಾರಣದಿಂದ ಶಬ್ದಗುಣವುಳ್ಳ ಆಕಾಶವು ಬ್ರಹ್ಮನ ಲಕ್ಷಣ. ಲಕ್ಷಣ ಎಂದರೆ, ತಿಳಿವಳಿಕೆಯನ್ನುಂಟು ಮಾಡುವ ಚಿಹ್ನೆ. ವೇದಗಳಿಗೆ ಹೊರತಾದ ಶಬ್ದಜಾಲಗಳಿಂದ ಭಗವಂತನ ಜ್ಞಾನ ಉಂಟಾಗುವುದಿಲ್ಲ.)

**ಕಾಲಮಾಯಾಂಶ ಯೋಗೇನ ಭಗವದ್ವೀಕ್ಷಿತಂ ನಭಃ ।**
**ತಾಮಸಾನುಸ್ಮೃತಂ ಸ್ಪರ್ಶಂ ವಿಕುರ್ವನ್ನಿರ್ಮಮೇನಿಲಂ ॥೧೧॥**

ನಭಃ = ಭೂತಾಕಾಶವು; ಕಾಲ ಮಾಯಾ ಅಂಶ ಯೋಗೇನ = ಉದ್ದಿಷ್ಟಕಾಲ, ತಾಮಸಾಹಂಕಾರ ರೂಪವಾದ ಪ್ರಕೃತಿ ಮತ್ತು ಜೀವ ಮಾನಿಗಳಾದ ಬ್ರಹ್ಮದೇವರು, ಈ ಮೂರರ ಕ್ರಿಯಾ ಸಂಬಂಧದಿಂದ; ಭಗವದ್ವೀಕ್ಷಿತಂ = ಭಗವಂತನ ಸಂಕಲ್ಪಾನುಸಾರ; ತಾಮಸಾನುಸ್ಮೃತಂ = ತಾಮಸ ತನ್ಮಾತ್ರವನ್ನು; ವಿಕುರ್ವನ್ = ಪಂಚೀಕೀಣದಿಂದ ವಿಕಾರಗೊಳಿಸಿ; ಅನಿಲಂ = ಭೂತ ವಾಯುವನ್ನು; ನಿರ್ಮಮೇ ನಿರ್ಮಿಸಿತು.

(ಮೊದಲು ನಿರ್ಮಾಣವಾದುದು ಆಕಾಶತತ್ವ, ಅದರಲ್ಲಿನಿಂತ ಜೀವ–ಜಡ–ಕಾಲಮಾನಿಗಳಾದ ಬ್ರಹ್ಮ, ರಮಾ, ನಾರಾಯಣರು ಭಗತ್ಸಂಕಲ್ಪಕ್ಕನುಗುಣವಾಗಿ ಕಾಲ ಕ್ರಮದಲ್ಲಿ ಸ್ಪರ್ಶತನ್ಮಾತ್ರದ ಪಂಚೀಕೀಣದಿಂದ ವಾಯು ತತ್ವವನ್ನು ನಿರ್ಮಿಸಿದರು. ನಿರ್ಮಾಣವಾದ ವಾಯುತತ್ವಕ್ಕೆ ಆಕಾಶವು ಆಧಾರವಾದುದರಿಂದ, ಆಕಾಶದಿಂದ ವಾಯುವು ಉಂಟಾಯಿತೆಂದು ಹೇಳಿರುವರು. ಎಂದರೆ ವಾಯುವಿಗಿಂತ ಹೆಚ್ಚು ವ್ಯಾಪ್ತಿಯುಳ್ಳ ಆಕಾಶವು ವಾಯುವಿನಲ್ಲಿಯೂ ಪ್ರವಿಷ್ಟವಾಗಿ, ಅದಕ್ಕೆ ಆಶ್ರಯವಾಗಿದೆ ಎಂಬುದು ಅರ್ಥ. ಇದರಂತೆ ಈ ಮುಂದೆ ಹೇಳುವ ರೂಪ–ರಸ–ಗಂಧಗಳ ವಿಕಾರಗಳ ವಿಷಯದಲ್ಲಿಯೂ ತಿಳಿಯಬೇಕು – ತೇಜಸ್ಸಿನಲ್ಲಿ ಆಕಾಶವಾಯುಗಳು; ಜಲದಲ್ಲಿ ಆಕಾಶ, ವಾಯು, ತೇಜ ಜಲತತ್ವಗಳು – ಸಮಾವಿಷ್ಟವಾಗಿವೆ.

ಭೌತ ಪ್ರಪಂಚದ ನಿರ್ಮಾಣವು ಕೇವಲ ಭೌತ ಮೂಲಗಳಿಂದಲೇ ಆಗಿರುವುವೆಂದು ಪರಿಗಣಿಸುವುದು ಈಗಿನ ವಿಜ್ಞಾನಿಗಳ ಅಪಕ್ವಬುದ್ಧಿಯ ಲಕ್ಷಣ. ಆ ಮೂಲಗಳ ಹಿನ್ನೆಲೆಯಲ್ಲಿರುವ ದೈವೀಪ್ರಪಂಚವನ್ನೂ, ಸರ್ವಸ್ವತಂತ್ರನಾದ ಭಗವಂತನ ಸಂಕಲ್ಪವನ್ನೂ, ಸೃಷ್ಟಿಯಿಂದ ಜೀವರಿಗೆ ಆಗಬೇಕಾದ ಪ್ರಯೋಜನಾಂಶ ವನ್ನೂ ಗಮನಿಸದಿದ್ದರೆ, ಅಪಾರ ವೆಚ್ಚದಿಂದ ನಡೆಸಿದ ಸಂಶೋಧನೆಯಲ್ಲಾ ವ್ಯರ್ಥವಾಗುವುದಲ್ಲದೆ, ಆಶಾಪರರ ಕೈವಾಡದಿಂದ ದುರುಪಯೋಗವಾಗಿ, ಅಲ್ಪ ಸುಖದ ಜೊತೆಗೆ ಅಪಾರ ದುಃಖವನ್ನೂ ಉಂಟುಮಾಡುವುದು. ರಮಾದೇವಿ ಮತ್ತು ಬ್ರಹ್ಮದೇವರು ಭಗವಂತನ ಅಧೀನರಾಗಿ, ಅವರೂ ಕಾಲಕ್ಕೆ ಅಭಿಮಾನಿಗಳಾಗಿರುವರು).

**ಅನಿಲೋಪಿ ವಿಕುರ್ವಾಣೋ ನಭಸೋರುಬಲಾನ್ವಿತಃ।**
**ಸಸರ್ಜರೂಪತನ್ಮಾತ್ರಾಂ ಜ್ಯೋತಿರ್ಲೋಕಸ್ಯ ಲೋಚನಂ ॥೧೨॥**

ಅನಿಲಃ ಅಪಿ = ವಾಯುತನ್ಮಾತ್ರವೂ ಕೂಡ; ನಭಸಃ ಉರುಬಲಾನ್ವಿತಃ = ಆಕಾಶ ತತ್ವದ ಯಜಮಾನರ ಅಧಿಕ ಬಲದಿಂದ; ವಿಕುರ್ವಾಣಃ =

ವಿಕಾರವನ್ನುಂಟುಮಾಡಿ; ರೂಪತನ್ಮಾತ್ರಾಂ = ರೂಪದರ್ಶನಕ್ಕೆ ಕಾರಣವಾದ ತೇಜ ತನ್ಮಾತ್ರೆಯನ್ನು; ಸಸರ್ಜ = ಉಂಟುಮಾಡಿತು; ಅದೇ ರೀತಿ ತೇಜಸ್ತನ್ಮಾತ್ರದ ಪಂಚೀಕರಣದಿಂದ; ಜ್ಯೋತಿರ್ಲೋಕಸ್ಯ = ಬೆಳಕಿನ ಪ್ರಪಂಚದ; ಲೋಚನಂ = ಕಣ್ಣಾದ ಸೂರ್ಯಬಿಂಬವನ್ನು; ಸಸರ್ಜ = ಉಂಟುಮಾಡಿತು.

**ಅನಿಲೇನಾನ್ವಿತಂ ಜ್ಯೋತಿರ್ವಿಕುರ್ವತ್ಪರವೀಕ್ಷಿತಂ ।**
**ಆಧತ್ತಾಂಭೋರಸಮಯಂ ಕಾಲ ಮಾಯಾಂಶ ಯೋಗತಃ ॥೧೩॥**

ಜ್ಯೋತಿಃ = ಜ್ಯೋತಿ ತನ್ಮಾತ್ರವು; ಕಾಲ ಮಾಯಾಂಶ ಯೋಗತಃ = ಕಾಲ, ಪ್ರಕೃತಿ ಮತ್ತು ಜೀವರ ಅಭಿಮಾನಿಗಳ ಬಲದಿಂದ; ಪರವೀಕ್ಷಿತಂ = ಭಗವಂತನ ಸಂಕಲ್ಪಕ್ಕೆ ಒಳಗಾಗಿ; ಅನಿಲೇನ ಅನ್ವಿತಂ = ಆಕಾಶ ಸಹಿತವಾದ ವಾಯುವಿನಿಂದ ಕೂಡಿಕೊಂಡು; ವಿಕುರ್ವತ್ = ಪಂಚಿಕರಣ ಕ್ರಮದಿಂದ; ರಸಮಯಂ = ರಸ ತನ್ಮಾತ್ರಾತ್ಮಕವಾದ; ಅಂಭಃ = ಆಪ(ಜಲ) ತತ್ವವನ್ನು; ಆಧತ್ತ = ಧಾರಣಮಾಡಿತು (ಉಂಟುಮಾಡಿತು.)

(ಆಕಾಶ ತತ್ವದ ಅಭಿಮಾನಿಗಳಾದವರು ಗಣಪತಿ. ಇವರಲ್ಲಿ ರುದ್ರ, ಬ್ರಹ್ಮ, ರಮಾದೇವಿಯರಂತರ್ಯಾಮಿಯಾದ ವಿಷ್ಣುನಾಮಕ ವಿಶ್ವಂಭರ ಮೂರ್ತಿಯು ಸೃಷ್ಟಿಯನ್ನು ಮುಂದುವರಿಸುವನು.)

**ಜ್ಯೋತಿಷಾಂಭೋನು ಸಂಸೃಷ್ಟಂ ವಿಕುರ್ವತ್ಪರವೀಕ್ಷಿತಂ ।**
**ಮಹೀಂ ಗಂಧಗುಣಾಮಾಧಾತ್ಕಾಲ ಮಾಯಾಂಶ ಯೋಗತಃ ॥೧೪॥**

ಜ್ಯೋತಿಷಾ ಅನುಸಂಸೃಷ್ಟಂ = ಅನುಕ್ರಮವಾಗಿ, ಎಂದರೆ, ಆಕಾಶ, ವಾಯುಗಳ ಬಲದಿಂದ ಯುಕ್ತವಾದ ಜೋತಿಸ್ತತ್ವದಿಂದ ಕೂಡಿಕೊಂಡು; ಅಂಭಃ = ರಸಗ್ರಹಣಕಾರಿಯಾದ ಜಲ ತತ್ವವು; ಕಾಲ ಮಾಯಾ ಅಂಶ ಯೋಗತಃ = ಕಾಲ, ಪ್ರಕೃತಿ ಮತ್ತು ಜೀವಮಾನಿ ಬ್ರಹ್ಮ–ಇವರ ಬಲದಿಂದ; ಪರಿವೀಕ್ಷಿತಂ = ಭಗವತ್ಸಂಕಲ್ಪದಿಂದ; ಗಂಧ ಗುಣಾಂ = ಮುಖ್ಯವಾಗಿ ಗಂಧ ತನ್ಮಾತ್ರಾ ಕಾರ್ಯವಾದ; ಮಹೀಂ = ಭೂತತ್ವವನ್ನು; ಆಧಾತ್ = ಉಂಟುಮಾಡಿತು.

(ಇಲ್ಲಿಯವರೆಗೆ ಹೇಳಿರುವುದು ಲೋಕಗಳ ಸೃಷ್ಟಿಗೆ ಬೇಕಾದ ತತ್ವಗಳ (ಮೂಲವಸ್ತುಗಳ) ವಿಷಯವೇ ಹೊರತು ನಮ್ಮ ಅನುಭವದಲ್ಲಿ ಕಂಡುಬರುವ ಆಕಾಶ, ವಾಯು, ತೇಜ, ಜಲ ಮತ್ತು ಭೂಮಿಯ ಸೃಷ್ಟಿಯಲ್ಲ ಅದನ್ನು ಮುಂದೆ ವಿವರಿಸುವರು.)

**ಭೂತಾನಾಂ ನಭ ಆದೀನಾಂ ಯದ್ಯದ್ಭಾವ್ಯಂ ಪರಾತ್ಪರಂ ।**
**ತೇಷಾಂ ಪರಾನುಸಂಸರ್ಗಾದ್ಯಥಾ ಸಂಖ್ಯಂ ಗುಣಾನ್ವಿದುಃ ॥೧೫॥**

ಯತ್ ಯತ್ ಪರಾತ್ಪರಂ ಭಾಷ್ಯಂ = ಯಾವದು ಯಾವುದು ಒಂದರನಂತರ ಒಂದರಂತೆ ಸೃಷ್ಟಿಯಾಯಿತೆಂದು ತಿಳಿದು ಬರುವುದೋ; ಅಂತಹ; ನಭ ಆದೀನಾಂ = ಆಕಾಶವೇ ಮೊದಲಾದ; ತೇಷಾಂ ಭೂತಾನಾಂ = ಆ ಭೂತ ತತ್ವಗಳ; ಪರಾನುಸರ್ಗಾತ್ = ಮೇಲೆ ಮೇಲಿನ ತತ್ವದ ಪ್ರವೇಶವಿರುವುದರಿಂದ; ಯಥಾ ಸಂಖ್ಯಂ = ಅವುಗಳ ಹಿಂದು ಮುಂದುಗಳ ಸಂಖ್ಯಾನುಗುಣವಾಗಿ; ಗುಣಾನ್ = ಗುಣಗಳಿರುವುವೆಂದು; ವಿದುಃ = ಜ್ಞಾನಿಗಳು ಬಲ್ಲವರಾಗಿದ್ದಾರೆ.

(ಆಕಾಶವು ಶಬ್ದವೆಂಬ ಒಂದೇ ಗುಣದಿಂದ ಕೂಡಿರುವುದು; ಗಾಳಿಯಲ್ಲಿ ಶಬ್ದ, ಸ್ಪರ್ಶಗಳೆಂಬ ಎರಡು ಗುಣಗಳಿರುವುವು; ತೇಜದಲ್ಲಿ ಶಬ್ದ, ಸ್ಪರ್ಶ, ರೂಪಗಳು; ಜಲದಲ್ಲಿ ಶಬ್ದ, ಸ್ಪರ್ಶ, ರೂಪ, ರಸಗಳು; ಪೃಥ್ವಿಯಲ್ಲಿ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಐದು ಗುಣಗಳೂ ಇರುವುವು.)

**ಏತೇದೇವಾ ಕಲಾ ವಿಷ್ಣೋಃ ಕಾಲ ಮಾಯಾಂಶ ಲಿಂಗಿನಃ ।**
**ನಾನಾತ್ವಾತ್ಸ್ವಕ್ರಿಯಾನೀಶಾಃ ಪ್ರೋಚುಃ ಪ್ರಾಂಜಲಯೋವಿಭುಂ ॥೧೯॥**

ಕಾಲ ಮಾಯಾಂಶ ಲಿಂಗಿನಃ = ಕಾಲ, ಪ್ರಕೃತಿ ಮತ್ತು ಜೀವರ ಕಾರ್ಯಗಳನ್ನು ನಡೆಸುವ ನಿಮಿತ್ತದಿಂದ ಸೂಕ್ಷ್ಮಶರೀರಗಳನ್ನು ಪಡೆದುಕೊಂಡು; ಏತೇ ದೇವಾಃ = ಈ ಅಭಿಮಾನಿ ದೇವತೆಗಳು; ವಿಷ್ಣೋಃ ಕಲಾಃ = ಪರಮಾತ್ಮನಾದ ವಿಷ್ಣುವಿನ ಒಂದೊಂದು ಕಾಲಾಂಶದಿಂದ ವೈಶಿಷ್ಟ್ಯವನ್ನು ಹೊಂದಿದವರು; ನಾನಾತ್ವಾತ್ = ಬೇರೆಬೇರೆ ಸಾಮರ್ಥ್ಯಗಳನ್ನು ಮಾತ್ರ ಉಳ್ಳವರಾದುದರಿಂದ; ಸ್ವ ಕ್ರಿಯಾ ಅನೀಶಾಃ = ಬ್ರಹ್ಮಾಂಡಾದಿಗಳನ್ನು ನಿರ್ಮಿಸುವ ವಿಷಯದಲ್ಲಿ ತಮ್ಮ ತಮ್ಮ ಸಾಮರ್ಥ್ಯಗಳು ಮಾತ್ರ ಸಾಲದೆಂಬ ಕಾರಣದಿಂದ; ಪ್ರಾಂಜಲಯಃ = ಭಕ್ತಿಯಿಂದ ಕೈಮುಗಿದು ಕೊಂಡು; ವಿಭುಂ = ಸರ್ವ ಸಮರ್ಥನಾದ ಪರಮಾತ್ಮನನ್ನು ಕುರಿತು; ಪ್ರೋಚುಃ = ಹೇಳಿಕೊಂಡರು.

(ಭಗವಂತನ ಅವತಾರಗಳನ್ನು ಸ್ವಾಂಶಗಳೆಂದೂ, ಇತರ ಜೀವರಲ್ಲಿ ಅವರಂತೆ ಭಗವಂತನು ಬಿಂಬನಾಗಿರುವುದನ್ನು ಭಿನ್ನಾಂಶವೆಂದೂ ವ್ಯವಹರಿಸುವರು. ಇಂತಹ ಅಂಶಗಳು ಎಲ್ಲಾ ಜೀವರಲ್ಲಿಯೂ ಇದ್ದರೂ, ಜೀವರ ಯೋಗ್ಯತೆಯನ್ನೂ ಮೀರಿ ಕಾರ್ಯ ನಿರ್ವಹಿಸುವಂತೆ ಅವರಲ್ಲಿ ಭಗವಂತನು ಪ್ರವಿಷ್ಟನಾಗಿರುವುದಕ್ಕೆ ಕಲಾಂಶವೆನ್ನುವರು. ಅಂತಹ ಜೀವರಲ್ಲಿ ಪರಮಾತ್ಮನೇ ಕಾರ್ಯಗಳನ್ನು ನಡೆಸಿ ಅವರಿಗೆ ಕೀರ್ತಿಯನ್ನೂ, ಪುಣ್ಯವನ್ನೂ ಕೊಡುವನು. ದೇವತೆಗಳು, ಋಷಿಗಳು, ದೇವ ಚಕ್ರವರ್ತಿಗಳು ಮುಂತಾದವರಲ್ಲಿರುವುದು ಭಗವಂತನ ಕಲಾಂಶಗಳು.

ಬ್ರಹ್ಮದೇವರು ಕಾಲ ಮತ್ತು ಜೀವರಿಗೆ ನಿಯಾಮಕತ್ವ ಉಳ್ಳವರಾಗಿರುವರು. ಇತರ ದೇವತೆಗಳು ತಮ್ಮ ತಮ್ಮ ತತ್ವಗಳಿಗೂ, ಕೆಳ ಕೆಳಗಿನ ಎಲ್ಲಾ ತತ್ವದೇವತೆಗಳಿಗೂ ನಿಯಾಮಕರಾಗಿರುವರು. ಬ್ರಹ್ಮದೇವರು ಮಹತ್ತತ್ವದಿಂದ ಹಿಡಿದು ಎಲ್ಲಾ ತತ್ವಗಳಿಗೂ, ದೇವತೆಗಳಿಗೂ ನಿಯಾಮಕರು.)

**ದೇವಾ ಊಚುಃ–** ದೇವತೆಗಳು ಪ್ರಾರ್ಥಿಸಿದರು.

**ನತಾಃಸ್ಮ ತೇ ದೇವ ಪದಾರವಿಂದಂ ಪ್ರಪನ್ನ ತಾಪೋಪಶಮಾತಪತ್ರಂ।**
**ಯನ್ಮೂಲಕೇತಾ ಯತಯೋಂಜಸೋರು ಸಂಸಾರ ದುಃಖಂ**
**ಬಹಿರುತ್ಕ್ಷಿಪಂತಿ ॥೧೭॥**

ದೇವ = ಸ್ವಾಮೀ; ಪ್ರಪನ್ನತಾಪ ಉಪಶಮ ಆತಪತ್ರಂ = ಮೊರೆ ಹೊಕ್ಕವರ ಆಧಿಭೌತ, ಆಧಿ ದೈವಿಕ, ಆಧ್ಯಾತ್ಮಿಕ ತಾಪತ್ರಯಗಳನ್ನು ನಿವಾರಿಸಲು ಛತ್ರಿಯಂತಿರುವ; ಯತ್ ಮೂಲ ಕೇತಾಃ = ಯಾವ ಪಾದ ಮೂಲವನ್ನೇ ಆಶ್ರಯವನ್ನಾಗಿ (ಮನೆಯನ್ನಾಗಿ) ಮಾಡಿಕೊಂಡಿರುವ; ಯತಯಃ = ನಿಯಮ ಶೀಲರು; ಉರುಸಂಸಾರದುಃಖಂ = ಅನಾದಿಯಿಂದ ಗಂಟು ಬಿದ್ದಿರುವ ಸಂಸಾರ ದುಃಖವನ್ನು; ಅಂಜಸಾ = ನೇರವಾಗಿ(ತಪ್ಪದೆ); ಬಹಿಃ ಉತ್ಕ್ಷಿಪಂತಿ = ಕಳಚಿ ಹೊರಗೆ ಹಾಕಬಲ್ಲರೋ, ಅಂತಹ; ತೇ = ನಿನ್ನ; ಪಾದಾರವಿಂದಂ = ಪಾದಪದ್ಮವನ್ನುದ್ದೇಶಿಸಿ; ನತಾಃ ಸ್ಮ = ಏಕಮನಸ್ಸಿನಿಂದ ನಮಸ್ಕರಿಸುತ್ತಿದ್ದೇವೆ.

("ಅಸ್ಮದಿಷ್ಟೈಕ ಕಾರ್ಯಾಯ", ನಮಗೆ ಸಂಸಾರದಲ್ಲಿ ಸಂಭವಿಸುವ ಸುಖದುಃಖಗಳೆರಡೂ ಪರಿಣಾಮದಲ್ಲಿ ನಮಗೆ ನಿಜಸುಖವನ್ನುಂಟು ಮಾಡುವುದಕ್ಕಾಗಿಯೇ ಭಗವಂತನಿಂದ ಒದಗುತ್ತಿವೆ ಎಂದು ತಿಳಿದು, ಅನ್ಯರ ವಶವಾಗುವ ಮನಸ್ಸನ್ನು ಭಗವಂತನಲ್ಲಿ ನಮಸ್ಕಾರ ಪೂರ್ವಕವಾಗಿ ನಿಲ್ಲಿಸಿದರೆ, ಎಳ್ಳಷ್ಟೂ ಸುಖ ದುಃಖಗಳ ಸ್ಪರ್ಶವಾಗುವುದಿಲ್ಲ. ಅದಕ್ಕೆ ಬದಲಗಿ ಆತ್ಮಾನಂದವು ಉಕ್ಕಿ ಬರಲಾರಂಭಿಸುವುದು.)

**ಋತೇ ಯದಸ್ಮಿನ್ ಭವ ಈಶ ಜೀವಾಸ್ತಾಪತ್ರಯೇಣಾಭಿ**
**ಹತಾನಶರ್ಮ।**
**ಆತ್ಮನ್ಲಭಂತೇ ಭಗವಂಸ್ತವಾಂಘಿ ಚ್ಛಾಯಾಂಶ ವಿದ್ಯಾಮತ ಆಶ್ರಯೇಮ**
**॥೧೮॥**

ಈಶ = ಸರ್ವ ಸ್ವಾಮೀ; ಭಗವನ್ = ಸಕಲೈಶ್ವರ್ಯ ಸಂಪೂರ್ಣನಾದವನೇ;

ಅಸ್ಮಿನ್ ಭವೇ = ಈ ಸಂಸಾರ ರೂಪವಾದ ಜಗತ್ತಿನಲ್ಲಿ; ತಾಪತ್ರಯೇಣ ಅಭಿಹತಾಃ = ತಾಪತ್ರಯಗಳ ಹೊಡೆತಕ್ಕೆ ಸಿಕ್ಕಿರುವ; ಜೀವಾಃ = ಜೀವರು; ಯತ್ಋತೇ = ಯಾವ ರಕ್ಷಣೆ ನೀಡುವ ಪಾದವನ್ನು ಆಶ್ರಯಿಸಿದ ಹೊರತು; ಆತ್ಮನಿ = ತಮ್ಮಲ್ಲಿ; ಶರ್ಮ = ನೆಮ್ಮದಿಯನ್ನು; ನಲಭಂತೇ = ಹೊಂದಲಾರರೋ; ಅತಃ = ಆ ಕಾರಣದಿಂದ; ತವ = ನಿನ್ನ; ಅಂಘ್ರಿ ಛಾಯಾಂಶ ವಿದ್ಯಾಂ = ನಿನ್ನ ಪಾದದ ನೆರಳಿನಂತಿರುವ ಬ್ರಹ್ಮ ವಿದ್ಯೆಯ ಒಂದಂಶವನ್ನು; ಆಶ್ರಯೇಮ = ಆಶ್ರಯಿಸಿ ಉದ್ಧೃತರಾಗಲು ಬಯಸುತ್ತೇವೆ.

(ಜೀವರ ಗುಂಪಿನಲ್ಲಿ ತಿಳಿಯಬಹುದಾದಷ್ಟು ಪೂರ್ಣ ಬ್ರಹ್ಮವಿದ್ಯೆಗೆ ಅರ್ಹರಾದವರು ಬ್ರಹ್ಮದೇವರು; ಉಳಿದವರಿಗೆ ಅವರವರ ಯೋಗ್ಯತಾನುಸಾರ. ಜೀವರ ಸಾಧನೆಗಳನ್ನು ಭಗವಂತನು ತತ್ವಾಭಿಮಾನಿ ದೇವತೆಗಳ ಮುಖಾಂತರ ಮಾಡಿಸುವುದರಿಂದ, ಆ ಸಾಧನೆಗಳನ್ನು ನಡೆಸುವ ರೀತಿ ನೀತಿಗಳನ್ನು (ತಮ್ಮ ತಮ್ಮ ವ್ಯಾಪ್ತಿಗೆ ಆವಶ್ಯಕವಾದ ಬ್ರಹ್ಮ ವಿದ್ಯೆಯ ಅಂಶಗಳನ್ನು) ಆ ತಾತ್ವಿಕ ದೇವತೆಗಳು ತಿಳಿದಿರಬೇಕು. ಅದರಿಂದ ಜೀವರ ಸಾಧನೆಗಳು ಆಗುವುದಲ್ಲದೆ, ಆ ದೇವತೆಗಳ ಸಾಧನೆಗಳೂ ಆಗುವುವು.)

**ಮಾರ್ಗಂತಿ ಯತ್ತೇ ಮುಖಪದ್ಮ ನೀಡೈಶ್ಛಂದಃ ಸುಪರ್ಣೈರ್ಋಷ**
**ಯೋವಿವಿಕ್ತೇ ।**
**ಯಚ್ಚಾಘಮರ್ಷೋ ದ್ಯುಸರಿದ್ಧರಾಯಾಃ ಪರಂ ಪದಂ ತೀರ್ಥಪದಃ**
**ಪ್ರಪನ್ನಾಃ ॥೧೯॥**

ತೇ = ನಿನ್ನ; ಮುಖ ಪದ್ಮ ನೀಡೈಃ = ಪದ್ಮ ಸದೃಶವಾದ ಬಾಯಿಯೆಂಬ ಗೂಡುಗಳಿಂದ ಹೊರೊಮ್ಮುವ; ಛಂದಸ್ ಸುಪರ್ಣೈಃ = ವೇದಗಳೆಂಬ ಪಕ್ಷಿಗಳ ಗಮನಾಗಮನಗಳಿಂದ; ಯತ್ ಪರಂ ಪದಂ = ಯಾವ ಶ್ರೇಷ್ಠವಾದ ಪಾದದ ಮಹಿಮೆಯನ್ನು; ಋಷಯಃ = ಜ್ಞಾನಿಗಳಾದ ಯೋಗ ಸಾಧಕರು; ವಿವಿಕ್ತೇ = ಏಕಾಂತದಲ್ಲಿ ಕುಳಿತು; ಮಾರ್ಗಂತಿ = ಹುಡುಕಿ ತಿಳಿಯಲು ಯತ್ನಿಸುವರೋ; ಯಚ್ಚ = ಯಾವ ದಿವ್ಯ ಪಾದ ಸ್ಮರಣೆಯು; ಅಘಮರ್ಷಃ = ಆಶ್ರಿತರ ಪಾಪಗಳನ್ನು ಕಳೆದು ಬಿಡುವುದೋ; ಯತ್ = ಯಾವುದು; ದ್ಯು ಸರಿತ್, ಧರಾಯಾಃ = ದೇವಗಂಗೆಯ ಮತ್ತು ಭೂದೇವಿಯ; ಪರಂ ಪದಂ = ಉತ್ತಮವಾದ ಆಶ್ರಯ ಸ್ಥಾನವೋ; ಅಂತಹ; ತೀರ್ಥಪದಃ = ಎಲ್ಲವನ್ನೂ ಪವಿತ್ರ ಗೊಳಿಸುವ ಪಾದವುಳ್ಳವನಾದ ನಿನ್ನ; ಪದಂ = ಪಾದವನ್ನು; ಪ್ರಪನ್ನಾಃ = ಆಶ್ರಯಿಸಿದವರಾಗಿದ್ದೇವೆ.

(ಸರ್ವತ್ರ ಸಂಪೂರ್ಣನಾದ ಭಗವಂತನ ಅವಯವಗಳಲ್ಲಿ ಹೆಚ್ಚು ಕಡಿಮೆ ಎಂಬುದಿಲ್ಲದಿದ್ದರೂ, ಭಕ್ತರಿಗೆ ದರ್ಶನ ಕೊಡುವ ತನ್ನ ರೂಪದಲ್ಲಿ ಯಾವ ಯಾವ ಅವಯುವಗಳಿಂದ ಏನೇನು ಕಾರ್ಯ ನಡೆಸಬೇಕೋ ಅಷ್ಟನ್ನು ಮಾತ್ರ ಪ್ರಕಟಗೊಳಿಸುವುದರಿಂದ ಅವಯುವಗಳ ವ್ಯತ್ಯಾಸ ಭಾವನೆ. ಭಗವಂತನ ಬಾಯೊಳಗಿಂದ ವೇದೋಚ್ಚಾರಣೆಯು ಸದಾ ನಡೆದಿರುತ್ತದೆ. ಅದರ ಪ್ರಯೋಜನ, ಮುಖ್ಯವಾಗಿ ನಿತ್ಯ ಸಹಚಾರಿಣಿಯಾದ ರಮಾದೇವಿಯರಿಗೆ. ಸೃಷ್ಟಿ ಕಾಲದಲ್ಲಿ ಬ್ರಹ್ಮಾದಿ ದೇವತೆಗಳೂ, ವೇದ ಮಂತ್ರ ದ್ರಷ್ಟಾರರಾದ ಋಷಿಗಳೂ ಅದರ ಪ್ರಯೋಜನ ಹೊಂದುವರು: ಆ ಭಗವಂತನ ಪಾದವನ್ನು ತೊಳೆದಿಳಿದುದರಿಂದ ದೇವಗಂಗೆಯ ಪಾವಿತ್ರ್ಯಕ್ಕೆ ಆಶ್ರಯವಾದುದು ಆ ಪಾದ. ಭೂಮಿಯ ಉತ್ಪತ್ತಿ ಮತ್ತು ಸ್ಥಿತಿಯು ವಿರಾಟ್ ಪುರುಷನ ಪಾದದಂಶದಿಂದ. ಆದುದರಿಂದ ಭೂದೇವಿಗಾಶ್ರಯವಾಗಿರುವುದು ಅವನ ಪಾದ.)

ಯಚ್ಛ್ರದ್ಧಯಾಶ್ರುತವತ್ಯಾಚ ಭಕ್ತ್ಯಾ ಸಂಮೃಜ್ಯಮಾನೇ
ಹೃದಯೇವಧಾರ್ಯ ।
ಜ್ಞಾನೇನ ವೈರಾಗ್ಯ ಬಲೇನ ಧೀರಾ ವ್ರಜಂತಿಯತ್ತೇಂಘ್ರಿಸರೋಜ
ಪೀಠಂ ॥೨೦॥

ಯತ್ = ಯಾವ ಪಾದ ಸರೋಜದ ಮಹಿಮೆಯನ್ನು; ಶ್ರದ್ಧಯಾ ಶ್ರುತವತ್ಯಾ = ಶ್ರದ್ಧೆವಹಿಸಿ ಕೇಳುವುದರಿಂದಲೂ; ಚ = ಮತ್ತು; ಭಕ್ತ್ಯಾ = ಮಹಿಮೆಯನ್ನರಿತ ಸ್ನೇಹ ವಿಧಾನದಿಂದಲೂ; ಸಂಮೃಜ್ಯಮಾನೇ = ಕೊಳೆಯನ್ನು ಕಳೆದು ಶುದ್ಧಗೊಳಿಸಿದ (ಸುವಿಚಾರದಿಂದ ಶೋಧಿಸಿದ); ಹೃದಯೇ = ಮನಸ್ಸಿನಲ್ಲಿ; ಅವಧಾರ್ಯ = ನೆಲೆಗೊಳಿಸಿ; ಜ್ಞಾನೇನ = ಜ್ಞಾನದ ಬಲದಿಂದಲೂ; ವೈರಾಗ್ಯ ಬಲೇನ = ಇತರ ವಿಷಯಗಳಲ್ಲಿ ಆಸಕ್ತಿಯನ್ನು ಬಿಟ್ಟ ಬಲದಿಂದಲೂ; ಧೀರಾಃ = ಬುದ್ಧಿವಂತರು; ತೇ ಅಂಘ್ರಿ ಸರೋಜ ಪೀಠಂ ಯತ್(ತತ್) = ನಿನ್ನ ಪಾದಕಮಲಸ್ಥಾನೀಯವಾದ ಪದವಿಯನ್ನು; ವ್ರಜಂತಿ = ಹೊಂದುತ್ತಾರೆ.

(ಇಹದಲ್ಲಿ ಹೆಣಗುತ್ತಾ, ಅದರಿಂದಲೇ ಭಗವಂತನ ಪಾದವನ್ನಾಶ್ರಯಿಸುವುದರ ಸತ್ಪ್ರಯೋಜನವನ್ನು ತಿಳಿದ ಮೇಲೆ, ಆ ಜ್ಞಾನದಿಂದ ವೈರಾಗ್ಯ ಹೊಂದಿ, ಸಂಸಾರದ ಹಂಬಲವನ್ನು ಬಿಟ್ಟು, ಬುದ್ಧಿವಂತರು ಭಗವಂತನ ಪಾದಸ್ಥಾನೀಯವಾದ ವೈಕುಂಠ ಪದವಿಯನ್ನು ಪಡೆಯುತ್ತಾರೆ.)

ವಿಶ್ವಸ್ಯ ಜನ್ಮ ಸ್ಥಿತಿ ಸಂಯಮಾರ್ಥೇ ಕೃತಾವತಾರಸ್ಯ ಪದಾಂಬುಜಂ ತೇ।
ವ್ರಜೇಮ ಸರ್ವೇಶರಣಂ ಯದೀಶ ಸ್ಮೃತಂ ಪ್ರಯಚ್ಛತ್ಯಭಯಂ
ಸ್ವಪುಂಸಾಂ ॥೨೧॥

ಈಶ = ಸ್ವಾಮೀ; ವಿಶ್ವಸ್ಯ ಜನ್ಮ ಸ್ಥಿತಿ ಸಂಯಮಾರ್ಥೇ = ಜಗತ್ತಿನಲ್ಲಿ ಅನುಭವ ಪಡೆದು ಉದ್ಧೃತರಾಗಬೇಕಾದ ಜೀವರ [illegible] ವನ್ನು ಸೃಷ್ಟಿಸಿ, ಪಾಲಿಸಿ, ಸಾಧನೆಗಳ ಫಲಸಂಗ್ರಹ ಮಾಡುವ [illegible] (ಲಯಕಾರ್ಯ [illegible]); ಕೃತಾವತಾರಸ್ಯ = ಪ್ರಕಟವಾದ; ಯತ್ = ಯಾವ ಪಾದಪದ್ಮವು; ಸ್ಮೃತಂ = ಸ್ಮರಣೆ ಮಾತ್ರದಿಂದ; ಸ್ವಪುಂಸಾಂ = ಆ[illegible] ಭಯಂ ಪ್ರಯಚ್ಛತಿ = ಸಂಸಾರದಲ್ಲಿ ನಿರ್ಭೀತಿಯನ್ನೂ, ಅನ[illegible] "ಅಭಯ"ವೆನಿಸುವ ಮೋಕ್ಷ ಪದವಿಯನ್ನೂ ಕೊಡುವುದೋ; ತೇ ಪದಾಂಬುಜಂ = [illegible] ನಿನ್ನ ಪಾದ ಪದ್ಮವನ್ನು; ಸರ್ವೇ = ನಾವೆಲ್ಲರೂ; ಶರಣಂವ್ರಜೇಮ = ಆಶ್ರ[illegible]ರಾಗಲು ಇಚ್ಛೆಸುತ್ತೇವೆ.

(ಈ ಬ್ರಹ್ಮ ಕಲ್ಪದಲ್ಲಿ ಸೃಷ್ಟಿಗೆ ಬಂದ ದೇವತೆಗಳು ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳ ವಿಚಾರವನ್ನೂ, ಋಷಿಗಳೇ ಮೊದಲಾದವರ ಚರ್ಯೆಗಳನ್ನೂ ವರ್ಣಿಸಿ ಸ್ತೋತ್ರ ಮಾಡುತ್ತಿರುವುದು ಚೋದ್ಯವೆನಿಸಬಹುದು. ಆದರೆ, ಆ ಹಿರಿಯ ತಾತ್ವಿಕ ದೇವತೆಗಳು ಹಿಂದಿನ ಅನೇಕ ಬ್ರಹ್ಮಕಲ್ಪಗಳಲ್ಲಿ ಸಾಧನೆಗಳನ್ನು ಮಾಡಿ ಈಗಿನ ಪದವಿಗಳನ್ನು ಪಡೆದವರು; ಜಾತಾಪರೋಕ್ಷಿಗಳು. ಇದನ್ನು ನೆನಪಿನಲ್ಲಿಡಬೇಕು.

ಭಗವಂತನ ಕರುಣಾಪೂರ್ಣವಾದ ಸ್ವಾತಂತ್ರವನ್ನೂ ತಮ್ಮ ಅಸ್ವಾತಂತ್ರ್ಯವನ್ನೂ ಚೆನ್ನಾಗಿ ಸ್ಮರಿಸಿ, ಭಗವಂತನ ಸೇವೆಗಾಗಿ ಸ್ವಾತ್ಮಾರ್ಪಣ ಮಾಡಿಕೊಳ್ಳುತ್ತಿರುವುದು ಅವರ ಪ್ರಾರ್ಥನೆಯ ಭಾವ.)

**ಯತ್ಸಾನುಬಂಧೇಸತಿ ದೇಹ ಗೇಹೇ ಮಮಾಹಮಿತ್ಯೂಢದುರಾ**
**ಗ್ರಹಾಣಾಂ ।**
**ಪುಂಸಾಂ ಸುದೂರಂ ವಸತೋಽಪಿ ಪುರ್ಯಾಂ ಭಜೇಮ**
**ತತ್ತೇಭಗವನ್ಪದಾಬ್ಜಂ ॥೨೨॥**

ಭಗವನ್ = ಹೇ ಪೂರ್ಣ ಗುಣೈಶ್ವರ್ಯ ಸಂಪನ್ನನೇ; ದೇಹಗೇಹೇ = ಜೀವಭಿನ್ನವಾದ ಅಸತ್ಯ ದೇಹದಲ್ಲಿಯೂ, ಜಡಗಳಾದ ಮನೆ ಮುಂತಾದವು ಗಳಲ್ಲಿಯೂ; ಮಮ = ನನ್ನದು; ಅಹಂ = ನಾನು; ಇತಿ = ಹೀಗೆಂದು; ಊಢ ದುರಾಗ್ರಹಾಣಾಂ = ಚೆನ್ನಾಗಿ ಬೇರೂರಿದ ತಪ್ಪು ತಿಳಿವಳಿಕೆಯುಳ್ಳ; ಪುಂಸಾಂ = ಮಾನವರಿಗೂ; ಸಾನುಬಂಧೇ = ಅನುಸರಿಸಿ ಬಂದ ಅಜ್ಞಾನ ರೂಪವಾದ ಬಂಧನ ವಿರಲು; ಪುರ್ಯಾಂ = ಸ್ವದೇಹದಲ್ಲಿ; ವಸತಃ ಅಪಿ = ಯಾವ ನಿನ್ನ ಪಾದಪದ್ಮ ವಿದ್ದರೂ; ಸುದೂರಂ = ಅರಿವಿಗೆ ಬಾರದಂತಿರುವುದೋ; ತತ್ = ಅದನ್ನು; ಭಜೇಮ = ಆಶ್ರಯಿಸುತ್ತೇವೆ.

("ನಾನು ಇದ್ದೇನೆ; ಈ ದೇಹ ನನ್ನದು; ಮನೆ ನನ್ನದು" ಇತ್ಯಾದಿ ಜ್ಞಾನವು ಸಾಮಾನ್ಯವಾಗಿ ಎಲ್ಲರಿಗೂ ಉಂಟು. ಜೀವ ತತ್ವವನ್ನೇ ಅರಿಯದವರು "ದೇಹವೇ ನಾನು" ಎಂದು ಕೊಳ್ಳುತ್ತಾರೆ. ಶಾಸ್ತ್ರಜ್ಞಾನ ಪರಂಪರೆಯನ್ನು ಕಳೆದುಕೊಂಡವರು ಹೀಗೆ ತಿಳಿಯುವವರೇ ಹೆಚ್ಚು ಮಂದಿ. ಇನ್ನು, "ನಾನು" ಎಂಬುದರ ಜೊತೆಗೆ, "ನಾನು" ಎನಿಸುತ್ತಾ ಜೊತೆಯಲ್ಲೇ ಇರುವ ಅನಾದಿ ಕಾಲದ ಬಂಧುವಿನ ಪರಿಚಯ ಹೇಗಾದೀತು! ಆ ನೆಂಟ ಎಲ್ಲೋ ದೂರದಲ್ಲಿಲ್ಲ. ನಮ್ಮಹೃದಯದಲ್ಲೇ ಇದ್ದಾನೆ. ಇಂದ್ರಿಯಗಳಲ್ಲಿದ್ದಾನೆ, ನಮ್ಮ ಮಾತುಗಳಲ್ಲಿದ್ದಾನೆ; ಆಲೋಚನೆಗಳಲ್ಲಿದ್ದಾನೆ. ಹೀಗಿದ್ದರೂ "ನಾನು, ನನ್ನದು"ಎನ್ನುವ ಅಜ್ಞಾನಿಗಳಿಗೆ ಅವನು ಕಾಣುತ್ತಿಲ್ಲ.)

**ತಂ ತ್ವಾಮಸದ್ವೃತ್ತಿಭಿರಕ್ಷಿಭಿರ್ಯೇ ಪರಾಹೃತಾಂತರ್ಮನಸಃ ಪರೇಶಾತ್ ।**
**ಅಥೋನಪಶ್ಯಂತ್ಯುರುಗಾಯ ನೂನಂ ಯತ್ತೇಪದಂ ನ್ಯಾಸ ವಿಲಾಸ ಲಕ್ಷ್ಮ್ಯಾಃ ॥೨೩॥**

ಅಥ = ಹೀಗಿರುವುದರಿಂದ; ಪರೇಶಾತ್ = ಸರ್ವೇಶ್ವರನಿಂದ; ಪರಾಹೃತ ಅಂತರ್ಮನಸಃ = ಪರರ (ಅಂತಶ್ಶತ್ರುಗಳ) ವಶವಾದ ಮನಸ್ಸುಳ್ಳವರು; ಉರುಗಾಯ = ಉತ್ಕೃಷ್ಟ ಮಹಿಮನಾದ ಸ್ವಾಮೀ; ಅಸದ್ವೃತ್ತಿಭಿಃ = ಅಸತ್ಯಗಳೂ, ದುಷ್ಟಗಳೂ ಆದ ವ್ಯಾಪಾರಗಳುಳ್ಳ; ಯೇ = ಯಾರೋ, ಅವರು; ತ್ವಾಂ = ಒಳಗೇ ಇರುವ ನಿನ್ನನ್ನು; ನ ಪಶ್ಯಂತಿ = ಕಾಣುವುದಿಲ್ಲ; ಯತ್ ತೇಪದಂ = ಮನಸ್ಸಿನ ಅಂತರ್ವರ್ತಿಯಾಗಿಯೇ ಯಾವನಿನ್ನ ಸ್ಥಿತಿಯುಂಟೋ ಅದನ್ನು; ನ್ಯಾಸ ವಿಲಾಸ ಲಕ್ಷ್ಮ್ಯಾಃ = ಭಗವದರ್ಪಿತವಾದ ಮನಸ್ಸಿನ ನಿರ್ಮಲ ದೃಷ್ಟಿ ಭಾಗ್ಯವುಳ್ಳ ಯೋಗಿಗಳು; ನೂನಂ = ನಿಜವಾಗಿ; ಪಶ್ಯಂತಿ = ಕಂಡೇ ಕಾಣುವರು.

(ಭಗವಂತನನ್ನು ಕಾಣಬಹುದೇ ಎಂದರೆ, ಯೋಗ ಭಾಗ್ಯದಿಂದ ಅದು ಸಾಧ್ಯ, ಕೇವಲ ತಾರ್ಕಿಕ ದೃಷ್ಟಿಯವರಿಗೆ ಅಸಾಧ್ಯ ಎಂದು ಘಂಟಾ ಘೋಷವಾಗಿ ಹೇಳಿದ್ದಾರೆ.)

**ಪಾನೇನ ತೇ ದೇವ ಕಥಾ ಸುಧಾಯಾಃ ಪ್ರವೃದ್ಧ ಭಕ್ತ್ಯಾ ವಿಶದಾಶಯಾ ಯೇ ।**
**ವೈರಾಗ್ಯಸಾರಂ ಪ್ರತಿಲಭ್ಯ ಬೋಧಂ ಯಥಾಂಜಸಾ ತ್ವೇಯುರಕುಂಠ್ಯ ಧಿಷ್ಣ್ಯಂ ॥೨೪॥**

ತಥಾಪರೇಚಾತ್ಮಸಮಾಧಿಯೋಗ ಬಲೇನ ಜಿತ್ವಾಪ್ರಕೃತಿಂ ಬಲಿಷ್ಠಾಂ।
ತ್ವಾಮೇವ ಧೀರಾಃ ಪುರುಷಂ ವಿಶಂತಿ ತೇಷಾಂಶ್ರಮಃಸ್ಯಾನ್ನತು
ಸೇವಯಾತೇ ॥೨೫॥

ದೇವ = ಸ್ವಾಮೀ; ತೇ = ನಿನ್ನ ದಿವ್ಯವಾದ; ಕಥಾಸುಧಾಯಾಃ ಪಾನೇನ = ಶಾಸ್ತ್ರಶ್ರವಣಾದಿ ಕಥಾಮೃತಪಾನದಿಂದ; ಪ್ರವೃದ್ಧಭಕ್ತ್ಯಾ = ಅಭಿವೃದ್ಧಿ ಹೊಂದಿದ ಭಕ್ತಿಯಿಂದ; ಯೇ = ಯಾರು; ವಿಶದ ಆಶಯಾಃ = ನಿರ್ಮಲಾಂತಃಕರಣ ರಾಗುವರೋ, 'ಅವರು; ವೈರಾಗ್ಯಸಾರಂ = ವೈರಾಗ್ಯದ ಮುಖ್ಯ ಲಕ್ಷಣವನ್ನೂ; ಬೋಧಂ = ಅಪರೋಕ್ಷ ಜ್ಞಾನವನನ್ನೂ; ಪ್ರತಿಲಭ್ಯ = ಚೆನ್ನಾಗಿ ಪಡೆದು; ಯಥಾ = ಹೇಗೆ; ಅಂಜಸಾ = ಅಡೆತಡೆಯಿಲ್ಲದೆ ಶೀಘ್ರವಾಗಿ; ಅಕುಂಠಧಿಷ್ಣ್ಯಂ = ನಿರ್ಬಾಧವಾದ ವೈಕುಂಠಾದಿ ಮುಕ್ತ ಸ್ಥಾನವನ್ನು; ತು = ನಿಜವಾಗಿ; ಏಯುಃ = ಹೊಂದಿದರೋ; ॥೨೪॥

ತಥಾ = ಹಾಗೆ; ಅಪರೇ = ಬೇರೆ ಸಾಧನೆಯ ಮಾರ್ಗವನ್ನನುಸರಿಸುವ; ಧೀರಾಃ = ಸ್ಥಿರ ಬುದ್ಧಿಯ ಸಾಧಕರು; ಆತ್ಮಸಮಾಧಿಯೋಗಬಲೇನ = ಮನೋನಿಗ್ರಹ ರೂಪವಾದ ಧ್ಯಾನ ಯೋಗಬಲದಿಂದ; ಬಲಿಷ್ಠಾಂ ಪ್ರಕೃತಿಂ = ಪ್ರಬಲವಾಗಿ ಅಜ್ಞಾನದ ಬಂಧನದಲ್ಲಿಡುವ ಪ್ರಕೃತಿ ಮಾಯೆಯನ್ನು; ಜಿತ್ವಾ = ಜಯಿಸಿ; ತ್ವಾಮೇವ ಪುರುಷಂ = ಸ್ವರೂಪ ಹೃದಯವಾಸಿಯಾದ ನಿನ್ನನ್ನೇ; ವಿಶಂತಿ = ಕೂಡಿಕೊಳ್ಳುತ್ತಾರೆ; ತೇಷಾಂತು = ಅವರಿಗಾದರೋ; ತೇ ಸೇವಯಾ = ನಿನ್ನನಾಶ್ರಯಿಸಿರುವುದರಿಂದ; ಶ್ರಮಃ ನ ಸ್ಯಾತ್ = ಕಷ್ಟವೆನಿಸುವುದಿಲ್ಲ. ॥೨೫॥

(ಭಗವಂತನ ಪ್ರಸಾದಕ್ಕೆ ಪಾತ್ರರಾಗಿ ಉದ್ಧೃತರಾಗಲು ನಾಮಸ್ಮರಣೆಯ ಸುಲಭ ಮಾರ್ಗ ಮತ್ತು ಕಷ್ಟಸಾಧ್ಯವಾದ ಧ್ಯಾನಯೋಗ ಮಾರ್ಗ – ಈ ಎರಡೂ ಇವೆ. ಜನ್ಮಾಂತರಗಳಲ್ಲಿ ಅವರವರ ಯೋಗ್ಯತಾನುಸಾರ ಅಭ್ಯಾಸಮಾಡಿದ ಯೋಗ ಬಲದಿಂದ, ಮುಂದೆ ಕೇವಲ ನಾಮಸ್ಮರಣೆಯಿಂದಲೇ ಮನಶ್ಶುದ್ಧಿ ಮತ್ತು ಭಗವಂತನ ದರ್ಶನ ಸಾಧ್ಯವಾಗಿಬಿಡುತ್ತದೆ. ಆದರಿಂದ ಮನಶ್ಶುದ್ಧಿಯೂ ನಮಗರಿವಿಲ್ಲದಂತೆಯೇ ಆಗಿ ಬಿಡುತ್ತದೆ. ಇಷ್ಟು ಸುಲಭವಾದ ನಾಮಸ್ಮರಣೆಯನ್ನೂ ಮಾಡದಿರುವ ಮನುಜರು ನಿರ್ಭಾಗ್ಯರು.

ಮನಸ್ಸನ್ನು ಹಿಡಿದಿಡುವ ಯೋಗಮಾರ್ಗವು ಕಷ್ಟವೆಂಬುದು ನಿಜ. ಆದರೆ, ಆದರಿಂದ ಒಳಗಿನ ಅಜ್ಞಾನ ರೂಪವಾದ ಕೊಳೆಯು ನೀಗಿ ಹೋಗುತ್ತಾ ಭಗವಂತನ ದಯೆಯು ಅಂಕುರಿಸುತ್ತಾ ಇರಲು, ಕಷ್ಟವು ಕಷ್ಟವೆನಿಸುವುದೇ ಇಲ್ಲ.)

ತತ್ತೇವಯಂ ಲೋಕ ಸಿಸೃಕ್ಷಯಾದ್ಯತ್ವಯಾ
ವಿಸೃಷ್ಟಾಸ್ತ್ರಿಭಿರಾತ್ಮಭಿರ್ಯೇ।
ಸರ್ವೇವಿಯುಕ್ತಾಃ ಸ್ವವಿಹಾರ ತಂತ್ರಂ ನಶಕ್ನುಮಸ್ತತ್ಪ್ರತಿಕರ್ತವೇತೇ
॥೨೬॥

ಲೋಕ ಸಿಸೃಕ್ಷಯಾ = ಕಾರುಣ್ಯದಿಂದ ಲೋಕಗಳನ್ನು ಸೃಷ್ಟಿಸಲು; ಅದ್ಯ = ಈಗ; ತ್ರಿಭಿಃ ಆತ್ಮಭಿಃ = ಅವ್ಯಕ್ತ, ಮಾಯಾ ಮತ್ತು ಜೀವರೆಂಬ ತ್ರಿವಿಧ ವಸ್ತುಗಳನ್ನಿಟ್ಟು; ತ್ವಯಾ = ನಿನ್ನಿಂದ; ವಿಸೃಷ್ಟಾಃ = ದೇಹಗಳನ್ನು ಪಡೆದ; ಯೇ ತೇ ವಯಂ = ಆ ನಾವು; ಸರ್ವೇ = ಎಲ್ಲರೂ; ವಿಯುಕ್ತಾಃ = ಪ್ರತ್ಯೇಕ ಪ್ರತ್ಯೇಕವಾಗಿ; ತೇ ನಿನ್ನ; ಸ್ವ ವಿಹಾರ ತಂತ್ರಂ = ದಿವ್ಯಕ್ರಿಡಾಸ್ಥಾನವಾದ ಬ್ರಹ್ಮಾಂಡವನ್ನು; ಪ್ರತಿಕರ್ತವೇ = ನಿರ್ಮಿಸುವ ವಿಷಯದಲ್ಲಿ; ನ ಶಕ್ನುಮಃ = ಸಮರ್ಥರಾಗಿರುವುದಿಲ್ಲ.

(ಲೌಕಿಕದೃಷ್ಟಾಂತದಿಂದ ಹೇಳುವುದಾದರೂ, ಒಂದು ಸಮಗ್ರ ವಸ್ತುವನ್ನು ಸಿದ್ಧಪಡಿಸುವಾಗ, ಅದರ ಬಿಡಿಬಿಡಿ ಭಾಗಗಳನ್ನು ರಚಿಸುವವರಿಗೂ, ಅವುಗಳನ್ನು ಕೂಡಿಸಿ ಸಮಗ್ರ ವಸ್ತುವನ್ನು ರಚಿಸುವವರಿಗೂ ಒಬ್ಬ ಮೇಲ್ವಿಚಾರಕನ ನಿರ್ದೇಶನವು ಬೇಕೇಬೇಕು. ದೇವತೆಗಳು ಅವರವರ ಕಾರ್ಯಕ್ಷೇತ್ರಗಳಲ್ಲಿ ಮಾತ್ರ ವ್ಯವಹರಿಸುವವರೂ, ಅದಕ್ಕಿಂತಲೂ ಹೆಚ್ಚಾಗಿ ಅಸ್ವತಂತ್ರ ಕರ್ತರೂ ಆಗಿರುವುದರಿಂದ, ಸರ್ವತಂತ್ರ, ಸ್ವತಂತ್ರನಾದ ಭಗವಂತನ ಅಂತಃ ಪ್ರೇರಣೆಯು ಆಗತ್ಯವೆಂದು ಹೇಳಬೇಕಾಗಿಯೇ ಇಲ್ಲ. ಆದುದರಿಂದ ದೇವತೆಗಳು ಪ್ರಾರ್ಥಿಸಿದರು.

ಭಗವಂತನ ಕ್ರೀಡೆ ಎಂದಾಗಲೆಲ್ಲಾ ಅದು ಅವನ ಸಂತೋಷ ಪ್ರಾಪ್ತಿಗಾಗಿ ಎಂದು ಭ್ರಮಿಸಬಾರದು. ಆ ಕ್ರೀಡೆಯು ಜೀವರಿಗಾಗಿ. ಆದರಿಂದ ಆ ಸಮರ್ಥ ಸರ್ವಜ್ಞನಿಗೆ ಆಯಾಸವಿಲ್ಲ ಎಂಬುದು ಕ್ರೀಡೆ ಎಂಬ ಮಾತಿನ ಅಭಿಪ್ರಾಯ)

ಯಾವದ್ವಯಂತೇಽಜ ಹರಾಮ ಕಾಲೇ ಯಥಾವಯಂಚಾನ್ನಮ
ದಾಮ ಯತ್ರ ।
ತಥೋಭಯೇಷಾಂತ ಇಮೇಹ ಲೋಕಾ ಬಲಿಂಹರಂತೋನ್ನ
ಮದಂತ್ಯನೀಶಾಃ ॥೨೭॥

ಅಜ = ಆದಿ ಪುರುಷಾ; ವಯಂ = ನಾವು; ಯಾವತ್ = ಎಲ್ಲಿಯವರಿಗೆ; ತೇ = ನಿನಗೆ; ಕಾಲೇ = ಕಾಲಕಾಲಕ್ಕೆ ; ಬಲಿಂಹರಾಮ = ಭಕ್ತಿಯ ಉಪಹಾರವನ್ನು ಸಮರ್ಪಿಸುತ್ತಿರುವೆವೋ; ಯತ್ರ = ಯಾವಲ್ಲಿ; ಯಥಾ = ಹೇಗೆ;

ಅನ್ನಂ ಚ ಆದಾಮ = ನಮ್ಮ ನಮ್ಮ ಕಾರ್ಯ ಕ್ಷೇತ್ರಗಳಲ್ಲಿ ನಿರತರಾಗಿರುವೆವೋ; ತಥಾ = ಹಾಗೆ; ಉಭಯೇಷಾಂ = ನಮಗೂ ನಿನಗೂ; ಬಲಿಂ ಹರಂತಃ = ಭಕ್ತಿರೂಪವಾದ ಕಾಣಿಕೆಯನ್ನು ಸಮರ್ಪಿಸುತ್ತಾ; ಇಹ = ಸೃಷ್ಟವಾಗುವ ಬ್ರಹ್ಮಾಂಡದಲ್ಲಿ; ಅನೀಶಾಃ ಇಮೇ ಲೋಕಾಃ = ಅಸ್ವತಂತ್ರರಾದ ಈ ಜೀವರು; ಅನ್ನಂ ಅದಂತಿ = ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾಗಿರುವರು;

(ಭಕ್ತಿಯ ಸಮರ್ಪಣೆ ಎಂದರೆ "ಅಹಂ ಕರ್ತಾ" ಯನ್ನುವುದನ್ನು ಬಿಟ್ಟು "ನಾಹಂ ಕರ್ತಾ" ಎಂದು ಆತ್ಮ ಸಮರ್ಪರಣೆ ಮಾಡಿಕೊಳ್ಳುವುದು. ಜೀವರು ಜಗತ್ತಿನಲ್ಲಿ ಬಂದಿರುವುದು ಕರ್ಮವೆಂಬ ಅನ್ನವನ್ನು ಭುಜಿಸುವುದಕ್ಕಾಗಿ. ಮಾಡಿ ಮಾಡಿಸುವ ಕರ್ಮ, ದೇವತೆಗಳದು. ಅದರಂತೆ ಮಾಡುವುದು ಜೀವರ ಪಾಲಿನದು. ತಮಗೆ ಪ್ರೇರಕರಾಗಿ ತಮ್ಮ ಕರ್ಮಗಳನ್ನು ಮಾಡುತ್ತಿರುವುದು ತತ್ವಾಭಿಮಾನಿ ದೇವತೆಗಳೆಂದೂ, ತಮ್ಮಲ್ಲಿಯೂ ಅವರಲ್ಲಿಯೂ ಮುಖ್ಯ ಸ್ವತಂತ್ರ ಕರ್ತನಾದವನು ಪರಮಾತ್ಮನೇ ಎಂದೂ ತಿಳಿದು ಅಹಂಕಾರ ತ್ಯಾಗ ಮಾಡುವುದು, ಕರ್ಮಫಲ ಭಾಗಿಗಳಾಗುವುದು–ಇವು ಬಲಿ ಸಮರ್ಪಣೆ ಮತ್ತು ಭೋಜನ. ಜಗತ್ಸೃಷ್ಟಿಯ ಪ್ರಯೋಜನವನ್ನಿಲ್ಲಿ ತಿಳಿಸಿದ್ದಾರೆ.)

**ತ್ವಂ ನಃಸುರಾಣಾಮಸಿಚಾನ್ವ ಯಾನಾಂ ಕೂಟಸ್ಥ ಆದ್ಯಃ ಪುರುಷಃ ಪುರಾಣಃ ।**
**ತ್ವಂ ದೇವ ಶಕ್ತ್ಯಾಂ ಗುಣಕರ್ಮ ಯೋನೌ ರೇತಸ್ತ್ವಜಾಯಾಂ ಕವಿ ರಾದಧೇsಜಃ ॥೨೮॥**

ಅಜಃ ತ್ವಂ = ಇತರರಂತೆ ಜನ್ಮಾದಿಗಳಿಲ್ಲದವನಾದ ನೀನು; ಸುರಾಣಾಂ ನಃ = ದೇವತೆಗಳಾದ ನಮಗೂ; ಚ = ಮತ್ತು; ಅನ್ವಯಾನಾಂ = ನಮ್ಮ ಸಂತತಿಯವರಾದ ಜೀವರಾಶಿರಗಳಿಗೂ; ಆದ್ಯಃ = ಜನ್ಮದಾತನಾದ; ಕೂಟಸ್ಥಃ = ಪ್ರಕೃತಿಯನ್ನು ಮನೆಯಂತೆ ಭಾವಿಸಿರುವ; ಪುರಾಣಃ ಪುರುಷಃ = ಪ್ರಾಚೀನರಿಗೂ ಪ್ರಾಚೀನತಮನಾದ ಶ್ರೀಮನ್ನಾರಾಯಣನೇ ಆಗಿರುವಿ; ಕವಿಃ = ವ್ಯಕ್ತಾವ್ಯಕ್ತಗಳನ್ನು ಬಲ್ಲವನಾದ; ತ್ವಂ = ನೀನು; ಗುಣ ಕರ್ಮಯೋನೌ = ಗುಣ ಕರ್ಮಗಳ ಅಂಕುರಕ್ಕೆ ಕಾರಣಳಾದ; ಅಜಾಯಾಂ = ಸ್ವಯಂ ಜನ್ಮಧರಿಸಿದ; ದೇವಶಕ್ತ್ಯಾಂ = ಅಚಿತ್ತಿಗೆ ಯಜಮಾನಿಯಾದ ಚಿತ್ರಪ್ರಕೃತಿಯಲ್ಲಿ; ರೇತಃ = ಜಗತ್ತಿನ ಉತ್ಪತ್ತಿಗೆ ಕಾರಣವಾದ ಶಕ್ತಿಯನ್ನು; ಆಧಧೇ = ಇಟ್ಟಿರುವಿ.

(ಇಲ್ಲಿ ರೇತಸ್ಸು ಎಂದರೆ ಪ್ರೇರಕ ಶಕ್ತಿ. ಕೂಟ ಶಬ್ದವು ಜಡ ಪ್ರಕೃತಿ ಪರವಾದುದು. ಜೀವರಗೆ ದೇಹಗಳನ್ನು ಕೊಡುವುದು ಪ್ರಕೃತಿ ವಿಕಾರಗಳಿಂದ.

ಆದುದರಿಂದ ಜೀವರ ದೇಹಗಳು ಭಗವಂತನ ಸ್ವರೂಪ ದೇಹ ವಿಕಾರಗಳಲ್ಲವೆಂಬುದು ಸಿದ್ಧವಾಯಿತು. ಅವನು ಕೂಟಸ್ಥನೇ ಹೊರತು ಕೂಟವೇ ಅಲ್ಲ. ಸಹಚಾರಿಣಿಯಾದ ರಮಾದೇವಿಯು 'ಅಜಾ' ಎಂದರೆ, ದೇಹ ಪ್ರಾಪ್ತಿ ಅಥವ ದೇಹ ವಿಕಾರಗಳಿಲ್ಲದವಳು. ಆಕೆಯು ಜಡಕ್ಕೆ ಯಜಮಾನಿ ಆದರೂ ಜಡ ವಸ್ತುವು ಸ್ವತಂತ್ರವಾಗಿ ವಿಕಾರ ಹೊಂದುವುದಿಲ್ಲ. ಅದು ಯಾವ ಯಾವ ರೂಪಗಳನ್ನು ಹೊಂದಬೇಕೋ ಅಂತಹ ರೂಪಗಳನ್ನು ಸಂಕಲ್ಪಿಸಿ, ಆ ಭಾವಗಳನ್ನು ರಮಾದೇವಿಯಲ್ಲಿ ಭಗವಂತನು ಮೂಡಿಸುವನು. ಆ ರೂಪಗಳಿಗೆ ಆಕೆ ಜನನಿ.)

ತತೋಽವಯಂ ಸತ್ಪ್ರಮುಖಾ ಯದರ್ಥೇಽಬಭೂವಿಮಾತ್ಮನ್ಕರ
ವಾಮ ಕಿಂ ತೇ ।
ತ್ವಂನಃ ಸ ಚಕ್ಷುಃ ಪರಿದೇಹಿ ಶಕ್ತಾ ದೇವಕ್ರಿಯಾರ್ಥೇ ಯದನುಗ್ರಹೇಣ
॥೨೯॥

ಆತ್ಮನ್ = ಆತ್ಮರಿಗೆ ಆತ್ಮ ಶಕ್ತಿಯನ್ನೀಯುವ ಪರಮಾತ್ಮಾ; ಸತ್ ಪ್ರಮುಖಾಃ ವಯಂ = ಮಹತ್ತತ್ತ್ವಾಭಿಮಾನಿಗಳಾದ ಬ್ರಹ್ಮದೇವರ ಸೇವಕರಾದ ನಾವು; ತತಃ = ಪ್ರಕೃತಿ ವಶದಿಂದ; ಯದರ್ಥೇ ಬಭೂವಿಮ = ಏತಕ್ಕಾಗಿ ಸೃಷ್ಟರಾಗಿದ್ದೇವೆ? ತೇ = ನಿನ್ನ ಸೇವಾರ್ಥವಾಗಿ; ಕಿಂ ಕರವಾಮ = ಯಾವ ಕಾರ್ಯಗಳನ್ನು ಮಾಡೋಣ? ಯದನು ಗ್ರಹೇಣ = ಯಾವುದರ ಕಟಾಕ್ಷ ವೀಕ್ಷಣೆಯಿಂದ; ದೇವ = ಸ್ವಾಮಿ; ಕ್ರಿಯಾರ್ಥೇ = ಕಾರ್ಯ ನಡೆಸುವಲ್ಲಿ; ಶಕ್ತಾಃ = ಶಕ್ತರಾಗಬಲ್ಲೆವೋ; ಸಚಕ್ಷುಃ = ಆ ಜ್ಞಾನ ಬಲವನ್ನು; ತ್ವಂ = ನೀನು; ನಃ = ನಮಗೆ; ಪರಿದೇಹಿ = ಅನುಗ್ರಹಿಸು.

(ಬ್ರಹ್ಮಾಂಡ ನಿರ್ಮಾಣ ವಿಷಯದಲ್ಲಿ ತಮ್ಮ ತಮ್ಮ ಕಾರ್ಯ ಭಾಗಗಳೇನೇನು, ಹೇಗೆ ನಿರ್ವಹಿಸಬೇಕು ಎಂಬುದನ್ನು ಆಜ್ಞಾಪಿಸಬೇಕೆಂದು ದೇವತೆಗಳು ಪ್ರಾರ್ಥಿಸಿದರು.)

ಆರನೆಯ ಅಧ್ಯಾಯ ಮುಗಿಯಿತು.

ಶ್ರೀಕೃಷ್ಣಾರ್ಪಣಮಸ್ತು

---

|| ಶ್ರೀ ಗುರುಭ್ಯೋನಮಃ || ಹರಿಃ ಓಂ ||

# ತೃತೀಯ ಸ್ಕಂಧ
# ಏಳನೆಯ ಅಧ್ಯಾಯ

ಋಷಿರುವಾಚ :– ಮೈತ್ರೇಯರು ಹೇಳಿದರು.

ಇತಿತಾಸಾಂ ಸ್ವ ಶಕ್ತೀನಾಮಸತೀನಾಂ ಸಮೇತ್ಯಸಃ ।
ಪ್ರಸುಪ್ತ ಲೋಕತಂತ್ರಾಣಾಂ ನಿಶಮ್ಯ ಗಿರಮೀಶ್ವರಃ ॥೧॥

ಕಾಲ ಸಂಜ್ಞಾಂ ಯದಾದೇವೀಂ ಭಿಭ್ರಚ್ಛಕ್ತಿ ಮುರುಕ್ರಮಃ ।
ತ್ರಯೋ ವಿಂಶತಿತತ್ವಾನಾಂ ಗಣಂ ಯುಗಪದಾವಿಶತ್ ॥೨॥

ಇತಿ = ಇದುವರೆಗೆ ಹೇಳಿದಂತೆ; ಅಸತೀನಾಂ = ರೂಢಿಸಿಕೊಳ್ಳಲಾಗದ; ಸ್ವಶಕ್ತೀನಾಂ = ತಮ್ಮ ತಮ್ಮ ಯೋಗ್ಯತಾನುಸಾರ ಶಕ್ತಿಗಳುಳ್ಳ; ಪ್ರಸುಪ್ತ ಲೋಕ ತಂತ್ರಾಣಾಂ = ವ್ಯಕ್ತವಾಗದೆ, ಎಂದರೆ, ಪ್ರಯೋಗಿಸಲು ಸಾಧ್ಯವಾಗದೆ ಇದ್ದ ಲೋಕನಿರ್ಮಾಣ ಸಾಮರ್ಥ್ಯವುಳ್ಳ; ತಾಸಾಂ = ಆ ದೇವತೆಗಳ; ಗಿರಂ = ಮಾತುಗಳನ್ನು; ನಿಶಮ್ಯ = ಆಲಿಸಿ; ಈಶ್ವರಃ ಸಃ = ಸರ್ವೇಶ್ವರನಾದ ಆ ಭಗವಂತ; ॥೧॥

ಕಾಲ ಸಂಜ್ಞಾಂ = ಕಾಲಕ್ಕೆ ನಿಯಾಮಕಳಾಗಿ ಕಾಲವೆನಿಸಿಕೊಳ್ಳುವ; ದೇವೀಂ = ರಮಾದೇವಿಯನ್ನೂ; ಬಿಭ್ರಚ್ಛಕ್ತಿಂ = ತಮ್ ತಮ್ಮ ಗುಣ ವಿಶೇಷಗಳುಳ್ಳ; ತ್ರಯೋವಿಂಶತಿತತ್ವಾನಾಂ ಗಣಂ = ಪಂಚಭೂತಗಳು, ಪಂಚತನ್ಮಾತ್ರಾಗಳು, ದಶೇಂದ್ರಿಯಗಳು, ಮನಸ್ಸು, ಅಹಂಕಾರ ಮತ್ತು ಮಹತ್ ಎಂಬ ಇಪ್ಪತ್ಮೂರು ತತ್ತ್ವಗಳ ಸಮೂಹವನ್ನೂ; ಉರುಕ್ರಮಃ = ಪರಮ ಸಮರ್ಥನಾದ ಆ (ಈಶ್ವರಃ) ಭಗವಂತ; ಸಮೇತ್ಯ = ಸಾಮೀಪ್ಯಹೊಂದಿ; ಯುಗಪತ್ = ಏಕ ಕಾಲದಲ್ಲಿ; ಆವಿಶತ್ = ಪ್ರವೇಶಿಸಿದನು.

(ಪ್ರಕೃತಿ ವಿಕಾರಗಳಾದ ತತ್ವಗಳಲ್ಲಿ ಕಾರ್ಯಗಳಿಗೆ ಅನುಕೂಲವಾಗುವ ಗುಣ ವಿಶೇಷಗಳುಂಟು; ಅವುಗಳೇ ಅವುಗಳ ಶಕ್ತಿ. ಪ್ರಕೃತಿಗೆ ಯಜಮಾನಿಯಾದ

ರಮಾದೇವಿಯದು ಆಶಕ್ತಿ. ಆಕೆಯ ಶಕ್ತಿಯಾದರೂ, ಪರಮಾತ್ಮನ ಅಧೀನವಾದುದು. ಅವನೊಬ್ಬನೇ ಸ್ವತಂತ್ರ.

ಒಂದಾದ ಮೇಲೆ ಒಂದರಂತೆ ತತ್ವಗಳು ಸೃಷ್ಟವಾಗುವಾಗ ಅವುಗಳಲ್ಲಿ ರಮಾನಾರಾಯಣರು ಶಕ್ತಿರೂಪದಿಂದ ಪ್ರವಿಷ್ಟರಾಗಿಯೇ ಇದ್ದರು. ಈಗ, ಆ ತತ್ವಗಳಿಗೆ ಯಾಜಮಾನರೆನಿಸಿದ ದೇವತೆಗಳಲ್ಲಿ ಸುಪ್ತವಾದ ಶಕ್ತಿಗಳನ್ನು ಎಚ್ಚರಗೊಳಿಸುವಂತೆ ಅವರಲ್ಲಿಯೇ ಇದ್ದ ರಮಾನಾರಾಯಣರು ವಿಶೇಷರೂಪದಿಂದ ಕಾಣಿಸಿಕೊಂಡರು, ಅದೇ ಸಮಯದಲ್ಲಿ ಇಪ್ಪತ್ಮೂರು ಜಡ ತತ್ವಗಳಲ್ಲಿಯೂ ತಮ್ಮ ಇರುವಿಕೆಯನ್ನು ವ್ಯಕ್ತಮಾಡಿ, ಜಡಗಳ ಸಾಮರ್ಥ್ಯಗಳಿಗೂ ಸಂಬಂಧವನ್ನು ಕಲ್ಪಿಸಿದರೆಂದು ತಿಳಿಯಬೇಕು.)

ಸೋನು ಪ್ರವಿಷ್ಟೋ ಭಗವಾನ್ ಚೇಷ್ಟಾರೂಪೇಣ ತಂ ಗಣಂ ।
ಭಿನ್ನಂ ಸಂಯೋಜಯಾಮಾಸ ಸುಪ್ತಂ ಕರ್ಮಪ್ರಬೋಧಯನ್ ॥೩॥

ಸಃ ಭಗವಾನ್ = ಸರ್ವ ಸಮರ್ಥನಾದ ಕೇಶವನು (ಬ್ರಹ್ಮ ರುದ್ರಾದಿಗಳ ಪ್ರೇರಕನು); ಚೇಷ್ಟಾರೂಪೇಣ = ಕರ್ಮಗಳ ಉದ್ಬೋಧನಕ್ಕೆ ಕಾರಣವಾಗುವ ರೀತಿಯಲ್ಲಿ; ಅನು ಪ್ರವಿಷ್ಟಃ = ಜಡಗಳಲ್ಲಿಯೂ, ಜೀವರಲ್ಲಿಯೂ, ಜೀವೇಶರಲ್ಲಿಯೂ ಅನುಗುಣವಾಗಿದ್ದ ಕಾರ್ಯ ಸಾಮರ್ಥ್ಯವನ್ನು; ಪ್ರಬೋಧಯನ್ = ಕಾರ್ಯೋನ್ಮುಖವಾಗಿ ಮಾಡಿ; ತಂ ಗಣಂ = ಆ ಜಡ ಚೇತನ ಸಮೂಹವನ್ನು; ಸಂಯೋಜಯಾಮಾಸ = ಪರಸ್ಪರ ಸಂಬಂಧ ಉಳ್ಳವುಗಳನ್ನಾಗಿ ಮಾಡಿದನು.

(ಸಕಲ ಜಗದ್ವ್ಯಾಪಾರಗಳನ್ನೂ ನಡೆಸುವವನು ಆ ಭಗವಂತನೇ ಆದರೂ, ಕರ್ಮ ಭೋಜನದ ಫಲ ದೊರೆಯಬೇಕಾದುದು ಜೀವರಿಗೆ ಮತ್ತು ಜೀವೇಶರಿಗೆ. ಆದುದರಿಂದ, ಜಡಗಳಿಗೂ, ಜೀವಗಳಿಗೂ, ಅವರ ಸಾಮರ್ಥ್ಯಗಳಿಗೂ ಸಂಬಂಧಗಳ ಕಲ್ಪನೆ ಆವಶ್ಯಕ. ಪ್ರಳಯ ಕಾಲದಲ್ಲಿ ಆ ಶಕ್ತಿಗಳು ಸುಪ್ತವಾಗಿರುತ್ತವೆ. ಸೃಷ್ಟಿ ಕಾಲದಲ್ಲಿ ಭಗವಂತನ ಪ್ರವೇಶದಿಂದ ಅವು ಪುನಃ ಎಚ್ಚರಗೊಳ್ಳುತ್ತವೆ.)

ಪ್ರಬುದ್ಧ ಕರ್ಮಾ ದೈವೇನ ತ್ರಯೋ ವಿಂಶತಿಕೋಗಣಃ ।
ಪ್ರೇರಿತೋ ಜನಯತ್ಸ್ವಾಭಿರ್ಮಾತ್ರಾಭಿರಪಿ ಪೂರುಷಂ ॥೪॥

ದೈವೇನ = ಭಗವಂತನಿಂದ; ಪ್ರಬುದ್ಧ ಕರ್ಮಾಃ = ಎಚ್ಚರಗೊಳಿಸಲ್ಪಟ್ಟ ಕಾರ್ಯ ಶಕ್ತಿಗಳುಳ್ಳವರಾಗಿ; ತ್ರಯೋ ವಿಂಶತಿಕಃ ಗಣಃ ಅಪಿ = ಇಪ್ಪತ್ಮೂರು ತತ್ವಗಳ ಯಜಮಾನರೂ; ಪ್ರೇರಿತಃ = ಭಗವಂತನ ಶಕ್ತಿಯಿಂದ ಕೂಡಿದವರಾಗಿ;

ಸ್ವಮಾತ್ರಾಭಿಃ = ತಮ್ಮ ತಮ್ಮ ಅಂಶಗಳ ಸಮ್ಮೇಳನದಿಂದ; ಪೂರುಷಂ = ಬ್ರಹ್ಮಾಂಡಾಂತರ್ಗತನಾಗಿ ಬ್ರಹ್ಮಾಂಡ ಸೃಷ್ಟಿಯನ್ನೆಸಗುವ ಪುರುಷರೂಪವನ್ನು; ಜನಯತ್ = ಉಂಟುಮಾಡಿದರು.

(ಬ್ರಹ್ಮಾಂಡ ಸೃಷ್ಟಿಯ ಉಪಾದಾನ ಕಾರಣವು ಸತ್ವ ರಜಸ್ತಮೋಗಣಾತ್ಮಕ ಜಡವಸ್ತುವಾದರೂ, ಅದರ ವಿಕಾರಗಳ ಯಜಮಾನರಾಗಿ ನೇಮುಕರಾದ ದೇವತೆಗಳಿಂದ ಆ ವಿಕಾರಾಂಶಗಳು ಪ್ರಯೋಜನಕ್ಕೆ ಬರುವುವು. ಸ್ವತಃ ಅವು ಒಂದುಗೂಡಿ ವಸ್ತು ನಿರ್ಮಾಣವನ್ನು ಮಾಡಲಾರವು. ಆ ದೇವತೆಗಳಾದರೂ ಸರ್ವ ಸ್ವತಂತ್ರನಾದ ಭಗವಂತನ ಬಲ–ಸಂಕಲ್ಪಗಳಿಲ್ಲದೆ ಏನನ್ನೂ ಮಾಡಲಾರರು. ಆದುದರಿಂದ ಬ್ರಹ್ಮಾಂಡದಂತಹ ವಸ್ತು ನಿರ್ಮಾಣಕ್ಕೆ ಜಡತನ್ಮಾತ್ರಾಗಳು, ಅವುಗಳ ಯಜಮಾನರು ಮತ್ತು ಅವರಿಗೆ ಪ್ರೇರಕನಾದ ಭಗಮಂತ ಅವಶ್ಯಕ. ಜಡಗಳಲ್ಲಿ ವ್ಯಾಪ್ತಿ ಅಭಿಮಾನಿ ದೇವತೆಗಳಿಗೆಉಂಟು. ಜಡಗಳಲ್ಲಿಯೂ, ಅವುಗಳ ಅಭಿಮಾನಿಗಳಲ್ಲಿಯೂ ವ್ಯಾಪಕನಾಗಿ, ನಿಜವಾಗಿ ಕಾರ್ಯ ನಡೆಸುವವನು ಭಗವಂತನೇ. ಅದರ ಪ್ರಯೋಜನಾಂಶ ದೇವತೆಗಳಿಗೆ ಲಭ್ಯ. ಬ್ರಹ್ಮಾಂಡವೆಂಬುದು ಚತುರ್ಮುಖ ಬ್ರಹ್ಮನ ಶರೀರ. ಅದರ ಸೃಷ್ಟಿಯ ವಿಚಾರವು ಪುರುಷಸೂಕ್ತದಿಂದ ಸ್ತುತ್ಯನಾದ ಶ್ರೀಹರಿಯ ಮಹಿಮೆಯನ್ನು ತಿಳಿಸುವುದಾಗಿದೆ. ಇಲ್ಲಿ 'ಪುರುಷ' ಎಂದರೆ, ಮುಖ್ಯವಾಗಿ ಶ್ರೀಹರಿಯನ್ನೂ, ಅಮುಖ್ಯವಾಗಿ ಚತುರ್ಮುಖನನ್ನೂ ತಿಳಿಯಬೇಕು.)

ಪರೇಣ ವಿಶತಾ ಸ್ವಸ್ಮಿನ್ಮಾತ್ರಯಾ ವಿಶ್ವಸೃಗ್ಗಣಃ।
ಚುಕ್ಷೋಭಾನ್ಯೋನ್ಯ ಮಾಸಾದ್ಯಯಸ್ಮಿನ್ಲೋಕಶ್ಚರಾಚರಃ ॥೫॥

ಸ್ವಸ್ಮಿನ್ ವಿಶತಾಪರೇಣ = ತಮ್ಮಲ್ಲಿ ಪ್ರೇರಕನಾಗಿ ಪ್ರಕಟನಾದ ಸರ್ವೋತ್ತಮನಾದ ಭಗವಂತನ ಬಲದಿಂದ; ವಿಶ್ವಸೃಗ್ಗಣಃ = ಜಗತ್ ಸೃಷ್ಟಿಗೆ ನಿಯಾಮಕರಾದ ದೇವತೆಗಳು; ಮಾತ್ರಯಾ = ತಮ್ಮ ತಮ್ಮ ಅಂಶಗಳಿಂದ; ಅನ್ಯೋನ್ಯಂ = ಅಸಾಧ್ಯ ಒಬ್ಬರೊಡನೊಬ್ಬರು ಕೂಡಿಕೊಂಡು; ಚುಕ್ಷೋಭ = ತನ್ಮಾತ್ರಾಗಳನ್ನ ತಾಕಲಾಡಿಸಿ ಒಂದುಗೂಡಿಸಿದರು; ಯಸ್ಮಿನ್ = ಯಾವ ಈ ವಿಕಾರಗೊಳಿಸುವ ಕಾರ್ಯದಲ್ಲಿ; ಚರಾಚರಃ ಲೋಕಃ = ಭೌತವಸ್ತುಗಳ ಮತ್ತು ಜೀವನಿಕಾಯದ ಸೃಷ್ಟಿಯು ಉಂಟಾಗಿದೆ.

(ಆಕಾಶತನ್ಮಾತ್ರಾದ ಶಬ್ದಗುಣದೊಂದಿಗೆ ಇತರ ನಾಲ್ಕು ಮಾತ್ರಾಂಶಗಳನ್ನು ಕೂಡಿಸಿ ಮಹದಾಕಾಶ ತತ್ತ್ವವನ್ನೂ, ಅಲ್ಲಿಂದ ಮುಂದೆ ವಾಯು, ತೇಜ, ಅಪ ಮತ್ತು ಪೃಥ್ವೀ ತತ್ವಗಳನ್ನೂ ಸೃಷ್ಟಿಮಾಡಿದುದು ಅವುಗಳ ಅನ್ಯೋನ್ಯ ಸಂಯೋಜನೆ

ಯಿಂದ ಇದನ್ನೇ 'exchange of electrons between atoms and formation of new substances' ಎಂದು ಈಗಿನವರು ಕಂಡು ಹಿಡಿದಿದ್ದಾರೆ. ತನ್ಮಾತ್ರಾಗಳ ಕ್ಷೋಭೆ ಎಂಬುದು ಪರಮಾಣುಗಳ ಪರಸ್ಪರ ಸಂಯೋಜನೆಗಳಿಗಿಂತ ಹಿಂದೆಯೇ ನಡೆದ ಕ್ಷೋಭೆಯ ಕ್ರಮ, ಇದನ್ನು ಶಾಸ್ತ್ರಕಾರರು ('ಪಂಚೀಕರಣ' ಎನ್ನುವರು.) Co-ordinating factor is here !

**ಹಿರಣ್ಮಯಃ ಸಪುರುಷಃ ಸಹಸ್ರಪರಿವತ್ಸರಾನ್।**
**ಆಂಡಕೋಶಉವಾಸಾಪ್ಸು ಸರ್ವಸತ್ವೋಪಬೃಂಹಿತಃ ।।೬।।**

ಹಿರಣ್ಮಯಃ = ಜ್ಞಾನಾನಂದಾತ್ಮಕನಾದ; ಸಃ ಪುರುಷಃ = ಆ ವಿರಾಟ್ಪುರುಷನು; ಸರ್ವಸತ್ವ ಉಪಬೃಂಹಿತಃ = ಸಕಲ ಜೀವರನ್ನೂ ತನ್ನ ಉದರದಲ್ಲಿಟ್ಟುಕೊಂಡ; ಅಂಡಕೋಶೇ = ಸೃಷ್ಟವಾದ ಬ್ರಹ್ಮಾಂಡದೊಳಗೆ; ಸಹಸ್ರಪರಿವತ್ಸರಾನ್ = ದೇವಮಾನ ಒಂದು ಸಾವಿರ ವರ್ಷಗಳ ಕಾಲ; ಅಪ್ಸು = ಗರ್ಭೋದಕದಲ್ಲಿ; ಉವಾಸ = ನೆಲೆಮಾಡಿಕೊಂಡಿದ್ದನು.

(ಬ್ರಹ್ಮಾಂಡದ ವಸ್ತುವಾದ ಪೃಥ್ವೀತತ್ವವೆಂಬುದು ಅತಿಪರಿಶುದ್ಧವಾದ ಸುವರ್ಣ. ಅದು ಅತ್ಯಂತ ತೇಜಃ ಪ್ರಧಾನವಾದುದು. ಸಂಯೋಜನೆಗಳಿಂದಲೇ ಪರ್ವತನದ್ಯಾದಿಗಳಿಂದ ಕೂಡಿದ ಭೂಮಂಡಲವೂ, ಅಂತರಿಕ್ಷಕಾಯಗಳೂ, ಹದಿನಾಲ್ಕು ಲೋಕಗಳೂ ಮುಂದೆ ಸೃಷ್ಟಿಯಾದುವು. ಇಲ್ಲಿ ಹೇಳಿರುವುದನ್ನೇ ಈಗಿನವರು 'Big Bang' ಎಂದಿರುವರು. ಅದರ ಹಿನ್ನೆಲೆಯ ವಿಚಾರ ತಿಳಿಯದೆಂದೂ ಒಪ್ಪಿಕೊಂಡಿರುವರು.

ಲೋಕಗಳ ಸೃಷ್ಟಿಯಾಗುವುದಕ್ಕೆ ಮುಂಚೆ, ಬ್ರಹ್ಮಾಂಡದೊಳಗೆ ಸೂಕ್ಷ್ಮಭೌತ ಜಲ ತಳದಿಂದ ಮೇಲೆ, ಹದಿನೈದು ಕೋಟಿ ಯೋಜನದೆತ್ತರದಲ್ಲಿ ವಿರಾಡ್ರೂಪೀ ಶ್ರೀಮನ್ನಾರಾಯಣನು ಶೇಷಶಾಯಿಯಾಗಿ ಸಾವಿರವರ್ಷಗಳ ಕಾಲ ಇದ್ದನು. ಅಲ್ಲಿ ಮುಖ್ಯ ಶೇಷರೂಪ, ರಮಾದೇವಿಯರು. ಅವರ ಅಧೀನರಾಗಿ. ಶೇಷ ಪದವಿಗೆ ಬಂದವರು. ಅನಂತರ ನಾಭೀಕಮಲದಿಂದ ಬ್ರಹ್ಮದೇವರ ಜನನ.

ಹಿರಣ್ಮಯ ಶರೀರವೆಂಬುದು, ವಿರಡ್ರೂಪೀ ಬ್ರಹ್ಮನಲ್ಲಿ ತದ್ರೂಪದಿಂದ ಪ್ರವಿಷ್ಟನಾಗಿದ್ದ ಪರಮಾತ್ಮನ ಜ್ಞಾನಾನಂದ ಶರೀರ; ಬ್ರಹ್ಮನ ವಿಷಯದಲ್ಲಿ ಶುದ್ಧಸುವರ್ಣಾತ್ಮಕವಾದ ಪೃಥ್ವೀ ಶರೀರ.)

**ಸವೈವಿಶ್ವ ಸೃಜಾಂ ಗರ್ಭೋದೈವ ಕರ್ಮಾತ್ಮ ಶಕ್ತಿಮಾನ್ ।**
**ವಿಬಭಾಜಾತ್ಮನಾತ್ಮಾನಮೇಕಧಾದಶಧಾತ್ರಿಧಾ ।।೭।।**

ವಿಶ್ವಸೃಜಾಂ ಗರ್ಭಃ = ಪ್ರಪಂಚದ ಸೃಷ್ಟಿಗೆ ಕಾರಣಗಳಾದ ತತ್ವಗಳನ್ನು ತನ್ನಲ್ಲಿ ಧರಿಸಿದ್ದ; ಸಃವೈ = ಗರ್ಭೋದಕದಲ್ಲಿ ಸಹಸ್ರವರ್ಷ ಶೇಷಪರ್ಯಂಕಶಯನನಾದ ಆ ಮಹಾವಿಷ್ಣುವೇ; ದೈವಕರ್ಮ ಆತ್ಮ ಶಕ್ತಿಮಾನ್ = ಬ್ರಹ್ಮಾದಿ ತಾತ್ವಿಕ ದೇವತೆಗಳಿಗೂ, ಜೀವರು ಅನುಭವಿಸಬೇಕಾದ ಕರ್ಮಗಳಿಗೂ, ತನ್ನವಳಾದ ಚಿತ್ಪ್ರಕೃತಿ ಎನಿಸುವ ರಮಾದೇವಿಗೂ ಶಕ್ತಿ ಪ್ರದಾಯಕನಾಗಿದ್ದು; ಆತ್ಮನಾ = ತನ್ನಿಚ್ಛೆಯಿಂದಲೇ; ಆತ್ಮಾನಂ = ತನ್ನನ್ನು; ಏಕಧಾ, ದಶಧಾ, ತ್ರಿಧಾ = ಒಂದು ಬಗೆ, ಹತ್ತು ಬಗೆ, ಮೂರು ಬಗೆ ಎಂಬಂತೆ ಬೇರೆ ಬೇರೆಯಾದ ರೀತಿಯಲ್ಲಿ; ವಿಬಭಾಜ = ಬೇರೆ ಬೇರೆ ಲಕ್ಷಣಗಳಿಂದ ತೋರಿಕೊಂಡನು.

(ವಿಭಾಗಲಕ್ಷಣಗಳನ್ನು ಮುಂದೆ ತಿಳಿಸುತ್ತಾರೆ. ವಿಭಾಗವಾದಂತೆ ತೋರಿ ಕೊಂಡುದು ತನ್ನಿಚ್ಛೆಯಿಂದ, ತನ್ನ ಶಕ್ತಿಯಿಂದಲೇ ಹೊರತು ಅನ್ಯರ ಇಚ್ಛಾನುಸಾರವಾಗಲೀ ಬಲದಿಂದಾಗಲೀ ಅಲ್ಲ ಎಂಬುದನ್ನು 'ಆತ್ಮಾನಾ' ಎಂಬ ಪದದಿಂದ ನಿರ್ದೇಶಿಸಿದ್ದಾರೆ.)

**ಏಷಹ್ಯಶೇಷ ಸತ್ವಾನಾಮಾತ್ಮಾಂಶಃ ಪರಮಾತ್ಮನಃ ।**
**ಆದ್ಯೋವತಾರೋ ಯತ್ರಾಸೌ ಭೂತಗ್ರಾಮೋ ವಿಭಾವ್ಯತೇ ॥೮॥**

ಯತ್ರ = ಯಾವ ಬಲದಿಂದ; ಅಸೌಭೂತಗ್ರಾಮಃ = ಈ ವಿಶ್ವದ ತತ್ವಗಳು; ವಿಭಾವ್ಯತೇ = ಶಕ್ತಿಯುತವಾಗುವುವೋ; ಅಶೇಷ ಸತ್ವಾನಾಂ ಆತ್ಮಾಂಶಃ = ವಿಶ್ವದ ಎಲ್ಲಾ ಶಕ್ತಿಗಳಿಗೂ ಶಕ್ತಿಪ್ರದವಾದ ಲೇಶಾಂಶವಾಗಿರುವುದೋ; ಅಂತಹ; ಪರಮಾತ್ಮನಃ = ಸರ್ವರಿಗೂ ಆತ್ಮಭೂತನಾದವನ; ಏಷಃಹಿ = ಇದೇ; ಆದ್ಯ ಅವತಾರಃ = ಮೊಟ್ಟ ಮೊದಲನೆಯ ಆವಿಷ್ಕಾರವು.

(ಬ್ರಹ್ಮಾಂಡವನ್ನು ಸೃಷ್ಟಿಸಿ, ಅದನ್ನು ಭೇದಿಸಿಕೊಂಡು ಒಳಗೆ ಪ್ರವಿಷ್ಟನಾಗಿ, ಗರ್ಭೋದಕ ಶಯನನಾದ ಮಹಾವಿಷ್ಣುವೇ ಬ್ರಹ್ಮಾಂಡದೊಳಗಿನ ಸೃಷ್ಟಿಗಾಗಿ ವಿರಾಟ್ ಪುರುಷರೂಪವನ್ನು ತಾಳಿದುದು ಮೊದಲನೆ ಅವತಾರವೆಂದು ಹೇಳಿದ್ದಾರೆ. ಪುರುಷನಾಮಕವಾದ ರೂಪವು ಇದು. ಈ ರೂಪದ ವಿಭಾಗಗಳಿಂದಲೇ ಜಡತತ್ವಗಳಿಗೂ, ಅವುಗಳ ಅಭಿಮಾನಿ ದೇವತೆಗಳಿಗೂ, ಮಾಯಾನಾಮಕಳಾದ ರಮಾದೇವಿಗೂ ವಿಶೇಷ ಶಕ್ತಿ ಪ್ರದಾನ.)

**ಸಾಧ್ಯಾತ್ಮಂ ಸಾಧಿದೈವಂಚ ಸಾಧಿಭೂತಮಿತಿತ್ರಿಧಾ ।**
**ವಿರಾಟ್ ಪ್ರಾಣೋದಶವಿಧ ಏಕಧಾಹೃದಯೇನ ಚ ॥೯॥**

ವಿರಾಟ್ = ಬ್ರಹ್ಮದೇವರ ಶರೀರಸ್ಥನಾದ ವಿರಾಟ್ ನಾಮಕ ವಿಷ್ಣುವು; ಸಾಧ್ಯಾತ್ಮಂ, ಸಾಧಿದೈವಂ, ಸಾಧಿಭೂತಂ ಇತಿ = ಮನೋವ್ಯಾಪಾರ ಭೂತ, ದೈವೀಸಮೂಹ ನೇತಾರ, ಜಡತತ್ವಗಳ ವಿಕಾರಕರ್ತಾ ಎಂದು; ತ್ರಿಧಾ = ಮೂರುಬಗೆಯಾಗಿ; ಪ್ರಾಣಃ = ದಶಇಂದ್ರಿಯಗಳಿಗೆ ಚೇಷ್ಟಾಪ್ರದನಾಗಿ; ದಶಧಾ = ಹತ್ತು ವಿಧವಾಗಿ; ಚ = ಮತ್ತು; ಹೃದಯೇನ = ಹೃತ್ಪದ್ಮ ನಿವಾಸಿಯಾದುದರಿಂದ; ಏಕಧಾ = ಒಂದೇ ಆಗಿಯೂ; ಪ್ರಕಟನಾದನು.

(ಇದು ಬ್ರಹ್ಮದೇವರ ಮನಸ್ಸು, ದೈವೀ ಪ್ರಪಂಚದ ಮೇಲಿನ ಆಧಿಪತ್ಯ, ಜಡಪ್ರಪಂಚದ ನಿಯಾಮಕತ್ವ, ಅವರದಶ ಇಂದ್ರಿಯಗಳ ವ್ಯಾಪಾರಗಳು ಮತ್ತು ಸ್ವರೂಪ ಬಿಂಬನ ಸ್ಮರಣೆ–ಇವುಗಳನ್ನು ಕುರಿತು ಹೇಳಿರುವ ಮಾತು. ಇವುಗಳಲ್ಲಿ ಭಗವಂತನು ಪ್ರವೇಶದಿಂದ ಮುಖ್ಯ ಕರ್ತಾ; ಬ್ರಹ್ಮಾದೇವರದು ಅಧೀನ ಕರ್ತೃತ್ವ.)

**ಸ್ಮರನ್ವಿಶ್ವಸೃಜಾಮೀಶೋ ವಿಜ್ಞಾಪಿತ ಮಧೋಕ್ಷಜಃ ।**
**ವಿರಾಜಮತಪತ್ಸ್ವೇನ ತೇಜಸೈಷಾಂ ವಿವೃದ್ಧಯೇ ॥೧೦॥**

ಈಶಃ = ಸರ್ವೇಶ್ವರನಾದ; ಅಧೋಕ್ಷಜಃ = ಅಧೋಕ್ಷಜನಾಮಕನಾದ ಭಗವಂತನು; ವಿಶ್ವಸೃಜಾಂ = ವಿಶ್ವದ ನಿರ್ಮಾಣಕಾರ್ಯದಲ್ಲಿ ಭಾಗವಹಿಸಬೇಕಾದ ದೇವತೆಗಳ; ವಿಜ್ಞಾಪಿತಂ = ಪ್ರಾರ್ಥನೆಯನ್ನು; ಸ್ಮರನ್ = ಮನ್ನಿಸಿ; ಏಷಾಂ ವಿವೃದ್ಧಯೇ = ಇವರ ಕಾರ್ಯ ವಿಸ್ತರಣೆಗಾಗಿ; ಸ್ವೇನ ತೇಜಸಾ = ತನ್ನ ಸಾಮರ್ಥ್ಯವಿಶೇಷದಿಂದ; ವಿರಾಜಂ = ವೈರಾಜ ನಾಮಕ ಬ್ರಹ್ಮನ ಶರೀರವನ್ನು; ಅತಪತ್ = ಅವಕಾಶವುಳ್ಳದ್ದನ್ನಾಗಿ ಮಾಡಿದು.

(ಬ್ರಹ್ಮ ದೇವರ ಶರೀರದಲ್ಲಿ ಪ್ರವಿಷ್ಟನಾದ ವಿರಾಡ್ವಿಷ್ಣುವು ತನ್ನ ತೇಜಸ್ಸನ್ನು ಬ್ರಹ್ಮದೇವರ ಬುದ್ಧಿಗತವಾಗಿ ಮಾಡಿ, ಇತರ ದೇವತೆಗಳಿಗೆ ಆ ದೇಹದಲ್ಲಿ ಅವಕಾಶವನ್ನು ಕಲ್ಪಿಸಿದನು, ಎಂದರೆ, ಅವರನ್ನು ಬ್ರಹ್ಮ ದೇವರ ಅಧೀನಕ್ಕೆ ಕೊಟ್ಟನು ಎಂದರ್ಥ. ಬ್ರಹ್ಮದೇವರು ಅವರ ನೇತಾರರಾದರು. ವಿಶ್ವದ ಸೃಷ್ಟಿಯು ಕೇವಲ ಜಡಗಳಿಂದಲೇ ಆಗವುದಿಲ್ಲ. ಅವುಗಳನ್ನು ಬೇಕಾದ ರೀತಿಯಲ್ಲಿ ಬಳಸಬಲ್ಲ ಬುದ್ಧಿವಂತ ಸಮರ್ಥರಿರಬೇಕು. ಅವರಿಗೆಲ್ಲಾ ಒಬ್ಬಮಾರ್ಗದರ್ಶಕರಿರಬೇಕು. ಅಂತಹ ವ್ಯವಸ್ಥೆಯನ್ನು ಸ್ವತಂತ್ರನಾದ ಶ್ರೀಹರಿಯು ಮಾಡಿದನೆಂಬುದು ಇಲ್ಲಿ ಸ್ಪಷ್ಟವಾಗಿದೆ.)

**ಅಥತಸ್ಯಾಭಿತಪ್ತಸ್ಯ ಕತಿಚಾಯತನಾನಿಹ ।**
**ನಿರಭಿದ್ಯಂತ ದೇವಾನಾಂ ತಾನಿಮೇಗದತಃ ಶ್ರುಣು ॥೧೧॥**

ಅಥ = ಅನಂತರ; ಅಭಿತಪ್ತಸ್ಯ = ಜ್ಞಾನರೂಪವಾದ ತಪಸ್ಸಿನ ಕಾವಿನಿಂದ; ಇಹ = ಬ್ರಹ್ಮದೇವರ ಮಹತ್ತತ್ವ ಶರೀರದಲ್ಲಿ; ಕತಿಚ = ಚನ್ಮಾತ್ರಗಳಾದ ಕೆಲವು; ದೇವಾನಾಂ = ದೇವತೆಗಳಿಗೆ; ಆಯತಾನಾನಿ = ಇರಲು ಬೇಕಾದ ಸ್ಥಾನಗಳು; ನಿರಭಿದ್ಯಂತ = ವಿಕಸಿತವಾದುವು; ತಾನಿ = ಅವುಗಳನ್ನು ಕುರಿತು; ಗದತಃ ಮೇ = ನನ್ನ ವಿವರಣೆಯ ಮಾತುಗಳನ್ನು; ಶ್ರುಣು = ಆಲಿಸು.

(ಪ್ರಕೃತಿ ವಿಕಾರಗಳಿಗೆ ಕಾವು (ಬಿಸಿ) ಅವಶ್ಯಕ. ಅದು ಬ್ರಹ್ಮದೇವರ ಜ್ಞಾನತಪಸ್ಸಿನಿಂದ ಅವರ ಶರೀರದಲ್ಲಿ ಉಂಟಾಯಿತು. ಆದರಿಂದ ಆ ಶರೀರದಲ್ಲಿ ವಿವರಗಳುಂಟಾದುವು. ವೀರ್ಯದಿಂದ ಶೋಣಿತವು ಕ್ರಮಕ್ರಮವಾಗಿ ಆಕಾರಗಳನ್ನು ಹೊಂದುವಂತೆಯೇ ಇಲ್ಲಿ ಭಗವಂತನ ಸಂಕಲ್ಪರೂಪವಾದ ವೀರ್ಯದಿಂದ ಉಂಟಾದ ಬ್ರಹ್ಮದೇವರ ಶರೀರಭೂತವಾದ ಮಹತ್ತತ್ತ್ವಾಂಡಂದಲ್ಲಿ ಅವಯವಗಳ ಆವಿರ್ಭಾವವನ್ನು ತಿಳಿಸುತ್ತಿದ್ದಾರೆ.

(ಶ್ರೀಮನ್ನಾರಾಯಣನನ್ನು ಕುರಿತ ತಪಸ್ಸಿನ ಫಲವಾಗಿ ಬ್ರಹ್ಮನಿಗೆ ದಿವ್ಯದರ್ಶನವೂ, ಉಪದೇಶವೂ ಲಭಿಸಿತು. ನಂತರ ಆ ರೂಪವು ಮರೆಯಾಯಿತು. ಮತ್ತೆ ಬ್ರಹ್ಮಾಂಡಗತ ನೀರೊಳಗಿಂದಲೆ ಬ್ರಹ್ಮದೇವರ ವಿರಾಡ್ರೂಪಕ್ಕೆ ಬೇಕಾದ ಮಹತ್ತತ್ವಶರೀರವು ಆವಿರ್ಭವಿಸಿತು. ಆದರಲ್ಲಿ ಅವರ ಅಧೀನರಾದ ದೇವತೆಗಳಿಗೆ ಸ್ಥಾನಗಳು ಕಲ್ಪಿತವಾದುದನ್ನು ಹೇಳಲು ಪ್ರಾರಂಭಿಸಿದ್ದಾರೆ.)

**ತಸ್ಯಾಗ್ನಿರಾಸ್ಯಂ ನಿರ್ಭಿನ್ನಂ ಲೋಕಪಾಲೋಽವಿಶತ್ಪದಂ।**
**ವಾಚಾಸ್ವಾಂಶೇನ ವಕ್ತವ್ಯಂ ಯಯಾಸೌಪ್ರತಿಪದ್ಯತೇ ॥೧೨॥**

ತಸ್ಯ ಆಸ್ಯಂ = ಆಮಹತ್ತತ್ವ ಶರೀರದ ಮುಖವು (ಬಾಯಿ); ನಿರ್ಭಿನ್ನಂ = ಒಡಮೂಡಿತು; ಲೋಕಪಾಲಃ ಅಗ್ನಿಃ = ಲೋಕಪಾಲಕರಲ್ಲಿ ಒಬ್ಬರಾದ ಅಗ್ನಿದೇವರು; ಸ್ವಾಂಶೇನ ವಾಚಾ = ತಮ್ಮ ಆಧಿಪತ್ಯಕ್ಕೆ ಒಳಪಟ್ಟವಾಗಿಂದ್ರಿಯ ಸಹಿತರಾಗಿ; ಅವಿಶತ್ = ಮುಖದ ವಿವರದಲ್ಲಿ ಸ್ಥಾನವನ್ನು ಪಡೆದರು; ಯಯಾ = ಯಾವ ಆ ವಾಗಿಂದ್ರಿಯದಿಂದ; ಅಸೌ = ಬ್ರಹ್ಮಾಂತರ್ಗತ ಶ್ರೀಹರಿಯಿಂದ ಪ್ರೇರಿತರಾದ ಆ ಅಗ್ನಿದೇವರು; ವಕ್ತವ್ಯಂ = ವಾಕ್ ವೃತ್ತಿಯನ್ನು; ಪ್ರತಿಪದ್ಯತೇ = ಹೊಂದುತ್ತಾರೆ.

(ಶರೀರದಲ್ಲಿ ಆಹಾರವು ಪ್ರವೇಶಿಸುವುದಕ್ಕೂ, ಮಾತಾಡುವುದಕ್ಕೂ ಅವಶ್ಯಕವಾದುದು ಬಾಯಿಯ ವಿವರ. ಆದರ ಯಾಜಮಾನ್ಯ ಅಗ್ನಿದೇವರದು. ಅವರಲ್ಲಿ ನಿಂತು ವ್ಯಾಪಾರ ಮಾಡುವವನು, ಉತ್ಪತ್ತಿಸ್ಥಾನೀಯನೂ, ಆಶ್ರಯದಾತನೂ, ವ್ಯವಹಾರ ಕರ್ತನೂ ಆದ ಬ್ರಹ್ಮಾಂತರ್ಗತ ಶ್ರೀಹರಿ)

ನಿರ್ಭಿನ್ನಂ ತಾಲು ವರುಣೋಲೋಕಪಾಲೋವಿಶದ್ಧರೇಃ ।
ಜಿಹ್ವ್ಯಂಶೇನ ಚ ರಸಾನ್ಯಯಾಸೌ ಪ್ರತಿಪದ್ಯತೇ ॥೧೩॥

ತಾಲು = ನಾಲಗೆಯ ಮೂಲವು; ನಿರ್ಭಿನ್ನಂ = ವ್ಯಕ್ತವಾಯಿತು; ಲೋಕಪಾಲಃ ವರುಣಃ = ಲೋಕಪಾಲಕರಲ್ಲಿ ಒಬ್ಬರಾದ ವರುಣದೇವರು; ಜಿಹ್ವ್ಯಂಶೇನ = ಜಿಹ್ವೇಂದ್ರಿಯ ಸಹಿತರಾಗಿ; ವಿಶತ್ = ಅಲ್ಲಿ ಪ್ರವೇಶ ಹೊಂದಿದರು; ಅಸೌಚ = ಈ ವರುಣದೇವರು; ಯಯಾ = ಯಾವ ಜಿಹ್ವೇಂದ್ರಿಯದಿಂದ; ಹರೇಃ ರಸಾನಿ = ಶ್ರೀಹರಿಯಿಂದ ಉಂಟಾಗುವ ರಸಜ್ಞಾನವನ್ನು; ಪ್ರತಿಪದ್ಯತೇ = ಹೊಂದುತ್ತಾರೆ.

(ನಾಲಗೆಯು ವಾಗಿಂದ್ರಿಯಕ್ಕೆ ಸಹಕಾರಿಯಾದರೂ, ಅದರ ಮುಖ್ಯಕಾರ್ಯವು ರಸಗ್ರಹಣ; ರಸಜ್ಞನೂ ಆಶ್ರಯನೂ ಆದ ಶ್ರೀ ಹರಿಯ ಅನುಗ್ರಹದಿಂದ ಉಂಟಾದುದು. ಇದೇ ರೀತಿ, ಯಾವ ದೇವತೆಯ ಸಾಮರ್ಥ್ಯವನ್ನು ಕುರಿತು ಚಿಂತಿಸುವಾಗಲೂ, ಬ್ರಹ್ಮಾಂತರ್ಗತ ಪರಬ್ರಹ್ಮನ ಕಾರ್ಯವನ್ನೇ ಮುಖ್ಯವಾಗಿ ತಿಳಿಯಬೇಕು.)

ನಿರ್ಭಿನ್ನೇ ಅಶ್ವಿನೌನಾಸೇ ವಿಷ್ಣೋರಾವಿಶತಾಂ ಪದಂ ।
ಘ್ರಾಣೇನಾಂಶೇನ ಗಂಧಸ್ಯ ಪ್ರತಿಪತ್ತಿರ್ಯತೋಭವೇತ್ ॥೧೪॥

ನಾಸೇ = ಮೂಗಿನ ರಂಧ್ರಗಳು; ನಿರ್ಭಿನ್ನೇ = ಉಂಟಾಗಲು; ಅಶ್ವಿನೌ = ಅಶ್ವಿನೀ ದೇವತೆಗಳು; ಘ್ರಾಣೇನ ಅಂಶೇನ = ಘ್ರಾಣೇಂದ್ರಿಯದಿಂದ ಕೂಡಿಕೊಂಡು; ವಿಷ್ಣೋಃ ಪದಂ = ಆಕಾಶಮಾನಿಯಾದ ಶ್ರೀಹರಿಯ ಆಸ್ಥಾನವನ್ನು; ಆವಿಶತಾಂ = ಪ್ರವೇಶಿಸಿದರು; ಯತಃ = ಯವ ಆ ಘ್ರಾಣೇಂದ್ರಿಯದಿಂದ; ಗಂಧಸ್ಯ ಪ್ರತಿಪತ್ತಿಃ = ವಾಸನೆಯನ್ನು ಗ್ರಹಿಸಿ ತಿಳಿಯುವ ಸಾಮರ್ಥ್ಯವು; ಪ್ರತಿಪದ್ಯತೇ = ಉಂಟಾಗುವುದು.

(ಪ್ರಾಣವಾಯುವಿನ ಸಂಚಾರಕ್ಕೆ ಆವಶ್ಯಕವಾದುದು ಆಕಾಶದ ಅವಕಾಶ. ಆ ವಾಯುವಿನಿಂದಲೇ ಗಂಧದ ಪ್ರಸಾರ. ಆದುದರಿಂದ ಅಶ್ವಿನೀ ದೇವತೆಗಳಿಗೆ ಮೂಗಿನ ರಂಧ್ರಗಳಲ್ಲಿ ಸ್ಥಾನ. ವೈದ್ಯರಾದ ಅವರು ಗಂಧಗ್ರಾಹಿಗಳು.)

ನಿರ್ಭಿನ್ನೇ ಅಕ್ಷಿಣೀತ್ವಷ್ಟಾ ಲೋಕ ಪಾಲೋವಿಶತ್ಪ್ರಭೋಃ ।
ಚಕ್ಷುಷಾಂಶೇನ ರೂಪಾಣಾಂ ಪ್ರತಿಪತ್ತಿರ್ಯತೋಭವೇತ್ ॥೧೫॥

ಅಕ್ಷಿಣೀ ನಿರ್ಭಿನ್ನೇ = ಕಣ್ಣುಗಳ ಪ್ರದೇಶಗಳು ವ್ಯಕ್ತವಾಗಲು; ಲೋಕಪಾಲಃತ್ವಷ್ಟಾ = ಲೋಕಪಾಲಕನಾದ ಸೂರ್ಯನು; ಪ್ರಭೋಃ ಚಕ್ಷುಷಾಂಶೇನ

= ಶ್ರೀಹರಿಯ ಚಕ್ಷುರಿಂದ್ರಿಯ ಬಲದಿಂದ ಕೂಡಿದ ಚಕ್ಷುರಿಂದ್ರಿಯ ಸಹಿತನಾಗಿ; ವಿಶತ್ = ಪ್ರವೇಶ ಮಾಡಿದನು; ಯತಃ = ಯಾವ ಆ ಚಕ್ಷುರಿಂದ್ರಿಯ ಬಲದಿಂದ; ರೂಪಾಣಾಂ ಪ್ರತಿಪತ್ತಿಃ = ವಸ್ತುಗಳ ರೂಪ ದರ್ಶನ ಜ್ಞಾನವು; ಭವೇತ್ = ಉಂಟಾಗುವುದು.

(ಕಣ್ಣುಗಳಿಗೆ ಸೂರ್ಯಚಂದ್ರರು ಯಜಮಾನರು. ಬಲಗಣ್ಣಿನಲ್ಲಿ ಸೂರ್ಯ; ಎಡಗಣ್ಣಿನಲ್ಲಿ ಚಂದ್ರ. ಚಂದ್ರನ ಪ್ರಕಾಶಕ ಶಕ್ತಿಯು ಸೂರ್ಯನಿಂದಲೇ ಬಂದ ಕಾರಣ, ಎಡಗಣ್ಣಿನಲ್ಲಿಯೂ ಸೂರ್ಯನ ಸ್ಥಾನವಿದ್ದ ಹಾಗಾಯಿತು. ಲೋಕಪಾಲಕರಲ್ಲಿ ಚಂದ್ರನಿಗೆ ಸ್ಥಾನವಿರುವುದರಿಂದ ಸೂರ್ಯನಿಗೂ ಲೋಕಪಾಲಕತ್ವ ಸಿದ್ಧವಾಯಿತು.)

**ನಿರ್ಭಿನ್ನಾನ್ಯಥ ಚರ್ಮಾಣಿ ಲೋಕಪಾಲೋಽನಿಲೋಽವಿಶತ್ ।**

**ಪ್ರಾಣೇನಾಂಶೇನ ಸಂಸ್ಪರ್ಶಂ ಯೇನಾಸೌ ಪ್ರತಿಪದ್ಯತೇ ॥೧೬॥**

ಅಥ = ಅನಂತರ; ಚರ್ಮಾಣಿ = ಒಳಹೊರಗಿನ ಮಾಂಸದ ಹೊದಿಕೆಗಳು; ನಿರ್ಭಿನ್ನಾನಿ = ಮೂಡಿಬಂದುವು; ಲೋಕಪಾಲಃ ಅನಿಲಃ = ವಾಯವ್ಯದಿಕ್ಕಿಗೆ ಅಭಿಮಾನಿಯಾದ ವಾಯುವು; ಪ್ರಾಣೇನ ಅಂಶೇನ = ಮುಖ್ಯಪ್ರಾಣನ ಅಂಶದಿಂದ ಕೂಡಿಕೊಂಡು; ವಿಶತ್ = ಪ್ರವೇಶ ಮಾಡಿದನು; ಯೇನ = ಯಾವ ತ್ವಗಿಂದ್ರಿಯದಿಂದ; ಅಸೌ = ಸ್ಪರ್ಶೇಂದ್ರಿಯಾಭಿಮಾನಿಯಾದ ವಾಯುವು; ಸಂಸ್ಪರ್ಶಂ = ಸ್ಪರ್ಶಜ್ಞಾನದಾಯಕನಾದ ಶ್ರೀಹರಿಯನ್ನು; ಪ್ರತಿಪದ್ಯತೇ = ತಿಳಿಯುತ್ತಾನೆ.

(ಇಲ್ಲಿ ಹೇಳಿದಂತೆ ಅವಯವಗಳ ಉತ್ಪತ್ತಿಗಳನ್ನು ಹೇಳಿದಾಗ, ಇಂದ್ರಿಯಗಳು, ಇಂದ್ರಿಯಗಳ ಅಭಿಮಾನಿಗಳು, ಅವರ ಅಂತರ್ಯಾಮಿಯಾದ ಮುಖ್ಯಪ್ರಾಣಾಂತರ್ಗತ ಶ್ರೀಹರಿ ಎಂದೇ ತಿಳಿಯಬೇಕು; ಎಲ್ಲವೂ ಶ್ರೀಹರಿಯ ಮಹಿಮಾ ದ್ಯೋತಕವೆಂದು ತಿಳಿಯುವ ಅಭ್ಯಾಸಮಾಡುತ್ತಾ ಬಂದರೆ, ಮಾಡಿದುದೆಲ್ಲಾ ಹರಿಪೂಜೆಯಾಗುವುದು. ಚರ್ಮಗಳ ರಂಧ್ರಗಳಲ್ಲಿ ಕೊನೆಯಾಗುವ ನರಗಳ ತುದಿಮೊಗ್ಗುಗಳು ಈ ದೇವತೆಗಳಿಗೆ ಆವಾಸಸ್ಥಾನಗಳು. ಇವರಿಂದ ಮೆದುಳಿಗೆ ಮುಟ್ಟಿದ ಅನುಭವವು ಮನಸ್ಸಿಗೆ ತಲುಪಿ, ತನ್ಮೂಲಕ ದೇಹಿಯು ತಿಳಿಯುತ್ತಾನೆ.)

**ಕರ್ಣಾವಸ್ಯ ವಿನಿರ್ಭಿನ್ನೌ ಧಿಷ್ಣ್ಯಂ ಸ್ವಂ ವಿವಿಶುರ್ದಿಶಃ ।**

**ಶ್ರೋತ್ರೇಣಾಂಶೇನ ಶಬ್ದಸ್ಯ ಸಿದ್ಧಿಂ ಯೇನಪ್ರಪದ್ಯತೇ ॥೧೭॥**

ಅಸ್ಯ = ಮಹತ್ತತ್ತ್ವ ಶರೀರದ; ಕರ್ಣೌ = ಕಿವಿಗಳ ರಂಧ್ರಗಳು; ವಿನಿರ್ಭಿನ್ನೌ = ಉಂಟಾದುವು; ದಿಶಃ = ದಿಗ್ದೇವತೆಗಳು; ಶ್ರೋತ್ರೇಣ ಅಂಶೇನ = ಶ್ರೋತ್ರೇಂದ್ರಿಯದ ಅಂಶದಿಂದ ಕೂಡಿಕೊಂಡು; ಸ್ವಂಧಿಷ್ಣ್ಯಂ = ತಮ್ಮ ಸ್ಥಾನಗಳನ್ನು;

ವಿವಿಶುಃ = ಪ್ರವೇಶಮಾಡಿದರು; ಯೇನ = ಯಾವ ಅವರ ಇರುವಿಕೆಯಿಂದ; ಶಬ್ಧಸ್ಯಸಿದ್ಧಿಂ = ಶಬ್ಧದ ಜ್ಞಾನವನ್ನು; ಪ್ರಪದ್ಯತೇ = ಹೊಂದುತ್ತಾನೆ.

(ದಿಗ್ದೇವತೆಗಳಂತರ್ಯಾಮಿಯಾದ ಮುಖ್ಯಪ್ರಾಣಾಂತರ್ಗತ ಶ್ರೀಹರಿಯು ಶಬ್ದವನ್ನು ಗ್ರಹಿಸುವುದರಿಂದ ಅದು ಶರೀರಮಾನಿಯಾದ ಜೀವನಿಗೂ ತಿಳಿದುಬರುತ್ತದೆ.)

**ತ್ವಚಮಸ್ಯವಿನಿರ್ಭಿನ್ನಾಂ ವಿವಿಶುರ್ಧಿಷ್ಣ್ಯಮೋಷಧೀಃ ।**
**ಅಂಶೇನ ರೋಮಭಿಃ ಕಂಡೂಂ ಯೈರಸೌಪ್ರತಿಪದ್ಯತೇ ॥೧೮॥**

ಅಸ್ಯ = ಮಹತ್ತತ್ತ್ವ ಶರೀರಾಂತರ್ಯಾಮಿಯಾದ ಶ್ರೀಹರಿಯ ಮೂಲಕವಾಗಿ; ವಿನಿರ್ಭಿನ್ನಾಂ = ಮೂಡಿಬಂದ; ತ್ವಚಂ = ಚರ್ಮದ ಹೊರಪದರವನ್ನು; ಧಿಷ್ಣ್ಯಂ = ಸ್ಥಾನವನ್ನಾಗಿ; ಓಷಧೀಃ = ವನಸ್ಪತಿಗಳ ಅಭಿಮಾನಿ ದೇವತೆಗಳು; ರೋಮಭಿಃ ಅಂಶೇನ = ವನಸ್ಪತಿ ಸ್ಥಾನೀಯಗಳಾದ ರೋಮಗಳ ಬೆಳವಣಿಗೆಗೆ ಬೇಕಾದ ಅಂಶಗಳಿಂದ ಕೂಡಿಕೊಂಡು; ವಿವಿಶುಃ = ಪ್ರವೇಶಿಸಿದರು; ಯೇನ = ಯಾವ ಅಂತಹ ಅವರ ಇರುವಿಕೆಯಿಂದ; ಅಸೌ = ಶ್ರೀಹರಿಯಿಂದ ಕ್ರಮವಾಗಿ ಪ್ರೇರಿತನಾದ ದೇಹಿಯು; ಕಂಡೂಂ = ತುರಿಕೆಯ ಅನುಭವವನ್ನು; ಪ್ರತಿಪದ್ಯತೇ = ಪಡೆಯುತ್ತಾನೆ.

(ಚರ್ಮಕ್ಕೆ ವಿಷಪ್ರಾಣಿಗಳಾದ ಸೊಳ್ಳೆಮೊದಲಾದವುಗಳ ಕಾಟ ಉಂಟಾದಾಗ ಅದನ್ನು ತುರಿಕೆಯಿಂದ ನೀಗಿಕೊಳ್ಳಬೇಕೆಂಬ ಜ್ಞಾನ ಉಂಟಾಗುವುದು ಹೊರಚರ್ಮದಲ್ಲಿ ಮನೆ ಮಾಡಿಕೊಂಡಿರುವ ವನಸ್ಪತ್ಯಭಿಮಾನಿ ದವತೆಗಳ ಮುಖಾಂತರ. ಇದು ಮೊದಲು ಪ್ರಾರಂಭವಾದುದು ಬ್ರಹ್ಮನ ವಿರಾಟ್ ಶರೀರದಲ್ಲಿ)

**ಮೇಢ್ರಂತಸ್ಯ ವಿನಿರ್ಭಿನ್ನಂ ಸ್ವಧಿಷ್ಣ್ಯಂಕ ಉಪಾವಿಶತ್ ।**
**ರೇತಸಾಂಶೇನ ಯೇನಾಸಾವಾನಂದಂ ಪ್ರತಿಪದ್ಯತೇ ॥೧೯॥**

ತಸ್ಯ = ಆ ಮಹತ್ತತ್ತ್ವ ಶರೀರದ; ಮೇಢ್ರಂ = ಗುಹ್ಯಾಂಗವು; ವಿನಿರ್ಭಿನ್ನಂ = ಶ್ರೀಹರಿಯ ಮೇಢ್ರಮೂಲದಿಂದ ಉಂಟಾಯಿತು; ಕಃ = ಮನುನಾಮಕ ಪ್ರಜಾಪತಿಯು; ಸ್ವಧಿಷ್ಣ್ಯಂ = ತನ್ನ ಆ ಸ್ಥಾನವನ್ನು; ರೇತಸಾಂಶೇನ = ರೇತಸ್ಸನ್ನು ಉತ್ಪತ್ತಿಮಾಡುವ ಶಕ್ತಿಯಿಂದೊಡಗೂಡಿ; ಉಪಾವಿಶತ್ = ಪ್ರವೇಶಿಸಿದನು; ಯೇನ = ಯಾವ ಶ್ರೀಹರಿಯಿಂದ ಪ್ರೇರಿತವಾದ ಆ ಶಕ್ತಿಯಿಂದ; ಅಸೌ = ದೇಹಿಯು; ಆನಂದಂ = ಮಿಥುನೀಭಾವದಿಂದುಂಟಾಗುವ ಸುಖ ವಿಶೇಷವನ್ನು; ಪ್ರತಿಪದ್ಯತೇ = ಹೊಂದುತ್ತಾನೆ.

('ಅಸೌ' ಅಥವ 'ದೇಹಮಾನಿ' ಎಂಬುದನ್ನು ಬ್ರಹ್ಮದೇವರು, ತತ್ತ್ವಾಭಿಮಾನಿ

ದೇವತೆಗಳು ಮತ್ತು ಒಂದೊಂದು ಶರೀರದ ಯಾಜಮಾನ ಜೀವ–ಎಲ್ಲರಿಗೂ ಅನ್ವಯಿಸಬೇಕು. ಈ ಎಲ್ಲರೂ ಅಸ್ವತಂತ್ರರಾದುದರಿಂದ, ಅದು ಮುಖ್ಯವಾಗಿ ಶ್ರೀಹರಿಗೆ ಅನ್ವಯಿಸುವುದು. ಎಲ್ಲಾ ಅನುಭವಗಳನ್ನೂ ಸ್ವತಂತ್ರನಾದ, ನಿರ್ವಿಕಾರನೂ ನಿರ್ಲಿಪ್ತನೂ ಆದ ಶ್ರೀಹರಿಯು ಅನುಭವಿಸಿದಂತೆ ನಟಿಸಿ ಜೀವರಿಗೆ ಅನುಭವ ಉಂಟುಮಾಡುತ್ತಾನೆ. ಜೀವಬ್ರಹ್ಮೈಕ್ಯಭ್ರಮೆಗೆ ಇದು ಕಾರಣ)

**ಗುದಂ ಪುಂಸೋ ವಿನಿರ್ಭಿನ್ನಂ ಮಿತ್ರೋಲೋಕೇಶ ಆವಿಶತ್ ।**
**ಪಾಯುನಾಂಶೇನ ಯೇನಾಸೌ ವಿಸರ್ಗಂ ಪ್ರತಿಪದ್ಯತೇ ॥೨೦॥**

ಪುಂಸಃ = ವಿರಾಟ್ಪುರುಷನ ಶರೀರದ; ಗುದಂ = ಗುದದ್ವಾರವು; ವಿನಿರ್ಭಿನ್ನಂ = ಒಡೆದು ಮೂಡಿತು; ಲೋಕೇಶಃ ಮಿತ್ರಃ = ಲೋಕಪಾಲಕನಾದ ಮಿತ್ರನಾಮಕ ಸೂರ್ಯನು; ಪಾಯುನಾಂಶೇನ = ಪಾಯು ಇಂದ್ರಿಯ ಸಹಿತನಾಗಿ; ಆ ವಿಶತ್ = ಅಲ್ಲಿ ಸ್ಥಾನವನ್ನು ಪಡೆದನು; ಯೇನ = ಯಾವ ಆ ಸ್ಥಾನದಿಂದ; ಅಸೌ = ಮಿತ್ರನು; ವಿಸರ್ಗಂ = ಮಲವಿಸರ್ಜನೆ ಮುಂತಾದ ಕ್ರಿಯಾಸಾಮರ್ಥ್ಯವನ್ನು; ಪ್ರತಿಪದ್ಯತೇ = ಹೊಂದುತ್ತಾನೆ.

(ಗುದದ್ವಾರವನ್ನು ಮುಟ್ಟಿದ ನರದ ತುದಿಮೊಗ್ಗು ಮಿತ್ರನಾಮಕ ಸೂರ್ಯನಿಗೆ ಆವಾಸಸ್ಥಾನ. ಆ ದೇವತೆಯಲ್ಲಿ ಮುಖ್ಯ ಪ್ರಾಣಾಂತರ್ಗತನಾದ ಪರಮಾತ್ಮನಿದ್ದು ಮಲವಿಸರ್ಜನಾದಿ ಕಾರ್ಯಗಳನ್ನು ನಡೆಸುತ್ತಾನೆ.)

**ಹಸ್ತಾವಸ್ಯವಿನಿರ್ಭಿನ್ನಾ ವಿಂದ್ರಃ ಸ್ವರ್ಪತಿರಾವಿಶತ್ ।**
**ವಾರ್ತಯಾಂಶೇನ ಪುರುಷೋ ಯಯಾವೃತ್ತಿಂ ಪ್ರಪದ್ಯತೇ ॥೨೧॥**

ಅಸ್ಯ = ವಿರಾಟ್ ಶರೀರದ; ಹಸ್ತೌ = ಕೈಗಳು; ವಿನಿರ್ಭಿನ್ನೌ = ಮೂಡಿದುವು; ಸ್ವರ್ಪತಿಃ ಇಂದ್ರಃ = ಸ್ವರ್ಗಾಧಿಪತಿಯೂ, ಪೂರ್ವದಿಕ್ಕಿಗೆ ಅಭಿಮಾನಿಯೂ ಆದ ಇಂದ್ರನು; ವಾರ್ತಯಾ ಅಂಶೇನ = ಹಸ್ತೇಂದ್ರಿಯ ಸಹಿತನಾಗಿ; ಆವಿಶತ್ = ಅಲ್ಲಿ ಪ್ರವೇಶಮಾಡಿದನು; ಯಯಾ = ಯಾವ ಹಸ್ತದಿಂದ; ಪುರುಷಃ = ದೇಹಿಯು; ವೃತ್ತಿಂ = ಹಿಡಿಯುವ, ಬಿಡುವ ವ್ಯಾಪಾರಗಳನ್ನು ನಡೆಸಬಲ್ಲವನಾಗುತ್ತಾನೆ.

(ತೋಳು, ಅಂಗೈ ಬೆರಳುಗಳಿಂದ ಕೂಡಿದ ಅವಯವವನ್ನು ಕೈಯೆಂದು ನಾವು ವ್ಯವಹರಿಸುತ್ತೇವೆ. ಆದರೆ ಅದರ ವ್ಯಾಪಾರ ನಡೆಯುವುದು ಅಲ್ಲಿನ ನರಾಂಶಗಳಲ್ಲಿ ಮನೆ ಮಾಡಿಕೊಂಡಿರುವ ಇಂದ್ರದೇವರಿಂದ. ಕಾಣುವ ಅವಯವಗಳಿಗೂ ಅವುಗಳಿಗೆ ಸಾಮರ್ಥ್ಯನೀಡುವ ಇಂದ್ರಿಯ ಶಕ್ತಿಗಳಿಗೂ ಇರುವ ವ್ಯತ್ಯಾಸ ಗಮನಿಸಬೇಕು.)

**ಪಾದಾವಸ್ಯ ವಿನಿರ್ಭಿನ್ನೌ ಲೋಕೇಶೋ ವಿಷ್ಣುರಾವಿಶತ್ ।**
**ಗತ್ಯಾ ಸ್ವಾಂಶೇನ ಪುರುಷೋಯಯಾಪ್ರಾಪ್ಯಂ ಪ್ರಪದ್ಯತೇ ॥೨೨॥**

ಅಸ್ಯ = ಮಹತ್ತತ್ವ ಶರೀರಕ್ಕೆ; ಪಾದೌ = ಕಾಲುಗಳು; ವಿನಿರ್ಭಿನ್ನೌ = ಉಂಟಾದುವು; ಲೋಕೇಶಃ ವಿಷ್ಣುಃ = ಲೋಕಪಾಲಕರಲ್ಲಿ ಒಬ್ಬನಾದ, ದ್ವಾದಶ 'ಸೂರ್ಯರಲ್ಲಿ ಒಬ್ಬನೆನಿಸಿದ ಸ್ವಯಂ ವಿಷ್ಣುವು; ಗತ್ಯಾಸ್ವಾಂಶೇನ = ಓಡಾಟದ ಕ್ರಿಯೆಗೆ ಶಕ್ತಿದಾಯಕವಾದ ಪಾದೇಂದ್ರಿಯದಿಂದ ಕೂಡಿ; ಆವಿಶತ್ = ಕಾಲುಗಳಲ್ಲಿ ಪ್ರವೇಶ ಮಾಡಿದನು; ಪುರುಷಃ = ದೇಹಿಯು; ಯಯಾ = ಯಾವ ಇಂದ್ರಿಯಗತ ವಿಷ್ಣುವಿನ ಬಲದಿಂದ; ಪ್ರಾಪ್ಯಂ = ಸೇರಬೇಕಾದ ಸ್ಥಳವನ್ನು; ಪ್ರಪದ್ಯತೇ = ಮುಟ್ಟುತ್ತಾನೆ.

(ಪಾದೇಂದ್ರಿಯದಲ್ಲಿ ಇಂದ್ರಪುತ್ರನಾದ ಜಯಂತ, ಅವನಲ್ಲಿ ಮುಖ್ಯ ಪ್ರಾಣಾಂತರ್ಗತ ವಿಷ್ಣು ಎಂದು ತಿಳಿಯಬೇಕು.)

**ಹೃದಯಂಚಾಸ್ಯ ನಿರ್ಭಿನ್ನಂ ಚಂದ್ರಮಾಧಿಷ್ಣ್ಯಮಾವಿಶತ್ ।**
**ಮನಸಾಂಶೇನ ಯೇನಾಸೌ ವಿಕ್ರಿಯಾಂ ಪ್ರತಿಪದ್ಯತೇ ॥೨೩॥**

ಅಸ್ಯ = ವಿರಾಟ್ ಶರೀರದ; ಹೃದಯಂ = ಎದೆಯ ವಿವರವು; ನಿರ್ಭಿನ್ನಂ = ಮೂಡಿತು; ಚಂದ್ರಮಾ = ಚಂದ್ರನು; ಮನಸಾಂಶೇನ = ಮನಶ್ಶಕ್ತಿಯ ಅಂಶದಿಂದ ಕೂಡಿಕೊಂಡು; ಧಿಷ್ಣ್ಯಂ = ಆ ವಿವರ ಸ್ಥಾನವನ್ನು; ಆವಿಶತ್ = ಪ್ರವೇಶ ಮಾಡಿದನು; ಯೇನ = ಯಾವ ಆ ಸ್ಥಾನ ಬಲದಿಂದ; ಅಸೌ = ದೇಹಿಯು; ವಿಕ್ರಿಯಾಂ = ಸಂಕಲ್ಪ ವಿಕಲ್ಪ ಅಥವ ಬೇಕು ಬೇಡಗಳ ಭಾವಗಳನ್ನು; ಪ್ರತಿ ಪದ್ಯತೇ = ಪಡೆಯುತ್ತಾನೆ.

(ಹೃದಯ ವಿವರದ ಸ್ಥಾನವಿರುವುದು ಮೆದುಳುಬಳ್ಳಿಯಲ್ಲಿ, ಎದೆಯಗೂಡಿನ ನೇರದಲ್ಲಿ "ರಕ್ತಚಲನೆಗೆ ಸಂಬಂಧಿಸಿದ ಹೃದಯವಿರುವುದೂ ಆ ನೇರದಲ್ಲಿಯೇ; ಎರಡಕ್ಕೂ ನರಾಂಶಗಳ ಸಂಬಂಧಉಂಟು.(Telepathy) ಜೀವಿಗೆ ಅನಾದಿ ಆವರಕವಾದ ಲಿಂಗ ಶರೀರದಲ್ಲಿ ಅನಾದಿ ಮೂಲಮನಸ್ಸುಂಟು. ಅದರ ಪ್ರತಿಯಾದ ಮನಸ್ಸು ಅದಕ್ಕೆ ಆವರಕವಾದ ಅನಿರುದ್ಧ ಶರೀರದಲ್ಲಿದೆ. ಅನಂತರ ಬಂದು ಬಂದು ಹೋಗುವ ಸ್ಥೂಲ ಶರೀರಗಳಲ್ಲಿ ಸ್ಥೂಲ ಮನಸ್ಸಿರುವುದು ಹೃದಯ ವಿವರದಲ್ಲಿ, ನರಮಂಡಲದ ಮಧ್ಯಪ್ರದೇಶದಲ್ಲಿ. ಮೆದುಳಿಗೆ ಆಧಾರ, ಈ ಮನಸ್ಸು, C.f. Reflex action.)

**ಆತ್ಮಾನಂಚಾಸ್ಯ ನಿರ್ಭಿನ್ನಂ ವಾಚಸ್ಪತಿರುಪಾವಿಶತ್ ।**
**ಬುದ್ಧ್ಯಾಸ್ವಾಂಶೇನ ಯೇನಾಸೌ ನಿಶ್ಚಯಂ ಪ್ರತಿಪದ್ಯತೇ ॥೨೪॥**

ಅಸ್ಯ = ಆ ದೇಹದ; ಆತ್ಮಾ ಚ = ಆತ್ಮಾ ಎಂದು ಕರೆಸುವ ನರದ ಅಂಶವು; ನಿರ್ಭಿನ್ನಂ = ಉಂಟಾಯಿತು; ಸ್ವಾಂಶೇನ ಬುದ್ಧ್ಯಾ = ತಮ್ಮಬುದ್ಧಿ ಇಂದ್ರಿಯ ಸಹಿತರಾಗಿ; ವಾಚಸ್ಪತಿಃ = ಬೃಹಸ್ಪತಿಯು; ಆತ್ಮಾನಂ ಉಪಾವಿಶತ್ = ಆ ನಾಡಿಯನ್ನು ಪ್ರವೇಶಿಸಿದರು; ಯೇನ = ಯಾವ ಆ ನಾಡೀಗತ ಇಂದ್ರಿಯದಿಂದ; ಅಸೌ = ಶ್ರೀಶನಿಂದ ಬುದ್ಧೀಂದ್ರಿಯ ಪ್ರೇರಿತನಾದ ಪುರುಷನು; ನಿಶ್ಚಯಂ = ನಿಶ್ಚಯ ಜ್ಞಾನವನ್ನು; ಪ್ರತಿಪದ್ಯತೇ = ಹೊಂದುವನು.

(ಮನಸ್ಸಿನ ಕಾರ್ಯ, ಹೊರಗಿನಿಂದ ಬರುವ ಜ್ಞಾನಸಾಧಕಗಳ ಗ್ರಹಣ ಮತ್ತು ಬೇಕು ಬೇಡಗಳ ಪ್ರಕಟಣೆ. ಮನಸ್ಸು ಗ್ರಹಿಸಿದ ಜ್ಞಾನಾಂಶಗಳನ್ನು 'ಇದು ಇಂತಹುದು' ಎಂದು ನಿಶ್ಚಯಿಸುವುದು ಬುದ್ಧಿಕಾರ್ಯ. ಆದಕ್ಕೆ ಯಜಮಾನರು ಬೃಹಸ್ಪತಿಗಳು, ಉಮಾದೇವಿಯರ ಅಧೀನರು. ಅದರ ಸ್ಥಾನ ಒಂದು ನರದ ಅಂಶ)

**ಅಹಂ ಚಾಸ್ಯ ವಿನಿರ್ಭಿನ್ನಮಭಿಮಾನೋಽವಿಶತ್ಪದಂ ।**
**ಕರ್ತಾಽಸ್ವಾಂಶೇನ ಯೇನಾಸೌ ಕರ್ತವ್ಯಂ ಪ್ರತಿಪದ್ಯತೇ ॥೨೫॥**

ಅಸ್ಯ = ಆ ಪುರುಷಶರೀರದ; ಅಹಂ = ನಾನು ಎನಿಸುವ ನಾಡ್ಯಂಶವು; ವಿನಿರ್ಭಿನ್ನಂ = ಕಾಣಿಸಿ ಕೊಂಡಿತು; ಸ್ವಾಂಶೇನ ಕರ್ತ್ರಾ = ಕರ್ತೃತ್ವ ಶಕ್ತಿಯ ಅಂಶದಿಂದ ಕೂಡಿಕೊಂಡು; ಅಭಿಮಾನಃ = ಅಹಂತತ್ತ್ವಾಭಿಮಾನಿ ರುದ್ರದೇವರು; ಪದಂ = ಶ್ರೀಹರಿಯಿಂದ ಉತ್ಪನ್ನವೂ, ಅಧಿಷ್ಠಿತವೂ ಆದ ಆಸ್ಥಾನವನ್ನು; ವಿಶತ್ = ಪ್ರವೇಶಮಾಡಿದರು. ಯೇನ = ಯಾವ ಆ ಕರ್ತೃತ್ವಾಂಶದಿಂದ; ಅಸೌ = ಪುರುಷನು; ಕರ್ತೃತ್ವಂ = ಕ್ರಿಯಾಶೀಲ ಲಕ್ಷಣವನ್ನು; ಪ್ರತಿಪದ್ಯತೇ = ಹೊಂದುತ್ತಾನೆ.

(ಬುದ್ಧಿಯ ನರವು ಜ್ಞಾನವಾಹಿ; 'ಅಹಂ' ನರವು ಕ್ರಿಯಾವಾಹಿ ಅಹಂ ನಾಡಿಯಲ್ಲಿ ಎರಡು ಅಂಶಗಳ ಸಂಗವೂ ಇದೆ. ತಿಳಿವೆಳಿಕೆ, ಕರ್ತೃತ್ವ (Sensory & motor))

**ಸತ್ತ್ವಂಚಾಸ್ಯವಿನಿರ್ಭಿನ್ನಂ ಮಹಾನ್ ಧಿಷ್ಣ್ಯಮುಪಾವಿಶತ್ ।**
**ಚಿತ್ತೇನಾಂಶೇನ ಯೇನಾಸೌ ವಿಜ್ಞಾನಂ ಪ್ರತಿಪದ್ಯತೇ ॥೨೬॥**

ಅಸ್ಯ = ಆ ಶರೀರದ; ಸತ್ವಂ = ಸತ್ವಗುಣ ಪ್ರಧಾನವಾದ ನಾಡ್ಯಂಶವು; ವಿನಿರ್ಭಿನ್ನಂ = ಉಂಟಾಯಿತು; ಮಹಾನ್ = ಮಹತ್‌ತತ್ತ್ವಾಭಿಮಾನಿಗಳಾದ ಬ್ರಹ್ಮದೇವರು; ಚಿತ್ತೇನ ಅಂಶೇನ = ಚಿತ್ ಅಂಶದಿಂದ ಕೂಡಿಕೊಂಡು; ಧಿಷ್ಣ್ಯಂ = ಆ ನರದ ಸ್ಥಾನವನ್ನು; ಉಪಾವಿಶತ್ = ಪ್ರವೇಶಿಸಿದರು; ಯೇನ = ಶ್ರೀಹರಿಯ

ಚಿತ್ತಾಂಶದಿಂದ ಕೂಡಿದ ಆ ಚಿದಿಂದ್ರಿಯದಿಂದ; ಅಸೌ = ಪುರುಷನು; ವಿಜ್ಞಾನಂ = ತತ್ವಜ್ಞಾನವನ್ನು; ಪ್ರತಿಪದ್ಯತೇ = ಹೊಂದುವನು. (ಬ್ರಹ್ಮ = ವಾಯು)

(ಈ ನಾಡೀ ಅಂಶಗಳೆಲ್ಲಾ ಪ್ರಾರಂಭವಾದುದು ನಾಭೀಪ್ರದೇಶಕ್ಕಿಂತಲೂ ಕೆಳಗಿರುವ ನಾಭೀಮೂಲದಲ್ಲಿ. ಅಲ್ಲಿಂದ ಮೇಲಕ್ಕೆ ಎಳೆಗಳು ಹೊರಟು, ಅವು ಬೆನ್ನು ಹುರಿಯ ರೂಪಹೊಂದಿ, ತಲೆಯ ಮೆದುಳಿನಲ್ಲಿ ಪರ್ಯವಸಾನ ಹೊಂದುವುವು. ಬೆನ್ನು ಹುರಿಯಿಂದ (Spinal Chord)ಹೊರಟ ಶಾಖಾನರಗಳು ದೇಹದ ವಿವಿಧ ಭಾಗಗಳಿಗೆ ಹಂಚಿ ಹೋಗುವುವು. ಹೃದಯ ಕಮಲದಲ್ಲಿರುವ ಮನಸ್ಸಿಗೆ ಸಂಬಂಧ ಹೊಂದಿರುವುದು 'ಅಹಂ' ನಾಡಿ; ನೇರವಾಗಿ ಮೆದುಳಿಗೆ ಸಂಬಂಧ ಹೊಂದಿರುವುದು 'ಸತ್ವ'ನಾಡಿ; ಅದೇ ಸುಷುಮ್ನಾ ನಾಡಿ. ಎಲ್ಲಾ ನಾಡಿಗಳಿಗೂ ಇದೇ ಪ್ರಧಾನವಾದುದು, ಆದರಲ್ಲಿ ಪ್ರವಿಷ್ಟರಾದ ಬ್ರಹ್ಮದೇವರು ಎಲ್ಲಾ ನಾಡಿಗಳಲ್ಲಿಯೂ ವ್ಯಾಪ್ತರಾಗಿರುವರು. ಅವರು ಮುಖ್ಯ ಚಿತ್ತಾಭಿಮಾನಿಗಳು; ಮುಖ್ಯ ಚಿದ್ರೂಪನಾದ ಶ್ರೀಹರಿಯು ಅವರಲ್ಲಿದ್ದು, ಅವರ ಮುಖಾಂತರ ಅವಾಂತರ ಚಿದಭಿಮಾನಿಗಳಾದ ಗರುಡರುದ್ರೇಂದ್ರಾದಿಗಳಿಗೆ ವಿಜ್ಞಾನದಾಯಕನಾಗಿರುವನು. ಅವರ ಬಲದಿಂದ ಸಾಮಾನ್ಯ ಮಾನವರಿಗೆ ಅವರವರ ಯೋಗ್ಯತಾನುಸಾರ ತತ್ವಜ್ಞಾನ ಉಂಟಾಗುವುದು.)

ಶೀರ್ಷ್ಣೋಽಸ್ಯ ದ್ಯೌರ್ಧರಾಪದ್ಭ್ಯಾಂ ಖಂ ನಾಭೇರುಪಪದ್ಯತ ।
ಗುಣಾನಾಂ ವೃತ್ತಯೋಯೇಷು ಪ್ರತೀಯಂತೇ ಸುರಾದಯಃ ॥೨೭॥

ಅಸ್ಯ = ಬ್ರಹ್ಮನ ವಿರಾಟ್ ಶರೀರಾಂತರ್ಗತನಾದ ವಿರಾಟ್ ವಿಷ್ಣುವಿನ; ಶೀರ್ಷ್ಣಃ = ಶಿರೋಭಾಗದ ಅಂಶದಿಂದ; ದ್ಯೌಃ = ಬ್ರಹ್ಮಾಂಡಗತ ದೇವಲೋಕವು; ಪದ್ಭ್ಯಾಂ = ಪಾದಗಳ ಅಂಶದಿಂದ; ಧರಾ = ಭೂಮಿಯು; ನಾಭೇಃ = ಹೊಕ್ಕುಳಿನ ಅಂಶದಿಂದ; ಖಂ = ಆಕಾಶವು; ಉಪಪದ್ಯತ = ಒಂದೊಂದೂ ಉಂಟಾಯಿತು; ಯೇಷು = ಯಾವ ಈ ಲೋಕಗಳಲ್ಲಿ; ಗುಣಾನಾಂ ವೃತ್ತಯಃ = ತ್ರಿಗುಣ ಸಂಬಂಧ ಕಾರ್ಯಗಳು, ಮತ್ತು; ಸುರಾದಯಃ = ಅವುಗಳ ಕಾರ್ಯಗಳಲ್ಲಿ ನಿರತರಾದ ದೇವಾಸುರಮಾನವರು; ಪ್ರತಿಯಂತೇ = ಪ್ರವೃತ್ತಿಹೊಂದಿರುತ್ತಾರೆ.

ಔತ್ಪತ್ತಿಕೇನ ಸತ್ವೇನ ದಿವಂ ದೇವಾಃ ಪ್ರಪೇದಿರೇ ।
ಧರಾಂರಜಃ ಸ್ವಭಾವೇನ ಪಣಯೋ ಯೇಚತಾನನು ॥೨೮॥

ತಾರ್ತೀಯೇನ ಸ್ವಭಾವೇನ ಭಗವನ್ನಾಭಿಮಾಶ್ರಿತಾಃ ।
ಉಭಯೋರಂತರಂ ವ್ಯೋಮಯೇರುದ್ರ ಪಾರ್ಷದಾಗಣಾಃ ॥೨೯॥

ಔತ್ಪತ್ತಿಕೇನ ಸತ್ತ್ವೇನ = ಸ್ವಾಭಾವಿಕವಾದ ಸತ್ವಗುಣ ಪ್ರಾಚುರ್ಯದಿಂದ ದೇವಾಃ = ದೇವತೆಗಳು; ದಿವಂ = ಸ್ವರ್ಗಾದಿ ಲೋಕಗಳನ್ನು; ಪ್ರಪೇದಿರೇ = ಹೊಂದಿದರು; ರಜಃಸ್ವಭಾವೇನ = ರಜೋಗುಣದ ಪ್ರಾಚುರ್ಯದಿಂದ; ಪಣಯಃ = ಕೊಟ್ಟು ಕೊಳ್ಳುವ ಸ್ವಭಾವದವರಾದ ಮಾನವರು; ಚ = ಮತ್ತು; ಯೇ ತಾನ್ ಅನು = ಅವರಂತೆ ವ್ಯಾಪಾರಗಳುಳ್ಳ ಇತರ ಜೀವಿಗಳು; ಧರಾಂ = ಭೂಲೋಕವನ್ನು; ಪ್ರಪೇದಿರೇ = ಹೊಂದಿದರು. ॥೨೮॥

ತಾರ್ತೀಯೇನ ಸ್ವಭಾವೇನ = ತಾಮಸಗುಣ ಪ್ರಾಚುರ್ಯದಿಂದ; ಯೇ ರುದ್ರ ಪಾರ್ಷದಗಣಾಃ = ರುದ್ರ ದೇವರ ಪರಿವಾರವಾದ ಭೂತ ಗಣಗಳು; ಭಗವನ್ನಾಭಿಂ ಆಶ್ರಿತಾಃ = ವಿರಾಡ್ ಪುರುಷನ ನಾಭೀಪ್ರದೇಶವನ್ನು ಆಶ್ರಯಿಸಿದರು; ಉಭಯೋಃ; ಅಂತರಂ = ಭೂಲೋಕ ಸುರಲೋಕಗಳ ಮಧ್ಯದಲ್ಲಿರುವುದು; ವ್ಯೋಮ = ಅಂತರಿಕ್ಷವು; (ರುದ್ರಗಣಗಳಿಗೆ ಆಶ್ರಯಸ್ಥಾನ, ಅಂತರಿಕ್ಷ).

(ವಿರಾಟ್ ಪುರುಷನ ಶರೀರ ಎಂದಾಗ ಬ್ರಹ್ಮಾಂಡದ ಒಳಗಿನ ಪ್ರದೇಶವನ್ನೆಲ್ಲಾ ಗ್ರಹಿಸಬೇಕು. ಭೂಲೋಕವು ಜೀವಿಗಳ ಸುಖದುಃಖಾನುಭವಗಳಿಂದ ಜ್ಞಾನದ ಬೆಳವಣಿಗೆಗಾಗಿ; ಸುರಲೋಕವು ಸಮ್ಯಜ್ಞಾನದ ಫಲ ನೀಡುವುದಕ್ಕಾಗಿ; ಅಂತರಿಕ್ಷ ಲೋಕವು ಕಾಲಚಕ್ರಕ್ಕೆ ಆಶ್ರಯವಾಗಿ ಎರಡು ಲೋಕಗಳಿಗೂ ಕಾಲಪರಿಣಾಮದ ಸಂಬಂಧ ಕಲ್ಪನೆಗಾಗಿ).

**ಮುಖತೋ ವರ್ತತ ಬ್ರಹ್ಮಪುರುಷಸ್ಯಕುರೂದ್ವಹ ।**
**ಯತ್ರೋನ್ಮುಖತ್ವಾದ್ವರ್ಣಾನಾಂ ಮುಖ್ಯೋಭೂದ್ಬ್ರಾಹ್ಮಣೋ ಗುರುಃ ॥೩೦॥**

ಕುರೂದ್ವಹ = ವಿದುರಾ; ಪುರುಷಸ್ಯ ಮುಖಾತ್ = ವಿರಾಟ್ ಪುರುಷಾಂತರ್ಯಾಮಿಯಾದ ವಿರಾಡ್ ವಿಷ್ಣುವಿನ ಮುಖದ ಅಂಶದಿಂದ; ಬ್ರಹ್ಮ = ಬ್ರಾಹ್ಮಣವರ್ಣವು; ಅವರ್ತತ = ಉಂಟಾಯಿತು; ಯತ್ರ = ಯಾವ ಬ್ರಾಹ್ಮಣವರ್ಗದಲ್ಲಿ; ಉನ್ಮುಖತ್ವಾತ್ = ಮಂತ್ರೋಚ್ಚಾರಣೆಯೂ, ಮಂತ್ರಗ್ರಹಣ ಶಕ್ತಿಯೂ ಉತ್ತಮವಾಗಿರುವುದರಿಂದ; ವರ್ಣಾನಾಂ = ಎಲ್ಲಾ ವರ್ಣದವರಿಗೂ; ಬ್ರಾಹ್ಮಣಃ = ಬ್ರಾಹ್ಮಣನು; ಮುಖ್ಯಃ ಗುರುಃ ಅಭೂತ್ = ಶ್ರೇಷ್ಠ ಗುರುಸ್ಥಾನೀಯನಾಗಿರುವನು.

(ವಿಷ್ಣುವಿನ ಅಂಶವೆಂದರೆ ಕೇವಲ ಭಗವಂತನ ಸಂಕಲ್ಪ ರೂಪವ್ಯಾಪ್ತಿಯೇ ಹೊರತು ವಿಕೃತಾಂಶವಲ್ಲ. ಜಗತ್ತಿನ ಎಲ್ಲಾ ವಸ್ತುಗಳಲ್ಲಿಯೂ, ಜೀವ ಜಾತಿಗಳಲ್ಲಿಯೂ

ಭಗವದಂಶವೆಂದಾಗ ಇದೇರೀತಿ ಅಭಿಪ್ರಾಯ. ಎಲ್ಲದರ ಸ್ಥಿತಿಗತಿಗಳೂ ಭಗವಂತನ ಸಂಕಲ್ಪಮಾತ್ರದಿಂದ. ಬ್ರಾಹ್ಮಣರಲ್ಲಿ ಭಗವಂತನ ಸನ್ನಿಧಾನ ವಿಶೇಷದಿಂದ ಮಂತ್ರಜ್ಞಾನವೂ, ಮಂತ್ರೋಚ್ಚಾರಣೆಯೂ ಶ್ರೇಷ್ಠವಾಗಿರುವುದರಿಂದ, ಇತರರ ಅಜ್ಞಾನವನ್ನು ಕಳೆದು ಜ್ಞಾನೋಪದೇಶ ಮಾಡಬಲ್ಲ ಸಾಮರ್ಥ್ಯವಿದೆ.)

**ಬಾಹುಭ್ಯೋವರ್ತತಕ್ಷತ್ರಂ ಕ್ಷತ್ರಿಯಸ್ತದನು ವ್ರತಃ ।**
**ಯೋಜಾತಸ್ತ್ರಾಯತೇ ವರ್ಣಾನ್ಪೌರುಷಾತ್ಕಂಟಕಕ್ಷತಾತ್ ॥೩೧॥**

ಕ್ಷತ್ರಂ = ಕ್ಷತ್ರಿಯ ವರ್ಣವು; ಬಾಹುಭ್ಯಃ = ವಿರಾಟ್ಪುರುಷನ ಬಾಹುಗಳ ಅಂಶದಿಂದ; ಅವರ್ತತ = ಉಂಟಾಯಿತು.; ಕ್ಷತ್ರಿಯಃ = ಕ್ಷತ್ರಿಯನು; ತದನುವ್ರತಃ = ಬ್ರಾಹ್ಮಣರ ಉಪದೇಶಾನುಸಾರ ನಡೆಯತಕ್ಕವನು; ಪೌರುಷಾತ್ = ಭಗವಂತನ ಪೌರುಷ ಲಕ್ಷಣದಿಂದ; ಜಾತಃ = ಉತ್ಪನ್ನನಾದ; ಯಃ = ಯಾವ ಕ್ಷತ್ರಿಯನು; ವರ್ಣಾನ್ = ನಾಲ್ಕು ವರ್ಣದವರನ್ನು; ಕಂಟಕಕ್ಷತಾತ್ = ಶತ್ರುಗಳ ಬಾಧೆಯಿಂದ; ತ್ರಾಯತೇ = ರಕ್ಷಿಸುತ್ತಾನೆ.

(ಲೋಕದಲ್ಲಿ ಹುಟ್ಟಿಬಂದ ಜೀವರಲ್ಲಿ ಭಗವದ್ಭಕ್ತಿ ಲಕ್ಷಣ ಯುಕ್ತರಾದ ಸಭ್ಯ ಜೀವಿಗಳೂ, ದೈತ್ಯಾಂಶ ಸಂಬಂಧಿಗಳಾದ ದುಷ್ಟಜೀವಿಗಳೂ ಇದ್ದೇ ಇರುತ್ತಾರಾದುದರಿಂದ ಕ್ಷತ್ರಿಯ ಜಾತಿಯು ರಕ್ಷಣೆಗಾಗಿ ಸೃಷ್ಟವಾಯಿತು. ಜಾತಿ ವಿಂಗಡವೂ ಕೂಡ ಜೀವರ ಸ್ವರೂಪಗಳನ್ನು ಆಧರಿಸಿಯೇ ವ್ಯವಸ್ಥಿತವಾಗಿದೆ. ಆದರೆ, ಕರ್ಮನಿಮಿತ್ತದಿಂದ ಬರುವ ಜಾತಿಗಳಿಂದ ಸ್ವರೂಪ ಜಾತಿಗಳನ್ನು ತಿಳಿಯಲಾಗುವುದಿಲ್ಲ. ಹಿಂಸೆಗೊಳಗಾಗಿ ರಕ್ಷಕನೊಬ್ಬನಿರುವನೆಂಬುದನ್ನು ಅರಿತಾಗಲೇ ಜೀವರಿಗೆ ಜ್ಞಾನೋದಯವಾಗುವುದು. ಆದುದರಿಂದ ಶಿಷ್ಟರ ಜೊತೆಗೆ ದುಷ್ಟರನ್ನೂ ಭಗವಂತನು ಸೃಷ್ಟಿಯಲ್ಲಿ ತಂದಿದ್ದಾನೆ.)

**ವಿಶೋವರ್ತತತಸ್ಯೋರ್ವೋರ್ಲೋಕವೃತ್ತಿಕರೀರ್ವಿಭೋಃ ।**
**ವೈಶ್ಯಸ್ತದುದ್ಭವೋವಾರ್ತಾಂ ನೃಣಾಂಯಃ ಸಮವರ್ತಯತ್ ॥೩೨॥**

ವಿಶಃ = ವೈಶ್ಯಜಾತಿಯು; ವೃತ್ತಿಕರೀ = ವಿವಿಧ ಉದ್ಯೋಗಗಳಿಗೆ ಮೂಲ ಸ್ಥಾನವಾದ; ವಿಭೋಃ = ಭಗವಂತನ; ಊರ್ವೋಃ = ತೊಡೆಗಳ ಅಂಶದಿಂದ; ಅವರ್ತತ = ಉಂಟಾಯಿತು; ತದುದ್ಭವಃ = ಬ್ರಹ್ಮಾಂತರ್ಯಾಮಿ ಶ್ರೀಹರಿಯ ದೆಸೆಯಿಂದ ಜನ್ಮಪಡೆದ; ಯಃವೈಶ್ಯಃ =ವೈಶ್ಯನು; ನೃಣಾಂ = ಮಾನವರಿಗಾಗಿ; ವಾರ್ತಾಂ = ಪಶುಪಾಲನೆ, ವ್ಯವಸಾಯ, ವ್ಯಾಪಾರಗಳನ್ನು; ಅವರ್ತಯತ್ = ಅನುಸರಿಸಿದನು.

(ದೇಹದಲ್ಲಿ ಸಾಮರ್ಥ್ಯದ ಮುಖ್ಯಭಾಗವು ತೊಡೆಯಾಗಿದೆ. ಅದಕ್ಕನುಗುಣವಾಗಿ ವೈಶ್ಯಜಾತಿಯ ಸೃಷ್ಟಿ. ಅವರ ವೃತ್ತಿಗಳೇ ಜನರಿಗೆ ಜೀವನಾಧಾರ.)

**ಪದ್ಭ್ಯಾಂ ಭಗವತೋ ಜಜ್ಞೇ ಶುಶ್ರೂಷಾಕರ್ಮಸಿದ್ಧಯೇ ।**
**ತಸ್ಯಾಂಜಾತಃ ಪುರಾಶೂದ್ರೋ ಯದ್ವೃತ್ತ್ಯಾತುಷ್ಯತೇಹರಿಃ ॥೩೩॥**

ಶುಶ್ರೂಷಾ ಕರ್ಮ ಸಿದ್ಧಯೇ = ಮೇಲಿನ ಮೂರು ವರ್ಣಗಳವರ ಕರ್ಮಾಚರಣೆಗಳಿಗೆ ಅವಶ್ಯಕವಾದ 'ಸೇವಾವೃತ್ತಿಗಳ ಪೂರೈಕೆಗಾಗಿ; ಭಗವತಃ ಪದ್ಭ್ಯಾಂ = ವಿರಾಡ್ವಿಷ್ಣುವಿನ ಪಾದಗಳ ಅಂಶದಿಂದ; ಶೂದ್ರಃ = ಶೂದ್ರಜಾತಿಯು; ಜಜ್ಞೇ = ಉತ್ಪನ್ನವಾಯಿತು; ಪುರಾ = ಆದಿಸರ್ಗದಲ್ಲಿ (ಮೊದಲನೆಯ ಪದ್ಮಕಲ್ಪದಲ್ಲಿ); ತಸ್ಯಾಂಜಾತಃ = ಭಗವಂತನ ಪಾದಗಳ ಅಂಶದಿಂದ ಹುಟ್ಟಿದ; ಯದ್ವೃತ್ತ್ಯಾ = ನಿಯತವಾದ ಯಾವ ಆ ಶುಶ್ರೂಷಾ ಕರ್ಮದಿಂದ; ಹರಿಃ = ಶ್ರೀಹರಿಯು; ತುಷ್ಯತೇ = ಪ್ರಸನ್ನನಾಗುತ್ತಾನೆ.

(ಭಗವಂತನ ಅವಯವಗಳಲ್ಲಿ ನೀಚೋಚ್ಚ ಭಾವವಿಲ್ಲ; ಆದರೆ ಲೋಕದಲ್ಲಿ ಜನ್ಮತಾಳಿದ ಪುರುಷಶರೀರಗಳಲ್ಲಿ ಉಂಟು; ಆದುದರಿಂದ ತಲೆಶ್ರೇಷ್ಠ, ಇತ್ಯಾದಿ ಭಾವನೆ. ಜಾತಿಗಳ ಸೃಷ್ಟಿಯು ಸಹಕಾರೀತತ್ವಕ್ಕನುಗುಣವಾಗಿದ್ದು, ಒಟ್ಟು ಸಮಾಜದ ನೆಮ್ಮದಿಗೆ ಕಾರಣವೆಂಬುದು ಗಮನಾರ್ಹ. "ಅರ್ಥೇಷು ಅಭಿಜ್ಞಃ ಸ್ವರಾಟ್" ಎಂದಿರುವಂತೆ, ಸ್ವರೂಪ ಜಾತಿಗಳಿಂದ ಬೇರೆಬೇರೆಯಾದ ಜೀವಲಕ್ಷಣಗಳನ್ನು ಭಗವಂತನು ಉಪಯುಕ್ತರೀತಿಯಲ್ಲಿ ಯೋಜಿಸಿರುವನೇ ಹೊರತು ತಾನು ಹೊಸದಾಗಿ ಕಲ್ಪಿಸಿರುವುದಿಲ್ಲ. ಜೀವರು ಸಾಧನೆಗಾಗಿ ಜಗತ್ತಿನಲ್ಲಿ ಹುಟ್ಟಿದಾಗ ಸ್ವರೂಪ ಜಾತಿಗಳಿಗನುಗುಣವಾಗಿಯೇ ಹುಟ್ಟುವರೆಂಬ ನಿಯಮವಿಲ್ಲ; ನಾಲ್ಕು ಜಾತಿಗಳಲ್ಲಿ ಅನೇಕಾನೇಕ ಬಾರಿ ಜನ್ಮತಾಳಬಹುದು. ಅದು ಅವರ ವಿವಿಧ ಅಭ್ಯಾಸ ಸಾಧನೆಗಾಗಿ. ಮುಕ್ತಿಯಲ್ಲಿ ನಿಲ್ಲುವುದು ಸ್ವರೂಪಜಾತಿ. ಇದನ್ನರಿಯದೆ ಜಾತಿಗಳ ವಿಷಯದಲ್ಲಿ ಈಗ ತಪ್ಪುಕಲ್ಪನೆಗಳು ಎದ್ದು ಕುಣಿಯುತ್ತಿವೆ. ಇದು ಕಲಿಯುಗವಾದುದರಿಂದ ಹಾಗಾಗಬೇಕೆಂಬುದೇ ದೇವರ ಸಂಕಲ್ಪ. ಅದರಿಂದ ಆಗುತ್ತಿರುವ ವೃತ್ತಿಗಳ ವ್ಯತ್ಯಾಸ, ಗೊಂದಲ ಮುಂತಾದುವು ಹೆಚ್ಚು ಹೆಚ್ಚು ತೊಂದರೆಗಳಿಗೆ ಕಾರಣವಾಗುತ್ತಿವೆಯೇ ಹೊರತು ಒಳ್ಳೆಯ ಪರಿಣಾಮವೇನೂ ಕಂಡುಬರುತ್ತಿಲ್ಲ. "ಕಾಲಾಯ ತಸ್ಮೈ ನಮಃ"

**ಏತೇವರ್ಣಾಃ ಸ್ವಧರ್ಮೇಣಯಜಂತೇ ಸ್ವಗುರುಂ ಹರಿಂ ।**
**ಶ್ರದ್ಧಯಾತ್ಮವಿಶುದ್ಧ್ಯರ್ಥಂ ಯಜ್ಜಾತಾಃ ಸಹವೃತ್ತಿಭಿಃ ॥೩೪॥**

ಏತೇ ವರ್ಣಾಃ = ಈ ನಾಲ್ಕು ವರ್ಣಗಳವರು; ಯತ್ = ಯಾವ

ಪಿತೃಸ್ಥಾನೀಯನಿಂದ; ಸಹ ವೃತ್ತಿಭಿಃ = ನಿಯತವಾದ ತಮ್ಮ ತಮ್ಮ ಕರ್ಮ ಲಕ್ಷಣ ಯುಕ್ತರಾಗಿ; ಜಾತಾಃ = ಉತ್ಪನ್ನರಾದರೋ; ಸ್ವ ಗುರುಂ ಹರಿಂ = ಅಂತಹ ತಮ್ಮ ಉದ್ಧಾರ ಕರ್ತನಾದ ಶ್ರೀಹರಿಯನ್ನು; ಆತ್ಮ ವಿಶುದ್ಧ್ಯರ್ಥಂ = ತಮ್ಮ ಅಂತಃಕರಣ ಶುದ್ಧಿಗಾಗಿ; ಶ್ರದ್ಧಯಾ = ವಿಶ್ವಾಸ ಪೂರ್ವಕವಾಗಿ; ಸ್ವಧರ್ಮೇಣ = ತಮ್ಮ ವರ್ಣಾಶ್ರಮೋಚಿತ ಕರ್ಮಗಳಿಂದ; ಯಜಂತೇ = ಪೂಜಿಸಿ ಧನ್ಯರಾಗುತ್ತಾರೆ.

(ಅನಾದಿಯಿಂದ ಅಜ್ಞಾನಬದ್ಧರಾದ ಜೀವರನ್ನು ಅವರ ಅಜ್ಞಾನಕ್ಕೆ ಕಾರಣವಾದ ಮಾಯಾಬಂಧನದಿಂದ ಬಿಡಿಸಿ, ಜ್ಞಾನಪ್ರಕಾಶಉಂಟುಮಾಡಿ, ಅವರ ಸ್ವರೂಪ ಸ್ವಭಾವಗಳ ಅಭಿವ್ಯಕ್ತಿಯನ್ನುಂಟುಮಾಡಲು ಶ್ರೀಹರಿಯು ಈ ಪ್ರಪಂಚವನ್ನು ಸೃಷ್ಟಿಮಾಡಿ, ಸುಗಮಜೀವನದ ವ್ಯವಸ್ಥೆಯ ಮೂಲಕವೇ ಜೀವರ ಅನಾದಿ ಕರ್ಮಗಳನ್ನು ಕಳೆದು ಅಂತಃಕರಣ ಶುದ್ಧಿಗೆ ಅವಕಾಶ ಉಂಟುಮಾಡಿರುವನು. ಆಯಾ ಜನ್ಮಗಳಲ್ಲಿ ಶ್ರೀಹರಿಯಿಂದ ನಿಯತವಾದ ಕರ್ಮಗಳನ್ನು ಶ್ರದ್ಧೆಯಿಂದ ಆಚರಿಸಿದರೆ ಅದು ಶ್ರೀಹರಿಗೆ ಪ್ರೀತಿಕರವಾಗಿ ಉತ್ತಮ ಫಲಸಿಗುವುದು. ವಿರುದ್ಧವಾದ ಆಚರಣೆಯಿಂದ ದುಷ್ಫಲಗಳ ಬವಣೆಯನ್ನು ಅನುಭವಿಸಲೇ ಬೇಕು.)

**ಏತತ್ ಕ್ಷತ್ತರ್ಭಗವತೋ ದೈವ ಕರ್ಮಾತ್ಮರೂಪಿಣಃ ।**
**ಕಃಶ್ರದ್ಧಧ್ಯಾದುದಾಹರ್ತುಂ ಯೋಗಮಾಯಾ ಬಲೋದಯಂ ॥೩೫॥**

ಕ್ಷತ್ತಃ = ಅಯ್ಯಾ, ವಿದುರಾ; ದೈವಕರ್ಮಾತ್ಮ ರೂಪಿಣಃ = ದೇವೋತ್ತಮನೂ,, ಸರ್ವಕಾರ್ಯಗಳಿಗೂ ಮೂಲಕಾರಣನೂ, ಸರ್ವತ್ರವ್ಯಾಪ್ತನೂ ಆದ; ಭಗವತಃ = ಸರ್ವಸಮರ್ಥನಾದ ಶ್ರೀಹರಿಯ; ಏತತ್ ಯೋಗಮಾಯಾ ಬಲೋದಯಂ = ಹಿಂದಿನ, ಇಂದಿನ ಮತ್ತು ಮುಂದಿನ ಅನಂತಾನಂತ ಬ್ರಹ್ಮಾಂಡಗಳ ಸೃಷ್ಟಿ ಸ್ಥಿತಿ ಲಯ ಕಾರ್ಯಗಳನ್ನು ನಿಗೂಢವಾದ ಸ್ವಶಕ್ತಿಯಿಂದ ನಡೆಸುವ ಅದ್ಭುತವನ್ನು; ಉದಾಹರ್ತುಂ = ಚೆನ್ನಾಗಿ ವಿವರಿಸುವುದಕ್ಕೆ; ಕಃ = ಯಾವನು ತಾನೇ; ಶ್ರದ್ದಧ್ಯಾತ್ = ಧೈರ್ಯದಿಂದ ಪ್ರಯತ್ನಿಸಬಲ್ಲನು!

(ವೇದಾದಿಗಳಲ್ಲಿ ವಿವರಿಸುವಷ್ಟು, ಗುರೂಪದೇಶದಿಂದ ದೊರೆಯುವಷ್ಟು ಮಾತ್ರ ಭಗವಂತನ ಅದ್ಭುತ ಮಹಿಮೆಗಳನ್ನು ತಿಳಿಯಬಹುದೇ ಹೊರತು, ಸಮಗ್ರವಾಗಿ ಯಾರೂ ತಿಳಿಯಲಾರರು. ಆದರೆ, ವೇದಾದಿಗಳಿಂದ, ಗುರುಗಳ ಮುಖಾಂತರ ತಿಳಿದುಬರುವುದು ಸುಳ್ಳಲ್ಲ. ಜೀವರ ಉದ್ಧಾರಕ್ಕೆ ಅಷ್ಟು ಸಾಕು.)

**ಅಥಾಪಿಕೀರ್ತಯಾಮ್ಯಂಗ ಯಥಾಮತಿ ಯಥಾಶ್ರುತಂ ।**
**ಕೀರ್ತಿಂ ಹರೇಃ ಸ್ವಾಂ ಸಂಸ್ಕರ್ತುಂ ಗಿರಮನ್ಯಾಭಿಧಾಂಸತೀಂ ॥೩೬॥**

ಅಂಗ = ವಿದುರಾ; ಅಥ ಅಪಿ = ಶ್ರೀಹರಿಯ ಅನಂತ ಮಾಹಾತ್ಮ್ಯವನ್ನು ವರ್ಣಿಸಲು ಅಸಮರ್ಥನಾದರೂ; ಅನ್ಯಾಭಿಧಾಂ = ಶ್ರೀಹರಿಯನ್ನು ಮರೆಸುವ ಅನ್ಯಪ್ರಸಕ್ತಿಗಳಲ್ಲಿ ಆಸಕ್ತವಾಗಬಹುದಾದ; ಸ್ವಾಂ ಗಿರಂ = ನನ್ನ ವಾಕ್‌ಶಕ್ತಿಯನ್ನು; ಸತೀಂ = ಸದ್ರೀತಿಯಲ್ಲಿ ವರ್ತಿಸುವಂತೆ; ಸಂಸ್ಕರ್ತುಂ = ಶುದ್ಧಿಗೊಳಿಸುವುದಕ್ಕೋಸ್ಕರ; ಹರೇಃ ಕೀರ್ತಿಂ = ಶ್ರೀಹರಿಯ ಮಹಿಮೆಗಳನ್ನು; ಯಥಾಮತಿ = ನನ್ನ ಬುದ್ಧಿಗೆ ನಿಲುಕುವಷ್ಟು; ಯಥಾಶ್ರುತಂ = ಗುರುಸ್ಥಾನೀಯರಿಂದ ಶ್ರವಣ ಮಾಡಿದಷ್ಟು; ಕೀರ್ತಯಾಮಿ = ಹೇಳುತ್ತೇನೆ.

(ಕರ್ಮಗಳ ಕಾಟದಿಂದ ಲೌಕಿಕದಲ್ಲಿ ತೊಳಲುವ ಮನಸ್ಸು ಪರಿಶುದ್ಧವಾಗ ಬೇಕಾದರೆ, ದೇಹಶುದ್ಧಿಯ ಜೊತೆಗೆ ವಾಕ್‌ಶುದ್ಧಿಯೂ ಅಗತ್ಯ. ಅನ್ಯವಾರ್ತೆಗಳಲ್ಲಿ ಮಾತುಗಳನ್ನು ವಿನಿಯೋಗಿಸದೆ, ಶ್ರೀಹರಿಕಥಾ ಕೀರ್ತನೆಯಲ್ಲಿ ತೊಡಗಿಸುವುದರಿಂದ, ವಾಕ್ ಶುದ್ಧಿಯೂ ಆದರಿಂದ ಮನಶ್ಶುದ್ಧಿಯೂ ಸಿದ್ಧಿಸುವುದು.)

**ಏಕಾಂತ ಲಾಭಂ ವಚಸೋನುಪುಂಸಃ ಸುಶ್ಲೋಕಮೌಳೇ**
**ರ್ಗುಣವಾದಮಾಹುಃ ।**
**ಶ್ರುತೇಶ್ಚವಿದ್ವದ್ಭಿರುಪಾಕೃತಾಯಾಃ ಕಥಾಸುಧಾಯಾ ಉತಸಂಪ್ರಯೋಗಃ**
**॥೩೭॥**

ಸುಶ್ಲೋಕಮೌಳೇಃ = ಕೀರ್ತಿವಂತರಲ್ಲಿ ಶ್ರೇಷ್ಠತಮನಾದ; ಪುಂಸಃ = ಪುರುಷೋತ್ತಮನಾದ ಶ್ರೀಹರಿಯ; ಗುಣ ವಾದಂ = ಗುಣಗಳ ಕೀರ್ತನೆಯು; ವಚಸಃ = ವಾಗಿಂದ್ರಿಯದ; ಏಕಾಂತ ಲಾಭಂ = ಭಗವಂತನಲ್ಲಿಯೇ ಮನಸ್ಸು ಲೀನವಾಗಿರುವಂತೆ ಮಾಡುವ ಸಾರ್ಥಕ್ಯವೆಂದು; ಆಹುಃ = ಜ್ಞಾನಿಗಳು ಹೇಳುವರು; ವಿದ್ವದ್ಭಿಃ = ಜ್ಞಾನಿ ವರೇಣ್ಯರಿಂದ; ಕಥಾಸುಧಾಯಾಃ = ಶ್ರೀಹರಿಯ ಮಹಿಮಾ ವರ್ಣನೆಯೆಂಬ ಅಮೃತದ ಮೂಲಕ; ಉಪಾಕೃತಾಯಾಃ = ಸಂಶೋಧಿತವಾದ; ಶ್ರುತೇಃ = ಕರ್ಣೇಂದ್ರಿಯದ; ಸಂಪ್ರಯೋಗಃ ಚ = ಸಾರ್ಥಕ್ಯವೂ ಕೂಡ ಆಗುವುದೆಂದು ಹೇಳಲಾಗಿದೆ; ಉತ = ಇದರಂತೆ ಕಣ್ಣು ಮೊದಲಾದ ಇತರ ಇಂದ್ರಿಯಗಳ ಸಾರ್ಥಕ್ಯವೂ ಕೂಡ ಶ್ರೀಹರಿಯ ವಿಷಯದಲ್ಲಿ ನಿಯೋಗಿಸುವುದರಿಂದ ಉಂಟಾಗುವುದು.

(ಜೀವನದ ಆವಶ್ಯಕತೆಗಳೂ, ಆಕರ್ಷಣೆಗಳೂ ನಮ್ಮನ್ನು ಯಾವಾಗಲೂ ಲೌಕಿಕದಲ್ಲಿಯೇ ಮುಳುಗಿಸಿರುತ್ತವೆ. ಜೀವನದ ನಿಜವಾದ ಗುರಿಯೇನೆಂಬುದರ ಕಡೆಗೆ ನಮ್ಮ ಲಕ್ಷ್ಯವಿರುವುದೇ ಇಲ್ಲ. ಆದುದರಿಂದ ಸಮಯಸಾಧಿಸಿ, ಶ್ರೀಹರಿಯ ಮಹಿಮೆಗಳು ಮನಸ್ಸಿಗೆ ಮುಟ್ಟಿ ಅದು ಪರಿಶುದ್ಧವಾಗುವಂತೆ ಮಾಡುವ ವಿಷಯದಲ್ಲಿ ನಮಗೆ ದೇವರು ಕರುಣಿಸಿರುವ ಇಂದ್ರಿಯಗಳನ್ನು ಬಳಸಬೇಕು.)

**ಆತ್ಮನೋಽವಸಿತೋವತ್ಸ ಮಹಿಮಾಕವಿನಾದಿನಾ ।**
**ಸಂವತ್ಸರ ಸಹಸ್ರಾಂತೇಧಿಯಾ ಯೋಗ ವಿಪಕ್ವಯಾ ॥೩೮॥**

ವತ್ಸ = ಪ್ರಿಯ ವಿದುರಾ; ಆದಿನಾ ಕವಿನಾ = ಪ್ರಪ್ರಥಮ ಜ್ಞಾನ ಸಂಪನ್ನನಾದ ಬ್ರಹ್ಮನಿಂದ; ಯೋಗ ವಿಪಕ್ವಯಾಧಿಯಾ = ಯೋಗಮಾರ್ಗದಿಂದ ಪರಿಪಕ್ವವಾದ ಬುದ್ಧಿಯ ಬಲದಿಂದ; ಸಂವತ್ಸರ ಸಹಸ್ರಾಂತೇ = ದೇವಮಾನದ ಸಹಸ್ರ ವರ್ಷಗಳ ನಂತರ; ಆತ್ಮನಃ = ಪರಮಾತ್ಮನ; ಮಹಿಮಾ = ಮಾಹಾತ್ಮ್ಯವು; ಅವಸಿತಃ = ಆತನ ಹಿರಿಮೆಗೆ ಅಳವಡುವಷ್ಟು ಪ್ರತ್ಯಕ್ಷಗೋಚರವಾಯಿತು.

(ಭಗವಂತನ ಮಹಿಮೆಯನ್ನು ಬ್ರಹ್ಮನಿಗಿಂತ ಕಿರಿಯರಾದ ಇತರರು ಹೇಗೆತಾನೇ ಪೂರ್ಣವಾಗಿ ತಿಳಿಯಬಲ್ಲರು ಎಂದು ಸೂಚಿಸುವುದು ಇದರ ತಾತ್ಪರ್ಯ).

**ಅತೋಭಗವತೋ ಮಾಯಾಮಾಯಿನಾಮಪಿ ಮೋಹಿನೀ ।**
**ಯತ್ಸ್ವಯಂಚಾತ್ಮವರ್ತ್ಮಾತ್ಮಾನವೇದ ಕಿಮುತಾಪರೇ ॥೩೯॥**

ಅತಃ = ಆದುದರಿಂದ; ಭಗವತಃ ಮಾಯಾ = ಭಗವಂತನ ಮಹಿಮಾದ್ಯೋತಕವಾದ ಅದ್ಭುತ ಶಕ್ತಿಯು; ಮಾಯಿನಾಂ ಅಪಿ = ನಮಗೆ ತಿಳಿದುಬರುವ ಮಹಾಮಹಿಮರಿಗೂ ಕೂಡ; ಮೋಹಿನೀ = ಮಂಕುಕವಿಸುವಂತಹುದು; ಯತ್ = ಯಾವ ಆ ಭಗವಂತನ ವಿಶೇಷ ಶಕ್ತಿಯ ಪಾರವನ್ನು; ಆತ್ಮವರ್ತ್ಮಾ = ಭಗವಂತನಿಂದಲೇ ನೇರವಾಗಿ ಉಪದೇಶಹೊಂದಿ ಜಗದ್ಗುರುವೆನಿಸಿದ; ಆತ್ಮಾ ಚ = ಬ್ರಹ್ಮನೂ; ಸ್ವಯಂ = ತಾನು; ನ ವೇದ = ಪೂರ್ಣವಾಗಿ ತಿಳಿದಿಲ್ಲ; ಅಪರೇ = ಇನ್ನಿತರರು; ಕಿಮುತ = ತಿಳಿಯಲಾರರೆಂದು ಹೇಳಬೇಕಾಗಿಲ್ಲವಷ್ಟೇ!

(ಜೀವರ ತಾರತಮ್ಯವೂ, ಬ್ರಹ್ಮ ವಾಯುಗಳ ಜೀವೋತ್ತಮತ್ವವೂ ಇಲ್ಲಿ ಸ್ಪಷ್ಟವಾಗಿ ತಿಳಿದು ಬರುತ್ತದೆ.)

**ಯತೋಽಪ್ರಾಪ್ಯ ನಿವರ್ತಂತೇ ವಾಚಶ್ಚ ಮನಸಾಸಹ ।**
**ಅಹಂಚಾನ್ಯ ಇಮೇ ದೇವಾಃ ತಸ್ಮೈಭಗವತೇ ನಮಃ ॥೪೦॥**

ವಾಚಃ ಚ = ವಾಗ್ರೂಪವಾದ ವೇದಗಳಿಗೆ ಮುಖ್ಯಾಭಿಮಾನಿನಿಯೂ ಬಹು ರೂಪಧಾರಿಯೂ ಆದ ಲಕ್ಷ್ಮೀದೇವಿಯೂ; ಮನಸಾ ಸಹ = ತನ್ನ ಸ್ತೋತ್ರದ ಮಾತುಗಳನ್ನನುಸರಿಸಿ ಆಲೋಚಿಸಿಯೂ ಕೂಡ; ಅಪ್ರಾಪ್ಯ = ಪೂರ್ಣ ತಿಳಿವಳಿಕೆಯನ್ನು ಹೊಂದಲಾರದೆ; ಯತಃ = ಯಾವ ಅಗಮ್ಯ ಮಹಿಮನ

ಅಗಾಧತೆಯ ಕಡೆಯಿಂದ; ನಿವರ್ತಂತೇ = ತನ್ನ ಬಹುರೂಪಗಳ ಯತ್ನವನ್ನು ಹಿಂದೆಗೆದುಕೊಂಡು ಪರಿಚಿತ ಗುಣಗಾನದಿಂದ ತೃಪ್ತಳಾಗುವಳೋ; ಅಹಂಚ = ಬ್ರಹ್ಮನಾದ ನಾನು; ಅಹಂ ಮಾನಿಗಳಾದ ಗರುಡ ಶೇಷ ರುದ್ರರೂ; ಇಮೇ ಅನ್ಯೇದೇವಾಃ = ಇಂದ್ರಾದಿ ಈ ದೇವತೆಗಳೂ; ಅಪ್ರಾಪ್ಯ = ಸ್ತೋತ್ರಗಳಿಂದಲೂ ಆಲೋಚನೆಯಿಂದಲೂ ಯೋಗ್ಯತೆಗಳಿಗಿಂತ ಹೆಚ್ಚಾಗಿ ತಿಳಿಯಲಾರದೆ ಸುಮ್ಮನಾಗುವೆವೋ; ತಸ್ಮೈಭಗವತೇ = ಅಂತಹ ಅಗಾಧ ಮಹಿಮನಾದ ಗುಣಪೂರ್ಣನಿಗೆ; ನಮಃ = ನಮಸ್ಕಾರವಿರಲಿ.

(ಭಗವಂತನ ಮಹಿಮೆಯನ್ನು ಲಕ್ಷ್ಮೀದೇವಿಯಾದಿಯಾಗಿ ಯಾರೂ ಪೂರ್ಣವಾಗಿ ತಿಳಿಯಲಾರರೆನ್ನುವುದು ದೋಷರೂಪ ಕೊರತೆಯಲ್ಲ. ಯೋಗ್ಯತಾನುಸಾರ ತಿಳಿಯಲು ಪ್ರಯತ್ನಿಸದಿರುವುದು ದೋಷ. ಮೈತ್ರೇಯರು ಶ್ರುತಿವಚನಾನುಸಾರಿಯಾದ ಬ್ರಹ್ಮದೇವರ ಮಾತನ್ನೇ ಇಲ್ಲಿ ಉದಾಹರಿಸಿ ತಮ್ಮ ಕರ್ತವ್ಯವನ್ನು ನೆರವೇರಿಸಿರುವರು.)

## ಏಳನೆಯ ಅಧ್ಯಾಯ ಮುಗಿಯಿತು.

## ॥ ಶ್ರೀ ಕೃಷ್ಣಾರ್ಪಣಮಸ್ತು ॥

---

# ಶ್ರೀಮದ್ಭಾಗವತ – ತೃತೀಯಸ್ಕಂಧ
# ಎಂಟನೆಯ ಅಧ್ಯಾಯ

**ಶ್ರೀಶುಕ ಉವಾಚ:–** ಶ್ರೀಶುಕಾಚಾರ್ಯರು ಹೇಳಿದರು.

**ಏವಂ ಬ್ರುವಾಣಂ ಮೈತ್ರೇಯಂ ದ್ವೈಪಾಯನ ಸುತೋ ಬುಧಃ ।**
**ಪ್ರೀಣಯನ್ನಿವ ಭಾರತ್ಯಾ ವಿದುರಃ ಪ್ರತ್ಯಭಾಷತ ॥೧॥**

ಏವಂ ಬ್ರುವಾಣಂ = ಶ್ರೀಹರಿಯು ಸೃಷ್ಟಿಯನ್ನು ಮಾಡಿದ ಕ್ರಮವನ್ನು ವರ್ಣಿಸುತ್ತಿರುವ; ಮೈತ್ರೇಯಂಪ್ರತಿ = ಮೈತ್ರೇಯರನ್ನು ಕುರಿತು; ಪ್ರೀಣಯನ್ ಇವ = ಅನುಮೋದನೆಯಿಂದ ಸಂತೋಷಗೊಳಿಸುವ ರೀತಿಯಲ್ಲಿ; ಬುಧಃ = ಜ್ಞಾನಿಗಳಾದ; ದ್ವೈಪಾಯನ ಸುತಃ ವಿದುರಃ = ವ್ಯಾಸಪುತ್ರರಾದ ವಿದುರರು; ಭಾರತ್ಯಾ = ಮಧುರ ವಚನದಿಂದ; ಅಭಾಷತ = ಮಾತನಾಡಿದರು.

(ಸರಸ್ವತೀ ದೇವಿಯಂತೆ ಮುಖ್ಯಪ್ರಾಣಪತ್ನಿಯಾದ ಭಾರತೀ ದೇವಿಯೂ ವಾಗಭಿಮಾನಿಗಳಾಗಿದ್ದಾರೆ. ಬ್ರಹ್ಮವಾಯುಗಳು ದೇಹ–ಜೀವಗಳಂತೆ ಇರುವ ಹಾಗೆ ವಾಙ್ಮಯದಲ್ಲಿ ಸರಸ್ವತೀ ಭಾರತಿಯರು ಆಕಾರ ಅರ್ಥಗಳಲ್ಲಿದ್ದಾರೆ.)

**ವಿದುರ ಉವಾಚ:–** ವಿದುರರು ಮಾತಾಡಿದರು.

**ಬ್ರಹ್ಮನ್ಕಥಂ ಭಗವತಶ್ಚಿನ್ಮಾತ್ರಸ್ಯಾವಿಕಾರಿಣಃ ।**
**ಲೀಲಯಾಚಾಪಿಯುಜ್ಯೇರನ್ನಿರ್ಗುಣಸ್ಯ ಗುಣಾಃ ಕ್ರಿಯಾಃ ॥೨॥**

ಬ್ರಹ್ಮನ್ = ಬ್ರಹ್ಮ ನಿಷ್ಟವಾದ ಮನಸ್ಸುಳ್ಳ ಮೈತ್ರೇಯರೇ; ಚಿನ್ಮಾತ್ರಸ್ಯ = ಕೇವಲ ಜ್ಞಾನಾನಂದ ಶರೀರಿಯಾದ; ಅವಿಕಾರಿಣಃ = ವಿಕಾರಗಳಿಗೆ ಒಳಗಾಗದಿರುವ; ನಿರ್ಗುಣಸ್ಯ = ಜಡಗುಣ ಸಂಭಂಧರಹಿತನಾದ; ಭಗವತಃ ಸಕಲೈಶ್ವರ್ಯ ಪರಿಪೂರ್ಣನಾದವನಿಗೆ, ಲೀಲಯಾಚ ಅಪಿ = ಕೇವಲ ಕ್ರೀಡೆಗೋಸ್ಕರವಾಗಿಯಾದರೂ; ಗುಣಾಃ = ಗುಣಗಳ ಸಂಬಂಧವು; ಕ್ರಿಯಾಃ = ತತ್ಸಂಬಂಧ ಕ್ರಿಯೆಗಳು; ಕಥಂ = ಹೇಗೆ ತಾನೇ; ಯುಜ್ಯೇರನ್ = ಸಂಬಂಧಿಸುವುವು?

(ಜೀವನೇ ಬ್ರಹ್ಮ, ಬ್ರಹ್ಮನೇ ಜೀವರು ಎಂದು ವಾದಿಸುವ ಅದ್ವೈತ ಪಕ್ಷವು ಸರಿಯಲ್ಲವೆಂದು ಹೇಳಲು ಶಾಸ್ತ್ರವಚನಗಳನ್ನು ಹಿಡಿದು ವಾದಿಸುವುದಕ್ಕೆ

ಕೊನೆಮೊದಲಿಲ್ಲ. ಆ ಎಲ್ಲದರ ಸಾರಭೂತವಾಗಿ ವಿದುರರು ಒಂದೇ ಪ್ರಶ್ನೆಯಿಂದ ಅವೈದಿಕವಾದ ಆ ವಾದವನ್ನು ತೊಡೆದು ಹಾಕಲು ಹವಣಿಸಿದ್ದಾರೆ. ಭಗವಂತ ಜ್ಞಾನಮಯ, ನಿರ್ಗುಣ, ನಿರಪೇಕ್ಷ. ಇಂಥವನು ಕ್ರೀಡೆಯಲ್ಲಿ ತೊಡಗುತ್ತಾನೆ ಎನ್ನುವುದು ಅಸಂಗತ. ವಿನೋದಕ್ಕಾಗಿಯಾದರೂ ಯಾವನೊಬ್ಬನೂ ಬೆಂಕಿಯನ್ನು ಅಥವ ಮುಳ್ಳನ್ನು ತುಳಿದು ವ್ಯಥೆಪಟ್ಟು ಅದನ್ನೇ ಸುಖವೆಂದು ಭಾವಿಸುವುದಿಲ್ಲ. ಆದರೆ, ಭಗವಂತನು ಜಗನ್ನಾಟಕ ಸೂತ್ರಧಾರಿಯೆಂಬುದು ನಿಜ. ಇದರ ಮರ್ಮವೇನು ಎಂದು ವಿದುರರು ಪ್ರಶ್ನೆ ಮಾಡಿದ್ದಾರೆ.)

> ಕ್ರೀಡಾಽಯಾಮುದ್ಯತೋಽರ್ಹಸ್ಯ ಕಾಮಂ ಚಿಕ್ರೀಡಿಷನ್ಯತಃ ।
> ಸ್ವತಸ್ತೃಪ್ತಸ್ಯತು ಕಥಂ ನಿರ್ವೃತಸ್ಯ ಸದಾತ್ಮನಃ ॥೩॥

ಕ್ರೀಡಾಯಾಂ ಉದರ್ಹಸ್ಯ ಉದ್ಯತಃ = ಆಟದಿಂದ ಉಂಟಾಗುವ ಸುಖದಲ್ಲಿ ಅಪೇಕ್ಷೆ ಇಲ್ಲದೆ ಪ್ರವರ್ತಿಸುವ; ಅನ್ಯತಃ = ಇನ್ನೊಬ್ಬರೊಂದಿಗೆ; ಕಾಮಂ ಚಿಕ್ರೀಡಿಷಾ = ಆಟವಾಡಬೇಕೆಂಬ ಅಪೇಕ್ಷೆಯು; ಯತಃ = ಎಲ್ಲಿಂದ ಬಂದೀತು; ಸದಾ = ಯಾವಾಗಲೂ; ನಿರ್ವೃತಸ್ಯ ಆತ್ಮನಃ = ಆನಂದೋದ್ರೇಕದಿಂದ ಕೂಡಿರುವವನಿಗೆ; ಸ್ವತಃ ತೃಪ್ತಸ್ಯತು = ಅನ್ಯರ ಅಪೇಕ್ಷೆಇಲ್ಲದೆ ತನ್ನಲ್ಲಿಯೇ ಸುಖವುಳ್ಳವನಿಗೆ; ಕಥಂ = ಆಟವಾಡುವನೆಂಬ ಮಾತು ಹೇಗೆ ಹೊಂದಿಕೊಳ್ಳುವುದು?

(ಭಗವಂತನು ಆಟದ ಕಲ್ಪನೆಯನ್ನು ತನ್ನಲ್ಲಿಯೇ ಮಾಡಿಕೊಂಡು ಸುಖಿಸುವನೆಂದಾಗ, ದುಃಖೈಕರೂಪ ಸಂಸಾರವು ಆಟವಾಗುವುದಿಲ್ಲ; ಸ್ವತಃ ಸಂತುಷ್ಟನಾದವನಿಗೆ ಜೀವರೊಂದಿಗೆ ಆಟವಾಡಿ ಸುಖಪಡುವ ಅವಶ್ಯಕತೆ ಇಲ್ಲ).

> ಅಸ್ರಾಕ್ಷೀದ್ಭಗವಾನ್ವಿಶ್ವಂ ಗುಣಮಯ್ಯಾತ್ಮಮಾಯಯಾ ।
> ತಯಾಸಂಸ್ಥಾಪಯತ್ಯೇತದ್ಭೂಯಃ ಪ್ರತ್ಯಭಿಧಾಸ್ಯತಿ ॥೪॥

ಭಗವಾನ್ = ಭಗವಂತನು; ಗುಣಮಯ್ಯಾ = ಜಡಗುಣ ರೂಪವಾದ; ಆತ್ಮಮಾಯಯಾ = ತನ್ನ ಅಧೀನವಾದ ಪ್ರಕೃತಿನಾಮಕ ಮಾಯೆಯಿಂದ; ವಿಶ್ವಂ ಅಸ್ರಾಕ್ಷೀತ್ = ಜಗತ್ತನ್ನು ರಜೋಗುಣದ ಮೂಲಕ ಸೃಷ್ಟಿಮಾಡಿದನು; ಕಯಾ = ಆ ಪ್ರಕೃತಿಯ; ಸತ್ವಗುಣದಿಂದ; ಏತತ್ = ಈ ವಿಶ್ವವನ್ನು; ಸಂಸ್ಥಾಪಯತಿ = ರಕ್ಷಿಸುತ್ತಾನೆ; ಭೂಯಃ = ಪುನಃ; ಪ್ರತ್ಯಭಿಧಾಸ್ಯತಿ = ತಮೋಗುಣಕ್ಕೆ ವಶಮಾಡಿ ಸಂಹರಿಸುತ್ತಾನೆ. (ಮೂಲದಲ್ಲಿ ಕೂಡಿಸುತ್ತಾನೆ.);

(ಹಿಂದಿನ ಶ್ಲೋಕದಲ್ಲಿ ಹೇಳಿದಂತೆ) ಭಗವಂತನನ್ನು ನಿರ್ಗುಣನೆಂದೂ,

ನಿರ್ವಿಕಾರನೆಂದೂ ಹೇಳಿ, ತನ್ನ ಗುಣಗಳಿಂದ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂಬ ಮಾತು ಸ್ವವಿರೋಧಿಯಾಗಿ ಕಾಣುವುದಲ್ಲವೆ ಎಂಬುದು ವಿದುರರ ಮಾತಿನ ಅಭಿಪ್ರಾಯ).

**ದೇಶತಃ ಕಾಲತೋ ಯೋಸಾವವಸ್ಥಾತಃ ಸ್ವತೋನ್ಯತಃ ।**
**ಅವಿಲುಪ್ತಾವಬೋಧಾತ್ಮಾ ಸಂಯುಜ್ಯೇತಾಜಯಾಕಥಂ ॥೫॥**

ಅನ್ಯತಃ = ಬೇರೆಯಾದ; ದೇಶತಃ ಕಾಲತಃ = ದೇಶ ಕಾಲಗಳ ಕಾರಣದಿಂದ; ಅವಿಲುಪ್ತ ಅವಬೋಧಾತ್ಮಾ = ನಷ್ಟವಾಗದಂತಹ ಜ್ಞಾನಸ್ವರೂಪನಾಗಿ; ಸ್ವತಃ ಅವಸ್ಥಾತಃ = ತಾನೇ ತಾನಾಗಿರುವ; ಯಃ ಅಸೌ = ಯಾವ ಭಗವಂತನು; ಕಥಂ = ಹೇಗೆತಾನೇ; ಅಜಯಾ =ಪ್ರಕೃತಿಯೊಡನೆ; ಸಂಯುಜ್ಯೇತ = ಸಂಬಂಧ ಹೊಂದುವನು?

(ನಿರ್ಗುಣನೂ, ಕೇವಲ ಜ್ಞಾನಾನಂದ ಸ್ವರೂಪನೂ ಆದವನಿಗೆ ಪ್ರಕೃತಿಯೊಡನೆ ಸಂಬಂಧವು ಹೇಗೆ ಯುಕ್ತವಾದೀತು ಎಂಬುದು ಅಕ್ಷೇಪ.)

**ಭಗವಾನೇಷ ಏವೈಕಃ ಸರ್ವಕ್ಷೇತ್ರೇಷ್ವವಸ್ಥಿತಃ ।**
**ಅಮುಷ್ಯ ದುರ್ಭಗತ್ವಂ ವಾ ಕ್ಲೇಶೋವಾ ಕರ್ಮಭಿಃ ಕುತಃ ॥೬॥**

ಭಗವಾನ್ = ಸಕಲೈಶ್ವರ್ಯಸಂಪನ್ನನಾದ; ಏಷಃ ಏಕಏವ = ಈ ಒಬ್ಬನೇ; ಸರ್ವಕ್ಷೇತ್ರೇಷು = ಅದೃಷ್ಟಹೀನರೂ ದುಃಖಿಗಳೂ ಆದ ಸರ್ವರ ದೇಹಗಳಲ್ಲಿಯೂ; ಅವಸ್ಥಿತಃ = ನೆಲೆಸಿದ್ದಾನೆ; ಅಮುಷ್ಯ = ಇಂತಹ ಭಗವಂತನಿಗೆ; ಕರ್ಮಭಿಃ = ಆಚರಿಸುವ ಕರ್ಮಗಳಿಂದ; ದುರ್ಭಗತ್ವಂ = ಐಶ್ವೈರ್ಯಾದಿಗಳ ಕೊರತೆಯಾಗಲೀ; ಕ್ಲೇಶಃವಾ = ದುಃಖವಾಗಲೀ; ಕಥಂ = ಹೇಗೆ ಸಂಭವಿಸುವುದು ಅಥವಾ ಸಂಭವಿಸುವುದಿಲ್ಲ.

(ದೇಹಿ ಎನಿಸಿಕೊಳ್ಳುವ ಭಗವಂತನಿಗೆ ದುಃಖಾದಿಗಳ ಸಂಭವ ಅಥವ ಅದು ಇಲ್ಲದಿರುವುದು, ವಿವರಣೆಗೆ ಮೀರಿದ ವಿಷಯವಾಗಿದೆ ಎಂಬುದು ಪ್ರಶ್ನೆಯ ಆಶಯ.)

**ಏತಸ್ಮಿನ್ಮೇಮನೋವಿದ್ವನ್ ಖಿದ್ಯತೇ ಜ್ಞಾನಸಂಕಟೇ ।**
**ತನ್ನಃ ಪರಾಣುದ ವಿಭೋಕಶ್ಮಲಂ ಮಾನಸಂ ಮಹತ್ ॥೭॥**

ವಿದ್ವನ್ = ಜ್ಞಾನಿವರೇಣ್ಯರಾದ ಮೈತ್ರೇಯರೇ; ಮೇಮನಃ = ನನ್ನ ಮನಸ್ಸು; ಏತಸ್ಮಿನ್ ಜ್ಞಾನಸಂಕಟೇ = ಸದ್‌ಜ್ಞಾನಕ್ಕೆ ಬಾಧಕವಾದ ಈ ರೀತಿಯಲ್ಲಿ; ಖಿದ್ಯತೇ

= ಖೇದಕ್ಕೆ ಒಳಗಾಗಿದೆ; ವಿಭೋ = ಗುರುಸ್ಥಾನೀಯರಾದವರೇ; ತತ್‌ನಃ = ಆ ನಮ್ಮ; ಮಹತ್ ಮಾನಸಂ ಕಶ್ಮಲಂ = ಅತಿಯಾದ ಮಾನಸಿಕ ದುಃಖಕಾರಣವನ್ನು; ಪರಾಣುದ = ಹೋಗಲಾಡಿಸಿರಿ.

(ಭಗವತ್ತತ್ವವನ್ನು ಬುದ್ಧಿಯಿಂದ ಶೋಧಿಸಿ ಎಷ್ಟೇ ಚೆನ್ನಾಗಿ ಭದ್ರಪಡಿಸಿ ಕೊಂಡಿದ್ದರೂ ಮನಸ್ಸು ಆಗಾಗ ವಿಕಲ್ಪಗಳಿಗೆ ಒಳಗಾಗಿ ಸಂಶಯಗಳನ್ನೊಡ್ಡಿ ಖೇದಗೊಳಿಸುವುದು ಸಹಜ. ಆದುದರಿಂದ, ಹಿರಿಯ ಜ್ಞಾನಿಗಳಿಂದ ಉಪದೇಶ ಹೊಂದಿ ಆ ಮನಸ್ಸನ್ನು ನಿರ್ಮಲವಾಗಿಟ್ಟುಕೊಳ್ಳಬೇಕೆಂಬ ತತ್ವವು ವಿದುರರ ಮಾತುಗಳಲ್ಲಿ ಕಂಡುಬರುತ್ತದೆ. ಅದು ಸರ್ವರಿಗೂ ಅನ್ವಯಿಸತಕ್ಕ ವಿಷಯ ವಾದುದರಿಂದ "ನಃ ಮಾನಸಂ ಕಶ್ಮಲಂ" ಎಂದಿದ್ದಾರೆ.)

ಶ್ರೀಶುಕಉವಾಚ :–ಶ್ರೀಶುಕಾಚಾರ್ಯರು ಹೇಳಿದರು.

**ಸಇತ್ಥಂಚೋದಿತಃಕ್ಷತ್ರಾತತ್ವಜಿಜ್ಞಾಸುನಾಮುನಿಃ ।**
**ಪ್ರತ್ಯಾಹಭಗವಚ್ಚಿತ್ತಃ ಸ್ಮಯನ್ನಿವಗತಸ್ಮಯಃ ॥೮॥**

ಇತ್ಥಂ = ಈ ಪ್ರಕಾರವಾಗಿ; ತತ್ವಜಿಜ್ಞಾಸುನಾ = ತತ್ವಗ್ರಹಣದ ಆಪೇಕ್ಷೆಯುಳ್ಳ; ಕ್ಷತ್ರಾ = ವಿದುರರಿಂದ; ಚೋದಿತಃ = ಪ್ರಾರ್ಥಿತರಾದ; ಮುನಿಃ = ಮೈತ್ರೇಯರು; ಗತಸ್ಮಯಃ = ನಿರಹಂಕಾರಿಗಳಾಗಿ; ಭಗವಚ್ಚಿತ್ತಃ = ಭಗವಂತನ ಪ್ರೇರಕತ್ವವನ್ನು ಸ್ಮರಿಸಿಕೊಂಡು; ಸ್ಮಯನ್ನಿವ = ಸಂತೋಷಸೂಚಕವಾದ ಮುಗುಳ್ನಗೆಯಿಂದ; ಪ್ರತ್ಯಾಹ = ಉತ್ತರ ನೀಡಿದರು.

(ಸದ್ಗುರುಗಳ ಲಕ್ಷಣವನ್ನಿಲ್ಲಿ ಸ್ಪಷ್ಟಪಡಿಸಿದ್ದಾರೆ. ಅವರು ನಿರಹಂಕಾರಿಗಳು, ಭಗವಚ್ಚಿತ್ತರು; ಕೇಳಿದವರಿಗೆ ಉಪದೇಶ ನೀಡಬೇಕೆಂಬ ಲವಲವಿಕೆಯುಳ್ಳವರು.)

ಮೈತ್ರೇಯ ಉವಾಚ:–ಮೈತ್ರೇಯರು ಹೇಳಲಾರಂಭಿಸಿದರು.

**ಸೇಯಂ ಭಗವತೋಮಾಯಾನ್ಯಾಯ್ಯಂಯೇನ ನಿರುಧ್ಯತೇ ।**
**ಈಶ್ವರಸ್ಯ ವಿಮುಕ್ತಸ್ಯ ಕಾರ್ಪಣ್ಯಮುತ ಬಂಧನಂ ॥೯॥**

ಸಃ ಇಯಂ = ದೇಹಾದಿಗಳಲ್ಲಿದ್ದರೂ ದೈನ್ಯದುಃಖಗಳಿಲ್ಲವೆಂಬುದು; ನ್ಯಾಯ್ಯಂ = ಪ್ರಮಾಣಗಳಿಂದ ಸಿದ್ಧವಾದ; ಭಗವತಃ ಮಾಯಾ = ಪೂರ್ಣೈಶ್ವರ್ಯಸಂಪನ್ನನಾದವನ ಅದ್ಭುತಶಕ್ತಿಯು; ಯೇನ = ಯಾವ ಅಂತಹ ಮಾಯೆ (ಅನಿರ್ವಚನೀಯವಾದುದು) ಎಂಬ ಶಕ್ತಿಯ ಕಾರಣದಿಂದ; ಈಶ್ವರಸ್ಯ = ಸರ್ವೇಶ್ವರನಾದ; ವಿಮುಕ್ತಸ್ಯ = ನಿತ್ಯಮುಕ್ತನಾದವನಿಗೆ; ಕಾರ್ಪಣ್ಯಂ = ದೈನ್ಯವೂ;

ಬಂಧನಂ = ದುಃಖಕ್ಕೆ ಕಾರಣವಾದ ಬಂಧಕದ ಬಾಧೆಯೂ; ಉತ = ನಿಜವಾಗಿ; ನಿರುಧ್ಯತೇ = ಹೊಂದಿಕೊಳ್ಳದೆ ದೂರವಾಗುತ್ತದೆ.

(ಜ್ಞಾನಿಗಳಾದ ಮಹಾತ್ಮರು ದೇಹನಿಮಿತ್ತಗಳಾದ ದುಃಖಾದಿಗಳು ಅಂಟದಂತೆ ಇರಬಲ್ಲರೆಂದಮೇಲೆ, ನಿತ್ಯಮುಕ್ತನೂ ಸರ್ವೇಶ್ವರನೂ ಆದವನು ಎಲ್ಲಿದ್ದರೂ, ಏನು ಮಾಡುತ್ತಿದ್ದರೂ ಪೂರ್ಣ ನಿರ್ಲಿಪ್ತನೆಂಬುದು ನಿರ್ವಿವಾದವಾದ ವಿಷಯವೇ ಸರಿ.)

**ಯಥಾರ್ಥೇನವಿನಾಮುಷ್ಯಪುಂಸ ಆತ್ಮವಿಪರ್ಯಯಃ ।**
**ಪ್ರತೀಯತ ಉಪದ್ರಷ್ಟುಃಸ್ವಶಿರಚ್ಛೇದನಾದಿಕಃ ॥೧೦॥**

ಉಪದ್ರಷ್ಟುಃ = ಅಸ್ವತಂತ್ರನಾಗಿ ಕಾಣುವ; ಅಮುಷ್ಯ ಪುಂಸಃ = ಶರೀರಧಾರಣ ಮಾಡಿದವನಿಗೆ; ಸ್ವಶಿರಚ್ಛೇದನಾದಿಕಃ = ತನ್ನ ತಲೆಕತ್ತರಿಸಿ ಹೋದುದು ಮುಂತಾದ; ಆತ್ಮವಿಪರ್ಯಯಃ = ದೇಹ ಸಂಬಂಧವಾದ ವ್ಯತ್ಯಾಸಗಳು; ಯಥಾರ್ಥೇನ ವಿನಾ = ನಿಜವಾಗಿಯೂ ಹಾಗಾಗದೆ; ಪ್ರತೀಯತೇ = ಕಂಡುಬರುತ್ತದೆ.

(ಸ್ವಪ್ನಾದಿಗಳಲ್ಲಿ ಇಂತಹ ಅನುಭವಗಳು ಜೀವರಿಗೆ ಆದಾಗ, ಅಜ್ಞಾನಿಗಳೂ ಅಸ್ವತಂತ್ರರೂ ಆದ ಅವರಿಗೆ ತಾತ್ಕಾಲಿಕವಾಗಿಯಾದರೂ ಸುಖದುಃಖಾದಿಗಳ ಸ್ಪರ್ಶಸಂಭವಿಸುವುದು. ಭಗವಂತನು ಸರ್ವಜ್ಞನೂ ಸರ್ವನಿಯಮಕನೂ ಆದುದರಿಂದ ಅವನಿಗೆ ದುಃಖಾದಿಗಳ ಸಂಬಂಧ ಉಂಟಾಗುವುದಿಲ್ಲ. ಅವನು ಹೆದರಿಸುವವನೇ ಹೊರತು ಹೆದರಿಕೆಗೆ ಒಳಗಾಗುವವನಲ್ಲ. ಮಾಟಗಾರನು ಜನರನ್ನು ಮುಗ್ಧರನ್ನಾಗಿಸುವನೇ ಹೊರತು ತಾನೇ ಆ ಮೋಹಕ್ಕೆ ಒಳಗಾಗುವುದಿಲ್ಲ.)

**ಯಥಾಜಲೇ ಚಂದ್ರಮಸಃ ಕಂಪಾದಿಸ್ತತ್ಕೃತೋಗುಣಃ ।**
**ದೃಶ್ಯತೇಸನ್ನಪಿ ದ್ರಷ್ಟುರಾತ್ಮನೋಽನಾತ್ಮನೋ·ಗುಣಃ ॥೧೧॥**

ಯಥಾ = ಹೇಗೆ; ಜಲೇ = ನೀರಿನಲ್ಲಿ ಕಂಡುಬರುವ; ಚಂದ್ರಮಸಃ = ಚಂದ್ರ ಬಿಂಬದ; ಕಂಪಾದಿಃ = ಅಲುಗಾಡುವಿಕೆ ಮುಂತಾದವು; ತತ್ಕೃತಃ ಗುಣಃ ನೀರಿನ ಚಲನೆಯಿಂದ ಉಂಟಾದ ಪರಿಣಾಮವೋ, ಹಾಗೆ; ದ್ರಷ್ಟುಃ ಆತ್ಮನಃ = ಕಾಣತಕ್ಕ ಚೇತನನಿಗೆ; ಅಸನ್ನಪಿ = ತನ್ನಲ್ಲಿಲ್ಲದಿದ್ದರೂ; ಅನಾತ್ಮನಃ ಗುಣಃ = ಜಡಶರೀರ ಸಂಬಂಧಿಯಾದ ಭ್ರಾಂತಿ, ಭಯ ಮೊದಲಾದುದು; ದೃಶ್ಯತೇ = ತನ್ನಲ್ಲಿಯೇ ಇದ್ದಂತೆ ಕಂಡುಬರುತ್ತದೆ.

(ಭ್ರಾಂತಿ ನಿಮಿತ್ತವಾಗಿ ಜೀವರಿಗೆ ಇಲ್ಲದ್ದು ಇದ್ದಂತೆ ಕಂಡುಬರುವುದು ಸಹಜ. ಸರ್ವಜ್ಞಶಿಖಾಮಣಿಯಾದ ಭಗವಂತನಿಗೆ ಅಂತಹ ಭ್ರಾಂತಿಯುಂಟಾಗು

ವುದಿಲ್ಲವೆಂಬುದು ವ್ಯತಿರೇಕ ಲಕ್ಷಣದಿಂದ ಸಿದ್ಧವಾಗುವುದು. ಆದುದರಿಂದ ಜಗತ್ತು ಭಗವಂತನಲ್ಲಿ ಆರೋಪಿತವೆಂದು ಹೇಳುವ ವಾದಕ್ಕೆ ಅವಕಾಶವಿಲ್ಲವಾಯಿತು. ಆರೋಪವೆಂಬುದು ಜೀವರಿಗೆ ಅನ್ವಯಿಸುವ ಮಾತು.)

**ಸವೈನಿವೃತ್ತಿಧರ್ಮೇಣ ವಾಸುದೇವಾನುಕಂಪಯಾ ।**
**ಭಗವದ್ಭಕ್ತಿಯೋಗೇನ ತಿರೋಧತ್ತೇ ಶನೈರಿಹ ॥೧೨॥**

ಸಃ = ಅಜ್ಞಾನ ನಿಮಿತ್ತವಾದ ಅಹಂ ಭಾವಾದಿ ಭ್ರಾಂತಿಯು; ನಿವೃತ್ತಿ ಧರ್ಮೇಣ = ನಿಷ್ಕಾಮ ಕರ್ಮಾಚರಣೆಯಿಂದಲೂ; ಭಕ್ತಿಯೋಗೇನ = ಭಗವಂತನಲ್ಲಿ ಭಕ್ತಿಯನ್ನು ನೆಲೆಗೊಳಿಸುವ ಅಭ್ಯಾಸದಿಂದಲೂ; ವಾಸುದೇವ ಅನುಕಂಪಯಾ = ಮುಖ್ಯವಾಗಿ, ಮುಕ್ತಿ ಪ್ರದನಾದ ಭಗವಂತನ ಅನುಗ್ರಹದಿಂದಲೂ; ಇಹ = ಇಲ್ಲಿಯೇ; ಶನೈಃ = ಕ್ರಮಕ್ರಮವಾಗಿ ತಿರೋಧತ್ತೇ = ನಾಶವಾಗಿ ಹೋಗುತ್ತದೆ; ವೈ = ನಿಜವು.

(ಭ್ರಾಂತಿ ಕಲ್ಪನೆ ಮತ್ತು ಅದರ ವಿನಾಶವು ಜೀವರ ವಿಷಯವೇ ಹೊರತು ಭಗವಂತನನ್ನು ಕುರಿತು ಹೇಳಿದುದಲ್ಲ ಎಂಬುದು ಈ ಶ್ಲೋಕದಿಂದ ಸ್ಪಷ್ಟವಾಗಿದೆ. ಭಗವಂತನಿಗೆ ಸುಃಖ ದುಃಖಾದಿಗಳು ಅಂಟದಿರುವುದು ಹೇಗೆ ಎಂಬ ವಿದುರರ ಪ್ರಶ್ನೆಗೆ ಜೀವರ ವಿಷಯಕವಾದ ವಿವರಣೆ. ಏಕೆ ಎಂದರೆ, ಅದಕ್ಕೆ ಕಾರಣ–

(೧) ಇದು ಭಗವಂತನ ಮಾಯಾ ಶಕ್ತಿಯ ನಿರೂಪಣೆ.

(೨) ಅವನು ಸೃಷ್ಟಿಸಿರುವ ಪ್ರಾಕೃತ ಜಗತ್ತು ಸತ್ಯ.

(೩) ಅದರಲ್ಲಿ ಸಿಗಹಾಕಿಕೊಂಡು ದುಃಖದಿಂದ ಬಳಲಿ ಸುಖದ ಲಾಭಕ್ಕಾಗಿ ಜೀವರು ಹೆಣಗುತ್ತಿರುವುದು ನಿಜ.

(೪) ನಿವೃತ್ತಿ ಧರ್ಮಮಾರ್ಗಾನುಸರಣೆ, ಭಗವದ್ಭಕ್ತಿ ಮತ್ತು ಭಗವಂತನ ಪ್ರಸಾದ– ಇವು ಭ್ರಾಂತಿಯನ್ನು ಕಳೆದು ಕೊಂಡು ಸ್ವರೂಪಸುಖವನ್ನು ಪಡೆಯಲು ಅವಶ್ಯಕವಾದ ಅಂಶಗಳು.

(೫) ಜೀವರ ಅಸ್ವತಂತ್ರ ಸ್ಥಿತಿಯನ್ನು ವಿವರಿಸಿದುದರಿಂದ ಸ್ವತಂತ್ರನಾದ ಭಗವಂತನನ್ನು ಕುರಿತ ಪ್ರಶ್ನೆಗಳಿಗೆ ಉತ್ತರನೀಡಿದಂತೆಯೇ ಆಯಿತು.)

**ಯದೇಂದ್ರಿಯೋಪರಾಮಾರ್ಥೋ ದ್ರಷ್ಟಾತ್ಮನಿಪರೇಹತಾ ॥**
**ವಿಲೀಯಂತೇತದಾಕ್ಲೇಶಾಃ ಸಂಸುಪ್ತಸ್ಯೇವ ಕೃತ್ಸ್ನಶಃ ॥೧೩॥**

ಯದಾ = ಯಾವಾಗ; ಆತ್ಮನಿ = ಅಂತರಾತ್ಮನಾದ; ಪರೇ = ಸರ್ವರಿಂದ ಭಿನ್ನನೂ, ಉತ್ತಮನೂ ಆದ; ಹರೌ = ಸಂಸಾರ ತಾಪಹರಣಮಾಡುವವನಲ್ಲಿ; ದ್ರಷ್ಟಾ = ಜೀವನು; ಇಂದ್ರಿಯ ಉಪರಾಮ ಅರ್ಥಃ = ಅಪರೋಕ್ಷಬಲದಿಂದ ಸಕಲ ಇಂದ್ರಿಯಗಳೂ ಶ್ರೀಹರಿಯ ವಶವಾಗಿ ಸುಖಿಸುವ ಸ್ಥಿತಿಗೆ ಬರುವನೋ; ತದಾ = ಆಗ; ಸಂಸುಪ್ತಸ್ಯ ಇವ = ಗಾಢನಿದ್ರೆಗೆ ಒಳಗಾದವನ ಅನುಭವದಂತೆ; ಕ್ಲೇಶಾಃ = ದುಃಖಗಳು; ಕೃತ್ಸ್ನಶಃ = ಸಂಪೂರ್ಣವಾಗಿ; ವಿಲೀಯಂತೇ = ಬಿಟ್ಟುಹೋಗುತ್ತವೆ.

(ದೇಹೇಂದ್ರಿಯ ವ್ಯಾಪಾರಗಳು ತನ್ನಿಂದ ನಡೆಯುತ್ತಿವೆ ಎಂಬ ಅಜ್ಞಾನ ವಿರುವವರೆಗೂ ದೇಹದಲ್ಲಿ ಸಂಭವಿಸುವ ದುಃಖಗಳು ಜೀವನಿಗೆ ಅಂಟುತ್ತವೆ. ಗಾಢನಿದ್ರೆಯ ಸಮಯದಲ್ಲಿ ಎಚ್ಚರ ಕಾಲದ 'ನಾನು' ಅಡಗಿರುವುದರಿಂದ, ಮನೋನಿಯಾಮಕರ ವಶಗಳಾಗಿ ನಾಸಿಕ ಶ್ರವಣಾದಿ ಇಂದ್ರಿಯಗಳು ಎಚ್ಚರವಾಗಿದ್ದರೂ ಅವುಗಳಿಗೆ ಮುಟ್ಟುವ ಬಾಹ್ಯ ಸಂಪರ್ಕಗಳು ಜೀವನಿಗೆ ತಿಳಿಯುವುದಿಲ್ಲ. ಎಚ್ಚರದ ಕಾಲದಲ್ಲಿ ಸೋಳ್ಳೆಕಚ್ಚಿದಾಗ ತುರಿಕೆಯ ಅನುಭವವಾಗುತ್ತದೆ. ಗಾಢನಿದ್ರೆಯ ಕಾಲದಲ್ಲಿ ಅಂತಹ ಅನುಭವ ಜೀವನಿಗೆ ಮುಟ್ಟುವುದಿಲ್ಲ; ಅವನು ಕೇವಲ ನಿದ್ರೆಯ ಸುಖಾನುಭವದಲ್ಲಿರುತ್ತಾನೆ. ಅದರಂತೆ, ಮನಸ್ಸಿನ ಸಹಿತವಾಗಿ ಎಲ್ಲಾ ಇಂದ್ರಿಯಗಳನ್ನೂ ಒಳಗೆಳೆದುಕೊಂಡು ಭಗವಂತನ ಸಾನ್ನಿಧ್ಯದಲ್ಲಿ ಮುಕ್ತಿ ಸುಖಹೊಂದಿರುವ ಜೀವನಿಗೆ ದುಃಖಸಂಪರ್ಕವಿರುವುದಿಲ್ಲ. ಸಂಪ್ರಜ್ಞಾತ ಸಮಾಧಿಯಲ್ಲಿದ್ದರೂ, ದುಃಖಾನುಭವಿಗಳಾದ ದುಷ್ಟತಾತ್ವಿಕರು ದುಃಖಿಸುವುದನ್ನು ಕಂಡು ಸಂತೋಷಿಸುವನೇ ಹೊರತು ಜೀವಿಯು ತಾನು ಆ ದುಃಖಗಳಿಂದ ದೂರವಾಗಿರುವನು.)

**ಅಶೇಷ ಸಂಕ್ಲೇಶ ಶಮಂ ವಿಧತ್ತೇ ಗುಣಾನುವಾದಶ್ರವಣಂ ಮುರಾರೇಃ।**
**ಕಿಂವಾಪುನಸ್ತಚ್ಚರಣಾರವಿಂದ ಪರಾಗಸೇವಾರತಿರಾತ್ಮಲಬ್ಧಾ ॥೧೪॥**

ಮುರಾರೇಃ = ಮುರವೈರಿಯಾದ ಶ್ರೀಕೃಷ್ಣನ; ಗುಣಾನುವಾದ ಶ್ರವಣ = ಕಲ್ಯಾಣಗುಣಗಳನ್ನು ವರ್ಣಿಸುವ ಶ್ರೀಮದ್ ಭಾಗವತ ಕಥಾದಿಗಳನ್ನು ಕೇಳುತ್ತಿರುವುದು; ಅಶೇಷ = ಸಂಪೂರ್ಣವಾಗಿ; ಕ್ಲೇಶಶಮಂವಿಧತ್ತೇ = ಕ್ಲೇಶಗಳನ್ನು ಅಡಗಿಸಿಬಿಡುವುದು; ಆತ್ಮಲಬ್ಧಾ = ನಿರ್ಮಲ ಮನಸ್ಸಿನಿಂದ ಲಭಿಸಿದ; ತಚ್ಚರಣಾರವಿಂದ ಪರಾಗ ಸೇವಾರತಿಃ = ಆ ಭಗವಂತನ ಪಾದರೇಣುಗಳ ಸೇವನೆಯಿಂದುಂಟಾಗುವ ಸಂತೋಷವು; ಕಿಂವಾಪುನಃ = ಕ್ಲೇಶನಿವೃತ್ತಿಗೆ ಕಾರಣವಾಗುದೆಂದು ಹೇಳಬೇಕಾದ ಅವಶ್ಯಕತೆ ಇಲ್ಲವಷ್ಟೇ!

(ಕಥಾನುವಾದ ಶ್ರವಣ, ಮನನ, ವ್ಯಾಖ್ಯಾನ, ಉಪಾಸನಾ ಮುಂತಾದುವು ಉತ್ತರೋತ್ತರ ಹೆಚ್ಚುಹೆಚ್ಚು ಫಲಕಾರಿಗಳೆಂಬುದು ಸ್ವತಸ್ಸಿದ್ಧವಾದ ವಿಚಾರವೇ ಸರಿ.)

**ವಿದುರ ಉವಾಚಃ** – ವಿದುರರು ನುಡಿದರು.

**ಸಂಛಿನ್ನಃ ಸಂಶಯೋಮಹ್ಯಂತವಸೂಕ್ತಾಸಿನಾ ವಿಭೋ ।**
**ಉಭಯತ್ರಾಪಿ ಭಗವನ್ಮನೋಮೇಸಂಪ್ರಧಾವತಿ ॥೧೫॥**

ವಿಭೋ = ಜ್ಞಾನೈಶ್ವರ್ಯ ಸಂಪನ್ನರಾದ ಮೈತ್ರೇಯರೇ; ತವಸೂಕ್ತಅಸಿನಾ = ತತ್ವನಿರ್ಣಾಯಕವಾದ ತಮ್ಮ ಮಾತುಗಳೆಂಬ ಕತ್ತಿಯಿಂದ; ಮಹ್ಯಂ = ನನ್ನದೆಂದು ಕೊಂಡಿದ್ದ; ಸಂಶಯಃ = ಸಂಶಯ ಪಿಶಾಚಿಯು; ಸಂಛಿನ್ನಃ = ಕತ್ತರಿಸಿ ಹೋಯಿತು; ಭಗವನ್ = ಮಹಾತ್ಮರೇ; ಮೇಮನಃ = ನನ್ನ ಮನಸ್ಸಿನ ವಿಚಾರಲಹರಿಯು; ಉಭಯತ್ರಾಪಿ = ಭಗವಂತನ ಮತ್ತು ಜೀವರ ವಿಷಯಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ; ಸಂಪ್ರಧಾವತಿ = ಚೆನ್ನಾಗಿ ಹರಿದು ಸಂಶೋಧಿಸುವಂತಾಗಿದೆ.

ನಿರ್ಗುಣನೂ, ನಿರ್ವಿಕಾರನೂ, ಕೇವಲ ಜ್ಞಾನಾನಂದ ಶರೀರಿಯೂ ಆಗಿ, ತನ್ನ ಕಾರುಣ್ಯವಶದಿಂದ ಜೀವರಿಗಾಗಿ ಜಗತ್ತನ್ನು ಸೃಷ್ಟಿಸಿ, ಆ ಜಗತ್ತಿನ ಎಲ್ಲೆಡೆಗಳಲ್ಲಿಯೂ, ಜೀವರ ಸ್ವಯಂ ವ್ಯಾಪಾರ ಮಾಡಲಾರದ ದೇಹಗಳಲ್ಲಿಯೂ ತುಂಬಿಕೊಂಡಿರುವ ಶ್ರೀಹರಿಗೆ ಅವನ ಅನಾಸಕ್ತಿಯ (ಸ್ವಾಪೇಕ್ಷೆ ಇಲ್ಲದ) ಕಾರಣದಿಂದ ದುಃಖಾದಿಗಳ ಸಂಬಂಧವಿಲ್ಲವೆಂಬುದು ಒಂದು ಪಕ್ಷ. ದೇಹಾತ್ಮವಿವೇಕವಿಲ್ಲದೆ ಭ್ರಾಂತಿಗಳೊಳಗದ ಜೀವರು ಶ್ರೀಹರಿಯ ಸ್ಮರಣೆಯಿಂದ ಭ್ರಾಂತಿಗಳನ್ನು ನೀಗಿಕೊಂಡು ದುಃಖದೂರರಾಗುವರೆಂಬುದು ಎರಡನೆಯ ಪಕ್ಷ. ಈ ಎರಡರ ಸಂಬಂಧವಾದ ಸಂಶಯಗಳೂ ಏಕಕಾಲದಲ್ಲಿ ನಾಶವಾಗಿ ಹೋದುವೆಂದು ವಿದುರರು ಬಿನ್ನೈಸಿಕೊಂಡಿದ್ದಾರೆ. ಆದರೂ, ಪ್ರಪಂಚದಲ್ಲಿ ದುಃಖವಿರುವುದು ನಿಜವಾದುದರಿಂದ, ಅದರ ಮೂಲಕಾರಣ ಭಗವಂತನ ಕಡೆಯಿಂದಲೋ, ಜೀವನ ಕಡೆಯಿಂದಲೋ ಎಂಬ ಕಟ್ಟಕಡೆಯ ಸಂಶಯ ನಿವಾರಣೆಗಾಗಿ ವಿದುರರು ತಮ್ಮ ಮಾತುಗಳನ್ನು ಮುಂದುವರಿಸುತ್ತಾರೆ. ಹೀಗೆ ಪ್ರಶ್ನೆಮಾಡಲು ಮೂರು ಕಾರಣಗಳು– (೧) ಜಡಕ್ಕೆ ಅನುಭವದ ಸಂಭವವಿಲ್ಲ. (೨) ಭಗವಂತ ಸ್ವಸಾಮರ್ಥ್ಯದಿಂದ ನಿರ್ಲಿಪ್ತ (೩) ಜೀವನಾದವನು ಭಗವಂತನ ಸ್ಮರಣೆಯಿಂದ ನಿರ್ಲಿಪ್ತನಾಗಬಲ್ಲ.)

**ಸಾಧುತದ್ವ್ಯಾಹೃತಂ ವಿದ್ವನ್ನಾತ್ಮ ಮಾಯಾಯನಂಹರೇಃ ।**
**ಆಭಾತ್ಯಪಾರ್ಥಂ ನಿರ್ಮೂಲಂ ವಿಶ್ವಮೂಲಂ ನಯದ್ಬಹಿಃ ॥೧೬॥**

ವಿದ್ವನ್ = ಬ್ರಹ್ಮಜ್ಞಾನವನ್ನು ಚೆನ್ನಾಗಿ ಪಡೆದಿರುವ ಮೈತ್ರೇಯರೇ: ಹರೇಃ ಆತ್ಮಮಾಯಾಯನಂ = ಶ್ರೀಹರಿಯು ನಿರ್ಲಿಪ್ತನಾಗಿರುವುದು ಅವನ ಸಾಮರ್ಥ್ಯದ ವ್ಯಾಪಾರವೆಂದು; (ಯತ್)ವ್ಯಾಹೃತಂ ತತ್ = ಯಾವುದು ವಿವರಿಸಲ್ಪಟ್ಟಿತೋ ಅದು; ಸಾಧು = ಸರಿಯಾದುದೇ ಆಗಿದೆ; (ಆದರೆ): ವಿಶ್ವಮೂಲಂ = ಸೃಷ್ಟಿಯ ಕಾರಣವು; ಯತ್‌ಬಹಿಃನ = ಯಾರನ್ನು ಬಿಟ್ಟು ಇಲ್ಲವೋ, ಆ ಕಾರಣದಿಂದ; ಅಪಾರ್ಥಂ = ಭಗವಂತನ ವಿಷಯದಲ್ಲಿ ಜಗತ್ತು ಪ್ರಯೋಜನ ರಹಿತವೆಂಬುದು; ನಿರ್ಮೂಲಂ ಆಭಾತಿ = ಆಧಾರ ರಹಿತವೆಂಬಂತೆ ನನ್ನ ಮನಸ್ಸಿಗೆ ತೋರುತ್ತದೆ.

(ವಿದುರರ ಮನಸ್ಸಿನ ತುಯ್ದಾಟಕ್ಕೆ ಕಾರಣವನ್ನು ಇಲ್ಲಿ ಬಿಚ್ಚಿ ಹೇಳಿದ್ದಾರೆ ಭಗವಂತನಿಗೆ ಜಗತ್ಸೃಷ್ಟಿಯಿಂದ ಪ್ರಯೋಜನವಿಲ್ಲವೆಂಬುದು ಒಪ್ಪತಕ್ಕಮಾತೇ ಸರಿ. ಆದರೆ, ಪ್ರಯೋಜನದೃಷ್ಟಿಯಿಲ್ಲದೆ ಸೃಷ್ಟಿಕಾರ್ಯದಲ್ಲಿ ನಿರಪೇಕ್ಷನಾದ ಭಗವಂತನು ತೊಡಗುವನೆಂಬ ಮಾತನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗಿದೆ. ಈ ಗೊಂದಲ ದಿಂದ ಪಾರಾಗಬೇಕೆಂಬುದು ಅವರ ಇಚ್ಛೆ.

ಪ್ರಚಲಿತವಾದ ಅದ್ವೈತವಾದಿಗಳು ಉತ್ತರಿಸಲೇಬೇಕಾದ ಪ್ರಶ್ನೆ ಇದಾಗಿದೆ. ಒಂದುಕಡೆ ಬ್ರಹ್ಮವಸ್ತುವು ವರ್ಣನೆಗೆ ಸಿಲುಕುವುದಲ್ಲವೆಂದು ಹೇಳಿ, ಅದೇ ಉಸುರಿನಲ್ಲಿ ಅವನು "ಲೋಕವತ್ತು ಲೀಲಾ ಕೈವಲ್ಯಂ" ಎಂಬ ವೇದೋಕ್ತಿಗನುಸಾರ ಕ್ರೀಡಾಸಕ್ತನೆಂದು ವರ್ಣಿಸುವುದು ತಾರ್ಕಿಕರ ಮಾತಿನಂತೆ ಸ್ವವ್ಯಾಹೃತಿ ಎಂಬ ದೋಷಕ್ಕೆ ಗುರಿಯಾಗುತ್ತದೆ. ಇದರಿಂದ ಪಾರಾದಲ್ಲದೆ ಗತಿಯಿಲ್ಲ.)

**ಯಶ್ಚಮೂಢತಮೋಲೋಕೇ ಯಶ್ಚಬುದ್ಧೇಃ ಪರಂಗತಃ ।**
**ತಾವುಭೌಸುಖಮೇಧೇತೇ ಕ್ಲಿಶ್ಯತ್ಯಂತರಿತೋ ಜನಃ ॥೧೭॥**

ಲೋಕೇ = ಬಹ್ಮನ ಸೃಷ್ಟಿಯಲ್ಲಿ; ಯಃಚ ಮೂಢತಮಃ = ಯಾವನಾದರೆ ಕೇವಲ ಜ್ಞಾನ ಶೂನ್ಯನೋ; ಯಃಚ ಬುದ್ಧೇಃ ಪರಂಗತಃ = ಯಾವನಾದರೆ, ಸ್ವಬುದ್ಧಿಯ ಮಿತಿಯನ್ನುದಾಟಿ ಗುರೂಪದಿಷ್ಟ ಜ್ಞಾನ ಸಂಪನ್ನನಾಗಿರುವನೋ; ತಾಉಭೌ = ಆ ಇಬ್ಬರೂ; ಸುಖಂ ಏಧೇತೇ = ಸುಖಿಗಳಾಗಿ ಬಾಳಿಕೊಂಡಿರುತ್ತಾರೆ. ಅಂತರಿತಃ ಜನಃ = ಅರೆಬರೆ ತಿಳಿವಳಿಕೆಯುಳ್ಳವರು; ಕ್ಲಿಶ್ಯತಿ = ಪೇಚಿಗೆ ಸಿಕ್ಕು ಮರುಗುತ್ತಾರೆ.

(ಅಜ್ಞಾನಿಯು ಉನ್ಮತ್ತನಂತೆ; ಅವನಿಗೆ ಲೌಕಿಕ ಸುಖವೇ ಸುಖ. ಆದು ಆರಂಭಮುಕ್ತಾಯಗಳಲ್ಲಿ ದುಃಖದಿಂದ ಕೂಡಿದ್ದರೂ ಅವನಿಗೆ ಅದು ಬಿಟ್ಟು ಬೇರೆಗತಿಯಿಲ್ಲ. ನಿಜವಾಗಿ ಬ್ರಹ್ಮಜ್ಞಾನಿಯಾದವನು ಗಾಢನಿದ್ರಾಸಕ್ತನಂತೆ ಸ್ವರೂಪ

ಸುಖಾತಿಶಯದಲ್ಲಿ ಮುಳುಗಿರುತ್ತಾನೆ. ಅರೆಬರೆ ತಳಿದವನು ಎಚ್ಚರ ಗಾಢನಿದ್ರೆಗಳ ನಡುವಿನ ಸ್ವಪ್ನಾನುಭವಿಯಂತೆ ಹುಚ್ಚು ಹುಚ್ಚು ಅನುಭವಗಳಿಂದ ತೊಳಲುತ್ತಾನೆ.

ಆದುದರಿಂದ, ಭಗವಂತನ ಸೃಷ್ಟಿಯ ವಿಚಾರವನ್ನು ಸ್ಪಷ್ಟವಾಗಿ ತಿಳಿದು ಮನಸ್ಸಿನಗೊಂದಲವನ್ನು ಕಳೆದುಕೊಳ್ಳಬೇಕೆಂದು ಮುಂದೆ ಹೇಳುವ ರೀತಿಯಲ್ಲಿ ವಿದುರರು ನಾನಾ ಬಗೆಯ ವಿಚಾರಗಳನ್ನು ಕುರಿತು ಕೇಳುತ್ತಾರೆ.)

**ಅರ್ಥಾಭಾವಂ ವಿನಿಶ್ಚಿತ್ಯ ಪ್ರತೀತಸ್ಯಾಪ್ಯನಾತ್ಮನಃ ।**
**ತಾಂಚಾಪಿಯುಷ್ಮಚ್ಚರಣಸೇವಯಾಹಂ ಪರಾಣುದೇ ॥೧೮॥**

ಪ್ರತೀತಸ್ಯ = ಅನುಭವ ವೇದ್ಯವಾಗಿರುವ; ಅನಾತ್ಮನಃ = ಜಡದೇಹದ; ಅರ್ಥಾಭಾವಂ ಅಪಿ= ಪ್ರಯೋಜನಾಪೇಕ್ಷೆ ಇಲ್ಲದಿರುವಿಕೆಯನ್ನು; ನಿಶ್ಚಿತ್ಯ = ನಿಶ್ಚಯಮಾಡಿಕೊಂಡು; ಯುಷ್ಮತ್ ಸೇವೆಯಾ ಅಪಿ = ನಿಮ್ಮನ್ನು ಆಶ್ರಯಿಸಿ ಪಡೆಯುವ ನಿಮ್ಮ ಉಪದೇಶದಿಂದಲೇ; ತಾಂ ಚ = ಅಜ್ಞಾನದಿಂದ ಮೂಡಿದ ದೇಹಾತ್ಮಬುದ್ಧಿಯನ್ನೂ; ಪರಾಣುದೇ = ಕಳೆದುಕೊಳ್ಳಲು ಇಚ್ಛಿಸುತ್ತೇನೆ.

(ದೇಹಾತ್ಮ ವಿವೇಕವೆಂಬುದನ್ನು ಮಾತಿನಲ್ಲಿ ಹೇಳುವುದು ಸುಲಭ; ಅನುಭವವೇದ್ಯವಾಗುವಂತೆ ಮಾಡುವುದು ಕಷ್ಟ. ಅದು ಸದ್ಗುರುಗಳ ಮುಖತಃ ಕೇಳಿಕೇಳಿ, ಅವರ ಕೃಪಾಂಶ ಸಂಪಾದನೆಯಿಂದ ಪಡೆಯಬೇಕಾದ ಪರಮ ಲಾಭ ಸುಖದುಃಖಗಳ ಸಂವೇದನೆಯನ್ನು ವ್ಯಕ್ತಗೊಳಿಸುವುದು ದೇಹವೇ ಆದರೂ, 'ನಾನು ಸುಖಿ, ನಾನು ದುಃಖಿ' ಎಂಬುದೇ ದಿನನಿತ್ಯದ ಅನುಭವವಾಗಿರುತ್ತದೆ. ಜಡಕ್ಕೆ ಸಂವೇದನೆಯ ಜ್ಞಾನವಿಲ್ಲ; ಜೀವ, ಅಭ್ಯಾಸದಿಂದ ಸುಖದುಃಖ ದೂರವಾಗಬಹುದು; ಭಗವಂತನಿಗಂತೂ ಸುಖದುಃಖ ಸಂಬಂಧವೇ ಇಲ್ಲ. ಹಾಗಾದರೆ ಸುಖದುಃಖ ಏತರಿಂದ, ಯಾರಿಗಾಗಿ ಎಂಬುದು ಉತ್ತರಿಸಲೇಬೇಕಾದ ಕಠಿಣತರಪ್ರಶ್ನೆ, ಇದಕ್ಕೆ ಉತ್ತರ ಶ್ರೀಮನ್ಮಧ್ವಶಾಸ್ತ್ರದಲ್ಲಿ ಮಾತ್ರ ದೊರೆಯುವುದೆಂದಾಗ ಯಾರೂ ಮತ್ಸರಿಸುವ ಅಗತ್ಯವಿಲ್ಲ. ಹಿಂದಿನವರು ಮುಚ್ಚಿಟ್ಟು ಹೇಳಿದುದನ್ನು ಶ್ರೀಮನ್ಮಧ್ವಾಚಾರ್ಯರು ಬಿಚ್ಚಿಹೇಳಿದ್ದಾರೆ, ಜಿಜ್ಞಾಸುಗಳ ಉದ್ಧಾರಕ್ಕಾಗಿ. ಹದಿನೈದು ದಿನಗಳ ಕಾಲ ಸತತವಾಗಿ ವಾದಿಸಿದ ನಂತರ ಅದ್ವೈತವಾದದಿಂದ ದ್ವೈತವಾದಕ್ಕೆ ಮರಳಿದ ತ್ರಿವಿಕ್ರಮ ಪಂಡಿತಾಚಾರ್ಯರ ಶ್ರೀಹರಿವಾಯುಸ್ತುತಿಯಲ್ಲಿ ಪ್ರಶ್ನೆಗೆ ಉತ್ತರ ಮೂಡಿಬಂದಿದೆ.

"ತತ್ವಜ್ಞಾನ್ ಮುಕ್ತಿಭಾಜಃ ಸುಖಯಸಿಹಿ ಗುರೋ ಯೋಗ್ಯತಾ ತಾರತಮ್ಯಾತ್ ಆಧತ್ಸೇಮಿಶ್ರಬುದ್ಧೀನ್ ತ್ರಿದಿವನಿರಯಭೂಗೋಚರಾನ್ ನಿತ್ಯಬದ್ಧಾನ್ ತಾಮಿಸ್ರಾಂಧಾಧಿಕಾಖ್ಯೇ ತಮಸಿಸುಬಹುಳಂ ದುಃಖಯ ಸ್ಯನ್ಯಥಾಜ್ಞಾನ್ ವಿಷ್ಣೋರಾಜ್ಞಾಭಿರಿತ್ಥಂ ಶ್ರುತಿಶತ ಇತಿಹಾಸಾದಿ ಚಾಕರ್ಣಯಾಮಃ॥

ಇದರ ಅರ್ಥಃ – ಗುರುವರೇಣ್ಯರೇ, ಮುಖ್ಯಪ್ರಾಣಾವತಾರರಾದ ನೀವು ತತ್ವಜ್ಞಾನಾರ್ಹರಾದ ಮುಕ್ತಿಯೋಗ್ಯಜನರಿಗೆ ಮುಕ್ತಿಯನ್ನು ಕೊಡಿಸಿ ಸುಖಪಡಿಸುತ್ತೀರಿ; ಭಕ್ತಿಯನ್ನು ಮಾಡುತ್ತಾ ತಪ್ಪು ತಿಳಿವಳಿಕೆಗಳನ್ನೂ ಸ್ವಾಭಾವಿಕವಾಗಿಯೇ ಹೊಂದಿಮುಕ್ತರಾಗುವ ಜೀವಿಗಳನ್ನು ಸುಖದುಃಖಗಳ ಮಿಶ್ರ ಸ್ಥಿತಿಯಲ್ಲಿಡುತ್ತೀರಿ; ವಿಪರೀತಜ್ಞಾನವೇ ಸ್ವಭಾವವಾಗಿ ಉಳ್ಳವರನ್ನು ನಿತ್ಯ ನರಕದಲ್ಲಿ ದುಃಖಕ್ಕೆ ಈಡುಮಾಡುತ್ತೀರಿ. ಇದು ಶ್ರೀಹರಿಯ ಆಜ್ಞಾನುಸಾರ. ಹೀಗೆಂದು ನೂರಾರು ಶ್ರುತಿವಚನಗಳೂ, ಇತಿಹಾಸದ ಉದಾಹರಣೆಗಳೂ ಇರುವುದನ್ನು ಕೇಳಿಬಲ್ಲವರಾಗಿದ್ದೇವೆ.

ಕಡೆಯ ಎರಡು ಗುಂಪಿನ ಜೀವರ ಮಾತು ಹಾಗಿರಲಿ. ಸಜ್ಜನರೂ ದುಃಖಕ್ಕೆ ಒಳಗಾಗುವುದೇಕೆ ಎಂಬ ಪ್ರಶ್ನೆ ಕೇಳತಕ್ಕದ್ದೇ ಸರಿ. ಅದಕ್ಕೆ ಪಾಂಡವರ ನಿದರ್ಶನ ಸಾಕಲ್ಲವೆ! ಹೆಚ್ಚು ವಿವರಣೆಯನ್ನು ಗುರುಮುಖದಿಂದಲೇ ಕೇಳಿ ನಿಶ್ಚಯಿಸಿಕೊಳ್ಳಬೇಕು. ಅದೇ ವಿದುರರ ನಿಲುವು. ಮೈತ್ರೇಯರ ಮಾತುಗಳಲ್ಲಿ ಉತ್ತರವಿದೆ. ಆದರೆ, ಅದನ್ನು ಸದ್ಗುರುಗಳೇ ಬಿಚ್ಚಿ ಹೇಳಬೇಕು.

ನಿಜವಾಗಿ ಸದ್ಗುರುಗಳಾದವರು ವಿವರಣೆಯನ್ನು ನೀಡುವುದಲ್ಲದೆ, ಒಂದಂಶದಿಂದ ನಮ್ಮ ದೇಹದಲ್ಲಿ ನಮ್ಮೊಡನೆಯೇ ಇದ್ದುಕೊಂಡು ಅರ್ಥಗಳನ್ನೂ, ಅದರ ಅನುಸಂಧಾನವನ್ನೂ ಪೂರ್ಣಮಾಡಿಕೊಡುವರು.)

**ಯತ್ಸೇವಯಾಭಗವತಃ ಕೂಟಸ್ಥಸ್ಯ ಮಧುದ್ವಿಷಃ ।**
**ರತಿರಾಸೋ ಭವೇತ್ತೀವ್ರಃ ಪಾದಯೋರ್ವ್ಯಸನಾರ್ದನಃ ॥೧೯॥**

ಯತ್ ಪಾದಯೋಃ ಸೇವಯಾ = ಬ್ರಹ್ಮಜ್ಞಾನಿಗಳಾದ ಯಾವ (ಮೈತ್ರೇಯರಂತಹ) ಗುರುಸ್ಥಾನೀಯರನ್ನು ಅನುಸರಿಸುವುದರಿಂದ; ಕೂಟಸ್ಥಸ್ಯ = ಜಡಚೇತನ ಸಮೂಹದಲ್ಲಿ ರಕ್ಷಕನಾಗಿ ನೆಲೆಸಿರುವ; ಮಧುದ್ವಿಷಃ = ಅಜ್ಞಾನವನ್ನು ಕವಿಸುವ ಮಧುಕೈಟಭಾದಿಗಳಿಗೆ ಶತ್ರುವಾದ; ಭಗವತಃ = ಭಗವತ್ಸಂಬಂಧಿಯಾದ; ವ್ಯಸನಾರ್ದನಃ = ದುಃಖವನ್ನು ಕಳೆದುಬಿಡುವಂತಹ; ರತಿರಾಸಃ = ಭಕ್ತಿಯಿಂದೊದಗುವ ಆನಂದಾತಿಶಯವು; ತೀವ್ರಃ ಭವತಿ = ತುಂಬಿಬರುತ್ತದೆ.

(ಮನಸ್ಸು ಅನ್ಯಾಸಕ್ತವಾಗಿದ್ದಾಗ ದೇಹದಲ್ಲಿ ಆಗುವ ಸುಖದುಃಖಗಳ ಜ್ಞಾನವು ಜೀವನಿಗೆ ಅಂಟುವುದಿಲ್ಲವೆಂಬುದು ಎಲ್ಲರಿಗೂ ಅವನುಭವ ವೇದ್ಯವಾದುದು. ಶ್ರೀಹರಿಕಥಾಮೃತ ಪಾನಾಸಕ್ತರಾದವರಿಗೆ ದೇಹದ ಸಂಬಂಧವಿದ್ದರೂ ಇಲ್ಲದಂತಹ ಸ್ಥಿತಿಯು ಒದಗುವುದು ಏನಾಶ್ಚರ್ಯ! ಹರಿಭಕ್ತಿಯು ಜ್ಞಾನವೈರಾಗ್ಯಗಳಿಂದ

ಪರಿಪುಷ್ಟವಾಗಿರುವಾಗ ನಮ್ಮ ದೇಹಗಳಲ್ಲಿಯೇ ಇರುವ ಅರಿಷಡ್ವರ್ಗದವರ ಕಾರ್ಯ ಹೇಗೆ ತಾನೇ ಜಿವನ ಮೇಲೆ ಪರಿಣಾಮಕಾರಿಯಾದೀತು! ಈ ಶ್ಲೋಕದಲ್ಲಿ 'ಮಧುದ್ವಿಷಃ' ಎಂಬ ಮಾತನ್ನು ಉದ್ದೇಶ ಪೂರ್ವಕವಾಗಿ ಬಳಸಿದ್ದಾರೆ. ತತ್ವಾಭಿಮಾನಿಗಳಿಗೆ ಸಂಬಂಧಿಸಿದ ಈ ವಿಷಯವನ್ನು ಗುರುಮುಖೇನ ತಿಳಿಯುವುದು ಆವಶ್ಯಕ. ಇದರಂತೆ, ಮುಂದಿನ ಶ್ಲೋಕದಲ್ಲಿ ಜನಾರ್ದನಃ ಎಂಬ ಮಾತು ಕೂಡ).

**ದುರ್ಧಾಪಾಹ್ಯಲ್ಪತಪಸಃ ಸೇವಾವೈಕುಂಠವರ್ತ್ಮಸು ।**
**ಯತ್ರೋಪಗೀಯತೇ ನಿತ್ಯಂ ದೇವದೇವೋ ಜನಾರ್ದನಃ ॥೨೦॥**

ಯತ್ರ = ಯಾವಲ್ಲಿ; ದೇವದೇವಃ = ದೇವತಾ ಸಾರ್ವಭೌಮನಾದ; ಜನಾರ್ದನಃ = ಮುಕ್ತಿಪ್ರದನಾದ ಶ್ರೀಹರಿಯು; ನಿತ್ಯಂ= ಸದಾ; ಉಪಗೀಯತೇ = ಸ್ತುತಿಸಲ್ಪಡುತ್ತಿರುವನೋ ಅಂತಹ; ವೈಕುಂಠವರ್ತ್ಮಸು = ವೈಕಂಠಕ್ಕೆ ದಾರಿದೀಪಗಳಂತಿರುವ ಜ್ಞಾನಿವರೇಣ್ಯರಲ್ಲಿ; ಸೇವಾ = ಸೇವೆಯ ಭಾಗ್ಯವು; ಅಲ್ಪ ತಪಸಃ = ಅಲ್ಪಾಧಿಕಾರಿಗಳಿಗೆ; ದುರಾಪಾಹಿ = ಸಿಕ್ಕುವಂತಹುದು ಅಲ್ಲವೇ ಅಲ್ಲ.

(ದುಷ್ಟಜನರಿಗೆ ಶ್ರೀಹರಿಯ ಕಥಾನುವಾದದಲ್ಲಿ ಆಸಕ್ತಿಯೇ ಇರುವುದಿಲ್ಲ. ಜನ್ಮಜನ್ಮಾಂತರಗಳ ಸುಕೃತಸಂಚಯವಿಲ್ಲದೆ ಅಧಿಕಾರಿ ಜೀವರಿಗೂ ಮಹಾತ್ಮರ ಸೇವೆದೊರಕುವುದು ದುರ್ಲಭ. ದೊರಕಿದಾಗ ಸದುಪಯೋಗ ಪಡಿಸಿಕೊಳ್ಳದಿದ್ದರೆ ಅಪಾರವಾದ ನಷ್ಟವಾದಂತೆಯೇ ಸರಿ.

ಜನನ ಮರಣಗಳನ್ನು ನಾಶಪಡಿಸುವವನು ಜನಾರ್ದನ. ಜನರನ್ನು ಅರ್ದಿಸಿ (ಹಿಂಸೆಗೆ ಒಳಗು ಮಾಡಿಯಾದರೂ) ಜನನದ ಆವಶ್ಯಕತೆಯನ್ನೇ ಕಳೆಯುವವನು. ಅವನೇ ಹೊರಗಿನ ಬಂಧನದಲ್ಲಿಟ್ಟು, ಒಳಗಿನ ಅನಾದಿ ಬಂಧನದಿಂದ ಬಿಡಿಸುವವನು.

**ಸೃಷ್ಟ್ವಾಗ್ರೇಮಹದಾದೀನಿ ಸವಿಕಾರಾಣ್ಯನುಕ್ರಮಾತ್ ।**
**ತೇಭ್ಯೋ ವಿರಾಜಮುದ್ಧೃತ್ಯ ತಮನು ಪ್ರಾವಿಶದ್ವಿಭುಃ ॥೨೧॥**

ಆಗ್ರೇ = ಪ್ರಾರಂಭದಲ್ಲಿ; ವಿಭುಃ = ಸರ್ವಸಮರ್ಥನಾದ ಭಗವಂತನು; ಮಹದಾದೀನಿ ಸವಿಕಾರಾಣಿ = ಮಹತ್ತತ್ವ, ಅಹಂಕಾರತತ್ವ, ಮನಸ್ಸು, ದೇವತಾ ಶರೀರಗಳು, ಇಂದ್ರಿಯಗಳು, ತನ್ಮಾತ್ರಾಗಳು ಮೊದಲಾದ ವಿಕಾರಸಹಿತವಾದ ಪ್ರಾಕೃತ ತತ್ವಗಳನ್ನೂ; ಅನುಕ್ರಮಾತ್ ಸೃಷ್ಟ್ವಾ = ಒಂದಾದ ಮೇಲೆ ಒಂದರಂತೆ ಕ್ರಮವಾಗಿ ಸೃಷ್ಟಿಸಿ ಅವುಗಳಿಂದ ಬ್ರಹ್ಮಾಂಡವನ್ನು ಸೃಷ್ಟಿಸಿ ; ತೇಭ್ಯಃ = ಅವುಗಳ ಸಮ್ಮೇಳನದಿಂದ; ವಿರಾಜಂ ಉದ್ಧೃತ್ಯ = ಆ ಬ್ರಹ್ಮಾಂಡವೆಂಬ ವಿರಾಟ್ ಪುರುಷನ ಶರೀರದಲ್ಲಿ

ಚತುರ್ಮುಖನನ್ನು ಸೃಷ್ಟಿಗೆ ತಂದು; ತಮ್ = ಆ ಬ್ರಹ್ಮನ ಶರೀರವನ್ನು; ಅನುಪ್ರಾವಿಶತ್ = ತದ್ರೂಪವಾದ ತನ್ನ ವಿರಾಡ್ರೂಪದಿಂದ ಪ್ರವೇಶಿಸಿದನು.

(ಭಗವಂತನು ಮೊದಲು ಬ್ರಹ್ಮಾಂಡದ ಆವರಣಗಳನ್ನು ಸೃಷ್ಟಿಸಿ ಕ್ರಮವಾಗಿ ಆ ತತ್ವಗಳಲ್ಲಿ ತತ್ತದ್ರೂಪನಾಗಿ ಪ್ರವೇಶ ಮಾಡಿದನು. ಅನಂತರ, ಬ್ರಹ್ಮಾಂಡದ ಸೃಷ್ಟಿಯಾದ ಮೇಲೆ, ಅದರಲ್ಲಿ ಚತುರ್ಮುಖನನ್ನು ತನ್ನ ನಾಭೀಕಮಲದಿಂದ ಸೃಷ್ಟಿಸಿದನು. ಕರ್ತವ್ಯ ಮೂಢನಂತೆ ಪ್ರಾರ್ಥಿಸಿ, ಉಪದೇಶ. ಹೊಂದಿ ತಪಸ್ಸನ್ನಾಚರಿಸಿದ ಆ ಬ್ರಹ್ಮನಿಗೆ ವಿರಾಡ್ರೂಪವನ್ನು ಕರುಣಿಸಿ, ಆ ವಿರಾಟ್ಪುರುಷನು ಕಾರ್ಯ ಸಮರ್ಥನಾಗುವಂತೆ ಆ ರೂಪದಲ್ಲಿ ತಾನೂ ಅದೇ ರೂಪದಿಂದ ಪ್ರವೇಶ ಮಾಡಿದನು.

ವಿದುರರು ಇಲ್ಲಿಂದ, ತಮ್ಮ ಶಂಕೆಯನ್ನು ಪರಿಹರಿಸಿಕೊಳ್ಳುವುದಕ್ಕಾಗಿ, ತಮಗೆ ತಿಳಿದಿರುವಷ್ಟನ್ನು ಅರಿಕೆ ಮಾಡಿಕೊಳ್ಳುತ್ತಿದ್ದಾರೆ; ಅನಂತರ ಉಳಿಯುವ ಪ್ರಶ್ನೆಗೆ ಉತ್ತರವನ್ನು ನಿರೀಕ್ಷಿಸುತ್ತಾರೆ.)

ಯಮಾಹುರಾದ್ಯಂ ಪುರುಷಂ ಸಹಸ್ರಾಂಘ್ರ್ಯೂರು ಬಾಹುಕಂ ।
ಯತ್ರ ವಿಶ್ವಇಮೇ ಲೋಕಾಃ ಸವಿಕಾರಾಃ ಸಮಾಸತೇ ॥೨೧॥

ಯಸ್ಮಿನ್ದಶವಿಧಃ ಪ್ರಾಣಃ ಸೇಂದ್ರಿಯಾರ್ಥೇಂದ್ರಿಯಸ್ತ್ರಿವೃತ್ ।
ತ್ವಯೇರಿತೋ ಯತೋವರ್ಣಾಸ್ತದ್ವಿಭೂತೀರ್ವದಸ್ವನಃ ॥೨೨॥

ಯಂ = ಯಾವ ಭಗವಂತನನ್ನು; ಸಹಸ್ರಾಂಘ್ರಿ ಊರುಬಾಹುಕಂ = ಅನೇಕಾನೇಕ ಪಾದಗಳು, ತೊಡೆಗಳು, ಬಾಹುಗಳು ಉಳ್ಳ; ಆದ್ಯಂ ಪುರುಷಂ = ಪ್ರಪ್ರಥಮವಾಗಿ ಸೃಷ್ಟಿಯಲ್ಲಿ ಬಂದ ಪುರುಷನೆಂದು; ಯತ್ರ = ಯಾರಲ್ಲಿ; ವಿಶ್ವೇ = ಸ್ಥಿತವಾದ ಪ್ರಪಂಚದಲ್ಲಿ; ಸವಿಕಾರಾಃ = ರೂಪರೂಪಾಂತರಗಳಿಗೆ ಆಶ್ರಯಗಳಾಗಿರುವ; ಲೋಕಾಃ = ಚತುರ್ದಶಭುವನಗಳು; ಸಮಾಸತೇ = ಸುಭದ್ರವಾಗಿರುವುವೋ; ॥೨೨॥

ಯಸ್ಮಿನ್ = ಯಾವ ವಿರಾಟ್ಪುರುಷನಲ್ಲಿ; ದಶವಿಧಃ ಪ್ರಾಣಃ = ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ ಎಂಬ ದಶವಿಧಪ್ರಾಣಸಮೂಹವು; ಸಇಂದ್ರಿಯಾಃ = ದಶೇಂದ್ರಿಯಗಳಿಂದ ಸಹಿತವಾಗಿ; ಇಂದ್ರಿಯಾರ್ಥೈಃ = ಇಂದ್ರಿಯಗೋಚರಗಳಿಂದ ಶಬ್ದ, ರೂಪ, ರಸಾದಿಗಳಿಂದ ಕೂಡಿಕೊಂಡು; ತ್ರಿವೃತ್ = ತೇಜ, ಸಹನ, ಬಲಗಳೆಂಬ ಮೂರು ಶಕ್ತಿಗಳು ಇರುವುವೆಂದು; ಯತಃ = ಯಾವ ದೆಸೆಯಿಂದ; ವರ್ಣಾಃ =

ಚಾತುರ್ವರ್ಣ್ಯ ಕಾರ್ಯಗಳೆಂದು; ತ್ವಯಾಈರಿತಾಃ = ನಿಮ್ಮಿಂದ ಹೇಳಲ್ಪಟ್ಟಿತಲ್ಲವೆ? ತದ್ವಿಭೂತೀಃ = ಆ ವಿರಾಟ್ ಪುರುಷನ ವಿಭೂತಿರೂಪಗಳ ವಿಚಾರವನ್ನು; ನಃ = ನಮಗೆ; ವದಸ್ವ = ಹೇಳಿರಿ.

(ಭಗವಂತನ ಸನ್ನಿಧಾನ ವಿಶೇಷಗಳಿಗೆ ವಿಭೂತಿರೂಪಗಳೆಂದು ಹೆಸರು. ಶರೀರೇಂದ್ರಿಯಯಾದಿಗಳಲ್ಲಿ ಆ ರೂಪಗಳ ವ್ಯಾಪಾರಗಳನ್ನು ಯಥಾವತ್ತಾಗಿ ತಿಳಿದರೆ, ಸುಖದುಃಖಗಳ ಪ್ರಯೋಜನವು ಯಾರಿಗೆ, ಹೇಗೆ ಎಂಬ ಗೊಂದಲದ ವಿಚಾರ ಪರಿಪಾರವಾಗುವುದೆಂಬುದು ವಿದುರರ ಮನೋಗತ.)

ಯತ್ರ ಪುತ್ರೈಶ್ಚಪೌತ್ರೈಶ್ಚ ನಪ್ತೃಭಿಃ ಸಹಗೋತ್ರಜೈಃ ।
ಪ್ರಜಾವಿಚಿತ್ರಾಕೃತಯ ಆಸನ್ಯಾಭಿರಿದಂತತಂ ॥೨೪॥

ಯತ್ರ = ಯಾವ ಚಾತುರ್ವರ್ಣದವರಲ್ಲಿ,; ಪುತ್ರೈಃ = ಮಕ್ಕಳಿಂದಲೂ; ಚ = ಮತ್ತು; ಪೌತ್ರೈಃ = ಮೊಮ್ಮಕ್ಕಳಿಂದಲೂ; ಚ = ಮತ್ತು; ಸಹಗೋತ್ರಜೈಃ = ಅವರವರ ಗೋತ್ರಗಳಲ್ಲಿ ಹುಟ್ಟಿಬಂದ; ವಿಚಿತ್ರಾಕೃತಯಃ ಪ್ರಜಾಃ = ಬೇರೆಬೇರೆ ಲಕ್ಷಣಯುಕ್ತರಾದ ಪ್ರಜೆಗಳು; ಆಸನ್ = ಇರತಕ್ಕವರಾದರೋ; ಯಾಭಿಃ = ಯಾವ ಆ ಪ್ರಜೆಗಳಿಂದ; ಇದಂ = ಈ ವಿಶ್ವವು; ತತಂ = ವ್ಯಾಪ್ತಿಯಿಂದ ಪೂರ್ಣವಾಯಿತೋ; ಅದನ್ನು ತಿಳಿಸಿರಿ.

(ವಿರಾಡ್ವಿಷ್ಣುವಿನಿಂದ ಪ್ರೇರಿತರಾದ ಬ್ರಹ್ಮದೇವರೂ, ಅವರಿಂದ ಪ್ರೇರಿತರಾದ ರುದ್ರದೇವರೂ ಸೃಷ್ಟಿಸಿದ ಪ್ರಜಾವರ್ಗಗಳಿಂದ ವಿಶ್ವವು ತುಂಬಿಹೋಯಿತು. ಲೋಕಗಳನ್ನು ಸೃಷ್ಟಿಸಿ, ಪ್ರಜಾವರ್ಗವನ್ನು ಸೃಷ್ಟಿಮಾಡಿದುದು ಚತುರ್ಮುಖ ಬ್ರಹ್ಮನ ಐವತ್ತೊಂದನೇವರ್ಷದ ಮೊದಲನೆಯ ಹಗಲಾದ ಪದ್ಮಕಲ್ಪದಲ್ಲಿ. ಚತುರ್ಮುಖ ವಿರಾಡ್ರೂಪ ಸೃಷ್ಟಿಯ ಪ್ರಥಮತಃ ಆ ಕಲ್ಪದಲ್ಲಿ ಆದುದರಿಂದ ಅದೇ ಕಲ್ಪಕ್ಕೆ ವಿರಾಟ್ ಕಲ್ಪವೆಂದೂ ಹೆಸರು. ಇದನ್ನು ಕುರಿತು ಶ್ರೀವಿಜಯದಾಸರು "ಮುಂದಾದ ಪದುಮ ವಿರಾಟಕಲ್ಪದ ಕಥೆ" ಎಂದಿದ್ದಾರೆ.)

ಪ್ರಜಾಪತೀನಾಂ ಸಪತಿಶ್ಚಿಕ್ಲೃಪೇಕಾನ್ಪ್ರಜಾಪತೀನ್ ।
ಸರ್ಗಾಂಶ್ಚೈವಾನುಸರ್ಗಾಂಶ್ಚ ಮನೂನ್ಮನ್ವಂತರಾಧಿಪಾನ್ ॥೨೫॥

ಏತೇಷಾಮಪಿ ವಂಶಾಂಶ್ಚ ವಂಶಾನುಚರಿತಾನಿಚ ।
ಉಪರ್ಯಧಶ್ಚಯೇಲೋಕಾಭೂಮೇರ್ಮಿತ್ರಾತ್ಮಜಾಸತೇ ।
ತೇಷಾಂಸಂಸ್ಥಾಂ ಪ್ರಮಾಣಂಚ ಭೂರ್ಲೋಕಸ್ಯಚ ವರ್ಣಯ ॥೨೬॥

ಪ್ರಜಾಪತೀನಾಂ ಪತಿಃಸಃ = ಪ್ರಜಾಸಂತತಿಗಳ ಮೊದಲಿಗರಾದವರಿಗೆಲ್ಲಾ ಮೊದಲಿಗನೂ ಯಜಮಾನನೂ ಆದ ಚತುರ್ಮುಖನು; ಕಾನ್ ಪ್ರಜಾಪತೀನ್ = ಯಾರು ಯಾರು ಪ್ರಜಾಪತಿಗಳನ್ನು; ಚಿಕ್ಲೃಪೇ = ಸೃಷ್ಟಿಸಿದನು? ಸರ್ಗಾನ್ = ಬಗೆಬಗೆಯ ಸೃಷ್ಟಿಗಳನ್ನೂ; ಚ = ಮತ್ತು; ಅನುಸರ್ಗಾನ್ = ಮಿಶ್ರಸೃಷ್ಟಿಗಳನ್ನೂ; ಮನೂನ್ = ಮಾನವರ ಮೂಲ ಪುರುಷರ ವಿಚಾರವನ್ನೂ; ಮನ್ವಂತರಾಧಿಪಾನ್= ಮನ್ವಂತರಗಳ ಅಧಿಪತಿಗಳ ವಿಚಾರವನ್ನೂ; ಏತೇಷಾಂ ವಂಶಾನ್ ಚ ಅಪಿ = ಇವರುಗಳಿಂದ ಮುಂದುವರಿದ ವಂಶಾವಳಿಗಳ ವಿಚಾರವನ್ನೂ; ವಂಶಅನುಚರಿತಾನ್= ಆ ವಂಶಗಳವರ ಚರಿತ್ರೆಗಳನ್ನೂ; ಭೂಮೇಃ ಉಪರಿ ಅಧಃ ಚ = ಭೂಲೋಕದಿಂದ ಮೇಲೆಯೂ ಅದರ ಕೆಳಗೂ ಇರುವ; ಯೇಲೋಕಾಃ = ಯಾವ ಯಾವ ಲೋಕಗಳು; ಆಸತೇ = ಇರುವುವು; ತೇಷಾಂ = ಆ ಲೋಕಗಳ; ಚ = ಮತ್ತು; ಭೂರ್ಲೋಕಸ್ಯ = ಭೂಲೋಕದ; ಸಂಸ್ಥಾಂ = ಸ್ಥಿತಿಗತಗಳ ವ್ಯವಸ್ಥೆಯನ್ನು; ಪ್ರಮಾಣಂಚ = ವಿಸ್ತಾರಗಳ ಅಳತೆಗಳನ್ನೂ; ಮಿತ್ರಾತ್ಮಜ = ಮೈತ್ರೇಯರೇ; ವರ್ಣಯ = ವಿವರಿಸಿ ಹೇಳಿರಿ.

(ವಿದುರರು ಕೇಳಬಯಸುತ್ತಿರುವ ವಿಚಾರಗಳೆಲ್ಲಾ ಅವರಿಗೆ ಪರಿಚಯ ಉಳ್ಳವುಗಳೇ ಆಗಿವೆ ಎಂಬುದು ಅವರ ಪ್ರಶ್ನೆಗಳಿಂದಲೇ ವ್ಯಕ್ತವಾಗುತ್ತದೆ. ಆದರೆ, ಗಹನವಾದ ಆ ವಿಷಯಗಳು ಚೆನ್ನಾಗಿ ಬುದ್ಧಿಗತವಾಗಿ ನಿಲ್ಲಬೇಕೆಂಬುದೂ, ಅದರಿಂದ ಶ್ರೀಹರಿಯ ವಿಚಿತ್ರ ಸಾಮರ್ಥ್ಯ ಮತ್ತು ಅದರ ಬಳಕೆಯ ವಿಚಾರ ನಿಸ್ಸಂಶಯವಾಗಿ ತಿಳಿಯಬೇಕೆಂಬುದೂ ಅವರ ಆಶಯ. ಲೋಕಗಳ ವ್ಯವಸ್ಥೆಯನ್ನು ವಿಸ್ತಾರಗಳ ಅಳತೆಗಳನ್ನೂ ತಿಳಿಯಬೇಕೆಂಬುದು ಶಾಸ್ತ್ರಗಳ ವೈಜ್ಞಾನಿಕತೆಯನ್ನು ತಿಳಿಸುತ್ತದೆ.)

**ತಿರ್ಯಙ್ಮಾನುಷ ದೇವಾನಾಂ ಸರೀಸೃಪ ಪತತ್ರಿಣಾಂ ।**
**ವದ ನಃ ಸರ್ಗಸಂವ್ಯೂಹಂ ಗರ್ಭಸ್ವೇದ ದ್ವಿಜೋದ್ಭಿದಾಂ ॥೨೭॥**

ತಿರ್ಯಕ್ ಮಾನುಷ ದೇವಾನಾಂ = ನಾಲ್ಕು ಕಾಲಿನ ಮೃಗಗಳ, ಮಾನವರ ಮತ್ತು ದೇವತೆಗಳ; ಸರೀಸೃಪ ಪತತ್ರಿಣಾಂ = ಹರಿದಾಡುವ ಪ್ರಾಣಿಗಳ ಮತ್ತು ಪಕ್ಷಿಗಳ; ಗರ್ಭ, ಸ್ವೇದ, ದ್ವಿಜ, ಉದ್ಭಿದಾಂ = ಗರ್ಭದಿಂದ, ಬೆವರಿನಂತಹ ದ್ರವಗಳಿಂದ, ಮೊಟ್ಟೆಯಿಂದ ಮತ್ತು ಭೂಗರ್ಭದಿಂದ ಜನಿಸುವ ಜೀವವರ್ಗಗಳ; ಸರ್ಗ ಸಂವ್ಯೂಹಂ=ಉತ್ಪತ್ತಿಯ ವಿವರಗಳನ್ನು; ನಃ = ನಮಗೆ; ವದ = ಹೇಳಿರಿ.

(ಈಗಿನ ವಿಜ್ಞಾನಿಗಳು ಜೀವಸೃಷ್ಟಿಯ ವಿಚಾರವನ್ನು ತಮಗೆ ತೋರಿದ ರೀತಿಯಲ್ಲಿ ಊಹಿಸಿದ್ದಾರೆ. ಆದರೆ, ಇಲ್ಲಿ ಹೇಳುವುದು ಪ್ರಾಮಾಣಿಕವಾದ ಅನುಭವೀ ಶಾಸ್ತ್ರಜ್ಞರ ಮಾತುಗಳು.)

ಗುಣಾವತಾರೈರ್ವಿಶ್ವಸ್ಯ ಸರ್ಗಸ್ಥಿತ್ಯಪ್ಯಯಾತ್ಮನಃ ।
ಸೃಜತಃ ಶ್ರೀನಿವಾಸಸ್ಯಾಚಕ್ಷ್ವೋದಾರ ವಿಕ್ರಮಂ ॥೨೮॥

ವಿಶ್ವಸ್ಯ = ಜಗತ್ತಿನ; ಸರ್ಗಸ್ಥಿತಿ ಅಪ್ಯಯ ಆತ್ಮನಃ = ಸೃಷ್ಟಿ ಸ್ಥಿತಿಲಯಗಳನ್ನು ನಡೆಸುವ ಪರಮಾತ್ಮನ; ಗುಣಾವತಾರೈಃ = ತನ್ನ ಕಲ್ಯಾಣಗುಣಗಳನ್ನು ವ್ಯಕ್ತಪಡಿಸುವ ನಾನಾ ಅವತಾರಗಳಿಂದ; ಸೃಜತಃ = ತನ್ನನ್ನು ತಾನು ವ್ಯಕ್ತಗೊಳಿಸಿಕೊಳ್ಳುವ; ಶ್ರೀನಿವಾಸಸ್ಯ = ಪ್ರಕೃತಿಯ ಯಜಮಾನಿಯೂ, ನಿತ್ಯಸಹಚಾರಿಣಿಯೂ ಆದ ಲಕ್ಷ್ಮೀದೇವಿಗೆ ಆಶ್ರಯನಾದವನ; ಉದಾರವಿಕ್ರಮಂ = ಮಹಾಮಹಿಮೆಗಳನ್ನು; ಆಚಕ್ಷ್ವ = ವಿಸ್ತಾರವಾಗಿ ಹೇಳಿರಿ.

(ಸೃಷ್ಟಿಯ ವಿವರಗಳನ್ನೂ, ಸೃಷ್ಟಿಕರ್ತನ ಚರ್ಯೆಗಳನ್ನೂ ಚೆನ್ನಾಗಿ ತಿಳಿಯುವುದರಿಂದ ಸುಖದುಃಖಾತ್ಮಕವಾದ ಪ್ರಪಂಚದ ಸೃಷ್ಟಿಯ ಮರ್ಮವು ಸ್ಪಷ್ಟವಾಗುವುದು ಎಂಬ ಕಾರಣದಿಂದಲೇ ವಿದುರರು ಮೈತ್ರೇಯರನ್ನು ಪ್ರಶ್ನೆಮಾಡಿದ್ದಾರೆ.)

ವರ್ಣಾಶ್ರಮ ವಿಭಾಗಾಂಶ್ಚರೂಪಶೀಲಸ್ವಭಾವತಃ ।
ಋಷೀಣಾಂ ಜನ್ಮಕರ್ಮಾಣಿ ವೇದಸ್ಯಚ ವಿಕರ್ಷಣಂ ॥
ಯಜ್ಞಸ್ಯಚ ವಿತಾನಾನಿ ಯೋಗಸ್ಯ ಚ ಪಥಃ ಪ್ರಭೋ ॥೨೯॥

ನೈಷ್ಕರ್ಮ್ಯಸ್ಯ ಚ ಸಾಂಖ್ಯಸ್ಯ ತಂತ್ರಂವಾ ಭಗವತ್ಸ್ಮೃತಂ ।
ಪಾಷಂಡವಥ ವೈಷಮ್ಯಂ ಪ್ರತಿಲೋಮ ನಿವೇಶನಂ ॥೩೦॥

ಜೀವಸ್ಯಗತಯೋಯಾಶ್ಚ ಯಾವತೀರ್ಗುಣ ಕರ್ಮಜಾಃ ।
ಧರ್ಮಾರ್ಥ ಕಾಮಮೋಕ್ಷಾಣಾಂ ನಿಮಿತ್ತಾನ್ಯವಿರೋಧತಃ ॥೩೧॥

ವಾರ್ತಾಯಾ ದಂಡನೀತೇಶ್ಚ ಶ್ರುತಸ್ಯಚ ವಿಧಿಂ ಪೃಥಕ್ ।
ಶ್ರಾದ್ಧಸ್ಯಚ ವಿಧಿಂಬ್ರಹ್ಮನ್ ಪಿತೃಣಾಂ ಸರ್ಗಮೇವಚ ॥೩೨॥

ಗ್ರಹನಕ್ಷತ್ರತಾರಾಣಾಂ ಕಾಲಾವಯವ ಸಂಸ್ಥಿತಿಂ ।
ದಾನಸ್ಯ ತಪಸೋವಾಪಿಯಚ್ಚೇಷ್ಟಾಪೂರ್ತಯೋ ಫಲಂ ॥೩೩॥

ಪ್ರವಾಸಸ್ಥಸ್ಯ ಯೋಧರ್ಮೋಯಶ್ಚಪುಂಸಉತಾಪದಿ ।
ಯೇನವಾಭಗವಾಂಸ್ತುಷ್ಯೇದ್ಧರ್ಮಯೋನಿರ್ಜನಾರ್ದನಃ ॥೩೪॥

ಪ್ರಭೋ = ಸ್ವಾಮೀ; ರೂಪಶೀಲ ಸ್ವಭಾವತಃ = ನಿಯಮಿತ ರೂಪ, ಪರಿಸರದ ನಡತೆ ಮತ್ತು ವ್ಯಕ್ತಿಯ ಸ್ವಭಾವಗಳಿಗೆ ಅನುಗುಣವಾಗಿ; ವರ್ಣಾಶ್ರಮ ವಿಭಾಗಾನ್ ಚ = ನಾಲ್ಕು ವರ್ಣಗಳ ಮತ್ತು ನಾಲ್ಕು ಆಶ್ರಮಗಳ ವಿಭಾಗ ವಿಚಾರಗಳನ್ನೂ; ಋಷಿಣಾಂ = ಜ್ಞಾನಸಂಪನ್ನರಾದ ಋಷಿಗಳ; ಜನ್ಮ ಕರ್ಮಾಣಿ = ಜನನ ಮತ್ತು ಜೀವನದ ರೀತಿಗಳನ್ನೂ; ಚ = ಮತ್ತು; ವೇದಸ್ಯ ವಿಕರ್ಷಣಂ = ವೇದವಿದ್ಯೆಯ ವಿಸ್ತರಣೆಯನ್ನೂ; ಚ = ಮತ್ತು; ಯಜ್ಞಸ್ಯ ವಿತಾನಾನಿ = ಯಜ್ಞಾಚರಣೆಗಳ ಬಗೆಗಳನ್ನೂ; 'ಚ = ಮತ್ತು; ಯೋಗಸ್ಯ ಪಥಃ = ಯೋಗಾಭ್ಯಾಸದಿಂದ ಆತ್ಮದರ್ಶನವಾಗುವ ವಿಧಾನವನ್ನೂ; ವಾ = ಅಲ್ಲದೆ; ನೈಷ್ಕರ್ಮ್ಯಸ್ಯ = ನಿಷ್ಕಾಮ ಕರ್ಮದಿಂದ ಸಿದ್ಧಿಯನ್ನು ಪಡೆಯುವ; ಸಾಂಖ್ಯಸ್ಯ = ಜ್ಞಾನಮಾರ್ಗದ; ಭಗವತ್ಸ್ಮೃತಂ = ಭಗವಂತನಿಂದಲೇ ಪ್ರಣೀತಾದ; ತಂತ್ರಂ = ಜ್ಞಾನ ಸಾಧನಗಳನ್ನೂ; ಪಾಷಂಡ ಪಥ ವೈಷಮ್ಯಂ = ಪಾಷಂಡಿಗಳ ವಿಷಮಮಾರ್ಗಾನುಸರಣೆಯ ಉತ್ಪತ್ತಿ ವಿಷಯವನ್ನೂ; ಪ್ರತಿಲೋಮನಿವೇಶನಂ = ಉತ್ತಮ ವರ್ಗದ ಸ್ತ್ರೀಯರಲ್ಲಿ ಕೆಳಗಿನ ವರ್ಗಗಳ ಪತಿಗಳಿಂದ ಉಂಟಾಗುವ ಸಂತಾನಗಳ ವಿಷಯವನ್ನೂ; ಗುಣಕರ್ಮಜಾಃ = ಸ್ವಾಭಾವಿಕಗುಣ ಮತ್ತು ಅನುಭವಿಸಲೇಬೇಕಾದ ಕರ್ಮಗಳ ಕಾರಣದಿಂದ ಸಂಭವಿಸುವ; ಜೀವಸ್ಯಗತಯಃ = ಜೀವರ ಸಾಧನೆಗಳ ವಿಶೇಷಗಳು; ಯಾಃ = ಯಾವುವು; ಚ = ಮತ್ತು; ಯಾವತೀಃ = ಯಾವ ಯಾವ ಜನ್ಮಗಳಿಂದ ಪರಿಪೂರ್ತಿಹೊಂದತಕ್ಕವು; ಅವಿರೋಧಃ = ಪರಸ್ಪರ ವಿರುದ್ಧಗಳಾಗದಂತೆ; ಧರ್ಮ ಅರ್ಥ ಕಾಮ ಮೋಕ್ಷಾಣಾಂ ನಿಮಿತ್ತಾನಿ = ಧರ್ಮಾಚರಣೆ, ಅರ್ಥ ಸಂಗ್ರಹ ಮತ್ತು ವಿನಿಯೋಗ ಇಷ್ಟಾ ಪೂರ್ತಿ ಮತ್ತು ಮುಕ್ತಿ ಸಾಧನೆ– ಇವುಗಳ; ನಿಮಿತ್ತಾನಿ = ಅನುಸರಣೆಯ ಮಾರ್ಗಗಳು; ವಾರ್ತಾಯಾಃ = ವಾಣಿಜ್ಯನಿಯಮಗಳ; ಚ = ಮತ್ತು; ದಂಡನೀತೇಃ = ಕ್ಷತ್ರಿಯಧರ್ಮದ; ಶ್ರುತಸ್ಯ ವಿಧಿಂಚ = ಶ್ರುತ್ಯುಕ್ತವಾದ ವಿಧಿಗಳನ್ನೂ; ಪೃಥಕ್ = ಬೇರೆಬೇರೆಯಾಗಿ; ಬ್ರಹ್ಮನ್ = ಬ್ರಹ್ಮಜ್ಞಾನಿಗಳಾದ ಮೈತ್ರೇಯರೇ; ಶ್ರಾದ್ಧಸ್ಯ ವಿಧಿಂಚ = ಪರಲೋಕಸೇರಿದ ಪಿತೃಗಳಿಗೆ ಮಾಡಬೇಕಾದ ಪೂಜಾವಿಧಿಗಳನ್ನೂ; ಪಿತ್ರೂಣಾಂ = ಪಿತೃದೇವತೆಗಳ; ಸರ್ಗಂ ಏವಚ = ಸೃಷ್ಟಿಯ ವಿಚಾರವನ್ನೂ; ಗ್ರಹನಕ್ಷತ್ರ ತಾರಾಣಾಂ = ಸೂರ್ಯಚಂದ್ರಾದಿಗ್ರಹಗಳ, ಅಶ್ವಿನ್ಯಾದಿ ನಕ್ಷತ್ರಗಳ ಮತ್ತು ಧ್ರುವ ಮತ್ತು ಅದಕ್ಕಿಂತಲೂ ಮೇಲೆ ಕಾಣುವ ನಕ್ಷತ್ರಗಳಂತಹ ತಾರೆಗಳ (ದೇವತಾವಿಮಾನಗಳ) ವಿಚಾರವನ್ನೂ; ಕಾಲ ಅವಯವ ಸಂಸ್ಥಿತಿಂ = ಕ್ಷಣ, ಘಳಿಗೆ ಮುಂತಾದ ಕಾಲವಿಭಾಗಗಳ ಏರ್ಪಾಡನ್ನೂ; ದಾನಸ್ಯ ತಪಸಃ ವಾ ಅಪಿ = ದಾನ ನೀಡುವ ಮತ್ತು ನಿತ್ಯಕರ್ಮಾದಿ ತಪಶ್ಚರ್ಯೆಗಳ; ಇಷ್ಟಾ = ಯೋಗಾದಿ ಕರ್ಮಗಳ;

ಪೂರ್ತಯೋಃ = ಜನೋಪಕಾರಿಗಳಾದ ತಟಾಕನಿರ್ಮಾಣ ಮೊದಲಾದ ಧರ್ಮ ಕಾರ್ಯಗಳ; ಫಲಂ = ಫಲಪ್ರಾಪ್ತಿಯ ವಿಷಯವನ್ನೂ; ಪ್ರವಾಸಸ್ಥಸ್ಯ = ಸ್ವಗ್ರಾಮವನ್ನು ಬಿಟ್ಟು ಸಂಚಾರದಲ್ಲಿರುವವನಿಗೆ; ಯಃಧರ್ಮಃ = ಧರ್ಮಾಚರಣೆಯು ಯಾವ ರೀತಿಯದು; ಉತ = ನಿಜವಾಗಿ; ಆಪದಿ = ಸಂಕಷ್ಟದ ಕಾಲದಲ್ಲಿ; ಪುಂಸಃ = ಸಾಧಕ ಪುರುಷನಿಗೆ; ಯಃಚ = ಯಾವ ಬಗೆಯ ಧರ್ಮಾಚರಣೆ ಮಾಡಬಹುದೆಂಬುದು; ಯೇನವಾ = ಅಥವಾ ಯಾವ ನಿಶ್ಚಿತ ರೀತಿಯಿಂದ; ಧರ್ಮಯೋನಿಃ = ಧರ್ಮವಿಧಿಗೆ ಜನ್ಮಸ್ಥಾನೀಯನಾದ; ಭಗವಾನ್ ಜನಾರ್ದನಃ = ಗುಣಪೂರ್ಣನಾದ, ಜನಹಿತಕಾರಿಯಾದ ಪರಮಾತ್ಮನು; ತುಷ್ಯೇತ್ = ಸುಪ್ರೀತನಾಗುವನೆಂಬುದನ್ನೂ (ಮೇ ಆಖ್ಯಾಹಿ = ನನಗೆ ತಿಳಿಸಿರಿ.)

(ಈ ಪ್ರತಿಯೊಂದರಿಂದಲೂ ಭಗವಂತನ ನಿರ್ಲಿಪ್ತತೆಯನ್ನೂ ಜೀವರ ಫಲಪ್ರಾಪ್ತಿಯನ್ನೂ ತಿಳಿಯಬಹುದೆಂಬುದು ವಿದುರರ ಆಶಯ.)

ಸಂಪ್ರಸೀದತಿವಾಯೇಷಾಮೇತದಾಖ್ಯಾಹಿಮೇನಘ ।
ಅನುವ್ರತಾನಾಂ ಶಿಷ್ಯಾಣಾಂ ಪುತ್ರಾಣಾಂಚ ದ್ವಿಜೋತ್ತಮ ॥೩೫॥
ಅನಾಪೃಷ್ಟಮಪಿಬ್ರೂಯುರ್ಗುರವೋದೀನವತ್ಸಲಾಃ ।
ತತ್ತ್ವಾನಾಂ ಭಗವಂಸ್ತೇಷಾಂ ಕತಿಧಾಪ್ರತಿಸಂಕ್ರಮಃ ॥೩೬॥

ಅನಘ = ಮಹಾಮಹಿಮರೇ; ಏಷಾಂ = ಹಿಂದೆ ಹೇಳಿದಂತೆ ಧರ್ಮಾಚರಣೆಗಳಲ್ಲಿ ನಿರತರಾದವರಿಗೆ; ಸಂಪ್ರಸೀದತಿ ವಾ = ಜನಾರ್ದನನು ಪ್ರಸನ್ನನಾಗುವನೇ, ಅಥವ ಇಲ್ಲವೇ; ಏತತ್ = ಇದನ್ನು; ಮೇ ಆಖ್ಯಾಹಿ = ನನಗೆ ಹೇಳಿರಿ; ದ್ವಿಜೋತ್ತಮ = ಬ್ರಹ್ಮಜ್ಞಾನಿವರೇಣ್ಯರೇ; ದೀನವತ್ಸಲಾಃ = ಆಶ್ರಿತರಲ್ಲಿ ವಾತ್ಸಲ್ಯವುಳ್ಳ; ಗುರವಃ = ಗುರುಗಳು; ಅನುವ್ರತನಾಂ ಶಿಷ್ಯಾಣಾಂ = ಗುರುಶುಶ್ರೂಷಾಪರರಾದ ಶಿಷ್ಯರಿಗೆ; ಅನಾಪೃಷ್ಟಂ ಅಪಿ = ಶಿಷ್ಯರು ತಾವಾಗಿ ಕೇಳಿದಿದ್ದರೂ; ತೇಷಾಂ = ಅವರಿಗೆ; ತತ್ತ್ವಾನಾಂ = ತತ್ವಗಳ ರಹಸ್ಯಗಳನ್ನು; ಬ್ರೂಯುಃ = ಹೇಳುವರಲ್ಲವೇ; ಪ್ರತಿಸಂಕ್ರಮಃ = ಪ್ರಳಯದ ವಿಧಾನವು; ಕತಿಧಾ = ಎಷ್ಟುಬಗೆಯಾದುದು?

(ಸದ್ಗುರುಗಳು ಶಿಷ್ಯರ ಸಂಶಯಗಳನ್ನೆಲ್ಲಾ ನಿವಾರಣೆ ಮಾಡುವುದಲ್ಲದೆ, ಅವಶ್ಯವಾಗಿ ಹೇಳಬೇಕಾದ ರಹಸ್ಯಗಳನ್ನೂ ತಿಳಿಸಿಕೊಡುವರು. ಅಂತಹ ರಹಸ್ಯಗಳನ್ನು ತಿಳಿಸಬೇಕೆಂದು ವಿದುರರು ಪ್ರಾರ್ಥಿಸಿದ್ದಾರೆ. ಹಿಂದೆ ಕೇಳಿದ ವಿಷಯಗಳಲ್ಲದೆ ಇನ್ನೂ ಕೇಳಬೇಕಾದುದು, ಕೇಳಲು ತೋಚದೆ ಇರುವುದು ಉಂಟೆಂಬುದನ್ನು ಸೂಚಿಸಲು, ಇಲ್ಲಿ ಪ್ರಳಯದ ಬಗೆಗಳನ್ನು ಕುರಿತು ಪ್ರಶ್ನೆಮಾಡಿದ್ದಾರೆ.)

ತತ್ರೇಮಂಕ ಉಪಾಸೀರನ್ಕಉಸ್ವಿದನು ಶೇರತೇ ।
ಪುರುಷಸ್ಯಚ ಸಂಸ್ಥಾನಂ ಸ್ವರೂಪಂವಾಪರಸ್ಯಚ ॥೩೭॥

ಜ್ಞಾನಂಚ ನೈಗಮಂಯತ್ತದ್ಗುರುಶಿಷ್ಯಪ್ರಯೋಜನಂ ।
ನಿಮಿತ್ತಾನಿಚ ತಸ್ಯೇಹ ಪ್ರೋಕ್ತಾನ್ಯನಘ ಸೂರಿಭಿಃ ॥೩೮॥

ಸ್ವತೋಜ್ಞಾನಂ ಕುತಃಪುಂಸಾಂಭಕ್ತಿರ್ವೈರಾಗ್ಯಮೇವವಾ ॥೩೯॥

ತತ್ರ = ಪ್ರಲಯಕಾಲದಲ್ಲಿ; ಇಮಂ = ಶ್ರೀಹರಿಯನ್ನು; ಕೇ = ಯಾರು; ಉಪಾಸೀರನ್ = ಪೂಜಿಸುತ್ತಿರುತ್ತಾರೆ? ಉ = ನಿಜವಾಗಿ; ಕಃ = ಯಾರು; ಅನುಸೇರತೇ = ಹೊಂದಿಕೊಂಡಿರುತ್ತಾರೆ? ಪುರುಷಸ್ಯ = ಪರಮಾತ್ಮನ, ಹಾಗೂ ಜೀವನ; ಸಂಸ್ಥಾನಂ ಚ = ಇರುವ ಬಗೆಯನ್ನು; ಚ = ಮತ್ತು; ಪರಸ್ಯ = ಭಗವಂತನ; ಸ್ವರೂಪಂ ವಾ = ನಿಜಸ್ಥಿತಿಯನ್ನೂ; ತಿಳಿಸಿರಿ. ॥೨೭॥

(ಪ್ರಳಯ ಕಾಲದಲ್ಲಿ ಜೀವಪರಮಾತ್ಮರ ಸಂಬಂಧವನ್ನೂ ಸ್ಥಿತಿಗತಿಗಳನ್ನೂ ಕುರಿತು ಪ್ರಶ್ನೆ ಮಾಡಿದ್ದಾರೆ.)

ಅನಘ = ದೋಷರಹಿತರಾದ ಮಹಾನುಭಾವರೇ; ಗುರುಶಿಷ್ಯ ಪ್ರಯೋಜನಂ = ಶಿಷ್ಯರಿಗೆ ಗುರೂಪದೇಶದಿಂದಲೇ ಲಭಿಸಬೇಕಾದ; ನೈಗಮಂ ಚ = ವೇದಗಳ ಸಂಬಂಧಿಯಾದ; ಯತ್ ತತ್ ಜ್ಞಾನಂ = ಯಾವುದೋ ಆ ತತ್ವವನ್ನೂ; ಸೂರಭಿಃ ಪ್ರೋಕ್ತಾನಿ = ಜ್ಞಾನಿಗಳಿಂದ ಉಕ್ತವಾದ; ತಸ್ಯ = ಅಂತಹ ರಹಸ್ಯಜ್ಞಾನದ; ಇಹನಿಮಿತ್ತಾನಿ ಚ = ಇಲ್ಲಿ ಕರ್ತವ್ಯದ ಪ್ರಯೋಜನವನ್ನೂ; ತಿಳಿಸಿರಿ.

(ಮಾನವರು ಎಷ್ಟೇಶ್ರಮವಹಿಸಿ ಜ್ಞಾನಸಂಪಾದನೆಯನ್ನು ಮಾಡಿದರೂ ಅದು ಜ್ಞಾನಸಾಮ್ರಾಜ್ಯದ ರೂಪುರೇಖೆಗಳನ್ನು ತಿಳಿದಂತಾಗುವುದೇ ಹೊರತು ಆ ಸಾಮ್ರಾಜ್ಯದ ಸಕಲವನ್ನೂ ತಿಳಿಯಲಾಗುವುದಿಲ್ಲ. ಹೆಚ್ಚು ಹೆಚ್ಚು ಸ್ವಾರಸ್ಯಕರಗಳಾದ ಹೆಚ್ಚು ಹೆಚ್ಚು ವಿಷಯಗಳನ್ನು ಅವರವರ ಯೋಗ್ಯತಾನುಸಾರ ಅವರವರಿಗೆ ತಕ್ಕ ಗುರುಗಳಿಂದಲೇ ತಿಳಿಯಬೇಕು. ಆ ಗುರುಗಳು ಕೇವಲ ಕಲಿತವರಲ್ಲ; ಅನುಭವಿಗಳು.) ॥೩೮॥

ಪುಂಸಾಂ = ಸಾಧಕರಾದ ಮಾನವರಿಗೆ; ಜ್ಞಾನಂ = ತಿಳಿಯಲರ್ಹವಾದ ಜ್ಞಾನವೂ; ಭಕ್ತಿರ್ವೈರಾಗ್ಯಂ ಏವಚ = ಭಗವದ್ಭಕ್ತಿಯೂ ಅನ್ಯ ವಿಷಯಗಳಲ್ಲಿ ವಿರಕ್ತಿಯೂ; ಸ್ವತಃಕುತಃ = ಗುರುಗಳ ಸಹಾಯವಿಲ್ಲದೆ; ಕುತಃ = ಎಲ್ಲಿಂದ ಒದಗೀತು!

(ಇಂದ್ರಿಯ ಜನ್ಯಜ್ಞಾನಕ್ಕಿಂತ ಹೆಚ್ಚಾಗಿ ಗ್ರಂಥಾದಿಗಳಿಂದ ತಿಳಿಯಬಹುದು; ಆದರೆ ಗ್ರಂಥಸ್ಥ ವಿಷಯಗಳಲ್ಲಿನ ಜಟಿಲತೆಯನ್ನು ಪರಿಹರಿಸುವುದಕ್ಕೂ, ಗ್ರಂಥಸ್ಥವಲ್ಲದ ವಿಷಯಗಳನ್ನು ತಿಳಿಸುವುದಕ್ಕೂ ಸದ್ಗುರುಗಳ ಅನುಗ್ರಹವೇ ಬೇಕು.) ॥೩೯॥

ಏತನ್ಮೇ ಪೃಚ್ಛತಃ ಪ್ರಶ್ನಾನ್ ಹರೇಃ ಕರ್ಮವಿವಿತ್ಸಯಾ ।
ಬ್ರೂಹಿಮೇಂಧಸ್ಯ ಮಿತ್ರತ್ವಾದಜಯಾ ನಷ್ಟಚಕ್ಷುಷಃ ॥೪೦॥

ಹರೇಃ ಕರ್ಮ ವಿವಿತ್ಸಯಾ = ಜಗತ್ತಿನಲ್ಲಿ ಸಕಲ ಕರ್ಮಗಳನ್ನು ತಾನೇ ಮಾಡುತ್ತಿದ್ದರೂ ನಿರ್ಲಿಪ್ತನಾಗಿರುವ ಶ್ರೀಹರಿಯ ಕರ್ಮಾಚರಣೆಯ ಮರ್ಮವನ್ನು ತಿಳಿಯುವುದಕ್ಕಾಗಿ; ಅಜಯಾ = ಪ್ರಕೃತಿ ಬಂಧನದಿಂದ; ನಷ್ಟಚೇತಸಃ ಅಂಧಸ್ಯ = ಕುಂಠಿತವಾದ ಜ್ಞಾನ ನೇತ್ರವುಳ್ಳ; ಪ್ರಶ್ನಾನ್ ಪೃಚ್ಛತಃ = ತಿಳಿಯಲಿಚ್ಛಿಸಿ ಪ್ರಶ್ನೆಗಳನ್ನು ಕೇಳುತ್ತಿರುವ; ಮೇ = ನನಗೆ; ಮಿತ್ರತ್ವಾತ್ = ನೀವು ಮಿತ್ರ ಪುತ್ರರೆಂಬ ಸಾರ್ಥಕ ನಾಮವುಳ್ಳವರಾದುದರಿಂದ; ಏತತ್ = ಪ್ರಶ್ನೆಗಳಿಗೆ ಉತ್ತರಗಳನ್ನು; ಬ್ರೂಹಿ = ದಯಮಾಡಿ ಹೇಳಿರಿ.

(ಮಿತ್ರ ಎಂದರೆ ಸೂರ್ಯ. ಕಣ್ಣುಕಾಣದಂತೆ ಮುಸುಕಿದ ಕತ್ತಲೆಯನ್ನು ಕಳೆದು ಜ್ಞಾನದಾನ ಮಾಡುವವನು ಸೂರ್ಯ. ಕಣ್ಣಿನ ಶಕ್ತಿಯಲ್ಲಿ ತಾನಿದ್ದು, ಪದಾರ್ಥಗಳ ಮೇಲೆ ಬೆಳಕನ್ನು ಬೀರಿ, ಜ್ಞಾನವನ್ನು ಆ ಸೂರ್ಯನು ಉಂಟುಮಾಡುತ್ತಾನೆ. ಅದರಂತೆ ಜ್ಞಾನಿಗಳಾದ ಗುರುಗಳು ಸಹಾಯ ಮಾಡುತ್ತಾರೆ, ವಿಷಯಗಳನ್ನು ವಿವರಿಸುವುದಲ್ಲದೆ, ಅವರ ಮನಸ್ಸಿಗೂ ನಮ್ಮ ಮನಸ್ಸಿಗೂ ನೇರ ಸಂಬಂಧವನ್ನು ಕಲ್ಪಿಸಿ (Rapport) ಉಪಕರಿಸುತ್ತಾರೆ. ಇಲ್ಲಿ ಸೂರ್ಯನಂತೆ ಮೈತ್ರೇಯನಾಮಕ ಗುರುಗಳು.)

ಸರ್ವೇವೇದಾಶ್ಚ ಯಜ್ಞಾಶ್ಚ ತಪೋದಾನಾನಿಚಾನಘ ।
ಜೀವಾಭಯ ಪ್ರದಾನಸ್ಯ ನಕುರ್ವೀರನ್ಕಲಾಮಪಿ ॥೪೧॥

ಅನಘ = ನಿರ್ದುಷ್ಟ ಜ್ಞಾನ ಘನರೇ; ಸರ್ವೇವೇದಾಃಚ = ಕಲಿತ ಎಲ್ಲಾ ವೇದಗಳೂ; ಯಜ್ಞಾಃ ಚ = ಆಚರಿಸಿದ ಯಜ್ಞಗಳೂ; ತಪೋದಾನಾನಿ ಚ = ತಪಶ್ಚರ್ಯೆಗಳು ಮತ್ತು ದಾನ ಧರ್ಮಗಳು; ಜೀವಾಭಯ ಪ್ರದಾನಸ್ಯ = ಜೀವನಿಗಿರುವ ಸಂಸಾರ ಭಯವನ್ನು ಕಳೆಯುವಂತೆ ಜ್ಞಾನೋಪದೇಶ ಮಾಡುವುದರ; ಕಲಾಂ ಅಪಿ = ಅತಿಸ್ವಲ್ಪದಷ್ಟು ಉಪಕಾರವನ್ನೂ; ನ ಕುರ್ವೀರನ್ = ಮಾಡಲಾರವು, ಅಲ್ಲವೆ!

(ಜ್ಞಾನಕ್ಕೆ ಕರ್ಮವು ಸಹಾಯಕವೇ ಹೊರತು ಅದೇ ನಿಜವಾದ ಪ್ರಯೋಜನ ಉಂಟುಮಾಡುವುದಲ್ಲ. ಜನಸಾಮಾನ್ಯರು ಇದನ್ನರಿಯದೆ ಕರ್ಮ ಕಾಂಡದಲ್ಲಿಯೇ ಜನ್ಮವನ್ನೆಲ್ಲಾ ಕಳೆದು ಬಿಡುತ್ತಾರೆ. ವಿದುರರಂತಹ ಬುದ್ಧಿವಂತರು, ಸದ್ಗುರುಗಳಿಂದ ಜ್ಞಾನ ಲಾಭ ಹೊಂದಿ ಭಕ್ತಿ ವೈರಾಗ್ಯಗಳನ್ನು ಹೆಚ್ಚಿಸಿಕೊಳ್ಳುವರೇ ಹೊರತು ಕರ್ಮಗಳ ಆಚರಣೆಯಲ್ಲಿಯೇ ಕಾಲ ಕಳೆಯುವುದಿಲ್ಲ. ಕರ್ಮಗಳಲ್ಲಿ ನಿತ್ಯಕರ್ಮಗಳು, ನೈಮಿತ್ತಿಕ

ಕರ್ಮಗಳು, ಕಾಮ್ಯ ಕರ್ಮಗಳು ಎಂದು ಮೂರು ವಿಧ. ಮೊದಮೊದಲು ವೇದಾದಿಗಳಲ್ಲಿ ನಂಬಿಕೆಯುಂಟಾಗಿ ಭಗವಂತನ ಕಡೆಗೆ ಮನಸ್ಸು ತಿರುಗುವಂತಾಗಲು ಕಾಮ್ಯ ಕರ್ಮಗಳು ಆವಶ್ಯಕ. ಆದರೆ ಬರಬರುತ್ತಾ ಅವುಗಳನ್ನು ಕಡಿಮೆ ಮಾಡಿ, ಕಡೆಗೆ ಕಾಮ್ಯ ಕರ್ಮಗಳನ್ನು ಬಿಟ್ಟೇಬಿಡಬೇಕು; ನಿತ್ಯ ನೈಮಿತ್ತಿಕಗಳು ದೇಹ ಶುದ್ಧಿ, ಮನಶ್ಶುದ್ಧಿಗಳಿಗೆ ಆವಶ್ಯಕ. ಮನೋದಾರ್ಢ್ಯ ಕುದುರಿದಂತೆಲ್ಲಾ, ಜ್ಞಾನಪರಿಪಾಕಉಂಟಾದಂತೆಲ್ಲಾ ಆ ಕರ್ಮಗಳನ್ನು ಹ್ರಸ್ವಗೊಳಿಸಬಹುದು. ಉಳಿಯಬೇಕಾದುದು ಜ್ಞಾನ ವೈರಾಗ್ಯಗಳಿಂದ ದೃಢವಾದ ಭಕ್ತಿ; ತನ್ಮೂಲಕ ಭಗವಂತನೊಡನೆ ನಿಕಟ ಬಾಂಧವ್ಯ. ಕಡೆಗೆ ಮುಕ್ತಿಯಲ್ಲಿ ಉಳಿಯುವುದೂ ಅದೇ!)

ಶ್ರೀ ಶುಕಉವಾಚ :- ಶ್ರೀ ಶುಕಾಚಾರ್ಯರೆಂದರು.

**ಸ ಇತ್ಥಮಾಪೃಷ್ಟ ಪುರಾಣ ಕಲ್ಪಃ ಕುರು ಪ್ರಧಾನೇನ ಮುನಿ ಪ್ರಧಾನಃ।**
**ಪ್ರವೃದ್ಧ ಹರ್ಷೋ ಭಗವತ್ಕಥಾಯಾಂ ಸಂಚೋದಿತಸ್ತಂ ಪ್ರಹಸನ್ನಿವಾಹ ॥೪೨॥**

ಪುರಾಣ ಕಲ್ಪಃ = ವೇದಾರ್ಥದ್ಯೋತಕಗಳಾದ ಪುರಾಣಫಲಗಳ ಕಲ್ಪವೃಕ್ಷಸದೃಶರಾದ; ಮುನಿಪ್ರಧಾನಃ = ಮನನಶೀಲರಲ್ಲಿ ಶ್ರೇಷ್ಠರಾದ; ಸಃ = ಮೈತ್ರೇಯರು; ಕುರುಪ್ರಧಾನೇನ = ಕುರುವಂಶ ತಿಲಕರಾದ ವಿದುರರಿಂದ; ಇತ್ಥಂ ಆಪೃಷ್ಟಃ = ಹಿಂದೆ ಹೇಳಿದ ರೀತಿಯಲ್ಲಿ ಪ್ರಶ್ನೆಮಾಡಲ್ಪಟ್ಟವರಾಗಿ; ಭಗವತ್ಕಥಾಯಾಂ ಸಂಚೋದಿತಃ = ಭಗವಂತನ ಕಥೆಯನ್ನು ಹೇಳುವಂತೆ ಪ್ರಾರ್ಥಿತರಾಗಿ; ಪ್ರವೃದ್ಧ ಹರ್ಷಃ = ಆನಂದ ಭರಿತರಾಗಿ; ಪ್ರಹಸನ್ನಿವ = ಸಂತೋಷದ ಮುಗುಳ್ನಗೆಯಿಂದ ಕೂಡಿದವರಾಗಿ; ತಂ = ವಿದುರರನ್ನು ಕುರಿತು; ಪ್ರಾಹ = ಹೇಳಲಾರಂಭಿಸಿದರು.

(ಹೇಳುವ ಸಾಮರ್ಥ್ಯವುಳ್ಳ ಜ್ಞಾನಿಗಳಿದ್ದರೂ ಕೇಳಬೇಕೆಂಬ ಆಸೆಯಿಂದ ಮುಂದು ಬರುವವರಿಲ್ಲದಿದ್ದರೆ ಅವರ ಮನಸ್ಸಿಗೆ ಒಂದು ಬಗೆಯ ಮುಜಗರವಾಗುತ್ತಿರುತ್ತದೆ. ತಿಳಿದವರಿಗೆ ಎರಡು ಬಗೆಯ ಕರ್ತವ್ಯವುಂಟು. ಒಂದು,ತಾವು ತಿಳಿದುದನ್ನು ಆಲೋಚನೆಯಿಂದ ಭದ್ರಪಡಿಸಿಕೊಳ್ಳುವುದು; ಇನ್ನೊಂದು, ಯೋಗ್ಯರಾದ ಶಿಷ್ಯರಿಗೆ ಉಪದೇಶಮಾಡಿ ಭಗವದರ್ಪಣ ಮಾಡುವುದು. ಈ ಎರಡನೆಯ ಬಗೆಯ ಅವಕಾಶ ದೊರೆತಾಗ ಅವರಿಗೆ ಬಹು ಸಂತೋಷವಾಗುತ್ತದೆ. ಮೈತ್ರೇಯ ವಿದುರರ ಸಮಾಗಮವು ಇದಕ್ಕೆ ಒಳ್ಳೆಯ ನಿದರ್ಶನ. ಜ್ಞಾನೇಚ್ಛುಗಳಾಗಿ ಬಂದ ಶಿಷ್ಯರಿಂದ ತಮಗೊಂದು ಬಗೆಯ ಉಪಕಾರವಾಯಿತೆಂದೇ ಸದ್ಗುರುಗಳು ಭಾವಿಸುತ್ತಾರೆ. ಹಾಗೆ ಬಂದ ಶಿಷ್ಯರನ್ನು "ಉದ್ಬೋಧಕ ಸಾಮಗ್ರಿ" ಎಂದು ಅವರು ಭಾವಿಸುತ್ತಾರೆ. ಏಕೆಂದರೆ, ಶಿಷ್ಯರಿಗೆ ಹೇಳುವ ನೆವದಲ್ಲಿ ಅವರಲ್ಲಿನ ಭಗವಚ್ಚಿಂತನೆಯು ತೀವ್ರವಾಗುತ್ತದೆ;

ವಿಸ್ತಾರವಾಗುತ್ತದೆ. "ನನ್ನಲ್ಲಿ ನೀವಿಷ್ಟು ಆದರವನ್ನು ವ್ಯಕ್ತಗೊಳಿಸುವುದು ಆಶ್ಚರ್ಯವೆನಿಸುತ್ತದೆ" ಎಂದು ದಡ್ಡಶಿಷ್ಯನೊಬ್ಬನು ಬಿನ್ನೈಸಿಕೊಂಡಾಗ, "ನೀನು ಉದ್ಬೋಧಕ ಸಾಮಗ್ರಿ" ಎಂದು ಆದರದಿಂದ ಹೇಳಿದರು, ನಿಗೂಢಜ್ಞಾನಿವರೇಣ್ಯರೂ, ಅನ್ಯವಾರ್ತೆಗಳನ್ನು ಕುರಿತು ಮಾತಾಡದೆ ಮೂಗರಂತಿದ್ದವರೂ, ಆದ ಮುಳಬಾಗಿಲು ಶ್ರೀ ಶ್ರೀಪಾದರಾಜ ಮಠದ ಪೀಠಾಧಿಪತಿಗಳಾಗಿದ್ದ ಶ್ರೀದಯಾನಿಧಿ ತೀರ್ಥ ಶ್ರೀಪಾದಂಗಳವರು.)

ಎಂಟನೆಯ ಅಧ್ಯಾಯ ಮುಗಿಯಿತು.

॥ಶ್ರೀಕೃಷ್ಣಾರ್ಪಣಮಸ್ತು॥

---

# ಶ್ರೀಮದ್ಭಾಗವತ – ತೃತೀಯ ಸ್ಕಂಧ
# ಒಂಭತ್ತನೆಯ ಅಧ್ಯಾಯ ಪ್ರಾರಂಭ

ಮೈತ್ರೇಯ ಉವಾಚಃ – ಮೈತ್ರೇಯರು ಹೇಳಲಾರಂಭಿಸಿದರು.

**ಸತ್ಸೇವನೀಯೋಬತಪೂರುವಂಶೋಯಲ್ಲೋಕಪಾಲೋಭಗವತ್ಪ್ರಧಾನಃ।**
**ಬಭೂವಿಥೇಹಾಜಿತ ಕೀರ್ತಿಮಾಲಾಂ ಪದೇ ಪದೇ ನೂತನಯಸ್ಯ**
**ಭೀಕ್ಷ್ಣಂ ॥೧॥**

ಪೂರುವಂಶಃ = ಪುರುರಾಜನ ವಂಶವು; ಸತ್ಸೇವನೀಯಃ ಬತ = ನಿಜವಾಗಿ ಸುಜೀವಿಗಳ ಪರಂಪರೆಗೆ ಆಶ್ರಯವಾದುದು; ಯತ್ = ಯಾವ ಕಾರಣದಿಂದ ಎಂದರೆ; ಇಹ = ಈ ಲೋಕದಲ್ಲಿ; ಭಗವತ್ಪ್ರಧಾನಃ = ಸದಾಭಗವಚ್ಚಿಂತಾಪರನೂ, ಭಾಗವತ ಶ್ರೇಷ್ಠನೂ ಆದ; ಲೋಕಪಾಲಃ = ಲೋಕ ರಕ್ಷಕನಾದ ನೀನು; ಬಭೂವಿಥ = ಆ ಪವಿತ್ರ ವಂಶದಲ್ಲಿ ಜನ್ಮವನ್ನು ಪಡೆದವನಾಗಿರುವಿ; ಅಜಿತ ಕೀರ್ತಿಮಾಲಾಂ = ಸರ್ವೇಶ್ವರನ ಕೀರ್ತಿರೂಪವಾದ ಪುಷ್ಪಮಾಲೆಯನ್ನು; ಅಭೀಷ್ಣಂ = ಮೇಲಿಂದ ಮೇಲೆ; ನೂತನಯಸಿ = ಹೊಸಹೊಸದನ್ನಾಗಿ ಸಮರ್ಪಿಸುತ್ತಿರುವಿ.

(ವಿದುರರು ರಾಜ್ಯವನ್ನಾಳದಿದ್ದರೂ ರಾಜಕುಲದಲ್ಲಿ ಬಂದವರು; ಅಲ್ಲದೆ ತಮ್ಮ ಉಪದೇಶವಾಣಿಯಿಂದಲೂ, ಆದರ್ಶಜೀವನದಿಂದಲೂ ಜಗತ್ತನ್ನು ರಾಜರಿಗಿಂತ ಚೆನ್ನಾಗಿ ಪಾಲಿಸಿದವರು. ಆದುದರಿಂದ ಅವರು ಲೋಕಪಾಲಕರು. ಭಗವಂತನಿಗೆ ನಿತ್ಯನಿತ್ಯವೂ ಹೊಸಹೊಸದಾದ ಹೊಸಹೊಸಬಗೆಯ ಹೂಮಾಲೆಗಳನ್ನರ್ಪಿಸುವಂತೆ ಅವರು ಭಗವಂತನ ಆ ನಿತ್ಯ ನೂತನವೆನಿಸುವ ಚರಿತ್ರೆಗಳನ್ನು ಹೊಸ ಹೊಸದಾದ, ರೀತಿಯಲ್ಲಿ ಚಿಂತಿಸಿ, ಬೋಧಿಸಿದವರು. ಮೈತ್ರೇಯರು ವಿದುರರಿಗೆ ಭಗವನ್ಮಹಿಮೆಯನ್ನು ಕುರಿತು ಹೇಳುವ ಮೊದಲು, ಅದನ್ನು ಕೇಳಿ ಸಂತೋಷಿಸುವ ಅರ್ಹತೆಯು ವಿದುರರಲ್ಲಿದೆಯೆಂದು ಸಂತೋಷದಿಂದ ಪ್ರಶಂಸೆ ಮಾಡಿರುವರು. ಹಾಗೆ ಮಾಡುವಾಗ, ಅವರ ಆ ಅರ್ಹತೆಗೆ ಅವರು ಜನ್ಮತಾಳಿದವಂಶದ ಹಿರಿಮೆಯನ್ನು ವಿಶೇಷವಾಗಿ ಹೊಗಳಿದ್ದಾರೆ. ಶ್ರೀಅಕೃಷ್ಣನು ಜನ್ಮತಾಳಿದುದೂ ಅದೇ ವಂಶದ ಕುಡಿಯಾಗಿ ಅಲ್ಲವೆ!)

ಸೋಽಹಂ ನೃಣಾಂಕ್ಷುಲ್ಲಸುಖಾಯದುಃಖಂ ಮಹದ್ಗತಾನಾಂ
ವಿರಮಾಯತುಭ್ಯಂ ।
ಪ್ರವರ್ತಯೇ ಭಾಗವತಂ ಪುರಾಣಂ ಯದಾಹ ಸಾಕ್ಷಾದ್ಭಗವಾ
ನೃಷೀಣಾಂ ॥೨॥

ಕ್ಷುಲ್ಲಸುಖಾಯ = ಅಲ್ಪ ಸುಖದಾಸೆಯಿಂದ; ಮಹತ್ ದುಃಖಂ ಗತಾನಾಂ = ಮಹಾದುಃಖಗಳಿಗೆ ಈಡಾಗಿರುವ; ನೃಣಾಂ = ಮಾನವರ; ವಿರಮಾಯ = ದುಃಖನಿವಾರಣೆಗಾಗಿ; ಸಃ ಅಹಂ = ನಿನಗೆ ಉಪದೇಶಮಾಡಬೇಕೆಂದು ಶ್ರೀಕೃಷ್ಣನಿಂದ ಆದಿಷ್ಟನಾಗಿ, ನಿನ್ನಿಂದ ಪ್ರಾರ್ಥಿತನಾದ ನಾನು; ಋಷೀಣಾಂ = ಸನಕಾದಿ ಋಷಿಗಳಿಗೆ; ಸಾಕ್ಷಾತ್ ಭಗವಾನ್ = ನೇರವಾಗಿ ಸಂಕರ್ಷಣ ರೂಪಿಯಾದ ಭಗವಂತನೇ; ಯತ್ ಆಹ = ಯಾವುದನ್ನು ಉಪದೇಶಮಾಡಿದನೋ, ಅಂತಹ; ಭಾಗವತಂ ಪುರಾಣಂ = ಭಾಗವತ್ಕಥಾ ಪುಂಜರಂಜಿತವಾದ ಭಾಗವತ ಪುರಾಣವನ್ನು; ತುಭ್ಯಂ = ನಿನ್ನ ಸಲುವಾಗಿ; ಪ್ರವರ್ತಯೇ = ವಿವರಿಸುತ್ತೇನೆ.

(ಸುಖಬೇಕು, ದುಃಖಬೇಡ ಎನ್ನುವ ಜನ, ದುಃಖನಿವಾರಣೆ ಮತ್ತು ಸುಖಸಂಪಾದನೆಯ ಮಾರ್ಗವನ್ನರಿಯದೆ ತೊಳಲುತ್ತಿರುವರು. ಈ ಜಗತ್ತಿನಲ್ಲಿ ಕರ್ಮವಶದಿಂದ ಜನ್ಮ ತಾಳಿಬಂದ ಸುಜೀವಿಗಳ ಹಣೆಬರಹವೂ ಅದೇ ಆಗಿದೆ. ಅಂತಹವರ ಉದ್ಧಾರಕ್ಕಾಗಿ ಶ್ರೀಮದ್ಭಾಗವತ ಕಥಾವಾಹಿನಿಯು ಸೃಷ್ಟಿಯ ಆರಂಭದಿಂದಲೂ ಹರಿದು ಬರುತ್ತಿದೆ. ಶ್ರೀಬ್ರಹ್ಮ ದೇವರಿಗೆ ಭಗವಂತನಿಂದ ಉಪದೇಶವಾದ ಚತುಃಶ್ಲೋಕೀ ಭಾಗವತದ ವಿಸ್ತಾರವು ನಾರದರ ಮುಖಾಂತರ ಆದುದು ಒಂದು ವಾಹಿನಿ. ಶ್ರೀ ಸಂಕರ್ಷಣ ರೂಪೀ ಭಗವಂತನಿಂದ ಉಪದಿಷ್ಟರಾದ ಸನಕಾದಿಗಳ ಕಡೆಯಿಂದ ಹರಿದು ಬರುತ್ತಿರುವುದು ಇನ್ನೊಂದು ವಾಹಿನಿ. ಈ ಎರಡನೆಯದು ಮೈತ್ರೇಯರ ಮುಖಾಂತರ ಹೊರಬಂದಿದೆ.)

ಆಸೀನ ಮುರ್ವ್ಯಾಂಭಗವಂತ ಮಾದ್ಯಂ ಸಂಕರ್ಷಣಂ ದೇವಮಕುಂಠ
ಸತ್ವಂ ।
ವಿವಿತ್ಸವಸ್ತತ್ವಮತಃ ಪರಸ್ಯ ಕುಮಾರಮುಖ್ಯಾಮುನಯೋಽನ್ವಪೃಚ್ಛನ್
॥೩॥

ಉರ್ವ್ಯಾಂ = ಪಾತಾಳಲೋಕದ ಭೂಭಾಗದಲ್ಲಿ; ಆಸೀನಂ = ಕುಳಿತಿದ್ದ; ಅಕುಂಠಸತ್ವಂ = ಕುಂದದೆ ಏಕಪ್ರಕಾರವಾದ ಬಲಜ್ಞಾನಗಳುಳ್ಳ; ಆದ್ಯಂ = ಸನಕಾದಿಗಳಿಗಿಂತಲೂ ಮೊದಲು ಜನ್ಮಪಡೆದ; ಭಗವಂತಂ = ಕಲ್ಯಾಣ

ಗುಣವಿಶಿಷ್ಟನಾದ; ಸಂಕರ್ಷಣಂ = ಸಂಕರ್ಷನನ್ನು; ಅತಃ = ಅವನಿಂದ; ಪರಸ್ಯತತ್ವಂ = ಭಗವಂತನ ನಿಜತತ್ವವನ್ನು; ವಿವಿತ್ಸವಃ = ತಿಳಿಯಲಿಚ್ಛೆಯುಳ್ಳವರಾದ; ಕುಮಾರ ಮುಖ್ಯಾಃ ಮುನಯಃ = ಸನತ್ಕುಮಾರನನ್ನು ಪ್ರಮುಖನಾಗಿ ಉಳ್ಳ ಮುನಿಗಳು; ಅನ್ವಪೃಚ್ಛನ್ = ಪ್ರಶ್ನೆ ಮಾಡಿದರು.

(ಪಾತಾಳಲೋಕದ ಕೆಳಗೆ ಅಷ್ಟದಿಗ್ಗಜಗಳಿರುವುವು. ಅವುಗಳು ನಿಂತ ಭೂಮಿಯೂ ಸೇರಿ ಭೂಲೋಕದ ಭಾರವನ್ನೆಲ್ಲಾ ತನ್ನ ಒಂದು ಹೆಡೆಯ ಮೇಲೆ ಹೊತ್ತಿರುವುದು ಆದಿಶೇಷ. ಆತನಿಗೆ ಸಂಕರ್ಷಣನೆಂದೂ ಹೆಸರು. ಏಕೆಂದರೆ, ಆದಿಶೇಷನಿಗೆ ಬಿಂಬರೂಪಿಯಾದವನು ಸಂಕರ್ಷಣಮೂರ್ತಿ. ಈ ಸಂಕರ್ಷನು ಒಂದು ರೂಪದಿಂದ ಪಾತಾಳಲೋಕದಲ್ಲಿಯೂ ಇದ್ದು ಅಲ್ಲಿನ ನಿವಾಸಿಗಳಿಂದ ಪೂಜೆಗೊಳ್ಳುತ್ತಿದ್ದಾನೆ. ಆದುದರಿಂದ ಸನಕಾದಿಗಳಿಗೆ ಉಪದೇಶ ನೀಡಿದವನು ಶೇಷದೇವರಂತರ್ಯಾಮಿಯಾದ ಸಂಕರ್ಷಮೂರ್ತಿ ಎಂದು ತಿಳಿಯಬೇಕು. ಇವನೇ ಪ್ರಳಯ ಕಾಲದಲ್ಲಿ ಸಂಕರ್ಷಣಾಗ್ನಿಯಿಂದ ಎಲ್ಲವನ್ನೂ ದಹಿಸಿ ಬಿಡುವವನು.)

> ಸ್ವಮೇವಧಿಷ್ಣ್ಯಂ ಬಹುಮಾನಯಂತಂ
> ಯಂವಾಸುದೇವಾಭಿದಮಾಮನಂತಿ ।
> ಪ್ರತ್ಯಕ್ಧೃತಾಕ್ಷಾಂಬುಜ ಕೋಶಮೀಷದುನ್ಮೀಲಯಂತಂ
> ವಿಬುಧೋದಯಾಯ ॥೪॥

ಯಂ = ಯಾರನ್ನು; ವಾಸುದೇವಾಭಿದಂ ಅಮನಂತಿ = ವಾಸುದೇವನೆಂದು ಕರೆಯುವರೋ ಅಂತಹ; ಸ್ವಧಿಷ್ಣ್ಯಂ ಏವ = ತನಗೆ ಆಶ್ರಯನಾದವನನ್ನೇ; ಬಹುಮಾನಯಂತಂ = ಪೂಜಿಸುತ್ತಿರುವ; ಪ್ರತ್ಯಕ್‌ಧೃತ = ಸಾವಿರ ಹೆಡೆಗಳಲ್ಲಿಯೂ ಬೇರೆಬೇರೆಯಾಗಿರುವ; ಅಕ್ಷಾಂಬುಜ ಕೋಶಂ = ಕಣ್ಣುಗಳೆಂಬ ಕಮಲದ ಮೊಗ್ಗುಗಳನ್ನು; ವಿಬುಧೋದಯಾಯ = ಜ್ಞಾನಿನೇಚ್ಛುಗಳ ಅಭ್ಯುದಯಕ್ಕಾಗಿ; ಈಷತ್ ಉನ್ಮೀಲಯಂತಂ = ಸ್ವಲ್ಪಮಾತ್ರ ಅರಳಿಸಿರುವ (ಆದಿಶೇಷನು);

(ಪೂರ್ಣಜೀವನ್ಮುಕ್ತರಾದ ಶೇಷದೇವರು, 'ನಾನು' ಎಂಬ ಭಾವನೆಯ ಲೇಶಾಂಶವೂ ಇಲ್ಲವರಾದುದರಿಂದ ತಮ್ಮ ಅಂತರ್ಯಾಮಿಯೂ, ವಾಸುದೇವಾಭಿನ್ನನೂ ಆದ ಸಂಕರ್ಷಣ ಮೂರ್ತಿಯ ಬಿಂಬಕ್ರಿಯಾದರ್ಶನ-ಧ್ಯಾನವುಳ್ಳವರಾಗಿರುವುದರಿಂದ ಅದು ಶ್ರೇಷ್ಠತರವಾದ ಬಿಂಬ ಪೂಜೆಯಾಗಿರುವುದು. "ಕೆರೆಯ ನೀರನು ಕೆರೆಗೆ ಚೆಲ್ಲಿ" ಎಂಬುದರ ಸಾಮಾನ್ಯಾರ್ಥ, ಭಗವಂತನಿಂದ ದತ್ತವಾದುದನ್ನು ಅವನಿಗೇ ಅರ್ಪಿಸುವುದು ಎಂದು. ಸರ್ವಸಮರ್ಪಣೆ (ಕಡೆಯದಾದ ಆತ್ಮಾರ್ಪಣೆ)ಯೇ ಪೂಜಾವಿಧಿಯಲ್ಲಿ ಸಿದ್ಧಿಸಬೇಕಾದುದು. ದತ್ತ ಸ್ವಾತಂತ್ರ್ಯವೆಂಬುದರ

ಮರ್ಮ ಇದರಲ್ಲಿ ಅಡಗಿದೆ. ನಾನು ಏನೂ ಮಾಡುತ್ತಿಲ್ಲ; ನನ್ನ ಹೆಸರಿನಲ್ಲಿ, ನನಗಾಗಿ ನೀನೇ ಎಲ್ಲವನ್ನೂ ಮಾಡಿ, ಫಲಗಳಲ್ಲಿ ಯಥೋಚಿತ ಭಾಗವನ್ನು, 'ಸಾರ' ಭೋಕ್ತನಾದ ನೀನು ಉಂಡು ಉಣಿಸುತ್ತಿರುವೆ ಎಂದು ಮಾಡುವ ಅನುಸಂಧಾನವೇ ಆತ್ಮಸಮರ್ಪಣೆ. 'ಅನುಸಂಧಾನ ಮಾಡಿ ಮಾಡಿಸುತ್ತಿರುವವನೂ ಅವನೇ' ಎಂಬುದು ಕಟ್ಟಕಡೆಯ ಹಂತ.)

**ಸ್ವರ್ಧುನ್ಯುದಾರ್ೈಃ ಸ್ವಜಟಾಕಲಾಪೈರುಪಸ್ಪೃಶಂತಶ್ಚರಣೋಪಧಾನಂ।**
**ಪದ್ಮಂ ಯದರ್ಚಂತ್ಯಹಿರಾಜಕನ್ಯಾಃ ಸಪ್ರೇಮನಾನಾಬಲಿಭಿರ್ವರಾರ್ಥಾಃ**
**॥೫॥**

ಸ್ವರ್ಧುನೀ ಉದಾರ್ೈಃ = ಸಂಕರ್ಷಣ ಮೂರ್ತಿಯ ಜಟಾಜೂಟದಿಂದಿಳಿದು ಬರುತ್ತಿರುವ ಗಂಗಾಜಲದಿಂದ ತೊಯ್ದ; ಸ್ವಜಟಾಕಲಾಪೈಃ = ತಮ್ಮ ಜಡೆಗಳುಳ್ಳವರಾಗಿ; ಅಹಿರಾಜ ಕನ್ಯಾಃ = ಸರ್ಪರಾಜ ಕುಮಾರಿಯರು; ಸಪ್ರೇಮನಾನಾ ಬಲಿಭಿಃ = ಭಕ್ತಿಪೂರ್ವಕವಾಗಿ ತಂದ ಬಗೆಬಗೆಯ ಪೂಜಾದ್ರವ್ಯಗಳಿಂದ; ವರಾರ್ಥಾಃ = ಯೋಗ್ಯ ವರಪ್ರಾಪ್ತಿಯ ಅಪೇಕ್ಷೆಯಿಂದ; ಚರಣೋಪಧಾನಂ = ಸಂಕರ್ಷಣಮೂರ್ತಿಗೆ ಪಾದಪೀಠದಂತಿರುವ; ಯತ್ ಪದ್ಮಂ = ಯಾವ ಪದ್ಮದಾಕೃತಿಯನ್ನು; ಅರ್ಚಯಂತಿ = ಪೂಜಿಸುವರೋ; ತತ್ = ಆ ಪಾದಪೀಠವನ್ನುದ್ದೇಶಿಸಿ; ನಮಂತಃ = ನಮಿಸುವ (ಸನಕಾದಿಗಳು).

(ನಾಗರಾಜಶ್ರೇಷ್ಠನಾದ ಆದಿಶೇಷನು ರುದ್ರಪದವಿಯಿಂದ ಶೇಷಪದವಿಗೆ ಬಂದವನಾದುದರಿಂದ, ರುದ್ರಪದವಿಯ ಲಕ್ಷಣಗಳು ಇಲ್ಲಿಯೂ ಉಂಟು – ಅದೇ ಸಂಕರ್ಷಣ ಮೂರ್ತಿಯು ಇಲ್ಲಿಯೂ ಬಿಂಬನಾಗಿರುವುದರಿಂದ. ಒಂದೊಂದು ಹೆಡೆಯ ಹಿಂಬದಿಯಲ್ಲಿಯೂ ಇಳಿಬಿದ್ದಿರುವ ಜಟೆಗಳೂ, ಅವುಗಳಿಂದಿಳಿದು ಬರುವ ಗಂಗಾಜಲಧಾರೆಗಳೂ ಇಲ್ಲಿ ವರ್ಣಿತವಾಗಿವೆ.)

**ಮುಹುರ್ಗೃಣಂತೋವಚಸಾನುರಾಗ ಸ್ಖಲತ್ಪದೇನಾಸ್ಯ ಕೃತಾನಿತಜ್ಞಾಃ।**
**ಕಿರೀಟ ಸಾಹಸ್ರಮಣಿ ಪ್ರವೇಕ ಪ್ರದ್ಯೋತಿತೋದ್ದಾಮ ಫಣಾಸಹಸ್ರಂ**
**॥೬॥**

ತಜ್ಞಾಃ = ಚೆನ್ನಾಗಿ ಬಲ್ಲವರಾದ ಸನಕಾದಿಗಳು; ತಸ್ಯ ಕೃತಾನಿ = ಆದಿಶೇಷನ ದಿವ್ಯ ಚರಿತ್ರೆಗಳನ್ನು; ಅನುರಾಗಸ್ಖಲತ್ ಪದೇನ ವಚಸಾ = ಭಕ್ತಿಭರದಿಂದ ತೊದಲುವ ನುಡಿಗಳಿಂದ; ಮುಹುಃಗೃಣಂತಃ = ಮತ್ತೆ ಮತ್ತೆ ಸ್ತುತಿಸುತ್ತಾ; ಕಿರೀಟಸಾಹಸ್ರ ಮಣಿಪ್ರವೇಕ ಪ್ರದ್ಯೋತಿತ = ಸಹಸ್ರ ಹೆಡೆಗಳ ಕಿರೀಟಮಣಿಗಳ

ಕಾಂತಿಯಿಂದ ಅತ್ಯಂತ ಪ್ರಕಾಶಮಾನನಾದ; ಉದ್ದಾಮ ಫಣಾಸಹಸ್ರಂ = ಬೃಹದಾಕಾರವಾಗಿ ಎದ್ದುನಿಂತ ಸಹಸ್ರಹೆಡೆಗಳುಳ್ಳ ಸಂಕರ್ಷಣಪ್ರಿಯನಾದ ಆದಿಶೇಷನನ್ನು (ಅನ್ವಪೃಚ್ಛನ್ = ವಿಸ್ತಾರವಾಗಿ ಕೇಳಬಕೆಂಬ ಇಚ್ಛೆಯಿಂದ ಪ್ರಶ್ನೆಮಾಡಿದರು.)

(೩ರಿಂದ ೬ರವರೆಗೆ ನಾಲ್ಕು ಶ್ಲೋಕಗಳು, ಶ್ರೀಸಂಕರ್ಷಣಪ್ರಿಯರಾದ ಆದಿಶೇಷದೇವರ ಜ್ಞಾನದ ಔನ್ನತ್ಯವನ್ನೂ, ಮಹಾಮಹಿಮೆಯನ್ನೂ ತಿಳಿಸುವುದಲ್ಲದೆ, ಸನಕಾದಿಗಳು ಭಕ್ತ್ಯತಿಶಯದಿಂದ ಅವರ ಶುಶ್ರೂಷೆಮಾಡಿ ಸೃಷ್ಟಿಯ ರೀತಿನೀತಿಗಳನ್ನು ತಿಳಿದವರೆಂಬ ಮುಖ್ಯವಿಷಯವನ್ನೂ ಪ್ರತಿಪಾದಿಸುತ್ತವೆ.

ಈಗಿನ ಕಾಲದವರು ಸಂಶೋಧನೆಯನ್ನು ನಡೆಸಿ ನಡೆಸಿ ಸೃಷ್ಟಿಯ ರಹಸ್ಯವನ್ನರಿಯದೆ ತತ್ತರಿಸುತ್ತಾರೆ. ಕೇವಲ ಮಾನವ ಬುದ್ಧಿಯಿಂದ ಹಾಗೆ ಪ್ರಯತ್ನಿಸುವುದು ನಿರರ್ಥಕವೆಂದೂ, ದೈವೀ ಪ್ರಪಂಚದ ಅರಿವಾಗದೆ ಸೃಷ್ಟ್ಯಾದಿಗಳ ರಹಸ್ಯಜ್ಞಾನ ಉಂಟಾಗಲಾರದೆಂದೂ ಅವರು ತಿಳಿಯದಿರುವುದು ಶೋಚನೀಯವಾದ ಅಂಶ. ತಾವು ಕೆಡುವುದಲ್ಲದೆ ಇತರರನ್ನೂ ಆಧುನಿಕ ವಿದ್ಯಾಭ್ಯಾಸ ಪದ್ಧತಿಯಿಂದ ಕೆಡಿಸುತ್ತಿರುವುದು ಹೆಚ್ಚು ಶೋಚನೀಯವೇ ಸರಿ.

ಆದುದರಿಂದ, ಭಗವಂತನಿಗೆ ಪ್ರಿಯರಾದ ಸುಜೀವಿಗಳು ಆಧುನಿಕ ವಿಜ್ಞಾನದ ವ್ಯಾಮೋಹಕ್ಕೆ ಒಳಗಾಗದೆ, ಮುಕ್ತಿಮಾರ್ಗವನ್ನು ಹಿಡಿದು ಮುಂದೆ ಸಾಗುವುದು ಜಾಣತನ.)

**ಪ್ರೋಕ್ತಂ ಕಿಲೈತದ್ಭಗವತ್ತಮೇನ ನಿವೃತ್ತಿಧರ್ಮಾಭಿರತಾಯತೇನ ।**

**ಸನತ್ಕುಮಾರಾಯ ಸಚಾಹಪೃಷ್ಟಃ ಸಾಂಖ್ಯಾಯನಾಯಾಂಗ**

**ಧೃತವ್ರತಾಯ ॥೭॥**

ಅಂಗ = ಪ್ರಿಯವಿದುರಾ; ಏತತ್ = ಈಗ ನಾನು ಹೇಳಲಿರುವ ಭಗವತ್ಕಥಾಪ್ರಸಂಗವು; ಭಗವತ್ತಮೇನತೇನ = ಭಾಗವತ ಧರ್ಮವನ್ನರಿತವರಲ್ಲಿ ಅತ್ಯಂತ ಶ್ರೇಷ್ಠರಾದ; ತೇನ = ಸಂಕರ್ಷಣೋಪಾಸಕ ಆದಿಶೇಷರಿಂದ; ನಿವೃತ್ತಿ ಧರ್ಮಾಭಿರತಾಯ = ಲೌಕಿಕವ್ಯವಹಾರಗಳಲ್ಲಿ ತೊಡಗದೆ ಸದಾ ಭಗವಚ್ಚಿಂತನೆ, ಭಗವತ್ಸೇವಾಗಳಲ್ಲಿಯೇ ನಿರತರಾದ; ಸನತ್ಕುಮಾರಾಯ = ಸನತ್ಕುಮಾರರಿಗೆ; ಪ್ರೋಕ್ತಂ ಕಿಲ = ಉಪದೇಶವಾಯಿತೆಂಬುದು ಸತ್ಯಸಂಗತಿ; ಸಃಚ = ಆ ಸನತ್ಕುಮಾರರಾದರೋ; ಪೃಷ್ಟಃ = ಪ್ರಾರ್ಥಿತರಾಗಿ; ಧೃತವೃತಾಯ = ನಿಯಮ

ನಿಷ್ಠರಾದ; ಸಾಂಖ್ಯಾಯನಾಯ = ಸಾಂಖ್ಯಾಯನ ಮಹರ್ಷಿಗಳಿಗೆ; ಆಹ = ಉಪದೇಶಮಾಡಿದರು.

(ಬ್ರಹ್ಮಪದಾರ್ಹರಾದ ಋಜುಗಳ ನಂತರ ಭಾಗವತ ಶ್ರೇಷ್ಠರೆಂದರೆ ಜೀವನ್ಮುಕ್ತ ಶ್ರೇಷ್ಠರಾದ ಗರುಡ ಶೇಷರು. ಶೇಷದೇವರ ಮಾಹಾತ್ಮ್ಯವನ್ನಿಲ್ಲಿ ಪ್ರಸಂಶಿಸಿದ್ದಾರೆ.)

**ಸಾಂಖ್ಯಾಯನಃ ಪಾರಮಹಂಸಮುಖ್ಯೋವಿವಕ್ಷಮಾಣೋ**
**ಭಗವದ್ವಿಭೂತೀಃ ।**
**ಜಗಾದಸೋಸ್ಮದ್ಗುರವೇನ್ವಿತಾಯ ಪರಾಶರಾಯಾಥ ಬೃಹಸ್ಪತೇಶ್ಚ ॥೮॥**

ಪಾರಮಹಂಸ ಮುಖ್ಯಃ = ಜ್ಞಾನಿವರೇಣ್ಯರಲ್ಲಿ ಪ್ರಮುಖರಾದ; ಸಃಸಾಂಖ್ಯಾನಃ = ಆ ಸಾಂಖ್ಯಾಯನರು; ಭಗವದ್ವಿಭೂತೀಃ = ಭಗವಂತನ ದಿವ್ಯಚರಿತ್ರೆಗಳನ್ನು; ವಿವಕ್ಷಮಾಣಃ = ಪ್ರಕಟಿಸಲು ಇಚ್ಛೆಯುಳ್ಳವರಾಗಿ; ಅನ್ವಿತಾಯ = ಶುಶ್ರೂಷಾಪರರಾದ; ಅಸ್ಮದ್ಗುರವೇ = ನಮ್ಮ ಗುರುಗಳಾದ; ಪರಾಶರಾಯ = ಪರಾಶರಮಹರ್ಷಿಗಳಿಗೆ; ಅಥ = ಅನಂತರ; ಬೃಹಸ್ಪತೇಃಚ = ಬೃಹಸ್ಪತ್ಯಾಚಾರ್ಯರಿಗೂ; ಜಗಾದ = ಹೇಳಿದರು.

(ಉತ್ತಮ ಭಗವದ್ಭಕ್ತರು ತಮ್ಮ ಗುರುಗಳಿಂದ ತಾವು ತಿಳಿದ ವಿಷಯಗಳನ್ನು ಯೋಗ್ಯಶಿಷ್ಯರಿಗೆ ತಿಳಿಸಬೇಕೆಂಬ ಲವಲವಿಕೆಯುಳ್ಳವರಾಗಿರುತ್ತಾರೆಂಬುದು ಇದರಿಂದ ತಿಳಿದು ಬರುವುದು.)

**ಪ್ರೋವಾಚಮಹ್ಯಂ ಸದಯಾಲುರುಕ್ತೋಮುನಿಃ ಪುಲಸ್ತ್ಯೇನ**
**ಪುರಾಣಮಾದ್ಯಂ ।**
**ಸೋಹಂತವೈತತ್ಕಥಯಾಮಿವತ್ಸಶ್ರದ್ಧಾಲವೇ ನಿತ್ಯಮನುವ್ರತಾಯ ॥೯॥**

ಪುಲಸ್ತ್ಯೇನ ಉಕ್ತಃ = ಸಾಂಖ್ಯಾಯನರಿಂದ ಉಪದೇಶಹೊಂದಿದ; ದಯಾಲುಃ ಸಃಮುನಿಃ = ದಯಾಳುಗಳಾದ ಆ ಪರಾಶರ ಮಹರ್ಷಿಗಳು; ಆದ್ಯಂ ಪುರಾಣಂ = ಪ್ರಪ್ರಥಮ ಪುರಾಣವಾದ (ಶ್ರೀಮದ್ಭಾಗವತವನ್ನು; ಮಹ್ಯಂ = ನನಗೆ; ಪ್ರೋವಾಚ = ಉಪದೇಶ ಮಾಡಿದರು; ವತ್ಸ = ಪ್ರಿಯತಮ ವಿದುರಾ; ಸಃ ಅಹಂ = ಹಾಗೆ ಉಪದೇಶ ಹೊಂದಿದ ನಾನು; ಶ್ರದ್ಧಾಲವೇ = ಶ್ರದ್ಧಾವಂತನಾದ; ನಿತ್ಯಂ ಅನುವ್ರತಾಯ = ಏಕಪ್ರಕಾರವಾಗಿ ಸೇವಾಕಾಂಕ್ಷಿಯಾಗಿರುವ ನಿನಗೆ; ಏತತ್ = ಈ ಭಗವತ್ಕಥಾವನ್ನು; ಕಥಯಾಮಿ = ಹೇಳುತ್ತೇನೆ.

(ಶ್ರೀಮದ್ಭಾಗವತವೆಂಬ ಪುರಾಣವನ್ನು ಯಾರೋ ಯಾವಾಗಲೋ ಬರೆದರು

ಎನ್ನುವ ಈಗಿನ ಸಂಶೋಧಕರು ಇಲ್ಲಿ ಹೇಳಿರುವ ಪರಂಪರಾಕ್ರಮವನ್ನು ಗಮನಿಸಬೇಕು.

ವೇದಗಳಂತೆ ಪುರಾಣಗಳೂ ನಿತ್ಯಗಳೇ ಆದರೂ, ಪುರಾಣ ವ್ಯಕ್ತಿಗಳು ಅಲ್ಲಲ್ಲಿ ಹೇಳಿದವರೇ ಆದರೂ, ಆ ವ್ಯಕ್ತಿಗಳ ಸ್ಥಾನಗಳಿಗೆ ಬೇರೆಬೇರೆ ಜೀವರು ಕಲ್ಪಕಲ್ಪಾಂತರಗಳಲ್ಲಿ ಬರುವುದರಿಂದ, ಅವರ ಚರ್ಯೆಗಳಲ್ಲಿಯೂ ಮಾತುಕಥೆಗಳಲ್ಲಿಯೂ ಅಲ್ಪ ಸ್ವಲ್ಪ ವ್ಯತ್ಯಾಸಗಳಿರುತ್ತವೆ. ಆದುದರಿಂದ, ಪುರಾಣಗಳು ಕಲಕಲ್ಪಾಂತರಗಳಲ್ಲಿ ಮತ್ತೆ ಮತ್ತೆ ರಚಿತವಾಗುತ್ತವೆ. ಕಥಾ ಸಂವಿಧಾನಗಳು. ಮಾತ್ರ ಏಕಪ್ರಕಾರವಾಗಿರುತ್ತವೆ.

ಭಾಗವತ ಪುರಾಣವು ನಮ್ಮವರೆಗೆ ಏಕಪ್ರಕಾರವಾಗಿ ಹೇಗೆ ಬಂದಿರುವುದು ಎನ್ನುವುದನ್ನು ನಾವು ಗಮನಿಸಬೇಕು. ಭಗವಂತನಿಂದ ನೇರವಾಗಿ ಚತುರ್ಮುಖ ಬ್ರಹ್ಮದೇವರಿಗೆ ಉಪದೇಶವಾದ ಶ್ರೀಮದ್‌ಭಾಗವತವು, ನಾರದರ ಮುಖಾಂತರ ವೇದವ್ಯಾಸರಿಗೆ ಮುಟ್ಟಿತು. ಇದು ಒಂದು ಕ್ರಮ. ಸಂಕರ್ಷಣ ಮೂರ್ತಿಯಿಂದ ಸನಕಾದಿಗಳಿಗೆ, ಸನತ್ಕುಮಾರರಿಂದ ಸಾಂಖ್ಯಾಯನರಿಗೆ, ಅವರಿಂದ ಪರಾಶರರಿಗೆ ಮತ್ತು ಬೃಹಸ್ಪತ್ಯಾಚಾರ್ಯರಿಗೆ, ಪರಾಶರರಿಂದ ಮೈತ್ರೇಯರಿಗೆ ಮತ್ತು ವೇದ ವ್ಯಾಸರಿಗೆ ಮತ್ತು ಪರಾಶರರಿಂದ ವಿದುರರಿಗೆ– ಹೀಗೆ ಎರಡನೆಯ ಕ್ರಮ. ಈ ಎಲ್ಲವನ್ನೂ ಕ್ರೂಢೀಕರಿಸಿ ವೇದವ್ಯಾಸರು ಶುಕಾಚಾರ್ಯರಿಗೆ ಉಪದೇಶಿಸಿದರು. ಅವರು ಪರೀಕ್ಷಿದ್ರಾಜನಿಗೆ ಉಪದೇಶಮಾಡುವಾಗ, ಜೊತೆಯಲ್ಲಿ ಶ್ರವಣಮಾಡಿದ ಸೂತ ಪೌರಾಣಿಕರಿಂದ ಶೌನಕಾದಿಗಳಿಗೆ ವಿವರಿಸಲ್ಪಟ್ಟ ಭಾಗವತ ಕಥಾಮೃತವು ನಮ್ಮ ವಾಲಿಗೆ ಬಂದಿದೆ.)

**ಉದಪ್ಲುತಂ ವಿಶ್ವಮಿದಂತದಾಸೀದ್ಯನ್ನಿದ್ರಯಾಮೀಲಿತ**
**ದೃಙ್ನ್ಯಮೀಲಯತ್ ।**
**ಅಹೀಂದ್ರತಲ್ಪೇಧಿ ಶಯಾನ ಏಕಃ ಕೃತಕ್ಷಣಃ ಸ್ವಾತ್ಮರತಾವನೀಹಃ**
**॥೧೦॥**

ಅನೀಹಃ = ಸೃಷ್ಟ್ಯಾದಿ ಕಾರ್ಯಗಳಲ್ಲಿ ಉದಾಸೀನನಾದ; (ಅನಃ = ಪ್ರಾಣ; ಅನೀ = ಸಮರ್ಥಃ; ಈಹಾ = ಪ್ರಾಣ ಚೇಷ್ಟಾ); ಸ್ವಾತ್ಮರತೌ = ಆತ್ಮಾನಂದದಲ್ಲಿ; ತನ್ನ ಅಧೀನಳಾದ ರಮಾದೇವಿಗೆ ಸುಖನೀಡುವುದರಲ್ಲಿ; ಕೃತಕ್ಷಣಃ = ಮನಸ್ಸು ಮಾಡಿದವನಾದ; ಮೀಲಿತದೃಶಃ ಏಕಃ = ಎಲ್ಲವನ್ನೂ ತನ್ನಲ್ಲಡಗಿಸಿಕೊಂಡು ಎಚ್ಚರವುಳ್ಳ ಒಬ್ಬನೇ ಆದ; ಅಹೀಂದ್ರತಲ್ಪೇ ಅಧಿಶಯಾನಃ = ಶೇಷತಲ್ಪದಲ್ಲಿ ಪವಡಿಸಿದ ಶ್ರೀಮದನಂತನು; ನಿದ್ರಯಾ = ನಿದ್ರೆಬಂದವನಂತೆ;

ಯತ್‌ದೃಕ್‌ನ್ಯಮೀಲಯತ್ ತದಾ = ಯಾವಾಗ ಕಣ್ಣುಮುಚ್ಚಿ ಯೋಗನಿದ್ರಾರತನಾಗಿದ್ದನೋ ಆಗ; ಇದಂ ವಿಶ್ವಂ = ಈ ಬ್ರಹ್ಮಾಂಡ ಕೋಶವೆಲ್ಲಾ; ಉದಪ್ಲುತಂ ಆಸೀತ್ = ನೀರಿನಿಂದ ತುಂಬಿ ಹೋಗಿತ್ತು.

(ಇದು ಪರೀಕ್ಷಿದ್ರಾಜನಿಗೆ ಶುಕಾಚಾರ್ಯರು ಪದ್ಮಕಲ್ಪದ ಕಥೆಯನ್ನು ಹೇಳಿದ ಪ್ರಸಂಗದ ವಿವರ. ಆ ವಿವರವನ್ನು ಮೈತ್ರೇಯರು ವಿದುರನಿಗೆ ಹೇಳಿದ ವಿಷಯವೇ ಆಗಿದೆ. ಎಲ್ಲವನ್ನೂ ತನ್ನಲ್ಲಿ ಅಡಗಿಸಿ ಕೊಂಡಿದ್ದಾಗ ಆದಿ ಶೇಷನ ವಿಚಾರ ಇಲ್ಲಿ ಹೇಗೆ ಕೂಡುವುದೆಂದರೆ, ಆ ರೂಪು ಅನಂತನಾಮಕ ಭಗವಂತನದೇ ಎಂದು ತಿಳಿಯಬೇಕು. ಅಲ್ಲದೆ, ರಮಾ ನಾರಾಯಣರು ಎಂದೆಂದೂ ಅಗಲುವಿಕೆ ಇಲ್ಲದವರಾದುದರಿಂದ, ಶೇಷರೂಪದ ಲಕ್ಷ್ಮೀದೇವಿಯರಲ್ಲಿ ಭಗವಂತನ ಅನಂತರೂಪವೆಂದಾಗ, ಆಕೆಯು ನಿರಂತರವಾಗಿ ಭಗವಂತನ ಸೇವೆಯಲ್ಲಿ ಆಸಕ್ತಳಾಗಿರುವುದರ ಹಿರಿಮೆಯು ನಮ್ಮ ಗಮನಕ್ಕೆ ಬರುವುದು. ಅದೂ ಅಲ್ಲದೆ, ಪ್ರಳಯ ಕಾಲದ ಯೋಗ ನಿದ್ರೆಯು ಆ ಮಹಾತಾಯಿಗೆ ದೀರ್ಘಕಾಲದ ಅಪ್ಪುಗೆಯ ಸುಖಕೊಡುವುದಕ್ಕಾಗಿ. ಬ್ರಹ್ಮಾಂಡದ ಸೃಷ್ಟಿಯಾಗುವುದಕ್ಕೆ ಮುಂಚೆ ನವಾವರಣಗಳ ಸೃಷ್ಟಿಯಾದಾಗಲೇ ಸಕಲ ದೇವತೆಗಳೂ ಸೂಕ್ಷ್ಮಪ್ರಾಕೃತ ಶರೀರಗಳಿಂದ ಸೃಷ್ಟಿಯಲ್ಲಿ ಬಂದಿದ್ದರೆಂಬುದು ನಿಜ. ಆದರೆ ಪದ್ಮಕಲ್ಪದ ಪ್ರಾರಂಭದಲ್ಲಿ ಅವರೆಲ್ಲರೂ ಪದ್ಮನಾಭನ ಉದರದಲ್ಲಿದ್ದರಾದುದರಿಂದ ಶೇಷರೂಪದಲ್ಲಿ ಲಕ್ಷ್ಮೀದೇವಿ ಎಂದು ಹೇಳಿದುದು. ತಾತ್ವಿಕರಾಗಿ ಶೇಷದೇವರು ಆ ಶರೀರದಲ್ಲಿದ್ದರೂ ಅವರಿಗೆ ನಿದ್ರಾವಸ್ಥೆ.)

**ಸೋಂತಃಶರೀರೇರ್ಪಿತ ಭೂತಸೂಕ್ಷ್ಮಃ ಕಾಲಾತ್ಮಿಕಾಂಶಕ್ತಿ**
**ಮುದೀರಯಾಣಃ ।**
**ಉವಾಸತಸ್ಮಿನ್ ಸಲಿಲೇಪದೇಸ್ವೇಯಥಾನಲೋ ದಾರುಣಿರುದ್ಧ**
**ವೀರ್ಯಃ ॥೧೧॥**

ಸಃ = ಆ ಶೇಷಶಾಯಿಯು; ಅಂತಃ ಶರೀರೇ = ತನ್ನ ಉದರವೆಂಬ ಆಕಾಶದಲ್ಲಿ; ಅರ್ಪಿತ = ಅಡಕವಾದ; ಭೌತ ಸೂಕ್ಷ್ಮಃ = ಪಂಚತನ್ಮಾತ್ರಾದಿ ಸೂಕ್ಷ್ಮರೂಪದ ಭೌತವಸ್ತುಗಳನ್ನು ಇಟ್ಟುಕೊಂಡು; ಕಾಲಾತ್ಮಿಕಾಂ = ಪ್ರಳಯಕಾಲದಎಣಿಕೆಗೆ ಯಜಮಾನಿಯಾದ ರಮಾದೇವಿಯನ್ನು; ಉದೀರಯಾ = ಸುಖಿಯನ್ನಾಗಿ ಮಾಡುತ್ತಾ; ಯಥಾ = ಹೇಗೆ; ಅನಲಃ = ಅಗ್ನಿಯು; ದಾರುಣಿ = ಕಟ್ಟಿಗೆಯಲ್ಲಿ; ರುದ್ಧವೀರ್ಯಃ = ಸುಡುವ ತನ್ನ ಸಾಮರ್ಥ್ಯವನ್ನು ಅಡಗಿಸಿಟ್ಟುಕೊಂಡಿರುವನೋ ಹಾಗೆ; ಸ್ವೇಪದೇ = ತನ್ನ ಮನೆ ಎನಿಸುವ; ತಸ್ಮಿನ್ ಸಲಿಲೇ = ಆ ಬ್ರಹ್ಮಾಂಡದೊಳಗಿನ ಗರ್ಭೋದಕದಲ್ಲಿ; ಉವಾಸ = ಇರುವವನಾದನು.

(ನೀರಿಗೆ ಆಶ್ರಯನೂ, ನೀರಿನಲ್ಲಿರವವನೂ ಅದ ನಾರಾಯಣನು ಶೇಷಶಾಯಿಯಾಗಿ ದಿವ್ಯ ಸಹಸ್ರವರ್ಷಕಾಲ ಇದ್ದ ವಿಚಾರವಿದು.)

**ಚತುರ್ಯುಗಾನಾಂ ಚ ಸಹಸ್ರಮಪ್ಸು ಸ್ವಪಂಸ್ತಯೋದೀರಿತಯಾ ಸ್ವಶಕ್ತ್ಯಾ ।**
**ಕಾಲಾಖ್ಯಯಾಸಾದಿತ ಕರ್ಮತಂತ್ರೋಲೋಕಾನಪೀಮಾನ್ದದೃಶೇಸ್ವದೇಹೇ ॥೧೨॥**

ಅಪ್ಸು = ಗರ್ಭೋದಕದಲ್ಲಿ; ಚತುರ್ಯಗಾನಾಂ ಸಹಸ್ರಂಚ = ಸಹಸ್ರ ಚತುರ್ಯುಗಗಳಷ್ಟು ಕಾಲ; ಸ್ವಪನ್ = ಯೋಗನಿದ್ರೆಯಲ್ಲಿದ್ದವನಾಗಿ; ಕಾಲಾಖ್ಯಯಾ = ಕಾಲನಾಮಕಳಾದ; ತಯಾ ಸ್ವಶಕ್ತ್ಯಾ = ತನ್ನ ಅಧೀನಳಾದ ಮಾಯಾ ಶಕ್ತಿಯಿಂದ; ಉದೀರಿತಯಾ = ಪ್ರೇರಿತವಾದ; ಸಾದಿತ ಕರ್ಮತಂತ್ರಃ = ಸೃಷ್ಟಿಕಾರ್ಯದ ಇಚ್ಛೆಯನ್ನು ಹೊಂದಿದವನಾಗಿ; ಇಮಾನ್‌ಲೋಕಾನ್ ಅಪಿ = ಈಗ ಸೃಷ್ಟವಾಗಿರುವ ಲೋಕಗಳೂ ಕೂಡ; ಸ್ವದೇಹೇ = ತನ್ನಲ್ಲಿಯೇ ಅಡಕವಾಗಿರುವುದನ್ನು; ದದೃಶೇ = ದೃಷ್ಟಿಪಥಕ್ಕೆ ತಂದುಕೊಂಡನು.

(ಕಾಲಾಖ್ಯನೂ, ಕರ್ಮತಂತ್ರಜ್ಞನೂ, ಕರ್ಮಪ್ರೇರಕನೂ ಆ ಶ್ರೀಮನ್ನಾರಾಯಣನೇ ಆದರೂ, ತನ್ನ ಅಧೀನಳಾದ ಮಾಯಾ ದೇವಿಯಲ್ಲಿ ಆಕೆಯಂತೆ (ಬಿಂಬನಾಗಿ) ಪ್ರವಿಷ್ಟನಾದ ಆ ಪ್ರಭುವು, ಶ್ರುತಿಗೀತೆಯಿಂದ ಸ್ತೋತ್ರಮಾಡಿ ಆಕೆಯು ಎಚ್ಚರಗೊಳಿಸಿದಂತೆಯೂ, ಆಕೆಯಿಂದ ಕರ್ಮಸಾಮಗ್ರಿಗಳನ್ನು ಸಂಪಾದಿಸಿದಂತೆಯೂ ಆಡುವುದು ತನ್ನ ನಿತ್ಯ ಸಹಚಾರಿಣಿಯ ಸಂತೋಷಕ್ಕಾಗಿ. ಪೂರ್ಣಾರಾಮನಾದ ಅವನು ಯವುದರಿಂದಲೂ ಹೊಸದಾಗಿ ಸಂತೋಷವನ್ನು ಸಂಪಾದಿಸಬೇಕಾಗಿಲ್ಲ. ಗತಿಸಿದ, ಈಗಿನ ಮತ್ತು ಮುಂದೆ ಉಂಟಾಗುವ ಸೃಷ್ಟಿಗಳ ಪೂರ್ಣಜ್ಞಾನವುಳ್ಳ ಆ ಶ್ರೀಹರಿಯು ಈಗಿನ ಬ್ರಹ್ಮಾಂಡದ ಕಲ್ಪನೆಯನ್ನು ಮಾನಸಿಕವಾಗಿ ಕಂಡು, ರಮಾದೇವಿಗೆ ಕಾಣಿಸಿದನೆಂದು ತಿಳಿಯಬೇಕು.)

**ತಸ್ಯಾತ್ಮ ಸೂಕ್ಷ್ಮಾಭಿನಿವಿಷ್ಟ ದೃಷ್ಟೇರಂತರ್ಗತೋಽರ್ಥೋ ರಜಸಾತನೀಯಾನ್ ।**
**ಗುಣೇನ ಕಾಲಾನುಗತೇನವಿದ್ಧಃ ಶುಷ್ಯಂಸ್ತದಾಭಿದ್ಯತನಾಭಿದೇಶಾತ್ ॥೧೩॥**

ಆತ್ಮಸೂಕ್ಷ್ಮಾಭಿನಿವಿಷ್ಟೇಃ = ತನ್ನಲ್ಲಿ ಅಡಗಿಸಿಟ್ಟುಕೊಂಡಿದ್ದ ತತ್ವಗಳ ಮತ್ತು ಜೀವರ ಸೂಕ್ಷ್ಮಸ್ಥಿತಿಯನ್ನು ಪ್ರತ್ಯಕ್ಷವಾಗಿ ಕಾಣಬಲ್ಲವನಾದ; ತಸ್ಯ = ಗರ್ಭೋದಕ

ಶಾಯಿಯಾದ ಶ್ರೀಮನ್ನಾರಾಯಣನ; ಅಂತರ್ಗತಃ = ಉದರದಲ್ಲಿದ್ದ; ಅರ್ಥಃ = ಭೌತಜಲ ನಿರ್ಮಾಣಕ್ಕೆ ಬೇಕಾದ ವಸ್ತುಸಮೂಹವು; ಕಾಲಾನುಗತೇನ = ಕಾಲಗತಿಯ ಪರಿಣಾಮವಾಗಿ; ರಜಸಾಗುಣೇನ ವಿದ್ಧಃ = ರಜೋಗುಣದ ತಾಕಲಾಟದ ಕ್ರಿಯೆಯಿಂದ; ಶುಷ್ಯನ್ = ಗಾಳಿಯಿಂದ ಘನತ್ವಹೊಂದಿ; ತನೀಯಾನ್ = ಜಲಪರಮಾಣುಗಳ ರೂಪದಿಂದ; ತದಾ = ಆಗ; ನಾಭಿದೇಶಾತ್ = ಶ್ರೀಮನ್ನಾರಾಯಣನ ನಾಭಿಯ ಅಂಶಬಲದಿಂದ; ಅಭಿದ್ಯತ = ಜಲರೂಪವನ್ನು ತಾಳಿಪ್ರಕಾಶಿಸಿತು.

(ಅರ್ಥಃ ಎಂಬ ಪದದಿಂದ ಪ್ರಯೋಜನಾಂಶಗಳಾದ ಸೂಕ್ಷ್ಮಾಕಾಶ, ಸೂಕ್ಷ್ಮವಾಯು, ಸೂಕ್ಷ್ಮತೇಜಸ್ತತ್ವಗಳನ್ನು ಇಲ್ಲಿ ಪರಿಗಣಿಸಬೇಕು. ತಾಮಸಾಹಂಕಾರದಿಂದ ಉತ್ಪತ್ತಿಯಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಅತಿ ಸೂಕ್ಷ್ಮಪ್ರಾಕೃತ ತತ್ವಗಳಿಗೆ ಕ್ರಮವಾಗಿ ಆಕಾಶತನ್ಮಾತ್ರ, ವಾಯುತನ್ಮಾತ್ರ, ತೇಜಸ್‌ತನ್ಮಾತ್ರ, ಅಪ್‌ತನ್ಮಾತ್ರ ಮತ್ತು ಪೃಥ್ವೀತನ್ಮಾತ್ರಗಳೆಂದು ಹೆಸರು. ಪಂಚೀಕರಣದಿಂದ ಪಂಚಭೂತಗಳ ಸೃಷ್ಟಿಯ ಕ್ರಮದಲ್ಲಿ ಆಕಾಶ, ವಾಯು ಮತ್ತು ತೇಜಸ್ ತನ್ಮಾತ್ರಗಳ ಸೃಷ್ಟಿಯಾದ ಮೇಲೆ ಜಲತತ್ವಸೃಷ್ಟಿಯಾದುದನ್ನೂ, ಅನಂತರ ಅದು ವಾಯುವಿನಿಂದ ಶೋಷಿಸಲ್ಪಟ್ಟು, ಬ್ರಹ್ಮಾಂಡದ ಕೆಳಗಿನ ಅರ್ಧಭಾಗವನ್ನು ಮಾತ್ರ ತುಂಬುವಂತೆ ಘನೀಭೂತವಾದುದನ್ನೂ, ಅದನ್ನು ಭೇದಿಸಿಕೊಂಡು ಭಗವಂತನ ನಾಭಿಪ್ರದೇಶದಿಂದ ಮುಂದೆ ಲೋಕಗಳ ಸೃಷ್ಟಿಗೆ ಕಾರಣವಾದ ಬೃಹತ್ಕಮಲವು ಮೇಲಕ್ಕೆದ್ದುದನ್ನೂ ಈ ಶ್ಲೋಕದಲ್ಲಿ ಸಂಗ್ರಹವಾಗಿ ತಿಳಿಸಿದ್ದಾರೆ. ನಾಭೀಪ್ರದೇಶದಿಂದ ಎಂದಾಗ, ಬ್ರಹ್ಮಾಂಡದ ಕೇಂದ್ರಭಾಗದಿಂದ ಎಂತಲೂ ಅರ್ಥವಾಗುವುದು. ಸರ್ವತ್ರವರ್ತುಲಾಕಾರವಾದ, ೫೦ಕೋಟಿ ಯೋಜನ ವಿಸ್ತಾರವಾದ ಬ್ರಹ್ಮಾಂಡದ ಮಧ್ಯಭಾಗದಲ್ಲಿ ಜಲರಾಶಿಯು ಚಿಮ್ಮಿ ವಿಸ್ತರಿಸಿತು.

ಪುರಾಣ ವಿಜ್ಞಾನ ಪಟುಗಳಾದ ಶ್ರೀವಿಜಯಧ್ವಜಾಚಾರ್ಯರು ಇಲ್ಲಿನ ವೈಜ್ಞಾನಿಕ ಅಂಶಗಳನ್ನು ವಿವರಿಸಿ ತಿಳಿಸಿದ್ದಾರೆ. ಪಂಚತನ್ಮಾತ್ರಗಳ ಕ್ರಮವಾದ ಪಂಚೀಕರಣದಿಂದ ಮೊದಲು ಆಕಾಶವು ಬ್ರಹ್ಮಾಂಡದೊಳಗೆ ಸೃಷ್ಟಿಯಾಯಿತು. ಅನಂತರ ಅದರಲ್ಲಿ ವಾಯುವು ಸೃಷ್ಟಿಯಾಯಿತು. ಆಕಾಶವಾಯುಗಳ ಸಂಬಂಧವನ್ನುಳಿಸಿಕೊಂಡು ತೇಜಸ್ತತ್ವವು ಉಂಟಾಯಿತು. ಈ ಮೂರನ್ನೂ ಒಳಗೊಂಡು ರಸತನ್ಮಾತ್ರ ಪ್ರಧಾನವಾದ ಉದಕವು ಉತ್ಪತ್ತಿಯಾಯಿತು. ಆ ಉದಕವು ಘನೀಭೂತವಾಗಿ. ಬ್ರಹ್ಮಾಂಡದರ್ಧವನ್ನು ತುಂಬಿಕೊಂಡಿರಲು, ಅದರ ಮೇಲೆ ಸಮುದ್ರರೂಪವಾದ ಅಖಂಡ ಜಲರಾಶಿಯೂ ಆವರಿಸಿಕೊಂಡಿತು. ಇಲ್ಲಿಂದ ಮುಂದೆ

ಭೂತತತ್ವಮತ್ತು ಭುವರಾದಿ ಲೋಕಗಳ ಸೃಷ್ಟಿ.

ಈ ವಿಷಯಗಳನ್ನು ತಿಳಿಸುವಾಗ, 'ಕಾಲಾನುಗತೇನ' ಎಂಬಪದವನ್ನು ಗಮನದಲ್ಲಿಟ್ಟುಕೊಂಡು, ಪಂಚಮಹಾಭೂತಗಳ ಸೃಷ್ಟಿಯು ಇಂದ್ರಜಾಲದಂತೆ ಕ್ಷಣಮಾತ್ರದಲ್ಲಿ ಆದುದಲ್ಲ; ಅದು ದೀರ್ಘಕಾಲದ ಪರಿಣಾಮ (ಬ್ರಹ್ಮನ ಹಗಲಿನ ಅರ್ಧಭಾಗ, ಸುಮಾರು ೨೦೦ಕೋಟಿ ವರ್ಷ) ಎಂಬುದನ್ನೂ; 'ರಜಸಾಗುಣೇನವಿದ್ಧಃ' ಎಂದರೆ, ಚಟುವಟಿಕೆಗಳಿಗೆ ಕಾರಣವಾದ ಶಕ್ತಿವಿಶೇಷವುಳ್ಳ ಗುಣದ ತಾಕಲಾಟದಿಂದ (banging) ಎಂಬುದನ್ನೂ, ಪುರಾಣೇತಿಹಾಸಗಳಲ್ಲಿಯೂ, ಭಗವದ್ಗೀತೆಯ ಹದಿನಾಲ್ಕನೆಯ ಅಧ್ಯಾಯದಲ್ಲಿಯೂ ಕಂಡುಬರುವಂತೆ, ಸತ್ವಗುಣವೆಂಬುದು ಈಗಿನವರು ಹೇಳುವ ಪ್ರೋಟಾನ್ ಮೂಲ; ರಜೋಗುಣವು ಎಲೆಕ್ಟ್ರಾನ್ ಮೂಲ; ತಮೋಗುಣಗುಣವು ನ್ಯೂಟ್ರಾನ್‌ಮೂಲ. ಆದುದರಿಂದ, ರಜಸಾಗುಣೇನವಿದ್ಧಃ ಎಂದರೆ (exchange of electrons by collision.) 'ಪಂಚೀಕರಣ'ಎಂದು; 'ತನೀಯಾನ್' ಎಂಬುದರಿಂದ, ರಸತನ್ಮಾತ್ರವು ಜಲಪರಮಾಣುಗಳ ರೂಪಹೊಂದಿ ನಮಗೆ ಕಾಣುವ ನೀರಾಯಿತೆಂದೂ ಶ್ರೀವಿಜಯಧ್ವಜಾಚಾರ್ಯರು ಸೂಚಿಸಿದ್ದಾರೆ. ಅಷ್ಟೇ ಅಲ್ಲದೆ, ಶ್ಲೋಕದ ಪೂರ್ವಾರ್ಧವನ್ನು ಅರ್ಥೈಸುವಾಗಲೇ, ಜಡವಸ್ತುಗಳಿಗೆ ಜಡಗುಣಗಳಿದ್ದರೂ ಅವು ತಮ್ಮಷ್ಟಕ್ಕೇ ತಾವೇ ಪರಿಣಾಮ ಹೊಂದುವುದಿಲ್ಲವೆಂದೂ, ಸರ್ವಜ್ಞನೂ ಸರ್ವಾಂತರ್ಯಾಮಿಯೂ ಆದ ಶ್ರೀಮನ್ನಾರಾಯಣನು ತಾನೇ ತನ್ನ ಪರಿವಾರಭೂತರಾದ ದೇವತೆಗಳ ಮುಖಾಂತರ ಜಡವಸ್ತುಗಳಲ್ಲಿ ತನ್ನ ಇಚ್ಛಾಶಕ್ತಿಯಿಂದ ಪರಿಣಾಮಗಳನ್ನುಂಟುಮಾಡುವನೆಂದೂ ತಿಳಿಸಿದ್ದಾರೆ.

ಹಿಂದಿನ ಪೌರಾಣಿಕರಿಗೆ ಇದನ್ನೆಲ್ಲಾ ವಿವರಿಸುವ ಅಗತ್ಯವಿರಲಿಲ್ಲ. ಈಗಿನ ವಿಜ್ಞಾನಿಗಳು ಇದರ ಕಡೆಗೆ ಲಕ್ಷ್ಯಕೊಡುವುದೇ ಇಲ್ಲ. ಹೇಳಿದರೂ ಕೇಳುವುದಕ್ಕೆ ಅವರು ಸಿದ್ಧರಾಗಿಲ್ಲ.)

**ಸಪದ್ಮಕೋಶಃ ಸಹಸೋದತಿಷ್ಠತ್ಕಾಲೇನ ಕರ್ಮಪ್ರತಿಬೋಧಿತೇನ ।**
**ಸ್ವರೋಚಿಷಾತತ್ಸಲಿಲಂ ವಿಶಾಲಂ ವಿದ್ಯೋತಯನ್ನರ್ಕ ಇವಾತ್ಮಯೋನಿಃ**
**॥೧೪॥**

(ನಾಭಿದೇಶಾತ್ = ಶ್ರೀಮನ್ನಾರಾಯಣನ ನಾಭಿಯ ಪ್ರದೇಶದಿಂದ ಹಿಂದಿನ ಶ್ಲೋಕದಿಂದ ಅನ್ವಯ); ಸ್ವರೋಚಿಷಾ = ತನ್ನ ಕಾಂತಿಯಿಂದ; ಅರ್ಕಇವ = ಸೂರ್ಯನಂತೆ; ವಿಶಾಲಂ ತತ್ ಸಲಿಲಂ = ವಿಶಾಲವಾದ ಆ ಜಲರಾಶಿಯನ್ನು; ವಿದ್ಯೋತಯಾನ್ = ಪ್ರಕಾಶಗೊಳಿಸುತ್ತಾ; ಆತ್ಮಯೋನಿಃ = ಆತ್ಮಶಬ್ದವಾಚ್ಯನಾದ ಬ್ರಹ್ಮನಿಗೆ ಜನ್ಮಸ್ಥಾನವಾದ; ಸಃ ಪದ್ಮಕೋಶಃ = ಆ ಬೃಹತ್ ಪದ್ಮ ಸದನವು; ಕಾಲೇನ

= ನಿರ್ದಿಷ್ಟಕಾಲದಲ್ಲಿ; ಕರ್ಮಪ್ರತಿ ಬೋಧಿತೇನ = ಅದೃಷ್ಟನಿಯಾಮಕನಿಂದ ಪ್ರೇರಿತವಾಗಿ (ಕಾರ್ಯರೂಪವನ್ನು ಹೊಂದಿ); ಸಹಸಾ = ರಭಸದಿಂದ; ಉದತಿಷ್ಠತ್ = ಮೇಲಕ್ಕೆದ್ದು ನಿಂತಿತು.

(ಹದನಾಲ್ಕು ಲೋಕಗಳು ಯಾವರೀತಿಯಲ್ಲಿ ಸೃಷ್ಟಿಯಾಗಬೇಕೋ ಆ ರೀತಿಯಲ್ಲಿ ಬ್ರಹ್ಮನಿಗೆ ಜನ್ಮಸ್ಥಾನವಾದ ಕಮಲವು ಅವಿರ್ಭವಿಸಿತು. ಇದು ಸಾಮಾನ್ಯವಾಗಿ ನಾವು ಚಿತ್ರಗಳಲ್ಲಿ ಕಾಣುವಂತೆ ಹದಿನಾಲ್ಕು ದಳಯುಕ್ತವಾದ ಕಮಲ. ಇದರ ಸಂಕೇತವನ್ನರಿತು ಬ್ರಹ್ಮನು ಮುಂದೆ ಹದಿನಾಲ್ಕು ಲೋಕಗಳನ್ನು ಸೃಷ್ಟಿಸುವನು. ಆಗ ದೃಶ್ಯಮಾನವಾದ ಕಮಲವು ಲೋಕಗಳ ರೂಪವನ್ನು ಹೊಂದುವುದು; ಅವುಗಳಲ್ಲಿ ಬ್ರಹ್ಮನು ವಿರಾಡ್ರೂಪದಿಂದ ತುಂಬಿ ಕೊಂಡಿರುವನು.)

**ತಲ್ಲೋಕ ಪದ್ಮಂ ಸಉಏವ ವಿಷ್ಣುಃ ಪ್ರಾವೀವಿಶತ್ಸರ್ವಗುಣಾವಭಾಸಂ ।**
**ತಸ್ಮಿನ್ ಸ್ವಯಂ ವೇದಮಯೋ ವಿಧಾತಾ ಸ್ವಯಂಭುವಂಯಂ**
**ಸ್ಮವದಂತಿ ಸೋಭೂತ್ ॥೧೫॥**

ಸರ್ವಗುಣಾವಭಾಸಂ = ಆಕಾಶಾದಿಪಂಚಭೂತಗಳನ್ನೂ ಕೂಡಿಕೊಂಡಿದ್ದ; ತತ್‌ಲೋಕಪದ್ಮಂ = ವೃಕ್ಷದ ಜನ್ಮಕ್ಕೆ ಕಾರಣೀ ಭೂತವಾದ ಬೀಜದಂತೆ ಲೋಕಗಳ ಉತ್ಪತ್ತಿಗೆ ಸೂಚಕವೂ ಕಾರಣೀ ಭೂತವೂ ಆದ ಆ ಪದ್ಮವನ್ನು; ಸ್ವಯಂವೇದಮಯಃ = ವೇದಸ್ವರೂಪನೂ, ವೇದಗಮ್ಯನೂ ಆದ; ವಿಷ್ಣುಃಸಃ ಉಏವ = ತನ್ನಿಂದ ತಾನು ಭಿನ್ನನಲ್ಲದ ಆ ವಿಷ್ಣುವೇ; ಪ್ರಾವೀವಿಶತ್ = ಪ್ರವೇಶ ಮಾಡಿದನು; ತಸ್ಮಿನ್ = ಆ ಪದ್ಮದಲ್ಲಿ; (ಸ್ವಯಂ ವೇದಮಯಃ = ವೇದಮಂತ್ರಗಳ ಮೂರ್ತಿಯಂತೆಯೇ ಇರುವ); ಯಂಸ್ಮಸ್ವಯಭುವಂ ವದಂತಿ = ಯಾರನ್ನು ಸ್ವಯಂಭುವ ಅಥವ ತಾನೇ ತನಾಗಿ ಹುಟ್ಟಿದವನೆಂದು ಹೇಳುವರೋ; ಸಃ ವಿಧಾತಾ = ಆಬ್ರಹ್ಮನು; ಅಭೂತ್ = ಹುಟ್ಟಿದನು.

(ಕಟ್ಟಿಗೆಯಲ್ಲಿ, ಉರಿದು ಬೆಳಕನ್ನು ಕೊಡುವ ಸಾಮಗ್ರಿ ಇದ್ದರೂ, ಅಗ್ನಿಸ್ಪರ್ಶವಾಗದೆ ಅದು ತಾನೇ ಬೆಳಕನ್ನು ಹೇಗೆ ಕೊಡಲಾರದೋ ಹಾಗೆ ತ್ರಿಗುಣಾತ್ಮಕವಾದ ಪದ್ಮವು ತೇಜೋವಸ್ತುವನ್ನೊಳಗೊಂಡಿದ್ದರೂ ಅದು ತಾನಾಗಿ ಬೆಳಗುವಂತಹುದಲ್ಲ. ಶ್ರೀ ಹರಿಯು ಅದರಲ್ಲಿ ಪ್ರವೇಶಮಾಡಿ ತೇಜೋವಸ್ತುವನ್ನು ಕ್ರಿಯಾಶೀಲವಾಗಿ ಮಾಡಿದುದರಿಂದ ಅದು ಸುತ್ತಲೂ ಹರಡಿದ್ದ ಜಲರಾಶಿಯನ್ನು ಪ್ರಕಾಶಗೊಳಿಸಿತು. ಮೊದಲು ಪದ್ಮದ ಸೃಷ್ಟಿ, ಅನಂತರದ ಅದರಲ್ಲಿ ವಿಷ್ಣುವಿನ ಪ್ರವೇಶ ಎಂದು ತಿಳಿಯಬಾರದು. ಸೃಷ್ಟಿಯ ಜೊತೆಜೊತೆಯಲ್ಲೇ ಪ್ರವೇಶವೂ ಆಯಿತು.

ಶ್ರೀಹರಿಯು ವೇದಸ್ವರೂಪನೇ ಆದುದರಿಂದ ವೇದಮಯ;

ವೇದಗಮ್ಯನೆಂಬುದೂ ಆ ಮಾತಿನ ಅರ್ಥವೇ. ಆ ವೇದಮಯನ ಸಂಪೂರ್ಣ ಅನುಗ್ರಹಕ್ಕೆ ಪಾತ್ರನಾಗಿ ತನ್ನ ಇಡೀ ಜೀವನವನ್ನು ಪೂರ್ಣವಾಗಿ ವೇದಪದ್ಧತಿಯಂತೆ ಜರುಗಿಸುವುದರಿಂದ ಬ್ರಹ್ಮನಿಗೂ ವೇದಮಯನೆಂದು ಹೆಸರು.

ತಂದೆ ತಾಯಿಗಳ ಇರುವಿಕೆಯು ಕಾಣದಿರುವುದರಿಂದ ಆ ಬ್ರಹ್ಮನಿಗೆ 'ಸ್ವಯಂಭುವ,' 'ಅಜ' (ಎಲ್ಲರಂತೆ ಜನ್ಮಪಡೆಯದಿರುವವನು) ಎಂದು ಹೆಸರು. ಈ ಹೆಸರುಗಳು ನಿಜವಾಗಿ ವಿಷ್ಣುವಿಗೆ ಮಾತ್ರ ಸಲ್ಲತಕ್ಕವುಗಳು; ಅದರಂತೆ ಅವನ ಅಧೀನ ಸಹಚಾರಿಣಿಯಾದ ಲಕ್ಷ್ಮೀದೇವಿಗೂ ಕೂಡ. (ಸು = ಸರ್ವವಿಧದಲ್ಲಿಯೂ ಸಮೀಚೀನನಾದ ವಿಷ್ಣುವಿನ ದೆಸೆಯಿಂದ; ಅಯಂ = ಇವನು; ಭುವಃ = ಜನ್ಮತಾಳಿದವನು.; ಅ = ಅಕಾರವಾಚ್ಯನಾದ ವಿಷ್ಣುವಿನ ದೆಸೆಯಿಂದ; ಜ = ಜನಿಸಿದವನು- ಆದುದರಿಂದ ಬ್ರಹ್ಮನಿಗೆ ಆ ಹೆಸರುಗಳು.)

(ಸರ್ವಗುಣಮಯವಾದ ಪ್ರಾಕೃತ ಕಮಲಕ್ಕೆ ಅಭಿಮಾನಿನಿ, ಲಕ್ಷ್ಮೀದೇವಿ- ಜಗನ್ಮಾತೆ. ಅದರಲ್ಲಿ ಪ್ರವಿಷ್ಟನಾದ ಸರ್ವಶಕ್ತಿದಾಯಕ, ವಿಷ್ಣು-ಜಗತ್ಪಿತಾ.)

**ತಸ್ಯಾಂಸಚಾಂಭೋರುಹಕರ್ಣಿಕಾಯಾಮವಸ್ಥಿತೋಲೋಕಮಪಶ್ಯಮಾನಃ।**
**ಪರಿಕ್ರಮನ್ವ್ಯೋಮ್ನಿ ವಿವೃತ್ತನೇತ್ರಶ್ಚತ್ವಾರಿ ಲೇಭೇನುದಿಶಂ ಮುಖಾನಿ**
**॥೧೬॥**

ತಸ್ಯಾಂ ಅಂಭೋರುಹ ಕರ್ಣಿಕಾಯಾಂ = ಆಕಮಲದ ಪೀಠಸದೃಶವಾದ ಕರ್ಣಿಕೆಯ ಭಾಗದಲ್ಲಿ; ಲೋಕಂ ಅಪಶ್ಯಮಾನಃ = ಬೇರೆ ಲೋಕಗಳನ್ನಾಗಲೀ ಪ್ರಜೆಗಳನ್ನಾಗಲೀ ಕಾಣದಿರಲು; ವಿವೃತ್ತನೇತ್ರಃ = ಕಣ್ಣರಳಿಸಿ; ವ್ಯೋಮ್ನಿ ಪರಿಕ್ರಮನ್ = ಆಕಾಶದ ಕಡೆಗೆ ಈ ಕಡೆ, ಆಕಡೆ ಹೊರಳಿಸಿ ನೋಡಲುದ್ಯುಕ್ತನಾದಾಗ; ಅನುದಿಶಂ = ದಿಕ್ಕುಗಳನ್ನನುಸರಿಸಿ; ಚತ್ವಾರಿ ಮುಖಾನಿಲೇಭೇ = ನಾಲ್ಕು ಮುಖಗಳನ್ನು ಹೊಂದಿದನು.

(ನಾಲ್ಕು ಮುಖಗಳ ಕಾರಣದಿಂದ ಆ ಬ್ರಹ್ಮನು ಏಕಕಾಲದಲ್ಲಿ ಸರ್ವತ್ರದೃಷ್ಟಿಯನ್ನು ಹರಿಸಬಲ್ಲವನಾದನು. ನಾಲ್ಕು. ಅಥವ ಅನೇಕ ಮುಖಗಳು, ನಾಲ್ಕು ಅಥವ ಅನೇಕ ಬಾಹುಗಳು ಮುಂತಾದವುಗಳ ವಿನ್ಯಾಸಗಳನ್ನೂ ಉಪಯೋಗಗಳನ್ನೂ ಕುರಿತು ಊಹಿಸಲಾರದ ಅಥವ ಕಾಣಲಾರದ ಬುದ್ಧಿವಂತ ರನೇಕರು ಇಂತಹ ವರ್ಣನೆಗಳನ್ನು ಕೇವಲ ರೂಪಕಗಳೆಂದು ಕೈಬಿಡುತ್ತಾರೆ; ಅದು ಸರಿಯಲ್ಲ. ಭಗವಂತನ ಸೃಷ್ಟಿ ಚಿತ್ರ ವಿಚಿತ್ರವಾದುದು.)

ತಸ್ಮಾದ್ಯುಗಾಂತಶ್ವಸನಾವಘೂರ್ಣಮಹೋರ್ಮಿಚಕ್ರಾತ್ಸ
ಲಿಲಾದ್ವಿರೂಢಂ ।
ಅಪಾಶ್ರಿತಃಕಂಜ ಮುಲೋಕತಂತ್ರಂನಾತ್ಮಾನಮದ್ಧಾವಿದದಾದಿದೇವಃ
॥೧೭॥

ಯುಗಾಂತಶ್ವಸನ ಅವಘೂರ್ಣ ಮಹಾಊರ್ಮಿಚಕ್ರಾತ್ = ಪ್ರಳಯವಾಯುವಿನಿಂದ ಕದಡಿದ ಮಹಾ ಅಲೆಗಳ ಸಮೂಹದಿಂದ ಲೋಕತಂತ್ರಂ; ಕಂಜಂ = ಲೋಕಗಳ ಸೃಷ್ಟಿಯ ವ್ಯವಸ್ಥೆಯನ್ನು ತನ್ನಲ್ಲಡಗಿಸಿಕೊಂಡಿದ್ದ ಪದ್ಮವು ಅಪಾಶ್ರಿತಃ ಉ = ಆಶ್ರಯವನ್ನು ಕಳೆದುಕೊಂಡಂತೆ ಅಲುಗಾಡಲಾರಂಭಿಸಿತು; ಆದಿದೇವಃ = ಚತುರ್ಮುಖನು; ತಸ್ಮಾತ್ = ಮುಖಗಳ ಪ್ರಾಪ್ತಿಯ ದೆಸೆಯಿಂದ; ಆತ್ಮಾನಂ = ತನ್ನ ಸ್ಥಾನಮಾನಗಳನ್ನಾಗಲೀ, ತನ್ನ ಅಂತರ್ಯಾಮಿಯನ್ನಾಗಲೀ; ಅದ್ಧಾ = ಪ್ರತ್ಯಕ್ಷವಾಗಿ; ನಅವಿದತ್ = ತಿಳಿಯಲು ಸಮರ್ಥನಾಗಲಿಲ್ಲ.

(ಜೀವರ ಗಂಪಿನಲ್ಲಿ ಸರ್ವೋತ್ತಮನಾದ ಬ್ರಹ್ಮನಿಗೆ ಅಜ್ಞಾನವುಂಟೇ ಎಂದರೆ, ಅದು ಅನ್ಯಥಾಜ್ಞಾನ ಅಥವ ತಪ್ಪು ತಿಳಿವಳಿಕೆಯಲ್ಲ; ಆದರೆ, ಪೂರ್ಣಜ್ಞಾನದ ಕೊರತೆ. ಕೊರತೆಯಿಲ್ಲದ ಪೂರ್ಣಜ್ಞಾನ ಉಳ್ಳವನು ಪರಬ್ರಹ್ಮನೊಬ್ಬನೇ. ಈ ವರ್ಣನೆಯಿಂದ, ಜಡಜೀವರಲ್ಲಿ ಪರಬ್ರಹ್ಮನು ಪ್ರವಿಷ್ಟನಾಗಿರುವನೇ ಹೊರತು ಅವನೇ ಜಡಜೀವರಂತೆ ರೂಪಾಂತರಗಳನ್ನು ಹೊಂದುವನು ಎಂಬ ವಾದಕ್ಕೆ ಅವಕಾಶವಿಲ್ಲದೆ ಹೋಯಿತು.)

ಕಏಷಯೋಸಾವಹಮಬ್ಜಪೃಷ್ಠಏತತ್ಕುತೋವಾಬ್ಜಮನನ್ಯದಪ್ಸು ।
ಅಸ್ತಿಹ್ಯಧಸ್ತಾದಿಹ ಕಿಂಚನೈತದಧಿಷ್ಠಿತಂ ಯತ್ರಸತಾನುಭಾವ್ಯಂ ॥೧೮॥

ಅಸೌ ಅಬ್ಜಪೃಷ್ಠೇ(ನಿಷಣ್ಣಃ) = ಈ ಕಮಲಪೀಠದಲ್ಲಿ ಕುಳಿತಿರುವ; ಏಷಃ ಅಹಂ = ಈ ನಾನು; ಕಃ = ಯಾರು? (ನನ್ನ ಸ್ಥಾನಮಾನಗಳೇನು?); ಅಪ್ಸು = ನೀರಿನಲ್ಲಿ; ಅನನ್ಯಂ = ಪೃಥಿವ್ಯಾದಿ ಬೇರೆ ಯಾವ ಪರಿಕರವೂ ಇಲ್ಲದ; ಏತತ್ ಅಬ್ಜಂವಾ = ಈ ಕಮಲವಾದರೂ; ಕುತಃ = ಹೇಗೆ ಉಂಟಾಯಿತು? ಇಹ ಅಧಸ್ತಾತ್ = ಇದರ ಕೆಳಗೆ; ಯತ್ರ ಏತತ್ ಅಧಿಷ್ಠಿತಂ = ಇದು ಎಲ್ಲಿ ಸ್ಥಾಪಿತವಾಗಿದೆ ಎಂದು ತಿಳಿಯಲು; ಕಿಂಚ ನ ಅಸ್ತಿಹಿ = ಏನೂ ಇರುವುದಿಲ್ಲ; ಯತ್ರ = ಯಾವ ಈ ವಿಷಯದಲ್ಲಿ; ಸತಾ = ಪರಮಾತ್ಮನ ದೆಸೆಯಿಂದಲೇ ಎಂದು; ಭಾವ್ಯಂ ತಿಳಿಯಲ್ಪಡಬೇಕು.

(ಚತುರ್ಮುಖಬ್ರಹ್ಮದೇವರಿಗೆ ಸ್ವರೂಪತಃ ಅಜ್ಞಾನವೆಂಬುದಿಲ್ಲ. ಆದರೂ

ಹುಟ್ಟಿದ ಕೂಡಲೇ ಜೀವರಿಗೆ ಹೇಗೆ ದಿಗ್ಭ್ರಮೆಯಾಗುವುದೆಂಬುದನ್ನು ಸೂಚಿಸಲು ಅವರು ಸ್ವಲ್ಪ ಅಜ್ಞಾನಕ್ಕೆ ಒಳಗಾದಂತೆ ಚಿಂತಿಸಿ, ನಿರ್ಣಯಕ್ಕೆ ಬಂದಿದ್ದಾರೆ. ಅದೂ ಅಲ್ಲದೆ, ಆ ಸನ್ನಿವೇಶದಲ್ಲಿ, ಜಲವನ್ನೂ ಪದ್ಮವನ್ನೂ ಸೃಷ್ಟಿಸಿದ ಶ್ರೀಮನ್ನಾರಾಯಣ, ಚತುರ್ಮುಖರಿಗೂ ಭ್ರಮೆಯಾಗುವಷ್ಟು ಅತಿಶಯವಾದ ತನ್ನ ಮಹಿಮೆಯನ್ನು ಅವುಗಳಲ್ಲಿ ಪ್ರಕಟಿಸಿದನೆಂದು ಹೇಳಬಹುದು. ಇದು ನೇತ್ರ ಪಾಟವ ಸ್ವಲ್ಪ ಕಡಿಮೆಯಾಗಿದ್ದವರು ನೆತ್ತಿಯಮೇಲೆ ಬಂದ ಸೂರ್ಯನನ್ನು ನೋಡಿದಾಗ ಅದು ಅಲುಗಾಡಿದಂತೆ ಕಾಣುವ ಭ್ರಮೆಯಂತೆ ಎಂದು ಶಾಸ್ತ್ರಕಾರರು ಹೇಳಿರುವರು. ಸಾಮಾನ್ಯ ಶಿಶುವಿನಂತೆ ಆ ಚತುರ್ಮುಖ ಬ್ರಹ್ಮದೇವರಾಗಿದ್ದರೆ ತಾವು ಕಂಡ ನೀರು ಕಮಲ ಮೊದಲಾದುವನ್ನು ಆಯಾವಸ್ತುಗಳೆಂದು ತಿಳಿದುದೇ ಅಸಂಭವವೆನಿಸುವುದು. ಅದು ಹಾಗಲ್ಲ. ಅನಾದಿ ಸಾಮಾನ್ಯ ಅಪರೋಕ್ಷಿಗಳು ಋಜುಜೀವರು. ೧೯೯ ಬ್ರಹ್ಮಕಲ್ಪಸಾಧನೆ ಮಾಡಿಕೊಂಡು, ಬ್ರಹ್ಮಪದವಿಗೆ ಬಂದ ಈ ಜೀವರಿಗೆ, ಪದ್ಮಸಂಭವರೆನಿಸಿಕೊಳ್ಳುವ ಹೊತ್ತಿಗೆ ಬಹಿರಾವರಣಗಳ ಸೃಷ್ಟಿಯಿಂದ ಹಿಡಿದು ಇಲ್ಲಿಯ ತನಕ ಐವತ್ತು ವರ್ಷಗಳು ಕಳೆದು, ಇದು ಐವತ್ತೊಂದನೇ ವರ್ಷದ ಪ್ರಥಮ ದಿವಸವಾಗಿದೆ. ಆದುದರಿಂದ ಚತುರ್ಮುಖ ಬ್ರಹ್ಮದೇವರ ಅಜ್ಞಾನವೆಂಬುದು ಪರಬ್ರಹ್ಮನ ಪ್ರತಿಭೆಯ ಮುಂದೆ ಅವರು ಅಪ್ರತಿಭರಾದಂತೆ ಮಾತ್ರ ಎಂದು ತಿಳಿಯಬೇಕು. ಅಲ್ಲದೆ ರಮಾನಾರಾಯಣರು ಸರ್ವದಾ ಸರ್ವವನ್ನೂ ಪ್ರತ್ಯಕ್ಷ ಕಾಣಬಲ್ಲವರಾದರೆ, ಬ್ರಹ್ಮಾಯುಗಳು ಆಲೋಚನೆಯಿಂದ ತಮ್ಮ ವ್ಯಾಪ್ತಿಗೆ ಒಳಪಟ್ಟ ಎಲ್ಲವನ್ನೂ ಕಾಣಬಲ್ಲ ಸರ್ವಜ್ಞರು. ಆದುದರಿಂದ ಅವರು ಆಲೋಚನೆಮಾಡಿ, ನಿರಾಶ್ರಯವಾದ ಕಮಲಕ್ಕೆ ಭಗವಂತನೇ ಆಶ್ರಯನೆಂಬ ನಿರ್ಧಾರಕ್ಕೆ ಬಂದರು. ಅಷ್ಟೇ ಅಲ್ಲದೆ, ಮುಂದೆ ಸೃಷ್ಟಿಯಲ್ಲಿ ಬರತಕ್ಕ, ಸ್ವಲ್ಪಮಟ್ಟಿಗೆ ಅನಾದಿ ಅಪರೋಕ್ಷಿಗಳಾದ ಹಿರಿಯ ದೇವತೆಗಳೂ ಅವರ ದೇಹದಲ್ಲಿ ಆಶ್ರಯಹೊಂದಿ ಇದ್ದರು. ಬ್ರಹ್ಮದೇವರ ಭಯ, ಅಜ್ಞಾನ ಎಂಬ ತಾತ್ಕಾಲಿಕ ಭಾವಗಳಿಂದ ಅವರು ಪ್ರಭಾವಿತ ರಾಗುವರೆಂಬುದೂ ಗಮನಿಸಬೇಕಾದ ಅಂಶ)

ಸಇತ್ಥಮುದ್ವೀಕ್ಷ್ಯ ತದಬ್ಜನಾಳನಾಳೀಭಿರಂತರ್ಜಲ ಮಾವಿವೇಶ ।
ನಾರ್ವಾಗ್ಗತಸ್ತತ್ಖರನಾಳನಾಳೀಃ ಸಪ್ಯೈವಿಚಿನ್ವಂಸ್ತದವಿಂದತಾಜಃ ॥೧೯॥

ಸಃ = ಆಬ್ರಹ್ಮದೇವರು; ಇತ್ಥಂ = ಹಿಂದೆ ಹೇಳಿದ ಪ್ರಕಾರವಾಗಿ; ಉದ್ವೀಕ್ಷ್ಯ = ಆಲೋಚಿಸಿ; ತತ್ ಅಬ್ಜನಾಳ ನಾಳೀಭಿಃ = ಆ ಕಮಲದ ಕಾಂಡದೊಳಗಿನ ವಿಶಾಲ ನಾಳಗಳ ಮುಖಾಂತರ; ಅಂತರ್ಜಲಂ = ಬ್ರಹ್ಮಾಂಡದೊಳಗೆ ವಿಸ್ತರಿಸಿದ್ದ ಜಲಭಾಗವನ್ನು; ಆವಿವೇಶ = ಪ್ರವೇಶಿಸಿದರು; ಸಃಅಜಃ = ಆಬ್ರಹ್ಮದೇವರು; ತತ್

ಖರನಾಳನಾಳೀಃ = ಆ ಗಟ್ಟಿಯಾದ ಕೊಳವೆಗಳಂತಹ ನಾಳಗಳನ್ನು; ವಿಚಿನ್ವನ್ = ಪರೀಕ್ಷಿಸಿ; ಅರ್ವಾಗ್ಗತಃ = ಕೆಳಗಿಳಿದವರು; ನ ಅವಿಂದತವೈ = ಏನೆಂದು ತಳಿಯಲು ಸಮರ್ಥರಾಗಲಿಲ್ಲ.

(ಬ್ರಹ್ಮದೇವರ ಅಜ್ಞಾನವೆಂಬುದು ಭಗಂತನ ದೃಷ್ಟಿಯಲ್ಲಿ ಅಪೂರ್ಣವೇ ಹೊರತು ಅನ್ಯಥಾಜ್ಞಾನವಲ್ಲ. ಆದರಂತೆ ಭಗವಂತನ ದೃಷ್ಟಿಯಲ್ಲಿ ಅವರ ಸಾಮರ್ಥ್ಯ ಕಿರಿದಾದುದಷ್ಟೇ. ಇಲ್ಲಿ ಹೇಳಿರುವುದೆಲ್ಲ ಭಗವಂತನ ಅದ್ಭುತ ಕ್ರಿಯಾ ಸಾಮರ್ಥ್ಯವನ್ನು ತಿಳಿಸುವುದಕ್ಕಾಗಿಯೇ ಹೊರತು ಬ್ರಹ್ಮದೇವರಲ್ಲಿ ಕೊರತೆಯನ್ನು ಹೇಳುವುದಕ್ಕಲ್ಲ.)

ತಮಸ್ಯಪಾರೇವಿದುರಾತ್ಮ ಸರ್ಗಂ ವಿಚಿನ್ವತೋಽಭೂತ್ಸು
ಮಹಾಂಸ್ತ್ರಿನೇಮಿಃ ।
ಯೋದೇಹಭಾಜಾಂ ಭಯಮೀರಯಾಣಃ ಪರಿಕ್ಷಿಣೋತ್ಯಾಯುರ
ಜಸ್ಯಹೇತಿಃ ॥೨೦॥

ಆತ್ಮಸರ್ಗಂ = ಜೀವಸೃಷ್ಟಿಯು; ತಮಸಿ ಅಪಾರೇ (ಇತಿ) = ಜೀವಾವರಕವಾದ, ದುರ್ಭೇದ್ಯವಾದ ಅಜ್ಞಾನ ಕಾರಣವಾದ ವಸ್ತುವಿನಲ್ಲಿ ಎಂದು; ವಿದುಃ = ತಿಳಿಯುವರು; (ಹೀಗೆಂದುಕೊಂಡು) ವಿಚಿನ್ವತಃ = ಕಮಲದಲ್ಲಿ ತಮ್ಮ ಜನನದ ಕಾರಣವನ್ನು ಹುಡುಕುತ್ತಿರಲು; ಯಃ = ಯಾವುದು; ದೇಹಭಾಜಾಂ = ದೇಹಧರಿಸಿ ಜನಿಸಿದವರಿಗೆ; ಭಯಂ ಈರಯಾಣಃ = ಭಯವನ್ನು ಹುಟ್ಟಿಸತ್ತಾ; ಆಯುಃ ಪರಿಕ್ಷಿಣೋತಿ = ಆಯುರ್ಮಾನವನ್ನು ಕಳೆಯುವುದೋ, ಅಂತಹ; ಸುಮಹಾನ್ ತ್ರಿನೇಮಿಃ = ಬೃಹತ್ತರವಾದ ಮೂರು ಅರೆಕಾಲುಗಳುಳ್ಳದ್ದಾಗಿ, ಮೂರುಚಾತುರ್ಮಾಸ್ಯಗಳನ್ನು ಸೂಚಿಸುವ; ಅಜಸ್ಯ = ಭಗವಂತನ; ಹೇತಿಃ = ಕಾಲರೂಪವಾದ ಚಕ್ರವು; ಅಭೂತ್ = ದೃಗ್ಗೋಚರವಾಯಿತು.

(ಕರ್ಮಗಳನ್ನು ನಡೆಸಿ, ತನ್ಮೂಲಕ ಜ್ಞಾನವನ್ನು ಪಕ್ವಗೊಳಿಸುವುದು ಕಾಲವೆಂಬ ವಸ್ತು. ಜ್ಞಾನಸಿದ್ಧಿಗೆ ಬೇಕಾದುದು ತಪಸ್ಸು. ದೃಗ್ಗೋಚರವಾದ ಚಕ್ರವು ಅದರ ಸಂಕೇತವಾಗಿತ್ತು.)

ತತೋನಿವೃತ್ಯಾಪ್ರತಿಲಬ್ಧಕಾಷ್ಟಃ ಸ್ವಧಿಷ್ಣ್ಯಮಾಸ್ಥಾಯಪುನಃ ಸದೇವಃ ।
ಶನೈರ್ಜಿತಶ್ವಾಸ ನಿವೃತ್ತಚಿತ್ತೋನ್ಯಷೀದದಾರೂಢ ಸಮಾಧಿಯೋಗಃ ॥೨೧॥

ತತಃ = ಅನಂತರ; ಅಪ್ರತಿಲಬ್ಧಕಾಷ್ಟಃ = ಪದ್ಮಕ್ಕೂ ತನಗೂ ಕರ್ತನಾದ ಬ್ರಹ್ಮನನ್ನು ಕಾಣಲಾಗದೆ; ಪುನಃ = ಮತ್ತೆ; ನಿವೃತ್ಯಾ = ಹಿಂದಿರುಗುವ ಕ್ರಮದಿಂದ;

ಸ್ವಧಿಷ್ಣ್ಯಂ ಆಸ್ಥಾಯ = ತನ್ನ ಕಮಲ ಪೀಠಸ್ಥಾನವನ್ನು ಸೇರಿ; ಸಃ ದೇವಃ = ಆಚತುರ್ಮುಖ ಬ್ರಹ್ಮದೇವರು; ಶನೈಃ = ಮೆಲ್ಲಮೆಲ್ಲಗೆ; ಜಿತಶ್ವಾಸಃ = ಪ್ರಾಣಾಯಾಮಕ್ರಮದಲ್ಲಿ ಕುಂಭಕದಿಂದ ಶ್ವಾಸವನ್ನು ಬಂಧಿಸಿ; ನಿವೃತ್ತ ಚಿತ್ತಃ = ಮನಸ್ಸನ್ನು ಇಂದ್ರಿಯಗಳಿಂದ ವಿಮುಖಮಾಡಿ; ಆರೂಢಸಮಾಧಿಯೋಗಃ = ಬಾಹ್ಯ ಪ್ರಪಂಚವನ್ನು ಮರೆತ ಅಸಂಪ್ರಜ್ಞಾತ ಭಾವ ಸಮಾಧಿಯಲ್ಲಿ; ನ್ಯಷೀದತ್ = ಏಕಾಗ್ರಚಿತ್ತರಾಗಿ ಕುಳಿತರು.

(ಇಲ್ಲಿ ಹೇಳಿದ ಯೋಗಸಮಾಧಿಯು ಶೂನ್ಯಸ್ಥಿತಿಗೆ ತರುವ ಸಾಮಾನ್ಯ ಯೋಗಿಗಳ ಅನುಭವದ ಮಾತಲ್ಲ. (Not What is called Transcendental meditation) ಇದು ಭಗವತ್ತತ್ತ್ವ ಚಿಂತನೆಯಿಂದ ಭಗವಂತನನ್ನು ಕಾಣುವ ಬಗೆ. ಮನುಷ್ಯೋತ್ತಮರು ತಮಗೆ ಯೋಗ್ಯವಾದ ಭಗವನ್ಮೂರ್ತಿಯನ್ನು ಧ್ಯಾನಿಸಿ, ಪಕ್ವಸ್ಥಿತಿಗೆ ಬಂದಾಗ ಕಾಣುವರು. ಬ್ರಹ್ಮದೇವರಂತಹವರು ತಮ್ಮ ತಮ್ಮ ಸಾಮರ್ಥ್ಯಗಳಿಗೆ ಅನುಗುಣವಾಗಿ ಭಗವಂತನ ವಿಶ್ವರೂಪವನ್ನು ಚಿಂತಿಸಿ ಕಾಣುವರು. ಅವರು ಆ ಭಗವಂತನ ಒಂದೊಂದು ಮೂರ್ತಿಯಲ್ಲೂ ವಿಶ್ವಮೂರ್ತಿಯನ್ನು ನೋಡಬಲ್ಲರು.)

**ಕಾಲೇನಸೋಜಃ ಪುರುಷಾಯುತಾಭಿಃ ಪ್ರವೃದ್ಧಯೋಗೇನ ವಿರೂಢ ಬೋಧಃ ।**
**ಸ್ವಯಂತದಂತರ್ಹೃದಯೇವಭಾತಮಪಶ್ಯತಾಪಶ್ಯತಯನ್ನಪೂರ್ವಂ ॥೨೨॥**

ಸಃ ಅಜಃ = ಆ ಬ್ರಹ್ಮದೇವರು; ಪುರುಷಾಯುತಾಭಿಃ ಕಾಲೇನ = ದೇವಮಾನದ ಸಾವಿರ ವರ್ಷಗಳ ಕಾಲ; ಪ್ರವೃದ್ಧಯೋಗಃ = ಚಿತ್ತ ಸಾಮರ್ಥ್ಯವು ಕ್ರಮಕ್ರಮವಾಗಿ ಹೆಚ್ಚಿದುದರಿಂದ; ವಿರೂಢಬೋಧಃ = ಭಗವದಪರೋಕ್ಷಕ್ಕೆ ಸಾಧಕವಾದ ಜ್ಞಾನವನ್ನು ಹೊಂದಿ; ಯತ್ ಪೂರ್ವಂನ ಅಪಶ್ಯತ್ = ನಾಳಮಾರ್ಗದಿಂದಿಳಿದು ಹುಡುಕಿದಾಗ ಯಾವುದನ್ನು ಕಾಣಲಾಗಲಿಲ್ಲವೋ; ಸ್ವಯಂ ತತ್ = ತನ್ನ ಧ್ಯಾನವಿಷಯನಾದ ಆ ಕಾರಣ ಪುರುಷನನ್ನೇ; ಅಂತರ್ಹೃದಯೇ = ತಮ್ಮ ಹೃದಯಕಮಲದಲ್ಲಿ; ಅವಭಾತಂ = ತಾನಾಗಿ ಪ್ರಸನ್ನತೆಯಿಂದ ಕಾಣಿಸಿದ ಪರಮಾತ್ಮನನ್ನು; ಅಪಶ್ಯತ = ನೋಡಿದರು.

(ಪುರುಷಾಯುಷ್ಯವೆಂದರೆ ನೂರುವರ್ಷ. 'ಆಯುತಾಭಿಃ' ಎಂದು ಬಹುವಚನವಿರುವುದರಿಂದ, ಸಹಸ್ರವರ್ಷ ಎಂದು ಅರ್ಥಮಾಡಬೇಕು. ಅದು ಸುರರ

ಸಹಸ್ರ ವರ್ಷವೆಂದು ಜ್ಞಾನಿಗಳಾದ ವಿಜಯದಾಸರಂಥವರು ತಿಳಿಸಿರುವರು. ಭಗವಂತನ ದರ್ಶನವು ಕೇವಲ ಅವನ ಪ್ರಸಾದದಿಂದ ದೊರೆಯುವುದೇ ಹೊರತು ಸಮಾಧಿಯೋಗಬಲದಿಂದಲ್ಲ. ಆದರೆ ಯೋಗಾಭ್ಯಾಸದಂತಹ ಸಾಧನೆ ಏಕೆ ಎಂದರೆ, ಜೀವಸ್ವರೂಪ ಸಾಮರ್ಥ್ಯವನ್ನು ಉದ್ಬೋಧಗೊಳಿಸುವುದಕ್ಕಾಗಿ. ಸೃಷ್ಟಿಯಲ್ಲಿ ತಂದು, ದೇಹವನ್ನು ಕೊಟ್ಟು ಸಾಧನೆ ಮಾಡಿಸುವವನೂ ಆ ಭಗವಂತನೇ ಆದುದರಿಂದ ಆ ಮಹಾನುಭಾವನ ದರ್ಶನಕ್ಕೆ ಅವನ ಕಾರುಣ್ಯವು ಮುಖ್ಯಕಾರಣ; ಸಾಧನೆಯೆಂಬುದು ಕೇವಲ ನಿಮಿತ್ತ ಕಾರಣ.)

**ಮೃಣಾಲಗೌರಾಯತ ಶೇಷಭೋಗ ಪರ್ಯಂಕಏಕಂ ಪುರುಷಂ**
**ಶಯಾನಂ ।**
**ಫಣಾಸಹಸ್ರಾಯುತ ಮೂರ್ಧರತ್ನದ್ಯುಭಿರ್ಹತ ಧ್ವಾಂತಯುಗಾಂತ**
**ತೋಯೇ ॥೨೩॥**

ಅಯುತ = ಒಂದಾಗಿ ಕೂಡಿಕೊಂಡಿರದೆ ಬೇರೆಬೇರೆಯಾಗಿ ಶೋಭಿಸುವ; ಫಣಾಸಹಸ್ರ = ಸಾವಿರ ಹೆಡೆಗಳ; ಮೂರ್ಧರತ್ನದ್ಯುಭಿಃ = ಶಿರೋರತ್ನಗಳ ಕಾಂತಿಗಳಿಂದ; ಹತಧ್ವಾಂತ = ನೀಗಿದ ಕತ್ತಲೆಯ; ಯುಗಾಂತತೋಯೇ = ಕಲ್ಪಾಂತ ಪ್ರಳಯೋದಕದಲ್ಲಿ; ಮೃಣಾಲಗೌರ ಆಯತ ಶೇಷಭೋಗ ಪರ್ಯಂಕೇ = ಕಮಲದಂಟಿನೊಳಗಿನ ದಾರಗಳಂತೆ ಬಿಳುಪಾಗಿ, ವಿಸ್ತಾರವಾದ ಶೇಷದೇವರ ಶರೀರವೆಂಬ ದಿವ್ಯತಲ್ಪದಲ್ಲಿ; ಶಯಾನಂ = ಪವಡಿಸಿರುವ; ಏಕಂ ಪುರುಷಂ = ಪ್ರಾಕೃತ ಗುಣದೂರನಾದ ಅಪ್ರಾಕೃತ ಪುರುಷನನ್ನು; (ಕಂಡರು.)

(ಒಂಭತ್ತು ಶ್ಲೋಕಗಳಲ್ಲಿ ಭಗವದ್ರೂಪ ವರ್ಣನೆ ಇದೆ. ಒಂದೊಂದು ಶ್ಲೋಕವನ್ನೂ ನಿದಾನವಾಗಿ ಅರ್ಥಮಾಡಿಕೊಂಡು, ಅದರಿಂದೊದಗುವ ಚಿತ್ರವನ್ನು ಮಾನಸಿಕ ಮಾಡಿಕೊಳ್ಳುತ್ತಾ ಹೋದರೆ, ಬ್ರಹ್ಮದೇವರಿಗೆ ಆದ ದರ್ಶನದ ಬಗೆ ನಮ್ಮ ಮನಸ್ಸಿನಲ್ಲಿಯೂ ಯೋಗ್ಯತಾನುಸಾರ ಮೂಡಬಹುದು.

ಬ್ರಹ್ಮದೇವರು ಆ ರೂಪವನ್ನು ಕಂಡದ್ದು ತಮ್ಮ ಹೃದಯದಲ್ಲಿ. ವಿಶಾಲವಾದ ಶೇಷತಲ್ಪ, ವಿಸ್ತಾರವಾದ ಕಲ್ಪಾಂತ ಪ್ರಳಯೋದಕ ಇತ್ಯಾದಿಗಳಿಗೆ ಅವರ ಹೃದಯಕಮಲದಲ್ಲಿ ಸ್ಥಳವೆಲ್ಲಿ ಎಂದು ಶಂಕಿಸಬೇಕಾಗಿಲ್ಲ. ಅದು, ವಿಶಾಲ ದೃಶ್ಯವನ್ನು ಸಣ್ಣ ಛಾಯಾಗ್ರಹಣ ಚಿತ್ರದಲ್ಲಿ ಕಂಡಂತೆ ಸಾಧ್ಯವೇ ಸರಿ. ಜೀವರ ಕಣ್ಣಲ್ಲಿ ತನ್ನ ಕಣ್ಣಿಟ್ಟು ನೋಡಿ ನೋಡಿಸುವವನು ಭಗವಂತನೇ ಎಂಬುದನ್ನು ಮರೆಯಬಾರದು.)

**ಪ್ರೇಕ್ಷಾಂಕ್ಷಿಪಂತಂ ಹರಿತೋಪಲಾದ್ರೇಃ ಸಂಧ್ಯಾಭ್ರ ನೀವೇರುರು**
**ರುಕ್ಮಮೂರ್ಧ್ನಃ ।**

ರತ್ನೋದಧೇರೋಷಧಿ ಸಾಮನಸ್ಯವನಸ್ರಜೋವೇಣು ಭುಜಾಂಘ್ರಿ
ಪಾಂಘ್ರೇಃ ॥೨೪॥

ಸಂಧ್ಯಾ ಅಭ್ರನೀವೇಃ = ಸಂಜೆಯ ವರ್ಣರಂಜಿತ ಮೋಡಗಳನ್ನೇ ವಸ್ತ್ರವಾಗಿ ಉಳ್ಳ; ಉರುರುಕ್ಮಮೂರ್ಧ್ನಃ = ಶಿರೋಭಾಗದಲ್ಲಿ ಅನೇಕವಾದ ಸುವರ್ಣ ಶಿಲಾಶಿಖರಗಳುಳ್ಳ; ರತ್ನೋದಧೇಃ = ಶಿಲಾಸ್ತರಗಳಲ್ಲಿ ತುಂಬಿದ ರತ್ನವಿಶೇಷಗಳಿಂದ ಸಮುದ್ರ ಸದೃಶವಾದ; ಓಷಧಿ ಸೌಮನಸ್ಯ ವನಸ್ರಜಃ = ಪುಷ್ಪಿತಗಳಾದ ವನಸ್ಪತಿ ಸಮೂಹರೂಪವಾದ ವನಮಾಲೆಯಿಂದ (ವೈಜಯಂತೀ ಮಾಲೆಯಿಂದ) ಅಲಂಕೃತವಾದ; ವೇಣುಭುಜ = ಗಡಸಾದ ಬಿದಿರುವೃಕ್ಷಗಳೇ ಬಾಹುಗಳಾಗಿರುವ; ಅಂಘ್ರಿಪ ಅಂಘ್ರೇಃ = ಪಾದಪಗಳೇ (ವೃಕ್ಷಗಳೇ) ಪಾದಗಳಾಗಿ ಸಾನು ಪ್ರದೇಶದಲ್ಲಿ ಉಳ್ಳ; ಹರಿತೋಪಲಾದ್ರೇಃ = ನೀಲಪರ್ವತದ; ಪ್ರೇಕ್ಷಾಂ ರಮಣೀಯತ್ವವನ್ನು; ಕ್ಷಿಪಂತಂ = ಸೋಲಿಸುವ; (ಶರೀರವುಳ್ಳರೂಪವನ್ನು ಕಂಡರು.)

(ಉತ್ಪ್ರೇಕ್ಷಾಲಂಕಾರಭರಿತವಾದ ಈ ಶ್ಲೋಕದಿಂದ, ನೀಲವರ್ಣನೂ, ಪೀತಾಂಬರನೂ, ಲಕ್ಷ್ಮ್ಯಾತ್ಮಕಸುವರ್ಣಕಿರೀಟಧಾರಿಯೂ, ರತ್ನಾಭರಣ ಭೂಷಿತನೂ, ವೈಜಯಂತೀಮಾಲಾಧರನೂ, ದೃಢಬಾಹುಯುಗ್ಮವುಳ್ಳವನೂ, ಪರ್ಣಕಿಸಲಯಗಳಂತೆ ಅರುಣವರ್ಣರಂಜಿತ ಪಾದಪದ್ಮಗಳುಳ್ಳವನೂ ಆದ ಅನಂತಶಯನ ಮೂರ್ತಿಯು ವರ್ಣಿಸಲ್ಪಟ್ಟಿದ್ದಾನೆ. ನೀಲಪರ್ವತದ ರಮಣೀಯತೆಯು ಭಗವತ್‌ಪ್ರೇರಣೆಯಿಂದ ಹೊರಹೊಮ್ಮಿದ ಪ್ರಾಕೃತ ಕಾಂತಿಯಿಂದಾದುದು. ಅನಂತಶಯನನ ಲಾವಣ್ಯವು ಅಪ್ರಾಕೃತ ಸ್ವರೂಪ ಭೂತವಾದುದು; ಮಹಾಲಕ್ಷ್ಮೀಯಿಂದ ಅಲಂಕೃತವಾದುದು.)

ಆಯಾಮತೋವಿಸ್ತರತಃ ಸಮಾನದೇಹೇನ ಲೋಕತ್ರಯ ಸಂಗ್ರಹೇಣ।
ವಿಚಿತ್ರದಿವ್ಯಾಭರಣಾಂಶುಕಾನಾಂ ಕೃತಶ್ರಿಯೋಪಾಶ್ರಿತ ದಿವ್ಯವೇಷಂ
॥೨೫॥

ಲೋಕತ್ರಯ ಸಂಗ್ರಹೇಣ = ಮೂರು ಎಂಬ ಪದದಿಂದ ಉಪಲಕ್ಷಿತಗಳಾದ ಹದಿನಾಲ್ಕು ಲೋಕಗಳ ಮೂಲಕಾರಣಗಳನ್ನು ತನ್ನಲ್ಲಿ ಅಡಗಿಸಿಟ್ಟುಕೊಂಡಿರುವ; ಆಯಾಮತಃ ವಿಸ್ತರತಃ ಸಮಾನ ದೇಹೇನ = ನೀಳದ ಅಳತೆಗಳಲ್ಲಿಯೂ ಪರಿಪುಷ್ಟತೆಯಲ್ಲಿಯೂ ಹೊಂದಾಣಿಕೆಯುಳ್ಳ ದೇಹದಿಂದ; ವಿಚಿತ್ರದಿವ್ಯ ಆಭರಣ ಅಂಶುಕಾನಾಂ = ಲೋಕವಿಲಕ್ಷಣಗಳೂ ಅತಿಶಯಕಾಂತಿಭರಿತಗಳೂ ಆದ ಆಭರಣ ವಸ್ತ್ರಗಳ ಅಲಂಕಾರದಿಂದ; ಕೃತಶ್ರಿಯಾ = ಉಂಟಾದ ಪ್ರಭಾಪೂರ್ಣವಾದ; ದಿವ್ಯವೇಷಂ = ಬಹುರಮಣೀಯವಾದ ರೂಪುಳ್ಳವನನ್ನು; (ಕಂಡರು.)

(ಆಯಾಮ ಎಂದರೆ ಉದ್ದ; ವಿಸ್ತಾರವೆಂದರೆ ಖಂಡಗಳಿಂದ ಕಂಡುಬರುವ ಪುಷ್ಟಿ. ಸಾಮುದ್ರಿಕಾಶಾಸ್ತ್ರಕ್ಕೆ ಅನುಗುಣಗಳಾದ ಮೂವತ್ತೆರಡು ಸತ್ಪುರುಷ ಲಕ್ಷಣಗಳಿದ್ದ ದೇಹವೆಂದು ವರ್ಣಿಸಿದ್ದಾರೆ. ತಾನು ವಿರಾಡ್ರೂಪವನ್ನು ಧರಿಸಿ ಚತುರ್ಮುಖ ಬ್ರಹ್ಮದೇವರಲ್ಲಿ ಪ್ರವಿಷ್ಟನಾಗಿ, ಅವರಿಗೂ ವಿರಾಡ್ರೂಪವನ್ನು ಕೊಡಲಿರುವ ಶೇಷಶಯನನು ತನ್ನ ಶರೀರದಲ್ಲಿ ಆ ವಿರಾಡ್ರೂಪದ ಸಕಲ ಲಕ್ಷಣಗಳನ್ನು ಸಂಗ್ರಹಿಸಿಟ್ಟುಕೊಂಡಿದ್ದನು. "ಉಪಾಶ್ರಿತಶ್ರಿಯಾಕೃತದಿವ್ಯವೇಷಂ" ಎಂದು ಪದಗಳ ಅನ್ವಯ ಮಾಡಿದಾಗ, ಆಭರಣವಸನಾಯುಧಗಳ ರೂಪಗಳಿಂದ ಭಗವಂತನ ಸೇವೆಮಾಡುವ ಲಕ್ಷ್ಮೀದೇವಿಯ ಮೂಲಕ ತೋರಿಸಿಕೊಂಡ ದಿವ್ಯದೇಹ ಎಂದು ಅರ್ಥ.)

ಪುಂಸಾಂ ಸ್ವಕಾಮಾಯವಿರಕ್ತಮಾರ್ಗೈರಭ್ಯರ್ಚಿತಾಂ
ಕಾಮದುಘಾಂಘ್ರಿಪದ್ಮಂ ।
ಪ್ರದರ್ಶಯಂತಂ ಕೃಪಯಾ ನಖೇಂದು ಮಯೂಖಭಿನ್ನಾಂಗುಳಿ
ಚಾರುಪತ್ರಂ ॥೨೬॥

ಸ್ವಕಾಮಾಯ = ಭಗವತ್ಪ್ರಸಾದ ರೂಪವಾಗಿ ದೊರೆಯುವ ತಮ್ಮ ಇಷ್ಟಾರ್ಥಗಳ ಪೂರ್ತಿಗಾಗಿ; ವಿರಕ್ತಮಾರ್ಗೈಃ = ವಿವಿಧ ಪೂಜಾವಿಧಿಗಳಿಂದ; ಅಭ್ಯರ್ಚಿತಾಂ = ಪೂಜಿಸುವ; ಪುಂಸಾಂ = ಸಾಧನಯೋಗ್ಯಪುರುಷರಿಗೆ; ಕಾಮಧುಕ್ = ಕಾಮಧೇನುವಿನಂತಿರುವ; ಅಂಘ್ರಿಪದ್ಮಂ = ಪಾದಪದ್ಮವುಳ್ಳ; ಕೃಪಾಯಾ = ತನ್ನನ್ನು ಆಶ್ರಯಿಸುವ ಭಕ್ತರಲ್ಲಿ ಕೃಪೆಮಾಡುವುದಕ್ಕಾಗಿ; ನಖೇಂದು ಮಯೂಖ = ಉಗುರೆಂಬ ಚಂದ್ರನ ಕಿರಣಗಳಿಂದ; ಭಿನ್ನ ಅಂಗುಳಿ ಚಾರುಪತ್ರಂ = ಕಮಲಪತ್ರಗಳಂತೆ ಬೇರೆಬೇರೆಯಾದ ಪಾದಾಂಗುಳಿಗಳನ್ನು; ಪ್ರದರ್ಶಯಂತಂ = ದರ್ಶನ ಮಾಡಿಸುತ್ತಿರುವ; (ರೂಪವನ್ನು ಕಂಡರು).

(ಕಿರೀಟ ಮಂಡಿತವಾದ ಶಿರಸ್ಸಿನಿಂದ ಹಿಡಿದು ಪಾದನಖಗಳವರೆಗೆ ವರ್ಣಿಸಿ ಆ ಭಗವಂತನ ರೂಪವು ಕಣ್ಣಿಗೆ ಕಟ್ಟುವಂತೆ ಮಾಡಿದ್ದಾರೆ. ಭಗವತ್ಪ್ರಸಾದ ಲಾಭಕ್ಕೆ ಪಾದಪದ್ಮದ ಸ್ಮರಣೆಯೇ ಸಾಕು, ನಖಕಾಂತಿಯ ಕಿರಿಯ ಕಿರಣಾಂಶಸಾಕು. ಎಂಬ ಉಪದೇಶವಾಣಿಯೂ ಇದರಲ್ಲಿ ಅಡಕವಾಗಿದೆ. ಇಂತಹ ಭಗವಂತನ ದಿವ್ಯರೂಪದಲ್ಲಿ ಭಕ್ತರ ಮನಸ್ಸು ಆದರದಿಂದ ಲೀನವಾಗುತ್ತದೆ; ಅಯೋಗ್ಯರ ಮನಸ್ಸು ವಿಮುಖವಾಗುತ್ತದೆ.

ಭಗವದ್ರೂಪ ಚಿಂತನೆಯು ನಖ ಶಿಖಾಂತವಾಗಬೇಕು ಎಂಬ ನಿಯಮವಿರುವಾಗ ಇಲ್ಲಿ ಶಿಖನಖಾಂತವಾಗಿದೆಯಲ್ಲ ಎಂದು ಸಂಶಯ

ಪಡಬೇಕಾಗಿಲ್ಲ. ಮೊದಲನೆಯದು ಉಪಾಸನೆಯ ಅಭ್ಯಾಸಕ್ಕಾಗಿ ಹೇಳಿದ ಕ್ರಮ. ಭಗವಂತನು ತಾನಾಗಿ ದರ್ಶನ ಕೊಟ್ಟಾಗ ಆ ನಿಯಮದ ಅಗತ್ಯವಿಲ್ಲ.)

**ಮುಖೇನ ಲೋಕಾರ್ತಿಹರಸ್ಮಿತೇನ ಪರಿಸ್ಫುರತ್ಕುಂಡಲ ಮಂಡಿತೇನ।**
**ಶೋಣಾಯಿತೇನಾಧರಬಿಂಬ ಭಾಸಾಪ್ರತ್ಯರ್ಹಯಂತಂ ಸುನಸೇನ**
**ಸುಭ್ರ್ವಾ ॥೨೭॥**

ಲೋಕಾರ್ತಿಹರಸ್ಮಿತೇನ = ಲೋಕದ ಜನರ ಸಂಕಷ್ಟಗಳನ್ನು ಕಳೆದುಬಿಡುವ ಮುಗುಳ್ನಗೆಯಿಂದ ಕೂಡಿದ; ಪರಿಸ್ಫುರತ್ = ಹೊಳೆಹೊಳೆಯುವ; ಕುಂಡಲಮಂಡಿತೇನ = ಕರ್ಣಾಭರಣಗಳಿಂದ ಅಲಂಕೃತವಾದ; ಶೋಣಾಯಿತೇನ = ನಸುಗೆಂಪಾದ; ಅಧರ ಬಿಂಬ ಭಾಸಾ = ತುಟಿಗಳ ಕಾಂತಿಯುಳ್ಳ; ಸುನಾಸೇನ = ಮಂಗಳಕರವಾದ ನಾಸಿಕಭಾಗವುಳ್ಳ; ಸುಭ್ರ್ವಾ = ಸುಂದರಗಳಾದ ಹುಬ್ಬುಗಳಿಂದ ಕೂಡಿದ; ಮುಖೇನ = ಮುಖಾರವಿಂದದಿಂದ; ಪ್ರತ್ಯರ್ಹಯಂತಂ = ತನ್ನ ಭಕ್ತರನ್ನು ಕೃಪಾದೃಷ್ಟಿಯಿಂದ ನೋಡುತ್ತಿರುವ;(ರೂಪವನ್ನು ಕಂಡರು.)

(ಫಲಾಕಾಂಕ್ಷಿಗಳಾಗಿ ಯಾರಾದರೂ ದೊಡ್ಡವರನ್ನು ನೋಡಲು ಹೋದಾಗ ಅವರು ಹಸನ್ಮುಖದಿಂದ ನಮ್ಮನ್ನು ಬರಮಾಡಿಕೊಂಡರೆ ಹೇಗೆ ಮನಸ್ಸು ಹರ್ಷಗೊಂಡು ಸಮಾಧಾನ ಹೊಂದುವುದೋ ಹಾಗೆ ಭಗವಂತನ ಮುಗುಳ್ನಗೆಯ ದರ್ಶನ ಭಕ್ತರಿಗೆ ಆಹ್ಲಾದಕರವಾದುದು.)

**ಕದಂಬ ಕಿಂಜಲ್ಕಪಿಶಂಗವಾಸಸಾ ಸ್ವಲಂಕೃತಂ ಮೇಖಲಯಾನಿತಂಬೇ।**
**ಹಾರೇಣಚಾನಂತ ಘನೇನವತ್ಸಶ್ರೀವತ್ಸವಕ್ಷಸ್ಥಲ ವಲ್ಲಭೇನ ॥೨೮॥**

ಕದಂಬ ಕಿಂಜಲ್ಕ ಪಿಶಂಗ = ಕದಂಬಪುಷ್ಪದ ಕುಸುರಿನಂತೆ ನಸುಕಂದು ಬಣ್ಣದ; ವಾಸಸಾ = ಉತ್ತರೀಯದಿಂದಲೂ; ನಿತಂಬೇ = ಸೊಂಟದಲ್ಲಿ; ಮೇಖಲಯಾ = ನಡುಪಟ್ಟಿಯಿಂದಲೂ; ವಕ್ಷಸ್ಥಲೇ = ಎದೆಯ ಮೇಲೆ; ವಲ್ಲಭೇನ = ಪ್ರಿಯವಾದ; ಅನಂತ ಅನಘೇನ = ಅತ್ಯಂತ ಅಮೂಲ್ಯವಾದ; ಶ್ರೀವತ್ಸಹಾರೇಣ = ಶ್ರೀವತ್ಸವೆಂಬ ಪದಕವುಳ್ಳ ಹಾರದಿಂದಲೂ; ಸ್ವಲಂಕೃತಂ = ಚೆನ್ನಾಗಿ ಭೂಷಿತವಾದ; (ರೂಪವನ್ನು ಕಂಡರು).

(ಪಿಶಂಗವೆಂದರೆ ನಸುಗೆಂಪು ಮಿಶ್ರಿತವಾದ ಕಂದುಬಣ್ಣ. ಶ್ರೀವತ್ಸವೆಂಬ ಪದಕವು ಶ್ರೀದೇವಿಯ ಸನ್ನಿಧಾನಯುಕ್ತವಾದುದು. ಕೌಸ್ತುಭಮಣಿಯಲ್ಲಿ ಬ್ರಹ್ಮದೇವರ ಸನ್ನಿಧಾನ.)

ಪರಾರ್ಧ್ಯಕೇಯೂರ ಮಣಿಪ್ರವೇಕ ಪರ್ಯಸ್ತದೋರ್ದಂಡ
ಸಹಸ್ರಶಾಖಂ ।
ಅವ್ಯಕ್ತಮೂಲಂ ಭುವನಾಂಘ್ರಿಪೇಂದ್ರ ಮಹೀಂದ್ರಭೋಗೈರಧಿವೀತ
ವಲ್ಶಂ ॥೨೯॥

ಪರಾರ್ಧ್ಯ = ಬೆಲೆಕಟ್ಟಲಾಗದ; ಕೇಯೂರ = ಭೂಜಕೀರ್ತಿಗಳಿಂದ ಮಣಿಪ್ರವೇಕ = ಅಮೂಲ್ಯಹಸ್ತಾಭರಣಗಳಿಂದ; ಪರ್ಯಸ್ತ ಅಲಂಕೃತವಾದ; ದೋರ್ದಂಡ ಸಹಸ್ರಶಾಖಂ = ಮಹಾವೃಕ್ಷದ ಅನೇಕಾನೇಕ ಕೊಂಬೆಗಳಂತೆ ಸಹಸ್ರಬಾಹುಯುಕ್ತಾವಾದ; ಅವ್ಯಕ್ತಮೂಲಂ = ಬೇರುಗಳು ಕಾಣದಂತಿರುವ ವೃಕ್ಷದಂತೆ ಸೃಷ್ಟಿಯ ಮೂಲಕಾರಣಗಳನ್ನು ಕಾಣದಂತೆ ಹೊಂದಿರುವ; ಅಹೀಂದ್ರಭೋಗೈಃ ಅಧಿನೀಕವಲ್ಶಂ = ಸರ್ಪರಾಜನ ಹೆಡೆಗಳಿಂದ ಆಚ್ಛಾದಿತವಾದ ವೃಕ್ಷಭಾಗಗಳಂತೆ ಸರ್ಪಶ್ರೇಷ್ಠನಾದ ಆದಿಶೇಷನ ಹೆಡೆಗಳ ಆಚ್ಛಾದನವುಳ್ಳ; ಭುವನಾಂಘ್ರಿಪೇಂದ್ರಂ = ಹದಿನಾಲ್ಕು ಲೋಕಗಳ ವಿಸ್ತಾರ ರೂಪವಾದ ಜಗದಾಖ್ಯವೃಕ್ಷರಾಜನನ್ನು; (ನೋಡಿದರು)

(ವೃಕ್ಷರಾಜನಿಗೆ ಹೋಲಿಸಿರುವ ಈ ರೂಪಕದಲ್ಲಿ ಶ್ರೀಮದನಂತ ಪದ್ಮನಾಭನು ಜಗತ್ತಿಗೆ ಮೂಲಕಾರಣನೆಂದೂ ಜಗದ್ಧರಿತನೆಂದೂ ವರ್ಣಿಸಲ್ಪಟ್ಟಿದ್ದಾನೆ.)

ಚರಾಚರೌಕೋ ಭಗವನ್ಮಹೀಧ್ರಮಹೀಂದ್ರ ಬಂಧುಂ
ಸಲಿಲೋಪಗೂಢಂ ।
ಕಿರೀಟ ಸಾಹಸ್ರ ಹಿರಣ್ಯ ಶೃಂಗ ಮಾವಿರ್ಭವ ತ್ಕೌಸ್ತುಭರತ್ನ ಗರ್ಭಂ
॥೩೦॥

ಚರಾಚರ ಓಕಃ = ಚಾರಚರ ವಸ್ತುಗಳಿಗೆ ಮನೆಯಾದ; ಅಹೀಂದ್ರ ಬಂಧುಂ = ವಾಸುಕಿಯೇ ಮೊದಲಾದ ಸರ್ಪಶ್ರೇಷ್ಠಗಳಿಗೆ ಪ್ರಿಯವಾದ; ಸಲಿಲೋಪಗೂಢಂ = ಪ್ರಳಯೋದಕದಿಂದ ಆವರಿಸಲ್ಪಟ್ಟ; ಆವಿರ್ಭವತ್ ಕೌಸ್ತುಭ ರತ್ನ ಗರ್ಭಂ = ಉಜ್ವಲವಾಗಿ ಮೇಲಕ್ಕೆದ್ದು ಬಂದ ಕೌಸ್ತುಭರತ್ನವನ್ನುಳ್ಳ; ಕಿರೀಟ ಸಾಹಸ್ರ ಹಿರಣ್ಯಶೃಂಗಂ = ದಿವ್ಯಕಿರೀಟಗಳೆಂಬ ಸಹಸ್ರ ಹಿರಣ್ಮಯ ಶಿಖರಗಳನ್ನುಳ್ಳ; ಭಗವನ್ಮಹೀಧ್ರಂ = ನಾರಾಯಣನೆಂಬ ಪರ್ವತವನ್ನು; (ನೋಡಿದರು).

(ವೃಕ್ಷದ ಸಾದೃಶ್ಯದಿಂದ ಬೀಜವೃಕ್ಷ ನ್ಯಾಯಾನುಸಾರ ಸೃಷ್ಟಿಕರ್ತ ನಾಗಿರುವುದನ್ನೂ, ಸಮುದ್ರದ ಆರ್ಭಟದ ನಡುವೆ ಸ್ಥಿರವಾಗಿ ಎದ್ದುನಿಂತ ಪರ್ವತದ

ಸಾದೃಶ್ಯದಿಂದ ಜಗದ್ರಕ್ಷಣ ಕರ್ತನಾಗಿರುವುದನ್ನೂ ವರ್ಣಿಸಿರುವರೆಂದು ಹೇಳಬಹುದು.)

**ನಿವೀತಮಾಮ್ನಾಯ ಮಧು ವ್ರತಾಶ್ರಯ ಸ್ವಕೀರ್ತಿಮಯ್ಯಾ**
**ವನಮಾಲಯಾ ಹರಿಂ ।**
**ಸೂರ್ಯೇಂದು ವಾಯ್ವಗ್ನ್ಯಗ ಮತ್ರಿಧಾಮಭಿಃ ಪರಿಕ್ರಮತ್ಪ್ರಾಧನಿ**
**ಕೈರ್ದುರಾಸದಂ ।।೩೧।।**

ಆಮ್ನಾಯ ಮಧುವ್ರತ ಆಶ್ರಯ = ಭಗವಂತನ ಮಹಿಮೆಗಳನ್ನು ಸಂಕೀರ್ತಿಸುವ ವೇದಗಳೆಂಬ ದುಂಬಿಗಳಿಗೆ ಆಶ್ರಯವಾದ; ಸ್ವಕೀರ್ತಿಮಯ್ಯಾ = ತನ್ನ ವೈಶಿಷ್ಟ್ಯವನ್ನು ಬೀರುವ; ವನಮಾಲಯಾ = ತುಳಸೀ ಮಂಜರಿಗಳಿಂದಲೂ ವಿವಿಧ ಪುಷ್ಪಗಳ ಸಮ್ಮೇಳನದಿಂದಲೂ ಕೂಡಿದ ವೈಜಯಂತೀ ಮಾಲೆಯಿಂದ; ನಿವೀತಂ = ಸುತ್ತುವರಿದು ಅಲಂಕೃತವಾದ ಕಂಠಪ್ರದೇಶವುಳ್ಳ; ಅಗಮ = ಬಿಟ್ಟು ಹೋಗದೆ ಸಮೀಪಸ್ಥರಾಗಿಯೇ ಇರುವ; ಸೂರ್ಯ, ಇಂದು, ವಾಯು, ಅಗ್ನಿ, (ಆದಿ) = ಮುಕ್ತರಾದ ಸೂರ್ಯೇಂದು ವಾಯು ಅಗ್ನಿ ಮೊದಲಾದ; ಪರಿಕ್ರಮತ್ = ಪರಿವಾರ ಭೂತರಾಗಿ ಸೇವಾಪರರಾದ; ಪ್ರಾಧಾನಿಕೈಃ = ಪ್ರಧಾನ ಪುರುಷನಾದ ಭಗವಂತನ ಭಕ್ತರಾದವರಿಂದ (ತುಂಬಿರುವ); ತ್ರಿಧಾಮಭಿಃ = ಅನಂತಾಸನ, ಶ್ವೇತದ್ವೀಪ, ವೈಕುಂಠಗಳೆಂಬ ಮೂರು ಮುಕ್ತಲೋಕಗಳಿಂದ ಕೂಡಿದವನಾದ; ದುರಾಸದಂ = ಅಮುಕ್ತರಿಗೆ ಅಲಭ್ಯನಾದ; ಹರಿಂ = ವೈಕುಂಠ ವಾಸುದೇವನನ್ನು (ನೋಡಿದರು).

(ದುರಾಸದಂ ಎಂಬ ಪದವು ಭಗವಂತನ ನಿತ್ಯ ಸಾನ್ನಿಧ್ಯ ಲಾಭಕ್ಕೆ ಸಂಸಾರದಿಂದ ಮುಕ್ತಿ ಅಥವ ಬಿಡುಗಡೆಯು ಆವಶ್ಯಕವೆಂದು ಸೂಚಿಸಿರುವುದರಿಂದ ಪ್ರಳಯ ಕರ್ತಾ, ಮುಕ್ತಿಪ್ರದಾತಾ ಎಂದೂ ಹೇಳಿದಹಾಗಾಯಿತು. ಬ್ರಹ್ಮದೇವರು ಕಂಡ ಭಗವದ್ರೂಪದಲ್ಲಿ ಬಗೆಬಗೆಯ ರೂಪಗಳನ್ನು ಕಂಡರು ಎಂಬುದು ಮೇಲಿನ ಶ್ಲೋಕಗಳ ಭಾವ.)

**ತರ್ಹ್ಯೇವ ತನ್ನಾಭಿ ಸರಃ ಸರೋಜಮಾತ್ಮಾನಮಂಭಃ ಶ್ವಸನಂ ವಿಯಚ್ಚ।**
**ದದರ್ಶ ದೇವೋ ಜಗತೋ ವಿಧಾತಾನಾತಃಪರಂ ಲೋಕ ವಿಸರ್ಗ**
**ದೃಷ್ಟಿಃ ।।೩೨।।**

ತರ್ಹಿಏವ = ಯಾವಾಗ ಪ್ರಳಯೋದಕದ ಮಧ್ಯದಲ್ಲಿ ಶೇಷಶಾಯಿಯಾದ ಶ್ರೀಮನ್ನಾರಾಯಣನ ದಿವ್ಯ ರೂಪವಿಶೇಷಗಳನ್ನು ನೋಡಿದರೋ, ಆಗಲೇ; ನಾಭಿಸರಃ ಸರೋಜಂ = ಆ ಭಗವಂತನ ನಾಭಿ ಎಂಬ ಸರಸ್ಸಿನಲ್ಲಿ ಉತ್ಪನ್ನವಾದ ಕಮಲವನ್ನೂ;

ಆತ್ಮಾನಂ = ಆ ಕಮಲದಲ್ಲಿ ತಮ್ಮನ್ನೂ; ಅಂಭಃ = ಸುತ್ತುವರಿದ ಪ್ರಳಯೋದಕವನ್ನೂ; ಶ್ವಸನಂ = ವಾಯುವನ್ನೂ; ವಿಯತ್ ಚ = ಆಕಾಶವನ್ನೂ; ಜಗತಃ ವಿಧಾತಾ ದೇವಃ = ಜಗತ್ತಿನ ಸೃಷ್ಟಿಕರ್ತರೆಂದು ಪ್ರಸಿದ್ಧರಾದ ಬ್ರಹ್ಮದೇವರು; ಲೋಕವಿಸರ್ಗದೃಷ್ಟಿಃ = ಲೋಕಗಳನ್ನು ಸೃಷ್ಟಿಸುವ ಇಚ್ಛೆಯುಳ್ಳವರಾಗಿ; ದದರ್ಶ = ಕಂಡರು; ಅತಃ ಪರಂ ನ = ಇವುಗಳನ್ನು ಹೊರತು ಬೇರೆ ಏನನ್ನೂ ಕಾಣಲಿಲ್ಲ.

(ಇದುವರೆಗೆ ಬ್ರಹ್ಮಾಂಡದಲ್ಲಿ ಆಕಾಶ, ವಾಯು, ಪ್ರಳಯೋದಕಗಳು ಮಾತ್ರ ಸೃಷ್ಟವಾಗಿದ್ದು, ನಾಭೀಕಮಲದಲ್ಲಿ ತಾವು ಹುಟ್ಟಿ ಬಂದಿರುವುದನ್ನು ಬ್ರಹ್ಮದೇವರು ಕಂಡು, ಮುಂದೆ ತಮ್ಮ ಕಡೆಯಿಂದಾಗಬೇಕಾದ ಲೋಕಗಳ ಸೃಷ್ಟಿಯ ಕಡೆಗೆ ಗಮನಹರಿಸಿದರು. ಆಕಾಶಾದಿಗಳ ಸೃಷ್ಟಿಯಲ್ಲಿಯೂ, ಅದಕ್ಕೂ ಮೊದಲು ಮಹತ್ತತ್ತ್ವಾದಿ ಸಪ್ತಾವರಣಗಳ ಸೃಷ್ಟಿಯಕಾಲದಲ್ಲಿಯೂ, ಬ್ರಹ್ಮದೇವರು ಇದ್ದರೂ, ಮುಖ್ಯ ಕಾರ್ಯವೆಲ್ಲಾ ಭಗವಂತನದೇ ಸರಿ.)

**ಸ್ವಕರ್ಮಬೀಜಂ ರಜ ಸೋಪರಕ್ತಃ ಪ್ರಜಾಃ ಸಿಸೃಕ್ಷನ್ನಿಯದೇವ ದೃಷ್ಟ್ವಾ।**
**ಅಸ್ತೌದ್ವಿಸರ್ಗಾಭಿಮುಖಸ್ತಮೀಶಮವ್ಯಕ್ತವರ್ತ್ಮನ್ಯಭಿವೇಶಿತಾತ್ಮಾ ॥೩೩॥**

ರಜಸಾ ಉಪರಕ್ತಃ = ಕಿಂಚಿತ್ ರಜೋಗುಣ ವಿಶಿಷ್ಟ ಶರೀರವುಳ್ಳ ಚತುರ್ಮುಖ ಬ್ರಹ್ಮದೇವರು; ಇಯತ್ ಏವದೃಷ್ಟ್ವಾ = ಪ್ರಳಯೋದಕ, ವಾಯು, ಆಕಾಶ-ಇವುಗಳನ್ನು ಮಾತ್ರಕಂಡು; ಪ್ರಜಾಃ ಸಿಸೃಕ್ಷನ್ = ಪ್ರಜಾಸೃಷ್ಟಿಯಲ್ಲಿ ಮನಸ್ಸುಳ್ಳವರಾಗಿ; ವಿಸರ್ಗಾಭಿಮುಖಃ = ಪ್ರಾಕೃತ ವಸ್ತುಗಳ ವಿಕಾರಗಳಿಂದ ಲೋಕಗಳನ್ನು ಸೃಷ್ಟಿಸುವ ಕಾರ್ಯತತ್ಪರರಾಗಿ; ಅವ್ಯಕ್ತವರ್ತ್ಮನಿ = ಬ್ರಹ್ಮಜ್ಞಾನಕ್ಕೆ ಸಾಧಕವಾದ ಮಾರ್ಗದಲ್ಲಿ; ಅಭಿವೇಶಿತ ಆತ್ಮಾ = ಅಂತರ್ಮುಖಿಗಳಾಗಿ; ಸ್ವಕರ್ಮಬೀಜಂ = ತಾವು ಮಾಡಬೇಕಾದ ಕ್ರಿಯೆಗಳಲ್ಲೆಲ್ಲಾ ಹಾಸುಹೊಕ್ಕಾಗಿ ಮೂಲಕಾರಣನಾದ; ತಂ ಈಶಂ = ಆ ಸರ್ವೇಶ್ವರನನ್ನು; ಅಸ್ತೌತ್ = ಕ್ರಿಯಾಸಾಮರ್ಥ್ಯ ಲಾಭಕ್ಕಾಗಿ ಪ್ರಾರ್ಥಿಸಿದರು.

(ಹಿಂದಿನ ಬ್ರಹ್ಮಕಲ್ಪದ ಬ್ರಹ್ಮದೇವರ ಜೊತೆ ಜೊತೆಯಲ್ಲೇ ಸೃಷ್ಟ್ಯಾದಿ ಕಾರ್ಯಗಳಲ್ಲಿ ಭಾಗವಹಿಸಿ, ಆಗ ಮುಖ್ಯಪ್ರಾಣರೆನಿಸಿ, ಈಗ ಬ್ರಹ್ಮಪದವಿಗೆ ಬಂದವರು, ತಮ್ಮ ಆಯುರ್ಮಾನದ ಮೊದಲ ಐವತ್ತು ವರ್ಷಗಳ ಪರ್ಯಂತ, ದಶಾವರಣಗಳ ಮತ್ತು ಬ್ರಹ್ಮಾಂಡದೊಳಗೆ ಆಕಾಶ, ವಾಯು, ಉದಕಗಳ ಸೃಷ್ಟಿಯನ್ನು ಭಗವಂತನು ನಡೆಸುವಾಗ ಆಯಾ ತತ್ತ್ವಗಳಲ್ಲಿ ಪ್ರವೇಶಹೊಂದಿ ಸಾಕ್ಷೀಭೂತರಾಗಿ ಎಲ್ಲವನ್ನೂ ನೋಡುತ್ತ, ತಮ್ಮ ಕಡೆಯ ಹಂತದ ಸಾಧನೆಯನ್ನು ಪೂರೈಸಿಕೊಂಡರು. ಮುಖ್ಯ ಪ್ರಾಣರಾಗಿದ್ದಾಗಲೇ ಅವರಿಗೆ ಸೃಷ್ಟಿಯ ಕ್ರಮ ತಿಳಿದಿತ್ತು. ಆದರೂ

ಭಗವಂತನಿಂದ ಮತ್ತೆಮತ್ತೆ ಕೇಳಿ ತಿಳಿಯುವುದು, ಭಗವಂತ ಮಾಡಿದುದನ್ನು ನೋಡಿ ಕಲಿಯುವುದು ವಿದ್ಯಾರ್ಜನೆಯ ನಿಜಲಕ್ಷಣವೆಂಬುದನ್ನು ಅವರು ಬಲ್ಲವರು. ಇದು ಇತರರಿಗೆ ಆವಶ್ಯಕವಾದ ಮಾರ್ಗದರ್ಶನ. ಈ ವಿಷಯದಲ್ಲಿ ಎಚ್ಚರ ತಪ್ಪಿದವರಿಗೆ 'ಅಹಂ ಕರ್ತಾ'ಎಂಬ ಅಹಂಕಾರವು ಮುಸುಕಿ ತೊಂದರೆಗೀಡುಮಾಡುವುದರಲ್ಲಿ ಸಂಶಯವಿಲ್ಲ. "ನಾಹಂ ಕರ್ತಾ ಹರಿಃ ಕರ್ತಾ"ಎಂಬ ಆತ್ಮಾರ್ಪಣೆಯ ಮರ್ಮ ಇದರಲ್ಲಿದೆ.)

ಒಂಭತ್ತನೆಯ ಅಧ್ಯಾಯ ಮುಗಿಯಿತು.

**"ಶ್ರೀಕೃಷ್ಣಾರ್ಪಣಮಸ್ತು"**

# ಶ್ರೀಮದ್ಭಾಗವತ – ತೃತೀಯ ಸ್ಕಂಧ
# ಹತ್ತನೆಯ ಅಧ್ಯಾಯ ಪ್ರಾರಂಭ

ಬ್ರಹ್ಮೋವಾಚಃ – ಬ್ರಹ್ಮದೇವರು ನುಡಿದರು.

ಜ್ಞಾತೋಸಿ ಮೇದ್ಯಸುಚಿರಾನ್ನನು ದೇಹಾಭಾಜಾಂ ನಜ್ಞಾಯತೇ
ಭಗವತೋಗತಿರಿತ್ಯವದ್ಯಂ ।
ನಾನ್ಯತ್ತ್ವದಸ್ತಿ ಭಗವನ್ನಪಿ ತತ್ತ್ವಶುದ್ಧಂ ಮಾಯಾಗುಣವ್ಯತಿಕರಾದ್ಯ
ದುರುರ್ವಿಭಾಸಿ ॥೧॥

ಅದ್ಯ. = ಈಗ; ಸುಚಿರಾತ್ = ಬಹುಕಾಲದ ತಪಸ್ಸಿನ ನಂತರ; ಮೇ = ನನಗೆ; ಜ್ಞಾತಃನನು = ಕಂಡುಬಂದಿರುವಿಯಲ್ಲವೆ! ದೇಹಭಾಜಾಂ = ದೇಹಧಾರಿಗಳಾಗಿ ಬಂದ ಜೀವರಿಗೆ; ಭಗವತಃ = ಗತಿಃ ಭಗವಂತನ ನಿಜಸ್ವರೂಪವು; ನ ಜ್ಞಾಯತೇ ಇತಿ = ತಿಳಿದುಬರುವುದಿಲ್ಲ ಎಂಬುದು; ಅವದ್ಯಂ = ತಪ್ಪುಕಲ್ಪನೆಯು; ಭಗವನ್= ಗುಣಪೂರ್ಣನಾದ ಸ್ವಾಮಿಯೇ; ಅಪಿ ತತ್ತ್ವಶುದ್ಧಂ = ದೋಷರಹಿತವಾದ ಶುದ್ಧವಸ್ತುವು; ತ್ವತ್ ಅನ್ಯತ್ = ನೀನಲ್ಲದೆ ಬೇರೆ ಯಾವುದೂ; ನ ಅಸ್ತಿ = ಇರುವುದಿಲ್ಲ; ಮಾಯಾಗುಣವ್ಯತಿಕರಾತ್ = ಜಡಗುಣಗಳಿಗೆ ವಿರುದ್ಧ ಧರ್ಮವುಳ್ಳವನಾದುದರಿಂದಲೇ; ಉರುಃ ವಿಭಾಸಿ = ನಾನಾರೂಪಗಳಿಂದ ಕಂಡುಬರುತ್ತೀಯೆ.

ಭಗವಂತನ ಕೇವಲ ಜ್ಞಾನಾನಂದ ರೂಪವು ದೇಹಧಾರಿಗಳಿಗೆ ಕಂಡುಬಾರದಿರುವುದಕ್ಕೆ ಜಡ ಸಂಬಂಧವಾದ ಅವರ ಮನೋದೋಷಗಳೇ ಕಾರಣ. ಆದರೆ, ತಪಸ್ಸು ಮೊದಲಾದ ಕ್ರಮಗಳಿಂದ ಅಂತಹ ಮನೋದೋಷಗಳನ್ನು ನೀಗಿಕೊಂಡರೆ, ಭಗವಂತನ ನಿಜರೂಪವನ್ನು ಕಾಣುವುದು ಸಾಧ್ಯ ಎಂಬುದನ್ನು ಬ್ರಹ್ಮದೇವರು ತಮ್ಮ ಉದಾಹರಣೆಯಿಂದ ತಿಳಿಸಿಕೊಟ್ಟಿದ್ದಾರೆ.

ಜಡಮಾಯೆಯು ಅಸ್ವತಂತ್ರ. ಭಗವಂತನು ಸರ್ವತಂತ್ರಸ್ವತಂತ್ರ. ಜಡಗುಣಕ್ರಿಯೆಗಳಿಗೆ ಆಧಾರಭೂತನಾದವನು ಆ ಸ್ವತಂತ್ರ ಪುರುಷ. ಆದುದರಿಂದಲೇ ಪ್ರಾಕೃತಗುಣಗಳಲ್ಲಿ ಪ್ರವಿಷ್ಟನಾಗಿ, ಬೇರೆಬೇರೆ ರೂಪಗಳುಳ್ಳವನೆಂದು ಕಾಣಿಸಿಕೊಳ್ಳುತ್ತಾನೆ. ಆದರೂ ಆ ಸ್ವಾಮಿಯು ಸ್ವಗತ ಭೇದ ವಿವರ್ಜಿತ.

ಪರಮಪುರುಷನ ಜ್ಞಾನಾನಂದ ರೂಪವೇ ಆದ ಅನೇಕ ರೂಪಗಳಿದ್ದರೂ ಅವುಗಳಲ್ಲಿ ಪರಸ್ಪರ ಭೇದವಿಲ್ಲ.

**ರೂಪಂ ಯದೇತದವಬೋಧರಸೋದಯೇನ ಶಶ್ವನ್ನಿವೃತ್ತತಮಸಃ ಸದನುಗ್ರಹಾಯ ।**
**ಆದೌಗೃಹೀತಮವತಾರಶತೈಕ ಬೀಜಂ ಯನ್ನಾಭಿ ಪದ್ಮಭವನಾದಹಮಾವಿ ರಾಸಂ ॥೨॥**

ಶಶ್ವತ್ ನಿವೃತ್ತ ತಮಸಃ = ಶಾಶ್ವತವಾಗಿ ನಿವಾರಿಸಲ್ಪಟ್ಟ ತಮೋಗುಣವುಳ್ಳ ಕಾರಣದಿಂದ; ಅವಬೊಧ ರಸೋದಯೇನ = ಪ್ರತ್ಯಕ್ಷ ದರ್ಶನದ ಅನಂದೋದ್ರೇಕವುಂಟಾಗಿರಲು; ಸದನುಗ್ರಹಾಯ = ನನ್ನಲ್ಲಿ ಪೂರ್ಣಾನುಗ್ರಹ ಮಾಡುವ ಇಚ್ಛೆಯಿಂದ; ಅವತಾರಶತೈಕ ಬೀಜಂ = ಮತ್ಸ್ಯಾದಿ, ವಾಸುದೇವದಿ,ಕೇಶವಾದಿ ನಾನಾ ಅವತಾರ ರೂಪಗಳಿಗೆ ಉಗಮ ಸ್ಥಾನದಂತಿರುವ; ಆದೌ ಗೃಹೀತಂ = ಅನಾದಿನಿತ್ಯವಾದರೂ, ಸೃಷ್ಟಿಯ ಆರಂಭದಲ್ಲಿ ವ್ಯಕ್ತವಾದ; ಯತ್ ಏತತ್‌ರೂಪಂ = ಕ್ಷೀರಸಾಗರಶಾಯಿಯಾದ ಯಾವ ಈ ಪದ್ಮನಾಭ ರೂಪವು ಉಂಟೋ; ಯತ್ ನಾಭಿ ಪದ್ಮಭವನಾತ್ = ಆರೂಪದ ನಾಭಿಕಮಲ ಸದನದಲ್ಲಿ; ಅಹಂ = ನಾನು; ಆವಿರಾಸಂ = ಜನ್ಮ ಪಡೆದಿದ್ದೇನೆ.

ಸೃಷ್ಟ್ಯಾದಿ ವ್ಯಾಪಾರಗಳು ಅನಾದ್ಯಂತ ಕಾಲಗಳಲ್ಲಿ ನಡೆಯುತ್ತಿರುವುವು. ಅಂತೆಯೇ ಭಗವಂತನರೂಪರೂಪಾಂತರಗಳೂ ಅನಾದ್ಯನಂತವಾಗಿರುವುವು. ಇದರಲ್ಲಿ ಒಂದು ವಿಶೇಷವೆಂದರೆ, ಭಗವಂತನಪ್ರತಿಯೊಂದು ರೂಪದಲ್ಲಿಯೂ ಬೇರೆ ಎಲ್ಲಾ ರೂಪಗಳೂ ಅಡಕವಾಗಿರುವುವು. ಅವನ ಗುಣರೂಪಕ್ರಿಯೆಗಳಲ್ಲಿ ಭಿನ್ನತೆಯಿಲ್ಲ. ತನ್ನ ವಿಶೇಷ ಸಾಮರ್ಥ್ಯದಿಂದ ನಾನಾ ರೂಪಗಳನ್ನು ಪ್ರಕಟಿಸಿದರೂ, ಅವನು ಸ್ವಗತಭೇದವಿವರ್ಜಿತ.

ಬ್ರಹ್ಮ ವಾಯುಗಳು ತಮ್ಮ ಅಗಾಧ ಯೋಗ್ಯತಾನುಸಾರವಾಗಿ ಭಗವಂತನ ಗುಣರೂಪ ಕ್ರಿಯೆಗಳ ವಿಚಾರವನ್ನು ಬಲ್ಲವರಾಗಿರುತ್ತಾರೆ. ಆದರೂ, ಸೃಷ್ಟಿಯ ಆರಂಭದಲ್ಲಿ ಭಗವಂತನ ಆಜ್ಞಾನುಸಾರವಾಗಿ ಮತ್ತೆ ತಪಸ್ಸನ್ನು ಆಚರಿಸಿ ಆ ಜ್ಞಾನವನ್ನು ಸ್ಥಿರಪಡಿಸಿಕೊಳ್ಳುತ್ತಾ, ಆನಂದಪರವಶರಾಗುತ್ತಾರೆ. "ತಪ ಆಲೋಚನೇ" ಎಂದಿರುವುದರಿಂದ ಆಲೋಚನಾತ್ಮಕ ತಪಸ್ಸು ಅವರಿಗೆ ಅವಶ್ಯಕ. ಅನಾಲೋಚನೆ ಯಿಂದ ಲಕ್ಷ್ಮೀದೇವಿಯರು ಸರ್ವ ವಿಷಯಗಳನ್ನೂ ತಿಳಿಯಬಲ್ಲವರಾದರೆ, ಆಲೋಚನೆಯಿಂದ ಸಕಲ ವಿಷಯಗಳ ಜ್ಞಾನವುಳ್ಳವರು ಬ್ರಹ್ಮವಾಯುಗಳು.

ನಾತಃಪರಂ ಪರಮ ಯದ್ಭವತಃ ಸ್ವರೂಪಮಾನಂದ
ಮಾತ್ರಮವಿಕಾರಮವಿದ್ಧವರ್ಚಃ ।
ಪಶ್ಯಾಮಿ ವಿಶ್ವಸೃಜಮೇಕಮವಿಶ್ವಮಾದ್ಯಂ ಭೂತೇಂದ್ರಿಯಾತ್ಮಕಮದಸ್ತ
ಉಪಾಶ್ರಿತೋಽಸ್ಮಿ ॥೩॥

ಪರಮ = ಹೇ ಸರ್ವೋತ್ತಮಾ; ಯತ್ ಭವತಃ = ಯಾವ ನಿನ್ನ; ಸ್ವರೂಪಂ = ನಿಜರೂಪವು; ಆನಂದಮಾತ್ರಂ = ಕೇವಲ ಆನಂದಮಯವಾಗಿರುವುದೋ; ಅವಿಕಾರಂ = ಆ ಕಾರಣದಿಂದಲೇ ವಿಕಾರ ಹೊಂದದೆ ಇರುವುದೋ; ಅವಿದ್ಧ ವರ್ಚಃ = ಕುಂದಿಲ್ಲದೇ ಪ್ರಕಾಶಮಾನವಾಗಿರುವುದೋಃ ವಿಶ್ವಸೃಜಂ = ಜಗತ್ತಿನ ಸೃಷ್ಟಿಯನ್ನು ನಡೆಸುವುದೋಃ ಏಕಂ = ಸ್ವಗತಭೇದವಿಲ್ಲದ ಏಕೈಕ ಸ್ವತಂತ್ರವಸ್ತುವಾಗಿರುವುದೋಃ ಆದ್ಯಂ = ಆದ್ಯಂತಗಳುಳ್ಳ ವಸ್ತುಗಳಿಗೆ ಹಿಂದೆಯೇ ಇರತಕ್ಕುದೋ; ಭೂತೇಂದ್ರಿಯಾತ್ಮಕಂ = ಪಾಂಚಭೌತಿಕ ಇಂದ್ರಿಯಗಳಿಗೆ ಒಳ-ಹೊರಗೆ ಆಧಾರ ಭೂತವಾಗಿರುವುದೋ; ಅತಃಪರಂ = ಅದಕ್ಕಿಂತ ಬೇರೆಯಾದ ಇನ್ನೊಂದು ರೂಪವನ್ನು; ನಪಶ್ಯಾಮಿ = ನಾನು ಕಾಣುತ್ತಿಲ್ಲ; ಅವಿಶ್ವಂ = ಜಡವಲ್ಲದ ಅದಃ ತೇರೂಪಂ = ಆ ನಿನ್ನ ರೂಪವನ್ನು; ಉಪಾಶ್ರಿತೋಽಸ್ಮಿ = ನಾನು ಆಶ್ರಯಿಸಿಕೊಂಡಿದ್ದೇನೆ.

ವಿಶ್ವದಲ್ಲಿ ವಿಶ್ವದಂತೆ, ಪ್ರಾಣಿಗಳಂತೆ, ಮಾನವಾದಿಗಳಂತೆ ರೂಪವನ್ನು ಹೊಂದಿ ಅವುಗಳಿಗೆ ರೂಪಕಲ್ಪನೆಯನ್ನುಂಟು ಮಾಡಿದರೂ, ಅವುಗಳಿಂದ ಅತ್ಯಂತ ಭಿನ್ನನೂ ಕೇವಲ ಜ್ಞಾನಾನಂದ ಶರೀರನೂ ಆಗಿರುವವನು ಪರಮಾತ್ಮ. ಅಂತಹ ರೂಪವು ಸಾಮಾನ್ಯಸಾಧಕರ ಮಾತುಗಳ ಹಿಡಿತಕ್ಕೆ ಸಿಗುವುದಿಲ್ಲ; ಅವರ ದೋಷಯುಕ್ತವಾದ ಮನಸ್ಸಿಗೆ ಕಾಣುವುದಲ್ಲ. ಬ್ರಹ್ಮದೇವರಂತೆ, ಸ್ವಯೋಗ್ಯತಾನುಸಾರ ತಪಸ್ಸು ಮಾಡಿ ಮನೋಮಾಲಿನ್ಯವನ್ನು ಕಳೆದುಕೊಂಡರೆ, ಅಂತಹ ಜಡಾತೀತ ರೂಪವನ್ನು ಕಾಣಬಹುದು.

ಅಸ್ವತಂತ್ರರೇ ಆದ ಬ್ರಹ್ಮದೇವರು, ಸ್ವತಂತ್ರನಾದ ಜ್ಞಾನಾನಂದ ಶರೀಯನ್ನು ಆಶ್ರಯಿಸಿಕೊಂಡು, ತಮ್ಮಜ್ಞಾನಾನಂದ ಚಕ್ಷುವಿನಿಂದ ಆ ಸ್ವಾಮಿಯನ್ನು ಕಾಣುತ್ತಿರುವುದಾಗಿಯೂ, ಆ ಸ್ವತಂತ್ರನ ವ್ಯಾಪಾರದಿಂದಲೇ ತಮಗೆ ನಿಯಮಿಸಿದ ವ್ಯಾಪಾರವನ್ನು ಮಾಡಬಲ್ಲವರಾಗಿರುವುದಾಗಿಯೂ ನಿವೇದಿಸಿಕೊಂಡಿದ್ದಾರೆ.

ಯದ್ವಾ ಇದಂಭುವನ ಮಂಗಳ ಮಂಗಳಂ
ಯದ್ಧ್ಯಾನಾತ್ಮನೋದರ್ಶಿತಂತದು ಉಪಾಸಕಾನಾಂ।
ತಸ್ಮೈನಮೋ ಭಗವತೇನುವಿಧೇಮ ತುಭ್ಯಂ ಯೋನಾದೃತೋ
ನಿರಯಭಾಗ್ಭಿರಸತ್ಪ್ರಸಂಗೈಃ ॥೪॥

ವಾ = ಅಲ್ಲದೆ; ಯತ್ ಇದಂ = ಯಾವ ಈ; ಭುವನ ಮಂಗಳ ಮಂಗಳಂ= ಲೋಕಗಳಲ್ಲೆಲ್ಲಾ ಅತ್ಯಂತ ಮಂಗಳಕರವಾದ; ಯತ್ = ಯಾವ ರೂಪವು; ಧ್ಯಾನಾತ್ಮನಃ ಉಪಾಸಕಾನಾಂ = ಧ್ಯಾನ ಮಾಡಬಲ್ಲ ಸದುಪಾಸಕರಿಗೆ; ದರ್ಶಿತಂ = ಕಾಣಿಸಲ್ಪಟ್ಟಿತೋ; ಯಃ = ಯಾವ ನಿಷ್ಕಲ್ಮಷ ರೂಪಿಯು; ನಿರಯಭಾಗ್ಭಿಃ = ಸ್ವಭಾವತಃ ತಮೋಯೋಗ್ಯರಾದವರಿಂದ; ಅಸತ್ಪ್ರಸಂಗೈಃ = ದುಷ್ಟವಿಷಯಗಳಲ್ಲಿಯೇ ನಿರತರಾಗಿರುವ ಕಾರಣದಿಂದ; ಅನಾದೃತಃ = ಸ್ವೀಕೃತವಾಗಲಿಲ್ಲವೋ; ತಸ್ಮೈ ಭಗವತೇ ತುಭ್ಯಂ = ಅಂತಹಭಗವತ್ಸರೂಪಿಯಾದ ನಿನಗೆ; ನಮಃ ಅನುವಿಧೇಮ = ನಮಸ್ಕಾರ ಮಾಡುತ್ತೇವೆ.

ಮುಕ್ತಿಯೋಗ್ಯ ಜೀವರಿಗೆ ಭಗವಂತನು ತನ್ನ ನಿಜರೂಪವನ್ನು ಸಕಾಲದಲ್ಲಿ ತೋರಿಸಿಕೊಳ್ಳುತ್ತಾನೆ.ತಮೋಯೋಗ್ಯರಿಗೆ ಅದು ಬೇಕಿಲ್ಲ. ಬ್ರಹ್ಮ ದೇವರ ಈ ಮಾತಿನಿಂದ, ಸ್ವರೂಪತಃ ಜೀವರು ತ್ರಿವಿಧರಾಗಿರುವರೆಂದೂ, ಭಗವದಿಚ್ಛಾನುಸಾರ ಆಯಾ ಜೀವರ ಕರ್ಮಗಳಿಗೆ ಅನುಗುಣಗಳಾದ ದೇಹಗಳನ್ನು ತಾವು ಕೊಡುವವರೆಂದೂ ಸ್ಪಷ್ಟಪಡಿಸಿದ್ದಾರೆ.

ಬ್ರಹ್ಮದೇವರಿಗೆ ಭಗವಂತನು ತನ್ನ ನಿಜರೂಪವನ್ನು ತೋರಿದಾಗಲೇ, ಅವರ ಶರೀರದಲ್ಲಿ ಆಶ್ರಯ ಹೊಂದಿದ್ದ ಹಿರಿಯ ದೇವತೆಗಳೂ ತಮ್ಮ ತಮ್ಮ ಯೋಗ್ಯತಾನುಸಾರ ಕಂಡರೆಂಬುದು, ನಮಸ್ಕಾರ ಮಾಡುತ್ತೇವೆ ಎಂಬಮಾತಿನಿಂದ ಧ್ವನಿತವಾಗಿದೆ.

**ಯೇತು ತ್ವದೀಯ ಚರಣಾಂಬುಜ ಕೋಶಗಂಧಂ ಜಿಘ್ರಂತಿ**
**ಕರ್ಣವಿವರೈಃ ಶ್ರುತಿವಾತ ನೀತಂ ।**
**ಭಕ್ತ್ಯಾಗೃಹೀತ ಚರಣಃ ಪರಯಾಚ ತೇಷಾಂ ನಾಪೈಷಿನಾಥ**
**ಹೃದಯಾಂಬುರುಹಾತ್ಸ್ವಪುಂಸಾಂ ।।೫।।**

ನಾಥ = ಹೇ ಸ್ವಾಮೀ; ಯೇತು = ತ್ರಿವಿಧ ಜೀವರಲ್ಲಿ ಯಾವ ಮುಕ್ತಿಯೋಗ್ಯರಾದವರು; ಶ್ರುತಿವಾತ ನೀತಂ = ವೇದೋಪನಿಷತ್ತುಗಳ ಅರ್ಥರೂಪವಾದ ಗಾಳಿಯಿಂದ ಒಯ್ಯಲ್ಪಟ್ಟ; ತ್ವದೀಯ ಚರಣಾಂಬುಜ ಕೋಶಗಂಧಂ= ನಿನ್ನ ಪಾದಕಮಲಗಳಂತರ್ಗತ ಸುಗಂಧವೆಂಬ ದಿವ್ಯಕೀರ್ತಿಯನ್ನು; ಕರ್ಣವಿವರೈಃ = ಶ್ರೋತ್ರೇಂದ್ರಿಯಗಳ ಮೂಲಕ; ಜಿಘ್ರಂತಿ = ಸ್ವೀಕಾರ ಮಾಡುವರೋ ಅವರಿಂದ; ಪರಯಾಭಕ್ತ್ಯಾ = ಪರಿಶುದ್ಧವಾದ ಭಕ್ತಿಯಿಂದ; ಗೃಹೀತ ಚರಣಃ = ಬಿಗಿದಪ್ಪಿಕೊಳ್ಳಲ್ಪಟ್ಟ ಪಾದಗಳುಳ್ಳವನಾಗಿ; ತೇಷಾಂ ಪುಂಸಾಂ = ಆ ಪುಣ್ಯಪುರುಷರ; ಹೃದಯಾಂಬುರುಹಾತ್ = ಹೃದಯಕಮಲದಿಂದ; ನಾಪೈಷಿ = ನೀನು ಬಿಟ್ಟು ಕದಲುವುದಿಲ್ಲ.

ಮೂಸಿ ನೋಡುವುದು ಮೂಗಿನಿಂದ; ಆದರೆ, ಇಲ್ಲಿ ಕಿವಿಯಿಂದ ಆಘ್ರಾಣಿಸುವುದು ಎಂದು ಹೇಳಲಾಗಿದೆ. ಜ್ಞಾನೇಂದ್ರೀಯಗಳ ಕೇಂದ್ರ ಮನಸ್ಸು. ಅದು ಎಲ್ಲಾ ಇಂದ್ರೀಯಗಳ ಕಾರ್ಯಗಳನ್ನೂ ಮಾಡಬಲ್ಲುದು. ಅಲ್ಲದೆ, ಸುಗಂಧವೆಂಬುದು ಇಲ್ಲಿ ಭಗವಂತನ ಕೀರ್ತಿರೂಪವಾದುದು. ಅದು ಮನಸ್ಸನ್ನು ಮುಟ್ಟುವುದು ಕರ್ಣವಿವರಗಳ ಮೂಲಕ.

ಭಗವಂತನ ಗುಣರೂಪಕ್ರಿಯೆಗಳಲ್ಲಿ ಯಾವ ಭೇದವೂ ಇಲ್ಲ. ಆದುದರಿಂದ, ಚರಣಕಮಲವೆಂದಾಗ, ಅದು ಭಗವಂತನ ಇಡೀ ವ್ಯಕ್ತಿತ್ವಕ್ಕೆ ಅನ್ವಯಿಸುವುದು.

ಭಗವದ್ದರ್ಶನಕ್ಕೆ, ನಿರಂತರ ಅಪರೋಕ್ಷಕ್ಕೆ, ನಿರ್ಮಲ ಭಕ್ತಿಯೇ ಕಾರಣವೆಂಬುದು ಇಲ್ಲಿ ಗೋಚರಿಸುವ ಮುಖ್ಯ ವಿಷಯ.

**ತಾವದ್ಭಯಂ ದ್ರವಿಣಗೇಹ ಸುಹೃನ್ನಿಮಿತ್ತಂ ಶೋಕಃ ಸ್ಪೃಹಾ**
**ಪರಿಭವೋ ವಿಪುಲಶ್ಚ ಲೋಭಃ ।**
**ತಾವನ್ಮಮೇತ್ಯಸದವಗ್ರಹ ಆರ್ತಿಮೂಲಂ ಯಾವನ್ನತೇಂಘ್ರಿಮಭಯಂ**
**ಪ್ರವೃಣೀತ ಲೋಕಃ ॥೬॥**

ಲೋಕಃ = ಸಾಧನೆಗಾಗಿ ಈ ಲೋಕದಲ್ಲಿ ಹುಟ್ಟಿ ಬಂದಿರುವ ಜೀವರು; ಯಾವತ್ = ಎಲ್ಲಿಯ ತನಕ; ತೇ = ನಿನ್ನ; ಅಭಯಂ ಅಂಘ್ರಿಂ = ಅಭಯಪ್ರದವಾದ ಪಾದವನ್ನು; ನಪ್ರವೃಣೀತ = ಆಶ್ರಯಿಸಿಕೊಂಡಿರುವುದಿಲ್ಲವೋ; ತಾವತ್ = ಅಲ್ಲಿಯ ತನಕ; ದ್ರವಿಣ ಗೇಹ ಸುಹೃನ್ನಿಮಿತ್ತಂ = ದ್ರವ್ಯ, ಗೃಹ, ಬಂಧು ಬಾಂಧವರು ಇವುಗಳ ನಿಮಿತ್ತದಿಂದ ಉಂಟಾಗುವ; ಭಯಂ = ಭಯವೂ; ಶೋಕಃ = ದುಃಖವೂ; ಸ್ಪೃಹಾ= ಆಸೆಯೂ; ಪರಿಭವಃ = ಅವಮಾನವೂ; ಚ = ಮತ್ತು; ವಿಪುಲಃ ಲೋಭಃ = ಅತಿಯಾದ ಲೋಭವೂ; ಅಲ್ಲದೆ; ಆರ್ತಿಮೂಲಂ = ದುಃಖಗಳಿಗೆ ಕಾರಣವಾದ; ಮಮಇತಿ = 'ನನ್ನದು' ಎಂಬ; ಅಸದವಗ್ರಹಃ = ದುಷ್ಟಭಾವನೆಯೂ; ತಾವತ್= ಅಲ್ಲಿಯ ತನಕ– ಇವು ಇದ್ದೇ ಇರುತ್ತವೆ.

ಇದು, ಕರ್ಮನಿಮಿತ್ತದಿಂದ ದಾರಿತಪ್ಪಿ ನಡೆಯುವ ಸುಜೀವಿಗಳಿಗೆ ಎಚ್ಚರಿಕೆಯ ಮಾತು.

**ದೈವೇನ ತೇ ಹತಧಿಯೋ ಭವತಃ ಪ್ರಸಂಗಾತ್ಸರ್ವಾಶುಭೋಪ**
**ಶಮನಾದ್ವಿಮುಖೇಂದ್ರಿಯಾಯೇ ।**
**ಕುರ್ವಂತಿ ಕಾಮ ಸುಖಲೇಶಲವಾಯದೀನಾ ಲೋಭಾಭಿಭೂತ**
**ಮನಸೋಕುಶಲಾನಿ ಶಶ್ವತ್ ॥೭॥**

ದೈವೇನ ಹತಧಿಯಃ = ದುರದೃಷ್ಟನಿಮಿತ್ತದಿಂದ (ಪ್ರಬಲ ಕರ್ಮ ಬಂಧನ ಕಾರಣದಿಂದ); ಹತಧಿಯಃ = ಬುದ್ಧಿಶೂನ್ಯರಾಗಿ; ಸರ್ವ ಅಶುಭ ಉಪಶಮನಾತ್= ಎಲ್ಲಾ ಬಗೆಯ ಅಮಂಗಳಗಳನ್ನೂ ಕಳೆದು ಬಿಡಲು ಸಮರ್ಥವಾದ; ಭವತಃ ಪ್ರಸಂಗಾತ್ = ನಿನ್ನ ಗುಣಗಾನಕ್ಕೆ ಅನುಕೂಲಿಸುವ ಪ್ರಸಂಗಗಳಿಂದ; ವಿಮುಖೇಂದ್ರಿಯಾಃ = ವಿಮುಖಗಳಾದ ಇಂದ್ರಿಯಗಳುಳ್ಳ; ಯೇತೇ = ಯಾವ ದುರ್ದೈವಿಗಳುಂಟೋ, ಅವರು; ಶಶ್ವತ್ = ಏಕಪ್ರಕಾರವಾಗಿ; ದೀನಾಃ = ನಿಸ್ಸಹಾಯಕರಾಗಿ; ಲೋಭಾಭಿಭೂತ ಮನಸಃ = ಲೋಭಬುದ್ಧಿಯಿಂದ ಕೂಡಿದ ಮನಸ್ಸುಳ್ಳವರಾಗಿ; ಕಾಮಸುಖಲೇಶಲವಾಯ = ಅತ್ಯಲ್ಪವಾದ ಕಾಮಿತಸುಖ ಪ್ರಾಪ್ತಿಗಾಗಿ; ಅಕುಶಲಾನಿ ಕುರ್ವಂತಿ = ದಡ್ಡತನದ ಕೆಲಸಗಳನ್ನೇ ಮಾಡುತ್ತಿರುತ್ತಾರೆ.

ಇದು ತ್ರಿವಿಧ ಜೀವರಿಗೂ ಅನ್ವಯಿಸುವ ಮಾತು. ನಾನು, ನನ್ನದು, ನನಗೆ ಎಂಬ ಭ್ರಾಂತಿಯಿಂದ ಸುಖದ ಬೇಟೆಯಲ್ಲಿ ತೊಡಗುವುದು ದಡ್ಡತನ. ಭಗವಂತನನ್ನೇ ನಂಬಿಕೊಂಡಿರುವುದು ಜಾಣತನ. "ಯೋಗಃ ಕರ್ಮಸುಕೌಶಲಂ".

**ಕ್ಷುತ್ತೃಟ್ ತ್ರಿಧಾತುಭಿರಿಮಾ ಮುಹುರರ್ದ್ಯಮಾನಾಃ**
**ಶೀತೋಷ್ಣವಾತ ವರ್ಷೈರಿತರೇತರಾಚ್ಚ ।**
**ಕಾಮಾಗ್ನಿ ನಾತ್ಚ್ಯುತ ರುಷಾಚ ಸುದುರ್ಭರೇಣ ಸಂಪಶ್ಯತೋ**
**ಮನಉರುಕ್ರಮ ಸೀದತೇಮೇ ॥೮॥**

ಉರುಕ್ರಮ = ಪ್ರತಾಪಶಾಲಿಯಾದ ಹೇಸ್ವಾಮೀ; ಕ್ಷುತ್ = ಹಸಿವು; ತೃಟ್= ನೀರಡಿಕೆ; ತ್ರಿಧಾತುಭಿಃ = ಶ್ಲೇಷ್ಮ, ಪಿತ್ಥ, ಕಫ, ಎಂಬ ಮೂರು ಧಾತುಗಳು ಮುಂತಾದ ಆಧಿಭೌತಿಕಗಳಿಂದ; ಶೀತೋಷ್ಣವಾತವರ್ಷೈಃ = ಚಳಿ, ಬಿಸಿಲು, ಬಿರುಗಾಳಿ, ಅತಿವೃಷ್ಟಿ ಮೊದಲಾದ ಆಧಿದೈವಿಕಗಳಿಂದ; ಇತರೇತರಾತ್‌ಚ = ಮತ್ತು ಇವುಗಳ ಪರಸ್ಪರ ಸಂಬಂಧಗಳಿಂದ ; ಮುಹುಃ ಅರ್ದ್ಯಮಾನಾಃ = ಮೇಲಿಂದ ಮೇಲೆ ಪೀಡೆಗೊಳಗಾಗುತ್ತಾ; ಉತ = ಕಂಡಹಾಗೆ; ಸುದುರ್ಭರೇಣ = ಸಹಿಸಲಸಾಧ್ಯವಾದ; ಕಾಮಾಗ್ನಿನಾ ಅತಿರುಷಾ = ಆಧ್ಯಾತ್ಮಿಕವಾದ (ಮಾನಸಿಕವಾದ) ಕಾಮಾಗ್ನಿ ಜ್ವಾಲೆಯಿಂದ ಕೋಪತಾಪಗಳಿಗೆ ಒಳಗಾಗುತ್ತಾ ದುಃಖಿಗಳಾಗಿರುವವರನ್ನು; ಸಂಪಶ್ಯತಃ = ಸ್ಪಷ್ಟವಾಗಿ ನೋಡಬಲ್ಲವನಾಗಿರುವ; ಮೇಮನಃ = ನನ್ನ ಮನಸ್ಸು; ಸೀದತೇ = ಮರುಗುತ್ತದೆ.)

ಸಜ್ಜನರ ಉದ್ಧಾರಕ್ಕಾಗಿ ಜಗತ್ ಸೃಷ್ಟ್ಯಾದಿಗಳನ್ನು ಮಾಡುವ ಭಗವಂತನು ಮಹಾ ಕರುಣಾಶಾಲಿಯಾಗಿರುವಂತೆ ಬ್ರಹ್ಮವಾಯುಗಳೂ ಪರಮ ಕರುಣಾಶಾಲಿ

ಗಳೆಂಬುದು ಇಲ್ಲಿ ವ್ಯಕ್ತವಾಗಿದೆ. ಕರ್ಮನಿಮಿತ್ತದಿಂದ ಸಂಸಾರದಲ್ಲಿ ಹೊರಳಿ ನರಳುತ್ತಿರುವ ಸುಜೀವಿಗಳು ಬೇಗ ವೈರಾಗ್ಯಶಾಲಿಗಳಾಗಿ ಮುಕ್ತರಾಗಲಿ ಎಂಬುದು ಅವರ ಸದಾಶಯ.

**ಯಾವತ್ಪೃಥಕ್ತ್ವಮಯಮಾತ್ಮನ ಇಂದ್ರಿಯಾರ್ಥಂ ಮಾಯಾಬಲಂ**
**ಭಗವತೋಜನ ಈಶಪಶ್ಯೇತ್ ।**
**ತಾವಚ್ಚ ಸಂಸ್ಕೃತಿರಸೌ ಪ್ರತಿ ಸಂಕ್ರಮೇತ ವ್ಯರ್ಥಾಪಿ ದುಃಖ ನಿವಹಂ**
**ವಹತೀಕ್ರಿಯಾರ್ಥಾ ॥೯॥**

ಈಶ = ಸ್ವಾಮಿ; ಅಯಂ ಜನಃ = ಈ ಸಾಧಕ ಜನರು; ಭಗವತಃ ಮಾಯಾಬಲಂ = ಅಘಟನಘಟನಾ ಸಾಮರ್ಥವುಳ್ಳ ಭಗವಂತನ ಶಕ್ತಿಯಿಂದ ನಡೆಯುವ; ಆತ್ಮನಃ ಇಂದ್ರಿಯಾರ್ಥಂ = ತಮ್ಮ ಇಂದ್ರಿಯಗಳ ವ್ಯಾಪಾರಗಳನ್ನು; ಪೃಥಕ್ತ್ವಂ = ಬೇರೆ ಬೇರೆ ಶಕ್ತಿಗಳಿಂದ ಎಂಬ ಭಾವನೆಯಿಂದ; ಯಾವತ್‌ಪಶ್ಯೇತ್ = ಎಲ್ಲಿಯ ತನಕ ಕಾಣುವರೋ; ತಾವತ್ ಚ = ಅಲ್ಲಿಯ ತನಕ; ವಹತೀಕ್ರಿಯಾರ್ಥಾ = ಉದ್ದಿಷ್ಟ ಪ್ರಯೋಜನಕ್ಕಾಗಿ ನಡೆಯುತ್ತಿರುವ; ದುಃಖನಿವಹಂ = ದುಖಪರಂಪರೆಯು; ವ್ಯರ್ಥಾ ಅಪಿ = ಕಡೆಗೆ ನಾಶಹೊಂದುವುದೇ ಆದರೂ; ಅಸೌ ಸಂಸ್ಕೃತಿಃ = ಈ ಸಂಸಾರ ಚಕ್ರವು; ಪ್ರತಿಸಂಕ್ರಮೇತ = ಮುಂದುವರಿಯುತ್ತಲೇ ಇರುತ್ತದೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳು :

೧. ಜಡಮಾಯೆ ಮತ್ತು ಚಿನ್ಮಾಯೆಗಳು ಬಂಧಕಗಳೇ ಆದರೂ ಅವು ಭಗವಂತನ ವಿಶಿಷ್ಟ ಸಾಮರ್ಥ್ಯದಿಂದಲ್ಲದೆ ಸ್ವತಂತ್ರಗಳಾಗಿ ವರ್ತಿಸಲಾರವು.

೨. ಜಡಗಳನ್ನು ವಿಕಾರಗೊಳಿಸಿ, ಅವುಗಳನ್ನು ಚಿನ್ಮಾಯಾ ರೂಪಳಾದ ಲಕ್ಷ್ಮೀದೇವಿಯ ವಶಗೊಳಿಸಿ, ವಿವಿಧಇಂದ್ರಿಯಗಳು ಬೇರೆ ಬೇರೆಯೆಂಬಂತೆ ತೋರ್ಪಡಿಸುವುದು ಭಗವಂತನ ಮಾಯಾಶಕ್ತಿಯೇ ಹೊರತು ಬೇರೆಯಲ್ಲ.

೩. ಈ ತತ್ತ್ವದ ರಹಸ್ಯವನ್ನು ತಿಳಿದು ಅಹಂಮಮತಾಬುದ್ಧಿಯನ್ನು ಬಿಟ್ಟಲ್ಲದೆ ಸಂಸಾರದ ಬಂಧನ ಬಿಟ್ಟುಹೋಗುವುದಿಲ್ಲ.

೪. ಬುದ್ಧಿಯನ್ನು ಕುದುರಿಸುವುದಕ್ಕಾಗಿ ಸಂಭವಿಸುವ ಸಾಂಸಾರಿಕ ಕ್ಲೇಶಗಳು ವ್ಯರ್ಥವಾದುವಲ್ಲ.

ಇಂತಹ ಭಗವತ್ಸಂಕಲ್ಪವನ್ನು ಅರಿತುಕೊಂಡು, ಜೀವರಿಗೆ ಆಯಾಜನ್ಮ ಕರ್ಮಗಳಿಗೆ ಅನುಗುಣಗಳಾದ ದೇಹಗಳನ್ನು ಕೊಡುವುದಾಗಿ ಬ್ರಹ್ಮದೇವರು ದೇವರ ಮುಂದೆ ಅರಿಕೆ ಮಾಡಿಕೊಳ್ಳುತ್ತಿದ್ದಾರೆ.

ಅಧ್ಯಾಹೃತಾರ್ಥಕರಣಾ ನಿಶಿನಿಃಶಯಾನಾ
ನಾನಾಮನೋರಥಧಿಯಃ ಕ್ಷಣಭಗ್ನನಿದ್ರಾಃ ।
ದೈವಾದ್ಧತಾರ್ಥ ರಚನಾ ಋಷಯೋಽಪಿ ದೇವ ಯುಷ್ಮತ್ಪ್ರಸಂಗ
ವಿಮುಖಾ ಇಹ ಸಂಸರಂತಿ ॥೧೦॥

ದೇವ = ಸ್ವಾಮೀ; ಅಧ್ಯಾಹೃತಾರ್ಥಕರಣಾಃ = ಇಂದ್ರಿಯಗಳ ಚಾಪಲ್ಯಗಳಿಗೆ ಒಳಗಾಗಿ; ನಿಶಿ = ಅಜ್ಞಾನವೆಂಬಕತ್ತಲೆಯಲ್ಲಿ; ನಿಃಶಯಾನಾಃ = ಗಾಢವಾಗಿ ಮುಳುಗಿದವರಾಗಿ; ನಾನಾ ಮನೋರಥಧಿಯಃ = ವಿಧವಿಧವಾದ ಅಪೇಕ್ಷೆಗಳನ್ನು ಹೊಂದಿದವರು; ಕ್ಷಣಭಗ್ನ ನಿದ್ರಾಃ = ನಡುನಡುವೆ ಸ್ವಲ್ಪ ಎಚ್ಚರಗೊಂಡು (ಬುದ್ಧಿಯನ್ನು ತಂದು ಕೊಂಡರೂ); ದೈವಾತ್ ಹತಾರ್ಥ ರಚನಾಃ = ವಿಧಿವಶದಿಂದ ಭಗ್ನಮನೋರಥರಾಗಿ; ಋಷಯಃ ಅಪಿ = ಋಷಿಚರ್ಯೆಯನ್ನು ಆಚರಿಸುವವರೂ ಕೂಡ; ಯುಷ್ಮತ್ ಪ್ರಸಂಗ ವಿಮುಖಾಃ = ನಿನ್ನ ದಿವ್ಯ ಚರಿತ್ರೆಗಳ ಕಡೆಗೆ ಲಕ್ಷ್ಯ ಕೊಡದೆ; ಇಹ ಸಂಸರಂತಿ = ಭೂಸ್ವರ್ಗ ನರಕಗಳಲ್ಲಿ ಜನ್ಮ ಹೊಂದುತ್ತಾ ಇರುತ್ತಾರೆ.

ಇದು ಸ್ವರೂಪತಃ ನಿತ್ಯಸಂಸಾರಿ ಜೀವರ ಹಣೆಬರಹ. ಸಂಸಾರ ಚಕ್ರದಿಂದ ಬಿಡುಗಡೆಯಾದ ಮೇಲೂ ಕೂಡ ಅವರಿಗೆ ನಿತ್ಯ ಸುಖದುಃಖ ಮಿಶ್ರವಾದ ಸಾಂತಾನಿಕಾದಿ ಲೋಕಗಳಲ್ಲಿ ನೆಲೆ.

ತ್ವದ್ಭಾವಯೋಗ ಪರಿಭಾವಿತ ಹೃತ್ಸರೋಜಾಯೇ ಸಚ್ಛ್ರುತೇಕ್ಷಿತ
ಪಥಾನನು ನಾಥ ಪುಂಸಾಂ ।
ಯದ್ಯದ್ಧಿಯಾ ತ ಉರುಗಾಯ ವಿಭಾವಯಂತಿ ತತ್ತದ್ವಪುಃ ಪ್ರಣಯಸೇ
ತದನುಗ್ರಹಾಯ ॥೧೧॥

ಯೇ = ಯಾವ ಮುಕ್ತಿಯೋಗ್ಯ ಜೀವರು; ತ್ವದ್ಭಾವಯೋಗ ಪರಿಭಾವಿತ ಹೃತ್ಸರೋಜಾಃ = ಭಕ್ತಿಯೋಗದಿಂದ ತಮ್ಮ ಹೃತ್ಕಮಲಗಳಲ್ಲಿ ನಿನ್ನನ್ನು ಕಾಣಬಲ್ಲವರಾಗಿ; ಸತ್ ಶ್ರುತಿಈಕ್ಷಿತಪಥಾಃ = ಸದ್ಗುರುಗಳ ಮಾರ್ಗದರ್ಶನಹೊಂದಿ, ಶಾಸ್ತ್ರಾರ್ಥ ದರ್ಶನದಿಂದ ವೈರಾಗ್ಯಶಾಲಿಗಳಾಗಿ ಧನ್ಯರಾದ; ಪುಂಸಾಂ = ಸುಜೀವಿಗಳ; ತದನುಗ್ರಹಾಯ = ಅವರಲ್ಲಿ ಅನುಗ್ರಹವನ್ನು ಬೀರುವುದಕ್ಕಾಗಿ; ಉರುಗಾಯ = ಮಹಾಕೀರ್ತಿಶಾಲಿಯಾದ; ನಾಥ = ಹೇ ಸ್ವಾಮಿ; ತೇ = ಅವರು; ಯದ್ಯತ್ ಧಿಯಾ ವಿಭಾವಯಂತಿ = ಅವರವರ ಉಪಾಸನಾಯೋಗ್ಯತೆಗೆ ಅನುಗುಣವಾಗಿದ್ದ ಯಾವ ಯಾವ ರೀತಿಯಲ್ಲಿ ನಿನ್ನನ್ನು ಭಾವಿಸುವರೋ ; ತತ್ತತ್ ವಪುಃ = ಅವರ ಭಾವನೆಗಳಿಗೆ ಅನುಗುಣವಾದ ರೂಪವನ್ನು; ಪ್ರಣಯಸೇ = ತೋರಿಸಿ ಕೊಳ್ಳುವಿ.

ಅಪರೋಕ್ಷವೆಂಬುದು, ಅವರವರ ಯೋಗ್ಯತೆಗಳಿಗನುಗುಸಾರವಾಗಿ, ಅವರ ಹೃತ್ಕಮಲಗಳಲ್ಲಿ ಕಂಡುಬರುವ ಭಗವಂತನ ರೂಪ.

**ನಾತಿಪ್ರಸೀದಸಿ ತಥೋಪಚಿತೋಪಚಾರ್ಯೈರಾರಾಧಿತಃ ಸುರಗಣೈರ್ಹೃದಿ ಬದ್ಧ ಕಾಮ್ಯೈಃ ।**
**ಯಃಸರ್ವಭೂತ ದಯಯಾಸದಲಭ್ಯಯೈಕೋನಾನಾ ಜನೇಷ್ವವಹಿತಃ ಸುಹೃದಂತರಾತ್ಮಾ ॥೧೨॥**

ಯಃಏಕಃ = ಯಾವ ಒಬ್ಬನೇ ಆದ ನೀನು; ಸರ್ವಭೂತ ದಯಯಾ = ಸಕಲ ಪ್ರಾಣಿಗಳಲ್ಲಿಯೂ ದಯೆಯುಳ್ಳವನಾಗಿ; ನಾನಾ ಜನೇಷು ಅವಹಿತಃ = ಬಗೆಬಗೆಯ ಜೀವರ ಶರೀರಗಳಲ್ಲಿ ಅಂತರ್ಯಾಮಿಯಾಗಿದ್ದು; ಸುರಗಣೈಃ ಹೃದಿ ಆರಾಧಿತಃ = ದೇವತಾಸಮೂಹಗಳಿಂದ ಅವರ ಹೃದಯಮಂದಿರಗಳಲ್ಲಿ ಸುಪೂಜಿತನಾಗಿ; ಆಸದಲಭ್ಯಃ = ದೈತ್ಯರಿಗೆ ಸಿಕ್ಕದೇ ಇರುವವನಾಗಿ; ಬದ್ಧಕಾಮ್ಯೈಃ = ವಿವಿಧಮನೋರಥಗಳಿಗೆ ಒಳಗಾದವರಿಂದ; ತಥಾ ಉಪಚಿತ ಉಪಚಾರ್ಯೈಃ ಆರಾಧಿತಃ= ಅದಕ್ಕನುಗುಣವಾಗಿ ಷೋಡಶೋಪಚಾರ ಪೂಜಾದಿಗಳಿಂದ ಅರ್ಚಿಸಲ್ಪಟ್ಟರೂ; ಸ ಅತಿ ಪ್ರಸೀದಸಿ = ಅವರ ವಿಷಯದಲ್ಲಿ ನೀನು ಹೆಚ್ಚು ಪ್ರಸನ್ನನಾಗುವುದಿಲ್ಲ.

ದೇವತೆಗಳೂ, ದೇವತಾ ಪಕ್ಷದವರೂ ದಯಾಮಯನೂ, ಸರ್ವಂತರಾತ್ಮನೂ, ಏಕೈಕ ಸ್ವಾಮಿಯೂ ಆಗಿರುವ ಶ್ರೀಹರಿಯನ್ನು ಸರ್ವಸಮರ್ಪಣ ಭಾವದಿಂದ ತಮ್ಮ ಹೃದಯಮಂದಿರಗಳಲ್ಲಿ ಆರಾಧಿಸಿ, ಮೋಕ್ಷಾದಿ ಸಕಲ ಇಷ್ಟಾರ್ಥಗಳನ್ನೂ ಪಡೆಯುವರು. ದುರ್ಜನರ ಸೇವೆಯನ್ನು ಆ ಶ್ರೀಹರಿಯು ಒಲ್ಲ. ಮಧ್ಯಮ ಜೀವರು ಕಾಮ್ಯ ಫಲಗಳಾಸೆಯಿಂದ ಎಷ್ಟೇ ಬಗೆಯಲ್ಲಿ ಪೂಜಿಸಿದರೂ, ಅವರಿಗೆ ದೊರೆಯುವ ಫಲ ಅತ್ಯಲ್ಪವಾದುದೇ ಹೊರತು, ಮುಕ್ತಿಪ್ರದವಲ್ಲ.

**ಪುಂಸಾಮತೋ ವಿವಿಧ ಕರ್ಮಭಿರಧ್ವರಾದ್ಯೈರ್ದಾನೇನ ಚೋಗ್ರತಪಸಾ ವ್ರತಚರ್ಯಯಾಚ ॥**
**ನಾರಾಧನಂ ಭಗವತಸ್ತವ ಸತ್ಕ್ರಿಯಾರ್ಥೋ ಧರ್ಮೋರ್ಪಿತಃ ಕರ್ಹಿಚಿತ್ಕ್ರಿಯತೇನಯತ್ರ ॥೧೨॥**

ಕರ್ಹಿಚಿತ್ = ಹೇಗಾದರೂ; ಧರ್ಮಃ = ಧರ್ಮಾಚರಣೆಯು; ಯತ್ರನ ಅರ್ಪಿತಃ = ಯಾವಲ್ಲಿ ನಿನಗೆ ಸಮರ್ಪಿತವಾಗಿರುವುದಿಲ್ಲವೋ; ಅತಃ = ಆ ಕಾರಣದಿಂದ; ಪುಂಸಾ = ಪುರುಷರಿಂದ ಆಚರಿಸಲ್ಪಟ್ಟ; ವಿವಿಧಕರ್ಮಭಿಃ = ನಾನಾ

ಬಗೆಯ ಪುಣ್ಯಕರ್ಮಗಳಿಂದ; ಅಧ್ವರಾದ್ಯೈಃ = ಯಜ್ಞಯಾಗದಿಗಳಿಂದ; ಚ = ಮತ್ತು; ದಾನೇನ = ದಾನ ಮಾಡುವುದರಿಂದ; ಉಗ್ರತಪಸಾ = ಕಠಿಣ ತಪಸ್ಸಿನಿಂದ; ಚ = ಮತ್ತು; ವ್ರತಚರ್ಯಯಾ = ವ್ರತಾಚರಣೆಗಳಿಂದ; ಭಗವತಃ ತವ = ಭಗವಂತನಾದ ನಿನ್ನ; ಸತ್ಕ್ರಿಯಾರ್ಥಃಆರಾಧನಂ ನಭವತಿ = ಸತ್ಫಲದಾಯಕವಾದ ಆರಾಧನೆಯಾಗುವುದಿಲ್ಲ.

ಸಮರ್ಪಣೆ ಎಂದರೇನು ಎಂಬುದನ್ನು ತಿಳಿಯುವುದು ಅಗತ್ಯ. ಪರಮಾತ್ಮನಿಂದ ದತ್ತವಾದ ವಸ್ತುಗಳನ್ನು ಪರಮಾತ್ಮನ ಪ್ರೀತ್ಯರ್ಥವಾಗಿ ಪರಮಾತ್ಮನಿಗೆ ಅರ್ಪಿಸುತ್ತೇನೆ ಎನ್ನುವುದು ಉಚಿತವೇ ಸರಿ. ಅರ್ಪಿಸುವ ವಸ್ತು ನನ್ನದಲ್ಲ ಎಂದು 'ಮಮ' ಕಾರವನ್ನು ಬಿಡುವುದು ಸಮರ್ಪಣೆಯ ಒಂದು ಅಂಗವೇ ನಿಜ. ಆದರೆ, ಸಮರ್ಪಿಸುವುದು ಯಾರು ಎಂದು ಯೋಚಿಸಿ ನಿಜಸ್ಥಿತಿಯನ್ನು ಗ್ರಹಿಸಿದಾಗ ಅದು ನಿಜವಾದ ಸಮರ್ಪಣೆಯಾಗುವುದು. ಸಾತ್ವಿಕ ಅಹಂಕಾರವೂ ಇಲ್ಲವಾಗಿ,ಬಿಂಬ ಕ್ರಿಯಾದರ್ಶನದಿಂದ, ನವವಿಧ ಭಕ್ತಿಯಲ್ಲಿ ಕಟ್ಟಕಡೆಯದಾದ ಆತ್ಮ ಸಮರ್ಪಣೆಯು ನಡೆದು,ಕರ್ಮಾಚರಣೆಯ ಪೂರ್ಣ ಫಲ ದೊರೆಯುವುದು.

ಶಶ್ವತ್ಸ್ವರೂಪ ಮಹಸೈವ ನಿಪೀತಭೇದಮೋಹಾಯ
ಬೋಧಧಿಷಣಾಯ ನಮಃ ಪರಸ್ಮೈ ।
ವಿಶ್ವೋದಯಸ್ಥಿತಿಲಯೇಷು ನಿಮಿತ್ತಲೀಲಾರಾಮಾಯ ತೇನಮ ಇದಂ
ಚಕೃಮೇಶ್ವರಾಯ ॥೧೪॥

ಶಶ್ವತ್ = ಏಕಪ್ರಕಾರವಾದ; ಸ್ವರೂಪಮಹಸಾ ಏವ = ಜೀವಜಡಗಳಿಂದ ಅತ್ಯಂತ ಭಿನ್ನವೂ ವಿಲಕ್ಷಣವೂ ಆದ ಸ್ವರೂಪ ಮಹಿಮೆಯಿಂದಲೇ; ನಿಪೀತ ಭೇದ ಮೋಹಾಯ = ಎಲ್ಲಾ ವಿಧವಾದ ಸ್ವಗತ ಭೇದವಿವರ್ಜಿತನೆಂಬ ಕಾರಣದಿಂದ, ಅಜ್ಞ ಜನರ ಮೋಹಕವಾದಗಳನ್ನು ಮೀರಿರುವ; ಬೋಧಧಿಷಾಣಾಯ; ಜ್ಞಾನಸ್ವರೂಪನಾದ; ಪರಸ್ಮೈ = ಸರ್ವೋತ್ತಮನಾದ ನಿನಗೆ; ನಮಃ = ನಮಸ್ಕಾರವು; ವಿಶ್ವೋದಯ ಸ್ಥಿತಿಲಯೇ= ಜಗತ್ತಿನ ಸೃಷ್ಟಿ, ಪಾಲನೆ ಮತ್ತು ಲಯಗಳ ವಿಷಯದಲ್ಲಿ ನಿಮಿತ್ತ ಲೀಲಾರಾಮಾಯ = ಕೇವಲ ನಿಮಿತ್ತ ಕಾರಣನಾಗಿ, ಸ್ವಾನಂದಾನುಭವ ಪೂರ್ಣನಾದ; ಈಶ್ವರಾಯ = ಸರ್ವಕ್ಕೂ ಒಡೆಯನಾದ ನಿನಗೆ; ಇದಂ ನಮಃ ಚಕೃಮೇ = ಈ ನನ್ನ ನಮಸ್ಕಾರವನ್ನು ಮಾಡುತ್ತೇನೆ.

ಎಲ್ಲಾ ಸಾಮಗ್ರಿಗಳೂ ಇದ್ದರೂ ಯಾವ ಚೇತನ ವ್ಯಕ್ತಿ ಇಲ್ಲದಿದ್ದರೆ ಆ ಜಡಗಳು ಪರಿಣಾಮ ಹೊಂದಿ ಕಾರ್ಯರೂಪಕ್ಕೆ ಬರುವುದಿಲ್ಲವೋ ಅಂತಹ ಚೈತನ್ಯ ರೂಪಕ್ಕೆ

ನಿಮಿತ್ತ ಕಾರಣ ಎಂದು ಹೆಸರು. ಪರಿಣಾಮಹೊಂದಿ ಕಾರ್ಯರೂಪಕ್ಕೆ ಬರುವ ಸಾಧನ ವಸ್ತುಗಳಿಗೆ ಉಪಾದಾನ ಕಾರಣ ಎಂದು ಹೆಸರು. ಭಗವಂತನು ವಸ್ತುಗಳಲ್ಲಿ ವಸ್ತುಗಳಂತೆ ಇದ್ದು ಅವುಗಳಿಗೆ ಸ್ಥಿತಿಯನ್ನು ಒದಗಿಸುವನೇ ಹೊರತು ತಾಸೇ ಜಗದ್ರೂಪವಾಗಿ ಪರಿಣಮಿಸುವುದಿಲ್ಲ. ಆದುದರಿಂದ ಅವನು ಕೇವಲ ನಿಮಿತ್ತ ಕಾರಣ. ತನ್ನ ಅದ್ಭುತ ಶಕ್ತಿಯಿಂದ ರೂಪರೂಪಾಂತರಗಳನ್ನು ಪ್ರಕಟಿಸುವುದು ಇಚ್ಛಾ ರೂಪವೇ ಹೊರತು, ವಿಕೃತ ರೂಪವಲ್ಲ. ಆ ಪ್ರಭುವು ನಿತ್ಯಾನಂದ ಮಯನಾದ ನಾಟಕ ದಿಗ್ದರ್ಶಕನೇ ಹೊರತು, ಸುಖ ದುಃಖಭಾಗಿಯಾದ ವ್ಯಕ್ತಿಯಲ್ಲ.

ಭಗವಂತನ ಇಂತಹ ದಿವ್ಯ ಮಹಿಮೆಯನ್ನು ಅರಿತುಕೊಂಡೇ, ತಾವು ಸೃಷ್ಟಿ ಕಾರ್ಯದಲ್ಲಿ ಪ್ರವೃತ್ತರಾಗುವುದಾಗಿ, ಬ್ರಹ್ಮ ದೇವರು ಬಿಂಬ ಸ್ಮರಣ ಪೂರ್ವಕವಾಗಿ ಅರಿಕೆಮಾಡಿಕೊಂಡಿದ್ದಾರೆ.

**ಯಸ್ಯಾವತಾರ ಗುಣಕರ್ಮ ವಿಡಂಬನಾನಿ ನಾಮಾನಿಯೇಽಸುವಿಗಮೇ ವಿವಶಾಗೃಣಂತಿ ।**
**ತೇನೈಕಜನ್ಮಶಮಲಂ ಸಹಸೈವ ಹಿತ್ವಾ ಸಂಯಾಂತ್ಯಪಾವೃತಮೃತಂ ತಮಜಂ ಪ್ರಪದ್ಯೇ ॥೧೫॥**

ಯಸ್ಯ = ಯಾವ ಪುರುಷೋತ್ತಮನ; ಅವತಾರ ಗುಣಕರ್ಮ ವಿಡಂಬನಾನಿ ನಾಮಾನಿ = ನಾನಾಅವತಾರಗಳಲ್ಲಿ ಜಗತ್ಸೃಷ್ಟ್ಯಾದಿ ಕಾರ್ಯಗಳಿಗಾಗಿ ಇಚ್ಛಾಮಾತ್ರದಿಂದ ತೋರ್ಪಡಿಸುವ ದಿವ್ಯಗುಣ ಕ್ರಿಯಾದಿಗಳ ರೂಪನಾಮಗಳನ್ನು; ಯೇ = ಯಾವ ಪುಣ್ಯಾತ್ಮರು; ಅಸುವಿಗಮೇ = ಪ್ರಾಣೋತ್ಕ್ರಮಣ ಕಾಲದಲ್ಲಿ; ವಿವಶಾಃ = ತಮ್ಮ ಪ್ರಯತ್ನವಿಲ್ಲದೆಯೇ (ಪ್ರಾಣದೇವರ ಪ್ರೇರಣೆಯಿಂದ); ಗೃಣಂತಿ = ಮನಸ್ಸಿಗೆ ತಂದುಕೊಳ್ಳುವರೋ ಅಥವ ಉಚ್ಚರಿಸುವರೋ; ತೇ = ಅವರು; ನುಏಕಜನ್ಮ ಶಮಲಂ = ಅನೇಕಾನೇಕಜನ್ಮಗಳಲ್ಲಿ ಆಚರಿಸಿದ ಪಾಪಗಳನ್ನು; ಸಹಸೈವ = ಕೂಡಲೇ; ಹಿತ್ವಾ = ಕಳೆದುಕೊಂಡು; ಅಪಾವೃತಂ ಇಚ್ಛಾದಿ ಆವರಕಗಳನ್ನು ಬಿಟ್ಟಿರುವ; ಋತಂ = ವೇದಾದಿಗಳಲ್ಲಿ ಉಕ್ತವಾದ ಸತ್ಯಸ್ವರೂಪವುಳ್ಳ; ಅಜಂ = ಜನ್ಮಾದಿ ದೋಷರಹಿತನಾದ ಅಂತರಾತ್ಮನನ್ನು; ಸಂಯಾಂತಿ = ಚೆನ್ನಾಗಿ ಹೊಂದಿಕೊಳ್ಳುತ್ತಾರೆ; ತಂ = ಅಂತಹಸ್ವಾಮಿಯನ್ನು; ಪ್ರಪದ್ಯೇ = ಶರಣು ಹೊಂದುತ್ತೇನೆ.

"ಅರಿಯದಿದ್ದರು ಎಮ್ಮೊಳಿರ್ದನವರತ ವಿಷಯಗಳುಂಬ ಜ್ಞಾನೋತ್ತರದಿ ತನಗರ್ಪಿಸಲು ಚಿತ್ಸುಖವಿತ್ತು ಸಂತೈಪ ॥

ಹೆಚ್ಚು ತಿಳಿವಳಿಕೆ ಇಲ್ಲದೆ ಪುಣ್ಯ ಕರ್ಮಗಳನ್ನೆಸಗಿದ ಸುಜೀವಿಗಳಿಗೆ, ಅವರ

ಮರಣಕಾಲದಲ್ಲಿ ಶ್ರೀಹರಿಯು ತನ್ನ ಸ್ಮರಣೆಯನ್ನು ಕೊಟ್ಟು, ಜನ್ಮ ಜನ್ಮಾಂತರಗಳ ಪಾಪಗಳನ್ನು ಕಳೆದು ಅವರನ್ನು ತನ್ನಲ್ಲಿ ಅಡಕಮಾಡಿಕೊಳ್ಳುತ್ತಾನೆ. ಇನ್ನು ಪ್ರಯತ್ನ ಪೂರ್ವಕವಾಗಿ ಸಮರ್ಪಣ ಬುದ್ಧಿಯಿಂದ ಪೂಜಾದಿ ಕರ್ಮಗಳನ್ನಾಚರಿಸಿದವರಿಗೆ ಆ ಶ್ರೀಹರಿಯು ಒಲಿದೇ ಒಲಿಯುವನೆಂಬುದರಲ್ಲಿ ಸಂಶಯವುಂಟೆ! ಶ್ರೀ ಹರಿಯ ಕಾರುಣ್ಯವೇ ತಾರಕವೆಂಬುದನ್ನಿಲ್ಲಿ ಮನಗಾಣಿಸಿದ್ದಾರೆ.

**ಯೋವಾ ಅಹಂಚ ಗಿರಿಶಶ್ಚ ವಿಭುಃ; ಸ್ವಯಂಚ ಸ್ಥಿತ್ಯುದ್ಭವ ಪ್ರಲಯ ಹೇತವ ಆತ್ಮಮೂಲಾಃ।**
**ಭೂತ್ವಾತ್ರಿಪಾದ್ವವೃಧ ಏಕ ಉರುಪ್ರರೋಹಸ್ತಸ್ಮೈ ನಮೋ ಭಗವತೇ ಭುವನ ದ್ರುಮಾಯ ॥೧೬॥**

ಅಹಂ = ನನ್ನಲ್ಲಿ ಬ್ರಹ್ಮನಾಮಕನಾಗಿ; ಚ = ಮತ್ತು; ಗಿರಿಶಃ ಚ = ರುದ್ರನಲ್ಲಿ ರುದ್ರನಾಮಕನಾಗಿ; ವಿಭುಃ = ಸರ್ವಾಂತರ್ಯಾಮಿಯಾದ; ಸ್ವಯಂಚ = ತಾನೇ ವಿಷ್ಣುನಾಮಕನಾಗಿರಲು; ಸ್ಥಿತಿ ಉದ್ಭವ ಪ್ರಲಯ ಹೇತವಃ = ಸೃಷ್ಟಿಸ್ಥಿತಿ ಲಯಗಳಿಗೆ ಕಾರಣಗಳಾಗಿ; ಆತ್ಮ ಮೂಲಾಃ = ಆ ರೂಪಗಳು ತನ್ನದೇ ಆದ ಅನಂತ ಪದ್ಮನಾಭರೂಪದಿಂದ ಹೊರಬಂದ ರೂಪಗಳಾಗಿರಲು; ತ್ರಿಪಾತ್ ಭೂತ್ವಾ = ಅನಂತಾಸನ, ಶ್ವೇತ ದ್ವೀಪ, ವೈಕುಂಠಪತಿಯಾಗಿ; ಯಃ ಏಕಃವಾ = ಯಾವ ಆ ಒಬ್ಬನೇ; ಉರು ಪ್ರರೋಹಃ = ಶಾಖೋಪಶಾಖೆಗಳಂತೆ ರೂಪರೂಪಾಂತರಗಳನ್ನು ಪ್ರಕಟಿಸಿ; ವವೃಧೇ = ಬೆಳೆದು ನಿಂತನೋ; ತಸ್ಮೈ ಭಗವತೇ ಭುವನದ್ರುಮಾಯ = ಆ ಜಗದ್ವೃಕ್ಷರೂಪನಾದ ಭಗವಂತನಿಗೆ; ನಮಃ = ನಮಸ್ಕಾರ.

ಸೃಷ್ಟಿಕಾರ್ಯಲಯಕಾರ್ಯಗಳಲ್ಲಿ ಪಾಲುಗಾರರಾದ ಬ್ರಹ್ಮರುದ್ರರು ಅಸ್ವತಂತ್ರಕರ್ತರೆಂದೂ, ಬ್ರಹ್ಮ, ರುದ್ರ,ವಿಷ್ಣುವೆಂಬ ನಾಮಗಳು, ನಿರ್ವಿಕಾರನಾದರೂ ವೈವಿಧ್ಯಗಳನ್ನು ತೋರಿಸಬಲ್ಲ ಸ್ವತಂತ್ರ ಮೂಲ ಕಾರಣನಾದವನಿಗೇಮುಖ್ಯವಾಗಿ ಸಲ್ಲುವವೆಂದೂ ಬ್ರಹ್ಮದೇವರು ಸ್ಮರಿಸಿದ್ದಾರೆ. ನಿರ್ವಿಕಾರನಾದುದರಿಂದ, ಬ್ರಹ್ಮಾಂಡದ ಸೃಷ್ಟಿಗೆ ಬೇರುಗಳಂತಿದ್ದು ಬ್ರಹ್ಮಾಂಡ ವೃಕ್ಷಾಕಾರನಾಗಿದ್ದರೂ ಆ ಜಗದಾದಿ ಕಾರಣನು, ಪ್ರಾಕೃತ ವಸ್ತುಗಳಿಗೆ ರೂಪಗಳನ್ನು ಅನುಗ್ರಹಿಸಲು ಅವುಗಳಲ್ಲಿ ಅವುಗಳಂತೆ ಪ್ರವಿಷ್ಟನಾಗಿರುವನೇ ಹೊರತು, ತಾನೇ ಜಗದ್ರೂಪನಾಗಿ ಪರಿಣಮಿಸಿಲ್ಲ. ಅವನು ಕುಂಬಾರನಂತೆ ಕೇವಲ ನಿಮಿತ್ತ ಕಾರಣ – ಮಣ್ಣೂ ಅಲ್ಲ; ಮಡಕೆಯೂ ಅಲ್ಲ. (ಪ್ರಕೃತಿಯೂ ಅಲ್ಲ; ವಿಕಾರವೂ ಅಲ್ಲ.)

ಲೋಕೋವಿಕರ್ಮನಿರತಃ ಕುಶಲೇ ಪ್ರಮತ್ತಃ ಕರ್ಮಣ್ಯಯಂ
ತ್ವದುದಿತೇ ಭವದರ್ಚನೇ ಸ್ವೇ ।
ಯಸ್ತಾವದಸ್ಯ ಬಲವಾನಿಹ ಜೀವಿತಾಶಾಂ ಸದ್ಯಚ್ಛಿನತ್ತ್ಯನಿಮಿಷಾಯ
ನಮೋಸ್ತು ತಸ್ಮೈ ॥೧೭॥

ಅಯಂ ಲೋಕಃ = ಈ ಲೋಕದ ಜನರು; ವಿಕರ್ಮನಿರತಃ = ವಿರುದ್ಧ ಕರ್ಮಗಳಲ್ಲಿ ಆಸಕ್ತರಾಗಿರುವರು; ತ್ವದುದಿತೇ = ನಿನ್ನಿಂದ ಶ್ರುತಿಸ್ಮೃತಿಗಳಲ್ಲಿ ಉಕ್ತವಾದ; ಕುಶಲೇ = ಪುಣ್ಯ ಪ್ರದಗಳಾದ; ಭವದರ್ಚನೇಸ್ವೇಕರ್ಮಣಿ = ತಮಗೆ ಉಚಿತವಾದ ನಿನ್ನ ಪೂಜಾ ರೂಪ ಕರ್ಮಗಳಲ್ಲಿ; ಪ್ರಮತ್ತಃ = ಆಚರಿಸದೆ ಮೈಮರೆತಿರುವರು; ಬಲವಾನ್ = ಯಾವ ಸರ್ವಸಮರ್ಥನಾದ ನೀನು; ಅಸ್ಯ = ಈ ಜನರ; ತಾವತ್ ಜೀವಿತಾಶಾಂ = ಆ ರೀತಿಯ ವ್ಯರ್ಥ ಜೀವನದಾಶೆಯನ್ನು; ಸದ್ಯಃ = ಕೂಡಲೇ; ಛಿನತ್ತಿ = ಕೊನೆಗಾಣಿಸುವಿ; ತಸ್ಮೈ ಅನಿಮಿಷಾಯ = ಅಂತಹ ಕಾಲನಾಮಕನಾದ ನಿನಗೆ; ನಮಃ ಅಸ್ತು = ನಮಸ್ಕಾರವು

ತ್ರುಟಿ, ಲವ, ನಿಮೇಷಾದಿ ಕಾಲಗಣನೆ ಮಾಡುತ್ತಾ ಕಾಲಚಕ್ರಗತನಾದ ಶ್ರೀಹರಿಯೇ "ಅನಿಮಿಷ" ಸತ್ಸಾಧನೆ ಮಾಡಿಕೊಳ್ಳದ ಪುರುಷರ ಜೀವನವನ್ನು ಸಕಾಲದಲ್ಲಿ ಕಡೆಗಾಣಿಸಿ, ಆ ಜನ್ಮದ ಸಂಸ್ಕಾರಗಳ ಬಲದಿಂದ ಮುಂದಿನ ಜನ್ಮದಲ್ಲಿ ಬುದ್ಧಿ ತಂದುಕೊಳ್ಳುವ ಹಾದಿ ಹಿಡಿಯುವಂತೆ, ಅಥವ ಅವರ ಯೋಗ್ಯತಾನುಸಾರ ಇನ್ನೂ ಹೀನ ಗತಿಗೆ ಇಳಿಯುವಂತೆ ಮಾಡುತ್ತಾನೆ. ಸ್ವಭಾವಗಳಿಗೂ, ಕರ್ಮಗಳಿಗೂ ಅನುಗುಣವಾಗಿ ಜೀವರಿಗೆ ದೇಹಗಳನ್ನು ಕೊಡಬೇಕಾದ ತಮ್ಮ ಹೊಣೆಗಾರಿಕೆಯನ್ನು ಸೃಷ್ಟಿಕಾರ್ಯದಲ್ಲಿ ತೊಡಗಲಿರುವ ಬ್ರಹ್ಮದೇವರು ಇಲ್ಲಿ ಸ್ಮರಿಸಿದ್ದಾರೆ.

ಯಸ್ಮಾದ್ಬಿಭೇಮ್ಯಹಮಪಿ ದ್ವಿಪರಾರ್ಧ್ಯಧಿಷ್ಣ್ಯಮಧ್ಯಾಸಿತಃ ಸಕಲ
ಲೋಕನಮಸ್ಕೃತಂ ಯತ್ ।
ತೇಪೇತಪೋ ಬಹುತಪೋವರುರುತ್ಸಮಾನಸ್ತಸ್ಮೈ ನಮೋ ಭಗವತೇ
ವಿಸಖಾಯ ತುಭ್ಯಂ ॥೧೮॥

ಯತ್ ಸಕಲ ಲೋಕ ನಮಸ್ಕೃತಂ = ಯಾವ ಸತ್ಯಲೋಕಾಧಿಪತ್ಯವು ಎಲ್ಲಾ ಲೋಕಗಳವರಿಂದಲೂ ವಂದ್ಯವಾದುದೋ, ಆ ಪದವಿಯಲ್ಲಿ; ದ್ವಿಪರಾರ್ಧ್ಯಧಿಷ್ಣ್ಯಂ ಅಧ್ಯಾಸಿತಃ = ಎರಡು ಪರಾರ್ಧಗಳಷ್ಟು ಕಾಲಪದಸ್ಥನಾಗಿರುವ ನಾನು; ಯಸ್ಮಾತ್ ಬಿಭೇಮಿ = ಯಾವ ಕಾಲಾತ್ಮಕನಾದ ನಿನ್ನ ದೆಸೆಯಿಂದ ಭಯಪಡುವೆನೋ; ಅವರುರುತ್ಸಮಾನಃ = ಮುಕ್ತಿಯಲ್ಲಿ ಆನಂದ ವೃದ್ಧಿಗೆ ಕಾರಣವಾದ ಪೂರ್ಣಜ್ಞಾನದ

ಅವಧಿಯನ್ನು ಮುಟ್ಟಲು; ಬಹುತಪಃ ತೇಪೇ = ಅತಿಶಯವಾಗಿ ತಪಸ್ಸನ್ನು ಆಚರಿಸಿದೆನೋ; ತಸ್ಮೈವಿಸಖಾಯ = ಸೃಷ್ಟ್ಯಾದಿ ಕಾರ್ಯಗಳಲ್ಲಿ ಅನ್ಯರ ಸಹಾಯವನ್ನಪೇಕ್ಷಿಸದೆ ಸ್ವತಂತ್ರನಾದಂತಹ; ಭಗವತೇತುಭ್ಯಂ ಗುಣಪೂರ್ಣನಾದ ನಿನಗೆ; ನಮಃ = ನಮಸ್ಕಾರ.

ಇಲ್ಲಿ, ಭಯವೆಂದರೆ ವಿಪತ್ತಿನ ಭಯವಲ್ಲ; ಭಗವಂತನ ಸಂಕಲ್ಪರೂಪವಾದ ಆಜ್ಞೆಯನ್ನು ನೆರವೇರಿಸುವಲ್ಲಿ ಎಲ್ಲಿಕುಂದುಟಾಗುವುದೋ ಎಂಬ ಭಯ. ಅದು ಕಾರ್ಯಶ್ರದ್ಧೆಗೆ ಸಹಕಾರಿ. ಆದರಿಂದ ಭಗವಂತನ ವಿಶೇಷ ಪ್ರಸಾದ. ಪ್ರಕೃತಿಯ ಕಾರ್ಯಾಚರಣೆಗಳಿಗೆ ಪ್ರೇರಕರಾದ ದೇವತೆಗಳು ಇಂತಹ ಭಯವನ್ನು ಇಟ್ಟುಕೊಂಡೇ ಕಾರ್ಯನಿರತರಾಗಿದ್ದಾರೆ. “ಭೀಷಾಸ್ಮಾತ್ ಪವತೇ ವಾಯುಃ” ಎಂದ ಹಾಗೆ.

ಬ್ರಹ್ಮದೇವರ ಆಯುರ್ಮಾನಕ್ಕೆ ಪರ ಎಂದು ಹೆಸರು. ಅದು ಮಾನವರ ಎಣಿಕೆಯ ೪೩, ೨೦೦೦೦X೨೦೦೦X೩೬೦X೧೦೦ ವರ್ಷಗಳಿಗೆ ಸಮ. ಆದರಲ್ಲಿ ಎರಡು ವಿಭಾಗ- ಬ್ರಹ್ಮಾಂಡದಹೊರಗಿನ ನವಾವರಣಾದಿಗಳ ಸೃಷ್ಟಿಯ ಕಾಲ, ಪ್ರಥಮ ಪರಾರ್ಧ (ಬ್ರಹ್ಮಮಾನದ ೫೦ ವರ್ಷಗಳು) ಬ್ರಹ್ಮಾಂಡ ಸೃಷ್ಟ್ಯಾದಿಯಿಂದ ಮಹಾ ಪ್ರಳಯದವರೆಗೆ ದ್ವಿತೀಯ ಪರಾರ್ಧ (ಇನ್ನುಳಿದ ೫೦ ವರ್ಷಗಳು)

ಬ್ರಹ್ಮ ದೇವರ ಈ ರೀತಿಯ ಸ್ತೋತ್ರವು ಅವರ ಅಧೀನರಾಗಿ ವರ್ತಿಸುವ ಹಿರಿಯ ದೇವತೆಗಳಿಗೂ, ಸೃಷ್ಟಿಯಲ್ಲಿ ಮುಂದೆ ಬರುವ ಸಾಧಕ ಜೀವರಿಗೂ ಎಚ್ಚರಿಕೆಯ ಮಾತಾಗಿರುವುದು.

ಈಗಿನವರು ಹೇಳುವಂತೆ, ಸೃಷ್ಟಿಯು ಆಕಸ್ಮಿಕವಲ್ಲ; ಅದು ಜೀವನ ಸಾರ್ಥಕ್ಯಕ್ಕೆ ಅನುವಾದುದು ಎಂಬ ತತ್ತ್ವವು ಇಲ್ಲಿ ವ್ಯಕ್ತವಾಗಿದೆ.

**ತಿರ್ಯಙ್ಮನುಷ್ಯ ವಿಬುಧಾದಿಷು ಜೀವ**
**ಯೋನಿಷ್ವಾತ್ಮೇಚ್ಛಯಾತ್ಮಕೃತಸೇತು ಪರೀಪ್ಸಯಾಯಃ ।**
**ರೇಮೇನಿರಸ್ತರತಿರಪ್ಯುಪಲಬ್ಧಕಾಷ್ಠಸ್ತಸ್ಮೈ ನಮೋ ಭಗವತೇ**
**ಪುರುಷೋತ್ತಮಾಯ ॥೧೯॥**

ಯಃ = ಯಾವ ನೀನು; ನಿರಸ್ತ ರತಿಃ ಅಪಿ = ಕುಂದದ, ನಿತ್ಯಾನಂದ ಮಯನಾದರೂ; ಉಪಲಬ್ಧ ಕಾಷ್ಠಃ ಅಪಿ = ಪರಿಪೂರ್ಣ ಕಾಮನಾದರೂ; ಆತ್ಮೇಚ್ಛಯಾ = ನಿನ್ನ ಕಾರುಣ್ಯಾನುಗುಣವಾದ ಇಚ್ಛೆಯಿಂದಲೇ; ಆತ್ಮಕೃತ ಸೇತು

ಪರೀಪ್ಸಯಾ = ಬಿಂಬ ಪ್ರತಿಬಿಂಬ ಭಾವ ಸಂಬಂಧವನ್ನು ರಕ್ಷಿಸುವುದಕ್ಕಾಗಿ; ತಿರ್ಯಕ್ ಮನುಷ್ಯ ವಿಬುಧಾದಿಷು ಜೀವಯೋನಿಷು = ಕೂರ್ಮವರಾಹಾದಿ ತಿರ್ಯಕ್ ಪ್ರಾಣಿಗಳಲ್ಲಿಯೂ ಮಾನವ ಯೋನಿ, ದೇವತಾ ಯೋನಿಗಳಲ್ಲಿಯೂ; ರೇಮೇ = ಜನಿಸಿ ನಿನ್ನ ಲೀಲಾತ್ಮಕ ಮಹದಾನಂದವನ್ನು ಮೆರೆದೆಯೋ; ತಸ್ಮೈಭಗವತೇ ಪುರುಷೋತ್ತಮಾಯ = ಅಂತಹ ಐಶ್ವರ್ಯಪೂರ್ಣನೂ ಪುರುಷೋತ್ತಮನೂ ಆದ ನಿನಗೆ; ನಮಃ = ನಮಸ್ಕಾರ.

ಸಾಧಕರು ಮುಕ್ತಿಯೋಗ್ಯ ಜೀವರೇ ಆದರೂ ಅವರು ಎಂಭತ್ನಾಲ್ಕು ಲಕ್ಷಯೋನಿಗಳಲ್ಲಿಯೂ ಅನೇಕಬಾರಿಜನ್ಮವನ್ನು ತಾಳಿ, ಕ್ರಮ ಕ್ರಮವಾಗಿ ಸುಸಂಸ್ಕೃತರಾಗಬೇಕು; ಭಗವಂತನ ಮಹಿಮೆಯನ್ನರಿತು ಜ್ಞಾನ–ಭಕ್ತಿ–ವೈರಾಗ್ಯ ಸಂಪನ್ನರಾಗಬೇಕು. ಅವರು ಯಾವುದೇ ಯೋನಿಯಲ್ಲಿ ಜನ್ಮವೆತ್ತಿದಾಗಲೂ, ಅವರ ಆಯಾದೇಹಗಳಲ್ಲಿಯೂ ಜೀವಸ್ವರೂಪಗಳಲ್ಲಿಯೂ ಬಿಂಬಪ್ರತಿಬಿಂಬ ಭಾವದಿಂದಾಡುವ ಪರಮಾತ್ಮನಿಗೆ ಹೀನಯೋನಿಗಳೆಂಬ ಕೀಳುಭಾವನೆಯಿಲ್ಲ; ಉತ್ತಮಯೋನಿಗಳೆಂಬ ಅಗ್ಗಳಿಕೆ ಇಲ್ಲ. ಈ ತತ್ವವನ್ನು ಭಗವಂತನ ಮತ್ಸ್ಯಾದಿ ಅವತಾರಗಳು ಸಾರಿಹೇಳುತ್ತಿರುವುವು.

ಯೋವಿದ್ಯಯಾನುಪಹತೋಽಪಿದಶಾರ್ಧ ವೃತ್ತ್ಯಾನಿದ್ರಾ ಮುವಾಹ
ಜಠರೀ ಕೃತಲೋಕಯಾತ್ರಃ ।
ಅಂತರ್ಜಲೇಽಹಿಕಶಿಪು ಸ್ಪರ್ಶಾನುಕೂಲಂ ಭೀಮೋರ್ಮಿಮಾಲಿನಿ
ಜನಸ್ಯಸುಖಂ ವಿವೃಣ್ವನ್ ॥೨೦॥

ಯಃ = ಯಾವ ನೀನು; ದಶಾರ್ಧವೃತ್ತ್ಯಾ ಅವಿದ್ಯಯಾ = ಪಂಚಪರ್ವಾತ್ಮಕ ಅವಿದ್ಯೆಯಿಂದ; ಅನುಪಹತಃ ಅಪಿ = ಭಾದಿಸಲ್ಪಡದವನಾಗಿದ್ದರೂ ಕೂಡ; ಜಠರೀ ಕೃತ ಲೋಕಯಾತ್ರಃ = ಲೋಕಗಳನ್ನೂ ಜೀವರನ್ನೂ ಹೊಟ್ಟೆಯಲ್ಲಿ ಅಡಗಿಸಿಟ್ಟುಕೊಂಡು; ಭೀಮೋರ್ಮಮಾಲಿನಿ = ಭಯಂಕರ ಅಲೆಗಳಿಂದ ವಿಜೃಂಭಿಸಿದ; ಅಂತರ್ಜಲೇ = ಬ್ರಹ್ಮಾಂಡದೊಳಗಿನ ಗರ್ಭೋದಕದಲ್ಲಿ; ಅಹಿಕಶಿ ಪುಸ್ಪರ್ಶಾನುಕೂಲಂ = ಶಯ್ಯಾರೂಪನಾದ ಶೇಷದೇವನಿಗೆ ಹಿತವಾಗುವಂತೆ; ಜನಸ್ಯ = ಜಠರಗತ ಜೀವರಿಗೆ; ಸುಖಂ ವಿವೃಣ್ವನ್ = ಮುದವನ್ನು ಕೂಡುತ್ತಾ; ನಿದ್ರಾಂ ಉವಾಹ = ನಿದ್ರೆಯನ್ನು ಸ್ವೀಕಾರಮಾಡಿದವನಾದಿ.

ಇದು ದ್ವಿತೀಯ ಪರಾರ್ಧದ ಪ್ರಾರಂಭದಲ್ಲಿ ಗರ್ಭೋದಕ ಶಾಯಿಯಾದ ಶ್ರೀಮನ್ನಾರಾಯಣನ ವರ್ಣನೆ. ಬ್ರಹ್ಮಾಂಡದೊಳಗೆ ಶೇಷದೇವರ ಜನನವಿನ್ನೂ

ಆಗದಿದ್ದರೂ, ನವಾವರಣಗಳ ಸೃಷ್ಟಿಯಾಗುವಾಗಲೇ ಎಲ್ಲಾ ದೇವತೆಗಳ ಜನನವೂ ಸೂಕ್ಷ್ಮ ಶರೀರಗಳಿಂದ ಆಗಿತ್ತು. ಆದುದರಿಂದ, ಗರ್ಭೋದಕದಲ್ಲಿ ಶೇಷರೂಪ ದಿಂದಿದ್ದುದು ಶ್ರೀ ದೇವಿಯೇ ಆದರೂ, ಅವರ ಅಧೀನವಾಗಿ ಶೇಷದೇವರೂ ಸೂಕ್ಷ್ಮಶರೀರದಿಂದ ಅಲ್ಲಿದ್ದರೆಂದು ಹೇಳಬೇಕು. ಇದು ಮಹಾಪ್ರಳಯದ ವಿಚಾರವಲ್ಲ. ಬ್ರಹ್ಮಾಂಡವನ್ನು ಸೃಷ್ಟಿಸಿ, ಭಗವಂತನು, ಬರಬೇಕಾದ ಸಕಲವನ್ನೂ ತನ್ನುದರದಲ್ಲಿಟ್ಟುಕೊಂಡು ಗರ್ಭೋದಕದಲ್ಲಿ ಜಲಶಾಯಿಯಾಗುವನು. ತನ್ನ ನಾಭೀ ಕಮಲದಿಂದ ಬ್ರಹ್ಮದೇವರನ್ನು ಸೃಷ್ಟಿಯಲ್ಲಿ ತರುವನು. ಲೋಕಗಳ ಬೀಜಾಂಶಗಳು ಬ್ರಹ್ಮದೇವರ ಪೀಠವಾದ ಕಮಲದ ಹದಿನಾಲ್ಕು ದಳಗಳಲ್ಲಿ ಅಡಗಿರುವುವು. ಸೃಷ್ಟಿಯಲ್ಲಿ ಬರಬೇಕಾದ ಜೀವರೆಲ್ಲಾ ಬ್ರಹ್ಮಾದೇವರ ಶರೀರದಲ್ಲಿ ಅಡಗಿರುವರು.

ಪರಬ್ರಹ್ಮನಾದ ಪರಮಾತ್ಮನು ಅವಿದ್ಯಾವಶನಾಗತಕ್ಕವನಲ್ಲ. ಮೋಹ, ಮಹಾಮೋಹ, ತಾಮಿಸ್ರ ಮಹಾತಾಮಿಸ್ರ ಮತ್ತು ಅಂಧ ತಾಮಿಸ್ರಗಳೆಂಬ ಅವಿದ್ಯಾಪಂಚಕವು ಅವನನ್ನು ಮುಸುಕಲಾರದು. ಆದುದರಿಂದ ನಿದ್ರೆಯೆಂಬುದು ಕೇವಲ ನಟನೆ; ಅದೂ, ತನ್ನದರದಲ್ಲಿರುವ ಜೀವರ ಸುಖಪ್ರಾಪ್ತಿಗಾಗಿ.

ಭಗವಂತನು ಅವಿದ್ಯಾದೂರನಾದುದರಿಂದ, ತನ್ನಲ್ಲಿ ಅವಿದ್ಯೆಯನ್ನು ಆರೋಪಿಸಿ ಕೊಂಡು ತಾನೇಜಗದ್ರೂಪನಾಗುವನೆಂದು ಹೇಳುವ ಮಾತು ಸರಿಯಲ್ಲ.

**ಯನ್ನಾಭಿಪದ್ಮಭವನಾದಹಮಾಸಮದ್ಯಲೋಕತ್ರಯೋಪಕರಣೋ**
**ಯದನುಗ್ರಹೇಣ ।**
**ತಸ್ಮೈನಮಸ್ತ ಉದರಸ್ಥ ಭವಾಯ ಯೋಗ**
**ನಿದ್ರಾವಸಾನವಿಕಸನ್ನಳಿನೇಕ್ಷಣಾಯ ॥೨೧॥**

ಲೋಕತ್ರಯೋಪಕರಣಃ = ಮೂರು (ಹದಿನಾಲ್ಕು) ಲೋಕಗಳ ಸೃಷ್ಟಿಗೆ ಬೇಕಾದ ಸಾಮಗ್ರಿಗಳ ಸಹಿತನಾಗಿ; ಅಹಂ = ನಾನು; ಅದ್ಯ = ಈಗ; ಯತ್ ನಾಭಿಕಮಲಾತ್ ಆಸಂ = ಯಾವ ನಿನ್ನ ನಾಭೀ ಕಮಲದಿಂದ ಉದ್ಭವಿಸಿದೆನೋ; ಉದರಸ್ಥಭವಾಯ = ಉದರದಲ್ಲಿ ಲಯಕರ್ತನೆನಿಸುವ ರುದ್ರದೇವನಿಗೆ ಆಶ್ರಯವಿತ್ತಿರುವ; ಯೋಗನಿದ್ರಾವಸಾನ ವಿಕಸತ್ ನಳೀನೇಕ್ಷಣಾಯ = ಯೋಗನಿದ್ರೆಯನ್ನು ಮುಗಿಸಿ, ತೆರೆದ ಕಮಲದಳಾಯತಾಕ್ಷನಾದ; ತಸ್ಮೈತೇ ಆ ನಿನಗೆ; ನಮಃ = ನಮಸ್ಕಾರವು.

'ಆ ನಿನಗೆ' ಎನ್ನುವುದರಿಂದ, ನಿತ್ಯನೂತನ ನಿರ್ವಿಕಾರನೂ, ಏಕ ಪ್ರಕಾರವಾಗಿ ಸೃಷ್ಟಿ ಸ್ಥಿತಿಲಯಗಳನ್ನು ನಡೆಸುವವನೂ ಆದ ವೇದಪ್ರಸಿದ್ಧನೆಂದು ಅರ್ಥವಾಗುವುದು.

ಮಗನಾದವನು ತಂದೆಗೆ ನಮಸ್ಕಾರ ಮಾಡಬೇಕೆಂಬ ನಿಯಮಾನುಸಾರ ಬ್ರಹ್ಮದೇವರು ಕೃತಜ್ಞತಾಪೂರ್ವಕವಾಗಿ ನಮಸ್ಕಾರ ಮಾಡಿರುವರು. ಲಯಕರ್ತರೆನಿಸುವ ರುದ್ರದೇವರು ಉದರದಲ್ಲಿ ಆಶ್ರಯ ಪಡೆದಿರುವರೆಂದು ಹೇಳಿರುವುದರಿಂದ, ಮುಖ್ಯ ಲಯಕರ್ತ ಶ್ರೀಹರಿಯೇ ಎಂಬುದು ಉಕ್ತವಾಗಿದೆ. ಭಗವಂತನು ಕಣ್ಮುಚ್ಚಿ ನಿದ್ರಿಸುವ ಆವಶ್ಯಕತೆ ಇಲ್ಲ. ಅವನು ಯಾವಾಗಲೂ ವಿಕಸಿತ ನಯನನೇ ಸರಿ. ಕಣ್ಮುಚ್ಚಿದಂತೆ ತೋರಿಕೊಳ್ಳುವುದು ಕೇವಲ ಅಸುರಜನ ಮೋಹನಾರ್ಥನಾಗಿ. ಯೋಗ ಎಂದರೆ, ಸಂಬಂಧ. ಆದುದರಿಂದ, ಯೋಗ ನಿದ್ರಾ ಎಂಬುದು ತನ್ನ ಉದರದಲ್ಲಡಗಿಸಿಟ್ಟು ಕೊಂಡಿರುವ ಜೀವರ ಸುಸ್ಥಿತಿಗಾಗಿಯೇ ಹೊರತು, ತನಗಾಗಿ ಅಲ್ಲ.

**ಸೋಽಯಂ ಸಮಸ್ತ ಜಗತಾಂ ಸುಹೃದೇಕ**
**ಆತ್ಮಾಸತ್ತ್ವೇನಯನ್ಮೃಡಯತೇ ಭಗವಾನ್ ಭಗೇನ ।**
**ತೇನೈವ ಮೇದೃಶಮನುಸ್ಪೃಶತಾದ್ಯಥಾಹಂ ಸ್ರಕ್ಷ್ಯಾಮಿ ಪೂರ್ವವದಿದಂ**
**ಪ್ರಣತಪ್ರಿಯೋಽಸೌ ॥೨೨॥**

ಸಃ ಅಯಂ = ಮುಖ್ಯಮೂಲನಾದ ಆ ನೀನು; ಜಗತಾಂ ಸುಹೃತ್ = ಲೋಕಮಿತ್ರನಾಗಿರುವಿ; ಏಕಃ ಆತ್ಮಾ= ಜೀವಾತ್ಮರಿಗೆಲ್ಲಾ ಏಕಾತ್ಮನಾಗಿರುವಿ; ಭಗವಾನ್ = ಸಕಲೈಶ್ವರ್ಯ ಸಂಪನ್ನನಾಗಿ; ಸತ್ತ್ವೇನ = ನಿನ್ನ ಇರುವಿಕೆಯಿಂದ; ಭಗೇನ = ಐಶ್ವರ್ಯದಿಂದ; ಯತ್ ಮೃಡಯತೇ = ಯಾವ ಜಗತ್ತುಗಳನ್ನು ರಕ್ಷಿಸುವೆಯೋ; ಪ್ರಣತ ಪ್ರಿಯಃ ಅಸೌ = ಭಕ್ತಿಯಿಂದ ನಮಿಸುವವರಿಗೆ ಪ್ರಿಯನಾದ ಆ ನೀನು; ಯಥಾಅಹಂ ಪೂರ್ವವತ್ ಇದಂ ಸ್ರಕ್ಷ್ಯಾಮಿ = ಹಿಂದಿನ ಕಲ್ಪದಲ್ಲಿ ಸೃಷ್ಟವಾದಂತೆ ಇಂದಿನ ಜಗತ್ತನ್ನು ನಾನು ಸೃಷ್ಟಿಸಲು ಸಮರ್ಥನಾಗುವಂತೆ; ತೇನೈವ = ಅದೇ ಕಾರುಣ್ಯ ದೃಷ್ಟಿಯಿಂದ; ಮೇ ಅನುಸ್ಪೃಶತಾತ್ = ನನ್ನ ವಿಷಯದಲ್ಲಿ ಅನುಗ್ರಹ ಮಾಡು, ಸ್ವಾಮಿ.

ಎಲ್ಲಾ ಜೀವರಂತೆ ಬ್ರಹ್ಮದೇವರೂ ಅಸ್ವತಂತ್ರರು ನಿಜ. "ನಾಹಂ ಕರ್ತಾ ಹರಿಃ ಕರ್ತಾ" ಎಂಬುದನ್ನು ಅವರು ಚೆನ್ನಾಗಿಯೇ ಬಲ್ಲರು. ಆದರೆ, ಜೀವರಂತೆ ಅವರು ಭ್ರಾಂತಿಯಿಂದ "ನಾನು" ಎನ್ನುವವರಲ್ಲ. ಜಗತ್ತಿನಲ್ಲೆಲ್ಲಾ ಸ್ವರೂಪದಿಂದಲೇ ವ್ಯಾಪ್ತರಾಗಿ ವ್ಯಾಪಾರಮಾಡುವ ಅವರು, ಸ್ವರೂಪಾವಯವಗಳಿಂದಲೇ ಕಾರ್ಯನಿರತರಾಗಿದ್ದು, ತಮ್ಮ ಸ್ವರೂಪಾವಯವಗಳಲ್ಲಿ ಭಗವಂತನ ಸ್ವರೂಪಾವಯವಗಳಿದ್ದು ಕಾರ್ಯನಿರ್ವಾಹಮಾಡುವುವು, 'ಅನುಗ್ರಹ ಮಾಡು' ಎಂದು ನುಡಿದು ನುಡಿಸುತ್ತಿರುವವನು ಸ್ವತಂತ್ರಾತ್ಮನೇ ಎಂಬುದನ್ನು ಗಮನದಲ್ಲಿಟ್ಟುಕೊಂಡೇ ಬಿನ್ನೈಸಿಕೊಳ್ಳುತ್ತಿದ್ದಾರೆ.

ಏಷ ಪ್ರಸನ್ನವರದೋ ರಮಯಾತ್ಮಶಕ್ತ್ಯಾಯದ್ಯತ್ಕರಿಷ್ಯತಿ
ಗೃಹೀತಗುಣಾವತಾರಃ ।
ತಸ್ಮಿನ್ಸ್ವವಿಕ್ರಮಮಿದಂ ಸೃಜತೋಽಪಿ ಚೇತೋಽಯುಂಜೀತ
ಕರ್ಮಶಮಲಂಚ ಯಥಾ ವಿಜಹ್ಯಾಂ ॥೨೩॥

ಏಷಃ ಪ್ರಪನ್ನ ವರದಃ = ಶರಣಾಗತರಿಗೆ ವರಪ್ರದನಾದ ಯಾವ ಈ ನೀನು; ರಮಯಾ ಆತ್ಮಶಕ್ತ್ಯಾ = ಪತ್ನೀಪ್ರಾಯಳಾದ ರಮಾದೇವಿಯ ಅಸ್ವತಂತ್ರ ಶಕ್ತಿಯಲ್ಲಿ ನಿನ್ನ ಸ್ವತಂತ್ರ ಶಕ್ತಿಯನ್ನು ಪ್ರವೇಶಗೊಳಿಸಿ; ಗೃಹೀತಗುಣಾವತಾರಃ = ತ್ರಿಗುಣಗಳಿಗೆ ಪರಿಣಾಮಗಳನ್ನುಂಟುಮಾಡುತ್ತಾ 'ನಿನ್ನ' ಸ್ವರೂಪಾಭಿನ್ನ ಕಲ್ಯಾಣಗುಣಗಳಿಂದ ಹಯಗ್ರೀವಾದಿ ರೂಪರೂಪಾಂತರಗಳನ್ನು ಪ್ರಕಟಿಸಿ; ಯದ್ಯತ್ ಕರಿಷ್ಯತಿ = ಯಾವ ಯಾವ ಬಗೆಯ ಸೃಷ್ಟಿಯನ್ನು ರಚಿಸುವೆಯೋ; ತಸ್ಮಿನ್ = ಆ ಸೃಷ್ಟಿಕಾರ್ಯದಲ್ಲಿ; ಸ್ವವಿಕ್ರಮಂ ಇದಂ ಸೃಜತಃ ಅಪಿ = ನನ್ನ ಅಸ್ವತಂತ್ರ ಕರ್ತೃತ್ವದಿಂದ ಈ ಸೃಷ್ಟಿಕಾರ್ಯದಲ್ಲಿ ನಿರತನಾಗಿರಲು; ಕರ್ಮಶಮಲಂ ಚ = ದುಷ್ಟ ದೈತ್ಯಾದಿಗಳಸೃಷ್ಟಿಯಿಂದ ಒದಗಬಹುದಾದ ಪಾಪಲೇಪವನ್ನು; ಯಥಾ ವಿಜಹ್ಯಾಂ = ನಾನು ಹೇಗೆ ದೂರೀಕರಿಸಬಲ್ಲೆನೋ ಹಾಗೆ; ಚೇತಃ ಯುಂಜೀತ = ನನ್ನ ಬುದ್ಧಿಯು ಜ್ಞಾನಪ್ರದನಾದ ನಿನ್ನನ್ನು ಆಶ್ರಯಿಸುವಂತಾಗಲಿ

ಅಸ್ವಾತಂತ್ರ್ಯ ಚಿಂತನೆಯಿಂದ ಹರಿಸ್ಮರಣೆ ಮಾಡುವುದೊಂದೇ ನಿಜವಾಗಿ ಪಾಪಪರಿಹಾರದ ಮಾರ್ಗ "ಏಷಃ" = "ಈ ನೀನು" ಎಂದು ಸಂಬೋಧಿಸುವುದು ಬಹಳ ಅರ್ಥಪೂರ್ಣವಾದುದು. ಜೀವ ಪರಮಾತ್ಮರ ಭೇದವನ್ನು ಇದು ಸ್ಪಷ್ಟವಾಗಿ ತಿಳಿಸುತ್ತಿರುವುದು.

ನಾಭಿಹ್ರದಾದಿಹ ಸತೋಽಂಭಸಿ ಯಸ್ಯಪುಂಸೋ ವಿಜ್ಞಾನ
ಶಕ್ತಿರಹಮಾಸಮನಂತ ಶಕ್ತೇಃ ।
ರೂಪಂ ವಿಚಿತ್ರಮಿದಮಸ್ಯ ವಿವೃಣ್ವತೋ ಮೇ ಮಾರೀರಿರೀಷ್ಟ
ನಿಗಮಸ್ಯಗಿರಾಂ ವಿಸರ್ಗಃ ॥೨೪॥

ಯಸ್ಯಪುಂಸಃ = ಯಾವ ಪುರಾಣ ಪುರುಷನ; ಅನಂತ ಶಕ್ತೇಃ = ಅಗಣಿತ ಶಕ್ತಿಯ ದೆಸೆಯಿಂದ; ವಿಜ್ಞಾನ ಶಕ್ತಿಃ = ದೈವೀ ಪ್ರಪಂಚದ ವಿಶೇಷ ಜ್ಞಾನವುಳ್ಳವನಾದ; ಅಹಂ = ನಾನು; ನಾಭಿಹ್ರದ ಅಂಭಸಿ ಇಹ = ನಾಭೀಸರೋವರದಿಂದ ಉತ್ಪನ್ನವಾದ ಈ ಕಮಲದಲ್ಲಿ; ಆಸಂ = ಜನ್ಮ ಪಡೆದಿರುವೆನೋ; ಅಸ್ಯ = ಈ ಪುರುಷನ; ಇದಂ ವಿಚಿತ್ರ ರೂಪಂ ವಿವೃಣ್ವತಃ = ಇಂತಹ ಅದ್ಭುತರೂಪವನ್ನು ವಿವರವಾಗಿ

ತಿಳಿಸುವಂತಹ; ಸತಃ = ಈ ಮಹಾನುಭಾವನಿಗೆ ಪ್ರತಿಮಾರೂಪವಾಗಿರುವ; ನಿಗಮಸ್ಯಗಿರಾಂ ವಿಸರ್ಗಃ = ವೇದವಾಣಿಯ ಸ್ಪಷ್ಟೋಕ್ತಿಯು; ಮೇ = ನನಗೆ; ಮಾರೀರಿರೀಷ್ಟ = ಮರೆಯದಿರಲಿ.

ಶ್ರೀಮಹಾವಿಷ್ಣುವೇ ಸ್ವತಂತ್ರನೆಂದೂ, ಸರ್ವೋತ್ತಮನೆಂದೂ ತಿಳಿಸುವ ಬಾಹ್ಯ ಪ್ರಮಾಣ ಪುಂಜವಾದವೇದೋಕ್ತಿಯು ಅಗತ್ಯವಾಗಿ ನೆನಪಿನಲ್ಲಿರಬೇಕೆಂದು ಇಲ್ಲಿ ಹೇಳಿದ್ದಾರೆ "ಅಖಿಲ ಅಮ್ನಾಯೈಕವೇದ್ಯೋ ಹರಿಃ" ಎಂಬ ವ್ಯಾಸಾರಯ ಶ್ರೀಗಳ ಉಕ್ತಿಯು ಇದಕ್ಕೆ ಅನುಗುಣವಾಗಿದೆ.

**ಸೋಸಾವದಭ್ರಕರುಣೋ ಭಗವನ್ವಿವೃದ್ಧ ಪ್ರೇಮಸ್ಮಿತೇನ**
**ನಯನಾಂಬುರುಹಂ ವಿಜೃಂಭನ್ ।**
**ಉತ್ಥಾಯ ವಿಶ್ವವಿಜಯಾಯ ಮನೋವಿಷಾದಂ ಮಾಧ್ವ್ಯಾ ಗಿರಾಽ**
**ಪನಯತಾತ್ಪುರುಷಃ ಪುರಾಣಃ ॥೨೫॥**

ಸಃ ಅಸೌ = ನನ್ನಿಂದ ಸ್ತುತ್ಯನಾದ ಈ; ಅದಭ್ರಕರುಣಃ = ಪೂರ್ಣಕರುಣಾ ಶಾಲಿಯಾದ; ಭಗವನ್ = ಪುರುಷೋತ್ತಮನು; ವಿವೃದ್ಧ ಪ್ರೇಮಸ್ಮಿತೇನ = ಪ್ರೇಮದಿಂದ ಉಕ್ಕಿಬರುವ ಮುಗುಳ್ನಗೆಯಿಂದ ಕೂಡಿ; ನಯನಾಂಬುರುಹಂ = ಕಮಲನೇತ್ರವನ್ನು; ವಿಜೃಂಭನ್ = ಪೂರ್ಣವಾಗಿ ತೆರೆದು; ಮಾಧ್ವ್ಯಾಗಿರಾ = ಮಧುರ ವಚನಗಳಿಂದ; ಮನೋವಿಷಾದಂ = ನನ್ನ ಮನಸ್ಸಿನ ಭಯವನ್ನು; ಅಪನಯತಾತ್ = ಕಳೆದು ಬಿಡಲಿ.

"ಹರಿಯ ಮತವೇ ಹನುಮನ ಮತವೋ" ಎಂದು ಪುರಂದರ ದಾಸರು ಹೇಳಿರುವ ಹಾಗೆ, ಬ್ರಹ್ಮಪದವಿಗೆಬಂದ ವಾಯುದೇವರ ಬಿಂಬಮೂರ್ತಿಯ ಸಂಕಲ್ಪವು ಅವರ ಮನಸ್ಸಿನಲ್ಲಿ ಸ್ವಚ್ಛವಾಗಿ ಮೂಡುವುದರಲ್ಲಿ ಸಂಶಯವಿಲ್ಲ. ಆದರೂ ಎದುರಿಗೆ ಆವಿರ್ಭವಿಸಿದ ಆ ಪ್ರಸನ್ನಮೂರ್ತಿಯ ಬಾಯಿಂದಲೇ ಆ ಸಂಕಲ್ಪವನ್ನು ಕೇಳುವುದು ಉಚಿತವೂ ಹೌದು; ಮನಸ್ಸಿನ ಆತಂಕನಿವಾರಕವೂ ಹೌದು.

ಬ್ರಹ್ಮ ದೇವರು ಭಯ ಹೊಂದಿರುವ ಸ್ವಭಾವದವರಲ್ಲ. ಆದರೂ, ಸ್ವತಂತ್ರನ ಮುಂದೆ ಅಸ್ವತಂತ್ರರು ತಗ್ಗಿ ಬಗ್ಗಿ ನಡೆಯಬೇಕಾದ ಅವಶ್ಯಕತೆಯನ್ನು ಅವರಿಲ್ಲಿ ತೋರಿದ್ದಾರೆ. ಭಗವಂತನ ದಿವ್ಯವಾಣಿಯನ್ನು ಕೇಳಿ ಹಿಗ್ಗುವ ಉತ್ಸಾಹವನ್ನು ನಾವಿಲ್ಲಿ ಕಾಣುತ್ತೇವೆ.

ಮೈತ್ರೇಯ ಉವಾಚಃ = ಮೈತ್ರೇಯರು ವಿದುರರನ್ನು ಕುರಿತು ನುಡಿದರು.

ಸ್ವಸಂಭವಂ ನಿಶಾಮ್ಯೈವಂ ತಪೋವಿದ್ಯಾಸಮಾದಿಭಿಃ ।
ಯಾವನ್ಮನೋವಚಸ್ತುತ್ವಾವಿರರಾಮ ಸಖಿನ್ನವತ್ ॥೨೬॥

ತಪೋವಿದ್ಯಾ ಸಮಾಧಿಭಿಃ = ಉತ್ತಮ ತಪಶ್ಚರ್ಯೆ, ಪರಿಶುದ್ಧ ಜ್ಞಾನ., ಏಕಾಂತ ಧ್ಯಾನ ಮೊದಲಾದಸಾಧನಗಳಿಂದ ಸುಪ್ರಸನ್ನನಾದ; ಸ್ವಸಂಭವಂ = ತಮ್ಮ ಜನಕನನ್ನು; ನಿಶಾಮ್ಯ = ಮನಸಾರ ದರ್ಶನ ಮಾಡಿ; ಯಾವನ್ಮನೋವಚಃ = ಮನಃ ಪೂರ್ತಿಯಾಗಿ, ವಾಕ್ ಶಕ್ತಿ ಇದ್ದಷ್ಟೂ; ಸ್ತುತ್ವಾ = ಸ್ತೋತ್ರಮಾಡಿ; ಖಿನ್ನವತ್ = ತೃಪ್ತಿ ಇಲ್ಲದವರಂತೆ; ಸಃ = ಬ್ರಹ್ಮದೇವರು; ವಿರರಾಮ = ಸುಮ್ಮನಾದರು.

ಭಗವಂತನ ಮಹಿಮೆಯನ್ನು ಹೆಚ್ಚು ಹೆಚ್ಚಾಗಿ ತಿಳಿದಷ್ಟೂ, ಬಾಯಿತುಂಬಾ ಹೊಗಳಿದಷ್ಟೂ, ಇನ್ನೂ ಹೆಚ್ಚಾಗಿ ತಿಳಿಯಬೇಕು, ಹೊಗಳಬೇಕು ಎಂಬ ಉತ್ಸಾಹ ಭಕ್ತಜನರಿಗೆ ಸಹಜ. ಇನ್ನು ಜೀವೋತ್ತಮರಾದ ಬ್ರಹ್ಮದೇವರನ್ನು ಕುರಿತು ಹೇಳಬೇಕಾದುದೇನಿದೆ!

ಅಥಾಭಿಪ್ರೇತಮಾಲಕ್ಷ್ಯ ಬ್ರಹ್ಮಣೋ ಮಧುಸೂದನಃ ।
ವಿಷಣ್ಣಚೇತಸಸ್ತೇನ ಕಲ್ಪವ್ಯತಿಕರಾಂಭಸಾ ॥೨೭॥

ಲೋಕಸಂಸ್ಥಾನ ವಿಜ್ಞಾನ ಆತ್ಮನಃ ಪರಿಖಿದ್ಯತಃ ।
ತಮಾಹಾಗಾಧಯಾ ವಾಚಾ ಕಶ್ಮಲಂ ಶಮಯನ್ನಿವ ॥೨೮॥

ಅಥ = ಆಗ; ತೇನ ಕಲ್ಪವ್ಯತಿಕರ ಅಂಭಸಾ = ತಾನೇ ತಾನಾಗಿ ಕಂಡುಬರುತ್ತಿದ್ದ ಪ್ರಳಯೋದಕದ ದೆಸೆಯಿಂದ; ವಿಷಣ್ಣ ಚೇತಸಃ = ಖಿನ್ನ ಮನಸ್ಕರಾಗಿದ್ದ; ಬ್ರಹ್ಮಣಃ = ಬ್ರಹ್ಮ ದೇವರ; ಅಭಿಪ್ರೇತಂ = ಮನೋಗತವನ್ನು; ಅಲಕ್ಷ್ಯ = ಗಮನಿಸಿ; ಮಧುಸೂದನಃ = ಶ್ರೀಹರಿಯು;

ಲೋಕಸಂಸ್ಥಾನ ವಿಜ್ಞಾನೇ = ಲೋಕಗಳ ವಿನ್ಯಾಸದ ವಿಶೇಷ ಜ್ಞಾನಕ್ಕಾಗಿ; ಪರಿಖಿದ್ಯತಃ ತಂ ಆತ್ಮನಃ = ಚಿಂತಿಸುತ್ತಿದ್ದ ಬ್ರಹ್ಮ ದೇವರನ್ನು ಕುರಿತು; ಕಶ್ಮಲಂ ಶಮಯನ್ ಇವ = ಮನಸ್ಸಿನ ಖಿನ್ನತೆಯು ಬಿಟ್ಟುಹೋಗುವ ಹಾಗೆ; ಅಗಾಧಯಾವಾಚಾ = ಗಂಭೀರ ವಾಣಿಯಿಂದ; ಆಪ = ಹೇಳಿದನು.

ಬ್ರಹ್ಮ ಪದವಿಗೆ ಬಂದ ವಾಯುದೇವರು ಹಿಂದಿನ ಬ್ರಹ್ಮಕಲ್ಪದಲ್ಲಿ ಸೃಷ್ಟಿಯ ಕಾರ್ಯದಲ್ಲಿ ಭಾಗವಹಿಸಿದವರೇ ನಿಜ. ಆದರೆ, ಸ್ವತಂತ್ರನಾದ ಭಗವಂತನ ಸಂಕಲ್ಪವನ್ನು ಮತ್ತೆ ಕೇಳಿ ತಿಳಿಯದೆ ಸೃಷ್ಟಿ ಕಾರ್ಯದಲ್ಲಿ ಪ್ರವೃತ್ತರಾಗುವುದು ಅವಿನಯವಾದೀತೆಂಬ ಶಂಕೆಯಿಂದ ಖಿನ್ನತೆಯನ್ನು ತೋರ್ಪಡಿಸಿದರೇ ಹೊರತು,

ಅಜ್ಞಾನದಿಂದಾಗಲೀ ಅನಾವಶ್ಯಕ ಭಯದಿಂದಲಾಗಲೀ ಅಲ್ಲ. ಭಗವಂತನ ಆಶ್ವಾಸನೆಯ ಗಂಭೀರ ವಾಣಿಯಿಂದ ಆ ಖಿನ್ನತೆಯು ತೊಲಗುವಂತಾಯಿತು.

ಶ್ರೀಭಗವಾನುವಾಚಃ = ಭಗವಂತನು ನುಡಿದನು.

**ಮಾ ವೇದಗರ್ಭಗಾಸ್ತಂದ್ರೀಂ ಸರ್ಗ ಉದ್ಯಮಮಾವಹ ।**
**ತನ್ಮಯಾ ಚೋದಿತಂಹ್ಯಗ್ರೇ ಯನ್ಮಾಂ ಪ್ರಾರ್ಥಯತೇಭವಾನ್ ॥೨೯॥**

ವೇದಗರ್ಭ = ವೇದ ಸ್ವರೂಪನಾದ ನನ್ನಿಂದ ಜನಿಸಿ, ವೇದಾರ್ಥಗಳನ್ನು ಗರ್ಭದಲ್ಲಿ ಅಡಗಿಸಿಟ್ಟುಕೊಂಡಿರುವ ಬ್ರಹ್ಮಾ, ತಂದ್ರೀಮ್ ಅಗಾಃ = ಆಲಸ್ಯ ಮಾಡಬೇಡ; ಸರ್ಗ ಉದ್ಯಮಂ ಆವಹ = ಸೃಷ್ಟಿಯ ಕಾರ್ಯವನ್ನು ಪ್ರಾರಂಭಿಸು; ಯತ್ = ಯಾವುದನ್ನು ಕುರಿತು; ಭವಾನ್ = ನೀನು; ಮಾಂ ಪ್ರಾರ್ಥಯತೇ = ನನ್ನನ್ನು ಪ್ರಾರ್ಥಿಸುತ್ತಿರುವೇಯೋ; ತತ್ = ಅದು ; ಮಯಾ = ನನ್ನಿಂದ; ಅಗ್ರೇಹಿ ಈ ಮೊದಲೇ ಚೋದಿತಃ = ಪ್ರೇರಿಸಲ್ಪಟ್ಟಿತ್ತಲ್ಲವೇ!

"ತಪ" (ತಪಸ್ಸು ಮಾಡು) ಎಂದು ಒಳಗೆ ನಿಂತು ಮೊದಲು ಪ್ರೇರಿಸಿದವನು ಭಗವಂತನೇ ಎಂದು ಹೇಳಿದುದರಿಂದ, ಪ್ರೇರಣೆ, ಕಾರ್ಯ, ಎಲ್ಲವೂ ಸ್ವತಂತ್ರನಾದ ಆ ಭಗವಂತನದೇ ಎಂದ ಹಾಗಾಯಿತು; ಕಾರ್ಯಾರಂಭಕ್ಕೆ ಅಪ್ಪಣೆ ದೊರೆತ ಹಾಗಾಯಿತು ಎಂಬುದು ಅಭಿಪ್ರಾಯ. ಮಾಡಬೇಕಾದ ಕೆಲಸದ ವಿಚಾರ ತಿಳಿದಿದ್ದರೂ ಮತ್ತೊಮ್ಮೆ ಯಜಮಾನನ ಅನುಮತಿ ಪಡೆದು ಕಾರ್ಯಾರಂಭ ಮಾಡಬೇಕೆಂಬ ನೀತಿಯನ್ನು ತೋರಿದ ಬ್ರಹ್ಮದೇವರಿಗೆ ಆ ಅನುಮತಿ ದೊರೆತ ಹಾಗಾಯಿತು.

**ಭೂಯಶ್ಚ ತಪ ಆತಿಷ್ಠ ವಿದ್ಯಾಂಚೈವ ಮದಾಶ್ರಯಾಂ ।**
**ತಾಭ್ಯಾಮಂತರ್ಹೃದಿ ಬ್ರಹ್ಮನ್ ಲೋಕಾನ್ದ್ರಕ್ಷ್ಯಸ್ಯಪಾವೃತಾನ್ ॥೩೦॥**

ಭೂಯಃ = ಇನ್ನೊಮ್ಮೆ; ತಪಃ = ಆಲೋಚನಾ ರೂಪವಾದ ತಪಸ್ಸನ್ನೂ; ಮದಾಶ್ರಯಾಂ = ನನ್ನನ್ನು ಆಶ್ರಯಿಸುವಂತಹ; ವಿದ್ಯಾಂಚ ಏವ = ನಿಷ್ಠಾರೂಪವಾದ ವಿದ್ಯೆಯನ್ನೂ; ಆತಿಷ್ಠ = ಅಭ್ಯಾಸಕ್ಕೆ ತಂದುಕೋ; ಬ್ರಹ್ಮನ್ = ಬ್ರಹ್ಮಾ; ತಾಭ್ಯಾಂ= ಆ ಎರಡರಿಂದ; ಅಂತರ್ಹೃದಿ = ನಿನ್ನ ಮನಸ್ಸಿನೊಳಗೇ; ಅಪಾವೃತಾನ್ = ತೆರೆದು ಕಾಣುವ; ಲೋಕಾನ್ = ಲೋಕಗಳನ್ನು; ದ್ರಕ್ಷ್ಯಸಿ = ಕಾಣುವಿ.

ನಿಷ್ಠೆಯ ತಪಸ್ಸು ಎಂಬುದು, ಸಾತ್ವಿಕ "ನಾನು" ಎಂಬುದನ್ನು ಮೀರಿದ ಸ್ವರೂಪ "ನಾನು" ಎಂಬುದರ ಅರಿವಿಗೆ ಕಾರಣವಾದುದು. ಅಲ್ಲಿ ಭೌತಿಕ ಅಹಂಕಾರಕ್ಕೆ ಎಡೆಯಿಲ್ಲವಾದುದರಿಂದ, ಆಗ ಜೀವಸ್ವರೂಪದಲ್ಲಿ ಆಸ್ವರೂಪದಂತೆಯೇ ವರ್ತಿಸುವ

ಬಿಂಬರೂಪೀ ಅಂತರಾತ್ಮನ ದರ್ಶನವಾಗುವುದು. ಅವನೇ ತಿಳಿದು ತಿಳಿಸುವನು, ನೋಡಿ ನೋಡಿಸುವನು, ಮಾಡಿ ಮಾಡಿಸುವನು ಎಂಬುದು ಸ್ಪಷ್ಟವಾಗಿ ತಿಳಿದುಬರುವುದು. ಮನಸ್ಸಿನ ಯಾವಶಂಕೆಗೂ ಅವಕಾಶವಿರುವುದಿಲ್ಲ.

ತತ ಆತ್ಮನಿ ಯೋಗೇನ ಭಕ್ತಿಯುಕ್ತಃ ಸಮಾಹಿತಃ ।
ದ್ರಷ್ಟಾಸಿ ಮಾಂತತಂ ಬ್ರಹ್ಮನ್ .ಮಯಿ ಲೋಕಾಂಸ್ತ್ವಮಾತ್ಮನಿ ॥೩೧॥

ಬ್ರಹ್ಮನ್ = ಬ್ರಹ್ಮಾ; ತತಃ = ಅನಂತರ; ತ್ವಂ = ನೀನು; ಯೋಗೇನ= ನನ್ನಲ್ಲಿ ಸುಭದ್ರವಾದ ಸಂಬಂಧವನ್ನು ಕಲ್ಪಸಿಕೊಳ್ಳುವ ಯೋಗದಿಂದ; ಭಕ್ತಿ ಯುಕ್ತಃ = ದೃಢಭಕ್ತಿಯುಳ್ಳವನಾಗಿ; ಸಮಾಹಿತಃ = ಅಚಲಮನಸ್ಸಿನಿಂದ; ಆತ್ಮನಿ = ನಿನ್ನ ಹೃದಯ ಮಂದಿರದಲ್ಲಿ; ತತಂ = ವ್ಯಾಪ್ತನಾಗಿ ಹೊಂದಿರುವ; ಮಾಂದ್ರಷ್ಟಾ ಅಸಿ = ನನ್ನನ್ನು ಕಾಣುವಿ; ಆತ್ಮನಿ ಮಯಿ = ಅಂತರಾತ್ಮನಾದ ನನ್ನಲ್ಲಿ; ಲೋಕಾನ್= ಲೋಕಗಳ ವಿನ್ಯಾಸವನ್ನು; ದ್ರಷ್ಟಾ ಅಸಿ = ನೋಡಬಲ್ಲವನಾಗುವಿ.

ಭಗವಂತನೇ ಜೀವರ ಹೃದಯಗಳಲ್ಲಿ ಅಂತರಾತ್ಮನಾಗಿದ್ದು ಎಲ್ಲವನ್ನೂ ನೋಡಿ ನೋಡಿಸುವ, ಮಾಡಿ ಮಾಡಿಸುವ ಎಂಬ ತತ್ವವು ಇಲ್ಲಿ ತಿಳಿದುಬರುತ್ತದೆ.

ಯದಾತು ಸರ್ವ ಭೂತೇಷು ದಾರುಷ್ವಗ್ನಿಮಿವಸ್ಥಿತಂ ।
ಪ್ರತಿಚಕ್ಷೀತ ಮಾಂ ಲೋಕೋಜಹ್ಯಾತ್ತರ್ಹ್ಯೇವ ಕಶ್ಮಲಂ ॥೩೨॥

ಲೋಕಃ = ಯೋಗ್ಯಜನರು; ಸರ್ವ ಭೂತೇಷು = ಸಕಲ ಜೀವರ ಹೃದಯಗಳಲ್ಲಿಯೂ; ದಾರುಷು = ಕಾಷ್ಠಗಳಲ್ಲಿ ; ಅಗ್ನಿಮಿವ ಸ್ಥಿತಂ = ಬೆಂಕಿಯಂತೆ ನಿರ್ಲಿಪ್ತನಾಗಿ ಅಡಗಿರುವ; ಮಾಂ = ನನ್ನನ್ನು; ಯದಾತು = ಯಾವಾಗಲಾದರೆ; ಪ್ರತಿಚಕ್ಷೀತ = ಸ್ಪಷ್ಟವಾಗಿ ನೋಡಬಲ್ಲರೋ; ತರ್ಹಿಏವ = ಆಗ ಮಾತ್ರವೇ; ಕಶ್ಮಲಂ ಜಹ್ಯಾತ್ = ಜಡಸಂಬಂಧವಾದ "ನಾನು" ನೀಗಿಕೊಂಡು ಜೀವಾತ್ಮ ಪರಮಾತ್ಮ ಭೇದವನ್ನು ಕಂಡು ಧನ್ಯರಾಗಬಲ್ಲರು. ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಜಡ "ನಾನು" ಹೋಗಿ, ಸ್ವರೂಪ "ನಾನು" ಮಾತ್ರ ಉಳಿದಾಗ, ಬಿಂಬನಾದ ಶ್ರೀಹರಿಯು, ಜೀವನು ತನ್ನನ್ನೂ ತನ್ನ ಬಿಂಬನನ್ನೂ ಕಾಣುವಂತೆ ಅನುಗ್ರಹಿಸುತ್ತಾನೆ.

ಯದಾರಹಿತಮಾತ್ಮಾನಂ ಭೂತೇಂದ್ರಿಯಗುಣಾಶಯೈಃ ।
ಸ್ವರೂಪೇಣಮಯೋಪೇತಂ ಪಶ್ಯನ್ಸ್ವಾರಾಜ್ಯಮೃಚ್ಛತಿ ॥೩೩॥

ಭೂತೇಂದ್ರಿಯ ಗುಣಾಶಯೈಃ = ಪಾಂಚಭೌತಿಕ ಇಂದ್ರಿಯಗಳು ಮತ್ತು ಅವುಗಳ ಗುಣಪರಿಣಾಮಗಳಿಂದ; ರಹಿತಂ = ಮುಕ್ತನಾಗಿರುವ; ಸ್ವರೂಪೇಣ ಮಯಾ ಉಪೇತಂ

= ಸ್ವಸ್ವರೂಪದಲ್ಲಿ ಸ್ವಸ್ವರೂಪಾನುಗುಣವಾಗಿ ಪ್ರತಿಬಿಂಬಭಾವವನ್ನು ಮೂಡಿಸುತ್ತಾ ಜ್ಞಾನಾನಂದ ರೂಪದಿಂದಲೇ ಇರುವ ನನ್ನನ್ನು; ಯದಾ = ಯಾವ ಪಕ್ವ ಕಾಲದಲ್ಲಿ; ಪಶ್ಯನ್ = ನೋಡಬಲ್ಲವನಾಗುವನೋ ಆಗ; ಸ್ವರಾಜ್ಯಂ ಋಚ್ಛತಿ = ಜೀವನಾದನಾವನು ತನ್ನ ಸ್ವರೂಪವನ್ನೂ ಕಾಣುತ್ತಾ, ತಾನು ತನ್ನ ಬಿಂಬನ ಸೇವಕನೆಂಬುದರ ಅನುಭವವನ್ನು ಪಡೆಯುತ್ತಾನೆ; ಅಂದರೆ, ತನ್ನ ಸ್ವರೂಪಾನಂದದಲ್ಲಿ ಮಗ್ನನಾಗುತ್ತಾನೆ.

ಜಡಸಂಬಂಧಪೂರ್ತಿಯಾಗಿ ಬಿಟ್ಟುಹೋದಾಗ, ಕೇವಲ ಸ್ವಸ್ವರೂಪದಿಂದ ಜೀವ ಉಳಿದಿರುತ್ತಾನೆ. ಭೌತಿಕ "ಅಹಂ" ಪೂರ್ಣವಾಗಿ ಬಿಟ್ಟುಹೋಗಿರುತ್ತದೆ. ಸ್ವರೂಪ ಜೀವ, "ನಾನು" ಎಂದಾಗ, ತನ್ನ ಸ್ವಾಮಿಯಾದ ಪರಮಾತ್ಮ ಜೀವನ ಬಿಂಬನಾಗಿ "ನಾನು" ಎಂದು, ಜೀವನಿಂದ "ನಾನು" ಎನಿಸುತ್ತಿರುವುದು ಅನುಭವಕ್ಕೆ ಬರುತ್ತದೆ. ಆಗಾಗ ಇಂತಹ ಅನುಭವವು ಇಹದಲ್ಲಿಯೇ ಕಂಡುಬಂದರೂ, ಅದು ಪೂರ್ಣವಾಗಿ ಅನುಭವಕ್ಕೆಬರುವುದು ಮುಕ್ತಿ ದೆಸೆಯಲ್ಲಿ.

ಬ್ರಹ್ಮ ವಾಯುಗಳಿಗೆ ಇಂತಹ ಅನುಭವ ಸದಾ ಇರುವುದರಿಂದ ಶ್ರೀ ಹರಿಯ ಸಂಕಲ್ಪವನ್ನು ಅವರು ನೇರವಾಗಿ ತಿಳಿಯಬಲ್ಲರು.

**ನಾನಾ ಕರ್ಮವಿಪಾಕೇನ ಪ್ರಜಾಬಹ್ವೀಃ ಸಿಸೃಕ್ಷತಃ ।**
**ನಾತ್ಮಾವಸೀದತ್ಯಸ್ಮಿಂಸ್ತೇ ವರ್ಷೀಯಾನ್ ಮದನುಗ್ರಹಃ ॥೩೪॥**

ನಾನಾ ಕರ್ಮವಿಪಾಕೇನ = ಫಲೋನ್ಮುಖಗಳಾದ ನಾನಾ ಕರ್ಮಗಳಿಗೆ ಅನುಗುಣವಾಗಿ; ಬಹ್ವೀಃ = ಅಸಂಖ್ಯಾತಜೀವರನ್ನು; ಸಿಸೃಕ್ಷತಃ = ದೇಹಗಳನ್ನು ಕೊಟ್ಟು ಸೃಷ್ಟಿಮಾಡುವ; ತೇ = ನಿನ್ನ; ಆತ್ಮಾ = ಮನಸ್ಸು; ಅಸ್ಮಿನ್= ಈ ಸೃಷ್ಟಿ ಕಾರ್ಯದಲ್ಲಿ; ನಾವಸೀದತಿ = ಕಳೆಗುಂದುವುದಿಲ್ಲ; ಮದನುಗ್ರಹಃ = ನನ್ನ ಅನುಗ್ರಹವು; ವರ್ಷೀಯಾನ್ = ಚಿರಕಾಲ ಪರಿಣಾಮ ಬೀರುವಂತಹುದು ಮತ್ತು ಅತಿ ಹೆಚ್ಚಾಗಿರುವಂತಹುದು.

ಬ್ರಹ್ಮದೇವರ ಕೆಲಸ ಲೋಕಗಳನ್ನು ಸೃಷ್ಟಿ ಮಾಡುವುದಷ್ಟೇ ಅಲ್ಲ. ತಾವು ಪದವಿಯಲ್ಲಿರುವವರೆಗೂ, ದ್ವಿತೀಯಪರಾರ್ಧದ ತಮ್ಮ ಆಯುರ್ಮಾನದ ೩೬೦೦೦ ವರ್ಷಗಳಷ್ಟು ಕಾಲ, ತಮ್ಮ ಪ್ರತಿಹಗಲಿನಲ್ಲಿಯೂ ಅಸಂಖ್ಯಾತ ಜೀವರ ವಿವಿಧ ಕರ್ಮಗಳನ್ನನುಸರಿಸಿ, ಅವರವರಿಗೆ ವಿವಿಧ ಜನ್ಮಗಳಲ್ಲಿ ಸಾಧನೆಗೆ ಅನುಕೂಲವಾದ ದೇಹಗಳನ್ನು ಸೃಷ್ಟಿ ಮಾಡಿಕೊಡಬೇಕು. ಇತರರ ತಲೆಕೆಡಿಸುವಂತಹ ಈ ಕಾರ್ಯವನ್ನು ಭಗವಂತನ ಪ್ರಸಾದದಿಂದ ಬ್ರಹ್ಮದೇವರು ಕಿಂಚಿತ್ತು ಬೇಸರವಿಲ್ಲದೆ ಸುಗಮವಾಗಿ

ಮಾಡಬಲ್ಲರು. "ಜೀವರ ಹಣೆಬರಹ" ಎಂಬ ಮಾತಿನ ಅರ್ಥ ಮೇಲಿನ ವಿವರಣೆಯಲ್ಲಿ ಅಡಕವಾಗಿದೆ.

**ಋಷಿಮಾದ್ಯಂ ನಬಧ್ನಾತಿ ಪಾಪೀಯಾಂ ಸ್ತ್ವಂ ರಜೋಗುಣಃ ।**
**ಯನ್ಮನೋಮಯಿ ನಿರ್ಬದ್ಧಂ ಪ್ರಜಾಃ ಸಂಸೃಜತೋಪಿತೇ ॥೩೫॥**

ಯತ್ ಮನಃ ಮಯಿ ನಿರ್ಬದ್ಧಂ = ನಿನ್ನ ಮನಸ್ಸು ನನ್ನಲ್ಲಿಯೇ ಸುಭದ್ರವಾಗಿ ನೆಲೆಸಿರುವುದರಿಂದ; ಪ್ರಜಾಃ = ವಿವಿಧ ಪ್ರಜೆಗಳನ್ನು; ಸೃಜತಃ ಅಪಿ = ಸೃಷ್ಟಿಮಾಡುತ್ತಿದ್ದರೂ; ಆದ್ಯಂ ಋಷಿಂ ತ್ವಾಂ = ತಪಸ್ವಿಗಳಿಗೆಲ್ಲ ಮಾದರಿಯಾದ ನಿನ್ನನ್ನು; ಪಾಪಿಯಾನ್ ರಜೋಗುಣಃ = ಪಾಪಕಾರ್ಯಗಳಿಗೆ ನೆರವಾಗುವ ರಜೋಗುಣತಮೋಗುಣಗಳು; ನಬಧ್ನಾತಿ = ಬಂಧಿಸುವುದಿಲ್ಲ.

ಪರಮಾತ್ಮನಿಂದಲೇ ತಪಸ್ಸಿನಲ್ಲಿ ಪ್ರೇರಿತರಾದ ಬ್ರಹ್ಮದೇವರು, ಜೀವೋತ್ತಮರೂ ಆದುದರಿಂದ, ಅವರು ಸೃಷ್ಟಿಯಲ್ಲಿ ಬರಲಿರುವ ಋಷಿಗಳಿಗೆಲ್ಲಾ ಮಾದರಿಯಾದವರು. ರಜೋಗುಣ ಎಂಬುದರಿಂದ, ತಮೋಗುಣವನ್ನೂ ಗಣನೆಗೆ ತೆಗೆದುಕೊಳ್ಳಬೇಕು. ದುಷ್ಟ ಜೀವರನ್ನೂ ಸೃಷ್ಟಿಯಲ್ಲಿ ತರಬೇಕೆಂಬುದು ಭಗವತ್ಸಂಕಲ್ಪವೆಂಬುದನ್ನರಿತು, ಸೃಷ್ಟಿಕಾರ್ಯವು ತಮ್ಮ ಅಂತರ್ಯಾಮಿಯಿಂದಲೇ ತಮ್ಮ ಮುಖಾಂತರ ನಡೆಯುವುದೆಂದು ತಿಳಿಯುವ ಮನಸ್ಸುಳ್ಳ ಬ್ರಹ್ಮದೇವರನ್ನು ಪಾಪಿಗಳನ್ನು ಸೃಷ್ಟಿಸಿದ ಪಾಪಕಾರ್ಯವು ಬಾಧಿಸುವುದಿಲ್ಲ.

**ಜ್ಞಾತೋಹಂ ಭವತಾತ್ವದ್ಯ ದುರ್ವಿಜ್ಞೇಯೋಪಿ ದೇಹಿನಾಂ ।**
**ಯನ್ಮಾಂತ್ವಂ ಮನ್ಯಸೇ ಯುಕ್ತಂ ಭೂತೇಂದ್ರಿಯ ಗುಣಾತ್ಮಭಿಃ ॥೩೬॥**

ಅಹಂ = ನಾನು; ದೇಹಿನಾಂ = ಪುರುಷರಿಗೆ, ದುರ್ವಿಜ್ಞೇಯಃ ಅಪಿ= ಸಾಮಾನ್ಯವಾಗಿ ತಿಳಿಯಲಸಾಧ್ಯನಾದರೂ; ಮಾಂ = ನನ್ನನ್ನು; ಭೂತೇಂದ್ರಿಯ ಗುಣಾತ್ಮಭಿಃ ಯುಕ್ತಂ = ಭೌತ ವಸ್ತುಗಳಲ್ಲಿಯೂ, ಇಂದ್ರಿಯಗಳಲ್ಲಿಯೂ ವಸ್ತುಗಳ ಗುಣಗಳಲ್ಲಿಯೂ ನಿಯಾಮಕನಾಗಿ ಕೂಡಿಕೊಂಡಿರುವೆನೆಂದು; ಯತ್ತ್ವಂ ಮನ್ಯಸೇ = ನೀನು ಯಥಾರ್ಥವಾಗಿ ತಿಳಿದಿರುವುದರಿಂದ; ಅದ್ಯ ಭವತಾಜ್ಞಾತಃ ತು = ತಪಸ್ಸಿದ್ಧನಾದ ನಿನ್ನಿಂದ ಈಗ ಚೆನ್ನಾಗಿ ತಿಳಿಯಲ್ಪಟ್ಟವನಾಗಿದ್ದೇನೆ.

ಭಗವಂತನು ಭೌತಗುಣೇಂದ್ರಿಯಗಳ ರೂಪನೇ ಆಗಿರುವನೆಂದು ತಿಳಿಯುವುದು ಅಜ್ಞಾನ. ಆ ಸ್ವತಂತ್ರ ಪುರುಷನು ಅವುಗಳ ಸ್ಥಿತಿಗಾಗಿ ಅವುಗಳಲ್ಲಿ ಪ್ರವಿಷ್ಟನಾಗಿದ್ದರೂ ನಿರ್ಲಿಪ್ತನಾಗಿರುವನೆಂದು ತಿಳಿಯುವುದು ಯಥಾರ್ಥಜ್ಞಾನ. ಹಾಗೆ ತಿಳಿಯುವುದೇ ನಿಜವಾದ ಬ್ರಹ್ಮಜ್ಞಾನ.

ತ್ರಿವಿಧ ಜೀವರ ಸಾಧನೆಗಳನ್ನು ಅವರವರಿಗೆ ತಕ್ಕಂತೆ ಮಾಡಿಸುವುದಕ್ಕಾಗಿ, ತ್ರಿಗುಣಾತ್ಮಕವಾದ ಪ್ರಪಂಚವನ್ನುಸೃಷ್ಟಿಸಿ ಅದರಲ್ಲಿ ತಾನು ಪ್ರವಿಷ್ಟನಾಗಿ ಭಗವಂತನು ಕ್ರಿಯೆಗಳನ್ನು ನಡೆಸುವುದು, ತನಗಾಗಿ ಅಲ್ಲ; ಜೀವರಿಗಾಗಿ. ಆದುದರಿಂದ ಅವರು ಫಲಭೋಕ್ತಾರರು; ಅವನು ನಿರ್ಲಿಪ್ತ.

**ತುಭ್ಯಂ ಮದ್ವಿಚಿಕಿತ್ಸಾಯಾಮಾತ್ಮಾಮೇದರ್ಶಿತೋ ಬಹಿಃ ।**
**ನಾಲೇನ ಸಲಿಲೇ ಮೂಲಂ ಪುಷ್ಕರಸ್ಯ ವಿಚಿನ್ವತಃ ॥೩೭॥**

ಪುಷ್ಕರಸ್ಯನಾಲೇನ = ಕಮಲದ ದಂಟಿನ ಮುಖಾಂತರ ಇಳಿದು; ಸಲಿಲೇ = ಪ್ರಲಯಗರ್ಭೋದಕದಲ್ಲಿ; ಮತ್ ವಿಚಿಕಿತ್ಸಾಯಾಂ = ನಿನ್ನ ಜನನಕ್ಕೆ ಕಾರಣನಾದ ನನ್ನ ವಿಷಯವನ್ನು ಕುರಿತು ಚಿಂತಿಸುತ್ತಾ; ವಿಚಿನ್ವತಃ = ಹುಡುಕುತ್ತಿದ್ದ; ತುಭ್ಯಂ = ನಿನಗೆ; ಮೇ ಆತ್ಮಾ = ನನ್ನ ಜ್ಞಾನಾನಂದಾತ್ಮಕ ರೂಪವು; ಬಹಿಃ = ಹೊರಗಡೆಯೇ; ದರ್ಶಿತಃ ತೋರಿಸಲ್ಪಟ್ಟಿತಲ್ಲವೇ!

ಭಗವಂತನು ಬ್ರಹ್ಮದೇವರ ಅಂತರಂಗದಲ್ಲಿ ಮಾತ್ರವಲ್ಲದೆ ಹೊರಗಡೆಯೂ ತನ್ನ ನಿಜರೂಪದಿಂದ ಇರುವುದನ್ನು ತೋರಿಸಿದುದರಿಂದ, ಅವನು ಜೀವರಿಂದಲೂ, ಜಡಗಳಿಂದಲೂ ಭಿನ್ನನೆಂಬುದನ್ನು ತಿಳಿಸಿದ ಹಾಗಾಯಿತು.

**ಯಚ್ಚಕರ್ಥಮಮ ಸ್ತೋತ್ರಂ ಮತ್ಕಥಾಭ್ಯುದಯಾಂಕಿತಂ ।**
**ಯದ್ವಾತಪಸಿ ನಿಷ್ಠಾಚ ಸ ಏವ ಮದನುಗ್ರಹಃ ॥೩೮॥**

ಮತ್ ಕಥಾ ಅಭ್ಯುದಯಾಂಕಿತಂ = ನನ್ನ ಮಹಿಮಾದ್ಯೋತಕವಾದ; ಮಮಸ್ತೋತ್ರಂ ಯತ್ = ಯಾವ ನನ್ನಸ್ತೋತ್ರವನ್ನು; ಚಕರ್ಥ = ಮಾಡಿದೆಯೋ; ವಾ = ಅಲ್ಲದೆ; ಯತ್ ಚ ನಿಷ್ಠಾ ತಪಸಿ = ತಪಸ್ಸಿನಲ್ಲಿ ತೋರಿದ ಶ್ರದ್ಧೆಯು ಯಾವುದೋ ·ಅದು; ಮತ್ ಅನುಗ್ರಹಃ ಏವ = ನನ್ನ ಅನುಗ್ರಹದಿಂದಲೇ ಸಂಪಾದಿತವಾದುದು.

ಭಗವಂತನು ಹೊರಗೆ ಕಂಡು ತನ್ನ ವಿಶ್ವವ್ಯಾಪಕತೆಯನ್ನು ತಿಳಿಸುವಂತೆ ಜೀವರ ಸ್ವರೂಪಗಳಲ್ಲಿಯೂ ಇದ್ದು ಪ್ರೇರಕನಾಗಿರುವುದನ್ನು ತಿಳಿಸಿದಾಗಲೇ ಜ್ಞಾನವು ಪರಿಪೂರ್ಣವಾಗುವುದು. ಜೀವರು ಏನೇನು ಮಾಡುವರೋ ಅದನ್ನೆಲ್ಲಾ ಅಂತರಾತ್ಮನಾದ ಭಗವಂತನೇ ಮಾಡಿ ಮಾಡಿಸುವನೆಂದು ತಿಳಿಯುವುದು, ನಿಜವಾಗಿ ತತ್ತ್ವಜ್ಞಾನ. ಆಗಲೇ ಜಡಸಂಬಂಧವಾದ "ಅಹಂ" ಎಂಬುದು ನೀಗಿ ಹೋಗುವುದು; ಸ್ವರೂಪದ ನಾನು ಕಂಡು ಬರುವುದು. ಬಿಂಬದರ್ಶನ, ಬಿಂಬಕ್ರಿಯಾ ದರ್ಶನವಾಗುವುದು ಆಗ ಮಾತ್ರವೇ. ಅದೇ ಜೀವನಿಗೆ ಆಗಬೇಕಾದ ಪರಮಪ್ರಯೋಜನ.

ಪ್ರೀತೋಽಹಮಸ್ತುಭದ್ರಂತೇ ಲೋಕಾನಾಂ ವಿಜಯೇಚ್ಛಯಾ ।
ಯದಸ್ತೌಷೀದ್ಗುಣಮಯಂ ನಿರ್ಗುಣಂ ಮಾನುವರ್ಣಯನ್ ॥೩೯॥

ನಿರ್ಗುಣಂ = ಜಡಗುಣ ರಹಿತನೂ; ಗುಣಮಯಂ = ಸರ್ವಜ್ಞ, ಸರ್ವಶಕ್ತ, ಸ್ವತಂತ್ರಾದಿ ಅನಂತ ಕಲ್ಯಾಣಗುಣಪೂರ್ಣನೂ ಆದ; ಮಾ = ನನ್ನನ್ನು; ಲೋಕಾನಾಂ ವಿಜಯೇಚ್ಛಯಾ = ಲೋಕಗಳ ಸೃಷ್ಟಿಕಾರ್ಯವು ಯಶಸ್ವಿಯಾಗುವುದಕ್ಕಾಗಿ; ಯತ್ ಅಸ್ತೌಷೀತ್ = ನೀನು ಯಾವ ಕಾರಣದಿಂದ ಸ್ತೋತ್ರ ಮಾಡಿದೆಯೋ ಅದರ ದೆಸೆಯಿಂದ; ಪ್ರೀತಃ ಅಹಂ = ನಾನು ಸುಪ್ರೀತನಾಗಿದ್ದೇನೆ; ತೇ ಭದ್ರಂ ಅಸ್ತು = ನಿನಗೆ ಮಂಗಳವಾಗಲಿ.

ಸೃಷ್ಟಿಕಾರ್ಯವು ಹರಿಪ್ರೀತಿಕರವಾಗಿ ಯಶಸ್ವಿಯಾಗಲಿ ಎಂಬುದು ಇದರ ಭಾವ.

ಯ ಏತೇನ ಪುಮಾನ್ ನಿತ್ಯಂ ಸ್ತುತ್ವಾ ಸ್ತೋತ್ರೇಣ ಮಾಭಜೇತ್।
ತಸ್ಯಾಹಂ ಸಂಪ್ರಸೀದೇಯಂ ಸರ್ವಕಾಮವರೇಶ್ವರಃ ॥೪೦॥

ಯಃ ಪುಮಾನ್ = ಯಾವ ಪುರುಷನು; ಏತೇನ ಸ್ತೋತ್ರೇಣ = ನೀನು ನನ್ನನ್ನು ಸ್ತುತಿಸಿ ನನ್ನ ಪ್ರಸಾದಕ್ಕೆ ಪಾತ್ರನಾದ ರೀತಿಯಿಂದ; ಮಾ = ನನ್ನನ್ನು; ಭಜೇತ್ = ಪ್ರೀತಿಪಡಿಸುವನೋ; ತಸ್ಯ = ಅವನ ವಿಷಯದಲ್ಲಿ; ಸರ್ವಕಾಮ ವರೇಶ್ವರಃ = ಎಲ್ಲಾ ಕಾಮಿತ ವರಗಳನ್ನೂ ನೀಡುವುದರಲ್ಲಿ ಸಮರ್ಥನಾದ; ಅಹಂ = ನಾನು; ಸಂಪ್ರಸೀದೇಯಂ = ಸುಪ್ರಸನ್ನನಾಗುತ್ತೇನೆ.

ಸೃಷ್ಟಿಗೆ ಮೊದಲೇ ಬ್ರಹ್ಮ ದೇವರು ಮಾಡಿದ ಸ್ತೋತ್ರವು ಸೃಷ್ಟಿಯ ನಂತರದಲ್ಲಿ ಜನಿಸಿದ ಪುರುಷರಿಗೆ ಹೇಗೆ ಗೊತ್ತಾಗುವುದು ಎಂಬ ಪ್ರಶ್ನೆಯನ್ನು ಜನಸಾಮಾನ್ಯರು ಕೇಳಬಹುದು. ಆದರೆ, ಶ್ರೀಮದ್ಭಾಗವತಾದಿ ಪುರಾಣಗಳ ಕರ್ತೃವು ವೇದವ್ಯಾಸರೂಪಿಯಾದ ಭಗವಂತನೇ ಎಂಬುದು ನೆಪಿನಲ್ಲಿದ್ದರೆ ಈ ಪ್ರಶ್ನೆ ಉದ್ಭವಿಸುವುದಿಲ್ಲ.

ಪೂರ್ತೇನ ತಪಸಾಯಜ್ಞೈರ್ದಾನೈರ್ಯೋಗೈಃ ಸಮಾಧಿನಾ ।
ರಾಜ್ಯಂನಿಃಶ್ರೇಯಸಂ ಪುಂಸಾಂ ಮತ್ಪ್ರೀತಿಸ್ತತ್ವವಿನ್ಮತಂ ॥೪೧॥

ಪೂರ್ತೇನ ತಪಸಾ = ಸಾಂಗವಾಗಿ ಆಚರಿಸಿದ ತಪಸ್ಸಿನಿಂದ; ಯಜ್ಞೈಃ = ವಿಧ್ಯುಕ್ತ ರೀತಿಯಲ್ಲಿ ನೆರವೇರಿಸಿದ ಯಜ್ಞಗಳಿಂದ; ದಾನೈಃ = ಮಹಾಮಹಾ ದಾನಗಳಿಂದ; ಯೋಗೈಃ = ಯೋಗಾನುಷ್ಠಾನಗಳಿಂದ; ಸಮಾಧಿನಾ = ಅಂತರಂಗದಲ್ಲಿ ಶ್ರೀಹರಿಯ ರೂಪದರ್ಶನದಿಂದ; ಪುಂಸಾಂ = ಪುರುಷರಿಗೆ; ರಾಜ್ಯಂ = ಅಧಿಕಾರಾದಿ

ಸಂಪತ್ತು; ನಿಃಶ್ರೇಯಸಂ = ಮೋಕ್ಷಪದವಿಯು; ಮತ್ಪ್ರೀತಿಃ = ನನ್ನ ಪ್ರೀತಿಗೆ ಪಾತ್ರರಾಗುವುದಕ್ಕಾಗಿ ಎಂಬುದು; ತತ್ವ ವಿಸ್ಮತಂ = ಜ್ಞಾನಿಗಳ ಅಭಿಪ್ರಾಯವು.

ಯಾವುದೇ ವರಪ್ರದಾನದಿಂದ ಸಂತಸ ಒದಗುವುದು ಶ್ರೀಹರಿಯ ಪ್ರಸನ್ನತೆಯ ಫಲ.

**ಅಹಮಾತ್ಮಾತ್ಮನಾಂ ಧಾತಃ ಪ್ರೇಷ್ಠಃ ಸನ್ಶ್ರೇಯಸಾಮಪಿ।**
**ಅತೋಮಯಿ ರತಿಂ ಕುರ್ಯಾದ್ದೇಹಾದಿರ್ಯತ್ಕೃತೋ ಪ್ರಿಯಃ॥೪೨॥**

ಆತ್ಮನಾಂ ಜೀವರಿಗೆ; ಧಾತಃ = ಚತುರ್ಮುಖನು ; ಪ್ರೇಷ್ಠಃ = ಪ್ರಿಯನಾದವನು; ಆತ್ಮನಾಂ = ಬ್ರಹ್ಮಾದಿಸಕಲ ಜೀವರಿಗೂ; ಅಹಂ ಆತ್ಮಾ = ಅಂತರಾತ್ಮನಾಗಿ ಆನಂದ ಪ್ರದನಾಗಿರುವವನು ನಾನು; ದೇಹಾದಿಃ = ದೇಹ, ಗೇಹ (ಮನೆ) ಮೊದಲಾದವು; ಯತ್ = ಯಾವ ನನ್ನಿಂದ; ಪ್ರಿಯಃ = ಪ್ರೀತಿಕರವಾಗುವಂತೆ ಮಾಡಲ್ಪಟ್ಟಿರುವುವೋ; ಅತಃ = ಆ ಕಾರಣದಿಂದ; ಮಯಿ = ನನ್ನಲ್ಲಿ; ರತಿಂ ಕುರ್ಯಾತ್ = ಪ್ರೀತಿಯನ್ನು (ಭಕ್ತಿಯನ್ನು) ಹೊಂದಿರಬೇಕು.

ದೇಹವು ಸಕಲ ಜೀವರಿಗೂ ಪ್ರಿಯವಾದುದು. ಜೀವರು ಬಾಹ್ಯ ಸಲಕರಣೆಗಳನ್ನು ಬಳಸಿಕೊಂಡು ದೇಹದ ಮುಖಾಂತರ ಸುಖ ಹೊಂದುವರು. ಮುಕ್ತಿಯಲ್ಲಿ ದೊರಕುವ ಸ್ವರೂಪಾನಂದದ ಪರಿಚಯವಾಗುವುದಕ್ಕಾಗಿ,ದೇಹ ಗೇಹಾದಿಗಳಲ್ಲಿದ್ದು, ದೇಹಗಳನ್ನು ದಯವಾಲಿಸಿದ ಬ್ರಹ್ಮದೇವರ ಅಂತರ್ಯಾಮಿಯಾಗಿ, ಪರಮಾತ್ಮನೇ ಸುಖಪ್ರದ ನಾಗಿದ್ದಾನೆ. ಇಹದಲ್ಲಿ ದೊರೆಯುವ ಸುಖಕ್ಕೆ 'ಮೋದ' ಎಂದು ಹೆಸರು. ಮುಕ್ತಿಯಲ್ಲಿ ಲಭಿಸುವ ಸ್ವರೂಪಗತ ನಿತ್ಯಾನಂದಕ್ಕೆ 'ಪ್ರಮೋದ' ಎಂದು ಹೆಸರು. ಇಂತಹ ಮೋದ ಪ್ರಮೋದಗಳನ್ನು ಕರುಣಿಸುವ ಶ್ರೀಹರಿಯನ್ನು ಭಕ್ತಿಯಿಂದ ಭಜಿಸುವುದು ಜೀವರ ಶ್ರೇಯಸ್ಸುಗಳಿಗಾಗಿಯೇ ಅಲ್ಲವೆ!

**ಸರ್ವವೇದಮಯೇನೇಮಾ ಆತ್ಮನಾಮಾತ್ಮಯೋಗಿನಾ ।**
**ಪ್ರಜಾಃ ಸೃಜಯಥಾಪೂರ್ವಂ ಯಾಶ್ಚ ಮಯ್ಯನುಶೇರತೇ ॥೪೩॥**

ಸರ್ವವೇದಮಯೇನ = ಸುಜ್ಞಾನಗಳ ಗಣಿಯಾದ ಸಕಲವೇದಗಳಿಗೂ ಆಶ್ರಯನಾದ; ಆತ್ಮಯೋಗಿನಾ = ಆತ್ಮಗಳಲ್ಲಿ ಅಂತರಾತ್ಮನಾಗಿದ್ದು ಸಕಲ ಚೇಷ್ಟಾ ಪ್ರದನಾದ; ಆತ್ಮನಾ = ನಿನ್ನಂತರ್ಯಾಮಿಯಾಗಿ ಯೋಗಪ್ರದನಾಗಿರುವ ನನ್ನ ದೆಸೆಯಿಂದ; ಯಾಃ ಚ = ಸೃಷ್ಟಿಯಲ್ಲಿ ಬರುವ ಯಾವ ಪ್ರಜೆಗಳು; ಮಯಿಅನುಶೇರತೇ = ನನ್ನಲ್ಲಿ ಯೋಗ ಸಂಬಂಧವನ್ನು ಹೊಂದಿರಬಲ್ಲರೋ, ಇಮಾಃ

ಪ್ರಜಾಃ = ಅಂತಹ ಪ್ರಜೆಗಳನ್ನು; ಯಥಾ ಪೂರ್ವಂ = ಹಿಂದಿನ ಬ್ರಹ್ಮಕಲ್ಪದ ರೀತಿಯಲ್ಲಿ; ಸೃಜ = ಸೃಷ್ಟಿ ಮಾಡು.

ಬ್ರಹ್ಮದೇವರು ತ್ರಿವಿಧ ಜೀವರನ್ನೂ ಸೃಷ್ಟಿಸಬೇಕು. ದುಷ್ಟ ಜೀವರಿಂದ ಸುಜೀವಿಗಳಿಗೆ ಹಿಂಸೆಯಾಗುತ್ತದೆ, ನಿಜ. ಅವರನ್ನು ಸೃಷ್ಟಿಸುವುದು ಪಾಪ ಕಾರ್ಯ. ಆದರೆ, "ಅರ್ಥೇಷು ಅಭಿಜ್ಞಃ ಸ್ವರಾಟ್" ಎಂಬ ಬಿರುದುಳ್ಳ ಭಗವಂತನ ಅಜ್ಞಾನುಸಾರ, ಅವನ ಪ್ರೀತ್ಯರ್ಥವಾಗಿ ಮಾಡುವ ಕಾರ್ಯ ಪಾಪಕರವಲ್ಲ. ತ್ರಿವಿಧ ವಸ್ತುಗಳಲ್ಲಿಯೂ, ತ್ರಿವಿಧ ಜೀವರಲ್ಲಿಯೂ ತತ್ತದ್ಯೋಗ್ಯತಾನುಸಾರ ವರ್ತಿಸುವ ಪರಮಾತ್ಮನ ಸಮತ್ವವನ್ನು ಗಮನದಲ್ಲಿಟ್ಟುಕೊಂಡು ಸೃಷ್ಟಿಯನ್ನು ಮಾಡಬೇಕೆಂದು ಭಗವಂತ ಬ್ರಹ್ಮದೇವರಿಗೆ ಅಜ್ಞೆ ಮಾಡಿದ್ದಾನೆ.

ಮೈತ್ರೇಯ ಉವಾಚ = ಮೈತ್ರೇಯರು ವಿದುರರನ್ನು ಕುರಿತು ಹೇಳಿದರು.

**ತಸ್ಮಾ ಏವಂ ಜಗತ್ಸ್ರಷ್ಟಾ ಪ್ರಧಾನ ಪುರುಷೇಶ್ವರಃ ।**
**ವ್ಯಜ್ಯೇದಂ ಸ್ವೇನರೂಪೇಣ ಕಂಜನಾಭಸ್ತಿರೋದಧೇ ॥೪೪॥**

ಜಗತ್ಸ್ರಷ್ಟಾ = ಸೃಷ್ಟಿಕರ್ತನಾದ; ಪ್ರಧಾನ ಪುರುಷೇಶ್ವರಃ = ಪ್ರಕೃತಿ ಪುರುಷರಿಗೆಲ್ಲಾ ಒಡೆಯನಾದ; ಕಂಜನಾಭಃ = ಪದ್ಮನಾಭರೂಪೀ ಪರಮಾತ್ಮನು; ತಸ್ಮೈ = ಚತುರ್ಮುಖ ಬ್ರಹ್ಮದೇವರಿಗೆ; ಏವಂ = ಇದುವರೆಗೆ ಹೇಳಿದಪ್ರಕಾರವಾಗಿ; ಸ್ವೇನ ರೂಪೇಣ = ತನ್ನ ಸಂಕಲ್ಪಾತ್ಮಕ ರೂಪದಿಂದ; ಇದಂ = ಜಗತ್ಸೃಷ್ಟಿಯ ವಿಚಾರವನ್ನು; ವ್ಯಜ್ಯ = ಪ್ರತ್ಯೇಕ್ಷೀಕರಿಸಿ; ತಿರೋದಧೇ = ಅಂತರ್ಧಾನ ಹೊಂದಿದನು.

ಜಗತ್ತಿನ ಸ್ಥಿತಿಗತಿಗಳ ವಿಚಾರವಾದ ತನ್ನ ಸಂಕಲ್ಪವನ್ನು ಬ್ರಹ್ಮ ದೇವರ ಮನಸ್ಸಿನಲ್ಲಿ ಚೆನ್ನಾಗಿ ಮೂಡಿಸಿ ಭಗವಂತ ಕಣ್ಮರೆಯಾದನು. ಬ್ರಹ್ಮ ದೇವರಿಗೆ ತನ್ನ ನಿಜರೂಪವನ್ನು ಸ್ವಲ್ಪಕಾಲ ತೋರಿಸಿ ಆ ಪರಬ್ರಹ್ಮನು ಅಗೋಚರನಾದನೆಂದ ಮೇಲೆ, ಇನ್ನಿತರರು ಅಂತಹ ರೂಪವನ್ನು ಹೇಗೆ ತಾನೇ ಕಾಣಬಲ್ಲರು ಮತ್ತು ದೃಢವಾಗಿ ಮನಸ್ಸಿನಲ್ಲಿ ನಿಲ್ಲಿಸಿ ಕೊಳ್ಳಬಲ್ಲರು? ಆದುದರಿಂದಲೇ ಆ ಪರಮಪುರುಷನು ಅಗಮ್ಯಮಹಿಮ, ಅವ್ಯಕ್ತ ಮೂರ್ತಿ. ತನ್ನ ಪ್ರಸನ್ನತೆಯಿಂದ ಮಾತ್ರ ಭಕ್ತರ ಮುಂದೆ ನಲಿದಾಡುವ ಕರುಣಾಶಾಲಿ, ಆ ಶ್ರೀಹರಿ.

ಹತ್ತನೆಯ ಅಧ್ಯಾಯ ಮುಗಿಯಿತು

"ಶ್ರೀಕೃಷ್ಣಾರ್ಪಣಮಸ್ತು"

---

# ಶ್ರೀಮದ್ಭಾಗವತ – ತೃತೀಯಸ್ಕಂಧ
# ಹನ್ನೊಂದನೆಯ ಅಧ್ಯಾಯ
## (ಚತುರ್ವಿಧ ಸೃಷ್ಟಿಯ ವಿಚಾರ)

ವಿದುರ ಉವಾಚಃ – ವಿದುರರು ಮಾತಾಡಿದರು.

ಅಂತರ್ಹಿತೇಭಗವತಿ ಬ್ರಹ್ಮಾಲೋಕಪಿತಾಮಹಃ ।
ಪ್ರಜಾಃ ಸಸರ್ಜಕತಿಧಾ ದೈಹಿಕೀರ್ಮಾನಸೀರ್ವಿಭುಃ ॥೧॥

ಭಗವತಿ ಅಂತರ್ಹಿತೇ = ಅನಂತಪದ್ಮನಾಭರೂಪೀಭಗವಂತನು ಅದೃಶ್ಯನಾದ ಮೇಲೆ; ವಿಭುಃ= ಸಮರ್ಥರಾದ; ಲೋಕಪಿತಾಮಹಃ = ವಿಶ್ವದಲ್ಲಿ ಮೊಟ್ಟ ಮೊದಲನೆಯ ತಂದೆಯೆನಿಸಿದ; ಬ್ರಹ್ಮಾ = ಬ್ರಹ್ಮದೇವರು; ದೈಹಿಕೀಃ = ದೇಹಸಂಬಂಧದಿಂದ ಉಂಟಾದ; ಮಾನಸೀಃ = ಕೇವಲ ಮನಸ್ಸಿನಿಂದ ಹುಟ್ಟಿದ; ಪ್ರಜಾಃ = ಪ್ರಜಾವರ್ಗವನ್ನು; ಕತಿಧಾ = ಎಷ್ಟು ಬಗೆಯಾಗಿ; ಸಸರ್ಜ = ಸೃಷ್ಟಿ ಮಾಡಿದರು?

(ದೈವ ಸೃಷ್ಟಿಯ ವೈಚಿತ್ರ್ಯವನ್ನು ನಾವಿಲ್ಲಿ ಕಾಣಬಹುದು. ಸಂತಾನ ಉತ್ಪತ್ತಿಯು ದೇಹ ಸಂಬಂಧದಿಂದಲೇ ಉಂಟಾಗಬೇಕಾಗಿಲ್ಲ; ಮಾನಸಿಕವಾಗಿಯೂ ಅದು ಸಾಧ್ಯ ಎಂಬುದು ಇಲ್ಲಿ ಕಂಡುಬರುತ್ತಿದೆ.)

ಯೇಚ ಮೇಭಗವನ್ಪೃಷ್ಟಾಸ್ತ್ವಯ್ಯರ್ಥಾಬಹುವಿತ್ತಮ ।
ತಾನ್ವದಸ್ವಾನು ಪೂರ್ವ್ಯೇಣ ಛಿಂದಿನಃ ಸರ್ವಸಂಶಯಾನ್ ॥೨॥

ಭಗವನ್ = ಮಹಾಮಹಿಮರಾದ; ಬಹು ವಿತ್‌ತಮ = ಅನೇಕ ವಿಷಯಗಳನ್ನು ಚೆನ್ನಾಗಿ ಬಲ್ಲವರಲ್ಲಿ ಶ್ರೇಷ್ಠರಾದ ಮೈತ್ರೇಯರೇ; ಮೇ = ನನ್ನ; ತ್ವಯಿಪೃಷ್ಟಾಃ = ನಿಮ್ಮಲ್ಲಿ ಪ್ರಶ್ನೆಮಾಡಿದ; ಯೇಚ ಅರ್ಥಾಃ = ಯಾವಯಾವ ವಿಷಯಗಳುಂಟೋ; ತಾನ್ = ಅವುಗಳನ್ನು; ಆನುಪೂರ್ವ್ಯೇಣ = ಸಕ್ರಮವಾಗಿ; ವದಸ್ವ = ವಿವರವಾಗಿ ಹೇಳಿರಿ; ನಃ = ನಮ್ಮ ಮನಸ್ಸುಗಳಲ್ಲಿರುವ; ಸರ್ವಸಂಶಯಾನ್ = ಎಲ್ಲಾ ಸಂಶಯಗಳನ್ನೂ; ಛಿಂದಿ = ಕಳೆದುಬಿಡಿರಿ.

(ಹೇಳತಕ್ಕ ಜ್ಞಾನಿವರೇಣ್ಯರು ದೊರಕಿದಾಗ ಅವರಿಂದ ಆದಷ್ಟೂ ಪೂರ್ಣಪ್ರಯೋಜನವನ್ನು ಪಡೆಯಬೇಕೆಂಬ ಆದರ ಉತ್ಸಾಹಗಳು ಇರಬೇಕು; ಇತರ ಲೌಕಿಕ ವಿಚಾರಗಳನ್ನು ಕೈಬಿಡಬೇಕು. ಇದು ಸಜ್ಜನರ ಲಕ್ಷಣ)

ಸೂತ ಉವಾಚಃ - ಸೂತ ಪೌರಾಣಿಕರು ಶೌನಕಾದಿಗಳನ್ನು ಕುರಿತು ಹೇಳಿದರು.

(ನಡುನಡುವೆ ಇದು ಇಂಥವರ ಮಾತು ಎಂದು ಹೇಳುತ್ತಿರುವುದು ಕಥಾಸರಣಿಯ ಚಿತ್ರವನ್ನು ನೆನಪಿನಲ್ಲಿ ಉಳಿಸುತ್ತದೆ.)

**ಏವಂ ಸಂಚೋದಿತಸ್ತೇನ ಕ್ಷತ್ರಾಕೌಷಾರವೋಮುನಿಃ ।**
**ಪ್ರೀತಃ ಪ್ರತ್ಯಾಹತಾನ್ ಪ್ರಶ್ನಾನ್ ಹೃದಿಸ್ಥಾನಥ ಭಾರ್ಗವ ॥೩॥**

ಭಾರ್ಗವ = ಅಯ್ಯಾ ಪರೀಕ್ಷಿದ್ರಾಜಾ; ತೇನ ಕ್ಷತ್ರಾ = ವಿದುರರಿಂದ; ಏವಂ ಸಂಚೋದಿತಃ = ಈ ಪ್ರಕಾರವಾಗಿ ಪ್ರಾರ್ಥಿಸಲ್ಪಟ್ಟ; ಕೌಷಾರವಃ ಮುನಿಃ = ಮೈತ್ರೇಯ ಮಹಾಮುನಿಗಳು; ಪ್ರೀತಃ = ಸಂತುಷ್ಟರಾಗಿ; ಅಥ = ಆಗ; ಹೃದಿಸ್ಥಾನ್ ತಾನ್‌ಪ್ರಶ್ನಾನ್ ಪ್ರತಿ = ವಿದುರರ ಮನಸ್ಸಿನಲ್ಲಿದ್ದ ಪ್ರಶ್ನೆಗಳಿಗೆ ಉತ್ತರರೂಪವಾಗಿ; ಆಹ = ಮಾತಾಡಲಾರಂಭಿಸಿದರು.

(ಬಹುವಿತ್ತಮರಿರಬಹುದು. ಶ್ರದ್ಧೆಯಿಂದ ಅವರ ಬಳಿಗೆ ಹೋಗಿ ಕೇಳಿ ತಿಳಿಯಬೇಕೆನ್ನುವರಿರಬೇಕಲ್ಲವೆ! ಹಾಗೆ ಕೇಳುವವರು ಸಿಕ್ಕಿದಾಗ, ಆ ಜ್ಞಾನಿಗಳಿಗೆ ಬಹು ಸಂತೋಷ)

ಮೈತ್ರೇಯ ಉವಾಚಃ- ಮೈತ್ರೇಯರು ಮಾತನ್ನು ಮುಂದುವರಿಸಿದರು.

**ವಿರಿಂಚೋಽಪಿ ತಥಾಚಕ್ರೇ ದಿವ್ಯಂ ವರ್ಷಶತಂತಪಃ ॥**
**ಆತ್ಮನ್ಯಾತ್ಮಾನಮಾವೇಶ್ಯ ಯಥಾಹ ಭಗವಾನಜಃ ॥೪॥**

ಅಜಃ = ಜನನರಹಿತನಾದ ಭಗವಂತನು; ಯಥಾ ಆಹತಥಾ = ಯಾವ ರೀತಿಯಲ್ಲಿ ಹೇಳಿದನೋ ಹಾಗೆ; ವಿರಿಂಚಃ ಅಪಿ = ಆ ಬ್ರಹ್ಮದೇವರಾದರೋ; ಆತ್ಮನಿ = ಮನಸ್ಸಿನಲ್ಲಿ; ಆತ್ಮಾನಂ ಆವೇಶ್ಯ = ಬಿಂಬರೂಪಿಯಾದ ಪರಮಾತ್ಮನನ್ನು ಧ್ಯಾನಿಸುತ್ತಾ; ದಿವ್ಯಂ ವರ್ಷಶತಂ = ದೇವಮಾನದ ನೂರು ವರ್ಷಗಳಷ್ಟು ಕಾಲ; ತಪಃ ಚಕ್ರೇ = ತಪಸ್ಸನ್ನು ಆಚರಿಸಿದರು.

(ಬಿಂಬರೂಪಿ ಪರಮಾತ್ಮನು ನೋಡಿನೋಡಿಸುವವನಾದುದರಿಂದ, ಅವನ

ಧ್ಯಾನದಿಂದ ಸೃಷ್ಟಿಸಬೇಕಾದ ವಿಶ್ವದ ಚಿತ್ರವು ಬ್ರಹ್ಮದೇವರ ಮನಸ್ಸಿನಲ್ಲಿ ಚೆನ್ನಾಗಿ ಮೂಡುವುದಕ್ಕಾಗಿ ತಪಶ್ಚರ್ಯೆ. ಮಹತ್ಕಾರ್ಯವನ್ನು ಸಾಧಿಸಬೇಕೆನ್ನುವವರು ಈ ಉದಾಹರಣೆಯನ್ನು ಮರೆಯದಿರಬೇಕು.)

ತದ್ವಿಲೋಕ್ಯಾಬ್ಜಸಂಭೂತೋ ವಾಯುನಾಯದಧಿಷ್ಠಿತಂ ।
ಪದ್ಮಮಂಭಶ್ಚತತ್ಕಾಲ ಕೃತವೀರ್ಯೇಣ ಕಂಪಿತಂ ॥೫॥

ತಪಸಾಹ್ಯೇಧಮಾನೇನ ವಿದ್ಯಯಾಚಾತ್ಮ ಸಂಸ್ಥಯಾ ।
ವಿವೃದ್ಧ ವಿಜ್ಞಾನಬಲೋನ್ಯಪಾದ್ವಾಯುಂ ಸಹಾಂಭಸಾ ॥೬॥

ಅಬ್ಜಸಂಭವಃ = ಕಮಲದಲ್ಲಿ ಜನ್ಮವನ್ನು ಪಡೆದ ಚತುರ್ಮುಖ ಬ್ರಹ್ಮದೇವರು; ತತ್‌ಕಾಲಕೃತವೀರ್ಯೇಣ = ಉದಯ ಕಾಲಕ್ಕೆ ಅನುಗುಣವಾದ ಕಾಲಬಲದಿಂದ ಪ್ರಚೋದಿತವಾದ; ವಾಯುನಾ = ವಾಯುವಿನಿಂದ; ಕಂಪಿತಂ = ಬಲವಾಗಿ ಅಲುಗಾಡಲಾರಂಭಿಸಿದ; ಯತ್ ಅಧಿಷ್ಠಿತಂ ಪದ್ಮಂ = ತಾವುಕುಳಿತಿದ್ದ ಕಮಲವನ್ನೂ; ತತ್ ಅಂಭಃ ಚ = ಅಲ್ಲೋಲ ಕಲ್ಲೋಲವಾದ ಪ್ರಳಯೋದಕವನ್ನೂ; ವಿಲೋಕ್ಯ = ವಿಚಾರಪೂರ್ವಕ ನೋಡಿ ॥೫॥

ಏಧಮಾನೇನ ತಪಸಾಹಿ = ಅಭಿವೃದ್ಧಿಯಾಗುತ್ತಿದ್ದ ತಪೋಬಲದಿಂದಲೂ; ಚ = ಮತ್ತು; ಆತ್ಮಸಂಸ್ಥಯಾವಿದ್ಯಯಾ = ಮನಸ್ಸಿನಲ್ಲಿ ನೆಲೆಗೊಳಿಸಿಕೊಂಡ ಪರಮಾತ್ಮನ ಸ್ಮರಣ ಪೂರ್ವಕವಾದ ವಿದ್ಯಾಬಲದಿಂದಲೂ; ವಿವೃದ್ಧ ವಿಜ್ಞಾನ ಬಲಃ = ಸ್ಫುಟವಾದ ಬಿಂಬಕ್ರಿಯಾದರ್ಶನ ಬಲದಿಂದಲೂ; ಅಂಭಾಸಾ ಸಹ = ಆ ಪ್ರಳಯೋದಕ ಸಹಿತವಾಗಿ; ವಾಯುಂ = ಪ್ರಬಲವಾಗಿ ಬೀಸುತ್ತಿದ್ದ ವಾಯುವನ್ನು; ನ್ಯಪಾತ್ = ಪಾನಮಾಡಿಬಿಟ್ಟರು.

(ಹಿಂದೆಯೇ ಹೇಳಿದಂತೆ, ಪ್ರಳಯೋದಕವೆಂದರೆ ಇದು ಮಹಾಪ್ರಳಯ ಕಾಲದ ಶ್ರೀರೂಪವಾದ ಉದಕವಲ್ಲ; ಸೃಷ್ಟಿಗೆ ಪೂರ್ವದಲ್ಲಿ, ಸೃಷ್ಟಿಗೆ ಬರಬೇಕಾದ ಅಂಶಗಳನ್ನೆಲ್ಲಾ ತನ್ನಲ್ಲಿ ತುಂಬಿಕೊಂಡಿದ್ದ ನಾರಾಯಣ ರೂಪವಾದ ಅಂಡೋದಕ (ಗರ್ಭೋದಕ). ಅದೃಶ್ಯನಾದ ಅನಂತಪದ್ಮನಾಭ ರೂಪಿಯು ಇದರಲ್ಲಿ ಅಂತರ್ಗತನಾಗಿ ಚತುರ್ಮುಖ ಬ್ರಹ್ಮದೇವರ ಉದರದಲ್ಲಿ ಈಗ ಪ್ರವೇಶಿಸಿದ. ಮುಂದೆ, ಅವರಲ್ಲಿ ತಾನೇ ವಿರಾಡ್ರೂಪಿಯಾಗಿ, ಅವರಿಗೆ ವಿರಾಡ್ರೂಪವನ್ನು ಕೊಟ್ಟು ಸೃಷ್ಟಿಯನ್ನು ನಡೆಸುವನು.)

ತದ್ವಿಲೋಕ್ಯ ವಿಯದ್ವ್ಯಾಪಿ ಪುಷ್ಕರಂ ಯದಧಿಷ್ಠಿತಃ ।
ಅನೇನ ಲೋಕಾನ್‌ಪ್ರಾಗ್ಲೀನಾನ್ ಕಲ್ಪಿತಾಸ್ಮೀತ್ಯಚಿಂತಯತ್ ॥೭॥

ಯತ್ ಅಧಿಷ್ಠಿತಃ = ಯಾವುದರಲ್ಲಿ ಕುಳಿತಿದ್ದರೋ; ತತ್ = ಆ; ವಿಯದ್ವ್ಯಾಪಿ ಪುಷ್ಕರಂ = ಆಕಾಶವನ್ನೆಲ್ಲಾ ತುಂಬುವಂತೆ ವಿಸ್ತಾರವಾದ ಕಮಲವನ್ನು; ವಿಲೋಕ್ಯ = ವಿಮರ್ಶಾತ್ಮಕ ಬುದ್ಧಿಯಿಂದ ಪರೀಕ್ಷಿಸಿ; ಅನೇನ = ಇದರಿಂದ; ಪ್ರಾಕ್ ಲೀನಾನ್ = ಹಿಂದೆ ಇದರಲ್ಲಿ ಅಡಗಿಕೊಂಡ; ಲೋಕಾನ್ = ಲೋಕಗಳನ್ನು; ಕಲ್ಪಿತಾ ಅಸ್ಮಿ = ರಚಿಸುವವನಾಗುತ್ತೇನೆ; ಇತಿ = ಹೀಗೆಂದು; ಅಚಿಂತಯತ್ = ಬ್ರಹ್ಮದೇವರು ಯೋಚಿಸಿದರು.

(ಅನಂತ ಪದ್ಮನಾಭರೂಪಿಯ ಉದರದಲ್ಲಿ ಲೋಕಗಳ ಸೃಷ್ಟಿಗೆ ಬೇಕಾದ ಅಂಶಗಳು ತುಂಬಿಕೊಂಡಿದ್ದವು. ಆ ಅಂಶಗಳನ್ನೇ ಬೃಹತ್ಕಮಲದ ರೂಪದಲ್ಲಿ ಆ ಜಗತ್ಪತಿಯು ತನ್ನ ನಾಭಿಯಿಂದ ಪ್ರಕಟಿಸಿ, ಅದರಲ್ಲಿ ಸೃಷ್ಟಿಕರ್ತರಾದ ಬ್ರಹ್ಮದೇವರನ್ನೂ ಪಡೆದನು. ಸಕಲ ವೇದಗಳೂ ಓಂಕಾರದಲ್ಲಿ ಅಡಗಿರುವಂತೆ ಸೃಷ್ಟಿಯಾಗಬೇಕಾದ ಲೋಕಗಳೆಲ್ಲವೂ ಹದಿನಾಲ್ಕು ದಳಗಳ ಆ ಪದ್ಮದಲ್ಲಿ ಅಡಕವಾಗಿದ್ದುವು. ಪ್ರತಿ ಬ್ರಹ್ಮಕಲ್ಪದಲ್ಲಿಯೂ ಸ್ವಲ್ಪ ಹೆಚ್ಚುಕಡಿಮೆ ಒಂದೇ ಬಗೆಯಾಗಿ ಲೋಕಗಳ ಸೃಷ್ಟಿಯಾಗುವುದರಿಂದ "ಹಿಂದೆ ಅದರಲ್ಲಿ ಅಡಗಿದ್ದ" ಎಂದಿರುವರು. ಆಕಾರಗಳೆಲ್ಲಾ ವ್ಯತ್ಯಾಸಹೊಂದಿ ಮೂಲವಸ್ತುಗಳು ಮಾತ್ರ ಉಳಿಯುವಾಗ ಇದ್ದ ಲೋಕಗಳು ಇದ್ದಂತೆಯೇ ಅಡಗುವುದು ಹೇಗೆ ಎಂಬ ಶಂಕೆ ಮೂಡುವುದು ಸಹಜ. ಭಗವಂತನ ಉದರದಲ್ಲಿ ಹಿಂದಿನ, ಇಂದಿನ, ಮುಂದಿನ ಅನಂತಾನಂತ ಬ್ರಹ್ಮಾಂಡಗಳು ಅಡಗಿರುವುವು ಎಂದರೆ, ಅವುಗಳ ಮಾನಸಿಕ ಕಲ್ಪನೆಗಳು ಆ ಸರ್ವಜ್ಞ ಮೂರ್ತಿಯಲ್ಲಿ ಸ್ಪಷ್ಟವಾಗಿರುವುವು ಎಂದರ್ಥ. ಆ ಭಗವಂತನನ್ನು ತಪಸ್ಸಿನಿಂದ ಒಲಿಸಿಕೊಂಡು, ಬಿಂಬ–ಪ್ರತಿಬಿಂಬಭಾವವನ್ನು ಚೆನ್ನಾಗಿ ಮೂಡಿಸಿಕೊಂಡ ಬ್ರಹ್ಮದೇವರಿಗೆ ಅವರ ಅಂತರಾತ್ಮನು ಕಾಣುತ್ತಿದ್ದ ಲೋಕಗಳ ವಿವರಗಳು ಸ್ಪಷ್ಟವಾಗಿ ಕಾಣುತ್ತಿದ್ದುವು ಎಂಬುದು ಇದರ ಭಾವ. ಅಂತಹ ಸ್ಪಷ್ಟದರ್ಶನದ ಬಲದಿಂದ, ಮುಂದೆಯೂ ಅಂತರಾತ್ಮನ ಬಲದಿಂದ ಅವರು ಹಿಂದಿನ ವಿಶ್ವದಂತೆ ಇಂದಿನ ವಿಶ್ವವನ್ನು ಸೃಷ್ಟಿಸುವ ಸಂಕಲ್ಪಮಾಡಿದರು.)

**ಪದ್ಮಕೋಶಂ ತದಾವಿಶ್ಯಭಗವಾನ್ಕರ್ಮಚೋದಿತಃ ।**
**ಏಕಂವ್ಯಭಾಂಕ್ಷೀದುರುಧಾ ತ್ರಿಧಾಭಾವ್ಯದ್ವಿಸಪ್ತಧಾ ॥೮॥**

ಭಗವಾನ್ = ಜ್ಞಾನ ಭಕ್ತಿವೈರಾಗ್ಯ ಸಂಪನ್ನರಾದ ಬ್ರಹ್ಮದೇವರು; ತದಾ = ಹಾಗೆ ಆಲೋಚಿಸಿದ ನಂತರ; ಕರ್ಮಚೋದಿತಃ = ಅದೃಷ್ಟಪ್ರೇರಕನಾದ ಭಗವಂತನಿಂದ ಪ್ರೇರಿತರಾಗಿ; ಪದ್ಮಕೋಶಂ ಆವಿಶ್ಯ = ವ್ಯಾಪಕ ರೂಪದಿಂದ ಪದ್ಮದಳಗಳನ್ನು ಹೊಕ್ಕು; ಏಕಂ = ಒಂದಾಗಿದ್ದ ಆ ಕಮಲಗತ ವಸ್ತುವಿಶೇಷಗಳನ್ನು ಬಳಸಿಕೊಂಡು; ತ್ರಿಧಾಭಾವ್ಯ = ಭೂಮಿ, ಅಂತರಿಕ್ಷ, ಸ್ವರ್ಗಾದಿಗಳೆಂದು ಮೂರು

ವಿಧವಾಗಿ ವಿಂಗಡಿಸಿ; ದ್ವಿಸಪ್ತಧಾ = ಹದಿನಾಲ್ಕು ಲೋಕಗಳಾಗಿ; ಉರುಧಾ = ಬೇರೆಬೇರೆಯಾಗಿ; ವ್ಯಭಾಂಕ್ಷೀತ್ = ವಿಭಾಗ ಮಾಡಿದರು.

(ಇರುವ ವಿವರಗಳನ್ನು ಇದ್ದಂತೆ ಭಾವಿಸಲಾರದ ಆಧುನಿಕರು, ನಾಭಿಕಮಲ, ಅದರಲ್ಲಿ ಬ್ರಹ್ಮ ಮೊದಲಾದುವನ್ನು ಕೇವಲ ರೂಪಕವೆಂದು ಭಾವಿಸಿ ಕೈಬಿಡುತ್ತಾರೆ. ಅದು ಸರಿಯಲ್ಲ. ಒಬ್ಬ ವ್ಯಕ್ತಿ ಎಂದಾಗ, ಅವನಿಗೆ ಆ ವ್ಯಕ್ತಿತ್ವಕ್ಕೆ ತಕ್ಕ ಆಕಾರವೂ ಉಂಟು, ಅದರಲ್ಲಿ ಅವನ ವ್ಯಕ್ತಿತ್ವವೂ ಉಂಟು. ಹಾಗೆ ಕಮಲವಿದ್ದುದೂ ನಿಜ; ಮುಂದೆ ಅದು ವಿಶ್ವದ ಲೋಕಗಳಾಗಿ ರೂಪಾಂತರ ಹೊಂದಿದುದೂ ನಿಜ. ಸೃಷ್ಟಿಯ ಕ್ರಮ ಹೇಗೆ ಎಂಬುದನ್ನು ಮುಂದೆ ಹೇಳುತ್ತಾರೆ. ಭೂಲೋಕದ ಉಪಭಾಗಗಳು, ಪಾತಾಳಾದಿ ಏಳು ಲೋಕಗಳು.)

**ಏತಾವಾನ್ ಜೀವಲೋಕಸ್ಯ ಸಂಸ್ಥಾಭೇದಃ ಸಮಾಸತಃ ।**
**ಧರ್ಮಸ್ಯಹ್ಯನಿಮಿತ್ತಸ್ಯ ವಿಪಾಕಃ ಪರಮೇಷ್ಠಿನಃ ॥೯॥**

ಸಮಾಸತಃ = ಸಂಗ್ರಹವಾಗಿ ಹೇಳುವುದಾದರೆ; ಜೀವಲೋಕಸ್ಯ = ಸೃಷ್ಟಿಯಲ್ಲಿ ಬರುವ ಜೀವರುಗಳ; ಸಂಸ್ಥಾಭೇದಃ = ಸ್ಥಾನವಿಶೇಷಗಳು; ಏತಾವಾನ್ ಏವ = ಈ ಹದಿನಾಲ್ಕು ಲೋಕಗಳೇ ಆಗಿರುವುವು; ಪರಮೇಷ್ಠಿನಃ = ಭಗವದರ್ಪಣ ಬುದ್ಧಿಯಿಂದ ಸಕಲ ವ್ಯಾಪಾರಗಳನ್ನೂ ನಡೆಸುವವರಾದುದರಿಂದ 'ಪರಮೇಷ್ಠಿ' ಎಂಬ ನಾಮಧೇಯವುಳ್ಳ ಬ್ರಹ್ಮದೇವರ; ಅನಿಮಿತ್ತಸ್ಯ ಧರ್ಮಸ್ಯ = ಸ್ವಪ್ರಯೋಜನಾಪೇಕ್ಷೆ ಇಲ್ಲದೆ. ಅಕಾರವಾಚ್ಯನಾದ ಪರಮಾತ್ಮನ ಪ್ರೀತ್ಯರ್ಥವಾಗಿ ಮಾಡಿದ; ಧರ್ಮಸ್ಯ = ಸೃಷ್ಟಿ ವ್ಯಾಪಾರದ; ವಿಪಾಕಂಹಿ = ಸತ್ಫಲವೇ ಇದು ಆಗಿದೆ.

(ಯಾವ ಅಪೇಕ್ಷೆಯೂ ಇಲ್ಲದೆ ಯಾರೂ ಯಾವ ಕೆಲಸವನ್ನೂ ಮಾಡುವುದಿಲ್ಲವೆಂಬುದು ನಿಜ. ಕಾಮ್ಯಫಲಾಪೇಕ್ಷೆಯಿಂದ ಮಾಡುವ ಕೆಲಸ ಫಲಿಸಬಹುದು ಅಥವ ಫಲಿಸದೆ ಹೋಗಬಹುದು. ಆದರಿಂದ ಸುಖಕ್ಕಿಂತ ದುಃಖವೇ ಹೆಚ್ಚಾಗಿ ಉಂಟಾಗುವುದು. ಆದರೆ, ಭಗವತ್ಪ್ರೇರಣೆಯಿಂದು ತಿಳಿದು ಭಗವತ್ಪ್ರೀತಿಗಾಗಿ ಮಾಡುವ ಕೆಲಸವು ಸಾರ್ಥಕವಾಗುವುದು. ನಿಜ ಸುಖವನ್ನು ಒದಗಿಸುವುದು.) ಭಗವಂತ ಸುಪ್ರೀತನಾಗಲಿ ಎಂಬ ಅಪೇಕ್ಷೆ ಅಸಾಧುವಲ್ಲ.

**ವಿದುರ ಉವಾಚಃ–** ವಿದುರರು ಹೇಳಿದರು.

**ಯದಾತ್ಥಬಹುರೂಪಸ್ಯ ಹರೇರದ್ಭುತ ಕರ್ಮಣಃ ।**
**ಕಾಲಾಖ್ಯಂ ಲಕ್ಷಣಂ ಬ್ರಹ್ಮನ್ ಯಥಾವರ್ಣಯನಃ ಪ್ರಭೋ ॥೧೦॥**

ಅದ್ಭುತ ಕರ್ಮಣಃ = ಅಚಿಂತ್ಯಮಹಿಮಾನ್ವಿತ ಕರ್ಮಗಳನ್ನು ನಡೆಸುವ; ಬಹು ರೂಪಸ್ಯ = ನಾನಾರೂಪಗಳಿಂದ ಪ್ರಕಟನಾಗುವ; ಹರೇಃ = ಶ್ರೀಹರಿಯ; ಕಾಲಾಖ್ಯಂ ಲಕ್ಷಣಂ = ಕಾಲಕ್ಕೆ ಅಧೀನಗೊಳಿಸಿ ವ್ಯಾಪಾರಗಳನ್ನು ನಡೆಸುವ ಆ ಭಗವಂತನ ಸ್ವರೂಪದ ವಿಚಾರವನ್ನು; ಯತ್ ಆತ್ಥ = ಯಾವುದನ್ನು ಹೇಳಿದಿರೋ; ಅದನ್ನು; ಯಥಾ = ಯಥಾವತ್ತವಾಗಿ; (ಮನಸ್ಸಿಗೆ ಹಿಡಿಯುವಂತೆ ಹೆಚ್ಚು ವಿವರವಾಗಿ) ನಃ = ನಮಗೆ; ಪ್ರಭೋ = ಸಮರ್ಥರಾದ ಮೈತ್ರೇಯರೇ; ವರ್ಣಯ = ವರ್ಣಿಸಿರಿ.

(ಮೈತ್ರೇಯರು ಹೇಳಬೇಕಾದುದನ್ನು ಸಂಗ್ರಹವಾಗಿ ಹೇಳಿ, ಎಲ್ಲಿ ಬೇರೆ ವಿಷಯವನ್ನೆತ್ತಿಕೊಂಡು ಬಿಡುವರೋ ಎಂಬ ಆತಂಕದಿಂದ ವಿದುರರು ಮಾತಾಡಿದ್ದಾರೆ. ವಿಷಯಗಳನ್ನು ಹೆಚ್ಚು ಹೆಚ್ಚಾಗಿ, ಹೆಚ್ಚು ವಿವರವಾಗಿ ತಿಳಿಯಬೇಕೆಂಬುದು ಅವರ ಆಶಯ. ಜ್ಞಾನಮಾರ್ಗದಲ್ಲಿ ನಡೆಯುವವರಿಗೆ ಇದು ಮಾದರಿ.)

ಮೈತ್ರೇಯ ಉವಾಚಃ– ಮೈತ್ರೇಯರು ಹೇಳಿದರು.

**ಗುಣವ್ಯತಿಕರಾಕಾರೋನಿರ್ವಿಶೇಷೋಽ ಪ್ರತಿಷ್ಠಿತಃ ।**
**ಪುರುಷಸ್ತದುಪಾದಾನಮಾತ್ಮಾನಂ ಲೀಲಯಾಸೃಜತ್ ॥೧೧॥**

ಗುಣವ್ಯತಿಕರ ಆಕಾರಃ = ತನ್ನಲ್ಲಿ ಲೀನವಾಗಿದ್ದ ಜಡಗುಣಗಳನ್ನು ಕಾಲವ್ಯಪಧಾನದಿಂದ ರೂಪಾಂತರಗೊಳಿಸಬಲ್ಲ; ನಿರ್ವಿಶೇಷಃ = ರೂಪಾಂತರಗೊಳ್ಳುವ ವಸ್ತು ತನ್ನದೇ ಲಕ್ಷಣವಾಗಿರದ; ಅಪ್ರತಿಷ್ಠಿತಃ = ಆ ವಸ್ತುಗಳನ್ನು ಆಶ್ರಯಿಸಿರದೆ ತನಗೆ ತನೇ ಆಶ್ರಯನಾದ; ಪುರುಷಃ = ಷಡ್ಗುಣೈಶ್ವರ್ಯ ಸಂಪನ್ನನಾದ ಭಗವಂತನು; ತದುಪಾದಾನಂ = ಆ ಕಾರಣವಸ್ತುಗಳನ್ನು; ಆತ್ಮಾನಂ = ತನ್ನದೇ ರೂಪ ರೂಪಾಂತರವೆನ್ನುವಂತೆ; ಲೀಲಯಾ = ಆಟದೋಪಾದಿಯಲ್ಲಿ; ಅಸೃಜತ್ = ಸೃಷ್ಟಿಸಿದನು.

(ಜಡವಸ್ತುಗಳು ಸ್ವತಃ ಪರಿಣಾಮ ಹೊಂದಲಾರವು, ಆದುದರಿಂದ, ತನ್ನ ಸಂಕಲ್ಪಮಾತ್ರ ಶಕ್ತಿಯಿಂದ ಭಗವಂತನು ಗುಣಗಳಲ್ಲಿ ಗುಣಗಳಂತೆ ತಾನು ಪ್ರವಿಷ್ಟನಾಗಿ ಅವುಗಳನ್ನು ರೂಪಾಂತರಗೊಳಿಸಿದನು. ಅವುಗಳ ರೂಪಾಂತರವು ವಿಕಾರದಿಂದಾಗುವುದು. ಅವುಗಳಲ್ಲಿನ ಭಗವಂತನ ರೂಪಾಂತರವು ಕೇವಲ ಸಂಕಲ್ಪ ರೂಪವಾದುದು (Conceptual).)

**ವಿಶ್ವಂ ವೈಬ್ರಹ್ಮತನ್ಮಾತ್ರಂ ಸಂಸ್ಥಿತಂ ವಿಷ್ಣುಮಾಯಯಾ ।**
**ಈಶ್ವರೇಣ ಪರಿಚ್ಛಿನ್ನಂ ಕಾಲೇನಾವ್ಯಕ್ತಮೂರ್ತಿನಾ ॥೧೨॥**

ವಿಶ್ವಂ = ಈ ಪ್ರಪಂಚವು; ವೈ = ನಿಜವಾಗಿಯೂ; ಬ್ರಹ್ಮ ತನ್ಮಾತ್ರಂ = ತ್ರಿಗುಣಗಳಲ್ಲಿ ರಜೋಗುಣವನ್ನು ಅಧಿಷ್ಠಾನ ಮಾಡಿಕೊಂಡು ಚತುರ್ಮುಖನಲ್ಲಿ, ಬ್ರಹ್ಮನಾಮಕನಾದ ಪರಬ್ರಹ್ಮನಿಂದ ನಿರ್ಮಿತವಾದುದು; ವಿಷ್ಣು ಮಾಯಯಾ ಸಂಸ್ಥಿತಂ = ಸತ್ವಗುಣವನ್ನು ಅಧಿಷ್ಠಾನ ಮಾಡಿಕೊಂಡ ವಿಷ್ಣುನಾಮಕ ಪರಬ್ರಹ್ಮನ ಸಾಮರ್ಥ್ಯದಿಂದ ರಕ್ಷಿತವಾದುದು; ಅವ್ಯಕ್ತ ಮೂರ್ತಿನಾ = ಗುಣಗಳಲ್ಲಿ ಪ್ರವಿಷ್ಟನಾಗಿರುವುದು ಕಾಣದಂತಿರುವ; ಕಾಲೇನ = ಕಾಲಸ್ವರೂಪನಾದ; ಈಶ್ವರೇಣ = ತಮೋಗುಣವನ್ನು ಅಧಿಷ್ಠಾನ ಮಾಡಿಕೊಂಡ ರುದ್ರನಲ್ಲಿ ರುದ್ರನೆಂತಿರುವ ಅದೇ ಪರಬ್ರಹ್ಮನಿಂದ; ಪರಿಚ್ಛಿನ್ನಂ = ಸಾಹಾರವಾಗತಕ್ಕದ್ದು.

(ಬ್ರಹ್ಮನಲ್ಲಿದ್ದು ತಾನೇ ಸೃಷ್ಟಿ ಮಾಡುವುದನ್ನು ಮರೆಯಬಾರದೆಂದು ಚತುರ್ಮುಖ ಬ್ರಹ್ಮದೇವರಿಗೆ ಉಪದೇಶಮಾಡಿದುದನ್ನು ಹಿಂದೆಯೇ ಹೇಳಿದೆ. ಆದುದರಿಂದ ಮೇಲೆ ಹೇಳಿದಂತೆ ಅರ್ಥಮಾಡಬೇಕು. "ಬ್ರಹ್ಮತನ್ಮಾತ್ರಂ" ಎಂಬುದಕ್ಕೆ ಬ್ರಹ್ಮನಿಂದ ಅಧಿಷ್ಠಿತವಾಗಿ ಕಾರ್ಯ ರೂಪಕ್ಕೆ ಬರುವ ಪ್ರಾಕೃತ ಗುಣವೆಂದು ತಿಳಿಯಬೇಕು. "ವಿಷ್ಣು ಮಾಯಯಾ" ಎಂಬುದನ್ನು ಮೂರು ಕಡೆಗಳಲ್ಲಿಯೂ ಅನ್ವಯಿಸ ಬೇಕು).

**ಯಥೇದಾನೀಂ ತಥಾಚಾಗ್ರೇ ಪಶ್ಚಾದಪ್ಯೇತದೀದೃಶಂ ।**
**ಸರ್ಗೋನವ ವಿಧಸ್ತಸ್ಯ ಪ್ರಾಕೃತೋ ವೈಕೃತಶ್ಚಯಃ ॥೧೩॥**

ಏತತ್ = ಕಾಣುವ ಈ ವಿಶ್ವವು; ಇದಾನೀಂ ಯಥಾ = ಈಗ ಹೇಗೆ ಸೃಷ್ಟಿಯಾಗಿರುವುದೋ; ಅಗ್ರೇ ಚ = ಹಿಂದಿನ ಬ್ರಹ್ಮಕಲ್ಪದಲ್ಲಿಯೂ; ತಥಾ = ಅದೇ ರೀತಿಯದಾಗಿತ್ತು; ಪಶ್ಚಾತ್ ಅಪಿ = ಮುಂದಿನ ಬ್ರಹ್ಮ ಕಲ್ಪದಲ್ಲಿಯೂ; ಈ ದೃಶಂ = ಇದೇ ರೀತಿಯಾಗಿ ಸೃಷ್ಟಿಯಾಗುವುದು; ಯಃ ತಸ್ಯಸರ್ಗಃ = ಅದರ ಸೃಷ್ಟಿ ಎನ್ನುವುದು ಯಾವುದೋ ಅದು; ಪ್ರಾಕೃತಃ ವೈಕೃತಃ = ಪ್ರಾಕೃತ ಮಿಶ್ರಣಗಳಿಂದ ಮತ್ತು ಪ್ರಾಕೃತ ವಸ್ತು ವಿಕಾರಗಳಿಂದ ಎಂಬುದಾಗಿರುವುದು; ಮತ್ತು; ನವವಿಧಃ = ಒಂಭತ್ತು ರೀತಿಯದಾಗಿರುವುದು.

(ಪ್ರಕೃತಿ ವಸ್ತುಗಳ ಸಂಯೋಜನೆ ಮತ್ತು ವಿಕಾರಗಳಿಂದ ಸೃಷ್ಟಿ ಕಾರ್ಯವು ನಡೆಯುವುದೆಂದೂ ಕಲ್ಪ ಕಲ್ಪಗಳಲ್ಲಿಯೂ ಏಕ ಪ್ರಕಾರವಾಗಿರುವುದೆಂದೂ ಹೇಳಿರುವುದರಿಂದ– (೧) ಜಗತ್ತು ವಸ್ತುತಃ ಸತ್ಯವೇ ಹೊರತು ಭ್ರಮಾತ್ಮಕವಾದುದಲ್ಲ; (೨) ನಿತ್ಯಾನಂದ ಸ್ವರೂಪನಾದ ಪರಬ್ರಹ್ಮನು ಹೀಗೆ ಒಂದೇ ರೀತಿಯಲ್ಲಿ ಸೃಷ್ಟಿಸ್ಥಿತ್ಯಾದಿಗಳನ್ನು ನಡೆಸಿ ಅದರಿಂದ ಪ್ರಯೋಜನ ಹೊಂದಬೇಕಾಗಿಲ್ಲ; (೩) ಸೃಷ್ಟ್ಯಾದಿಗಳಿಂದ ಉಪಕೃತರಗುವ ಜೀವರಾಶಿಯು ಆ ಪರಬ್ರಹ್ಮನನ್ನಾಶ್ರಯಿಸಿದ ಭಿನ್ನ

ಚೇತನರೇ ಹೊರತು ಬ್ರಹ್ಮನೇ ಜಗತ್ತಾಗಿ, ಜೀವರಾಗಿ ಆಡುವನೆಂಬ ಮಾತು ಅರ್ಥವಿಹೀನವಾದುದು.

ಪ್ರಾಕೃತ ಸೃಷ್ಟಿಯೆಂಬುದು ಬ್ರಹ್ಮಾಂಡದ ಸೃಷ್ಟಿಗೆ ಪೂರ್ವದಲ್ಲಿ ಆದುದು. ಬ್ರಹ್ಮಾಂಡದೊಳಗೆ ಆದುದು ವೈಕೃತ ಸೃಷ್ಟಿ).

ಕಾಲದ್ರವ್ಯ ಗುಣೈರಸ್ಯ ತ್ರಿವಿಧಃ ಪ್ರತಿಸಂಕ್ರಮಃ ।
ಆದ್ಯಸ್ತು ಮಹತಸ್ಸರ್ಗೋ ಗುಣವೈಷಮ್ಯಮಾತ್ಮನಃ ॥೧೪॥

ಕಾಲದ್ರವ್ಯ ಗುಣೈಃ = ಕಾಲನಾಮಕ ಪರಮಾತ್ಮನ, ಮೂಲಪ್ರಕೃತಿಯ ಮತ್ತು ಅದರಲ್ಲಡಗಿದ ಸತ್ವಾದಿಗುಣಗಳ ದೆಸೆಯಿಂದ; ಅಸ್ಯ = ಈ ವಿಶ್ವದ; ಸಂಕ್ರಮಃ = ಸೃಷ್ಟಿಯ ಪ್ರಗತಿಯು; ತ್ರಿವಿಧಃ = ಮೂರು ಬಗೆಯಾದುದು; ಈ ಸೃಷ್ಟಿ ಕ್ರಮದಲ್ಲಿ; ಆದ್ಯಃತು = ಮೊದಲನೆಯದು ನಿಶ್ಚಿತವಾಗಿ; ಆತ್ಮನಃ ಗುಣ ವೈಷಮ್ಯಂ = ಪರಮಾತ್ಮನ ದೆಸೆಯಿಂದಾದ ಗುಣ ವೈಷಮ್ಯದ ಫಲವಾದ; ಮಹತಃ ಸರ್ಗಃ = ಮಹತ್ ತತ್ವದ ಸೃಷ್ಟಿಯು.

(ಸತ್ವ ರಜಸ್ತಮೋಗುಣಗಳನ್ನು ತನ್ನಲ್ಲಿ ಅಡಗಿಸಿಟ್ಟು ಕೊಂಡಿರುವ ಮೂಲ ಪ್ರಕೃತಿಯು ಮೂಲತಮವೆಂದೂ, ಶ್ರೀದೇವಿಯಿಂದಲೇ ಅಭಿಮನ್ಯಮಾನವಾದ ಶುದ್ಧ ಮೂಲ ಸತ್ವವು ಬೇರೆಯೆಂದೂ, ವಿಷ್ಣುರಹಸ್ಯ ಪುರಾಣದಿಂದ ತಿಳಿದುಬರುತ್ತದೆ. ಕಾಲನಾಮಕ ಭಗವಂತನ ಇಚ್ಛೆಯಿಂದ ಮೂಲತಮದ ಮೇಲೆ ಮೂಲ ಸತ್ವದ ಪರಿಣಾಮವಾಗುವವರೆಗೆ ಮೂಲತಮದೊಳಗಿನ ಸತ್ವ ರಜ–ತಮ ಗುಣಗಳು ಕಾರ್ಯಕಾರಿಗಳಾಗದೆ ಜಡಗಳಾಗಿಯೇ ಇರುತ್ತವೆ. ಇದಕ್ಕೆ ಸಾಮ್ಯಸ್ಥಿತಿ ಎಂದು ಹೆಸರು. ಸೃಷ್ಟಿಯ ಕಾಲ ಒದಗಿದಾಗ ಮೂಲ ಸತ್ವಾಭಿಮಾನಿಯಾದ ಶ್ರೀದೇವಿಯು, ತನ್ನದೇ ಆದ ದುರ್ಗಾರೂಪದಿಂದ ಮೂಲತಮದ ಅಭಿಮಾನಿಯಾಗಿದ್ದು, ಆ ತನ್ನ ಎರಡು ರೂಪಗಳಿಂದ ಒಂದು ಹಿಡಿ ಮೂಲ ಸತ್ವವನ್ನು ಒಂದು ಹಿಡಿ ಮೂಲ ತಮದೊಂದಿಗೆ ಬೆರೆಸಿ ಕುಲಕಾಡಿಸುವಳು. ಆಗ ಮೂಲ ತಮದೊಳಗಿನ ಹಳದಿ ವರ್ಣದ ಸತ್ವವೂ, ರಕ್ತವರ್ಣದ ರಜವೂ, ನೀಲವರ್ಣದ ತಮವೂ, ಜಾಗ್ರತವಾಗಿ ಮಿಶ್ರಿತವಾಗಿ ಕಾಣಿಸಿಕೊಳ್ಳುವುವು. ಈ ಮಿಶ್ರಣಕ್ಕೆ "ಶಬಲ"ವೆಂದು ಹೆಸರು. ಅದರೊಳಗಿನ ಗುಣಗಳು ಮುಂದೆ ಸೃಷ್ಟಿಯಲ್ಲಿ ಉಪಯೋಗಕ್ಕೆ ಬರಬೇಕಾದರೆ ಅವು ಒಂದರೊಡನೊಂದು ಕೂಡಿಕೊಂಡು ತಮ್ಮ ಪ್ರತ್ಯೇಕತೆಯನ್ನೂ ಉಳಿಸಿಕೊಂಡಿರಬೇಕು. ಶ್ರೀದೇವಿಯು ಹೊಸದಾಗಿ ವಿಂಗಡವಾದ ಸತ್ವಗುಣಕ್ಕೆ ಯಜಮಾನಿಯಾಗಿ ಅದನ್ನು ಪ್ರವೇಶಿಸುವಳು; ತನ್ನ "ಭೂ"ಎಂಬ ಇನ್ನೊಂದು ರೂಪದಿಂದ ರಜೋಗುಣವನ್ನು ಹೊಂದುವಳು; ದುರ್ಗಾ ರೂಪದಿಂದ ನೀಲವರ್ಣದ ತಮೋಗುಣಕ್ಕೆ ಅಧಿ

ದೇವತೆಯಾಗುವಳು. ಈ ಮೂರು ರೂಪಗಳಿಂದ ಬೇಕು ಬೇಕಾದ ಪ್ರಮಾಣಗಳಲ್ಲಿ ಆ ಮೂರು ಗುಣಗಳ ಮಿಶ್ರಣಗಳನ್ನು ಮಾಡಿ, ಮೂರು ಗುಣರಾಶಿಗಳನ್ನು ಪ್ರತ್ಯೇಕಿಸುವಳು. ಸತ್ವ ಪ್ರಧಾನವಾದುದು ಸತ್ವಗುಣ; ರಜ ಪ್ರಧಾನವಾದುದು ರಜೋಗುಣ; ತಮ ಪ್ರಧಾನವಾದುದು ತಮೋಗುಣ. ಆ ಮೂರು ಗುಣಗಳಲ್ಲಿ ಅವುಗಳ ಕಾರ್ಯಾಚರಣೆಗಳಿಗೆ ತಕ್ಕಂತೆ ಶ್ರೀದೇವಿಯು ತನ್ನ ಮೂರು ರೂಪಗಳಿಂದ ಪ್ರವೇಶ ಮಾಡಿದುದು, ಆ ಶ್ರೀದೇವಿಯ ಮೂರು ರೂಪಗಳಿಗೆ ಬಲಪ್ರದವಾಗಿ ಅವುಗಳಂತೆ ತನ್ನ ಸಂಕಲ್ಪರೂಪವಾಗಿ ಶ್ರೀಹರಿಯು ಮೂರು ರೂಪಗಳನ್ನು ತೋರಿ ನಿಂತುದು– ಇವು "ತ್ರಿವಿಧಃ ಪ್ರತಿಸಂಕ್ರಮಃ" ಎಂಬುದರ ಅರ್ಥ.

ಮುಂದೆ ಮಹತ್ ತತ್ವದ ಸೃಷ್ಟಿಯಾದಾಗಲೂ ಅದರಲ್ಲಿನ ಮಿಶ್ರಗಳಿಗೆ ಅನುಗುಣವಾಗಿ ವಿವಿಧ ರೂಪಗಳನ್ನು ಪ್ರಕಟಿಸಿ ಅವುಗಳಲ್ಲಿ ಪ್ರೇರಕರಾಗಿ ಪ್ರತ್ಯೇಕ ಪ್ರತ್ಯೇಕವಾಗಿಯೂ, ಮಹತ್ ತತ್ವದಲ್ಲಿ ಅದೇ ಹೆಸರಿನ ಒಂದೊಂದೇ ರೂಪದಿಂದಲೂ ನಿಂತ ಶ್ರೀದೇವಿ, ಆ ಶ್ರೀದೇವಿಯಲ್ಲಿ ಶ್ರೀದೇವಿಯಂತೆ ನಿಂತ ಪರಮಾತ್ಮ ಈ ಬಗೆಯನ್ನು ಚಿಂತಿಸಬೇಕು. ಮುಂದಿನ ಅಹಂಕಾರ ತತ್ವ ಮುಂತಾದವುಗಳ ವಿಷಯದಲ್ಲಿಯೂ ಹೀಗೆಯೇ ಲಕ್ಷ್ಮೀನಾರಾಯಣರ, ಅವರ ಅಧೀನರಾದ ಬ್ರಹ್ಮಾದಿಗಳ ರೂಪರೂಪಾಂತರಗಳನ್ನೂ ಚಿಂತನೆಗೆ ತಂದು ಕೊಳ್ಳಬೇಕು. "ಆತ್ಮನಃ ಗುಣವೈಷಮ್ಯಂ" ಎಂಬ ಮಾತಿನ ಅರ್ಥ, ಮೇಲಿನ ವಿವರಣೆಯಲ್ಲಿ ಅಡಗಿದೆ. "ಆತ್ಮ" ಎಂಬ ಶಬ್ದವು ಪ್ರಕೃತಿ, ಚೇತನರು, ಶ್ರೀದೇವಿ ಮತ್ತು ಪರಮಾತ್ಮ– ಈ ನಾಲ್ಕರ ವಿಷಯದಲ್ಲಿಯೂ ಅನ್ವಯಿಸಬೇಕಾದುದು. ಪ್ರಕೃತಿಯ ರೂಪಾಂತರಗಳು ಗುಣವೈಷಮ್ಯ, ಗುಣಗಳ ಪ್ರಾಕೃತ ಮಿಶ್ರಣ ಮತ್ತು ಗುಣಗಳ ವಿಕಾರಗಳಿಂದ ಆಗತಕ್ಕವು. ಶ್ರೀಶಬ್ರಹ್ಮಾದಿಗಳ ರೂಪಾಂತರಗಳು ನಿರ್ವಿಕಾರವಾದುವು.

ಶಬಲದಿಂದ ಪ್ರತ್ಯೇಕಿಸಿ ತೆಗೆದುಕೊಂಡುದು. ೪ ಭಾಗಸತ್ವ, ೨ ಭಾಗರಜ ಮತ್ತು ೧ ಭಾಗ ತಮ, ಇವು ಬಳಕೆಗೆ ಬರುವುದು ಸಮ್ಮಿಶ್ರಣದಿಂದ. ಸತ್ವಗುಣ ಶುದ್ಧವಾಗಿ ಹಾಗೆಯೇ ಕಾರ್ಯಕಾರಿಯಾಗುವುದು. ೧೦೦೦ ಸತ್ವ+೧೦೦ರಜ+೧ತಮ ಬೆರೆತುದು ರಜೋಗುಣ ರಾಶಿಯಾಗುವುದು. ೧೧೦ಸತ್ವ+ ೧ರಜ+೧೧ತಮ ತಮೋಗುಣ ರಾಶಿಯಾಗುವುದು ಈ ಮೂರು ರಾಶಿಗಳ ಬೆರಕೆಯಿಂದ ಮುಂದಿನ ಸೃಷ್ಟಿ ಇವುಗಳ ಮೊತ್ತದಿಂದ ಸೃಷ್ಟಿಯ ಬಹಿರಾವರಣಗಳಲ್ಲಿ ಮೊದಲನೆಯದಾದ ಅವ್ಯಕ್ತ ಆವರಣದ ಕಲ್ಪನೆ. ಇದನ್ನು ಸತ್ವಾವರಣ, ರಜ ಆವರಣ, ತಮ ಆವರಣಗಳೆಂದು ಮೂರು ವಿಭಾಗಗಳಾಗಿ ಗ್ರಹಿಸುವುದೂ ಉಂಟು.

೧೦೦ಸತ್ವ+೧೦ರಜ (ರಜೋರಾಶಿಯಿಂದ) +೧ತಮ (ತಮೋ ರಾಶಿಯಿಂದ)

ಬೆರಕೆಯಾಗಿರುವುದು ಮಹತ್ ತತ್ವಾವರಣ. ಮುಂದಿನ ಸೃಷ್ಟಿಗೆ ಮಹತ್ ತತ್ವವೇ ಸತ್ವಗುಣವೆನಿಸುವುದು.)

**ದ್ವಿತೀಯ ಸ್ತ್ವಹಮಸ್ತತ್ರ ದ್ರವ್ಯಜ್ಞಾನ ಕ್ರಿಯಾದಯಃ ।**
**ಭೂತಸರ್ಗಸ್ತೃತೀಯಸ್ತು ತನ್ಮಾತ್ರ ದ್ರವ್ಯ ಶಕ್ತಿಮಾನ್ ॥೧೫॥**

ದ್ವಿತೀಯಃ ತು = ಎರಡನೆಯದಾದರೋ; ಅಹಮಃ = ಅಹಂಕಾರ ತತ್ವ ಹಾಗೂ ಅಹಂಕಾರ ಆವರಣದ ಸೃಷ್ಟಿ; ತತ್ರ = ಅದರಲ್ಲಿ; ದ್ರವ್ಯ, ಜ್ಞಾನ, ಕ್ರಿಯಾ ಆದಯಃ = ದ್ರವ್ಯಗಳ, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ, ಹಾಗೂ ಮನಸ್ಸು ಮತ್ತು ಮನೋಭಿಮಾನಿಗಳ ಸೃಷ್ಟಿ; ತೃತೀಯಃತು = ಮೂರನೆಯಾದಾದರೋ; ತನ್ಮಾತ್ರ, ದ್ರವ್ಯಶಕ್ತಿಮಾನ್ = ಭೌತವಸ್ತುಗಳಿಗೆ ಕಾರಣಗಳಾದ ತನ್ಮಾತ್ರಗಳನ್ನೂ, ಭೌತ ವಸ್ತುಗಳನ್ನೂ ಸೃಷ್ಟಿಸಬಲ್ಲ; ಭೂತಸರ್ಗಃ = ಭೌತಿಕಸೃಷ್ಟಿ.

(೧೦೦ಮಹತ್‌ಸತ್ವ+೧೦ಮೂಲರಜ+೧ಮೂಲತಮ– ಇವುಗಳ ಬೆರಕೆಯಿಂದ ಆದುದು ಅಹಂಕಾರತತ್ವ. ಮಹತ್‌ತತ್ವದ ದೃಷ್ಟಿಯಿಂದ ಇದು ತಾಮಸವೆನಿಸುವುದು. ಅಹಂಕಾರ ತತ್ವವೂ ತಮಃ ಪ್ರಧಾನ, ರಜಃ ಪ್ರಧಾನ ಮತ್ತು ಸತ್ವ ಪ್ರಧಾನವೆಂದು ಮೂರು ಬಗೆಯಾಗುವುದು. (೧೦೦೦ ಅಹಂ+೧೦೦ರ+೧೦ತ = ವೈಕಾರಿಕ ಅಹಂಕಾರ; ೧೦೦ ಅಹಂ+೧೦ರ+೧ತ= ರಾಜಸ ಅಥವ ತೈಜಸ ಅಹಂಕಾರ) ೧೦೦ಅ+೧ರ+೧೦ತ=ತಾಮಸ ಅಹಂಕಾರ. ಇದರಲ್ಲಿ ಸತ್ವರಜಗಳು ಕಡಿಮೆಯಾಗಿ ತಮಸ್ತತ್ವ ಹೆಚ್ಚಾಗಿದೆ. ಮೂರನೆಯದಾದ ತಾಮಸಾಹಂಕಾರದಿಂದ ತನ್ಮಾತ್ರಗಳ ಸೃಷ್ಟಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ– ಇವು ತನ್ಮಾತ್ರಗಳು. ಶಬ್ದ ಪ್ರಧಾನವಾದ ಈ ಐದರ ಪ್ರಾಕೃತ ಮಿಶ್ರಣವು ಆಕಾಶ ತತ್ವ; ಇದರಂತೆ ಸ್ಪರ್ಶ ಪ್ರಧಾನವಾದುದು ವಾಯುತತ್ವ; ರೂಪ ಪ್ರಧಾನವಾದುದು ತೇಜಸ್ತತ್ವ; ರಸಪ್ರಧಾನವಾದುದು ಅಪ್‌ತತ್ವ; ಗಂಧಪ್ರಧಾನವಾದುದು ಪೃಥ್ವೀತತ್ವ– ಇವು ಮೂರನೇ ಹಂತದ ಸೃಷ್ಟಿಗೆ ಸೇರಿದುವು.

ಇಲ್ಲಿಯವರೆಗಿನ ಸೃಷ್ಟಿಗೆ ಪ್ರಾಕೃತ ಸೃಷ್ಟಿ ಎಂದು ಹೆಸರು. ಇಲ್ಲಿಂದ ಮುಂದೆ ನಡೆಯುವುದು ವೈಕೃತ ಸೃಷ್ಟಿ ಅಥವ ಭೌತತತ್ವಗಳ ವಿಕಾರಗಳಿಂದ ಆಗುವುದು. ಈ ವಿಕಾರವೆನ್ನುವುದು ಈಗಿನ ವಿಜ್ಞಾನಿಗಳು ಹೇಳುವ ಪರಮಾಣು ಪ್ರಪಂಚಕ್ಕೆ ಸೇರಿದುದು. ಮೂಲ ಭೌತವಸ್ತುಗಳ ರಾಸಾಯನಿಕ ಸಂಯೋಗ ಅಥವ ರಜೋ ಗುಣದ ಪಲ್ಲಟಗಳಿಂದ ಆಗುವ ವ್ಯತ್ಯಸ್ತ ಗುಣಗಳ ಆವಿಷ್ಕಾರ. (exchange of electrons ಇದ್ದ ಹಾಗೆ) ಈ ರೀತಿಯಾಗಿ ಸೃಷ್ಟಿಯಾದುದು ಬ್ರಹ್ಮಾಂಡ

ಖರ್ಪರವಾದುದರಿಂದ ಇದು ವೈಕೃತ ಸೃಷ್ಟಿಯಲ್ಲಿ ಸೇರುವುದು. ಆದುದರಿಂದಲೇ ಆವರಣಗಳ ಮಾತನ್ನೆತ್ತಿಕೊಂಡಾಗ ನವಾವರಣ ಎನ್ನುವುದು. ಇವು– (೧) ಅಪ್, (೨) ತೇಜ, (೩) ವಾಯು, (೪) ಆಕಾಶ, (೫) ಅಹಂ, (೬) ಮಹತ್, (೭) ತಮ, (೮) ರಜ, (೯) ಸತ್ವ. ಭೂ ಆವರಣ (ಬ್ರಹ್ಮಾಂಡ)ವನ್ನೂ ಕೂಡಿಸಿದರೆ, ವಿಶ್ವಕ್ಕೆ ದಶ ಆವರಣಗಳು.)

**ಚತುರ್ಥ ಐಂದ್ರಿಯಸ್ಸರ್ಗೋಯಸ್ತು ಜ್ಞಾನ ಕ್ರಿಯಾತ್ಮಕಃ ।**
**ವೈಕಾರಿಕೋದೇವಸರ್ಗಃ ಪಂಚಮೋಯನ್ಮಯಂಮನಃ ॥೧೬॥**

ಯಃತು = ಯಾವುದು; ಜ್ಞಾನ ಕ್ರಿಯಾ ಆತ್ಮಕಃ = ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಶಕ್ತಿಗಳ ಆವಿಷ್ಕಾರ ರೂಪವಾದುದೋ ಅದು; ಚತುರ್ಥಃ = ನಾಲ್ಕನೆಯದಾದ; ಐಂದ್ರಿಯಃ ಸರ್ಗಃ = ಇಂದ್ರಿಯಗಳ ಸೃಷ್ಟಿಯ ಹಂತ; ಮನಃ = ಮನಸ್ಸು; ಯನ್ಮಯಂ = ಯಾವ ಉಪಾದಾನಕಾರಣದಿಂದ ಆಗಿರುವುದೋ ಅದು; ಪಂಚಮಃ = ಐದನೆಯದಾದ; ವೈಕಾರಿಕಃ = ವೈಕಾರಿಕವೆಂಬ; ದೇವಸರ್ಗಃ = ದೇವತಾ ಶರೀರಗಳ ಸೃಷ್ಟಿಯು.

(ಸತ್ವಗುಣವು ಇದ್ದುದನ್ನು ಇದ್ದಂತೆಯೇ ತಿಳಿಯಲು ಸಹಕಾರಿಯಾದುದು. ತಮೋಗುಣವು ತಿಳಿವಳಿಕೆಯನ್ನು ವಿಕಾರಗೊಳಿಸುವುದು. ಈ ಎರಡರ ನಡುವೆ ಕ್ರಿಯಾತ್ಮಕವಾಗಿ ರಜೋಗುಣದ ಸಂಬಂಧ. ತಮೋಗುಣದ ಅಂಶವು ಹೆಚ್ಚಾದಂತೆಲ್ಲಾ ತಿಳಿವಳಿಕೆಗೆ ಅಡ್ಡಿಯೂ ಹೆಚ್ಚುತ್ತಾ ಹೋಗುವುದು. ಮಹತ್ತತ್ವವು ಕೇವಲ ಸತ್ವಾಧಿಕವಾದುದರಿಂದ ಅಲ್ಲಿ ತಮೋಗುಣ ಅಡ್ಡಿಯಾಗಿ ನಿಲ್ಲುವುದಿಲ್ಲ. ಅಹಂಕಾರ ತತ್ವದಲ್ಲಿ ಮಹತ್ತತ್ವದ ಸತ್ವಾಂಶವಿದ್ದು ತಮೋಗುಣದ ಅಂಶ ಸ್ವಲ್ಪ ಹೆಚ್ಚಾಗುವುದರಿಂದ ತಿಳಿವಳಿಕೆಯ ವಿಕಾರಕ್ಕೆ ಅವಕಾಶ ಉಂಟು. ಆದರೆ ಅಹಂತತ್ವಾಭಿಮಾನಿಗಳಾದ ರುದ್ರದೇವರಿಗೆ ಅದು ಅಡ್ಡಿಯಾಗದೆ ಮುಂದಿನ ತತ್ವಗಳ ಸೃಷ್ಟಿಗೆ ಸಹಕಾರಿಯಾಗಿ ಮಾತ್ರ ಇರುವುದು. ವೈಕಾರಿಕ ಅಹಂಕಾರ ಶರೀರಿಗಳಾದ ರುದ್ರದೇವರ ಅಧೀನ ದೇವತೆಗಳೂ ಮನ ಆದಿಗಳ ಮೇಲೆ ಯಾಜಮಾನ್ಯ ಹೊಂದಿರುವರೇ ಹೊರತು ತಾವೇ ವಿಕಾರಕ್ಕೆ ಒಳಗಾಗುವುದಿಲ್ಲ. ಆದರೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿ ರಜೋಗುಣವು ಸತ್ವಗುಣಕ್ಕಿಂತ ಹೆಚ್ಚಾಗಿ ತಮೋಗುಣದ ಕಡೆಗೆ ಕಾರ್ಯೋನ್ಮುಖವಾಗಿರುವುದರಿಂದ ಅಲ್ಲಿ ತಮೋ ಗುಣದ ಅಡ್ಡಿ ಪ್ರಾರಂಭವಾಗುವುದು. ತಾಮಸಾಹಂಕಾರದ ಭೌತ ಸೃಷ್ಟಿಯಲ್ಲಿ ಅದು ಇನ್ನೂ ಪ್ರಬಲವಾಗುವುದು.)

**ಷಷ್ಠಸ್ತು ತಾಮಸಃ ಸರ್ಗೋಯಸ್ತ್ವಬುದ್ಧಿಕೃತಃ ಪ್ರಭೋ ।**
**ಷಡಿಮೇ ಪ್ರಾಕೃತಾಃ ಸರ್ಗಾವೈಕೃತಾನಪಿ ಮೇಶ್ರುಣು ॥೧೭॥**

ಪ್ರಭೋ ಬುದ್ಧಿವಂತನಾದ ವಿದುರಾ; ಯಃತು ಯಾವುದು; ಅಬುದ್ಧಿಕೃತಃ ಆಕಾರವಾಚ್ಯನಾದ ಪರಮಾತ್ಮನ ಸ್ಮರಣ ಪೂರ್ವಕವಾಗಿ, ಆಬುದ್ಧಿ ಅಥವ ಬುದ್ಧಿಮಾಂದ್ಯಕ್ಕೆ ಕಾರಣವಾಗುವ ಆವಿದ್ಯೆಯಿಂದಾದುದೋ; ಅಂತಹ; ತಾಮಸಃ ಸರ್ಗಃ ತಮ, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ ಎಂಬ ಪಂಚ ಪರ್ವಾತ್ಮಕವಾದ ತಮೋಗುಣದ ಸೃಷ್ಟಿಯು, ಯಾವುದೋ; ತು ಅದೇ; ಷಷ್ಠಃ ಸರ್ಗಃ ಆರನೆಯ ಹಂತದ ಸೃಷ್ಟಿಯು.

(ವೈಕಾರಿಕ ಅಂಹಕಾರತತ್ತ್ವದಿಂದ ದೇವತಾ ಶರೀರಗಳೂ ಮನಸ್ಸೂ ಸೃಷ್ಟವಾದಂತೆ, ತೈಜಸಾಹಂಕಾರದಿಂದ ಋಷ್ಯಾದಿಗಳ ಸೂಕ್ಷ್ಮ ಶರೀರಗಳು ಸೃಷ್ಟವಾದಂತೆ, ತಾಮಸಾಹಂಕಾರದಿಂದ ತಾಮಸ ತತ್ತ್ವಾಭಿಮಾನಿಗಳ ಸೂಕ್ಷ್ಮ ಶರೀರಗಳ ಸೃಷ್ಟಿಯು, ಇದು ಆರನೆಯ ಅವಿದ್ಯಾ ಸೃಷ್ಟಿಯ ವಿಚಾರವಾಗಿದೆ.)

ರಜೋಭಾಜೋಭಗವತೋ ಲೀಲೇಯಂ ಹರಿಮೇಧಸಃ ।
ಸಪ್ತಮೋಮುಖ್ಯ ಸರ್ಗಸ್ತು ಷಡ್ವಿಧಸ್ತಸ್ಥುಷಾಂಚಯಃ ॥೧೮॥

ಇಯಂ = ಈ ಪ್ರಾಕೃತ ವೈಕೃತ ಸೃಷ್ಟಿಯು; ಹರಿಮೇಧಸಃ = ಸೂರ್ಯನಂತೆ ಸ್ವ ಪ್ರಕಾಶವೂ ಸ್ವತಂತ್ರವೂ ಆದ ಜ್ಞಾನ ಸ್ವರೂಪಿಯಾದ; ರಜೋಭಾಜಃ = ರಜೋಗುಣದಲ್ಲಿ ಪ್ರವಿಷ್ಟನಾಗಿ ಆ ಗುಣವನ್ನು ಸೃಷ್ಟಿಕಾರ್ಯದಲ್ಲಿ ಬಳಸಿದ; ಭಗವತಃ = ಸದಾನಂದ ಸಂಪೂರ್ಣನಾದ ಪರಮಾತ್ಮನ; ಲೀಲಾ = ಆಟದಂತೆ ನಡೆಯುವ ಕ್ರಿಯೆಯು; ಯಃಚ ತಸ್ಥುಷಾಂ ಸರ್ಗಃ = ಯಾವುದು ಸ್ಥಾವರ ಜೀವ ಸೃಷ್ಟಿಯೋ ಅದು; ಷಡ್ವಿಧಃ = ಆರುಬಗೆಯಾಗಿ; ಮುಖ್ಯಃ = ಮುಖ್ಯ ಪ್ರಯೋಜನವುಳ್ಳ; ಸಪ್ತಮಃತು = ಏಳನೆಯ ಸೃಷ್ಟಿಯೇ ಆಗಿದೆ.

(ಇಲ್ಲಿ ರಜೋಗುಣದ ಪ್ರಾಮುಖ್ಯತೆಯು ಪ್ರಶಂಶಿಸಿತವಾಗಿದೆ. ವಿಶ್ವದ ಚಟುವಟಿಕೆಗಳಲ್ಲಿ ರಜೋಗುಣದ ಪಾತ್ರವು ಬಹುಮುಖ್ಯವಾದುದು. ಸ್ಥೂಲ ವಸ್ತುಗಳ ಸೃಷ್ಟಿಗೆ ತಮೋಗುಣವು ಬೇಕು. ಅವುಗಳ ಸ್ಥಿತಿಗೆ ಸತ್ವಗುಣಬೇಕು. ಸ್ಥೂಲವಸ್ತುಗಳಿಂದ ಕಾರ್ಯ ನಿರ್ವಾಹವಾಗಬೇಕಾದರೆ ಸತ್ವಗುಣದಂದ ತನ್ನ ಸ್ತಿತಿಯನ್ನು ಪಡೆದ ರಜೋಗುಣವು ಅದಕ್ಕೆ ಪ್ರೇರಕವಾಗಬೇಕು.

ಸೃಷ್ಟಿರಹಸ್ಯವು ವೈಕುಂಠಪತಿಯ ನೆಲೆಯಂತೆ, ಪಂಚಮಹಾಭೂತಗಳು(೫), ಬ್ರಹ್ಮಾಂಡ ಕಟಾಹ ಮತ್ತು ಮಾನವಬುದ್ಧಿ ಎಂಬ ಏಳು ಹೊರ ಕೋಟೆಗಳಿಂದಲೂ, ತಾಮಸ-ತೈಜಸ-ವೈಕಾರಿಕ ಅಹಂ ತತ್ವಗಳು, ಮೂಲ ಅಹಂಕಾರತತ್ವ, ಮಹತ್ತತ್ವ, ಅವ್ಯಕ್ತ ತತ್ವ ಮತ್ತು ಮೂಲ ಪ್ರಕೃತಿ ಎಂಬ ಏಳು ಒಳಕೋಟೆಗಳಿಂದಲೂ ಆವೃತಗಿದೆ.

ಮೂಲ ಪ್ರಕೃತಿಯ ಅಂತರಂಗದಲ್ಲಿ ಮಾಯಾರಮಣನ ದಿವ್ಯ ಮಂದಿರವಿದೆ. ಹೀಗಿರುವಾಗ, ಪಂಚಮಹಾಭೂತಗಳಲ್ಲಿ ಆಕಾಶ ತತ್ತ್ವದ ವಿಚಾರವನ್ನೇ ವಿಶ್ಲೇಷಿಸಿ ತಿಳಿಯಲಾರದ, ತಮ್ಮ ಬುದ್ಧಿಯ ನೆಲೆಯನ್ನೇ ಅರಿಯದ, ಆಧುನಿಕ ವಿಜ್ಞಾನಿಗಳು ಸೃಷ್ಟಿಯ ರಹಸ್ಯವನ್ನೆಲ್ಲಾ ಭೇದಿಸಿ ತಿಳಿಯಬಲ್ಲರೇ! ಅವರು ವಿಶ್ವಶಕ್ತಿಗಳೆಂದು ಗುರುತ್ವಾಕರ್ಷಣೆ, ವಿದ್ಯುದಾಕರ್ಷಣೆ, ಬೆಳಕಿನ ವಿಕಿರಣ, ಪರಮಾಣು ಬೀಜ ವಿದಳನ, ಉಷ್ಣಶಕ್ತಿ, ಚಲನಾಂತರ ಶಕ್ತಿ ಇತ್ಯಾದಿಯಾಗಿ ಹೇಳಿ, ಇವುಗಳಿಗೆ ಮೂಲವಾದ ಏಕೈಕ ಶಕ್ತಿಯಾವುದು ಎಂದು ತಿಳಿಯದೆ ಪೇಚಾಡುತ್ತಿದ್ದಾರೆ. ಏಳೇಳುಕೋಟೆಗಳನ್ನು ವಿಭಜಿಸಿ, ರಜೋಗುಣದ ಕಾರ್ಯವನ್ನು ಪ್ರಮುಖವಾಗಿ ಮಾಡಿರುವ ಭಗವಂತನ ದಿವ್ಯಶಕ್ತಿಯನ್ನರಿಯದೆ ಬೇರೆ ಏನನ್ನೂ ತಿಳಿಯಲಾಗುವುದಿಲ್ಲ. ಸೃಷ್ಟಿವೈಚಿತ್ರ್ಯದಲ್ಲಿ, ಜನರ ಜೀವನದಲ್ಲಿ ರಜೋಗುಣದ ಆಟ ಬಹಳ. ಪರೋಪಕಾರಿಗಳಾದ ಸ್ಥಾವರ ಜೀವಿಗಳ ಸೃಷ್ಟಿಯು ಜಂಗಮ ಜೀವಿಗಳಿಗೆ ಜೀವಾಧಾರವಾದುದರಿಂದ ಅದು ಮುಖ್ಯಸೃಷ್ಟಿ ಎನಿಸಿದೆ.)

**ವನಸ್ಪತ್ಯೋಷಧಿಲತಾತ್ವಕ್‌ಸಾರಾ ವೀರುಧೋದ್ರುಮಾಃ ।**
**ಉತ್ಸ್ರೋತಸಸ್ತಮಃ ಪ್ರಾಯಾ ಅಂತಸ್ಪರ್ಶಾ ವಿಶೋಷಿಣಃ ॥೧೯॥**

ವನಸ್ಪತಿ = ಹೂಬಿಡದೆ ಫಲಕೊಡುವ ಸಸ್ಯವರ್ಗ; ಓಷಧಿ = ಪುಷ್ಪಿತಗಳಾಗಿ ಆಹಾರಯೋಗ್ಯ ಫಲಗಳನ್ನು ಕೊಡುವವು; ಲತಾಃ = ಪರಾಶ್ರಯ ಹೊಂದಿ ಬೆಳೆಯುವ ಬಳ್ಳಿಗಳು; ತ್ವಕ್‌ಸಾರಾಃ = ಗಟ್ಟಿಯಾದ ತೊಗಟೆಗಳೇ ಪ್ರಧಾನವಾಗಿ ಉಳ್ಳವು; ವೀರುಧಃ = ಪೊದರುಗಳು; ದ್ರುಮಾಃ = ದೊಡ್ಡ ದೊಡ್ಡ ಮರಗಳು– ಇವು ಸ್ಥಾವರ ಶರೀರಿಗಳಾಗಿ ಹುಟ್ಟುವುವು; ಉತ್ಸ್ರೋತಸಃ = ಇವುಗಳ ಬೆಳವಣಿಗೆಯು ಮೇಲ್ಮುಖವಾಗಿ; ತಮಃ ಪ್ರಾಯಾಃ = ಬಹಳ ಮಟ್ಟಿಗೆ ಜ್ಞಾನ ಶೂನ್ಯವಾದುವು; ಅಂತಃ ಸ್ಪರ್ಶಾಃ = ಹೃದಯದಲ್ಲಿ ವೇದನೆಯನ್ನು ಮಾತ್ರ ಬಲ್ಲವು; ವಿಶೋಷಿಣಃ = ಕಡಿದರೆ ಒಣಗಿಹೋಗುವ ಭಾಗಗಳುಳ್ಳವು.

(ಆಧುನಿಕ ವಿಜ್ಞಾನಿಗಳು ವಸ್ತುಗಳ ಜಾತ್ಯಾವಿಭಾಗ ಕ್ರಿಯೆಯು ವಿಜ್ಞಾನ ಶಾಸ್ತ್ರದ ಪ್ರಥಮ ಹಂತವೆನ್ನುವರು. ಅಂತಹ ವಿಭಾಗ ಕಾರ್ಯವನ್ನಿಲ್ಲಿ ಸ್ಪಷ್ಟವಾಗಿ ಕಾಣಬಹುದು. ವನಸ್ಪತಿಗೆ ಹಲಸು, ಓಷಧಿಗೆ ಭತ್ತ ಮೊದಲಾದವು, ತ್ವಕ್ ಸಾರಗಳಿಗೆ ಬಿದಿರು– ಇವುಗಳನ್ನು ಉದಾಹರಣೆಗಳಾಗಿ ವ್ಯಾಖ್ಯನಕಾರರು ತಿಳಿಸಿದ್ದಾರೆ. ಸಣ್ಣ ಸಣ್ಣ ಸಸ್ಯಗಳನ್ನು ವನಸ್ಪತಿಗಳೆಂದೂ, ಹುಲ್ಲಿನಂತೆ ಎತ್ತರೆತ್ತರವಾಗಿ ಬೆಳೆಯುವವುಗಳನ್ನು ಓಷಧಿಗಳೆಂದೂ, ಬಿದಿರು ಬಾಳೆಗಳಂತೆ ನಿಂತು ಬೆಳೆಯುವವುಗಳನ್ನು ತ್ವಕ್‌ಸಾರಗಳೆಂದೂ ಸಹ ವಿಂಗಡಿಸಬಹುದು.)

ತಿರಶ್ಚಾಮಷ್ಟಮಃಸರ್ಗಃ ಸೋಽಷ್ಟಾವಿಂಶದ್ವಿಧೋಮತಃ ।
ಅವಿದೋ ಭೂರಿತಮಸೋಘ್ರಾಣಜ್ಞಾಹೃದಿವೇದಿನಃ ॥೨೦॥

ಗೌರಜೋಮಹಿಷಃ ಕೃಷ್ಣಃ ಸೂಕರಾಗವಯೋ ರುರುಃ ।
ದ್ವಿಶಫಾಃ ಪಶವಶ್ಚೇಮೇ ಅವಿರುಷ್ಟ್ರಶ್ಚಸತ್ತಮ ॥೨೧॥

ಖರೋಶ್ವೋಽಶ್ವತರೋಗೌರಃ ಶರಭಶ್ಚಮರೀತಥಾ ।
ಏತೇಚೈಕಶಫಾಃ ಕ್ಷತ್ತಃ ಶ್ರುಣ ಪಂಚನಖಾನ್ ಪಶೂನ್ ॥೨೨॥

ಶ್ವಾಸೃಗಾಲೋವೃಕೋವ್ಯಾಘ್ರೋ ಮಾರ್ಜಾರಃ ಶಶಶಲ್ಯಕಾ ।
ಸಿಂಹಃ ಕಪಿರ್ಗಜಃ ಕೂರ್ಮೋಗೋಧಾಚಮಕರಾದಯಃ ॥೨೩॥

ಕಂಕಗೃಧ್ರಬಕಶ್ಯೇನಾ ಭಾಸವಲ್ಲೂರ ಬರ್ಹಿಣಃ ।
ಹಂಸಸಾರಸಚಕ್ರಾಹ್ವ ಕಾಕೋಲೂಕಾದಯಃ ಖಗಾಃ ॥೨೪॥

ಅಷ್ಟಮಃ ಸರ್ಗಃ = ಎಂಟನೆಯ ಸೃಷ್ಟಿಯು; ತಿರಶ್ಚಾಂ ಅಡ್ಡಡ್ಡಲಾಗಿ ಓಡಾಡುವ ಪ್ರಾಣಿಗಳದು; ಸಃ = ಅದು; ಅಷ್ಟಾವಿಂಶದ್ವಿಧಃ ಮತಃ = ಇಪ್ಪತ್ತೆಂಟು ಬಗೆಯಾದುದೆಂದು ನಿಶ್ಚಿತವಾಗಿದೆ; ಈ ವರ್ಗಕ್ಕೆ ಸೇರಿದ ಪ್ರಾಣಿಗಳು; ಅವಿದಃ = ಕಾರ್ಯ ಅಕಾರ್ಯ ವಿವೇಕ ಶೂನ್ಯವಾದುವು; ಭೂರಿತಮಸಃ = ತಮ್ಮ ಆಹಾರ ವಿಹಾರ ನಿದ್ರಾದಿಗಳ ಹೊರತು ಅನ್ಯ ವಿಷಯಗಳಲ್ಲಿ ಜ್ಞಾನವಿಲ್ಲದವು; ಘ್ರಾಣಜ್ಞಾಃ = ವಾಸನೆಯಿಂದಲೇ ತಿಳಿಯುವ ಶಕ್ತಿಯುಳ್ಳವು; ಹೃದಿ ವೇದಿನಃ = ಹೃದಯದಲ್ಲಿ ಸುಖದುಃಖಗಳ ಅನುಭವವನ್ನು ಹೊಂದಬಲ್ಲವು ॥೨೦॥

ಸತ್ತಮಃ = ಪುರುಷಶ್ರೇಷ್ಠನಾದ ವಿದುರಾ; ಗೌಃ = ಆಕಳು; ಅಜಃ = ಮೇಕೆ; ಮಹಿಷಃ = ಎಮ್ಮೆ; ಕೃಷ್ಣಃ = ಕವಲು ಕೊಂಬಿನ ಜಿಂಕೆ; ಸೂಕರಾಃ = ಹಂದಿಗಳು; ಗವಯಃ = ವಿಜಾತಿ ಎತ್ತುಗಳು; ರುರುಃ = ಜಿಂಕೆ; ಅವಿಃ = ಕುರಿ; ಚ = ಮತ್ತು; ಉಷ್ಟ್ರಃ = ಒಂಟೆ; ಇಮೇಪಶವಃ = ಈ ಪ್ರಾಣಿಗಳು; ದ್ವಿಶಫಾಃ = ಸೀಳು ಗೊರಸುಗಳುಳ್ಳವು. (ಗೊರಸಿನ ಎರಡು ಭಾಗಗಳುಳ್ಳವು.) ॥೨೧॥

ಕ್ಷತ್ತಃ = ವಿದುರಾ; ಖರಃ = ಕತ್ತೆಯು; ಅಶ್ವಃ = ಕುದುರೆಯು; ಅಶ್ವತರಃ = ಹೇಸರಕತ್ತೆಯು; ಗೌರಃ = ವಿಜಾತಿ ಎಮ್ಮೆಯು; ಏತೇ ಚ = ಈ ಪ್ರಾಣಿಗಳು; ಏಕಶಫಾಃ = ವಿಭಾಗವಿಲ್ಲದೆ ಒಂದೇ ಗೋರಸು ಒಳ್ಳವು; ಪಂಚನಖಾನ್ = ಐದು ಉಗುರುಗಳುಳ್ಳ; ಪಶೂನ್ = ಪ್ರಾಣಿಗಳ ವಿಷಯವನ್ನು; ಶ್ರುಣು = ಕೇಳು. ॥೨೨॥

ಶ್ವಾ = ನಾಯಿ; ಶೃಗಾಲಃ = ನರಿ; ವೃಕಃ = ತೋಳ; ವ್ಯಾಘ್ರಃ = ಹುಲಿ; ಮಾರ್ಜಾರಃ = ಬೆಕ್ಕು; ಶಶ,ಶಲ್ಯಕೌ = ಮೊಲ ಮತ್ತು ಮುಳ್ಳುಹಂದಿ; ಸಿಂಹಃ = ಸಿಂಹ; ಕಪಿಃ = ಕಪಿಜಾತಿ; ಗಜಃ = ಆನೆ; ಕೂರ್ಮಃ = ಆಮೆ; ಗೋಧಾ = ವಿಜಾತಿ ಮೊಸಳೆ; ಚ = ಮತ್ತು; ಮಕರ ಆದಯಃ = ಮೊಸಳೆ ಮೊದಲಾದವು. ॥೨೩॥

ಕಂಕ = ಕೊಕ್ಕರೆ; ಗೃಧ್ರ = ರಣಹದ್ದು; ಬಕ = ಬಕಪಕ್ಷಿ; ಶ್ಯೇನ = ಗಿಡಗ; ಭಾಸ = ಹದ್ದು; ವಲ್ಲೂರ = ಕರಡಿ; ಬರ್ಹಿಣಃ = ನವಿಲುಗಳು; ಹಂಸ = ಹಂಸಪಕ್ಷಿ; ಸಾರಸ = ನೀರುಹಕ್ಕಿ; ಚಕ್ರಾಹ್ವ = ಚಕ್ರವಾಕ; ಕಾಕ = ಕಾಗೆ; ಉಲೂಕ = ಗೂಬೆ; ಆದಯಃಖಗಾಃ = ಮೊದಲಾದ ಪಕ್ಷಿಗಳು; ॥೨೪॥

(ದೇವರ ಸೃಷ್ಟಿವೈಚಿತ್ರ್ಯವನ್ನು ತಿಳಿಸಿ ಆ ಭಗವಂತನ ಮಹಿಮಾಜ್ಞಾನಉಂಟುಮಾಡುವುದಕ್ಕಾಗಿಯೂ, ಪ್ರಾಣಿವರ್ಗದಲ್ಲಿ ಯಜ್ಞಾರ್ಹ ಪದಾರ್ಥಗಳನ್ನು ನೀಡುವ ಮತ್ತು ಯಜ್ಞ ಕಾರ್ಯಗಳಲ್ಲಿ ಸಹಾಯವಾಗುವ ಪ್ರಾಣಿಗಳ ವಿಷಯವನ್ನು ಸೂಚಿಸಿ, ದೇವರ ಸೃಷ್ಟಿಯಲ್ಲಿ ಪ್ರತಿಯೊಂದೂ ಹೇಗೆ ಸಾರ್ಥಕ್ಯವುಳ್ಳದೆಂಬುದನ್ನು ತಿಳಿಸುವುದಕ್ಕಾಗಿಯೂ ಪ್ರಾಣಿವರ್ಗಗಳ ವಿವರಗಳನ್ನು ಹೇಳಿದ್ದಾರೆ. ಉದಾಹರಣೆ– ಪಶುಗಳು ಹಾಲು, ಮೊಸರು, ತುಪ್ಪ, ಗೋಮಯ, ಗೋಮೂತ್ರಗಳಿಂದ ಯಜ್ಞಕಾರ್ಯಗಳಲ್ಲಿ ಸಹಾಯಕಗಳಾಗಿವೆ. ಕುದುರೆ, ಮೇಕೆ ಮುಂತಾದವು ಯಜ್ಞಪಶುಗಳಾಗಬಲ್ಲವು. ಹದ್ದು, ಕಾಗೆ ಮೊದಲಾದವು ಕವ್ಯದ್ರವ್ಯಗಳನ್ನು ಸ್ವೀಕರಿಸಿ ಸಹಾಯಕವಾಗುವುವು ಇತ್ಯಾದಿ.

ಪ್ರಾಣಿಗಳನ್ನು ಮುಖ್ಯವಾಗಿ, ಊರ್ಧ್ವಮುಖವಾಗಿ ಬೆಳೆಯುವ ಸಸ್ಯವರ್ಗ, ಅಡ್ಡಡ್ಡಲಾಗಿ ಸಂಚರಿಸುವ ಪ್ರಾಣಿವರ್ಗ, ನೇರವಾಗಿ ನಿಂತು ಸಂಚರಿಸುವ ಮಾನವವರ್ಗ ಎಂದು ಮೂರು ಬಗೆಯಾಗಿ ವಿಂಗಡಿಸಿದ್ದಾರೆ.)

**ಅರ್ವಾಕ್‌ಸ್ರೋತಸ್ತುನವಮಃ ಕ್ಷತ್ತರೇಕವಿಧೋನೃಣಾಂ ।**
**ರಜೋಧಿಕಾಃ ಕರ್ಮಪರಾ ದುಃಖೇಚಸುಖಮಾನಿನಃ ॥೨೫॥**

ಕ್ಷತ್ತಃ = ವಿದುರಾ; ಅರ್ವಾಕ್‌ಸ್ರೋತಃ ತು = ಅಧೋಗಮನ ಶೀಲವಾದ ಸೃಷ್ಟಿಯು; ನವಮಃ = ಒಂಭತ್ತನೆಯದು; ಏಕವಿಧಃ = ಒಂದೇ ಬಗೆಯಾದ; ನೃಣಾಂ = ಮಾನವರದು; ರಜ ಅಧಿಕಾಃ = ರಜೋಗುಣ ಪ್ರಾಬಲ್ಯವುಳ್ಳವರು ಅವರು; ಆದುದರಿಂದಲೇ; ಕರ್ಮಪರಾಃ = ಬಗೆಬಗೆಯ ಚಟುವಟಿಕೆಗಳಲ್ಲಿ ರತರಾಗಿರುವವರು; ದುಃಖೇ ಚ ಸುಖಮಾನಿನಃ = ದುಃಖೈಕರೂಪ ಸಂಸಾರವನ್ನು ಸುಖರೂಪವೆಂದು ತಿಳಿದಿರುವ ಅನ್ಯಥಾ ಜ್ಞಾನಿಗಳು.

(ಈ ಶ್ಲೋಕದಲ್ಲಿ 'ತು' ಎಂಬ ಅವ್ಯಯವು ಮಾನವರಲ್ಲಿ ಎರಡು ಬಗೆಯಿಂರುವುದನ್ನು ಸೂಚಿಸುತ್ತದೆ. ದಾನವ ಸ್ವಭಾವದವರು, ಮಾನವ ಸ್ವಭಾವದವರು ಎಂದು ಅದು ಎರಡು ಬಗೆಯಾದುದು. ದಾನವ ಸ್ವಭಾವದವರು ದುಷ್ಕರ್ಮದಲ್ಲಿಯೇ ಹೆಚ್ಚು ಆಸಕ್ತಿಯುಳ್ಳವರಾಗಿ ದುಃಖವನ್ನೇ ಸುಖವೆಂದು ಭ್ರಮಿಸಿ ಅಧೋಗತಿಯನ್ನು ಹೊಂದತಕ್ಕವರು. ಮಾನವ ವರ್ಗದವರು, ಮಾಡಿದ ತಪ್ಪುಗಳನ್ನು ತಿದ್ದಿಕೊಳ್ಳುತ್ತಾ, ಧರ್ಮಾಚರಣೆಯಲ್ಲಿ ತೊಡಗಿ ಊರ್ಧ್ವಗತಿಗೆ ಪ್ರಯತ್ನಿಸುವವರು. ದೇವತೆಗಳು ಮಾತ್ರ ಸದಾ ಊರ್ಧ್ವಗತಿಯವರು.

ಪ್ರಪಂಚದಲ್ಲಿ ಕಂಡುಬರುವುದು ಹೆಚ್ಚಾಗಿ ರಾಜಸ ತಾಮಸ ಸುಖಗಳು; ದುಃಖದಲ್ಲಿಯೇ ಪರ್ಯವಸಾನ ಹೊಂದುವುವು ಆದ್ಯಂತ ಮಧ್ಯಗಳಲ್ಲಿ ಸುಖಪ್ರದವಾಗಿರುವುದು ಸಾತ್ವಿಕ ಸುಖ. ಅದು ದೇವತೆಗಳಿಗೆ ಸುಲಭ; ಬಹುಪ್ರಯಾಸದಿಂದ ಮಾನವರಿಗೆ ಸಾಧ್ಯ).

**ವೈಕೃತಾಸ್ತ್ರಯ ಏವೈತೇ ದೇವಸರ್ಗಶ್ಚ ಸತ್ತಮ ।**
**ವೈಕಾರಿಕಸ್ತುಯಃ ಪ್ರೋಕ್ತಃ ಕೌಮಾರಸ್ತೂಭಯಾತ್ಮಕಃ ॥೨೬॥**

ಏತೇತ್ರಯಃ ಏವ = ಸಸ್ಯವರ್ಗ, ಪ್ರಾಣಿವರ್ಗ ಮತ್ತು ಮನುಷ್ಯವರ್ಗವೆಂಬ ಈ ಮೂರೇ; ವೈಕೃತಾಃ = ಬ್ರಹ್ಮಾಂಡದೊಳಗೆ ತಮಃಪ್ರಾಚುರ್ಯ, ತಮೋರಜಪಾಚುರ್ಯ ಮತ್ತು ರಜೋಗುಣ ಪ್ರಾಚುರ್ಯದಿಂದಾದ ವೈಕೃತವೆನಿಸುವ ಮೂರು ಬಗೆಗಳ ಸೃಷ್ಟಿ; ಸತ್ತಮ = ಸದ್ಗುಣಶಾಲಿಯಾದ ವಿದುರಾ; ಯಃ = ಯಾವುದು; ವೈಕಾರಿಕಃ = ಸತ್ವಪ್ರಚುರುವಾದ ವೈಕಾರಿಕ ಅಹಂಕಾರದಿಂದ ಸೃಷ್ಟಿಯೆಂದು; ಪ್ರೋಕ್ತಃ = ಹೇಳಲ್ಪಟ್ಟಿತೋ; ಅದು, ದೇವಸರ್ಗಃ = ಬ್ರಹ್ಮಾಂಡದ ಬಹಿರಾವರಣದಲ್ಲಿ ಆದ ದೇವತಾಶರೀರಗಳ ಸೃಷ್ಟಿ; ವೈಕಾರಿಕಃ = ಅದೇ ವೈಕಾರಿಕ ಸೃಷ್ಟಿಯು; ಕೌಮಾರಃ ತು = ಬ್ರಹ್ಮಾಂಡದೊಳಗೆ ಮಿಶ್ರಗುಣಗಳಿಂದ ಭೌತ ದೇಹಗಳನ್ನು ಹೊಂದಿಸಿ ಸೃಷ್ಟಿಸಿದಾಗ; ವೈಕಾರಿಕಸ್ತು = ಆ ವೈಕಾರಿಕ ಸೃಷ್ಟಿಯೇ; ಉಭಯಾತ್ಮಕಃ = ಎರಡು ಬಗೆಗಳ ಮಿಶ್ರಸೃಷ್ಟಿಯಾಗುವುದು.

(ಕುಮ್ ಎಂದರೆ ಭೂಮಿ ಆದುದರಿಂದ ಪೃಥ್ವ್ಯಾತ್ಮಕವಾದ ಬ್ರಹ್ಮಾಂಡದೊಳಗಿನ ಸೃಷ್ಟಿಯು ಕೌಮಾರವೆನಿಸಿಕೊಳ್ಳುತ್ತದೆ. ಬಹಿರಾವರಣದಲ್ಲಿ ಸೂಕ್ಷ್ಮ ಶರೀರಗಳನ್ನು ಪಡೆದುಕೊಂಡ ದೇವತೆಗಳು, ಅವರವರಿಗೆ ಯೋಗ್ಯವಾದಂತೆ ಭೌತಗುಣಗಳ ಮಿಶ್ರಣಗಳಿಂದ ಬ್ರಹ್ಮಾಂಡದೊಳಗೆ ಶರೀರಗಳನ್ನು ಪಡೆಯುವುದರಿಂದ ಅದು ಕೇವಲ ಪ್ರಾಕೃತ ಅಥವ ವೈಕಾರಿಕವಲ್ಲ; ವಿಕೃತವೂ ಅಲ್ಲ; ಉಭಯಾತ್ಮಕ ಎನಿಸಿಕೊಳ್ಳುತ್ತದೆ. ಹೀಗೆ ದೇಹಗಳನ್ನು ಪಡೆದ ದೇವತೆಗಳಲ್ಲಿ ಅವರವರ ಪದವಿಗಳಿಗೆ ಅನುಗುಣವಾಗಿ ಭೌತಸಂಬಂಧವಾದ ವಿಕೃತಿಯು ಹೆಚ್ಚು ಕಡಿಮೆಯಾಗಿರುತ್ತದೆ.)

ದೇವಸರ್ಗಶ್ಚಾಷ್ಟವಿಧೋ ವಿಬುಧಾಃ ಪಿತರೋಽಸುರಾಃ ।
ಗಂಧರ್ವಾಪ್ಸರಸಃ ಸಿದ್ಧಾಯಕ್ಷ ರಕ್ಷಾಂಸಿ ಚಾರಣಾಃ ॥೨೭॥

ದೇವಸರ್ಗಃ ಚ = ಬ್ರಹ್ಮಾಂಡದೊಳಗೆ ದೇವತೆಗಳ ಸೃಷ್ಟಿಯಾದರೋ; ಅಷ್ಟ ವಿಧಃ = ಎಂಟು ಬಗೆಯಾದುದು; ವಿಬುಧಾಃ = ದೇವತೆಗಳು; ಪಿತರಃ = ಪಿತೃ ದೇವತೆಗಳು; ಅಸುರಾಃ = ಸುರತ್ವವನ್ನು ಇನ್ನೂ ಪಡೆಯದಿರುವ ದೇವತೆಗಳು; ಗಂಧರ್ವಾಃ = ಗಂಧರ್ವ ವರ್ಗದವರು; ಅಪ್ಸರಸಃ = ಅಪ್ಸರೆಯರು; ಸಿದ್ಧಾಃ = ಸಿದ್ಧಗಣಮದವರು; ಯಕ್ಷ ರಕ್ಷಾಂಸಿ ಚಾರಣಾಃ = ಯಕ್ಷಕುಲದ ದೇವವರ್ಗ, ರಕ್ಷಕ ಕುಲದ ದೇವವರ್ಗ ಮತ್ತು ಚಾರಣರೆಂಬ ದೇವತಾವರ್ಗ– ಇವು ಆ ಎಂಟು ಬಗೆಯವು.

(ಪೃಥ್ವ್ಯಾತ್ಮಕ ಶುದ್ಧಸುವರ್ಣಮಯವಾದ ಬ್ರಹ್ಮಾಂಡವು ಚತುರ್ಮುಖಬ್ರಹ್ಮದೇವರ ಶರೀರವೆನಿಸಿರುವುದರಿಂದ ಅದು ಸಾತ್ವಿಕವೆಂದೇ ವ್ಯವಹಾರ. ಆ ಶರೀರಧಾರಿಗಳಾದ ಬ್ರಹ್ಮದೇವರಿಗೆ ಅದು ಬಂಧಕವಲ್ಲ. ಬ್ರಹ್ಮಾಂಡದ ಸುವರ್ಣಕ್ಕೆ ಶತಾಂಶ ತಮೋಗುಣ ವೈಕೃತಿಯಿಂದ ಕೂಡಿಕೊಂಡಾಗ ಅದು ರುದ್ರ ದೇವರ ಶರೀರವೆನಿಸುತ್ತದೆ. ಇದರಂತೆ ಇಂದ್ರಾದಿ ದೇವತೆಗಳ ಶರೀರಗಳಲ್ಲಿಯೂ ಅವರವರಿಗೆ ತಕ್ಕಂತೆ ತಮೋಗುಣ ಪ್ರಾಚುರ್ಯವಿರುತ್ತದೆ. ಹಾಗಿದ್ದರೂ ಆ ಗುಣವಿಕೃತಿಗಳು ಅವರವರ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಾಹಕ್ಕಾಗಿಯೇ ಹೊರತು ಅವರ ಮೇಲೆ ತಮಃ ಪ್ರಾಚುರ್ಯದ ಪ್ರಭಾವ ಬೀರುವುದಕ್ಕಲ್ಲ. ಅಪ್ಸರೆಯರ ಗಣನೆ ಗಂಧರ್ವರ ಜೊತೆಗೆ. ಈ ದೇವತೆಗಳು ಭೂಲೋಕದಲ್ಲಿ ಜನಿಸಿದಾಗ ಅಸುರಾವೇಶಾದಿಗಳಿದ್ದರೂ ಅವರು ದೇವಗಣಗಳವರೇ ಸರಿ.)

ಭೂತ ಪ್ರೇತ ಪಿಶಾಚಾಶ್ಚ ವಿದ್ಯಾಧ್ರಾಃ ಕಿನ್ನರಾದಯಃ ।
ದಶೈತೇ ವಿದುರಾಖ್ಯಾತಾಃ ಸರ್ಗಾಸ್ತೇ ವಿಶ್ವಸೃಕ್ಕೃತಾಃ ॥೨೮॥

ಭೂತ, ಪ್ರೇತ, ಪಿಶಾಚಾಃ, ಚ, ವಿದ್ಯಾಧ್ರಾಃ, ಕಿನ್ನರ ಆದಯಃ = ದೇವತಾ ಕಾರ್ಯಗಳಿಗೆ ಸಹಯಕರಾದ ಈ ಎಲ್ಲರೂ ದೇವಗಣಗಳಲ್ಲಿಯೇ ಸೇರಿದವರು; ವಿದುರ; ಏತೇದಶ = ಇದುವರೆಗೆ ಹೇಳಿದ ಪ್ರಾಕೃತ ವೈಕೃತ ಸೃಷ್ಟಿಗಳಲ್ಲಿ ಬಂದ ಹತ್ತು ಗುಂಪುಗಳವರೂ; ಖ್ಯಾತಾಃ = ಊರ್ಧ್ವಸ್ರೋತಸರು ಅಥವ ಮುಕ್ತಿಯೋಗ್ಯರು ಎಂದು ಗಣಿಸಲ್ಪಟ್ಟಿರುವರು; ತೇ = ಅವರೆಲ್ಲರೂ; ವಿಶ್ವಸೃಕ್ ಕೃತಾಃ = ವಿಶ್ವದ ಸೃಷ್ಟಿಕರ್ತನಾದ ಬ್ರಹ್ಮನಿಂದ ವಿಶ್ವದ ನಾನಾ ಕಾರ್ಯಗಳಲ್ಲಿ ಭಾಗವಹಿಸಲು ಸೃಷ್ಟಿಸಲ್ಪಟ್ಟವರು.

(ಗಂಧರ್ವರಲ್ಲಿ ದೇವಗಂಧರ್ವರು, ಮನುಷ್ಯಗಂಧರ್ವರು ಎಂಬ ಭೇದವಿರುವಂತೆ ರಕ್ಷ, ಪಿಶಾಚ ಇತ್ಯಾದಿಗಳಲ್ಲಿಯೂ ದೇವ ಜಾತಿಗೆ ಸೇರಿದ ಮತ್ತು ತಿರ್ಯಗ್ಜಾತಿ, ಅಧೋಗಮನ ಜಾತಿಗಳಿಗೆ ಸೇರಿದ ಅದೇ ಹೆಸರಿನ ಜೀವವರ್ಗಗಳಿವೆಯೆಂದು ತಿಳಿಯಬಹುದು. ದೇವ ವರ್ಗಕ್ಕೆ ಸೇರಿದವರು ರುದ್ರದೇವರ, ಗಣಪತಿಯ ಪರಿವಾರ ವರ್ಗದಲ್ಲಿದ್ದು ಮುಕ್ತಿಯೋಗ್ಯರಾಗಿರುತ್ತಾರೆ. ಅವರಿಂದಾಗ ಬಹುದಾದ ಹಿಂಸಾಕಾರ್ಯದಿಂದ ಸಜ್ಜನರ ಕರ್ಮಕ್ಷಯವೂ ದುರ್ಜನರಿಗೆ ಶಿಕ್ಷೆಯೂ ಆಗುವುದರಿಂದ ಅವರ ಕೃತ್ಯಗಳು ಹರಿಪೂಜಾತ್ಮಕಗಳೇ ಆಗಿರುವುವು.)

ಅತಃ ಪರಂ ಪ್ರವಕ್ಷ್ಯಾಮಿ ವಂಶಾನ್ಮನ್ವಂತರಾಣಿಚ ।
ಏವಂ ರಜಃ ಪ್ಲುತಸ್ರಷ್ಟಾ ಕಲ್ಪಾದಿಷ್ವಾತ್ಮಭೂರ್ಹರಿಃ ॥
ಸೃಜತ್ಯಮೋಘ ಸಂಕಲ್ಪ ಆತ್ಮೈವಾತ್ಮಾನಮಾತ್ಮನಾ ॥೨೯॥

ಅತಃಪರಂ = ಇನ್ನು ಮುಂದೆ; ವಂಶಾನ್ = ಮನುವಂಶಗಳವರ ಚರಿತ್ರೆಗಳನ್ನೂ; ಚ = ಮತ್ತು; ಮನ್ವಂತರಾಣಿ = ಮನು ಕಲ್ಪಗಳ ವಿಚಾರವನ್ನೂ; ಪ್ರವಕ್ಷ್ಯಾಮಿ = ವಿವರಿಸುತ್ತೇನೆ; ಏವಂ = ಹಿಂದೆ ಹೇಳಿದ ಪ್ರಕಾರವಾಗಿ; ಆತ್ಮಭೂಃ = ತನ್ನಿಂದ ತಾನೇ ರೂಪಾಂತರಗಳಿಂದ ಪ್ರಕಟವಾಗುವ; ಅಮೋಘ ಸಂಕಲ್ಪಃ = ಸ್ವಪ್ರಯೋಜನಾಪೇಕ್ಷೆ ಇಲ್ಲದಿದ್ದರೂ ಜೀವರ ಉದ್ಧಾರಾರ್ಥವಾಗಿ ಸಂಕಲ್ಪ ಮಾಡುವ; ಹರಿಃ = ಶ್ರೀಹರಿಯು; ಕಲ್ಪಾದಿಷು = ಬ್ರಹ್ಮ ಕಲ್ಪ, ಮನುಕಲ್ಪ ಮೊದಲಾದವುಗಳಲ್ಲಿ; ಸ್ರಷ್ಟಾ = ಬ್ರಹ್ಮಾಂಡವನ್ನೂ ಬ್ರಹ್ಮಾದಿ ಜೀವರನ್ನೂ ಸೃಷ್ಟಿಸುವ ಸ್ವಾಮಿಯು; ರಜಃಪ್ಲುತಃ = ಗುಣತ್ರಯಗಳನ್ನು ಉಪಾದಾನ ಕಾರಣವಾಗಿ ಮಾಡಿಕೊಂಡು ಅದರಲ್ಲಿ ಪ್ರವಿಷ್ಟನಾಗಿ; ಆತ್ಮೈವ = ತಾನೇ; ಆತ್ಮನಾ = ತನ್ನಿಂದಲೇ; ಆತ್ಮಾನಂ = ತನ್ನನ್ನು; ಸೃಜತಿ = ಪ್ರಕಾಶಪಡಿಸಿಕೊಳ್ಳುತ್ತಾನೆ.

(ಭಗವಂತನ ಆತ್ಮ ಸೃಷ್ಟಿ ಎಂದರೆ ವಿಕೃತಿಯಿಂದ ಶರೀರಗಳನ್ನು ಹೊಂದುವುದೆಂದಲ್ಲ; ದೀಪದಿಂದ ಅಷ್ಟೇ ಪ್ರಕಾಶ ಸಾಮರ್ಥ್ಯಗಳುಳ್ಳ ಅನೇಕಾನೇಕ ದೀಪಗಳು ಹೊರಬಂದಂತೆ. ಭಗವಂತನ ಒಂದು ರೂಪದಲ್ಲಿ ಅನಂತಾನಂತ ರೂಪಗಳು ಅಡಕವಾಗಿ, ಆ ಒಂದೊಂದು ರೂಪದಲ್ಲಿ ಇತರ ಎಲ್ಲಾ ರೂಪಗಳೂ ಅಡಕವಾಗಿ ಯಾವಾಗಲೂ ಇರುತ್ತವೆ. ಇಂತಹ ಅವನ ರೂಪ ಅಮಿತವಾದುದು; ಅಚಿಂತ್ಯವಾದುದು. ವಸ್ತುಗಳನ್ನೂ ಜೀವರನ್ನೂ ಸೃಷ್ಟಿಯಲ್ಲಿ ತರುವಾಗ, ಆಯಾ ವಸ್ತುಗಳ ಮತ್ತು ವಿವಿಧ ಜೀವರ ಸ್ಥಿತಿಗತಿಗಳಿಗೆ ಅನುಗುಣವಾಗಿ ತನ್ನ ಚಿದಾನಂದಾತ್ಮಕ ರೂಪಗಳನ್ನು ಸಂಕಲ್ಪಮಾತ್ರದಿಂದ ಪ್ರಕಟಿಸಿ, ವಸ್ತುಗಳಲ್ಲಿಯೂ ಜೀವರಲ್ಲಿಯೂ

ಬಿಂಬನಾಗಿ ವ್ಯಾಪಾರಗಳನ್ನು ಮಾಡಿ ಜೀವರಿಗೆ ಫಲಪ್ರದನಾಗುವುದರಿಂದ ಅವನು ನಿರಪೇಕ್ಷ, ನಿರ್ಲಿಪ್ತ.

ರಜೋಗುಣ ಎಂಬ ಪದದಿಂದ ಗುಣತ್ರಯಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕು.

ಮಡಕೆ ಕಾರ್ಯವಾದರೆ, ಅದಕ್ಕೆ ಉಪಯೋಗಿಸುವ ಮಣ್ಣು ಉಪಾದಾನ ಕಾರಣ. ಭಗವಂತ ಜಗದ್ರೂಪವಾದ ಸೃಷ್ಟಿಗೆ ಉಪಾದಾನ ಕಾರಣನಲ್ಲ; ಜಗದ್ರೂಪ ಕಾರ್ಯವೂ ಅವನಲ್ಲ. ಅವನು ಅದಕ್ಕೆ ನಿಮಿತ್ತ ಕಾರಣ. ಮಡಕೆಯ ಆಕಾರವನ್ನು ಕುಂಬಾರ ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವಂತೆ ಜಗತ್ಸೃಷ್ಟಿಯ ವಿವರಗಳನ್ನು ತನ್ನ ಸಂಕಲ್ಪದಿಂದ ಕಲ್ಪಿಸಿಕೊಂಡಿರುವುದೇ ಭಗವಂತನ ಜಗದ್ಭಿನ್ನವಾದ ಜಗದ್ರೂಪ.

ಜಗತ್ಸೃಷ್ಟ್ಯಾದಿಗಳು ಪ್ರವಾಹ ರೂಪವಾಗಿ ಅನಾದ್ಯನಂತಕಾಲಗಳಲ್ಲಿ ನಡೆಯುತ್ತಲೇ ಇರವುದರಿಂದ ಭಗವಂತನ ಆ ರೂಪಗಳೂ ಶಾಶ್ವತಗಳೇ ಆಗಿವೆ.)

**ಗುಣವ್ಯತ್ಯಯ ಏತಸ್ಮಿನ್ಮಾಯಾವತ್ತ್ವಾದಧೀಶಿತುಃ ।**
**ನಪೌರ್ವಾಪರ್ಯಮಿಚ್ಛಂತಿ ನದ್ಯಾಂಭ್ರಾಮ್ಯದ್ಭ್ರಮೇರ್ಯಥಾ ॥೩೦॥**

ಅಧೀಶಿತುಃ = ಸರ್ವಸಮರ್ಥನಾದ ಶ್ರೀಹರಿಯ; ಮಾಯಾವತ್ತ್ವಾತ್ = ಏಕ ಪ್ರಕಾರವಾದ ನಿತ್ಯ ಸಂಕಲ್ಪದ ದೆಸೆಯಿಂದ; ಏತಸ್ಮಿನ್ = ಈ ಸೃಷ್ಟಿಯ ಕ್ರಮದಲ್ಲಿ; ಗುಣ ವ್ಯತ್ಯಯಃ = ತ್ರಿಗುಣಗಳ ಪ್ರಾಕೃತ ವೈಕೃತ ಪರಿಣಾಮಗಳು; ನದ್ಯಾಂ = ಒಂದು ನದಿಯಲ್ಲಿ; ಭ್ರಾಮ್ಯತ್ = ಸುತ್ತಿಸುತ್ತಿ ಸುತ್ತುತ್ತಿರುವ; ಭ್ರಮೇಃಯಥಾ = ಸುಳಿಯ ಕಾರ್ಯವು ಹೇಗೋ ಹಾಗೆ; ಪೌರ್ವಾಪರ್ಯಂ = ಹಿಂದೆ ಹೇಗೆ, ಮುಂದೆ ಹೇಗೆ ಎಂಬ ಕ್ರಮವನ್ನು; ನ ಇಚ್ಛಂತಿ = ಬೇಕೆನ್ನುವುದಿಲ್ಲ.

(ಸೃಷ್ಟಿಕಾರ್ಯವು ಅನಾದ್ಯನಂತ ಕಾಲಗಳಲ್ಲಿ ಪ್ರವಾಹ ರೂಪವಾಗಿರುವುದರಿಂದ ದೇವರು ಹಿಂದಿನ ಕಲ್ಪಗಳಲ್ಲಿ ಹೇಗೆ ಸೃಷ್ಟಿಮಾಡಿದ, ಮುಂದೆ ಹೇಗೆ ಮಾಡುತ್ತಾನೆ ಎಂಬ ಶಂಕೆಗಳಿಗೆ ಅವಕಾಶವಿಲ್ಲ. ಏಕಪ್ರಕಾರವಾಗಿ ನಡೆಯುವ ಈ ಸೃಷ್ಟಿಕಾರ್ಯವು ಭಗವಂತನ ಅದ್ಭುತ ಸಂಕಲ್ಪ ಶಕ್ತಿಗೆ (ಅವನ ಮಾಯೆಗೆ) ಅಧೀನವಾದುದು.)

**ದೇವಾಸುರಾದಯಃ ಕ್ಷತ್ತಃ ಕಲ್ಪೇಸ್ಮಿನ್ಯೇಪ್ರಕೀರ್ತಿತಾಃ ।**
**ತಯೋಃವನಾಮ ರೂಪಾಭ್ಯಾಮಾಸನ್ಮನ್ವಂತರಾಂತರೇ ॥೩೧॥**

ಕ್ಷತ್ತಃ = ವಿದುರಾ; ಅಸ್ಮಿನ್ ಕಲ್ಪೇ = ಈ ಬ್ರಹ್ಮಕಲ್ಪದಲ್ಲಿ; ದೇವ ಅಸುರ ಆದಯಃ = ದೇವತೆಗಳು, ಅಸುರರು ಮೊದಲಾದವರು; ಯೇ ಪ್ರಕೀರ್ತಿತಾಃ =

ಯಾರು ಹೇಳಲ್ಪಟ್ಟಿರುವರೋ; ತೇ ಏವ = ಅವರೇ; ಮನ್ವಂತರಾಂತರೇ = ಮನ್ವಂತರ ಮನ್ವಂತರಗಳಲ್ಲಿಯೂ; ನಾಮ ರೂಪಾಭ್ಯಾಂ = ಅದೇ ಹೆಸರು ಅದೇರೂಪ ಮತ್ತು ಅದೇ ಸ್ಥಾನಮಾನಗಳಿಂದ; ಆಸನ್ = ಇದ್ದರು.

(ಇಂದ್ರಾದಿ ದೇವತೆಗಳ ಮತ್ತು ಕಲ್ಯಾದಿ ಅಸುರರ ಸ್ಥಾನಮಾನಗಳು ಕಲ್ಪಕಲ್ಪಗಳಲ್ಲಿ ಏಕರೀತಿಯಾಗಿರುವುವು. ಆದರೆ, ಆಯಾ ಸ್ಥಾನಗಳಿಗೆ ಯೋಗ್ಯರಾದ ಜೀವರ ಸಾಧನೆಗಳು ಮುಗಿದು ಅವರು ನಿವೃತ್ತರಾದ ಹಾಗೆಲ್ಲಾ, ಆ ಸ್ಥಾನಗಳಿಗೆ ಅದೇ ಬಗೆಯ ಯೋಗ್ಯತೆಗಳುಳ್ಳ ಬೇರೆ ಬೇರೆ ಜೀವರು ಬರುತ್ತಾರೆ. ನಾಮ ರೂಪಗಳು ಒಂದೇ ಬಗೆಯಾದುವು. ಆ ನಾಮರೂಪಗಳಿಂದ ಕಾರ್ಯ ನಿರ್ವಹಿಸುವ ಜೀವರು ಬೇರೆಬೇರೆ. ಶ್ರೀ ಜಗನಾಥದಾಸರಾಯರ ಶ್ರೀಹರಿಕಥಾಮೃತಸಾರದ ಕಲ್ಪಸಾಧನ ಸಂಧಿಯಲ್ಲಿ ಇದರ ವಿವರಗಳನ್ನು ನೋಡಬಹುದು.)

ಹನ್ನೊಂದನೆಯ ಅಧ್ಯಾಯ ಮುಗಿಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥

---

|| ಓಂ || ಶ್ರೀ || ಓಂ ||

|| ಶ್ರೀಗುರುಭ್ಯೋನಮಃ || ಹರಿಃ ಓಂ ||

# ಪರಿಶಿಷ್ಟ

## ತೃತೀಯ ಸ್ಕಂಧ – ಉತ್ತರಾರ್ಧ ಮತ್ತು ಚತುರ್ಥ ಸ್ಕಂಧಗಳ ಸಾರಸಂಗ್ರಹ

೧. ಕಾಲನಾಮಕ ಪುರುಷನ ಮಹಿಮೆ

**ಚರಮಸ್ತು ವಿಶೇಷಾಣಾಮನೇಕಾ ಸಂಯುತಃ ಸದಾ ।**
**ಪರಮಾಣುಃ ಸವಿಜ್ಞೇಯೋ ನೃಣಾಮೈಕ್ಯಭ್ರಮೋಯತಃ ||**

|| ೩–೧೨–೧||

ಸದಾ = ಯಾವಾಗಲೂ; ವಿಶೇಷಾಣಾಂ = ಬಗೆಬಗೆಯ ವಸ್ತು ವಿಶೇಷಗಳ; ಚರಮಃ ತು = ಅತ್ಯಂತ ಸೂಕ್ಷ್ಮಾತಿಸೂಕ್ಷ್ಮ ವಿಭಾಗವಾದರೋ; ಅನೇಕಾ = ಕಟ್ಟ ಕಡೆಯ ಒಂದೇ ಅಂಶವಾಗಿರದೆ, ಅಸಂಖ್ಯಾಂಶಗಳಿಂದ ಕೂಡಿಕೊಂಡಿರುವುದು; ಯತಃ = ಯಾವ ಸೂಕ್ಷ್ಮಾತಿಸೂಕ್ಷ್ಮ ಅಂಶವನ್ನು ಕಾಣದೆ; ನೃಣಾಂ = ಮಾನವರಿಗೆ; ಐಕ್ಯಭ್ರಮಃ = ಅದು ಅವಿಭಾಜ್ಯವಾದ ಒಂದೇ ಅಂಶವೆಂದು ಭ್ರಮೆಯುಂಟಾಗುವುದೋ; ಸಃ = ಅದು; ಪರಮಾಣುಃ = ಪರಮಾಣು ಎಂದು; ವಿಜ್ಞೇಯಃ = ತಿಳಿಯಲ್ಪಡತಕ್ಕದ್ದು.

ಭೂ, ಜಲ, ತೇಜ, ವಾಯು, ಆಕಾಶ ಸಂಬಂಧಿಗಳಾದ ವಸ್ತು ವಿಶೇಷಗಳ ಒಂದೊಂದು ತುಣುಕೂ (molecule) ವಿಭಾಗಿಸುತ್ತಾ ಹೋದಾಗ, ಅನೇಕಾನೇಕ ಸೂಕ್ಷ್ಮಾತಿಸೂಕ್ಷ್ಮ ವಿಭಾಗಗಳಿಂದ ಕೂಡಿಕೊಂಡಿರುವುದು ತಿಳಿಯಬರುವುದು. ವಿಭಾಗಿಸಲಸಾಧ್ಯವಾದ ಕಟ್ಟಕಡೆಯ ಅಂಶವನ್ನು 'ಪರಮಾಣು' ಎಂದು ಜನ ಸಾಮಾನ್ಯವಾಗಿ ತಿಳಿದಿರುವರು. ಆದರೆ ಆ ಒಂದೊಂದು ಪರಮಾಣುವೂ ಅನೇಕಾನೇಕ

ಸೂಕ್ಷ್ಮತರ ಅಂಶಗಳಿಂದ ಕೂಡಿರುವುದನ್ನು ದೇವತೆಗಳು ಬಲ್ಲರು. ಸೃಷ್ಟಿಕರ್ತರೆನಿಸಿದ ಬ್ರಹ್ಮದೇವರು ಇತರ ದೇವತೆಗಳಿಗಿಂತಲೂ ಹೆಚ್ಚಾಗಿ ಸೂಕ್ಷ್ಮತಮ ಅಂಶಗಳ ವಿಚಾರವನ್ನು ಬಲ್ಲರು.

ಉದಾಹರಣೆ ಆಕಾಶಾದಿ ಪಂಚಭೌತಿಕ ವಸ್ತುಗಳ ಪರಮಾಣುಗಳ ವಿಚಾರವನ್ನು ಮಾನವರು ಬಲ್ಲರು. ಪರಮಾಣುಗಳಲ್ಲಿನ 'ಎಲೆಕ್ಟ್ರಾನ್' , 'ಪ್ರೋಟಾನ್', 'ನ್ಯೂಟ್ರಾನ್' ಎಂಬ ಸೂಕ್ಷ್ಮತರ ವಿಭಾಗಗಳನ್ನು ಕಂಡುಕೊಂಡಿರುವ ಈಗಿನ ವಿಜ್ಞಾನಿಗಳು ಭೌತಪ್ರಪಂಚಕ್ಕೆ ಮೀರಿದ ವಿಷಯಗಳನ್ನು ಕಾಣಲಾರರು. ದೇವತೆಗಳು, ಪಂಚಭೂತಗಳಿಗೆ ಹಿನ್ನೆಲೆಯಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಸೂಕ್ಷ್ಮಾಂಶಗಳ ವಿವರಗಳನ್ನು ಬಲ್ಲರು. ದಶ ಇಂದ್ರಿಯಗಳ ಶಕ್ತಿಗಳಿಗೆ ಕಾರಣಗಳಾದ ಸೂಕ್ಷ್ಮ ಪ್ರಾಕೃತ ಅಂಶಗಳ ವಿಚಾರವನ್ನು ಇಂದ್ರಿಯಾಭಿಮಾನಿ ದೇವತೆಗಳು ಬಲ್ಲರು. ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಂಡು ನಡೆಸುವ 'ಮನಸ್ಸು' ಎಂಬ ಇಂದ್ರಿಯದ ಸೃಷ್ಟಿಗೆ ಕಾರಣಗಳಾದ ಅತ್ಯಂತ ಸೂಕ್ಷ್ಮಾಂಶಗಳ ವಿಚಾರವನ್ನು ಇಂದ್ರ ಕಾಮರು ಬಲ್ಲರು. ದೇಹದಲ್ಲಿ ಬಂಧಿತರಾದ ಜೀವರು ದೇಹದ ವ್ಯಾಪಾರಗಳು ನನ್ನಿಂದ ಎಂದುಕೊಳ್ಳುವ ಹಾಗೆ ಮಾಡುವ ಅಹಂಕಾರ ತತ್ತ್ವವೂ ಪ್ರಾಕೃತ ಮೂಲವಸ್ತುಗಳ ಸಮ್ಮಿಳನದಿಂದಲೇ ಆಗಿರುವುದು. ಅದರ ಸೂಕ್ಷ್ಮಾಂಶಗಳ ವಿಚಾರವನ್ನು ಪಾರ್ವತೀಪರಮೇಶ್ವರರು ಬಲ್ಲರು. ಈ ಎಲ್ಲಾ ಭೌತವಸ್ತು ವಿಕಾರಗಳ ಸೃಷ್ಟಿಗೆ ಕಾರಣಗಳಾದ ಸತ್ವ, ರಜ, ತಮೋಗುಣಗಳ ವಿಚಾರವನ್ನು ಬ್ರಹ್ಮವಾಯುಗಳು ಚೆನ್ನಾಗಿಬಲ್ಲರು. ಆದರೆ ಸತ್ವ ಪರಮಾಣು, ರಜ ಪರಮಾಣು ಮತ್ತು ತಮ ಪರಮಾಣುಗಳ ವಿಚಾರವನ್ನು ಸಮಗ್ರವಾಗಿ ಬಲ್ಲವರು ಲಕ್ಷ್ಮೀನಾರಾಯಣರು. ಆ ಒಂದೊಂದು ಬಗೆಯ ಪರಮಾಣುವೂ ಸಹಸ್ರಾರು ಸೂಕ್ಷ್ಮತಮ ಅಂಶಗಳಿಂದ ಕೂಡಿರುವುವಂತೆ!

## ಇದು ನಮ್ಮ ವೈದಿಕ ವಿಜ್ಞಾನ

ಕಾಲದ ಸೂಕ್ಷ್ಮಾಂಶಗಳ ಪರಿಚಯ ಮಾಡಿಕೊಡುವುದಕ್ಕಾಗಿ ಮಾನವರ ಗಮನಕ್ಕೆ ಬಂದಿರುವ ಪರಮಾಣುವಿನ ವಿಚಾರವನ್ನಿಲ್ಲಿ ಎತ್ತಿಕೊಂಡಿದ್ದಾರೆ. ಜಡ ಪರಮಾಣುವೊಂದನ್ನು ಅತಿಕ್ರಮಿಸುವಷ್ಟು ಕಾಲಕ್ಕೆ ಪರಮಾಣುಕಾಲ ಎಂದೇ ಹೆಸರು.

2 ಅಣುಕಾಲ – 1 ಪರಮಾಣುಕಾಲ

3 ಪರಮಾಣುಕಾಲ– 1 ತ್ರಸರೇಣು.

3 ತ್ರಸರೇಣು – 1 ತ್ರುಟಿ.

3 ತೃಟಿ – 1 ವೇಧ.

3 ವೇಧ – 1 ಲವ.

3 ಲವ – 1 ನಿಮೇಷ (ರೆಪ್ಪೆ ಬಡಿಯುವಷ್ಟು ಕಾಲ).

3 ನಿಮೇಷ – 1 ಕ್ಷಣ.

5 ಕ್ಷಣ – 1 ಕಾಷ್ಟ.

15 ಕಾಷ್ಟ – 1 ಲಘು.

15 ಲಘು – 1 ನಾಡಿ.

2 ನಾಡಿ – 1 ಮುಹೂರ್ತ (ಒಂದು ಘಂಟೆ) (2½ಘಳಿಗೆ)

ಸ್ಥೂಲವಾಗಿ ಹೇಳುವುದಾದರೆ,

ಪರಮಾಣುಕಾಲ–ಒಂದು ಮುಹೂರ್ತದ 33 ಲಕ್ಷದಲ್ಲಿ ಒಂದು

ಅಥವ ನಿಮಿಷದ 55000ದಲ್ಲಿ ಒಂದು ಭಾಗ;

ಅಥವ ಸೆಕೆಂಡಿನ 1000ದಲ್ಲಿ ಒಂದು ಭಾಗ

ಕಾಲಮಾನವನ್ನು ಬೇರೆ ರೀತಿಗಳಲ್ಲಿ ವಿಭಾಗಿಸಿ ಹೇಳಿರುವುದುಂಟು.

2½ ಘಳಿಗೆ – 1 ಮುಹೂರ್ತ (ಒಂದು ಘಂಟೆ)

3 ಮುಹೂರ್ತ – 1 ಯಾಮ

8 ಯಾಮ – 1 ದಿವಸ (ಹಗಲು ನಾಲ್ಕು ಯಾಮ; ರಾತ್ರಿ ನಾಲ್ಕು ಯಾಮ)

ಸೂಚನೆ – ರಾತ್ರಿ ಊಟಉಪಚಾರಗಳಿಗೆ ಒಂದು ಯಾಮ ಕೂಡಿಸಿ, ಎಚ್ಚರದ ಕಾಲ (ಹಗಲು) ಐದು ಯಾಮ ಎಂದು ಹೇಳುವುದೂ ಉಂಟು.

ಚಾಂದ್ರಮಾನ ಸೌರಮಾನಗಳನ್ನು ಸರಿದೂಗಿಸಿ, 15 ದಿನಗಳಿಗೆ ಒಂದು ಪಕ್ಷ ಎಂದು ಎಣಿಕೆ ಮಾಡುವರು.

2 ಪಕ್ಷಗಳು – ಒಂದು ಮಾಸ

2 ಮಾಸಗಳು – ಒಂದು ಋತು (ವಸಂತಾದಿ)

6 ಮಾಸಗಳು – ಒಂದು ಅಯನ (ಉತ್ತರಾಯಣ ಮತ್ತು ದಕ್ಷಿಣಾಯನ)

2 ಅಯನಗಳು – 1 ವರ್ಷ

432 ಲಕ್ಷ ವರ್ಷಗಳು – 1 ಮಹಾಯುಗ (ಕೃತ,ತ್ರೇತಾ, ದ್ವಾಪರ, ಕಲಿಯುಗಗಳ ಕಾಲಮಾನದ ಮೊತ್ತ)

71 ಮಹಾಯುಗಗಳು – 1 ಮನ್ವಂತರ

14 ಮನ್ವಂತರಗಳು – ಬ್ರಹ್ಮದೇವರ 1 ಹಗಲು;

(ಸಂಧಿಕಾಲಗಳನ್ನು ಕೂಡಿಸಿ) ಅಷ್ಟೇಕಾಲ ರಾತ್ರಿ

1000 ಮಹಾಯುಗಗಳು ಎರಡೂ ಕೂಡಿ 1ದಿನ ಕಲ್ಪ

ಬ್ರಹ್ಮ ದೇವರ ರಾತ್ರಿ ಸಮೀಪಿಸಿದಾಗ, ದಿನಪ್ರಳಯ ಉಂಟಾಗಿ, ಭೂಲೋಕ, ಅಂತರಿಕ್ಷ ಲೋಕ ಮತ್ತು ಸ್ವರ್ಗ ಲೋಕಗಳ ಜೀವಿಲಯವಾಗಿ, ಜಲ ಪ್ರಳಯ ಉಂಟಾಗುವುದು. ಇದರ ಬೇಗೆಯನ್ನು ತಾಳಲಾರದ ಮಹರ್ಲೋಕ, ಜನಲೋಕಗಳ ನಿವಾಸಿಗಳು ತಪೋ ಲೋಕವನ್ನು ಸೇರಿಕೊಳ್ಳುವರು. ಶ್ರೀಹರಿಯು ತನ್ನ ವಿರಾಡ್ರೂಪವನ್ನು ಮರೆಮಾಡಿ ಅಂಡೋದಕಲ್ಲಿಸ ತನ್ನ ಪದ್ಮನಾಭ ರೂಪದಲ್ಲಿ ಅಂತರ್ಗತನಾಗುವನು. ಬ್ರಹ್ಮದೇವರು ಮೂರು ಲೋಕಗಳ ಜಡ ಚೇತನಾಂಶಗಳನ್ನು ತಮ್ಮಲ್ಲಿ ಲಯಹೊಂದಿಸಿ, ಸರಸ್ವತೀ ದೇವಿಯೊಡನೆ ತಮ್ಮ ಸತ್ಯಲೋಕ ಮಂದಿರದಲ್ಲಿ 1000 ಮಹಾಯುಗ ಪರ್ಯಂತ ನಿದ್ರಿಸುವರು. ಮತ್ತೆ ಎಚ್ಚರವಾದಾಗ, ಮೊದಲಿನಂತೆಯೇ ಮೂರು ಲೋಕಗಳ ಸೃಷ್ಟಿ, ಸ್ಥಿತಿ, ಲಯಗಳು ನಡೆಯುವುವು. ಇದರಲ್ಲಿ, ಮುಂದೆ ಬ್ರಹ್ಮಪದವಿಗೆ ಬರುವ ಮುಖ್ಯ ಪ್ರಾಣದೇವರ ಪಾತ್ರಪ್ರಮುಖವಾದುದು. ಈ ವಿಷಯವನ್ನು ತ್ರಿವಿಕ್ರಮ ಪಂಡಿತಾಚಾರ್ಯರು ಶ್ರೀ ಹರಿವಾಯುಸ್ತುತಿಯಲ್ಲಿ, "ಋಭೂಣಾಂ ಭವನಮಪಿ ವಿಭೋ ಅಭೇದಿ– ಬಭ್ರೇ ಬಭೂವೇ" ಎಂಬ ಮಾತುಗಳಿಂದ ಸ್ಪಷ್ಟಪಡಿಸಿದ್ದಾರೆ.

ಬ್ರಹ್ಮದೇವರ 360 ದಿವಸಗಳು ಅವರಿಗೆ ಒಂದು ವರ್ಷ. ಅಂತಹ ನೂರು ವರ್ಷಗಳು ಅವರ ಆಯುರ್ಮಾನ. ಅದರಲ್ಲಿ ಮೊದಲ ಐವತ್ತು ವರ್ಷಗಳಿಗೆ 'ಪ್ರಥಮ ಪರಾರ್ಧ' ಎಂದು ಹೆಸರು; ಅನಂತರದ ಐವತ್ತು ವರ್ಷಗಳಿಗೆ 'ದ್ವಿತೀಯ ಪರಾರ್ಧ' ಎಂದು ಹೆಸರು. (ಪರ = ಬ್ರಹ್ಮದೇವರ ಆಯುರ್ಮಾನ) ನಾವೀಗ ದ್ವಿತೀಯ ಪರಾರ್ಧದ ಎರಡನೇ ಹಗಲಿನ ಕಲಿಯುಗದಲ್ಲಿ ಸಾಧನೆಗೆ ಬಂದಿದ್ದೇವೆ.

ದ್ವಿತೀಯ ಪರಾರ್ಧದಲ್ಲಿ 37½ ವರ್ಷಗಳು ಕಳೆದು 12½ ವರ್ಷಗಳು ಉಳಿದಿರುವಾಗ ಮಹಾಪ್ರಳಯ ಉಂಟಾಗಿ, ಬ್ರಹ್ಮಾಂಡವೂ ನವಾವರಣವೂ ಇಲ್ಲವಾಗಿ, ಆ ಎಲ್ಲವೂ ಸೂಕ್ಷ್ಮರೂಪದಿಂದ ವಟಪ್ರತ್ರಶಾಯಿಯಾಗುವ ಬಾಲಕೃಷ್ಣನ ಉದರದಲ್ಲಿ ಅಡಗಿರುವುವು. ಬ್ರಹ್ಮಮಾನದ ನೂರು ವರ್ಷಗಳಷ್ಟು ಕಾಲ ಮಹಾಪ್ರಳಯದ ರಾತ್ರಿಯ ಅವಧಿ. ಆಗ, ಸೃಷ್ಟಿಸ್ಥಿತಿಲಯಗಳಿಗೆ ಕಾರಣ ಗಳಾದವುಗಳಿಗೆಲ್ಲಾ ಮೂಲಕಾರಣನಾದ ವಟಪತ್ರಶಾಯಿಯು (ಏಳು ಕೋಟಿ

ಯೋಜನ (7,0000000 x 6.06 ಮೈಲಿ) ಪ್ರಮಾಣದ ಶಿಶುರೂಪಿಯು) ತನ್ನ ಎಡಪಾದದ ಅಂಗುಷ್ಟವನ್ನು ಬಾಯಲ್ಲಿಟ್ಟುಕೊಂಡು ಚೀಪುತ್ತಾ, ಯೋಗನಿದ್ರಾಸ್ಪದನಾಗುವನು. ಆ ಯೋಗ ನಿದ್ರೆಯು, ತನ್ನಲ್ಲಡಗಿಸಿಕೊಂಡಿರುವ ತಾತ್ವಿಕ ದೇವತೆಗಳೇ ಮೊದಲಾದ ಜೀವರ ವಿಶ್ರಾಂತಿಗಾಗಿಯೇ ಹೊರತು. ತನಗಾಗಿ ಅಲ್ಲ.

ಬ್ರಹ್ಮಾಂಡದ ಸೃಷ್ಟಿ–ಸ್ಥಿತಿ–ಲಯಗಳು ಮತ್ತು ಮಹಾಪ್ರಳಯದ ರಾತ್ರಿ – ಇವು ಪರಬ್ರಹ್ಮನಿಗೆ 'ದಿವಸ' ಎಂದು ಎಣಿಸಿ ಹೇಳುವುದು ಕೇವಲ ಔಪಚಾರಿಕ, ನಮ್ಮ ಮನಸ್ಸಿನ ಗ್ರಹಿಕೆಗಾಗಿ ಮಾತ್ರ.

ಪರಮಾಣು, ಅಣು ಮೊದಲಾದ ಕಾಲಾವಯವಗಳಲ್ಲಿ ಬೇರೆ ಬೇರೆ ರೂಪನಾಮಗಳಿಂದಲೂ, ದಿವಸ,ಮಾಸ, ಅಯನ, ವರ್ಷಾದಿಗಳಲ್ಲಿ ಆಯಾ ರೂಪನಾಮಗಳಿಂದಲೂ ವ್ಯಕ್ತನಾಗಿ, ಕಾಲಕಾಲಕ್ಕೆ ತಕ್ಕಂತೆ ಜೀವರ ಸಾಧನೆಗಳನ್ನು ಮಾಡಿಸಿ ಮುಕ್ತರನ್ನಾಗಿ ಮಾಡುವ ಕಾಲಾತ್ಮಕನಾದ ಶ್ರೀಹರಿಯ ಮಹಿಮೆ ಅತ್ಯದ್ಭುತವಾದುದು.

"ಕಾಲಾಂತರ್ಗತ, ಕಾಲನಿಯಾಮಕ, ಕಾಲರೂಪ ತವ,
ದಾಸೋಹಂ ತವದಾಸೋಹಂ ತವ
ದಾಸೋಹಂತವ ದಾಸೋಹಂ ॥"

## ಜೀವಸೃಷ್ಟಿಯ ವಿಚಾರ

ಜೀವರನ್ನು ಬಂಧನದಲ್ಲಿಟ್ಟು, ಅವರ ಅನಾದಿ ಕರ್ಮಬೀಜಗಳನ್ನು ಬೆಳೆಸಿ ಅಳಿಸಿ, ಅವರನ್ನು ಬಂಧಮುಕ್ತರನ್ನಾಗಿ ಮಾಡಿ ಸ್ವರೂಪೋದ್ಧಾರ ಮಾಡುವುದು ಕರುಣಾಮಯನಾದ ಶ್ರೀಹರಿಯ ಸತ್ಯ ಸಂಕಲ್ಪ. ಅವರಿಗೆ ಜನ್ಮಜನ್ಮಾಂತರಗಳಲ್ಲಿ ಒದಗಿ ಬರುವ ದೇಹಗಳಲ್ಲಿ, ಆಯಾ ಜನ್ಮದ ಕರ್ಮಗಳಿಗನುಗುಣಗಳಾದ ಭಾವನೆಗಳು ಅಭಿವ್ಯಕ್ತವಾಗಬೇಕು; ಅದಕ್ಕೆ ತಕ್ಕಂತೆ ದೇಹದ ಧಾತುಗಳ ಮಿಶ್ರಣಗಳಿರಬೇಕು.

ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿರುವಂತೆ, ಹುಟ್ಟಿದ ಮಕ್ಕಳು ತಮಗೆ ಜನ್ಮವಿತ್ತವರ ಗುಣಗಳನ್ನು ರೂಢಿಸಿಕೊಂಡು ತಮ್ಮ ವೈಯಕ್ತಿಕ ಭಾವನೆಗಳಿಗೆ ರೂಪು ಕೊಟ್ಟು ಜೀವನ ಪಥದಲ್ಲಿ ಮುಂದೆ ಮುಂದೆ ಸಾಗುತ್ತಾರೆ. ಅನುವಂಶಿಕ ಗುಣತಂತುಗಳ ಕೊಡುಗೆಯು (Gift of Parental genes) ಈ ತತ್ತ್ವವನ್ನು ಆಧರಿಸಿ ಕೊಂಡಿದೆ.

ಬ್ರಹ್ಮದೇವರು, ಜೀವರಿಗೆ ದೇಹಗಳನ್ನು ಕೊಟ್ಟು ಸೃಷ್ಟಿಯಲ್ಲಿ ತರುವುದಕ್ಕೆ ಮುಂಚಿತವಾಗಿಯೇ ಅವರಿಗೆ ಬಂಧಕಗಳಾಗಬಲ್ಲ ಐದು ಬಗೆಯ ಅಜ್ಞಾನಗಳನ್ನು (ತದಭಿಮಾನಿ ಜೀವರ ಸಹಿತವಾಗಿ) ಸೃಷ್ಟಿಮಾಡಿದರು. ತಮ–ಮೋಹ–ಮಹಾಮೋಹ–ತಾಮಿಸ್ರ–ಅಂಧತಾಮಿಸ್ರ (ತಿಳಿಯದಿರುವಿಕೆ, ತಪ್ಪಾಗಿ ತಿಳಿಯುವುದು, ತಪ್ಪುತಿಳಿವಳಿಕೆಯ ಹಠ, ಕ್ರೋಧ, ಸರ್ವನಾಶ) – ಇವು ಐದು ಅಜ್ಞಾನದ ಬಗೆಗಳು.

ಅನಂತರ ಬ್ರಹ್ಮದೇವರು ತಮ್ಮ ಮನಸ್ಸಿನಿಂದಲೇ ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತರೆಂಬ ಮಕ್ಕಳನ್ನು ಪಡೆದು, ಪ್ರಜಾಸೃಷ್ಟಿಯನ್ನು ಮುಂದುವರಿಸಿರೆಂದು ಆಜ್ಞಾಪಿಸಿದರು. ಹಿಂದಿನ ಬ್ರಹ್ಮಕಲ್ಪಗಳಲ್ಲಿ ಸುಸಂಸ್ಕೃತ ಯೋಗಿಗಳಾಗಿದ್ದ ಅವರು, ಬ್ರಹ್ಮ ಜ್ಞಾನದಲ್ಲಿ ಮಾತ್ರ ಆಸಕ್ತರಾಗಿ ಪ್ರಜಾಸೃಷ್ಟಿ ಕಾರ್ಯದಲ್ಲಿ ತೊಡಗಲು ಒಪ್ಪಲಿಲ್ಲ. ಬ್ರಹ್ಮದೇವರು ಕೋಪಗೊಂಡಂತೆ ನಟಿಸಿದಾಗ, ಆ ಕೋಪ ಭಾವನೆಯು ಅವರ ಹುಬ್ಬುಗಳ ನಡುವೆ ಪ್ರಕಟವಾಯಿತು. ಆ ಕೂಡಲೇ, 'ಸದ್ಯೋಜಾತ' ಎಂಬ ಹೆಸರಿನಿಂದ ರುದ್ರದೇವರು ಜನಿಸಿದರು. ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಅವರು ಪ್ರಜಾಸೃಷ್ಟಿಯನ್ನು ಕೈಗೊಂಡರು. ಆದರೆ, ಅಳುತ್ತಾ ಹುಟ್ಟಿದ ಅವರಸೃಷ್ಟಿಯು ಲೋಕಗಳನ್ನೇ ನುಂಗಿಬಿಡುವಂತಹ ಹಸಿವು, ಬಾಯಾರಿಕೆ, ಕ್ರೋಧಾದಿಗಳಿಗೆ ವಶರಾದ ಪ್ರಮಥಗಣದಿಂದ ತುಂಬಿಹೋಯಿತು. ತಂದೆಯ ಸಲಹೆಯಂತೆ, ರುದ್ರದೇವರು ತಮ್ಮ ಆ ಸೃಷ್ಟಿಯನ್ನು ಕೊನೆಗಾಣಿಸಿ, ಉತ್ತಮ ದೇಹಿಗಳ ಸೃಷ್ಟಿಕೌಶಲ ಪ್ರಾಪ್ತಿಗಾಗಿ ತಪಸ್ಸನ್ನಾಚರಿಸಲು ಸಮುದ್ರವನ್ನು ಹೊಕ್ಕರು.

ಅನಂತರ ಬ್ರಹ್ಮದೇವರು ದೇಹದ ಬೇರೆ ಬೇರೆ ಭಾಗಗಳಿಂದ ಮರೀಚಿ ಮೊದಲಾದ ಋಷಿವರೇಣ್ಯರೂ, ನಾರದರೂ ಹುಟ್ಟಿದರು. ಅವರಿಂದ ಮಾತ್ರವೇ ಪ್ರಜಾವೃದ್ಧಿಯಾಗಲಾರದೆಂದರಿತ ಬ್ರಹ್ಮದೇವರು, ತಮ್ಮ ದೇಹದ ಬಲಭಾಗದಿಂದ ಸ್ವಾಯಂಭುವ ಮನುವನ್ನೂ (ಆದಿಮನು – ಆದಿಮ್, ಅದಮ್, ಅಡಮ್) ಎಡಭಾಗದಿಂದ, ಶತರೂಪಾದೇವಿಯನ್ನೂ ಪಡೆದು, ದಾಂಪತ್ಯ ವಿಧಾನದಿಂದ ಮಕ್ಕಳನ್ನು ಪಡೆಯುನಂತೆ ಆಜ್ಞಾಪಿಸಿದರು. (ನೂರಾರು ರೂಪಗಳಿಗೆ ಆಧಾರಭೂತರಾದ ಶತರೂಪದೇವಿಗೆ 'ಯುವಾದೇವಿ' ಎಂಬ ಹೆಸರೂ ಇದ್ದಿರಬಹುದು. ಅದು Ewe, Havai ಎಂದು ರೂಪಾಂತರಗೊಂಡಿರಬಹುದು)

ಆದಿಮನು ದಂಪತಿಗಳು ಪ್ರಿಯವ್ರತ, ಉತ್ತಾನಪಾದ ಎಂಬ ಪುತ್ರರನ್ನೂ, ಆಕೂತಿ, ದೇವಹೂತಿ, ಪ್ರಸೂತಿ ಎಂಬ ಪುತ್ರಿಯರನ್ನೂ ಪಡೆದರು. ಆಕೂತೀ ದೇವಿಯರನ್ನು ರುಚಿ ಎಂಬ ಋಷಿಗಳಿಗೂ, ದೇವಹೂತೀ ದೇವಿಯನ್ನು ಕರ್ದಮ ಮಹರ್ಷಿಗಳಿಗೂ, ಪ್ರಸೂತೀ ದೇವಿಯನ್ನು ದಕ್ಷ ಪ್ರಜೇಶ್ವರರಿಗೂ ಕೊಟ್ಟು ವಿವಾಹ ಮಾಡಿದರು.

ಇಲ್ಲಿಂದ ಮುಂದೆ ಲೋಕದಲ್ಲಿ ಪ್ರಜಾಸಂತತಿ ಸಮೃದ್ಧವಾಯಿತು. ಕಶ್ಯಪ ಪ್ರಜೇಶ್ವರರ ಹದಿಮೂರು ಮುಂದಿ ಪತ್ನಿಯರಲ್ಲಿ ದಾನವರು, ದೇವತೆಗಳು, ಪಕ್ಷಿಗಳು, ಸರೀಸೃಪಗಳು ಮುಂತಾದ ದೇಹಿಗಳು ಹುಟ್ಟಿದರು.

ಇಲ್ಲಿ ಹೇಳುತ್ತಿರುವುದು ಶ್ವೇತವರಾಹಕಲ್ಪದ, ಎಂದರೆ, ಬ್ರಹ್ಮದೇವರ ಎರಡನೇ, ಹಗಲಿನ ಕಥೆ. ಮೊದಲನೆಯದಾದ ಪದ್ಮ ಕಲ್ಪದಲ್ಲಿ ಜಲಚರಗಳು, ಸರೀಸೃಪಗಳು, ಪಕ್ಷಿಗಳು, ಸಸ್ತನಿ ಮೃಗಗಳು, ಅಶ್ವ ಪಸು ಮೊದಲಾದ ಉತ್ತಮ ವರ್ಗದ ಪ್ರಾಣಿಗಳು, ವಾನರರು, ಮತ್ತು ಮಾನವರು ಎಂಬ ಕ್ರಮದಲ್ಲಿ, ಸುಮಾರು ೨೦೦ ಕೋಟಿ ವರ್ಷಗಳಷ್ಟು ಕಾಲಾವಧಿಯಲ್ಲಿ ದೇಹಿಗಳ ಸೃಷ್ಟಿಯಾಗಿ, ಲಯಕಾರ್ಯವೂ ನಡೆದು ಹೋಗಿತ್ತು. ಆದುದರಿಂದ, ಕಶ್ಯಪರ ಸಂತಾನದಲ್ಲಿ ಹಿಂದಿನ ಬಗೆಯ ಸೃಷ್ಟಿಯ ಆವೃತ್ತಿಯು ಮಾತ್ರ, ಶ್ವೇತವರಾಹಕಲ್ಪದ ಮುನ್ನಡೆಗೆ ತಕ್ಕಂತೆ ನಡೆದಿತ್ತು. ಪದ್ಮಕಲ್ಪದ ಸೃಷ್ಟಿಯನ್ನು ಪರಿಶೀಲಿಸಿದರೆ, ಡಾರ್ವಿನ್ನನ ವಿಕಾಸವಾದದಂತೆಯೇ ಇದೆಯಲ್ಲವೆ! ಡಾರ್ವಿನ್ನನದು ಬುದ್ಧಿವಂತಿಗೆಯ ಊಹೆ. ಇಲ್ಲಿ ಹೇಳಿರುವುದು, ದೇವತೆಗಳ ಮುಖಾಂತರ ನಡೆದ ಬ್ರಹ್ಮದೇವರ ಸೃಷ್ಟಿ.

"ಋಷಯಃ ಸಪ್ತಪೂರ್ವೇ ಚತ್ವಾರೋ ಮನವಸ್ತಥಾ। ಮದ್ಭಾವಾ ಮಾನಸಾಜಾತಾಃ ಏಷಾಂ ಲೋಕ ಇಮಾಃ ಪ್ರಜಾಃ॥" ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ತಿಳಿಸಿದ್ದಾನೆ. ಇದರಿಂದ ತಿಳಿದು ಬರುವುದು – (೧) ಬ್ರಹ್ಮದೇವರ ದ್ವಾರಾ ಪರಬ್ರಹ್ಮನಿಂದ ಜನಿಸಿದ ಸಪ್ತಋಷಿಗಳು ಮತ್ತು ನಾಲ್ವರು ಮನುಮುಖ್ಯರು ಭಗವತ್ಪರ ಮನೋಧರ್ಮಉಳ್ಳವರಾಗಿದ್ದರು, ಅಲ್ಲದೆ, (೨) ಭಗವಂತನು ಜೀವರ ಸ್ವರೂಪ ಸ್ವಭಾವಗಳನ್ನು ಅವರ ದೇಹಗಳಲ್ಲಿ ಹೇಗೆ ಅಡಗಿಸಿಟ್ಟಿದ್ದನೋ ಅಂತಹ ಸ್ವಭಾವ ಗುಣಗಳಿಗೆ ಅನುಗುಣವಾಗಿ ಅವರ ಜೀವನಪಥಗಳು ಸಾಗಿದುವು.

ಇಂತಹ ಋಷಿಮುನಿಗಳು ಭಗವಂತನನ್ನಾರಾಧಿಸಿ, ಸತ್ಪುತ್ರರನ್ನು ಪಡೆಯುತ್ತಿದ್ದಾರಾದರೂ, ಅವರ ಸಂತಾನ ಪರಂಪರೆಯಲ್ಲಿ ಇತರ ಜೀವ ಸ್ವಭಾವಗಳಿಗೆ ಅನುಗುಣಗಳಾದ ಅನುವಂಶಿಕ ಗುಣತಂತುಗಳು ಕ್ರಮಕ್ರಮವಾಗಿ ಪಂಚಿಕೊಂಡುವೆಂಬುದನ್ನೂ, ಜನಿಸಿದ ಮಕ್ಕಳ ಜನ್ಮಾಂತರಗಳ ಸಂಸ್ಕಾರಗಳು ಅವುಗಳೊಡನೆ ಕೂಡಿಕೊಂಡು ಸಾಧನೆಯನ್ನು ಮುಂದುವರಿಸಿದುವು ಎಂಬುದನ್ನೂ ಮರೆಯಲಾಗದು. ದೇಹಿಗಳ ಚರ್ಯೆಗಳಲ್ಲಿ ಕಂಡುಬರುವ ವೈವಿಧ್ಯತೆಗಳಿಗೆ ಈ ಎರಡು ಕಾರಣಗಳು ಹಿನ್ನೆಲೆಯಾಗಿರುವುದನ್ನು ಗಮನದಲ್ಲಿಟ್ಟುಕೊಂಡಿರಬೇಕು.

## ಭೂಮಿಯ ಉದ್ಧಾರ

ಸ್ವಯಂಭುವ ಮನುಗಳು ಬ್ರಹ್ಮದೇವರ ಅಭಿಪ್ರಾಯದಂತೆ ಪ್ರಜಾಸೃಷ್ಟಿಗೆ ಸಿದ್ಧರಾದರು, ಆದರೆ, ಸೃಷ್ಟಿಯಲ್ಲಿ ಬರುವ ಪ್ರಜೆಗಳಿಗೆ ತಮ್ಮ ತಮ್ಮ ಸಾಧನೆಗಳನ್ನು

ಮಾಡಿಕೊಳ್ಳಲು ಬೇಕಾದ ಭೂಮಿಯೇ ಇರಲಿಲ್ಲ. ಪದ್ಮಕಲ್ಪದಲ್ಲಿ ಸೃಷ್ಟಿಯಾಗಿದ್ದ ಭೂಮಂಡಲವನ್ನು ಹಿರಣ್ಯಾಕ್ಷನೆಂಬ ದೈತ್ಯನು ಚಾಪೆಯಂತೆ ಸುರುಳಿ ಮಾಡಿ, ಪಾತಾಳದ ನೀರದಲ್ಲಿ ಮುಳುಗಿಸಿಟ್ಟಿದ್ದ.

ಈಗಿನ ಭೂಗೋಳ ಶಾಸ್ತ್ರವನ್ನು ಮಾತ್ರ ಬಲ್ಲವರಿಗೆ, ಭೂಮಿಯನ್ನು ಚಾಪೆಯಂತೆ ಸುತ್ತುವುದು ಎಂಬ ಮಾತನ್ನು ಕೇಳಿ ನಗೆಯು ಬರಬಹುದು. ಆದರೆ, ನಿಜ ಹೇಳುವುದಾದರೆ, ಹಾಗೆ ನಗುವವರನ್ನು ಕಂಡು ನಾವು ನಗಬೇಕಾಗುವುದು. ಭೂಮಂಡಲದ ಆಕಾರ, ವಿಸ್ತಾರ ಮೊದಲಾದುವನ್ನು ಅರಿಯದಿದ್ದ ಪಾಶ್ಚಾತ್ಯ ಪಾದ್ರಿಗಳ ಮಾತುಗಳನ್ನು ನಂಬಲಾರದೆ ಆಗಿನ ವಿದ್ವಾಂಸರು, ಹೊಸರೀತಿಯಲ್ಲಿ ಆಲೋಚನೆ ಮಾಡಿ, ತಮಗೆ ಸರಿಯೆನಿಸಿದಂತೆ ವಿಷಯಗಳನ್ನು ಮಂಡಿಸ ಲಾರಂಭಿಸಿದರು. ಕೇವಲ ೧೨೦೦೦ ಕಿ.ಮೀ. ವ್ಯಾಸವುಳ್ಳ ಭೂಮಿಯನ್ನು ಕೇಂದ್ರವಾಗಿಟ್ಟುಕೊಂಡು, ಭೂಗೋಳಕ್ಕಿಂತ ೧೧೦ ಪಾಲು ದೊಡ್ಡದಾದ ಸೂರ್ಯಗೋಳವು ಪ್ರದಕ್ಷಿಣೆಯಾಗಿ ಭ್ರಮಿಸುವುದೆಂಬ ಮಾತನ್ನು ಆಗಿನ ಬುದ್ಧಿವಂತರು ನಂಬಲಾರದವರಾದರು.

ಆದರೆ ನಿಜಾಂಶವೇ ಬೇರೆ. ಭೂಮಂಡಲವೆಂಬುದು, ಒಂದನ್ನೊಂದು ವೃತ್ತಾಕಾರವಾಗಿ ಬಳಸಿ ನಿಂತ ಜಂಬೂ – ಪ್ಲಕ್ಷ – ಶಾಲ್ಮಲ, ಕುಶ, – ಕ್ರೌಂಚ – ಶಾಕ – ಪುಷ್ಕರಗಳೆಂಬ ಏಳು ದ್ವೀಪಗಳಿಂದಲೂ, ಅವುಗಳನ್ನು ಪರಸ್ಪರ ಪ್ರತ್ಯೇಕಿಸುವ ಲವಣ, ಇಕ್ಷು, ಸುರಾ, ಸರ್ಪಿ, ಧಧಿ, ಕ್ಷೀರ, ಶುದ್ಧೋದಕ ಸಮುದ್ರಗಳಿಂದಲೂ ಯುಕ್ತವಾಗಿ, ಐದು ಕೋಟಿ ಯೋಜನ ಅಥವಾ ೪೮ ಕೋಟಿ ಕಿ.ಮೀ. ವ್ಯಾಸವುಳ್ಳದ್ದಾಗಿಯೂ ಇದೆ. ಜಂಬೂದ್ವೀಪದ ವ್ಯಾಸ, ೬೦ ಲಕ್ಷ ಕಿ.ಮೀ. ಆಗಿದೆ. ಒಂದು ಲಕ್ಷಯೋಜನ ಎತ್ತರವಾಗಿ ನಿಂತ ಅದರ ದಕ್ಷಿಣದಂಚಿನಲ್ಲ ಸ್ಥಿರವಾಗಿ ನಿಂತಿರುವುದು ನಮಗೆ ಗೊತ್ತಿರುವ ಭೂಗೋಳ. ಜಂಬೂ ದ್ವೀಪದ ನಟ್ಟ ನಡುವೆ, ಸುಮಾರು ೯ ಲಕ್ಷ ಕಿ.ಮೀ. ಎತ್ತರವಾಗಿ ಮೇರು ಪರ್ವತವೆಂಬ ಸುವರ್ಣಗಿರಿ ಇದೆ. ಅದು ಇಡೀ ಭೂಮಂಡಲದ ಕೇಂದ್ರವೂ ಆಗಿದೆ. ಕಟ್ಟ ಕಡೆಯ ಪುಷ್ಕರ ದ್ವೀಪದಲ್ಲಿ ಭೂಮಂಡಲದ ಕೋಟೆಯ ಗೋಡೆಯಂತೆ ಮಾನಸೋತ್ತರ ಪರ್ವತವೆಂಬುದಿದೆ. ಆ ನೇರದಲ್ಲಿ, ಮೇರು ಪರ್ವತಕ್ಕೆ ಪ್ರದಕ್ಷಿಣೆಯಾಗಿ, ನಮ್ಮ ಭೂಗೋಳದಿಂದ ೯,೩೦,೦೦೦೦೦ ಮೈಲಿ ದೂರದಲ್ಲಿ (೧೫ ಕೋಟಿ ಕಿ.ಮೀ.) ಸೂರ್ಯರಥದ ಸಂಚಾರ. ಈ ಸಂಬಂಧವಾದ ಹೆಚ್ಚಿನ ವಿವರಗಳನ್ನು ಮುಂದೆ ಕಾಲಚಕ್ರದ ವರ್ಣನೆಯಲ್ಲಿ ಕಾಣಬಹುದು.

ಭೂಮಂಡಲವು ಅಷ್ಟು ವಿಶಾಲವಾಗಿದ್ದರೆ, ಕ್ಷಿಪಣಿಗಳಲ್ಲಿ ಸಂಚರಿಸುವವರಿಗೆ, ನಮ್ಮ ಭೂಗೋಳವಲ್ಲದ ಇತರ ಭಾಗಗಳು ಏಕೆ ಕಂಡುಬಂದಿಲ್ಲ ಎಂಬ ಪ್ರಶ್ನೆಯು ಉದ್ಭವಿಸುವುದು ಸಹಜ. ಈ ಪ್ರಶ್ನೆಗೆ ತಕ್ಕ ಉತ್ತರವಿದೆ. ನಮ್ಮ ಭೂಗೋಳ ಅಥವಾ ಭರತಖಂಡವು ಕರ್ಮಭೂಮಿ. ಇತರ ಭಾಗಗಳೆಲ್ಲಾ ದೇವತಾಪುರುಷರ ಭೋಗ ಭೂಮಿಗಳು. ಅವುಗಳ ರಚನೆಯಲ್ಲಿ ಕೂಡಿರುವ ಘಟಕಗಳು ಹೆಚ್ಚು ಸೂಕ್ಷ್ಮವಾದುವು; ಆದುದರಿಂದ ಮಾನವರ ದೃಷ್ಟಿಗೆ ಅಗೋಚರ. ಹಾಗೆಂದು ಪುರಾಣೋಕ್ತಿ ಇದೆ – "ಅದೃಶ್ಯಾಧಾತವಃ ಸರ್ವೇಸಮುತ್ಪನ್ನಾಜಲಾದಯಃ। ಅದೃಶ್ಯಾಪೃಥಿವೀ ಪದ್ಮಂ ಮೇರು ಪರ್ವತ ಕರ್ಣಿಕಂ॥"

ಉತ್ತರಿಸಲೇಬೇಕಾದ ಇನ್ನೂ ಒಂದು ಪ್ರಶ್ನೆ ಉಳಿದಿದೆ. ಭೂಮಿಯನ್ನು ಚಾಪೆಯ ಹಾಗೆ ಸುತ್ತಬಹುದೇ ಎಂಬುದು ಆ ಪ್ರಶ್ನೆ. ಅದು, ದೇವದಾನವರ ಸಾಮರ್ಥ್ಯ ವಿಶೇಷಗಳನ್ನು ಅರ್ಥಮಾಡಿಕೊಂಡಾಗ ಮಾತ್ರ ಪರಿಹಾರ ಕಾಣಬಲ್ಲ ಪ್ರಶ್ನೆ.

ಸ್ವಾಯಂಭುವ ಮನುಗಳ ಸಮಸ್ಯೆಯು ಉದ್ಭವವಾದಾಗಲೇ ಶ್ರೀ ಹರಿಯು ವರಾಹ ರೂಪದಿಂದ ಕಾಣಿಸಿಕೊಂಡು, ಸಮುದ್ರವನ್ನು ಭೇದಿಸಿಕೊಂಡು ಹೋಗಿ, ಹಿರಣ್ಯಾಕ್ಷನನ್ನು ವಧಿಸಿ, ತನ್ನ ಕೋಡಿನಿಂದ ಭೂಮಂಡಲವನ್ನು ಮೇಲಕ್ಕೆತ್ತಿ ತಂದನು. ತನ್ನೊಡನೆ ಯುದ್ಧಕ್ಕೆ ಬಂದ ಮಧು ಕೈಟಭರನ್ನು ಕೊಂದು, ಅವರ ಮೇದಸ್ಸನ್ನು ಭೂಸಾರದೊಂದಿಗೆ ಬೆರೆಸಿ, ಮತ್ತೆ ಭೂಮಂಡಲವನ್ನು ಸುರುಳಿಯಾಗಿ ಸುತ್ತಲಾಗದಂತೆ ಅದನ್ನು ಗಟ್ಟಿಮಾಡಿದನು. ಆದುದರಿಂದಲೇ ಭೂಮಿಗೆ 'ಮೇದಿನಿ' ಎಂಬ ಹೆಸರು ಬಂದಿತು. ಅನಂತರ ಭೂಮಂಡಲವನ್ನು ಮೊದಲಿನಂತೆ ಬಿಚ್ಚಿ ಹರಡಿ, ಅದು ಮತ್ತೂ ಭದ್ರವಾಗಿರುವಂತೆ ಭೂಮಂಡಲದ ಸುತ್ತಲೂ ಇರುವ ಲೋಕಾಲೋಕ ಪರ್ವತದ ಮೇಲೆ ಬೃಹದಾಕಾರದ ನಾಲ್ಕು ಆನೆಗಳನ್ನು ನಿರ್ಮಿಸಿಬಿಟ್ಟನು.

ಮುಂದೆ, ಹಿರಣ್ಯಕಶಿಪುವಿನ ತಮ್ಮನಾಗಿ ಹಿರಣ್ಯಾಕ್ಷನು ಹುಟ್ಟಿಬಂದಾಗ, ಮತ್ತೆ ಭೂಮಿಯನ್ನು ಕದ್ದೊಯ್ಯಲು ಪ್ರಯತ್ನಿಸಿದನು. ಅದು ಸಾಧ್ಯವಾಗಲಿಲ್ಲ. ಯಜ್ಞಯಾಗಾದಿಗಳಿಗೆ ಅಡ್ಡಿಯೊಡ್ಡುವ ದೃಷ್ಟಿಯಿಂದ ಅವನು ಭೂದೇವಿಯನ್ನು ಅಪಹರಿಸಿಕೊಂಡು ಹೋದನು. ಈಗಿನ ಭಾರತದ ಪಶ್ಚಿಮ ಕರಾವಳೀ ಪ್ರದೇಶಕ್ಕೆ ಹೋಗಿ, ಸಮುದ್ರಕ್ಕೆ ಹಾರಿ ಭೂದೇವಿಯನ್ನು ರಸಾತಳ ಲೋಕದಲ್ಲಿ ಬಚ್ಚಿಟ್ಟನು. ಅವನು ಜಿಗಿಯುವಾಗ, ಅವನ ಪದಾಘಾತಕ್ಕೆ ಸಿಕ್ಕಿದ ಕರಾವಳೀ ಪ್ರದೇಶದ ಬಹುಭಾಗವು ಸಮುದ್ರದಲ್ಲಿ ಮುಳುಗಿ ಹೋಯಿತು. ಇದನ್ನೆಲ್ಲಾ ಕುರಿತು ಬ್ರಹ್ಮದೇವರು ಆಲೋಚಿಸುತ್ತಿರುವಾಗಲೇ ಶ್ರೀಹರಿಯು ಬ್ರಹ್ಮದೇವರ ಬಲ ಮೂಗಿನ ಹೊಳ್ಳೆಯಿಂದ

ಸಣ್ಣವರಾಹ ರೂಪಿಯಾಗಿ ಹೊರಬಂದು, ನೋಡುತ್ತಿದ್ದ ಹಾಗೆಯೇ ಆನೆಯಂತೆ ಬೃಹದಾಕಾರ ಹೊಂದಿ ಸಮುದ್ರದೊಳಹೊಕ್ಕನು. ಅಲ್ಲಿ ಹಿರಣ್ಯಾಕ್ಷನನ್ನು ವಧಿಸಿ, ಭೂದೇವಿಯನ್ನು ಕಂಕುಳಲ್ಲೆತ್ತಿಕೊಂಡು ಮೇಲಕ್ಕೆ ಬಂದನು. ಅದೇ ಸಮಯದಲ್ಲಿ ಮುಳುಗಿದ್ದ. ಭಾರತದ ಕರಾವಳೀ ಪ್ರದೇಶವನ್ನು ತನ್ನ ಕೋಡುಗಳಿಂದ ಮೇಲಕ್ಕೆತ್ತಿ ನಿಲ್ಲಿಸಿದನು. ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿಗೆ ೧೮ ಮೈಲಿ ಉತ್ತರ ದಿಕ್ಕಿನಲ್ಲಿರುವ ವರಾಹಪರ್ವತವು (ಕುದುರೇಮುಖದ ಗಣಿಗಳ ಬಳಿ) ಈಗ ಹೇಳಿದ ಪುರಾಣ ಸತ್ಯಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದೆ. ಅಲ್ಲಿನ ವರಾಹ ಮೂರ್ತಿಯ ವಿಗ್ರಹದ ಕೋಡುಗಳಿಂದ ಹುಟ್ಟಿ ಹರಿಯುವುವು ತುಂಗಾ ಮತ್ತು ಭದ್ರಾ ನದಿಗಳು. ಆದುದರಿಂದ ತುಂಗಭದ್ರಾ ನದಿಯು 'ವರಾಹ ತನಯಾ' ಎನಿಸಿಕೊಂಡಿದೆ.

ಮೊದಲ ಬಾರಿ ಹಿರಣ್ಯಾಕ್ಷನನ್ನು ವಧಿಸಿದ ವರಾಹಮೂರ್ತಿಯು ದಕ್ಷಿಣ ದೇಶದ ಶ್ರೀಮುಷ್ಣದಲ್ಲಿ ತನ್ನ ಸನ್ನಿಧಾನವನ್ನಿರಿಸಿದನು. ಅವನಿಗೆ ಆದಿವರಾಹನೆಂದು ಹೆಸರು. ಎರಡನೆಯ ಬಾರಿ ಭೂದೇವಿಯನ್ನೆತ್ತಿಕೊಂಡು ಬಂದ ವರಾಹ ಮೂರ್ತಿಯು ಭೂವರಾಹನೆಂದು ಪ್ರಸಿದ್ಧನಾಗಿ ವೇಂಕಟಾಚಲದ ಮೇಲೆ ಸ್ವಾಮಿ ಪುಷ್ಕರಣೀ ದಡದಲ್ಲಿ ನೆಲೆಸಿದ್ದಾನೆ.

ಭೂಪದರ ಶಾಸ್ತ್ರಜ್ಞರ ಮಾತೂ ಪುರಾಣ ಸತ್ಯವನ್ನು ಮನಗಾಣಿಸುತ್ತದೆ. ಇಲ್ಲಿ ನೋಡಿ–Geologists tell us that the west coast region of India, which had been sub-merged long back, has been recently lifted up.

"ಶ್ರೀಕೃಷ್ಣಾರ್ಪಣಮಸ್ತು"

---

# ಸಾಂಖ್ಯ ಶಾಸ್ತ್ರೋಪದೇಶ

ಕರ್ದಮ ಮುನಿಗಳು ದೇವಹೂತೀ ದೇವಿಯನ್ನು ಮದುವೆಯಾದ ಮೇಲೆ, ಕೇವಲ ದಾಂಪತ್ಯ ಸುಖಕ್ಕಾಗಿ ಹಾತೊರೆಯದೆ, ಬಹುಕಾಲ ತಪಸ್ಸಿನಲ್ಲಿ ನಿರತರಾಗಿದ್ದರು. ರಾಜಕುಮಾರಿಯಾದ ಆ ದೇವಿಯೂ ಬೇಸರದೆ ಪತಿಸೇವೆಯನ್ನು ಮಾಡಿಕೊಂಡಿದ್ದಳು. ಬಹುಕಾಲದ ನಂತರ ಪ್ರಸನ್ನರಾದ ಕರ್ದಮರು, ತಮ್ಮ ತಪಶ್ಶಕ್ತಿಯಿಂದ ದಿವ್ಯ ವಿಮಾನವನ್ನು ಸೃಷ್ಟಿಸಿ, ಅದರಲ್ಲಿ ನೂರುವರ್ಷಗಳಷ್ಟು ಕಾಲ ತಮ್ಮ ಪತ್ನಿಯೊಂದಿಗೆ ವಿಹರಿಸಿದರು. ಆ ವಿಮಾನವು ಸರ್ವಸಂಮೃದ್ಧವಾಗಿದ್ದು, ಅನೇಕ ಮಂದಿ ಸ್ತ್ರೀ ಪರಿವಾರದವರು ಆ ದಂಪತಿಗಳ ಸೇವೆಯಲ್ಲಿ ನಿರತರಾಗಿದ್ದರಂತೆ. ಮೇರು ಪರ್ವತದ ನಾನಾ ಸುಂದರ ಪ್ರದೇಶಗಳಲ್ಲಿ ವಿಹರಿಸಿದ ನಂತರ,

> "ಪ್ರೇಕ್ಷಯಿತ್ವಾ ಭುವೋಗೋಳಂ ಪತ್ನ್ಯೈ ಯಾವಾನ್ಸ್ವಸಂಸ್ಥಯಾ।
> ಬಹ್ವಾಶ್ಚರ್ಯಂ ಮಹಾಯೋಗೀ ಸ್ವಾಶ್ರಮಾಯನ್ವವರ್ತತ ॥"

ಎಂಬುದಾಗಿ ಭಾಗವತದಲ್ಲಿ ಉಕ್ತವಾಗಿದೆ (೩-೨೩-೪೩)

"ಅತ್ಯಾಶ್ಚರ್ಯಕರವಾದ ಭೂಗೋಳವನ್ನು ಪತ್ನಿಗೆ ತೋರಿಸಿ ಭಾರತ ದೇಶದಲ್ಲಿನ ತಮ್ಮ ಆಶ್ರಮಕ್ಕೆ ಹಿಂದಿರುಗಿದರು" ಎಂಬುದು ಶ್ಲೋಕದ ಅಭಿಪ್ರಾಯ ಕರ್ದಮ ದಂಪತಿಗಳು ವಿಮಾನದಲ್ಲಿ ಸಂಚರಿಸಿ ಬಂದುದು ಮೇರು ಪರ್ವತದ ಸುತ್ತ ಮುತ್ತಲಿನ ಪ್ರದಶದಲ್ಲಿ; ಇಡೀ ಭೂಮಂಡಲದಲ್ಲಲ್ಲ. ಆದುದರಿಂದ, ಮೇಲಿನ ಶ್ಲೋಕದಲ್ಲಿ ಹೆಸರಿಸಿರುವ ಭೂಗೋಳವು ನಾವೀಗ ತಿಳಿದಿರುವ ಭೂಗೋಳ ಅಥವ ಭರತಖಂಡವೇ ಎಂದು ಹೇಳಬಹುದು.

ಲೋಕದಲ್ಲಿ ಸಾಂಖ್ಯ ಶಾಸ್ತ್ರವನ್ನು ಬಿತ್ತರಿಸುವುದಕ್ಕಾಗಿ, ಶ್ರೀಹರಿಯೇ ಕರ್ದಮ ದೇವಹೂತಿಯರ ಪುತ್ರನಾಗಿ 'ಕಪಿಲ' ಎಂಬ ಹೆಸರಿನಿಂದ ಅವತರಿಸಿದನು. ಪುತ್ರ ಪುತ್ರಿಯರ ಜನನಾನಂತರ ಕರ್ದಮರು ಪೂರ್ಣ ವಿರಕ್ತರಾಗಿ ತಪಸ್ಸಿಗೆ ಹೊರಟುಬಿಟ್ಟರು.

ಕಪಿಲನಾಮಕ ಪರಾತ್ಮನು ತಮ್ಮ ತಾಯಿ ಎನಿಸಿದ ದೇವಹೂತಿ ದೇವಿಗೆ ಉಪದೇಶಮಾಡಿದ ಸಾಂಖ್ಯಶಾಸ್ತ್ರವು ಮುಮುಕ್ಷು ಜೀವರಿಗೆ ಅತ್ಯಂತ ಮನನೀಯವಾಗಿದೆ. ಕಾಲಾಂತರದಲ್ಲಿ ಮತ್ತೊಬ್ಬ ಕಪಿಲನೆಂಬ ಋಷಿಯು ರಚಿಸಿದ

ಸಾಂಖ್ಯ ಶಾಸ್ತ್ರವೆಂಬುದೂ ಇದೆ. ಆ ಎರಡನೆಯದು ಗ್ರೀಸ್ ದೇಶದ ಅರಿಸ್ಟಾಟಲ್ ಮೊದಲಾದವರಿಂದ ಸ್ವೀಕೃತವಾಗಿ, ಈಗಿನ ವಿಜ್ಞಾನ ಶಾಸ್ತ್ರಕ್ಕೆ ಸೀಮಿತವಾದ ಈ ಶಾಸ್ತ್ರವು ಕಲಿಯುಗದ ಕಲ್ಮಷತರುವಾಗಿದೆಯೇ ಹೊರತು ನಿಜ ಸಾಂಖ್ಯಶಾಸ್ತ್ರದಂತೆ ಕಲ್ಪತರುವಾಗಿಲ್ಲ.

ಕಪಿಲದೇವರು ಉಪದೇಶಿಸಿದ ಸಾಂಖ್ಯಶಾಸ್ತ್ರವು ಭೌತಪ್ರಪಂಚದ ಇತಿಮಿತಿಗಳನ್ನೂ, ಮೋಕ್ಷಸಾಧನೆಯ ಮಾರ್ಗವನ್ನೂ ತಿಳಿಸಿಕೊಡುತ್ತದೆ ಅತ್ಯಗತ್ಯವಾದ ಅದರ ಸಾರಾಂಶವು ಈರೀತಿಯಾಗಿದೆ.

"ಮಾನವ ದೇಹದಲ್ಲಿ ಅಡಗಿರುವ ತತ್ವಗಳು ಯಾವ ಯಾವವು ಎಂಬುದನ್ನು ಯಥಾರ್ಥವಾಗಿ ತಿಳಿದರೆ ಸಂಸಾರಬಂಧನವು ಬಿಟ್ಟು ಹೋಗಿ ನಿತ್ಯಾನಂದಪ್ರದವಾದ ಮೋಕ್ಷಪದವಿಯು ದೊರೆಯುವುದು. "ಮನಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ" ಎಂಬ ಮಾತು ಅಕ್ಷರಶಃ ಸತ್ಯವಾದುದು. ಮನಸ್ಸು ಸಾಂಸಾರಿಕ ವಿಷಯಗಳಲ್ಲಿಯೇ ಲೀನವಾದರೆ ಕಾಮಕ್ರೋಧಾದಿಗಳು ಅಧಿಕವಾಗಿ ಜನ್ಮ ಜನ್ಮಾಂತರಗಳಿಗೆ ಕಾರಣವಾಗುವುದು. ಅದೇ ಮನಸ್ಸು ಜಗಜ್ಜನ್ಮಾದಿಕಾರಣನಾದ ಶ್ರೀಹರಿಯ ಕಡೆಗೆ ತಿರುಗಿದರೆ, ಸಂಸಾರ ಸುಖದ ಆಸೆ ಕಡಿಮೆಯಾಗುತ್ತಾ ಹೋಗುವುದು. ಸತ್ಸಹವಾಸದಿಂದ ಇಂತಹ ಅಭ್ಯಾಸವು ಮುಂದುವರಿಯುವುದು.

"ಭಗವಂತನ ಮಾಹಾತ್ಮ್ಯವನ್ನೂ, ಜೀವರ ಅಲ್ಪಜ್ಞತೆ, ಅಲ್ಪಶಕ್ತಿ ಮೊದಲಾದುವನ್ನೂ ಚೆನ್ನಾಗಿ ಅರ್ಥಮಾಡಿಕೊಂಡು ಭಗವಂತನಲ್ಲಿಯೇ ಸ್ನೇಹವನ್ನು ಉಂಟುಮಾಡಿಕೊಳ್ಳುವುದಕ್ಕೆ ಭಕ್ತಿ ಎಂದು ಹೆಸರು.

"ದೇಹಗಳ ಉತ್ಪತ್ತಿಗೆ ಅವಶ್ಯಕವಾದ ಮೂಲ ವಸ್ತುವಿಗೆ ಅವ್ಯಕ್ತ ಪ್ರಕೃತಿ ಎಂದು ಹೆಸರು. ಅದು ಭಗವಂತನ ನಿತ್ಯ ಸಹಚಾರಿಣಿಯಾದ ಲಕ್ಷ್ಮೀದೇವಿಯ ವಶದಲ್ಲಿರುವುದು. ಜೀವರ ಅನಾದಿ ಬಂಧನಕ್ಕೆ ಕಾರಣವಾದ ಅವರ ಲಿಂಗಶರೀರಗಳೂ ಪ್ರಾಕೃತ ವಸ್ತುಮೂಲವಾದುವೇ ಆಗಿವೆ. ಮೂಲ ಪ್ರಕೃತಿಯಿಂದಾದ ವಸ್ತುವಿಶೇಷಗ ಳಿಂದ ಜೀವರಿಗೆ ಸ್ಥೂಲ ಶರೀರಗಳನ್ನು ಕೊಟ್ಟು, ಅದರ ಮೂಲಕ ಸುಖದುಃಖಗಳ ಪರಿಚಯ ಮಾಡಿಸಿ, ಜೀವರು ದುಃಖರಹಿತವಾದ ಸುಖವನ್ನಪೇಕ್ಷಿಸುವಂತೆ ಮಾಡುವುದು ದೇವರ ಸಂಕಲ್ಪ.

"ಜೀವರು ತಮ್ಮ ಅಸ್ವಾತಂತ್ರ್ಯವನ್ನು ಅರಿತುಕೊಂಡು, "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ" ಎಂಬುದರ ನಿಜಾರ್ಥವನ್ನು ತಿಳಿದು ನಿಷ್ಕಾಮ ಕರ್ಮಾಚರಣೆಯಲ್ಲಿ ರತರಾದರೆ, ಕ್ರಮಕ್ರಮವಾಗಿ ಪ್ರವೃತ್ತಿ ಮಾರ್ಗವು ನಿವೃತ್ತಿ

ಮಾರ್ಗಕ್ಕೆ ಅವಕಾಶ ಮಾಡಿಕೊಡುವುದು; ಭಗವಂತನಲ್ಲಿ ಭಕ್ತಿಯು ಕುದುರಿಕೊಳ್ಳುವುದು.

"ಧ್ಯಾನವು ಭಗವದ್ಭಕ್ತಿಗೆ ಪೋಷಕವಾದುದು. ಭಗವಂತನು ಜಡಗುಣದೂರವಾಗಿ, ನಮ್ಮಂತೆ ಆಕಾರಗಳಿಲ್ಲದವನಾದರೂ, ಕೇವಲ ಜ್ಞಾನಾನಂದ ಮಯಗಳಾದ ಅನಂತರೂಪಗಳು ಅವನಿಗುಂಟು. ಯಮ ನಿಯಮಾದಿ ಯುಕ್ತವಾದ ಯೋಗ ಮಾರ್ಗದಿಂದ ಆ ಮಹಾಮಹಿಮನನ್ನು ಕಾಣಬಹುದು. ಏಕಾಂತದಲ್ಲಿ ಕುಳಿತು, ಆ ದೇವ ದೇವನ ದಿವ್ಯ ಸ್ವರೂಪವನ್ನು ಮನಸ್ಸಿನಲ್ಲಿ ಭಾವಿಸಿ ನಿರಂತರ ಧ್ಯಾನಮಾಡುವ ಅಭ್ಯಾಸವು ಪಕ್ವವಾದಾಗ, ಧ್ಯಾನಿಸುವ ಜೀವನ ಹೃತ್ಕಮಲದಲ್ಲಿ ಅಂತರಾತ್ಮನ ನಿಜರೂಪದರ್ಶನವಾಗುವುದು. ಇದಕ್ಕೆ ಅಪರೋಕ್ಷದರ್ಶನ ಎಂದು ಹೆಸರು.

"ಭಕ್ತರಲ್ಲಿ ಸಾತ್ವಿಕ, ರಾಜಸ, ತಾಮಸ ಭಕ್ತರೆಂದು ಬಗೆಬಗೆಯಾಗಿರುವರು. ಪರಮಸಾತ್ವಿಕರು ಮುಕ್ತಿ ಸುಖವನ್ನು ಬಯಸುವುದಿಲ್ಲ. ಪರಮಾತ್ಮನ ದರ್ಶನ, ಸ್ಮರಣ, ಕೀರ್ತನಾದಿಗಳಿಂದಲೇ ಸಂತೃಪ್ತರಾದ ಅವರು ಏಕಾಂತ ಭಕ್ತರು.

"ಜೀವರು ಬಂಧಮುಕ್ತರಾಗಬೇಕಾದರೆ ಪ್ರಕೃತಿಪುರುಷರ ವಿವೇಕ ಅಗತ್ಯ. ಜೀವರು ಚಿದಾನಂದ ಸ್ವರೂಪರೇ ಆಗಿದ್ದರೂ, ಅವರಿಗೆ ಅನಾದಿಯಿಂದ ಆವರಕವಾಗಿರುವ ಅಜ್ಞಾನ ಶರೀರ (ಲಿಂಗಶರೀರ) ಪ್ರಾಕೃತವಾದುದು. ಆದುದರಿಂದಲೇ ಸಾತ್ವಿಕ–ರಾಜಸ–ತಾಮಸ ಕರ್ಮ ಬೀಜಗಳು ಅದರಲ್ಲಿ ಅಡಕವಾಗಿರುವುವು. ಇಂತಹ ಬದ್ಧ ಜೀವರಿಗೆ ಶ್ರೀದೇವಿಯ ವಶದಲ್ಲಿರುವ ಅವ್ಯಕ್ತ ಪ್ರಕೃತಿಯ ವಿಕಾರಗಳಿಂದ ಸ್ಥೂಲದೇಹಗಳನ್ನು ಕೊಟ್ಟು ಕರ್ಮಗಳನ್ನು ಬೆಳೆಸಿ, ಸುಖದುಃಖಗಳ ಅನುಭವಗಳನ್ನು ಕೊಟ್ಟು, ಯೋಗ್ಯ ಜೀವರಿಗೆ ತನ್ನಲ್ಲಿ ಭಕ್ತಿಯೋಗುವುಂಟಾಗುಮಂತೆ ಮಾಡವುದು ಸ್ವತಂತ್ರ ಕರ್ತನ ಕರುಣೆಯ ಪ್ರಸಾದ.

"ಭೌತ ಇಂದ್ರಿಯಗಳ ಮುಖಾಂತರ ಸುಖದುಃಖಗಳ ಅನುಭವ ಉಂಟಾಗಿ ಜ್ಞಾನೋದಯವಾಗುವುದು. ಮನಸ್ಸು ಇಂದ್ರಿಯಗಳ ಕೇಂದ್ರ. ಅದರ ನಿಯಮನ ಮುಖಾಂತರ ಭಗವಂತನ ಧ್ಯಾನಮಾಡುವುದೇ ಮುಕ್ತಿಗೆ ಸುಗಮ ಮಾರ್ಗ

"ದಿವ್ಯ ಸುಂದರಮೂರ್ತಿಯೂ, ಪ್ರಸನ್ನಾರವಿಂದನೂ ಆದ ಅಂತರಾತ್ಮನನ್ನು ಹೃದಯಕಮಲದಲ್ಲಿ ಚಿಂತಿಸಿ ಧ್ಯಾನಂಗತನನ್ನಾಗಿ ಮಾಡಿಕೊಳ್ಳುವುದೇ ಪರಮಪುರುಷಾರ್ಥ ಸಾಧನ."

# ಪ್ರಿಯವ್ರತರಾಯರ ಚರಿತ್ರೆ

ಶ್ರೀಮದ್ಭಾಗವತ ಚತುರ್ಥ ಸ್ಕಂಧದಲ್ಲಿ ದಕ್ಷಯಜ್ಞಧ್ವಂಸ ಮತ್ತು ರಕ್ಷಣೆ, ಧ್ರುವ ಚರಿತ್ರೆ, ಪೃಥು ಚರಿತ್ರೆ, ರುದ್ರಗೀತೆ, ಪುರಂಜನಕಥಾ ಮೊದಲಾದ ಭಗವನ್ಮಹಿಮಾದ್ಯೋತಕ ಕಥಾನಕಗಳು ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಪಂಚಮ ಸ್ಕಂಧದ ಆರಂಭದಲ್ಲಿ ಋಷಭಾವತಾರ ಮತ್ತು ಜಡಭರತೋಪಾಖ್ಯಾನಗಳು ಮನಮೋಹಕವಾಗಿ, ತತ್ವದ ಗಣಿಗಳಾಗಿವೆ.

ವಿಜ್ಞಾನ ನೇತ್ರಾಂಜನವೆಂಬ ನಮ್ಮ ಪ್ರಕಟಣೆಯು ಶ್ರೀಮದ್ಭಾಗವತದಲ್ಲಿ ಕಂಡುಬರುವ ಸೃಷ್ಟಿರಹಸ್ಯ, ಲೋಕಗಳ ವಿನ್ಯಾಸ ಮತ್ತು ಕಾಲಚಕ್ರದ ಗತಿ– ಇವುಗಳ ವೈಜ್ಞಾನಿಕ ನಿರೂಪಣೆಗೆ ಮಾತ್ರ ಸೀಮಿತವಾಗಿರುವುದರಿಂದ, ಚತುರ್ಥಸ್ಕಂಧ ಮತ್ತು ಪಂಚಮಸ್ಕಂಧ ಪೂರ್ವಾರ್ಧ ಭಾಗಗಳ ವ್ಯಾಖ್ಯಾನವನ್ನು ಕೈಗೊಂಡಿಲ್ಲ.

ಪಂಚಮಸ್ಕಂಧದ ಪ್ರಾರಂಭದಲ್ಲಿ ಪ್ರಿಯವ್ರತರಾಯರ ದಿವ್ಯ ಮಹಿಮೆಯು ಉಕ್ತವಾಗಿದೆ. ಸ್ವಾಯಂಭುಮನುಪುತ್ರರಾದ ಪ್ರಿಯವ್ರತರಾಯರು ಪರಮಭಗವದ್ಭಕ್ತರಾಗಿ, ಕೇವಲ ಹರಿಧ್ಯಾನಪ್ರಿಯರಾದರೂ, ರಾಜ್ಯಭಾರ ಕರ್ತವ್ಯವೆಂದು ನಡೆಸಿದರು.

ಪ್ರಿಯವ್ರತರಾಯರ ಚರಿತ್ರೆಯಲ್ಲಿ ಅತ್ಯದ್ಭುತರಮಣೀಯ ವಿಚಾರವೆಂದರೆ, ಭೂಮಂಡಲದ ಆಕಾರ ವಿಂಗಡ.

ಶ್ವೇತವರಾಹಮೂರ್ತಿಯು ಅಂಡೋದಕದಲ್ಲಿ ಮುಳುಗಿದ್ದ ಭೂಮಿಯನ್ನು ಮೇಲೆ ತಂದಿಟ್ಟಾಗ ಅದು ಒಂದು ಮಣ್ಣಿನ ದಿಬ್ಬದಂತಿತ್ತು. ಮೇರುಪರ್ವತ ಮೊದಲಾದ ಯಾವ ಭಾಗವೂ, ಸ್ಪಷ್ಟವಾಗಿ ಕಾಣುತ್ತಿದಿಲ್ಲ. ಸೂರ್ಯ ರಥವು ಸಂಚರಿಸುತ್ತಿರಲು ದಿಬ್ಬದ ಒಂದು ಕಡೆಗೆ ಮಾತ್ರ ಸೂರ್ಯಪ್ರಕಾಶ ಬೀಳುತ್ತಿತ್ತು. ಪ್ರಿಯವ್ರತರಾಯರು ಅದನ್ನು ತಪ್ಪಿಸುವ ಹವಣಿಕೆ ಮಾಡಿದರು.

"ಯಾವದವಭಾಸಯತಿ ಸುರಗಿರಿಮನುಪರ್ಯಾಕ್ರಮ್ಯ ಭಗವಾನಾದಿತ್ಯೋ ವಸುಧಾತಲಮರ್ಧೇನೈವ ಪ್ರತಪತಿ ಅರ್ಧೇನೈವಾಚ್ಛಾದಯತಿ ತದಾಹಿಭಗವದು ಪಾಸನೋಪಚಿತಾತಿಪುರುಷ ಪ್ರಭಾವಸ್ತು ತದನಭಿನಂದನ್ಸಮಜವೇನ ರಥೇನ ಜ್ಯೋತಿರ್ಮಯೇನ ರಜನೀಮಪಿ ದಿನಂ ಕರಿಷ್ಯಾಮೀತಿ ಸಪ್ತಕೃತ್ವಸ್ತರಣಿಮನು ಪರ್ಯಾಕ್ರಮತ್ಸದ್ವಿತೀಯ ಇವ ಪತಂಗಃ"

ಭಗವವಾ್ ಆದಿತ್ಯಃ = ಸೂರ್ಯ ಭಗವಾನನು; ಸುರಗಿರಿಂ ಅನುಪರ್ಯಾಕ್ರಮನ್ = ಮೇರು ಪರ್ವತಕ್ಕೆ ಪ್ರದಕ್ಷಿಣೆಯಾಗಿ ಸುತ್ತುತ್ತಾ;

ವಸುಧಾತಲಂ = ಭೂಮಂಡಲವನ್ನು; ಅರ್ಧೇನೈವ ಪ್ರತಪತಿ = ಅರ್ಧ ಮಾತ್ರ ಪ್ರಕಾಶಗೊಳಿಸುತ್ತಾನೆ; ಅರ್ಧೇನ ಅಚ್ಛಾದಯತಿ ಏವ = ಇನ್ನರ್ಧವನ್ನು ಕತ್ತಲೆಯಲ್ಲಿಯೇ ಇಟ್ಟಿರುತ್ತಾನೆ; ತದಾಹಿ = ಹೀಗೆಂದರಿತು; ಭಗವದುಪಾಸನ ಉಪಚಿತ ಅತಿಪುರುಷ ಪ್ರಭಾವಃ = ಭಗವದುಪಾಸನೆಯ ಬಲದಿಂದ ಅತಿಮಾನುಷ ಪ್ರಭಾವಶಾಲಿಗಳಾದ ಪ್ರಿಯವ್ರತರಾಯರು; ತತ್ ಅನಭಿನಂದನ್ = ಸೂರ್ಯ ದೇವನ ಆ ಚರ್ಯೆಯು ತಮ್ಮ ಕರ್ತವ್ಯಕ್ಕೆ ಅಡ್ಡಿಯೆಂದು, ಅನುಕೂಲವಲ್ಲವೆಂದು; ಸಮಜವೇನ ಜ್ಯೋತಿರ್ಮಯೇನ ರಥೇನ = ಸೂರ್ಯರಥವೇಗಕ್ಕೆ ಸಮಾನ ವೇಗವುಳ್ಳ ಜ್ಯೋತಿರ್ಮಯವಾದ ರಥವನ್ನೇರಿ; ರಜನೀಂ ಅಪಿ ದಿನಂ ಕರಿಷ್ಯಾಮಿ ಇತಿ = ರಾತ್ರಿಯನ್ನೂ ಹಗಲಾಗಿ ಮಾಡಿಬಿಡುತ್ತೇನೆ ಎಂದು ಸಂಕಲ್ಪಿಸಿ; ಸಃ = ಆ ಪ್ರಿಯವ್ರತರಾಯರು; ದ್ವಿತೀಯಃ ಪತಂಗಃ ಇವ = ಎರಡನೆಯ ಸೂರ್ಯನೋಪಾದಿ ಯಲ್ಲಿ; ಸಪ್ತಕೃತ್ವಃ = ಏಳು ಬಾರಿ; ತರಣಿಂ ಅನುಪರ್ಯಾಕ್ರಾಮತ್ = ಸೂರ್ಯನ ಜೊತೆಜೊತೆಯಾಗಿಯೇ ತಮ್ಮ ರಥದಲ್ಲಿ ಸಂಚರಿಸಿದರು.

ಇದು ದೇವತಾ ಪುರುಷರ ಚರ್ಯೆ, ಮಾನವರ ಊಹೆಗೆ ಮೀರಿದುದು ಎಂಬುದನ್ನು ನೆನಪಿನಲ್ಲಿಡಬೇಕು.

**"ಯಾವಾ ಇಹ ತದ್ರಥಚರಣನೇಮಿಕೃತಪರಿಖಾತಾಃ ಸಪ್ತ ಸಿಂಧವ ಆಸನ್ಯತಏವಂ ಕೃತಾ ಸಪ್ತಭುವೋ ದ್ವೀಪಾಃ"**

ತದ್ರಥಚರಣನೇಮಿಕೃತ ಪರಿಖಾತಾಃ = ಪ್ರಿಯವ್ರತರಾಯರ ರಥದ ಚಕ್ರಗಳ ಪಟ್ಟಿಗಳಿಂದ ಅಗೆಯಲ್ಪಟ್ಟ ಆಳವಾದ ಕಂದಕಗಳು; ಯಾ ವಾ ಇಹ = ಯವವು ಕಂಡು ಬರುವವೋ, ಅವು; ಸಪ್ತ ಸಿಂಧವಃ ಆಸನ್ = ಲವಣ, ಇಕ್ಷು, ಸುರಾ, ಸರ್ಪಿ, ದಧಿ, ಕ್ಷೀರ, ಶುದ್ಧೋದಕ ಸಮುದ್ರಗಳಾದವು ; ಏವಂ = ಈ ರೀತಿಯಿಂದಲೇ; ಭುವಃ = ಭೂಮಂಡಲದ; ಸಪ್ತದ್ವೀಪಾಃ ಆಸನ್ = ಜಂಬೂ, ಪ್ಲಕ್ಷ, ಶಾಲ್ಮಲ, ಕುಶ, ಕ್ರೌಂಚ, ಶಾಕ, ಪುಷ್ಕರಗಳೆಂಬ ಏಳು ದ್ವೀಪಗಳು ಉಂಟಾದವು.

ಒಂದನ್ನೊಂದು ಸುತ್ತುವರಿದು ವೃತ್ತಾಕಾರವಾಗಿ ಹರಡಿರುವ ಈ ದ್ವೀಪ-ಸಮುದ್ರಗಳ ವಿವರವು ಮುಂದೆ ಉಕ್ತವಾಗಿರುವುದು.

ಕರ್ಮಜ ದೇವತೆಗಳಲ್ಲಿ ಪ್ರಮುಖರಾದ ಪ್ರಿಯುವ್ರತರಾಯುರು ಭಗವತ್ಸಂಕಲ್ಪವನ್ನರಿತು ದ್ವೀಪ ಸಮುದ್ರಗಳ ವಿಂಗಡ ಮಾಡಿದರೆಂದಾಗ, ಅವರಲ್ಲಿ ಮುಖ್ಯಪ್ರಾಣಪತಿಯ ಅನುಗ್ರಹವಿಷ್ಟಿದ್ದಿತೆಂದು ನಾವು ಊಹಿಸಬಹುದು.

ಪ್ರಿಯವ್ರತರಾಯರು ತಮ್ಮಂತೆ ಗುಣಶಾಲಿಗಳಾದ ಅಗ್ನೀಧ್ರ, ಇಧ್ಮಜಿಹ್ವಾ,

ಯಜ್ಞಬಾಹು, ಹಿರಣ್ಯರೇತ, ಘೃತಪೃಷ್ಠ ಮೇಧಾತಿಥಿ, ವೀತಿಹೋತ್ರ ಎಂಬ ಪುತ್ರರನ್ನು ಸಪ್ತದ್ವೀಪಗಳಿಗೆ ಪ್ರತ್ಯ್ರತ್ಯೇಕವಾಗಿ ಅಧಿಪತಿಗಳನ್ನಾಗಿ ಮಾಡಿದರು. ಅನಂತರ ಅವರು ವನಪ್ರವೇಶಮಾಡಿ ತಪೋನಿರತರಾದರು.

ಇಂತಹ ಮಹಾಮಹಿಮರ ಹಿರಿಮೆಯನ್ನು ಶ್ರೀ ಶುಕಾಚಾರ್ಯರು ಹೀಗೆ ವರ್ಣಿಸಿದ್ದಾರೆ.

ಪ್ರಿಯವ್ರತ ಕೃತಂ ಕರ್ಮಕೋನು ಕುರ್ಯಾದ್ವಿನೇಶ್ವರಂ ।
ಯೋನೇಮಿನಿಮ್ನೈರಕರೋಛ್ಛಾಯಾಂಘ್ನನ್ಸಪ್ತವಾರಿಧೀನ್ ॥

ಭೂಸಂಸ್ಥಾನಂ ಕೃತಂ ಯೇನ ಸರಿದ್ಗಿರಿವನಾದಿಭಿಃ ।
ಸೀಮಾಚಭೂತ ನಿರ್ವೃತ್ಯೈದ್ವೀಪೇದ್ವೀಪೇ ವಿಭಾಗಶಃ ॥

ಭೌಮಂ ದಿವ್ಯಂ ಮಾನುಷಂ ಚ ಮಹತ್ವಂ ಯೋಗಕರ್ಮಜಂ ।
ಯಶ್ಚಕ್ರೇನಿರಯೌಪಮ್ಯಂ ಪೌರುಷಂತು ಜನಪ್ರಿಯಂ ॥

ಯಃ = ಯವ ಮಹಾನುಭಾವನು; ಛಾಯಾಂಘ್ನನ್ = ಕತ್ತಲೆಯ ಅಡ್ಡಿಯನ್ನು ನಿವಾರಿಸಿಕೊಂಡು; ನೇಮಿನಿಮ್ನೈಃ = ಚಕ್ರಗಳಿಂದಾದ ಹಳ್ಳಗಳ ದೆಸೆಯಿಂದ; ಸಪ್ತವಾರಿಧೀನ್ = ಏಳು ಮಹಾ ಸಮುದ್ರಗಳನ್ನು; ಅಕರೋತ್ = ಉಂಟುಮಾಡಿದರೋ ಅಂತಹ; ಪ್ರಿಯವ್ರತಕೃತಂ ಕರ್ಮ = ಪ್ರಿಯವ್ರತರಾಯರು ಮಾಡಿದ ಅದ್ಭುತ ಕಾರ್ಯವನ್ನು; ಈಶ್ವರಂ ವಿನಾ = ಜಗದೀಶ್ವರನ ಅಂಶ ಪ್ರಭಾವವಿಲ್ಲದೆ; ಕಃ ನು ಕರ್ಯಾತ್ = ಯಾವನು ತಾನೇ ಮಾಡಬಲ್ಲ?

ಯೇನ = ಯಾವ ಆ ಪ್ರಿಯ ವ್ರತರಾಯರಿಂದ; ಸರಿತ್ ಗಿರಿ ವನ ಅಧಿಭಿಃ = ಎಲ್ಲೆಲ್ಲಿ ನದೀಪಾತ್ರಗಳು, ಪರ್ವತಗಳು, ವನಪ್ರದೇಶಗಳು ಇರಬೇಕೋ ಅಲ್ಲಲ್ಲಿ ಕಂಡುಬರುವಂತೆ ಮಾಡಿ; ದ್ವೀಪೇ ದ್ವೀಪೇ = ಸಪ್ತ ದ್ವೀಪಗಳು ಒಂದೊಂದರಲ್ಲಿಯೂ; ವಿಭಾಗಶಃ = ಪ್ರತ್ಯೇಕ ಪ್ರತ್ಯೇಕವಾಗಿ; ಭೂತ ನಿರ್ವೃತ್ಯೈ = ಜೀವಿಗಳ ನೆಮ್ಮದಿಗಾಗಿ; ಸೀಮಾಃ ಚ = ಎಲ್ಲೆ ಕಟ್ಟುಗಳೂ ಇರುವಂತೆ; ಭೂ ಸಂಸ್ಥಾನಂ = ಭೂಮಂಡಲದ ವ್ಯವಸ್ಥೆಯು; ಕೃತಂ = ಮಾಡಲ್ಪಟ್ಟಿತು.

ಯಃ = ಯಾವ ಆ ಪ್ರಿಯವ್ರತರಾಯರು; ಭೌಮಂ = ಮಹದೈಶ್ವರ್ಯ ಪ್ರದವಾದ; ದಿವ್ಯಂ = ದೇವತೆಗಳಿಗೆ ಸಾಧ್ಯವಾದ; ಮಾನುಷಂ ಚ = ಮನುಷ್ಯ ಜನ್ಮದಿಂದಲೂ ಮಾಡಬಹುದಾದ; ಯೋಗಕರ್ಮಜಂ ಮಹಿತ್ವಂ = ಪರಮಾತ್ಮ ಪ್ರಸಾದ ಲಬ್ಧ ಕ್ರಿಯಾಮಹಿಮೆಯನ್ನು ಸಾರುವ; ನಿರಯ ಔಪಮ್ಯಂ ಪೌರುಷಂ =



ಸಪ್ತದ್ವೀಪ ಸಪ್ತಸಾಗರಗಳು ಸುತ್ತಲೂ ಲೋಕಾಲೋಕ ಪರ್ವತ

Seven Islands & Seven Oceans surrounded by Lokaaloka Mountain

ಅತಿಶಯ ಸುಖ ಪ್ರಾಪ್ತಿಗೆ ಕಾರಣವಾದ ಪೌರುಷವನ್ನು (ಅದ್ಭುತಕಾರ್ಯವನ್ನು), ಚಕ್ರೇ = ಮಾಡಿತೋರಿಸಿದರು.

ಹಗಲಿರುಳೆಂಬ ಭಿನ್ನತೆಗೆ ಅವಕಾಶವಿಲ್ಲದೆ, ಸೂರ್ಯರಥದ ಸಮಸಮಕ್ಕೆ ಸಂಚರಸಿ, ಸಪ್ತದ್ವೀಪ ಸಪ್ತಸಮುದ್ರ ವಿಭಾಗಗಳನ್ನು ವಿಂಗಡಿಸಿದುದಲ್ಲದೆ, ನದೀಗಿರಿವನಾದಿ ಪ್ರಾಕೃತ ವಿಭಾಗಗಳನ್ನೂ ಏರ್ಪಡಿಸಿದ ಪ್ರಿಯವ್ರತರಾಯರ ಕಾರ್ಯ ಶ್ರೀಹರಿಯ ಅಂಶಬಲದಿಂದಲೇ ಸಾಧ್ಯವಾಯಿತು.

ಆಧುನಿಕ ವಿಜ್ಞಾನಿಗಳು, ಭೂಭಾಗವೆಲ್ಲ ಹಿಂದೊಮ್ಮೆ ಏಕೀಭವಿಸಿದ್ದಿತೆಂದೂ, ಅದು ಕ್ರಮ ಕ್ರಮವಾಗಿ ಭೂಕಂಪ ಮೊದಲಾದ ಕಾರಣಗಳಿಂದ ಬೇರೆ ಬೇರೆ ಖಂಡಗಳಾಗಿ ವಿಂಗಡವಾಯಿತೆಂದೂ ಹೇಳುತ್ತಾರೆ. ಇದು, ಅವರು ನಮ್ಮ ಭೂಗೋಳವನ್ನು ಮಾತ್ರ ಕುರಿತು ಹೇಳಿರುವ ಮಾತು. ಇರಲಿ, ಆದರೂ, ಇಲ್ಲಿ ಉಲ್ಲೇಖಿಸಿರುವ ಪ್ರಿಯವ್ರತರಾಯರ ಕಥೆಯನ್ನು ಸ್ಮರಿಸಿದಾಗ, ಖಂಡಗಳ ವಿಂಗಡವು ಅವರ ರಥನೇಮಿಯ ಚಲನೆಯಿಂದಾದ ಕಾರ್ಯ ಎಂದೇ ಹೇಳಬಹುದಲ್ಲವೆ? ಅವರ ರಥವನ್ನು 'Divine bull dozer' ಎನ್ನಬಹುದಲ್ಲವೆ? ಒಂದು ಕಡೆ ಅಮೆರಿಕಾ ಖಂಡಗಳು, ಅವಕ್ಕೆ ಅಭಿಮುಖವಾಗಿರುವ ಯೂರೋಪ್ ಮತ್ತು ಆಫ್ರಿಕಾ ಖಂಡಗಳು, ಸಾವಿರ ವರ್ಷದಷ್ಟು ಕಾಲದಲ್ಲಿ ಒಂದೊಂದು ಅಂಗುಲದಷ್ಟು ಹಿಂದಕ್ಕೆ ಸರಿಯುತ್ತಿವೆ ಎಂಬ 'ತೆನಾಲಿ ರಾಮಕೃಷ್ಣನ' ಎಣಿಕೆಯನ್ನು ಒಪ್ಪಿಕೊಳ್ಳುವ ಆಧುನಿಕರು ಶ್ರೀಮದ್ಭಾಗವತದ ಭಗವಂತನ ವಾಣಿಯನ್ನು ಏಕೆ ಒಪ್ಪಿಕೊಳ್ಳಬಾರದು?

**ಪರಿಶಿಷ್ಟ – ಸಮಾಪ್ತಿ**

---

# ಶ್ರೀಮದ್ಭಾಗವತ – ಪಂಚಮ ಸ್ಕಂಧ
# ಅಧ್ಯಾಯ ೧೬
# (ಜಂಬೂದ್ವೀಪದ ವರ್ಣನೆ)

ರಾಜೋವಾಚ:– ಪರೀಕ್ಷಿದ್ರಾಜರು ಮಾತಾಡಿದರು.

**ಉಕ್ತಸ್ತ್ವಯಾ ಭೂಮಂಡಲಾಯಾಮವಿಶೇಷೋ ಯಾವದಾದಿತ್ಯಸ್ತಪತಿ**
**ಯತ್ರಚಾಸೌ ಜ್ಯೋತಿಷಗಣೈಶ್ಚಂದ್ರಮಾ ವಾ ಸಹದೃಶ್ಯತೇ ॥೧॥**

ಯಾವತ್ ಆದಿತ್ಯಃತಪತಿ = ಎಲ್ಲಿಯ ಪರ್ಯಂತ ಸೂರ್ಯಕಿರಣಗಳ ಪ್ರಭಾವವಿರುವುದೊ; ವಾ = ಅಲ್ಲದೆ; ಯತ್ರಚ = ಯಾವ ಪ್ರದೇಶದಲ್ಲಿ; ಅಸೌಚಂದ್ರಮಾ = ನಮಗೆ ಕಾಣುವ ಚಂದ್ರನು; ಜ್ಯೋತಿಷಾಂಗಣೈಃ ಸಹ = ಗ್ರಹ ನಕ್ಷತ್ರಾದಿಗಳ ಗುಂಪುಗಳೊಡನೆ; ದೃಶ್ಯತೇ = ಕಂಡುಬರುವನೋ; ಭೂಮಂಡಲ ಆಯಾಮ ವಿಶೇಷಃ = ಅದು ಭೂಮಂಡಲವೆಂಬ ವಿಶೇಷ ಲಕ್ಷಣಯುಕ್ತವಾದುದು ಎಂದು; ತ್ವಯಾ ಉಕ್ತಃ = ತಮ್ಮಿಂದ ಹೇಳಲ್ಪಟ್ಟಿತು.

**ತತ್ರಾಪಿ ಪ್ರಿಯವ್ರತ ರಥ ಚರಣ ಪರಿಖಾತೈಃ ಸಪ್ತಭಿಃ ಸಪ್ತಸಿಂಧವ**
**ಉಪಕ್ಲೃಪ್ತಾ ಯತಏತಸ್ಯ ಸಪ್ತದ್ವೀಪ ವಿಶೇಷ ವಿಕಲ್ಪಸ್ತ್ವಯಂ**
**ಭಗವನ್ ಖಲು ಸೂಚಿತ ಏತದೇವಾಖಿಲಮಹಂ ಮಾನತೋ**
**ಲಕ್ಷಣತಶ್ಚ ಸರ್ವಂ ವಿಜಿಜ್ಞಾಸಾಮಿ ॥೨॥**

ತತ್ರಾಪಿ = ಅದರಲ್ಲಿಯೂ; ಪ್ರಿಯವ್ರತ ರಥಚರಣ ಪರಿಖಾತೈಃ ಸಪ್ತಭಿಃ = ಪ್ರಿಯವ್ರತರಾಯರ ರಥಚಕ್ರದ ಚಲನೆಯಿಂದ ಅಗೆಯಲ್ಪಟ್ಟ ಏಳು ಹಳ್ಳಗಳಿಂದ; ಸಪ್ತ ಸಿಂಧವಃ = ಏಳು ಸಮುದ್ರಗಳು; ಉಪಕ್ಲೃಪ್ತಾಃ = ಏರ್ಪಟ್ಟುವು; ಯತಃ = ಆ ಯಾವ ಕಾರಣದಿಂದ; ಸಪ್ತದ್ವೀಪ ವಿಶೇಷಕಲ್ಪಃ = ಏಳು ಮಹಾದ್ವೀಪಗಳ ಸೃಷ್ಟಿ ವಿಶೇಷ ಕಲ್ಪನೆ ಎಂದು; ಭಗವನ್ = ಮಹಾನುಭಾವರೇ; ತ್ವಯಾ = ನಿಮ್ಮಿಂದ; ಸೂಚಿತಃಖಲು = ತಿಳಿಸಲ್ಪಟ್ಟಿತಲ್ಲವೇ?; ಏತತ್ ಅಖಿಲಂ ಏವ = ಈ ಎಲ್ಲದರ ವಿಚಾರವನ್ನೂ; ಅಹಂ = ನಾನು; ಮಾನತಃ ಲಕ್ಷಣತಃ ಚ = ಅಳತೆಗಳ

ದೃಷ್ಟಿಯಿಂದಲೂ, ವಿಶೇಷ ಲಕ್ಷಣಗಳ ದೃಷ್ಟಿಯಿಂದಲೂ; ಸರ್ವಂ = ಎಲ್ಲಾ ವಿವರಗಳನ್ನೂ; ವಿಜಿಜ್ಞಾಸಾಮಿ = ತಿಳಿಯಲಿಚ್ಛಿಸುತ್ತೇನೆ.

ಪರೀಕ್ಷಿದ್ರಾಜರು ದಿಗ್ವಿಜಯಾರ್ಥವಾಗಿ ಹೊರಟಾಗ ಜಂಬೂದ್ವೀಪದ ನವವರ್ಷಗಳಲ್ಲಿ ಸಂಚರಿಸಿ ಬಂದಿದ್ದರಲ್ಲದೆ, ಇತರ ಆರು ದ್ವೀಪ ಸಮುದ್ರಗಳಲ್ಲಿ ಸಂಚರಿಸಿರಲಿಲ್ಲ; ಆದುದರಿಂದ ಪ್ರಶ್ನೆಯ ಔಚಿತ್ಯ. ಎಲ್ಲಾ ವಿವರಗಳನ್ನೂ ತಿಳಿಯಬೇಕೆನ್ನುವುದಕ್ಕೆ ಕಾರಣ ಮುಂದೆ ಹೇಳುವ ಅವರ ಮಾತುಗಳಲ್ಲಿ ವ್ಯಕ್ತವಾಗಿದೆ.

**ಭಗವತೋಗುಣಮಯೇ ಸ್ಥೂಲರೂಪ ಆವೇಶಿತಂಮನೋಹ್ಯಗುಣೇಪಿ**
**ಸೂಕ್ಷ್ಮತಮ ಆತ್ಮಜ್ಯೋತಿಷಿ ಪರೇಬ್ರಹ್ಮಣಿ ಭಗವತಿ ವಾಸುದೇವಾಖ್ಯೇ**
**ಕ್ಷಮಮಾವೇಶಿತುಂ ತದುಹೈತದ್ ಗುರೋರ್ಹಸ್ಯನುವರ್ಣಿತುಮಿತಿ**
**॥೩॥**

ಅಗುಣೇ ಅಪಿ = ಜಡಗುಣವಿಶಿಷ್ಟನಲ್ಲದಿದ್ದರೂ, ಗುಣಮಯೇ = ಗುಣವಿಕಾರಗಳನ್ನುಂಟುಮಾಡುವುದಕ್ಕಾಗಿ ಗುಣಕಾರ್ಯಗಳಲ್ಲಿ ಪ್ರವಿಷ್ಟನಾಗಿರುವ; ಭಗವತಃ = ಜ್ಞಾನಾನಂದಾದಿಗುಣಪೂರ್ಣನಾದ ಪರಮಾತ್ಮನ; ಸ್ಥೂಲರೂಪೇ = ಬ್ರಹ್ಮಾಂಡದಲ್ಲಿ ತುಂಬಿಕಾಣುವ ಸ್ಥೂಲರೂಪದಲ್ಲಿ; ಆವೇಶಿತಂ ಮನಃ = ಚಿಂತನ ಪೂರ್ವಕವಾಗಿ ನಿಂತಿರುವ ಮನಸ್ಸು; ಸೂಕ್ಷ್ಮತಮ ಆತ್ಮಜ್ಯೋತಿಷಿ = ಆತ್ಮಪ್ರಕಾಶಕವಾದ ಅತೀಂದ್ರಿಯ ಬೆಳಕಿನಂತಿರುವ; ಪರಿಬ್ರಹ್ಮಣಿ = ಪರಬ್ರಹ್ಮನೆನಿಸಿದ; ಭಗವತಿ = ಷಡ್ಗುಣೈಶ್ವರ್ಯ ಸಂಪನ್ನನಾದ; ವಾಸುದೇವಾಖ್ಯೇ = ವಾಸುದೇವ ಎಂಬ ಹೆಸರಿನ ರೂಪದಲ್ಲಿ; ಆವೇಶಿತುಂ ಕ್ಷಮಃ = ಐಕ್ಯ ಚಿಂತನೆಯಿಂದ ಧ್ಯಾನ ಮಾಡಲು ಅನುವಾದುದಲ್ಲವೇ!; ಗುರೋ = ಗುರುವರ್ಯರೇ; ಏತತ್ ತತ್ = ಅವಶ್ಯಕವಾದ ಈ ವಿಚಾರವನ್ನು; ಅನುವರ್ಣಯಿತುಂ = ಸಕ್ರಮವಾಗಿ; ವಿವರಿಸಲು; ಅರ್ಹಸಿ = ನೀವು ಸಮರ್ಥರಾಗಿದ್ದೀರಿ; ಇತಿ = ಹೀಗೆಂದು ಪರಿಕ್ಷಿದ್ರಾಜರು ನುಡಿದರು.

ಭೂಮಂಡಲದಲ್ಲಿ ಮಾತ್ರವಲ್ಲದೆ ಇಡೀ ಬ್ರಹ್ಮಾಂಡದಲ್ಲಿ ಬ್ರಹ್ಮಾಂಡಗತ ಸನ್ನಿವೇಶಗಳಂತೆ ತುಂಬಿಕೊಂಡಿರುವ ಭಗವಂತನ ರೂಪಕ್ರಿಯಾದಿಗಳು ಪ್ರತಿಯೊಬ್ಬ ಜೀವಿಯ ಶರೀರದಲ್ಲಿಯೂ ಸೂಕ್ಷ್ಮರೂಪಗಳಿಂದ ವ್ಯಕ್ತವಾಗಿದ್ದು ಆಯಾ ಜೀವರ ಸಾಧನೆಗಳನ್ನು ತನ್ನ ಬಿಂಬಕ್ರಿಯೆಯಿಂದ ಮಾಡಿಸುತ್ತಿರುವುದರಿಂದ ಮುಕ್ತಿ ಪ್ರದವಾದ ವಾಸುದೇವರೂಪದಲ್ಲಿ ಮನಸ್ಸನ್ನು ನೆಲೆಗೊಳಿಸಿ ಧ್ಯಾನಿಸುವುದು ಭಗವದಪರೋಕ್ಷಕ್ಕೆ ಆವಶ್ಯಕ. ಆದುದರಿಂದ, ಭೂಮಂಡಲದಲ್ಲಿ ವ್ಯಾಪ್ತವಾದ ಭಗವದ್ರೂಪಕ್ರಿಯೆಗಳ ವಿವರವನ್ನು ತಿಳಿಯಬೇಕೆಂದು ಪರೀಕ್ಷಿದ್ರಾಜರು ಪ್ರಾರ್ಥಿಸಿದ್ದಾರೆ.

ಇದು ನಿಜವಾದ ವಿಜ್ಞಾನ ವಿದ್ಯೆಗೆ ಸಂಬಂಧಿಸಿದ ವಿಚಾರ. ಜಡಕ್ರಿಯಾತ್ಮಕ ಪ್ರಪಂಚದಲ್ಲಿ ಭಗವಂತನ ವ್ಯಾಪ್ತಿ ವ್ಯಾಪಾರಗಳನ್ನು ತಿಳಿದು ಕೃತಾರ್ಥರಾಗುವುದೇ ವಿಜ್ಞಾನ ವಿದ್ಯೆಯ ಅಮೃತ ಫಲ

**ಋಷಿರುವಾಚ:–** ಶುಕಮಹರ್ಷಿಗಳು ಹೇಳಿದರು.

**ನ ವೈ ಮಹಾರಾಜ ಭಗವತೋಮಾಯಾಗುಣವಿಭೂತೇಃ ಕಾಷ್ಠಾಂ**
**ಮನಸಾವಚಸಾವಾಧಿಗಂತುಮಲಂ ವಿಬುಧಾಯುಷಾಪಿ ಪುರುಷಸ್ತ**
**ಸ್ಮಾತ್ಪ್ರಾಧಾನ್ಯೇನೈವ ಭೂಗೋಲಕ ವಿಶೇಷಂ ನಾಮರೂಪ**
**ಮಾನಲಕ್ಷಣತೋ ವ್ಯಾಖ್ಯಾಸ್ಯಾಮಃ** ॥೪॥

ಮಹಾರಾಜ = ಅಯ್ಯಾ ಪರಿಕ್ಷಿದ್ರಾಜಾ; ಮಾಯಾಗುಣವಿಭೂತೇಃ = ಮಾಯ ಎನಿಸಿಕೊಳ್ಳುವ ತನ್ನ ಅದ್ಭುತ ಶಕ್ತಿಯಿಂದ, ಜಡಗುಣ ಕ್ರಿಯೆಗಳಲ್ಲಿ ತೋರುವ ವಿಭೂತಿರೂಪಗಳು (ಅದ್ಭುತವನ್ನು ತೋರುವ ರೂಪಗಳ); ಕಾಷ್ಠಾಂ = ಪರಿಮಿತಿಯನ್ನು; ಪುರುಷಃ = ಮಾನವನಾದವನು; ವಿಬುಧಾಯುಷಾ ಅಪಿ = ಬ್ರಹ್ಮದೇವನ ಆಯುರ್ಮಾನದಷ್ಟು ಅವಧಿ ಇದ್ದರೂ ಕೂಡ; ಮನಸಾ ವಚಸಾ ವಾ = ಮನಸ್ಸಿನಿಂದಾಗಲೀ, ಮಾತುಗಳಿಂದಾಗಲೀ; ಅಧಿಗಂತುಂ = ತಿಳಿಯುವುದಕ್ಕೆ; ನ ಅಲಂ ವೈ = ಸಾಧ್ಯವಾಗುವುದೇ ಇಲ್ಲ; ತಸ್ಮಾತ್ = ಆದುದರಿಂದ; ಭೂಗೋಲಕ ವಿಶೇಷಂ = ಭೂಗೋಳವೆನಿಸುವ ಬ್ರಹ್ಮಾಂಡದಲ್ಲಿ ಅಡಕವಾಗಿರುವ ವಿಶೇಷಾಂಶಗಳ ಪರಿಚಯವನ್ನು; ನಾಮ ರೂಪ ಮಾನ ಲಕ್ಷತಃ = ಹೆಸರು, ಆಕಾರ, ಲಕ್ಷಣಗಳನ್ನು ಕುರಿತು; ಪ್ರಾಧಾನ್ಯೇನೈವ = ಮುಖ್ಯ ಮುಖ್ಯವಾದುವನ್ನು ತಿಳಿಸುವುದರಿಂದ ಮಾತ್ರ; ವ್ಯಾಖ್ಯಾಸ್ಯಾಮಃ = ಹೇಳುತ್ತೇವೆ.

ರಾಜರು, ಸನ್ಯಾಸಿಗಳು, ಜ್ಞಾನಿವರೇಣ್ಯರು ತಮ್ಮನ್ನು ಕುರಿತು ಬಹುವಚನ ಪ್ರಯೋಗ ಮಾಡಿಕೊಂಡಾಗ ಅವರು ಅಹಂಕಾರ ರಹಿತರಾಗಿ ಅಂತರ್ಯಾಮಿಗಳಾದ ತಾತ್ವಿಕ ದೇವತೆಗಳ ವ್ಯಾಪಾರಗಳು ತಮ್ಮಲ್ಲಿ ಪ್ರಕಟವಾಗುವುದನ್ನು ಸ್ಮರಿಸಿಕೊಂಡು ಮಾತಾಡಿರುತ್ತಾರೆ. ಆದುದರಿಂದ 'ವ್ಯಾಖ್ಯಾಸ್ಯಾಮಃ' ಎಂದು ಬಹುವಚನ ಪ್ರಯೋಗ. ಬ್ರಹ್ಮಾಂಡಗತ ಸನ್ನಿವೇಶಗಳು ಅಸಂಖ್ಯಾತವಾದುವು. ಹೆಜ್ಜೆಹೆಜ್ಜೆಗೂ, ಕಾಲ ಪ್ರವಾಹದಲ್ಲಿ ಎಡಬಿಡದೆ ಭಗವಂತನು ತೋರುವ ಮಹಿಮಾತಿಶಯಗಳನ್ನು ಕುರಿತು ಸಂಪೂರ್ಣವಾಗಿ ವರ್ಣಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ, ಎಷ್ಟು ಕಾಲವಾದರೂ ಸಾಕಾಗುವುದಿಲ್ಲ ಎಂಬುದು ಸತ್ಯವಾದ ಮಾತು.

ಇಲ್ಲಿ 'ಭೂಗೋಲಕ ವಿಶೇಷಂ' ಎಂಬ ಪದವು ಗಮನಾರ್ಹವಾದುದು.

ಸುವರ್ಣಖರ್ಪರಯುಕ್ತವಾದ ಬ್ರಹ್ಮಾಂಡಕ್ಕೂ, ಭೂಮಂಡಲಕ್ಕೂ, ನಾವು ವಾಸಮಾಡುವ ಭರತಖಂಡವೆಂಬ ಭೂಗೋಳಕ್ಕೂ ಆ ಹೆಸರು ಅನ್ವಯಿಸುತ್ತದೆ. ಇದರಲ್ಲೊಂದು ವೈಶಿಷ್ಟ್ಯವೆಂದರೆ, ನಮ್ಮ ಭೂಗೋಳದ ರಚನೆಗೂ, ಇತರ ಭಾಗಗಳ ರಚನೆಗೂ ವ್ಯತ್ಯಾಸವಿದೆ. ಆದುದರಿಂದ ಅವು ಇದ್ದರೂ ನಮಗೆ ಕಾಣಿಸುವುದಿಲ್ಲ. "ಅದೃಶ್ಯಾ ಧಾತವಃ ಸರ್ವೇ ಸಮುತ್ಪನ್ನಾ ಜಲಾದಯಃ । ಅದೃಶ್ಯಾ ಪೃಥಿವೀ ಪದ್ಮಂ ಮೇರುಪರ್ವತ ಕರ್ಣಿಕಂ ॥" ಎಂಬ ಪುರಾಣೋಕ್ತಿ ಇದೆ.

**ಯೋವಾಯಂ ದ್ವೀಪಃ ಕುವಲಯ ಕಮಲ ಕೋಶಾಭ್ಯಂತರ**
**ಕೋಶೋ ನಿಯುತಯೋಜನ ವಿಶಾಲಃ ಸಮವರ್ತುಲೋಯಥಾ**
**ಪುಷ್ಕರಪತ್ರಂ ॥೫॥**

ಯಃ ವಾ ಅಯಂ ದ್ವೀಪಃ = ಯಾವ ಈ (ಜಂಬೂ) ದ್ವೀಪವುಂಟೋ ಅದು; ಕುವಲಯ ಕಮಲ ಕೋಶ ಅಭ್ಯಂತರ ಕೋಶಃ = ಭೂಮಂಡಲವೆಂಬ ಕಮಲ ಪುಷ್ಪದಳವರ್ತುಳಗಳ ನಟ್ಟ ನಡುವಿನ ವರ್ತುಳದಂತಿದೆ; ನಿಯುತಯೋಜನ ವಿಶಾಲಃ = ಅದು ಒಂದು ಲಕ್ಷ ಯೋಜನ ವಿಸ್ತಾರವಾಗಿದೆ; ಯಥಾ ಪುಷ್ಕರ ಪತ್ರಂ = ಕಮಲ ಪುಷ್ಪದ ರೇಖುಗಳು ಹೇಗೆ ಹರಡಿಕೊಂಡಿರುವುವೋ ಹಾಗೆ; ಸಮವರ್ತುಲಃ = ಪೂರ್ಣ ವರ್ತುಲಾಕಾರವಾಗಿದೆ.



ಜಂಬೂದ್ವೀಪವು ಹೀಗೆ ಬುಟ್ಟಿಯಂತೆ ಇದೆ ಎಂಬುದನ್ನು ಪುರಾಣಾಂತರ ವಾಕ್ಯಗಳು ಸಮರ್ಥಿಸುತ್ತವೆ. ಮೇರು ಪರ್ವತವನ್ನು ಸುತ್ತುವರಿದು ಜಂಬೂದ್ವೀಪದ ಮಧ್ಯಗತವಾದ ಇಲಾವೃತವರ್ಷದಲ್ಲಿ ಸೂರ್ಯ ಚಂದ್ರ ನಕ್ಷತ್ರಾದಿಗಳ ಬೆಳಕು ಬೀಳುವುದಿಲ್ಲ ಎಂದು ಹೇಳಲಾಗಿದೆ. "ಚಂದ್ರ ಸೂರ್ಯೌಸನಕ್ಷತ್ರಾವಪ್ರಕಾಶಾ ವಿಲಾವೃತೇ".

ಯೋಜನ = ೬.೦೬ ಮೈಲಿ. ಆದುದರಿಂದ ಜಂಬೂದ್ವೀಪದ ಅಡ್ಡಗಲ ೬ ಲಕ್ಷ ಮೈಲಿ ಅಥವ ೧೦ ಲಕ್ಷ ಕಿ.ಮೀ.

**ಯಸ್ಮಿನ್ನವ ವರ್ಷಾಣಿ ನವಯೋಜನಸಹಸ್ರಾಯಾಮಾನ್ಯಷ್ಟ**
**ಮರ್ಯಾದಾ ಗಿರಿಭಿಃ ಸುವಿಭಕ್ತಾನಿ ಭವಂತಿ ॥೬॥**

ಯಸ್ಮಿನ್ = ಯಾವ ಜಂಬೂದ್ವೀಪದಲ್ಲಿ; ನವಯೋಜನ ಸಹಸ್ರ ಆಯಾಮಾನಿ = ಒಡೊಂದೂ ೯೦೦೦ ಯೋಜನ ವಿಸ್ತಾರವುಳ್ಳ; ನವ ವರ್ಷಾಣಿ = ಒಂಭತ್ತು ವರ್ಷಗಳು; ಅಷ್ಟ ಮರ್ಯಾದಾ ಗಿರಿಭಿಃ = ಎಂಟು ಸೀಮಾ ಪರ್ವತಗಳಿಂದ; ಸುವಿಭಕ್ತಾನಿ ಭವಂತಿ = ಸ್ಪಷ್ಟವಾಗಿ ವಿಭಾಗ ಮಾಡಲ್ಪಟ್ಟವುಗಳಾಗಿವೆ.

೯೦೦೦ ಯೋಜನ = ೫೪೦೦೦ ಮೈಲಿ = ೯೪೦೦೦ ಕಿ.ಮೀ. ವರ್ಷ ಎಂಬುದು ಖಂಡಗಳನ್ನೊಳಗೊಂಡ ವಿಸ್ತಾರವಾದ ಭೂಭಾಗ.

**ಏಷಾಂ ಮಧ್ಯೇ ಇಳಾವೃತಂ ನಾಮಾಭ್ಯಂತರ ವರ್ಷಂ ಯಸ್ಯ**
**ನಾಭ್ಯಾಮವಸ್ಥಿತಃ ಸರ್ವತಃ ಸೌವರ್ಣಃ ಕುಲಗಿರಿರಾಜೋ**
**ಮೇರುರ್ದ್ವೀಪಾಯಾಮ ಸಮುನ್ನಾಹಃ ಕರ್ಣಿಕಾಭೂತಃ ಕುವಲಯ**
**ಕಮಲಸ್ಯ ಮೂರ್ಧನಿ ದ್ವಾತ್ರಿಂಶತ್ಸಹಸ್ರ ಯೋಜನ ವಿತತೋ**
**ಮೂಲೇ ಷೋಡಶ ಸಾಹಸ್ರಂ ತಾವತಾಂತರ್ಭೂಮ್ಯಾಂ ಪ್ರವಿಷ್ಟಃ**
**॥೭॥**

ಏಷಾಂ ಮಧ್ಯೇ = ಈ ಒಂಭತ್ತು ವರ್ಷಗಳ ನಡುವೆ; ಇಳಾವೃತಂ ನಾಮ = ಇಳಾವೃತ ಎಂಬ ಹೆಸರುಳ್ಳ; ಅಭ್ಯಂತರ ವರ್ಷಂ = ನಟ್ಟನಡುವಿನ ವರ್ಷದ ನಾಭಿಯಂತಹ ಕೇಂದ್ರ ಪ್ರದೇಶದಲ್ಲಿ; ಸರ್ವತಃ ಸೌವರ್ಣಃ = ಸಂಪೂರ್ಣ ಬಂಗಾರಮಯವಾಗಿ; ಕುಲಗಿರಿರಾಜಃ = ಶ್ರೇಷ್ಟ ಪರ್ವತಗಳಿಗೆಲ್ಲಾ ರಾಜನಂತಿರುವ; ಮೇರುಃ = ಮೇರು ಪರ್ವತವು; ಅವಸ್ಥಿತಃ = ಇರತಕ್ಕದ್ದಾಗಿದೆ; ಅದು, ದ್ವೀಪಾಯಾಮ ಸಮುನ್ನಾಹಃ = ಜಂಬೂದ್ವೀಪದ ವಿಸ್ತಾರದಷ್ಟು (ಒಂದು ಲಕ್ಷ ಯೋಜನ) ಎತ್ತರವಾದುದು; ಕುವಲಯ ಕಮಲಸ್ಯ ಕರ್ಣಿಕಾಭೂತಃ = ಭೂಮಂಡಲವೆಂಬ ಕಮಲ ಪುಷ್ಪದ ಕರ್ಣಿಕೆಯಂತಿದೆ.; ಮೂರ್ಧನಿ = ಶಿರೋಭಾಗದಲ್ಲಿ; ದ್ವಾತ್ರಿಂಶತ್ ಸಹಸ್ರಯೋಜನ ವಿತತಃ = ೩೨೦೦೦ ಯೋಜನ ವಿಸ್ತಾರವಾಗಿದೆ; ಮೂಲೇ = ಕೆಳ ಭಾಗದಲ್ಲಿ; ಷೋಡಶ ಸಾಹಸ್ರಂ = ೧೬೦೦೦ ಯೋಜನ ವಿಸ್ತಾರವಾಗಿದೆ (ಸುತ್ತಳತೆಯುಳ್ಳದ್ದು); ತಾವತಾ ಅಂತರ್ಭೂಮ್ಯಾಂ ಪ್ರವಿಷ್ಟಃ = ಅಷ್ಟೇ ಪ್ರಮಾಣದಿಂದ (೧೬೦೦೦ ಯೋಜನ) ಭೂಮಿಯ ಒಳಗೆ ಪ್ರವಿಷ್ಟವಾಗಿದೆ.



> ಉತ್ತರೋತ್ತರೇಣೇಲಾವೃತಂ ನೀಲಃ ಶ್ವೇತಃ ಶೃಂಗವಾನಿತಿ ತ್ರಯೋ ರಮ್ಯಕ ಹಿರಣ್ಮಯ ಕುರೂಣಾಂ ವರ್ಷಾಣಾಂ ಮರ್ಯಾದಾಗಿರಯಃ ಪ್ರಾಗಾಯತಾ ಉಭಯತಃ ಕ್ಷಾರೋದಾವಧಯಃ ದ್ವಿಸಹಸ್ರಪೃಥವ ಏಕೈಕಶಃ ಪೂರ್ವಸ್ಮಾತ್ಪೂರ್ವಸ್ಮಾದುತ್ತರೋ ದಶಾಂಶಾಧಿಕಾಂಶೇನ ದೈರ್ಘ್ಯ ಏವ ಹ್ರಸನ್ತಿ ॥೮॥

ಇಳಾವೃತಂ ಉತ್ತರೋತ್ತರೇಣ = ಇಳಾವೃತ ವರ್ಷದ ಉತ್ತರದ ಕಡೆಗೆ ಒಂದಾದಮೇಲೆ ಒಂದರಂತೆ; ನೀಲಃ ಶ್ವೇತಃ ಶೃಂಗವಾನ್ ಇತಿ = ನೀಲ, ಶ್ವೇತ, ಶೃಂಗವಾನ್ ಎಂಬುದಾಗಿ; ತ್ರಯಃ = ಮೂರು; ರಮ್ಯಕ ಹಿರಣ್ಮಯ ಕುರೂಣಾಂ = ರಮ್ಯಕ, ಹಿರಣ್ಮಯ ಮತ್ತು ಕುರುವರ್ಷಗಳಿಗೆ; ಮರ್ಯಾದಾಗಿರಯಃ = ಸೀಮಾಪರ್ವತಗಳು; ಉಭಯತಃ ಪ್ರಾಕ್ = ಎರಡುಕಡೆಗೂ ಒಂದರ ಮುಂದೆ ಒಂದು; ಕ್ಷಾರೋದಾವಧಯಃ = ಲವಣ ಸಮುದ್ರವೇ ಅವಧಿಯುಳ್ಳವುಗಳಾಗಿ; ಆಯತಾಃ = ಹಬ್ಬಿವೆ; ದ್ವಿಸಹಸ್ರ ಪೃಥವಃ = ಒಂದೊಂದೂ ಎರಡು ಸಾವಿರ ಯೋಜನ (೧೬೦೦೦ ಮೈಲಿ) ಅಗಲವುಳ್ಳವುಗಳಾಗಿವೆ; ಏಕೈಕಶಃ = ಒಂದೊಂದೂ; ಪೂರ್ವಸ್ಮಾತ್ ಪೂರ್ವಸ್ಮಾತ್ ಉತ್ತರ ಉತ್ತರಃ = ಮೊದಲಿನವುಗಳಿಗಿಂತ ಅನಂತರದವು; ದಶಾಂಶಾಧಿಕಾಂಶೇನ = ಶತಾಂಶದ ಹತ್ತು ಚಿಲ್ಲರೆ ಅಂಶದಷ್ಟು; ದೈರ್ಘ್ಯೇ ಏವ = ಉದ್ದದಲ್ಲಿ ಮಾತ್ರವೇ; ಹ್ರಸಂತಿ = ಅಳತೆಯಲ್ಲಿ ಕಡಿಮೆಯಾಗುತ್ತವೆ.

> ಏವಂ ದಕ್ಷಿಣೇನೇಲಾವೃತಂ ನಿಷಧೋ ಹೇಮಕೂಟೋ ಹಿಮಾಲಯ ಇತಿ ಪ್ರಾಗಾಯತಾ ಯಥಾ ನೀಲಾದಯೋಽಯುತಯೋಜನೋತ್ಸೇಧಾ ಹರಿವರ್ಷ ಕಿಂಪುರುಷ ಭಾರತಾನಾಂ ಯಥಾಸಂಖ್ಯಂ ॥೯॥

ಏವಂ = ಅದೇ ಪ್ರಕಾರವಾಗಿ; ಇಲಾವೃತಂ ದಕ್ಷಿಣೇನ = ಇಳಾವೃತವರ್ಷದ ದಕ್ಷಿಣದ ಕಡೆಗೆ; ನಿಷಧಃ, ಹೇಮಕೂಟಃ, ಹಿಮಾಲಯಃ ಇತಿ = ನಿಷಧ, ಹೇಮ ಕೂಟ, ಹಿಮಾಲಯ ಎಂಬುದಾಗಿ; ಯಥಾ ನೀಲ ಆದಯಃ = ನೀಲ, ಶ್ವೇತ, ಶೃಂಗವಾನ್ ಪರ್ವತಗಳಂತೆ; ಪ್ರಾಗಾಯತಾಃ = ಒಂದರ ಮುಂದೆ ಒಂದರಂತೆ ಹಬ್ಬಿವೆ; ಅಯುತ ಯೋಜನ ಉತ್ಸೇಧಾಃ = ೧೦,೦೦೦ ಯೋಜನ ಎತ್ತರ ಉಳ್ಳವುಗಳಾಗಿವೆ; ಯಥಾ ಸಂಖ್ಯಂ = ಎಣಿಕೆಗೆ ಅನುಗುಣವಾಗಿ; ಹರಿವರ್ಷ ಕಿಂಪುರುಷ ಭಾರತಾನಾಂ = ಹರಿವರ್ಷ, ಕಿಂಪುರುಷ ವರ್ಷ, ಭರತವರ್ಷಗಳಿಗೆ; (ಮರ್ಯಾದಾ ಗಿರಯಃ = ಸೀಮಾಪರ್ವತಗಳಾಗಿವೆ.)

೮ ಮತ್ತು ೯ನೇ ಗದ್ಯ ಭಾಗಗಳಲ್ಲಿ ಹೇಳಿರುವ ಅಂಶಗಳನ್ನು ಪರಸ್ಪರ ಹೊಂದಿಸಿ ಅರ್ಥಮಾಡಿಕೊಳ್ಳಬೇಕು. ಉತ್ತರದ ಮೂರು ಪರ್ವತಗಳ ಅಗಲ ಎರಡೆರಡು ಸಾವಿರ ಯೋಜನ ಎಂಬ ಮಾತು ದಕ್ಷಿಣದ ಕಡೆಯ ಪರ್ವತಗಳಿಗೂ ಅನ್ವಯಿಸುತ್ತದೆ. ಅದರಂತೆ ಹತ್ತು ಸಾವಿರ ಯೋಜನ ಎತ್ತರ ಎಂಬ ಮಾತು ಉತ್ತರದ ಕಡೆಯ ಪರ್ವತಗಳಿಗೂ, ಮುಂದೆ ಹೇಳಲಿರುವ ಇತರ ಪರ್ವತಗಳಿಗೂ ಅನ್ವಯಿಸುತ್ತದೆ.

ಉತ್ತರದ ಮೂರು ಪರ್ವತಗಳು ಮತ್ತು ದಕ್ಷಿಣದ ಮೂರು ಪ್ರವತಗಳನ್ನು ಕುರಿತು, 'ದಶಾಂಶಾಂಶಾಧಿಕೇನ ಹ್ರಸಂತಿ' ಎಂಬ ಮಾತಿನ ಅರ್ಥ ಹೀಗಿದೆ - ನೀಲ ಮತ್ತು ನಿಷಧ ಪರ್ವತಗಳು ಒಂದೊಂದು ಲಕ್ಷ ಯೋಜನ ಉದ್ದವಾಗಿವೆ. ಶ್ವೇತ ಮತ್ತು ಹೇಮಕೂಟ ಪರ್ವತಗಳು ದಶಾಂಶ ಕಡಿಮೆ, ಎಂದರೆ, ೯೦,೦೦೦ ಯೋಜನ ಉದ್ದವಾಗಿವೆ. ಶೃಂಗವಾನ್ ಮತ್ತು ಹಿಮಾಲಯ ಪರ್ವತಗಳು ೮೧,೦೦೦ ಯೋಜನ ಉದ್ದವಾಗಿವೆ.

ಈಗಿನ ಭೂಗೋಳ ಶಾಸ್ತ್ರವನ್ನು ಮಾತ್ರ ಓದಿರುವ ನಮಗೆ, ಇಲ್ಲಿ ಹೇಳಿರುವ ಹಿಮಾಲಯಾ ಪರ್ವತದ ಕಲ್ಪನೆ ಬರುವುದು ಬಹುಕಷ್ಟ. ಹಿಂದೆ ಕಾಣಿಸಿದ ಜಂಬೂದ್ವೀಪದ ನಕ್ಷೆಯನ್ನು ನೋಡಿದ ನಂತರವೇ ಆ ಕಲ್ಪನೆ ಮೂಡಬಲ್ಲುದು. ಭಾರತದೇಶದ ಉತ್ತರದಲ್ಲಿರುವ ಹಿಮಾಲಯದ ಅಗಲ ೩೦೦ ಮೈಲಿ, ಉದ್ದ ೨,೦೦೦ ಮೈಲಿ, ಪರಮಾವಧಿ ಎತ್ತರ ೫.೫ ಮೈಲಿ. ಭರತವರ್ಷ ಕಿಂಪುರುಷ ವರ್ಷಗಳನ್ನು ಬೇರ್ಪಡಿಸುವ ಹಿಮಾಲಯದ ಉದ್ದ ೪,೮೬,೦೦೦ ಮೈಲಿ; ಎತ್ತರ ೬೦,೦೦೦ ಮೈಲಿ; ಅಗಲ ೧೨,೦೦೦ ಮೈಲಿ. ಮೂಲ ನರನಾರಾಯಣಾಶ್ರಮ, ಮೂಲ ಬದರಿಕಾಶ್ರಮ ಮತ್ತು ಮೂಲ ಕೈಲಾಸಮಂದಿರಗಳಿರುವುದು ಇಲ್ಲಿ. ನಮ್ಮ ಹಿಮಾಲಯದಲ್ಲಿರುವುವು ಅಣುಬದರಿ, ಇತ್ಯಾದಿ.



ಜಂಬೂದ್ವೀಪದ ನೆಲಗಟ್ಟು – Ground plan of Jambudvip

ತಥೈವೇಲಾವೃತಮಪರೇಣ ಪೂರ್ವೇಣಚ ಮಾಲ್ಯವದ್ಗಂಧಮಾದನಾವಾ
ನೀಲನಿಷಧಾಯತೌ ದ್ವಿಸಹಸ್ರಂ ಪ್ರಪ್ರಥತುಃ ಕೇತುಮಾಲಾ
ಭದ್ರಾಶ್ವಯೋಃ ಸೀಮಾನಂ ವಿದಧಾತೇ ||೧೦||

ತಥೈವ = ಅದೇ ರೀತಿಯಾಗಿ; ಇಲಾವೃತಂ ಅಪರೇಣ ಪೂರ್ವೇಣ ಚ =ಇಳಾವೃತವರ್ಷದ ಪಶ್ಚಿಮಕ್ಕೂ, ಪೂರ್ವಕ್ಕೂ; ಮಾಲ್ಯವತ್ ಗಂಧಮಾದನೌ =ಮಾಲ್ಯವಾನ್ ಮತ್ತು ಗಂಧಮಾದನ ಪರ್ವತಗಳು; ಆನೀಲ ನಿಷಧಾಯತೌ =ನೀಲ ಪರ್ವತದಿಂದ ನಿಷಧ ಪರ್ವತದ ವರೆಗೆ ಹಬ್ಬಿವೆ; ದ್ವಿಸಹಸ್ರಂ ಪ್ರಪ್ರಥತುಃ = ಎರಡು ಸಾವಿರ ಯೋಜನ ದಪ್ಪವಾದವು (ಅಗಲವುಳ್ಳವು) ಕೇತು ಮಾಲಾ ಭದ್ರಾಶ್ವಯೋಃ = ಕೇತುಮಾಲಾವರ್ಷ ಮತ್ತು ಭದ್ರಾಶ್ವವರ್ಷಗಳಿಗೆ; ಸೀಮಾನಂ ವಿದಧಾತೇ = ಎಲ್ಲೆಗಳನ್ನು ಗೊತ್ತುಪಡಿಸುತ್ತವೆ.

ಈ ಪರ್ವತಗಳ ಎತ್ತರವೂ ೧೦,೦೦೦ ಯೋಜನ ಎಂದು ಗ್ರಹಿಸಬೇಕು.

ಇಲ್ಲಿ ಹೇಳದೆ, ಪುರಾಣಾಂತರಗಳಲ್ಲಿ ಹೇಳಿರುವ ಬೇರೆ ಎರಡೆರಡು ಪರ್ವತಗಳು ಭದ್ರಾಶ್ವ ಮತ್ತು ಕೇತುಮಾಲಾ ವರ್ಷಗಳಲ್ಲಿರುವುವೆಂದು ಋಜುಗಣಲಾತವ್ಯರೂ, ಆದುದರಿಂದಲೇ ಸತ್ಯದರ್ಶಿಗಳೂ ಆದ ಶ್ರೀ ವಾದಿರಾಜ ತೀರ್ಥರು ಹೇಳಿದ್ದಾರೆ.

ಏಕಸ್ಮಿನ್ನಪಿ ವರ್ಷೇಸ್ಮಿನ್ ದ್ವೌಗಿರೀನಿರ್ಮಿತೌ ಕ್ರಮಾತ್ ।
ಚತುರ್ದಿಕ್ಷುಚ ಸಾಮ್ಯಾಯ ಪ್ರತೀಚ್ಯಾಂ ಚೈವಮೇವಹಿ ॥

ಗಂಧಮಾದನ ಮಾನೇನ ಸಹ ಪೂರ್ವಾಚಲಾಂತರೇ ।
ವರ್ಷೇಯಂ ನವ ಸಾಹಸ್ರ ಸಮ್ಮಿತೋಪಿ ಭವೇತ್ಕಿಲ ॥

ಅತ ಏಕೋಪಿ ವರ್ಷೇಯಂ ತ್ರೇಧಾಸ್ಯಾತ್ಖಂಡಿತೋದ್ರಿಭಿಃ ।
ಸರ್ವ ಭಾಗೇಪಿ ಸಾಮ್ಯಾಯ ನವತ್ವಂಚ ನಹನ್ಯತೇ ॥

ಏವಂ ಪಶ್ಚಿಮತೋಪ್ಯೂಹ್ಯಂ ದ್ವೀಪಾಲಂಕೃತಯೇ ಬುಧೈಃ ॥

(ಶ್ರೀ ವಾದಿರಾಜರ ಭೂಗೋಳವರ್ಣನೆ.)

ಅರ್ಥ:– ಭದ್ರಾಶ್ವವೆಂಬುದು ಒಂದೇ ವರ್ಷವಾದರೂ ಇದರಲ್ಲಿ ಕ್ರಮವಾಗಿ ಎರಡು ಪರ್ವತಗಳು ನಿರ್ಮಿತವಾಗಿವೆ. ನಾಲ್ಕು ದಿಕ್ಕುಗಳಲ್ಲಿ ಸಮಾನತೆ ಇರುವಂತೆ ಮಾಡುವುದಕ್ಕಾಗಿ ಈ ಪರ್ವತಗಳ ಸೃಷ್ಟಿ. ಪಶ್ಚಿಮದ ಕೇತುಮೂಲಾವರ್ಷದಲ್ಲಿಯೂ

ಇದರಂತೆ ಎರಡು ಪರ್ವತಗಳು ನಿರ್ಮಿತವಾಗಿವೆ. ಗಂಧಮಾದನದ ಪೂರ್ವಕ್ಕೂ, ಮಾಲ್ಯವಂತದ ಪಶ್ಚಿಮಕ್ಕೂ ಎರಡೆರಡು ಪ್ರವತಗಳಿರುವುದರಿಂದ ಆ ಎರಡು ವರ್ಷಗಳು ೯,೦೦೦ ಯೋಜನದ ಮೂರು ಮೂರು ವಿಭಾಗಗಳಾಗಿ ವಿಂಗಡಿಸಲ್ಪಟ್ಟಿವೆ. ಒಂದೊಂದು ವರ್ಷವೂ ೯,೦೦೦ ಯೋಜನ ವಿಸ್ತಾರ ಎಂದು ಹಿಂದೆ ಹೇಳಿದಮಾತು ಹೀಗೆ ಸಾರ್ಥಕವೆನಿಸುವುದು; ಕಲಾದೃಷ್ಟಿಯಿಂದಲೂ ಜಂಬೂ ದ್ವೀಪದ ಸೌಂದರ್ಯ ಎದ್ದು ಕಾಣುವುದು.

(ಸೂಚನೆ:- ಸೀಮಾಪರ್ವತಗಳು ಧನುರಾಕಾರವಾಗಿವೆ ಎಂದು ವಾಯುಪುರಾಣದಲ್ಲಿ ಉಕ್ತವಾಗಿದೆ.)

**ಮಂದರೋ ಮೇರು ಮಂದರಃ ಸುಪಾರ್ಶ್ವಃ ಕುಮುದ ಇತ್ಯಯುತ**
**ಯೋಜನ ವಿಸ್ತಾರೋನ್ನಾಹಾ ಮೇರೋಶ್ಚತುರ್ದಿಶಮವಷ್ಟಂಭಗಿರಿಯ**
**ಉಪಕ್ಲೃಪ್ತಾಃ ॥೧೧॥**

ಮಂದರಃ ಮೇರುಮಂದರಃ ಸುಪಾರ್ಶ್ವಃ ಕುಮುದಃ ಇತಿ = ಮಂದರ, ಮೇರುಮಂದರ, ಸುಪಾರ್ಶ್ವ, ಕುಮುದ ಎಂಬುದಾಗಿ; ಅಯುತಯೋಜನ ವಿಸ್ತಾರ ಉನ್ನಾಹಾಃ = ಪತ್ತು ಸಾವಿರ ಯೋಜನ ಉದ್ದ ಮತ್ತು ಹತ್ತು ಸಾವಿರ ಯೋಜನ ಎತ್ತರವುಳ್ಳವುಗಳಾಗಿ; ಮೇರೋಃ ಚತುರ್ದಿಶಂ = ಮೇರುಪರ್ವತದ ನಾಲ್ಕು ದಿಕ್ಕುಗಳಲ್ಲಿ; ಅವಷ್ಟಂಭ ಗಿರಯಃ = ಆಧಾರ ಸ್ತಂಭಗಳಂತಿರುವ ಪರ್ವತಗಳು ನಿರ್ಮಿತವಾಗಿವೆ.

ಈ ಪರ್ವತಗಳೂ ಎರಡೆರಡು ಸಾವಿರ ಯೋಜನ ಅಗಲವುಳ್ಳವುಗಳೇ ಆಗಿವೆ. ಇವು ಹತ್ತು ಸಾವಿರ ಯೋಜನ ಉದ್ದ ಎಂದಾಗ, ಸುಮಾರು ಆರು ಸಾವಿರ ಯೋಜನ ವ್ಯಾಸವುಳ್ಳ ಮೇರುಪರ್ವತದಿಂದ ಎರಡೆರಡು ಸಾವಿರ ಯೋಜನ ದೂರದಲ್ಲಿವೆ ಎಂದಹಾಗಾಯಿತು.

ಪರಿಸ್ತರಣ ಪರ್ವತಗಳ ಎತ್ತರ ಎರಡೆರಡು ಸಾವಿರ ಯೋಜನ ಮಾತ್ರ ಎಂದು ಮುಂದೆ ತಿಳಿದುಬರುವುದು.

**ಚತುರ್ಷ್ವೇತೇಷು ಚೂತ ಜಂಬೂ ಕದಂಬ ನ್ಯಗ್ರೋಧಾಶ್ಚತ್ವಾರಃ**
**ಪಾದಪಪ್ರವರಾಃ ಪರ್ವತಕೇತವ ಇವಾಧಿಸಹಸ್ರ**
**ಯೋಜನೋನ್ನಾಹಾಸ್ತಾವದ್ವಿಟಪಿ ವಿತತಯಃ ಶತಯೋಜನಪರಿಣಾಹಾಃ ॥೧೨॥**

ಚತುರ್ಷು ಏತೇಷು = ಈ ನಾಲ್ಕು ಪರ್ವತಗಳಲ್ಲಿ; ಚೂತ (ಮಾವು), ಜಂಬೂ (ನೇರಿಳೆ), ಕದಂಬ, ನ್ಯಗ್ರೋಧ (ಆಲ) ಎಂಬ; ಚತ್ವಾರಃ = ನಾಲ್ಕು; ಪಾದಪಪ್ರವರಾಃ = ಶ್ರೇಷ್ಠಗಳಾದ ವೃಕ್ಷಗಳು; ಪರ್ವತಕೇತವಃ ಇವ = ಪರ್ವತಗಳ ಮೇಲಿನ ಧ್ವಜಗಳಂತೆ; ಅಧಿಸಹಸ್ರ ಯೋಜನ ಉನ್ನಾಹಾಃ = ಸಾವಿರ ಯೋಜನಕ್ಕಿಂತ ಸ್ವಲ್ಪ ಹೆಚ್ಚು ಎತ್ತರವಾಗಿಯೂ (೧,೧೦೦ ಯೋಜನ); ತಾವತ್ ವಿಟಪಿ ವಿತತಯಃ = ಅಷ್ಟೇ ಯೋಜನ ಶಾಖೋಪಶಾಖೆಗಳ ವಿಸ್ತಾರ ಉಳ್ಳವುಗಳಾಗಿಯೂ; ಶತಯೋಜನ ಪರಿಣಾಹಾಃ = ನೂರು ಯೋಜನ ದಪ್ಪವಾಗಿಯೂ ಇವೆ.

ಹ್ರದಾಶ್ಚತ್ವಾರಃ ಪಯೋ ಮಧ್ವಿಕ್ಷು ರಸ ಮೃಷ್ಟಜಲಂ
ಯದುಪಸ್ಪರ್ಶಿನ ಉಪದೇವಗಣಾ ಯೋಗೈಶ್ವರ್ಯಾಣಿ ಸ್ವಾಭಾವಿಕಾನಿ
ಭರತರ್ಷಭ ಧಾರಯಂತಿ ॥೧೩॥

ಭರತರ್ಷಭ = ಅಯ್ಯಾ, ಪರೀಕ್ಷಿದ್ರಾಜಾ; ಪಯಃ, ಮಧು, ಇಕ್ಷುರಸ, ಮೃಷ್ಟಜಲಾಃ = ಹಾಲು, ಜೇನು, ಕಬ್ಬಿನ ರಸ ಮತ್ತು ಶುದ್ಧೋದಕಗಳನ್ನುಳ್ಳ; ಚತ್ವಾರಃ ಹ್ರದಾಃ = ನಾಲ್ಕು ಮಡುಗಳು ಆ ಪರ್ವತಗಳಲ್ಲಿ (ಕ್ರಮವಾಗಿ) ಇವೆ; ಯತ್ ಉಪಸ್ಪರ್ಶಿನಃ = ಯಾವ ಜಲಗಳ ಸ್ಪರ್ಶಪಾನಾದಿಗಳಿಂದ; ಉಪದೇವಗಣಾಃ = ಕಿರಿಯ ದೇವತಾ ಗಣಗಳವರು; ಸ್ವಾಭಾವಿಕಾನಿ = ಯೋಗಾಭ್ಯಾಸದ ಆವಶ್ಯಕತೆ ಇಲ್ಲದೆ ಲಭಿಸುವ; ಯೋಗೈಶ್ವರ್ಯಾಣಿ = ಅಣಿಮಾದಿ ಅಷ್ಟಸಿದ್ಧಿಗಳನ್ನು; ಧಾರಯಂತಿ = ಹೊಂದಿರುತ್ತಾರೆ.

ದೇವೋದ್ಯಾನಾನಿ ಚ ಭವಂತಿ ಚತ್ವಾರಿ ನಂದನಂ ಚೈತ್ರರಥಂ
ವೈಭ್ರಾಜಕಂ ಸರ್ವತೋಭದ್ರಮಿತಿ ॥೧೪॥

ನಂದನಂ, ಚೈತ್ರರಥಂ ವೈಭ್ರಾಜಕಂ, ಸರ್ವತೋಭದ್ರಂ ಇತಿ = ಈ ನಾಲ್ಕು ಹೆಸರುಗಳುಳ್ಳ; ದೇವೋದ್ಯಾನಾನಿ ಚ = ದೇವತಾ ವಿಹಾರ ಸ್ಥಾನಗಳಾದ ಉದ್ಯಾನಗಳೂ; ಭವಂತಿ = ಆ ಪರ್ವತಗಳಲ್ಲಿ ಇರುತ್ತವೆ.

ಯೇಷ್ವಮರಪರಿವೃಢಾಃ ಸಹಸುರಲಲನಾಲಲಾಮಯೂಥಪತಯ
ಉಪದೇವಗಣೈರುಪಗೀಯಮಾನ ಮಹಿಮಾನಃ ಕಿಲ ವಿಹರಂತಿ ॥೧೫॥

ಯೇಷು = ಯಾವ ಆ ಉದ್ಯಾನಗಳಲ್ಲಿ; ಅಮರಪರಿವೃಢಾಃ = ಶ್ರೇಷ್ಠವರ್ಗದ ದೇವತೆಗಳು; ಸಹ ಸುರಲಲನಾಲಲಾಮ ಯೂಥಪತಯಃ = ದೇವತಾರಮಣೀ ಮಣಿಯರ ಪತಿಗಳಿಂದ ಕೂಡಿ; ಉಪದೇವಗಣೈಃ = ಗಂಧರ್ವಾದಿ ಕಿರಿಯ ದೇವತೆಗಳಿಂದ; ಉಪಗೀಯಮಾನಾಃ = ಸ್ತುತಿಸಲ್ಪಡುತ್ತಾ; ವಿಹರಂತಿ ಕಿಲ = ವಿಹಾರ ಮಾಡುತ್ತಾರೆಂಬುದು ನಿಜ ಸಂಗತಿ.

**ಮಂದರೋತ್ಸಂಗ ಏಕಾದಶ ಶತ ಯೋಜನೋತ್ತುಂಗ ದೇವಚೂತಶಿರಸೋ ಗಿರಿಶಿಖರ ಸ್ಥೂಲಾನಿ ಫಲಾನ್ಯಮೃತಕಲ್ಪಾನಿ ಪತನ್ತಿ ॥೧೬॥**

ಮಂದರೋತ್ಸಂಗೇ = ಮಂದರ ಪರ್ವತದ ಬಂಡೆಗಳ ಮೇಲೆ; ಏಕಾದಶ ಶತ ಉತ್ತುಂಗ = ೧,೧೦೦ ಯೋಜನ ಎತ್ತರದ; ದೇವಚೂತ ಶಿರಸಃ = ದೇವ ಮಾವಿನ ಶಿರೋಭಾಗದಿಂದ; ಗಿರಿಶಿಖರ ಸ್ಥೂಲಾನಿ = ಪರ್ವತ ಶಿಖರಗಳಷ್ಟು ದಪ್ಪದ; ಅಮೃತಕಲ್ಪಾನಿ ಫಲಾನಿ = ಅಮೃತದಂತೆ ರುಚಿಕರಗಳಾದ ಹಣ್ಣುಗಳು; ಪತನ್ತಿ = ಉದುರಿ ಬೀಳುತ್ತವೆ.

**ತೇಷಾಂ ವಿಶೀರ್ಯಮಾಣಾನ್ಯತಿಮಧುರ ಸುರಭಿಸುಗಂಧಿ ಬಹುಳಾರುಣ ರಸೋದೇನಾರುಣೋದಾ ನಾಮ ನದೀ ಮಂದರಗಿರಿ ಶಿಖರಾನ್ನಿಪತಂತೀ ಪೂರ್ವೇಣೇಲಾವೃತಮುಪಪ್ಲಾವಯತಿ ॥೧೭॥**

ವಿಶೀರ್ಯಮಾಣಾನಾಂ = ಬಿದ್ದು ಹೋಳಾಗುತ್ತಿರುವ; ತೇಷಾಂ = ಆ ಮಾವಿನ ಹಣ್ಣುಗಳ; ಅತಿ ಮಧುರ = ಬಹುರುಚಿಕರವಾದ; ಸುರಭಿ ಸುಗಂಧಿ = ದಿವ್ಯ ಸುಗಂಧಯುಕ್ತವಾದ; ಬಹುಳಾರುಣ ರಸೋದೇನ = ಅತಿಶಯ ಅರುಣವರ್ಣವುಳ್ಳ ರಸ ಪ್ರವಾಹದಿಂದ; ಅರುಣೋದಾ ನಾಮ ನದೀ = ಅರುಣೋದಾ ಎಂಬ ಹೆಸರುಳ್ಳ ನದಿಯು; ಮಂದರಗಿರಿ ಶಿಖರಾತ್ = ಮಂದರಗಿರಿಯ ಶಿಖರ ಪ್ರದೇಶದಿಂದ; ನಿಪತಂತೀ = ಧುಮುಕುತ್ತಾ; ಪೂರ್ವೇಣ ಇಲಾವೃತಂ = ಇಳಾವೃತ ವರ್ಷದ ಪೂರ್ವ ದಿಕ್ಕಿನ ಪ್ರದೇಶವನ್ನು; ಉಪಪ್ಲಾವಯತಿ = ರಸಜಲ ಸಮೃದ್ಧವಾಗಿಸುತ್ತವೆ.

**ಯದುಪಜೋಷಣಾದ್ಭವಾನ್ಯಾ ಅನುಚರೀಣಾಂ ಪುಣ್ಯಜನವಧೂ ನಾಮವಯವ ಸ್ಪರ್ಶ ಸುಗಂಧವಾತೋ ದಶಯೋಜನಂ ಸಮಂತಾದನುವಾಸಯತಿ ॥೧೮॥**

ಯತ್ ಉಪಜೋಷಣಾತ್ = ಯಾವ ಆ ರಸ ಪಾನದಿಂದ; ಭವಾನ್ಯಾಃ ಅನುಚರೀಣಾಂ = ಭವಾನೀದೇವಿಯ ಸೇವಕಿಯರಾದ; ಪುಣ್ಯಜನ ವಧೂನಾಂ = ದೇವತಾಸ್ತ್ರೀಯರ; ಅವಯವ ಸ್ಪರ್ಶ = ಶರೀರಾವಯವಗಳ ಸ್ಪರ್ಶವುಳ್ಳ; ಸುಗಂಧವಾತಃ = ಸುವಾಸನೆಯಿಂದ ಯುಕ್ತವಾದ ಗಾಳಿಯು; ಸಮಂತಾತ್ = ಸುತ್ತಲೂ; ದಶಯೋಜನಂ = ಹತ್ತು ಯೋಜನಪರ್ಯಂತ ಪ್ರದೇಶವನ್ನು; ಅನುವಾಸಯತಿ = ಸುಗಂಧಮಯವಾಗಿ ಮಾಡುತ್ತದೆ.

ಮೇರುಪರ್ವತದ ಸಾನು ಪ್ರದೇಶದಲ್ಲಿ ಮಹಾರುದ್ರದೇವರು ಸಂಕರ್ಷಣ ಮೂರ್ತಿಯನ್ನು ಉಪಾಸಿಸುತ್ತಾ, ಭವಾನೀ ದೇವಿಯರೊಡನೆ ವಿಹರಿಸುತ್ತಿದ್ದಾರೆ. ಅವರ ಸೇವೆಯಲ್ಲಿ ತೊಡಗಿರುವವರು ೧೦,೦೦೦ ಮಂದಿ ದೇವತಾ ಸ್ತ್ರೀಯರು.

**ಏವಂ ಜಂಬೂ ಫಲಾನಾಮತ್ಯುಚ್ಚ ನಿಪಾತ**
**ವಿಶೀರ್ಣಾನಾಮನಸ್ಥಿಪ್ರಾಯಾಣಾಮಿಭಕಾಯನಿಭಾನಾಂ ರಸೇನ**
**ಜಂಬೂ ನಾಮ ನದೀ ಮೇರುಮಂದರ ಶಿಖರಾದಯುತ**
**ಯೋಜನಾದವನಿತಲೇ ನಿಪತಂತೀ ದಕ್ಷಿಣೇನಾತ್ಮಾನಂ**
**ಯಾವದಿಲಾವೃತಂಸ್ಯಂದಯತಿ ॥೧೯॥**

ಏವಂ = ಇದೇ ಪ್ರಕಾರವಾಗಿ; ಅತ್ಯುಚ್ಚನಿಪಾತ ವಿಶೀರ್ಣಾನಾಂ = ಬಹಳ ಎತ್ತರದಿಂದ ಬಿದ್ದು ಸೀಳಿ ಹೋಗುವ; ಅನಸ್ಥಿಪ್ರಾಯಾಣಾಂ = ಬೀಜಗಳೇ ಇಲ್ಲವೆನ್ನುವಂತಿರುವ; ಇಭಕಾಯನಿಭಾನಾಂ = ಆನೆಯ ದೇಹದಂತೆ ಬಹುದೊಡ್ಡದಾದ; ಜಂಬೂಫಲಾನಾಂ = ನೇರಳೇಹಣ್ಣುಗಳ; ರಸೇನ = ರಸದಿಂದ; ಜಂಬೂನಾಮ ನದೀ = ಜಂಬೂ ನದಿಯು; ಮೇರು ಮಂದರ ಶಿಖರಾತ್ = ಮೇರುಮಂದರ ಪರ್ವತದ ಮೇಲ್ಭಾಗದಿಂದ; ಅಯುತ ಯೋಜನಾತ್ = ಹತ್ತುಸಾವಿರ ಯೋಜನದೆತ್ತರದಿಂದ; ಅವನಿತಲೇ = ಭೂಮಿಯ ಮೇಲೆ; ನಿಪತಂತೀ = ಬೀಳುತ್ತಾ; ದಕ್ಷಿಣೇನ = ದಕ್ಷಿಣದ ಕಡಗೆ; ಯಾವತ್ ಇಳಾವೃತಂ ಆತ್ಮಾನಂ = ಇಳಾವೃತ ವರ್ಷಪ್ರದೇಶವನ್ನು; ಉಪಸ್ಯಂದತಿ = ಕುರಿತು ಪ್ರವಹಿಸುತ್ತದೆ.

**ತಾವದುಭಯೋರಪಿ ರೋಧಸೋರ್ಯಾಮೃತ್ತಿಕಾ ತದ್ರಸೇನಾನು**
**ವಿಧ್ಯಮಾನಾ ವಾಯ್ವರ್ಕಸಂಯೋಗವಿಪಾಕೇನ**
**ಸದಾಮರಲೋಕಾಭರಣಂ ಜಾಂಬೂನದಂ ನಾಮ ಸುವರ್ಣಂ ಭವತಿ**
**॥೨೦॥**

ತಾವತ್ ಉಭಯೋಃ ಅಪಿ ರೋಧಸೋಃ = ಆ ಜಂಬೂ ನದಿಯ ಎರಡೂ ದಡಗಳ; ಯಾ ಮೃತ್ತಿಕಾ = ಯಾವ ಮಣ್ಣು ಉಂಟೋ ಅದು; ತದ್ರಸೇನ ಅನುವಿಧ್ಯಮಾನಾ = ಆ ನದಿಯ ರಸದಿಂದ ಕೂಡಿಕೊಂಡು; ವಾಯು ಅರ್ಕಸಂಯೋಗಾತ್ = ಗಾಳಿ ಮತ್ತು ಸೂರ್ಯಕಿರಣಗಳ ಪ್ರಭಾವದಿಂದ; ಸದಾ = ಸರ್ವದಾ; ಅಮರಲೋಕ ಆಭರಣಂ = ದೇವತಾ ಪುರುಷರಿಗೆ ಆಭರಣಯೋಗ್ಯವಾದ; ಜಾಂಬೂನದಂ ನಾಮ = ಜಾಂಬೂನದ ಎಂಬ ಹೆಸರುಳ್ಳ; ಸುವರ್ಣಂ ಭವತಿ = ಬಂಗಾರವಾಗುತ್ತದೆ.

ಜಂಬೂದ್ವೀಪದ ಇಳಾವೃತ ವರ್ಷದಲ್ಲಿ ನೇರವಾಗಿ ಸೂರ್ಯಕಿರಣಗಳು ಬೀಳದಿದ್ದರೂ ಪ್ರತಿಫಲಿತ ಬೆಳಕಿನ ಪ್ರಭಾವವೇ ಸುವರ್ಣದ ಸೃಷ್ಟಿಗೆ ಸಹಕಾರಿಯಾಗಿರುವುದು ಎಂದು ತಿಳಿಯಬೇಕು.

**ಯದು ಹ ವಾವ ವಿಬುಧಾದಯಃ ಸಹಯುವತಿಭಿರ್ಮುಕುಟ ಕಟಕ ಕಟಿಸೂತ್ರಾದ್ಯಾಭರಣರೂಪೇಣ ಖಲು ಧಾರಯಂತಿ ॥೨೧॥**

ಯದು ಹ ವಾವ = ಯಾವ ಆ ಬಂಗಾರವನ್ನು ಜ್ಞಾನಿಗಳು ಬಲ್ಲಂತೆ; ವಿಬುಧಾದಯಃ = ಹಿರಿಕಿರಿಯ ದೇವತೆಗಳು; ಯುವತಿಭಿಃ ಸಹ = ತಮ್ಮ ಪತ್ನಿಯರಿಂದ ಕೂಡಿ; ಮುಕುಟ = ಕಿರೀಟ; ಕಟಕ = ಕಂಕಣ; ಕಟಿಸೂತ್ರ = ನಡುಪಟ್ಟಿ; ಆದಿ ಆಭರಣರೂಪೇಣ = ಮೊದಲಾದ ಆಭರಣಗಳನ್ನು ಮಾಡಿಕೊಂಡು; ಧಾರಯಂತಿ ಖಲು = ಧರಿಸುತ್ತಾರೆ ಎಂಬುದು ನಿಜ.

**ಯಸ್ತು ಮಹಾಕದಂಬಃ ಸುಪಾರ್ಶ್ವನಿರೂಢೋಯಾಸ್ತಸ್ಯ ಕೋಟರೇಭ್ಯೋ ವಿನಿಃಸೃತಾಃ ಪಂಚಾಯಾಮ ಪರಿಣಾಹಾಃ ಪಂಚಮಧುಧಾರಾಃ ಸುಪಾರ್ಶ್ವ ಶಿಖರಾತ್ಪತಂತ್ಯೋಽ ಪರೇಣಾತ್ಮಾನಮಿಲಾವೃತಮನುಮೋದಯಂತಿ ॥೨೨॥**

ಸುಪಾರ್ಶ್ವ ನಿರೂಢಃ = ಸುಪಾರ್ಶ್ವ ಪರ್ವತದ ಮೇಲೆ ಬೆಳೆದು ನಿಂತಿರುವ; ಯಃ ಮಹಾಕದಂಬಃ = ಯಾವ ಮಹಾ ಕದಂಬ ವೃಕ್ಷವುಂಟೋ; ತಸ್ಯಕೋಟರೇಭ್ಯಃ = ಅದರ ಪೊಟರೆಗಳಿಂದ; ವಿನಿಃಸೃತಾಃ = ಹರಿದು ಬರುವ; ಸುಪಾರ್ಶ್ವ ಶಿಖರಾತ್ = ಸುಪಾರ್ಶ್ವ ಪರ್ವತದ ಮೇಲಿನಿಂದ; ಪತಂತ್ಯಃ = ಧುಮುಕುತ್ತಿರುವ; ಪಂಚ ಆಯಾಮ ಪರಿಣಾಹಾಃ = ಐದೈದು ಮಾರು ಅಗಲವಾದ; ಪಂಚ ಮಧುಧಾರಾಃ = ಐದು ಮಧುರ ಪ್ರವಾಹಗಳು; ಆತ್ಮಾನಂ ಇಲಾವೃತಂ = ಇಳಾವೃತ ವರ್ಷವನ್ನು; ಅನುಮೋದಯಂತಿ = ತಣಿಸುತ್ತವೆ.

ಇಲ್ಲಿ ಹೇಳಿರುವುದು ಜೇನುತುಪ್ಪದಂತೆ ಸುಮಧುರವಾದ ರಸಪ್ರವಾಹಗಳ ವಿಚಾರ.

**ಯಾಹ್ಯುಪಯುಂಜಾನಾನಾಂ ಮುಖನಿರ್ವಾಸಿತೋ ವಾಯುಃ ಸಮಂತಾಚ್ಛತ ಯೋಜನಮನುವಾಸಯತಿ ॥೨೩॥**

ಯಾಃ ಹಿ = ಯಾವ ಆ ಮಧುರರಸ ಪ್ರವಾಹಗಳು; ಉಪಯಂಜಾನಾನಾಂ

= ಬಳಸುವವರ; ಮುಖನಿರ್ವಾಸಿತಃ = ಬಾಯಿಂದ ಹೊರಬರುವ; ವಾಯುಃ = ಗಾಳಿಯು; ಶತಯೋಜನಂ ಸಮಂತಾತ್ = ಸುತ್ತಲೂ ನೂರು ಯೋಜನಗಳವರೆಗೆ; ಅನುವಾಸಯತಿ = ಸುಗಂಧಪೂರ್ಣವಾಗಿ ಮಾಡುತ್ತದೆ.

**ಏವಂ ಕುಮುದನಿರೂಢೋಯಃ ಶತವಲ್ಶೋನಾಮ ವಟಸ್ತಸ್ಯ ಸ್ಕಂಧೇಭ್ಯೋನೀಚೀನಾಃ ಪಯೋದಧಿಮಧುಘೃತ ಗುಡಾನ್ನಾದ್ಯಂಬರ ಶಯ್ಯಾಸನಾಭರಣಾದ್ಯಃ ಸರ್ವಏವ ಕಾಮದುಘಾ ನದಾಃ ಕುಮುದಾಗ್ರಾತ್ಪತಂತಸ್ತ ಮುತ್ತರೇಣೇಲಾವೃತಮುಪಯೋಜಯಂತಿ ॥೨೪॥**

ಏವಂ = ಇದೇ ರೀತಿಯಾಗಿ; ಕುಮುದ ನಿರೂಢಃ = ಕುಮುದ ಪರ್ವತದ ಮೇಲೆ ನಿಂತಿರುವ; ಶತವಲ್ಶಃ ನಾಮ = ಶತವಲ್ಶ ಎಂಬ ಹೆಸರುಳ್ಳ; ಯಃವಟಃ = ಯಾವ ಆಲದ ಮರವುಂಟೋ; ತಸ್ಯಸ್ಕಂಧೇಭ್ಯಃ = ಅದರ ಕೊಂಬೆಗಳಿಂದ; ನೀಚೀನಾಃ = ಬಿಳಿಲುಗಳಂತೆ ಕೆಳಗಿಳಿದು ಬರುವ; ಪಯಃ ದಧಿಮಧುಘೃತ ಗುಡಾನ್ನ ಅಂಬರ ಶಯ್ಯಾ ಆಸನ ಆಭರಣ ಆದ್ಯಃ = ಹಾಲು, ಮೊಸರು, ಜೇನು, ತುಪ್ಪ, ಸಿಹಿಯನ್ನ, ದಿವ್ಯವಸ್ತ್ರ, ಹಾಸುಗೆ, ಆಸನ, ಆಭರಣ ಮೊದಲಾದ; ಸರ್ವಕಾಮದುಘಾಏವ ನದಾಃ = ಸಕಲ ಇಷ್ಟಾರ್ಥಗಳನ್ನೂ ಪೂರಯಿಸುವ ಪ್ರವಾಹಗಳು; ಕುಮುದಾಗ್ರಾತ್ ಪತಂತ್ಯಃ = ಕುಮುದ ಪರ್ವತದ ಮೇಲಿನಿಂದ ಇಳಿದು ಬರುತ್ತಾ; ಇಲಾವೃತಂ ಉತ್ತರೇಣ = ಇಳಾವೃತ ವರ್ಷದ ಉತ್ತರ ದಿಗ್ಭಾಗವನ್ನು; ಉಪಯೋಜಯಂತಿ = ಸುಖಕರವನ್ನಾಗಿ ಮಾಡುತ್ತಿವೆ.

ಮೇಲೆ ಹೇಳಿದ ನಾಲ್ಕೂ ಪರ್ವತ.ಪ್ರದೇಶಗಳಲ್ಲಿ ಸಂಚಾರ ಮಾಡಿ ದೇವತೆಗಳು ವಿಹರಿಸುತ್ತಾರೆ.

**ಯಾನುಪಜುಷಾಣಾನಾಂ ನಕದಾಚಿದಪಿ ಪ್ರಜಾನಾಂ ವಲೀಪಲಿತಕ್ಲಮ ಸ್ವೇದದೌರ್ಗಂಧ್ಯ ಜರಾಮಯಮೃತ್ಯು ಶೀತೋಷ್ಣ ವೈವರ್ಣೋಪವಿಶೇಷಾ ಭವಂತಿ ಸುಖಂ ನಿರತಿಶಯಮೇವ ॥೨೫॥**

ಯಾನ್ ಉಪಜುಷಾಣಾನಾಂ = ಶತವಲ್ಶದಿಂದ ಪ್ರಾಪ್ತವಾದ ರಸವಿಶೇಷಗಳನ್ನೂ ವಸ್ತ್ರಾಭರಣಾದಿಗಳನ್ನೂ ಉಪಯೋಗಿಸುವ; ಪ್ರಜಾನಾಂ = ಉತ್ತರ ದಿಗ್ಭಾದ ಪ್ರಜೇಗಳಿಗೆ; ವಲೀಪಲಿತಕ್ಲಮ ಸ್ವೇದ ದೌರ್ಗಂಧ್ಯ ಜರಾಆಮಯ ಮೃತ್ಯುಶೀತ ಉಷ್ಣವೈವರ್ಣ್ಯ ಉಪವಿಶೇಷಾಃ = ಚರ್ಮ ಮುದುಡುವುದು, ನರೆಗೂದಲು, ಆಯಾಸ,

ಬೆವರು, ದುರ್ಗಂಧ, ಮುಪ್ಪು, ಅನಾರೋಗ್ಯ, ಅಕಾಲಮರಣ, ಶೀತರೋಗ, ಉಷ್ಣರೋಗ, ಮುಖಕಪ್ಪಿಡುವುದು ಮುಂತಾದ ಆಧಿವ್ಯಾಧಿಗಳು; ಕದಾಚಿತ್ ಅಪಿ = ಯಾವಾಗಲೂ ಕೂಡ; ನಭವಂತಿ = ಉಂಟಾಗುವುದಿಲ್ಲ; ನಿರತಿಶಯಂ ಸುಖಂ ಏವ = ಅತಿಶಯ ಸುಖವೇ ಪ್ರಾಪ್ತವಾಗುತ್ತದೆ.

**ಕುರಂಗಕುರರ ಕುಸುಂಭವೈಕಂಕ ತ್ರಿಕೂಟ ಶಿಶಿರ ಪತಂಗರುಚಕ**
**ನಿಷಧಶಿನೀವಾಸ ಕಪಿಲಶಂಖ ವೈದೂರ್ಯಜಾರುಧಿ ಹಂಸರ್ಷಭನಾಗ**
**ಕಾಲಂಜರ ನಾರದಾದಯೋ ವಿಂಶತಿ ಗಿರಯೋ ಮೇರೋಃ**
**ಕರ್ಣಿಕಾಯಾ ಇವ ಕೇಸರಭೂತಾ ಮೂಲದೇಶೇ ಪರಿತ**
**ಉಪಕ್ಲೃಪ್ತಾಃ ॥೨೬॥**

ಕುರಂಗ, ಕುರರ, ಕುಸುಂಭ, ವೈಕಂಕ, ತ್ರಿಕೂಟ (ಪೂರ್ವದಿಕ್ಕಿನಲ್ಲಿ), ಶಿಶಿರ, ಪತಂಗ, ರುಚಕ, ನಿಷಧ, ಶಿನೀವಾಸ (ದಕ್ಷಿಣ ದಿಕ್ಕಿನಲ್ಲಿ), ಕಪಿಲ, ಶಂಖ, ವೈದೂರ್ಯ, ಜಾರುಧಿ, ಹಂಸ (ಪಶ್ಚಿಮದಿಕ್ಕಿನಲ್ಲಿ), ಋಷಭ, ನಾಗ, ಕಾಲಂಜರ, ನಾರದ ಆದಯಃ (ಉತ್ತರದಿಕ್ಕಿನಲ್ಲಿ), ಹೀಗೆ, ವಿಂಶತಿಗಿರಯಃ ಇಪ್ಪತ್ತು ಸುಮಾರು ಎತ್ತರದ ಪರ್ವತಗಳು; ಮೇರೋಃಕರ್ಣಿಕಾಯಾಃ = ಮೇರುವೆಂಬ ಪೃಥ್ವೀಪದ್ಮ ಕರ್ಣಿಕೆಯ; ಕೇಸರಭೂತಾಃ ಇವ = ಕೇಸರಗಳಂತೆ; ಮೂಲದೇಶೇ ಪರಿತಃ = ಮೇರು ಪರ್ವತದ ತಳಭಾಗದ ಸುತ್ತಲೂ; ಉಪಕ್ಲೃಪ್ತಾಃ = ಸೃಷ್ಟಿಸಲ್ಪಟ್ಟಿವೆ.

ಈ ವರ್ಣನೆಗಳಲ್ಲೆಲ್ಲಾ ಪರಮಾತ್ಮನ ಅದ್ಭುತ ಸೃಷ್ಟಿವ್ಯಾಪಾರವನ್ನೂ, ಕಾರುಣ್ಯವನ್ನೂ ಕಾಣಬಹುದು.

**ಜಠರ ದೇವಕೂಟಾಃ ಮೇರುಂ ಪೂರ್ವೇಣಾಷ್ಟಾದಶಯೋಜನ**
**ಸಹಸ್ರಮುದಗಾಯತೌ ದ್ವಿಸಹಸ್ರಂ ಪೃಥುತುಂಗೌ ಭವತಃ।**
**ಏವಮಪರೇಣ ಪವನಪಾರಿಯಾತ್ರೌ ದಕ್ಷಿಣೇನ ಕೈಲಾಸ ಕರವೀರೌ**
**ಪ್ರಾಗಾಯತಾವೇವಮುತ್ತರತ ಸ್ತ್ರಿಶೃಂಗ ಮಕರಾವಷ್ಟಭಿರೇತೈಃ**
**ಪರಿಸ್ಸೃತೋಗ್ನಿರಿವ ಪರಿತಶ್ಚಕಾಸ್ತಿ ಕಾಂಚನಗಿರಿಃ ॥೨೭॥**

ಜಠರ ದೇವಕೂಟೌ = ಜಠರ ಮತ್ತು ದೇವಕೂಟ ಎಂಬ ಪರ್ವತಗಳು ಮೇರುಂ ಪೂರ್ವೇಣ = ಮೇರುಪರ್ವತದ ಪೂರ್ವ ದಿಕ್ಕಿನಲ್ಲಿ; ಅಷ್ಟಾದಶಯೋಜನ ಸಹಸ್ರಂ = ಹದಿನೆಂಟು ಸಾವಿರ ಯೋಜನ ಪರ್ಯಂತ; ಉದಗಾಯತೌ = ಉತ್ತರ ದಕ್ಷಿಣವಾಗಿವೆ; ದ್ವಿಸಹಸ್ರಂ ಪೃಥುತುಂಗೌ = ಅವು ಎರಡೆರಡು ಸಾವಿರ ಯೋಜನ

ಎತ್ತರವಾಗಿಯೂ; ಭವತಃ = ಆಗಿವೆ; ಏವಂ = ಇದರಂತೆ; ಅಪರೇಣ = ಪಶ್ಚಿಮದ ಕಡೆಗೆ; ಪವನ ಪಾರಿಯಾತ್ರೌ = ಪವನ ಮತ್ತು ಪಾರಿಯಾತ್ರ ಪರ್ವತಗಳು; ದಕ್ಷಿಣೇನ = ದಕ್ಷಿಣದ ಕಡೆಗೆ; ಕೈಲಾಸಕರವೀರೌ = ಕೈಲಾಸ ಮತ್ತು ಕರವೀರ ಪರ್ವತಗಳು; ಏವಂ = ಇದರಂತೆ; ಉತ್ತರತಃ = ಉತ್ತರದ ಕಡೆಗೆ; ತ್ರಿಶೃಂಗ ಮಕರೌ = ತ್ರಿಶೃಂಗ ಮತ್ತು ಮಕರ ಪರ್ವತಗಳು; ಪ್ರಾಗಾಯತೌ = ಪೂರ್ವ ಪಶ್ಚಿಮವಾಗಿ ಹಬ್ಬಿವೆ; ಅಷ್ಟಭಿಃಏತೈಃ = ಈ ಎಂಟು ಪರ್ವತಗಳಿಂದ; ಕಾಂಚನಗಿರಿಃ = ಸುವರ್ಣಮಯವಾದ ಮೇರುಪರ್ವತವು; ಪರಿತಃ ಪರಿಸ್ತೃತಃ ಅಗ್ನಿಃ ಇವ = ಸುತ್ತಲೂ ದರ್ಭೆಯ ಪರಿಸ್ತರಣಗಳಿಂದ ಆವೃತವಾದ ಹೋಮಾಗ್ನಿ ಜ್ವಾಲೆಯಂತೆ; ಚಕಾಸ್ತಿ = ಪ್ರಕಾಶಮಾನವಾಗಿದೆ.

ನಾಲ್ಕು ದಿಕ್ಕುಗಳಲ್ಲಿರುವ ಅವಷ್ಟಂಭ ಪರ್ವತಗಳಿಂದ ಹೊರಗೆ ಹಬ್ಬಿರುವುವು, ಈಗ ಹೇಳಿದ ಪರ್ವತಗಳು, ಇವುಗಳ ಅಗಲ ಎರಡು ಸಾವಿರ ಯೋಜನ; ಎತ್ತರವೂ ಎರಡು ಸಾವಿರ ಯೋಜನ ಮಾತ್ರ.

**ಮೇರೋರ್ಮೂರ್ಧನಿ ಭಗವತ ಆತ್ಮಯೋನೇರ್ಮಧ್ಯತ ಉಪಕ್ಲೃಪ್ತಾಂ ಪುರೀಮಯುತಯೋಜನಸಾಹಸ್ರೀಂ ಸಮಚತುರಸ್ರಾಂ ಶಾತಕೌಂಭೀಂ ವದಂತಿ ॥೨೮॥**

ಮೇರೋಃ ಮೂರ್ಧನಿ = ಮೇರುಪರ್ವತದ ನೆತ್ತಿಯ ಮೇಲೆ; ಮಧ್ಯತಃ ಉಪಕ್ಲೃಪ್ತಾಂ = ಪರ್ವತಾಗ್ರದ ಮಧ್ಯಭಾಗದಲ್ಲಿ ನಿರ್ಮಿತವಾದ; ಅಯುತಯೋಜನಸಾಹಸ್ರೀಂ = ಹತ್ತು ಸಾವಿರ ಯೋಜನ ಉದ್ದಗಲಗಳುಳ್ಳ; ಸಮಚತುಸ್ರಾಂ = ಚಚ್ಚೌಕವಾದ; ಆತ್ಮಯೋನೇಃ ಭಗವತಃ = ಪರಮಾತ್ಮನ ಪುತ್ರರಾದ ಭಗವಾನ್ ಬ್ರಹ್ಮದೇವರ; ಪುರೀಂ = ಪಟ್ಟಣವನ್ನು; ಶಾತಕೌಂಭೀಂ ವದಂತಿ = ಶಾತಕೌಂಭೀ ಎಂದು ಕರೆಯುತ್ತಾರೆ.

**ತಾಮನುಪರಿತೋಲೋಕಪಾಲಾನಾಮಷ್ಟಾನಾಂ ಯಥಾದಿಶಂ ಯಥಾರೂಪಂ ತುರ್ಯ ಮಾನೇನ ಪುರಾಷ್ಟಾವುಪಕ್ಲೃಪ್ತಾಃ ॥೨೯॥**

ತಾಂ ಅನುಪರಿತಃ = ಆ ಬ್ರಹ್ಮನಗರಿಯ ಸುತ್ತಲೂ; ಯಥಾದಿಶಂ = ಅವರವರ ದಿಕ್ಕುಗಳಲ್ಲಿ; ಯಥಾರೂಪಂ = ಬ್ರಹ್ಮಪುರಿಯಂತೆ ಆಕಾರಗಳುಳ್ಳವುಗಳಾಗಿ; ತುರೀಯಮಾನೇನ = ಆ ಪಟ್ಟಣದ ಕಾಲುಭಾಗದಷ್ಟು ಅಳತೆಗಳುಳ್ಳವುಗಳಾಗಿ; ಅಷ್ಟಾನಾಂ ಲೋಕಪಾಲಾನಾಂ = ಎಂಟುಮಂದಿ ದಿಕ್ಪಾಲಕರ; ಅಷ್ಟಾಃ = ಎಂಟು; ಪುರಾಃ = ಪಟ್ಟಣಗಳು; ಉಪಕ್ಲೃಪ್ತಾಃ = ನಿರ್ಮಿತವಾಗಿವೆ.

ದಿಕ್ಪಾಲಕರನ್ನು 'ಲೋಕಪಾಲಾಃ' ಎಂದಿರುವುದು ಅರ್ಥವತ್ತಾಗಿದೆ. ಅವರವರ ದಿಕ್ಕುಗಳ ವ್ಯಾಪ್ತಿಗೆ ಒಳಪಟ್ಟ ಲೋಕಗಳ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಆ ದಿಕ್ಪಾಲಕರ ಭಗವತ್ಸೇವಾರೂಪವಾದ ಕರ್ತವ್ಯ. ಅವರ ಪಟ್ಟಣಗಳ ಒಂದೊಂದರ ಉದ್ದಗಲಗಳು ಎರಡೂವರೆಸಾವಿರ ಯೋಜನ.

---

# ಶ್ರೀಮದ್ಭಾಗವತ
# ಅಧ್ಯಾಯ ಹದಿನೇಳು
# ಗಂಗಾವತರಣ

ತತ್ರಭಗವತಃ ಸಾಕ್ಷಾದ್ಯಜ್ಞಲಿಂಗಸ್ಯ ವಿಷ್ಣೋರ್ವಿಕ್ರಮತೋ
ವಾಮಪಾದಾಂಗುಷ್ಠನಖನಿರ್ಭಿನ್ನೋರ್ಧ್ವಾಂಡಕಟಾಹ ವಿವರೇಣಾಂತಃ
ಪ್ರವಿಷ್ಟಾಯಾ ಬಾಹ್ಯಜಲಧಾರಾ ತಚ್ಚರಣಪಂಕಜಾವನೇಜನಾರುಣ
ಕಿಂಜಲ್ಕೋಪರಂಜಿತಾಖಿಲ ಜಗದಘಮಲಾಪಹೋಪಸ್ಪರ್ಶನಾಮಲಾ
ಸಾಕ್ಷಾದ್ಭಗವತ್ಪದೀತ್ಯನುಪಲಕ್ಷಿತ ವಚೋಭಿಧೀಯಮಾನಾತಿ
ಮಹತಾಕಾಲೇನ ಯುಗಸಹಸ್ರೋಪಲಕ್ಷಣೇನ
ದಿವೋಮೂರ್ಧನ್ಯವತತಾರ ಯತ್ತದ್ವಿಷ್ಣುಪದಮಾಹುಃ ||೧||

ತತ್ರಭಗವತಃ = ಮಹಾಮಹಿಮೋಪೇತನಾದ ಭಗವಂತನ; ಸಾಕ್ಷಾತ್ ಯಜ್ಞಲಿಂಗಸ್ಯ = ಯಜ್ಞಸ್ವರೂಪೇನೇ ಆದ; ವಿಷ್ಣೋಃ = ಶ್ರೀಹರಿಯ; ವಿಕ್ರಮತಃ = ವಾಮನ ರೂಪದಿಂದ ಬಂದು ತ್ರಿವಿಕ್ರಮ ರೂಪಿಯಾದ ಕಾರಣದಿಂದ; ವಾಮಪಾದಾಂಗುಷ್ಠ ನಖನಿರ್ಭಿನ್ನ = ಎಡಪಾದದಂಗುಷ್ಠದ ಉಗುರು ಸೋಕಿದ ಮಾತ್ರದಿಂದ ಸೀಳಿದ; ಊರ್ಧ್ವಾಂಡಕಟಾಹ ವಿವರೇಣ = ಬ್ರಹ್ಮಾಂಡ ಖರ್ಪರದ ಮೇಲ್ಭಾಗದ ಬಿರುಕಿನಿಂದ; ಪ್ರವಿಷ್ಟಾ ಯಾ ಬಾಹ್ಯಜಲ ಧಾರಾ = ಕೆಳಗಿಳಿದು ಬಂದ ಯಾವ ಬಾಹ್ಯೋದಕದ ಧಾರೆಯುಂಟೋ ಅದು; ತಚ್ಚರಣ ಪಂಕಜಾವನೇಜನ = ಆ ವಿಭುವಿನ ಪಾದಕಮಲವನ್ನು ತೊಳೆದಿಳಿದುದರಿಂದ; ಅರುಣಕಿಂಜಲ್ಕ ಉಪರಂಜಿತಾ = ಅಪಾದಕಮಲದ ಅರುಣ ವರ್ಣದ ಛಾಯೆಯಿಂದ ಕಂಗೊಳಿಸಿದ; ಅಖಿಲ ಜಗದಘಮಲಾಪಹ = ಜಗತ್ತಿನ ಎಲ್ಲಾ ಜೀವಿಗಳ ಪಾಪದ ಕೊಳೆಯನ್ನು ಕಳೆದುಬಿಡವ; ಉಪಸ್ಪರ್ಶನ ಅಮಲಾ = ಸ್ನಾನಪಾನಾದಿಗಳನ್ನು ಮಾಡುವವರನ್ನು ಪವಿತ್ರಗೊಳಿಸುವ; ಸಾಕ್ಷಾತ್ ಭಗವತ್ ಪದೀತಿ ಅನುಪಲಕ್ಷಿತ ವಚೋಭಿಧೀಯಮಾನಾ = ಸಾಕ್ಷಾತ್ ಭಗವತ್ಪಾದೋದ್ಭವೆಯೆಂದು ಕರೆಸಿಕೊಳ್ಳುವ ಜಲಧಾರೆಯು; ಯುಗಸಹಸ್ರ ಉಪಲಕ್ಷಣೇನ ಮಹತಾ ಕಾಲೇನ = ಅನೇಕ ಯುಗಗಳಷ್ಟು ದೀರ್ಘಕಾಲದ ಅವಧಿಯಲ್ಲಿ; ಯತ್‌ತತ್ ವಿಷ್ಣುಪದಂ ಆಹುಃ = ಯಾವುದನ್ನು ವಿಷ್ಣುಮಂದಿರವೆಂದು ಹೇಳುವರೋ, ಅಂತಹ; ದಿವಃ ಮೂರ್ಧನಿ = ಸ್ವರ್ಗಸದೃಶವಾದ ಧ್ರುವಲೋಕದ ಮೇಲೆ; ಅವತತಾರ = ಇಳಿಯಿತು.

ಸ್ಫಟಿಕ ಮಣಿಯ ಮುಂದೆ ಜಪಾಕುಸುಮವನ್ನಿಟ್ಟಾಗ ಆ ಸ್ಫಟಿಕಮಣಿಯಲ್ಲಿ ಕೆಂಪು ಛಾಯೆ ಹೇಗೆ ಮೂಡುವುದೋ ಹಾಗೆ, ಶ್ರೀಹರಿಯ ಪಾದ ಕಮಲದ ಛಾಯೆಯಿಂದ ಮೇಲಿಂದ ಇಳಿದುಬಂದ ಜಲಧಾರೆಯು ಅರುಣವರ್ಣದಿಂದ ರಂಜಿಸಿತು. ತ್ರಿವಿಕ್ರಮ ಮೂರ್ತಿಯ ಒಂದು ಪಾದವು ಇಡೀ ಭೂಮಂಡಲವನ್ನು ಆಕ್ರಮಿಸಿತು; (೭ ಕೋಟಿಯೋಜನ) ಮೇಲ್ಮುಖವಾಗಿ ಎತ್ತಿ ನಿಲ್ಲಿಸಿದ ಎಡಪಾದವು ೨೫ ಕೋಟಿ ಯೋಜನದೆತ್ತರ ಬೆಳೆದು ನಿಂತಿತು. ಆಗ ಆ ಎಡದೆಂಗುಷ್ಠದ ಉಗುರು ಸೋಕಿದ ಮಾತ್ರದಿಂದ, ನೂರುಕೋಟಿ ಯೋಜನ ಮಂದವಾದ ಬ್ರಹ್ಮಾಂಡ ಖರ್ಪರವು ಬಿರಿಯಿತು.

ಶ್ರೀಮದ್ಭಾಗವತ ಪಂಚಮಸ್ಕಂಧದಲ್ಲಿ ಭೂಮಂಡಲ ಮತ್ತು ಅಧೋಲೋಕಗಳ ವಿವರಣೆ ಇದೆಯೇ ಹೊರತು, ಊರ್ಧ್ವಲೋಕಗಳ ವಿವರಣೆ ಇಲ್ಲ. ಆದರೆ, ಬ್ರಹ್ಮಾಂಡ ಖರ್ಪರದಿಂದ ಇಳಿದ ಜಲಧಾರೆಯು ಅನೇಕಾನೇಕ ಯುಗಗಳ ನಂತರ ಧ್ರುವಲೋಕವನ್ನು ಮುಟ್ಟಿತು ಎಂದಾಗ, ಈಚಿನ ವೃತ್ತಪತ್ರಿಕೆಗಳಲ್ಲಿನ ಜಾಹಿರಾತಿನಂತೆ ಗುರುಗ್ರಹಕ್ಕೆ–ಧೂಮಕೇತು ಚೂರು ಚೂರಾಗಿ ಅಪ್ಪಳಿಸಲು – ೨ವರ್ಷಗಳು ಬೇಕೆಂದು ವಿಜ್ಞಾನಿಗಳ ಊಹೆ. ಈ ಧೂಮಕೇತುವಾದರೋ ೧ ಘಂಟೆಗೆ ೧,೭೯,೦೦೦ ಕಿಲೋಮೀಟರ್ ವೇಗದಲ್ಲಿ ಸಂಚರಿಸುತ್ತೆ ಎಂದು ತಿಳಿಸಿರುತ್ತಾರೆ. ಅಂದ ಮೇಲೆ ಬ್ರಹ್ಮಾಂಡ ಖರ್ಪರಿಂದ ಅನೇಕ ಲೋಕ ಕೆಳಗಿನ ಮುಟ್ಟಲು ಯುಗಗಳು ಬೇಕೆಂದು ಬರೆದಿರುವುದು ಸಹಜವೇ ಆಗಿದೆ. ಅದು ಸತ್ಯ ಲೋಕ, ತಪೋಲೋಕ, ಜನಲೋಕ, ಮಹರ್ಲೋಕ, ಸ್ವರ್ಲೋಕಗಳನ್ನು ಪವಿತ್ರಗೊಳಿಸಿ ಅಂತರಿಕ್ಷ ಲೋಕಕ್ಕೆ ಬರಲು ಅಷ್ಟು ಕಾಲ ಹಿಡಿಯಿತು ಎಂದು ಹೇಳಿ, ಊರ್ಧ್ವ ಲೋಕಗಳ ವಿಚಾರವನ್ನು ಸೂಚಿಸಿ ಕೈಬಿಟ್ಟಿದ್ದಾರೆ. ಪುರಾಣಾಂತರಗಳಲ್ಲಿ ವಿವರಗಳು ಇರುತ್ತವೆ.

ಯತ್ರಹ ವಾವ ವೀರವ್ರತ ಔತ್ತಾನಪಾದಿಃ ಪರಮಭಾಗವತೋ
ಸ್ಮತ್ಕುಲದೇವತಾ ಚರಣಾರವಿಂದೋದಕಮಿತಿ
ಯಾಮನುಸವನಮುತ್ಕೃಷ್ಯಮಾಣ ಭಗವದ್ಭಕ್ತಿ ಯೋಗೇನ
ದೃಢಂಕ್ಲಿದ್ಯಮಾನಾಂತರ್ಹೃದಯ ಔತ್ಕಂಠ್ಯ ವಿವಶಾಮೀಲಿತ
ಲೋಚನಯುಗಲ ಕುಡ್ಮಲ ವಿಗಲಿತಾಮಲ
ಬಾಷ್ಪಕಲಾಯಾಭಿವ್ಯಜ್ಯಮಾನ ರೋಮ ಪುಲಕಕುಲಕೋಽಧುನಾಪಿ
ಪರಮಾದರೇಣ ಶಿರಸಾಬಿಭರ್ತಿ ॥೨॥

ಯತ್ರಹ ವಾವ = ವಾಸ್ತವವಾಗಿಯೂ ಯಾವ ಧ್ರುವಲೋಕದಲ್ಲಿ; ವೀರವ್ರತಃ

= ದೃಢಮನಸ್ಕರಾದ; ಪರಮಭಾಗವತಃ = ಶ್ರೇಷ್ಠ ಭಗವದ್ಭಕ್ತರಾದ; ಔತ್ತಾನಪಾದಿಃ = ಉತ್ತಾನಪಾದರಾಯರ ಮಕ್ಕಳಾದ ಧ್ರುವರಾಯರು; ಅಸ್ಮತ್ ಕುಲದೇವತಾ ಚರಣಾರವಿಂದೋದಕಂ ಇತಿ = ಇದು ನಮ್ಮ ಕುಲದೈವನ ಪಾದತೊಳೆದ ಉದಕ ಎಂದು; ಯಾಂ = ಯಾವ ಗಂಗೋದಕವನ್ನು; ಅನುಸವನಂ = ಪ್ರತಿನಿತ್ಯವೂ; ಉತ್ಕೃಷ್ಯಮಾಣ ಭಗವದ್ಭಕ್ತಿಯೋಗೇನ = ಉಕ್ಕಿಬರುತ್ತಿರುವ ಭಗವದ್ಭಕ್ತಿ ಬಲದಿಂದ; ದೃಢಂ = ಪ್ರಬಲವಾಗಿ; ಕ್ಲಿದ್ಯಮಾನ ಅಂತರ್ಹೃದಯಃ = ದ್ರವಿಸುವ ಹೃದಯಾಂತರಾಳವುಳ್ಳವರಾಗಿ; ಔತ್ಕಂಠ್ಯವಿವಶ ಆಮೀಲಿತ ಲೋಚನ ಯುಗಲಕುಡ್ಮಲ = ಆನಂದ ಪರವಶತೆಯಿಂದ ತಾನೇತಾನಾಗಿ ಅರೆತೆರೆದ ಕಣ್ಣುಗಳೆಂಬ ಎರಡು ಅರಳುತ್ತಿರುವ ಪುಷ್ಪಗಳಿಂದ; ವಿಗಲಿತ = ಜಾರಿದ; ಅಮಲಬಾಷ್ಪಕಲಯಾ = ಆನಂದ ಬಾಷ್ಪದ ಅಂಶಗಳಿಂದ; ವ್ಯಜ್ಯಮಾನ = ಅಭಿವ್ಯಕ್ತವಾದ; ರೋಮಪುಲಕಕುಲಕಃ = ರೋಮಾಂಚನವುಳ್ಳವರಾಗಿ; ಅಧುನಾ ಅಪಿ = ಈಗಲೂ ಕೂಡ; ಪರಮಾದರೇಣ = ಅತ್ಯಂತ ಪ್ರೀತಿಯಿಂದ; ಶಿರಸಾಬಿಭರ್ತಿ = ತಲೆಯಲ್ಲಿ ಧಾರಣಮಾಡಿಕೊಳ್ಳುತ್ತಾರೆ.

ಧ್ರುವಲೋಕದಲ್ಲಿ ಆವಿರ್ಭವಿಸಿದ ಗಂಗೋದಕವು ಈಗಲೂ ಅಲ್ಲಿ ಇರುತ್ತದೆ. ಪರಮ ಭಗವದ್ಭಕ್ತರಾದ ಧ್ರುವರಾಯರು ಅತ್ಯಂತ ಭಕ್ತಿಪುರಸ್ಸರವಾಗಿ ಆ ಹರಿಪಾದೋಕವನ್ನು ಪ್ರೋಕ್ಷಣಾದಿಗಳಿಂದ ಸೇವಿಸಿ ಪರಮಾನಂದ ಭರಿತರಾಗುತ್ತಾರೆ.

**ತತಃ ಸಪ್ತಋಷಯಸ್ತತ್ಪ್ರಭಾವಜ್ಞಾ ಯಂ ನನು ತಪಸ ಅತ್ಯಂತಿಕೀ**
**ಸಿದ್ಧಿರೇತಾವತೀ ಭಗವತಿ ಸರ್ವಾತ್ಮನಿವಾಸುದೇವೇಽನುಪರತ**
**ಭಕ್ತಿಯೋಗಲಾಭೇನ್ಯೆವೋಪೇಕ್ಷಿತಾನ್ಯಾರ್ಥಾತ್ಮಗತಯೋ**
**ಮುಕ್ತಿಮಿವಾಗತಾಂ ಮುಮುಕ್ಷವ ಇವ ಸಬಹುಮಾನಮದ್ಯಾಪಿ**
**ಜಟಾಜೂಟೈರುದ್ವಹಂತಿ ॥೩॥**

ತತಃ = ಧ್ರುವಲೋಕದಿಂದ ೧೧ ಲಕ್ಷಯೋಜನ ಕೆಳಗಿರುವ; ಸಪ್ತಋಷಯಃ = ಸಪ್ತಋಷಿ ಮಂಡಲವೆಂಬ ನಕ್ಷತ್ರ ಸಮುದಾಯದಲ್ಲಿರುವ ಕಶ್ಯಪ, ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಶಿಷ್ಟ ಎಂಬ ಋಷಿಗಳು; ತತ್ಪ್ರಭಾವಜ್ಞಾಃ = ವಿಷ್ಣುಪಾದೋದ್ಭವೆಯೆಂದು ಗಂಗಾದೇವಿಯ ಮಹಿಮೆಯನ್ನು ಬಲ್ಲವರಾಗಿ; ನನು = ನಿಜವಾಗಿ; ತಪಸಃ ಅತ್ಯಂತಿಕೀ ಸಿದ್ಧಿಃ = ತಪಶ್ಚರ್ಯೆಯಿಂದ ಲಭಿಸಬಹುದಾದ ಅತ್ಯುತ್ತಮ ಸಿದ್ಧಿಯು; ಏತಾವತೀ = ಇಂತಹ ಪವಿತ್ರೋದಕ ಪ್ರಾಪ್ತಿಯೇ ಆಗಿದೆ ಎಂದು; ಭಗವತಿ ಸರ್ವಾತ್ಮನಿ ವಾಸುದೇವೇ = ಸರ್ವಾಂತರಾತ್ಮಕ ನಾದ ಭಗವಾನ್ ವಾಸುದೇವನಲ್ಲಿ; ಅನುಪರತ = ಸತತವಾದ; ಭಕ್ತಿಯೋಗ ಲಾಭೇನ

ಏವ = ಭಕ್ತಿರೂಪಭಗವತ್ಸಂಬಂಧ ಲಾಭದಿಂದಲೇ; ಉಪೇಕ್ಷಿತ ಅನ್ಯಾರ್ಥ ಗತಯಃ = ಇತರ ಪುರುಷಾರ್ಥಗಳನ್ನು ಉಪೇಕ್ಷಿಸಿಸುವವರು; ಆಗತಾಂ ಮುಕ್ತಿಂ ಇವ = ಪ್ರಾಪ್ತವಾದ ಮೋಕ್ಷಪದವಿಯನ್ನು ಸ್ವಾಗತಿಸುವಂತೆ; ಯಾಂ = ಯಾವ ಗಂಗಾಜಲವನ್ನು; ಸಬಹುಮಾನಂ = ಗೌರವಪುರಸ್ಸರವಾಗಿ; ಅದ್ಯಾಪಿ = ಇಂದಿಗೂ ಕೂಡ; ಜಟಾಜೂಟೈಃ = ತಮ್ಮ ಜಡೆಕಟ್ಟಿದ ತಲೆಗೂದಲುಗಳಲ್ಲಿ; ಉದ್ವಹಂತಿ = ಧರಿಸುತ್ತಾರೆ.

ಒಂದು ರೂಪದಿಂದ ಗಂಗಾದೇವಿಯು ಸಪ್ತಋಷಿ ಮಂಡಲ ಪ್ರದೇಶದಲ್ಲಿದ್ದು, ಪ್ರೋಕ್ಷಣೆ, ಆಚಮನ ಇತ್ಯಾದಿಗಳಿಂದ ಸಪ್ತಋಷಿಗಳ ಹೃದಯಗಳನ್ನು ಪವಿತ್ರಗೊಳಿಸುತ್ತಿರುವಳೆಂಬುದು ಇದರ ಅಭಿಪ್ರಾಯ. ಸಾಮಾನ್ಯರ ದೃಷ್ಟಿಯು ಗಂಗಾಜಲ, ಗಂಗಾದೇವಿಯ ವ್ಯಕ್ತಿತ್ವಗಳಿಗೆ ಮಾತ್ರ ಸೀಮಿತಾಗುತ್ತದೆ. ಧ್ರುವರಾಯರು, ಸಪ್ತ ಋಷಿಗಳು ಮೊದಲಾದ ಭಗವದ್ಭಕ್ತರ ದೃಷ್ಟಿಯ ವಿಚಾರವೇ ಬೇರೆ. ಅವರು ಸರ್ವದಾ, ಸರ್ವತ್ರ ಭಗವದ್ಭಾವಪರಗಳನ್ನು ಕಂಡು ನಲಿಯುವವರು. ಗಂಗಾಜಲದಲ್ಲಿ, ಗಂಗಾದೇವಿಯ ವ್ಯಕ್ತಿತ್ವದಲ್ಲಿ ಅವರು ಶ್ರೀ ಲಕ್ಷ್ಮೀನಾರಾಯಣರ ವ್ಯಾಪ್ತಿ ವ್ಯಾಪಾರಗಳನ್ನು ಕಂಡು ಹಿಗ್ಗುವವರು, ಅವರ ಅನುಗ್ರಹದ ರುಚಿಯನ್ನು, ಸವಿದು ಕೃತಾರ್ಥರೆಂದು ಕೊಳ್ಳುವವರು.

**ತತೋನೇಕ ಸಹಸ್ರ ಕೋಟಿ ವಿಮಾನಾನೀಕ ಸಂಕುಲ**
**ದೇವಯಾನೇನಾವತರಂತೀಂದುಮಂಡಲಮಾವಾರ್ಯ ಬ್ರಹ್ಮಸದನೇ**
**ನಿಪತತಿ ॥೪॥**

ತತಃ = ಸಪ್ತ ಋಷಿ ಮಂಡಲವನ್ನು ಪವಿತ್ರಗೊಳಿಸಿದ ನಂತರ; ಅನೇಕ ಸಹಸ್ರ ಕೋಟಿ ವಿಮಾನ ಅನೀಕ ಸಂಕುಲ = ಅನೇಕಾನೇಕ ಸಹಸ್ರಕೋಟಿ ತಾರಾರೂಪಗಳಲ್ಲಿರುವ ದೇವತಾಯಾನಗಳ ಸಮೂಹಗಳಿಂದ ನಿಬಿಡವಾದ; ದೇವಯಾನೇನ = ದೇವತಾ ಸಂಚಾರಯೋಗ್ಯವಾದ ಆಕಾಶಮಾರ್ಗದಿಂದ; ಅವತರಂತೀ = ಇಳಿದು ಬರುತ್ತಾ; ಇಂದು ಮಂಡಲಂ ಆವಾರ್ಯ = ಚಂದ್ರಮಂಡಲದ ಪ್ರದೇಶವನ್ನು ಆವರಿಸಿ; ಬ್ರಹ್ಮಸದನೇ ನಿಪತತಿ = ಮೇರುಪರ್ವತದ ಮೇಲಿರುವ ಬ್ರಹ್ಮದೇವರ ಶಾತಕೌಂಭೀನಗರ ಪ್ರದೇಶದಲ್ಲಿ ನೆಲೆಸುತ್ತದೆ.

ದ್ವಾದಶರಾಶಿಗಳನ್ನು ಒಳಗೊಂಡಿರುವ ೨೭ ನಕ್ಷತ್ರ ಸಮೂಹಗಳು ಬೇರೆ; ನಕ್ಷತ್ರಗಳಂತೆಯೇ ಇರುವ ಸಿದ್ಧ ಸಾಧ್ಯಾದಿಗಳ ವಿಮಾನಗಳೇ ಬೇರೆ. ಆ ದೇವಯಾನಗಳಿಗೆ ತಾರೆಗಳೆಂದು ಹೆಸರು. ಇಂತಹ ಇನ್ನೂ ಹೆಚ್ಚು ಹೆಚ್ಚು

ಅದ್ಭುತಗಳಾದ ದೇವಯಾನಗಳು ಧ್ರುವನಕ್ಷತ್ರಕ್ಕಿಂತಲೂ ಮೇಲಿರುವ ಸ್ವರ್ಗಾದಿ ಊರ್ಧ್ವಲೋಕಗಳ ಸುತ್ತಲೂ ಕೋಟಿಕೋಟಿ ಸಂಖ್ಯೆಯಲ್ಲಿ, ಕೋಟಿ ಕೋಟಿಯೋಜನಗಳಷ್ಟು ಅಂತರಗಳಲ್ಲಿ ಇವೆ. ಅವುಗಳನ್ನು ಕಂಡು ಈಗಿನ ವಿಜ್ಞಾನಿಗಳು ಅವುಗಳನ್ನು ನಕ್ಷತ್ರ ಪುಂಜಗಳು (Galaxies) ಎಂದು ಭ್ರಮಿಸಿದ್ದಾರೆ. ಅವರದು ಕೇವಲ ಲೆಕ್ಕಾಚಾರದ ಊಹೆ. (ಶ್ರೀವಾದಿರಾಜರ ಭೂಗೋಳ ವರ್ಣನೆ ನೋಡಿ.)

'ಇಂದುಮಂಡಲಂ ಆವಾರ್ಯ' ಎಂಬ ಮಾತು ಇಲ್ಲಿ ಗಮನಾರ್ಹವಾದುದು. ಚಂದ್ರಮಂಡಲದ ಸ್ಥಾನಮಾನಗಳನ್ನು ಸರಿಯಾಗಿ ಗ್ರಹಿಸಲಾರದ ಅನೇಕರು, ಸೂರ್ಯಮಂಡಲದ ಮೇಲೆ ಚಂದ್ರಮಂಡಲವಿದೆ ಎಂದು ಭಾವಿಸಿರುವರು. 'ಮಂಡಲ' ಎಂಬ ಶಬ್ದಕ್ಕೆ 'ಸೂರ್ಯಬಿಂಬ' 'ಚಂದ್ರಬಿಂಬ' ಎಂಬ ಅರ್ಥವಿರುವುದಲ್ಲದೆ, ಆ ಬಿಂಬಗಳು ಚಲಿಸುವ ಪಥಗಳಿಗೂ 'ಮಂಡಲ' ಎಂದೇ ಹೆಸರು.

ಶ್ರೀಮದ್ಭಾಗವತದ ಪಂಚಮಸ್ಕಂದ ೨೨ ನೇ ಅಧ್ಯಾಯದಲ್ಲಿ "ಅರ್ಕಗಭಸ್ತಿಭ್ಯಃ ಉಪರಿಷ್ಟಾತ್ ಲಕ್ಷಯೋಜನತಃ ಉಪಲಭ್ಯಮಾನಃ ಚಂದ್ರಮಾ" (ಸೂರ್ಯಕಿರಣಗಳ ಮೇಲೆ, ಒಂದು ಲಕ್ಷಯೋಜನದೆತ್ತರದಲ್ಲಿ) ಎಂದು ಹೇಳಿರುವುದರಿಂದ, ಚಂದ್ರಬಿಂಬವಿರುವುದು ಸೂರ್ಯನ ನೆತ್ತಿಯ ಮೇಲಲ್ಲ, ಕಿರಣಗಳ ಮೇಲೆ ಎಂದಾಗುವುದು. ಗಂಗಾಜಲವು ಚಂದ್ರಮಂಡಲವನ್ನಾವರಿಸಿ ಮೇರುವಿನ ಮೇಲೆ ಇಳಿಯಿತು ಎಂದು ಹೇಳಿರುವುದರಿಂದ, ಈಗಿನವರು ಕಂಡಿರುವಂತೆ, ಚಂದ್ರಬಿಂಬವು ನಮ್ಮ ಭೂಗೋಳಕ್ಕೆ ಸುಮಾರು ೨ ಲಕ್ಷ ಮೈಲಿ ದೂರದಲ್ಲಿಯೇ ಇರುವುದು ಎಂದ ಹಾಗಾಯಿತು. ಇದನ್ನು ಪುಷ್ಟೀಕರಿಸುವಂತೆ, ಜಂಬೂದ್ವೀಪಕ್ಕೆ ನಾಲ್ಕು ಸಾವಿರ ಯೋಜನ ದೂರದಲ್ಲಿ, ಒಂದು ಸಾವಿರ ಯೋಜನ ವಿಸ್ತಾರವಾಗಿ, "ಚಂದ್ರ ದ್ವೀಪ ಇತಿ ಖ್ಯಾತಂ ಚಂದ್ರಮಂಡಲ ಸಂಸ್ಥಿತಂ" ಎಂಬ ಪುರಾಣವಚನವಿದೆ. ಆದುದರಿಂದ, ಚಂದ್ರಬಿಂಬವು ನಮ್ಮ ಭೂಮಿಗೆ ಸಮೀಪದಲ್ಲಿರವುದೆಂಬುದು ಸಿದ್ಧವಾಯಿತು.

**ತತಃ ಚತುರ್ಧಾಭಿದ್ಯಮಾನಾ ಚತುರ್ಭಿರ್ನಾಮಭಿಶ್ಚತುರ್ದಿಶಮಭಿ ಸ್ಪಂದಯಂತೀ ನದನದೀಪತಿಮೇವಾಭಿನಿವಿಶತಿ ಸೀತಾಲಕನಂದಾ ಚಕ್ಷುರ್ಭದ್ರೇತಿ ॥೫॥**

ತತಃ = ಮೇರುವಿನ ಮೇಲೆ ಇಳಿದನಂತರ; ಚತುರ್ಧಾಭಿದ್ಯಮಾನಾ = ನಾಲ್ಕು ವಿಭಾಗಗಳಾಗಿ; ಸಿತಾ ಅಲಕನಂದಾ ಚಕ್ಷುಃ ಭದ್ರಾ ಇತಿ = ಹೀಗೆಂದು; ಚತುರ್ಭಿಃ ನಾಮಭಿಃ = ನಾಲ್ಕು ಹೆಸರುಗಳಿಂದ; ಚತುರ್ದಿಶಂ = ನಾಲ್ಕು ದಿಕ್ಕುಗಳನ್ನು ಕುರಿತು;

ಅಭಿಸ್ಪಂದಯಂತೀ = ಪ್ರವಹಿಸುತ್ತಾ; ನದ ನದೀ ಪತಿಂ ಏವ ಅಭಿನಿವಿಶತಿ = ನದ ನದಿಗಳಿಗೆ ಪತಿ ಎನಿಸುವ ಸಮುದ್ರ ರಾಜನಲ್ಲಿಯೇ ಸೇರಿಕೊಳ್ಳುತ್ತದೆ.

ಇಲ್ಲಿ ಸಮುದ್ರ ಎನ್ನುವುದು ಜಂಬೂದ್ವೀಪವನ್ನು ಸುತ್ತುವರಿದಿರುವ, ಲಕ್ಷಯೋಜನ ವಿಸ್ತಾರವಾದ ಲವಣಸಮುದ್ರ, ಪಶ್ಚಿಮ ದಿಕ್ಕಿಗೆ ಹರಿಯುವ ನದಿಗಳನ್ನು 'ನದಗಳು' ಎನ್ನುವರು. ಆದುದರಿಂದಲೇ 'ಚಕ್ಷುಃ' ಎಂಬ ಪುಲ್ಲಿಂಗ ಪ್ರಯೋಗ.

**ಸೀತಾತು ಬ್ರಹ್ಮ ಸದನಾತ್ಕೇಸರಾಚಲಾದಿ ಗಿರಿ ಶಿಖರೇಭ್ಯೋಧೋಧಃ ಪ್ರಸ್ರವಂತೀ, ಗಂಧಮಾದನ ಮೂರ್ಧಸು ಪತಿತ್ವಾಂತರೇಣ ಭದ್ರಾಶ್ವವರ್ಷಂ ಪ್ರಾಚ್ಯಾಂದಿಶಿ ಕ್ಷಾರಸಮುದ್ರಮಭಿಪ್ರವಿಶತಿ ॥೬॥**

ಸೀತಾ ತು = ಸೀತಾ ಎಂಬ ಹೆಸರಿನ ಶಾಖೆಯು; ಬ್ರಹ್ಮಸದನಾತ್ = ಬ್ರಹ್ಮದೇವರ ಶಾತಕೌಂಭೀ ನಗರ ಪ್ರದೇಶದಿಂದ ಹೊರಟು; ಕೇಸರಾದಿ ಗಿರಿ ಶಿಖರೇಭ್ಯಃ ಅಧೋಧಃ ಪ್ರಸ್ರವಂತೀ = ಕೇಸರ ಪರ್ವತಗಳು, ಅವಷ್ಟಂಭ ಪರ್ವತವಾದ ಮಂದರ, ಪೂರ್ವ ದಿಕ್ಕಿನ ಪರಿಸ್ತರಣ ಪರ್ವತಗಳು, ಇವುಗಳ ಶಿಖರಗಳ ಮೇಲೆ ಬಿದ್ದು ಕೆಳಕೆಳಗೆ ಹರಿಯುತ್ತಾ; ಗಂಧಮಾದನ ಮೂರ್ಧಸು = ಗಂಧಮಾದನ ಪರ್ವತ ಶಿಖರಗಳ ಮೇಲೆ; ಪತಿತ್ವಾ = ಸುರಿದು ಬಿದ್ದು; ಭದ್ರಾಶ್ವ ವರ್ಷಂ ಅಂತರೇಣ = ಭದ್ರಾಶ್ವ ವರ್ಷವನ್ನು ದಾಟಿ; ಪ್ರಾಚ್ಯಾಂ ದಿಶಿ = ಪೂರ್ವ ದಿಕ್ಕಿನಲ್ಲಿ; ಕ್ಷಾರ ಸಮುದ್ರಂ ಅಭಿಪ್ರವಿಶತಿ = ಲವಣ ಸಮುದ್ರವನ್ನು ಕೂಡಿಕೊಳ್ಳುತ್ತದೆ.

ಇಲ್ಲಿ ವಿವೇಚಿಸಿ ತಿಳಿಯಬೇಕಾದ ಮುಖ್ಯಾಂಶವೊಂದಿದೆ. ಮೇರು ಪರ್ವತ ಬುಡದ ಸುತ್ತಲೂ ಕೇಸರಪರ್ವತಗಳಿವೆ. ಅವುಗಳನ್ನು ಸುತ್ತವರಿದು ನಿಂತ ಅವಷ್ಟಂಭ ಪರ್ವತಗಳು ಅವುಗಳಿಗಿಂತ ಎತ್ತರವಾದುವು. ಗಂಧಮಾದನ ಪರ್ವತವೂ ಎತ್ತರವಾದುದೇ. ಕೆಳಗಿಳಿದ ಜಲಪ್ರವಾಹ, ಆ ಪರ್ವತ ಶಿಖರಗಳ ಮೇಲೇರಿ ಇಳಿಯುವುದು ಹೇಗೆ ಎಂಬ ಪ್ರಶ್ನೆ ತಲೆಯಲ್ಲಿ ಸುಳಿಯಬಹುದು. ಇದಕ್ಕೆ ಉತ್ತರವನ್ನು ಶ್ರೀವಾದಿರಾಜ ಗುರುವರೇಣ್ಯರು ಕೊಟ್ಟಿದ್ದಾರೆ. – "ರೂಪಾಂತರೇಣ ವಹತಿ" ಎಂದು, ಮೋಡದ ರೂಪದಲ್ಲಿ ಮಳೆ ಸುರಿಸುತ್ತಾ ಕೆಳಗಿಳಿದು, ಮತ್ತೆ ಮೇಲೇರುವುದು ಇಳಿಯುವುದು ಎಂಬ ಮೋಡಗಳ ಚರ್ಯೆಯನ್ನು, ನಾವು ಗಮನಿಸಿದರೆ, ಪ್ರಶ್ನೆಗೆ ಉತ್ತರ ಸುಲಭವಾಗಿ ದೊರೆಯುವುದು. ಪಶ್ಚಿಮ ಸಮುದ್ರದಿಂದ ಎದ್ದ ಮೋಡಗಳು ಪಶ್ಚಿಮ ಘಟ್ಟಗಳನ್ನೇರಿ ಮಳೆ ಸುರಿಸಿ, ಪೂರ್ವಘಟ್ಟಗಳ ಕಡೆಗೆ ಇಳಿಯುತ್ತಾ ಹೋಗುವುದನ್ನು ನಾವು ಬಲ್ಲೆವು.

ಏವಂ ಮಾಲ್ಯವಚ್ಛಿಕರಾನ್ನಿಷ್ಪತಂತೀ ತತೋಽನುಪರತವೇಗಾ
ಕೇತುಮಾಲಾಮಭಿಚಕ್ಷುಃ ಪ್ರತೀಚ್ಯಾಂ ದಿಶಿ ಸರಿತ್ಪತಿಂ ಪ್ರವಿಶತಿ ॥೭॥

ಏವಂ = ಇದೇ ರೀತಿಯಾಗಿ; ಮಾಲ್ಯವತ್ ಶಿಖರಾತ್ = ಮಾಲ್ಯವಾನ್ ಪರ್ವತ ಶಿಖರದಿಂದ; ನಿಷ್ಪತಂತೀ = ಇಳಿದು ಬರುವ; ಚಕ್ಷುಃ ಎಂಬ ಗಂಡು ನದಿಯು; ತತಃ = ಅಲ್ಲಿಂದ ಮುಂದೆ; ಅನುಪರತವೇಗಾ = ಒಂದೇ ಸಮನಾದ ಶೀಘ್ರ ಗಮನವುಳ್ಳದ್ದಾಗಿ; ಕೇತುಮಾಲಾಂ ಅಭಿ = ಕೇತುಮಾಲಾವರ್ಷವನ್ನು ಅತಿಕ್ರಮಿಸಿ; ಪ್ರತೀಚ್ಯಾಂ ದಿಶಿ = ಪಶ್ಚಿಮ ದಿಕ್ಕಿನಲ್ಲಿ; ಸರಿತ್ಪತಿಂ = ನದಿನದಗಳ ಪತಿಯಾದ ಸಮುದ್ರವನ್ನು; ಪ್ರವಿಶತಿ = ಪ್ರವೇಶಿಸುತ್ತದೆ.

ಭದ್ರಾಚೋತ್ತರತೋ ಮೇರುಶಿರಸೋ ನಿಪತಿತಾ ಗಿರಿಶಿಖರಾದ್ಗಿರಿಶಿಖರ
ಮತಿಹಾಯ ಶೃಂಗವತಃ ಶೃಂಗಾದವಸ್ಯಂದಮಾನಾ
ಉತ್ತರಾನ್ಮುಕುರೂನಭಿತ ಉದೀಚ್ಯಾಂದಿಶಿ ಜಲಧಿಮಭಿಪ್ರವಿಶತಿ ॥೮॥

ಭದ್ರಾ ಚ = ಭದ್ರಾ ಎಂಬ ಶಾಖೆಯೂ ಕೂಡ; ಮೇರು ಶಿರಸಃ ವಿಪತಿತಾ = ಮೇರುವಿನ ಮೇಲ್ಭಾಗದಿಂದ ಕೆಳಗಿಳಿದು; ಗಿರಿಶಿಖರಾತ್ ಗಿರಿಶಿಖರಂ ಅತಿಹಾಯ = ಒಂದು ಗಿರಿಶಿಖರದಿಂದ ಮತ್ತೊಂದು ಗಿರಿಶಿಖರವನ್ನು ದಾಟುತ್ತಾ; ಶೃಂಗವತಃ ಶೃಂಗಾತ್ = ಶೃಂಗವಾನ್ ಪರ್ವತದ ಶಿಖರದಿಂದ; ಸ್ಯಂದಮಾನಾ = ಕೆಳಗಿಳಿದು ಹರಿಯುತ್ತಾ; ಉತ್ತರಾನ್ ಕುರಾನ್ ತು ಅಭಿತಃ = ಉತ್ತರ ಕುರುವರ್ಷದ ಜನರಿಗಭಿಮುಖವಾಗಿ; ಉದೀಚ್ಯಾಂದಿಶಿ = ಉತ್ತರ ದಿಕ್ಕಿನಲ್ಲಿ; ಜಲಧಿಂ = ಸಮದ್ರವನ್ನು; ಅಭಿಪ್ರವಿಶತಿ = ಪ್ರವೇಶಿಸುತ್ತದೆ.

ಗಂಗಾ ಪ್ರವಾಹಗಳು ಪರ್ವತಶಿಖರಗಳಿಂದ ಇಳಿಯುವಾಗ ಜಲರೂಪದಿಂದಿದ್ದು, ಪರ್ವತಗಳ ಸಾನು ಪ್ರದೇಶಗಳಲ್ಲಿ ಹರಿಯುವುವೆಂದೂ, ನಂತರ ಆವಿಯ ರೂಪದಲ್ಲಿ ಏರಿ, ಗಿರಿ ಶಿಖರಗಳನ್ನು ದಾಟುತ್ತಾ, ಆಯಾಗಿರಿಶಿಖರಗಳಿಂದ ಕೆಳಗಿಳಿದು ಜಲರೂಪದಿಂದ ಹರಿಯುವುವೆಂದು ಭಾವಿಸಬೇಕು. ಭದ್ರಾ ಶಾಖೆಯು ಮೇರುಪರ್ವತದ ಸಾನುಪ್ರದೇಶದಲ್ಲಿ ಉತ್ತರ ದಿಕ್ಕಿನ ಕೇಸರ ಪರ್ವತಗಳ ಮೇಲೆ ಬಿದ್ದುಹರಿಯುವುದೆಂದೂ, ನಂತರ ಸುಪಾರ್ಶ್ವ, ನೀಲ, ಶ್ವೇತ ಮತ್ತು ಶೃಂಗವಾನ್ ಪರ್ವತಶಿಖರಗಳನ್ನು ಹಾದು, ಕೆಳಗಿಳಿದು ಉತ್ತರ ದಿಕ್ಕಿನಲ್ಲಿ ಲವಣಸಮುದ್ರವನ್ನು ಸೇರುವುದೆಂದೂ ತಿಳಿಯಬೇಕು.

ತಥೈವಾಲಕನಂದಾ ದಕ್ಷಿಣೇನ ಬ್ರಹ್ಮಸದನಾದ್ಬಹೂನಿ
ಗಿರಿಕೂಟಾನ್ಯತಿಕ್ರಮ್ಯ ಹೇಮಕೂಟಾದ್ಧಿಮಕೂಟಾನ್ಯತಿರಭಸತರ
ರಂಹಸಾ ಲುಠಯಂತೀ ಭಾರತಮಭಿವರ್ಷಂ ದಕ್ಷಿಣಸ್ಯಾಂ ದಿಶಿ

ಜಲಧಿಮಭಿ ಪ್ರವಿಶತಿ ಯಸ್ಯಾಂ ಸ್ನಾನಾರ್ಥಂಚಾಗಚ್ಛತಃ ಪುಂಸಃ
ಪದೇಪದೇಶ್ವಮೇಧರಾಜಸುಯಾದೀನಾಂ ಫಲಂ ನ ದುರ್ಲಭಮಿತಿ
||೯||

ತಥೈವ = ಅದೇ ರೀತಿಯಾಗಿ; ಅಲಕನಂದಾ = ಅಲಕನಂದಾ ಎಂಬ ಶಾಖೆಯು; ಬ್ರಹ್ಮಸದನಾತ್ ದಕ್ಷಿಣೇನ = ಬ್ರಹ್ಮಸದನದಿಂದ ದಕ್ಷಿಣ ದಿಕ್ಕಿನಲ್ಲಿ; ಬಹೂನಿ ಗಿರಿ ಕೂಟಾನಿ ಅತಿಕ್ರಮ್ಯ = ಕೇಸರ ಪರ್ವತಗಳು, ಮೇರುಮಂದರ, ನಿಷಧ ಮೊದಲಾದ ಪರ್ವತಗಳ ಶಿಖರಗಳನ್ನು ಅತಿಕ್ರಮಿಸಿ; ಹೇಮಕೂಟಾತ್ = ಹೇಮಕೂಟ ಪರ್ವತದಿಂದ; ಹಿಮಕೂಟಾನಿ = ಹಿಮಾಲಯ ಪರ್ವತ ಶಿಖರಗಳನ್ನು ಅತಿ ರಭಸತರ ರಂಹಸಾ = ಬಹಳ ರಭಸದ ವೇಗದಿಂದ; ಭಾರತ ವರ್ಷಂ ಅಭಿ = ಭಾರತ ವರ್ಷವನ್ನು ಕುರಿತು; ಲುಠಯಂತೀ = ಉರುಳಿ ಹೊರಳಿ ಹರಿಯುತ್ತಾ; ದಕ್ಷಿಣಸ್ಯಾಂ ದಿಶಿ = ದಕ್ಷಿಣ ದಿಕ್ಕಿನಲ್ಲಿ; ಜಲಧಿಂ ಅಭಿಪ್ರವಿಶತಿ = ಸಮುದ್ರವನ್ನು ಸೇರಿಕೊಳ್ಳುತ್ತದೆ. ಯಸ್ಯಾಂ = ಯಾವ ವಿಷ್ಣುಪಾದೋದ್ಭವೆಯಾದ ಗಂಗೆಯಲ್ಲಿ; ಸ್ನಾನಾರ್ಥಂ ಚ ಆಗಚ್ಛತಃ = ಸ್ನಾನ ಮಾಡಲು ಬರುವ; ಪುಂಸಃ = ಮಾನವರಿಗೆ; ಪದೇಪದೇ = ಮೇಲಿಂದ ಮೇಲೆ; ಅಶ್ವಮೇಧ ರಾಜಸೂಯಾದೀನಾಂ ಫಲಂ = ಅಶ್ವಮೇಧಯಾಗ ರಾಜಸೂಯ ಯಾಗಗಳನ್ನು ಆಚರಿಸಿದವರಿಗೆ ಬರುವ ಫಲವು; ನ ದುರ್ಲಭಂ ಇತಿ = ದುರ್ಲಭವಲ್ಲ ಎಂಬುದು ಸತ್ಯ.

ಬುಟ್ಟಿಯಾಕಾರದಲ್ಲಿರುವ ಜಂಬೂದ್ವೀಪದ ದಕ್ಷಿಣಭಾಗದಲ್ಲಿ ೯೦೦೦ಯೋಜನ (೭೨ ಸಾವಿರ ಮೈಲಿ) ವಿಸ್ತಾರವಾದ ಭರತವರ್ಷವಿರುವುದನ್ನೂ, ಆ ದ್ವೀಪದ ದಕ್ಷಿಣದಂಚಿನಲ್ಲಿ ಭರತಖಂಡವೆನಿಸಿಕೊಳ್ಳುವ ನಮ್ಮ ಭೂಗೋಳವಿರುವುದನ್ನೂ ನಾವಿಲ್ಲಿ ಸ್ಮರಿಸಬೇಕು. ಜಂಬೂದ್ವೀಪದಂಚಿನಿಂದ ಕೆಳಗುರುಳಿ ಹರಿಯುವುದಕ್ಕೆ ಮುಂಚೆ ಅಲಕನಂದಾ ಶಾಖೆಯು ಭಾರತ ದೇಶದ ಉತ್ತರದಲ್ಲಿರುವ ಹಿಮಾಲಯಾ ಪರ್ವತದ ಮೇಲೂ ಇಳಿದು, ಬಂಗಾಳಾ ಕೊಲ್ಲಿಯಲ್ಲಿ ಸಮುದ್ರವನ್ನು ಸೇರುತ್ತದೆ.

ಅನ್ಯೇಚ ನದಾನದ್ಯಶ್ಚ ವರ್ಷೇವರ್ಷೇ ಸಂತಿ
ಬಹುಶೋ ಮೇರ್ವಾದಿ ಗಿರಿದುಹಿತರಃ ಶತಶಃ ||೧೦||

ಭಹುಶಃ = ಬಹಳ ಮಟ್ಟಿಗೆ; ಮೇರ್ವಾದಿ ಗಿರಿ ದುಹಿತರಃ = ಮೇರು, ಮಂದರಾದಿಗಳು ಮತ್ತು ಪರಿಸ್ತರಣ ಪರ್ವತಗಳು ಇವುಗಳ ಕುಮಾರಿಯರು ಎನ್ನಬಹುದಾದ; ಅನ್ಯೇಚ ನದಾಃ ನದ್ಯಃ ಚ = ಇನ್ನೂ ಬೇರೆ ಬೇರೆ ನದಗಳು ಮತ್ತು ನದಿಗಳೂ ಕೂಡ; ಶತಶಃ = ನೂರಾರು ಸಂಖ್ಯೆಯಲ್ಲಿ; ವರ್ಷೇವರ್ಷೇ ಸಂತಿ = ಜಂಬೂ ದ್ವೀಪದ ಒಂಭತ್ತು ವರ್ಷಗಳಲ್ಲಿಯೂ ಇವೆ.

ಸಿತಾ, ಚಕ್ಷು, ಭದ್ರಾ, ಅಲಕನಂದಾ ಎಂಬ ಪ್ರಸಿದ್ಧ ಶಾಖೆಗಳು ಲವಣಸಮುದ್ರದಲ್ಲಿ ಕೂಡುತ್ತವೆ. ಈಗ ಹೇಳಿದ ಇನ್ನಿತರ ನೂರಾರು ನದಿಗಳು ವರ್ಷಗಳ ಭಾಗಗಳಲ್ಲಿ ಹರಿದು ಅಲ್ಲಲ್ಲಿಯೇ ಅದೃಶ್ಯವಾಗುತ್ತವೆ.

**ತತ್ರಾಪಿ ಭಾರತಮೇವ ವರ್ಷಂ ಕರ್ಮಕ್ಷೇತ್ರಮನ್ಯಾನ್ಯಷ್ಟ ವರ್ಷಾಣಿ**
**ಸ್ವರ್ಗಿಣಾಂ ಪುಣ್ಯಶೇಷೋಪಭೋಗ ಸ್ಥಾನಾನಿ ಭೌಮಾನಿ**
**ಸ್ವರ್ಗಪದಾನಿ ವ್ಯಪದಿಶಂತಿ ॥೧೧॥**

ತತ್ರ ಅಪಿ = ಜಂಬೂದ್ವೀಪದ ಒಂಭತ್ತು ವರ್ಷಗಳಲ್ಲಿ; ಭಾರತಂ ವರ್ಷಂ ಏವ = ಭಾರತವರ್ಷವನ್ನು ಮಾತ್ರವೇ; ಕರ್ಮಕ್ಷೇತ್ರಂ = ಫಲಪ್ರದ ಕರ್ಮಕ್ಷೇತ್ರ ವಾಗಿದೆ; ಅನ್ಯಾನಿ ಅಷ್ಟವರ್ಷಾಣಿ = ಉಳಿದ ಬೇರೆ ಎಂಟು ವರ್ಷಗಳು; ಸ್ವರ್ಗಿಣಾಂ = ಸ್ವರ್ಗಸುಖ ಭೋಗಾರ್ಹರಿಗೆ; ಪುಣ್ಯಶೇಷ ಉಪಭೋಗ ಸ್ಥಾನಾನಿ = ಸ್ವರ್ಗಲೋಕದಲ್ಲಿ ಅನುಭವಿಸಿದ ಸುಖಗಳ ನಂತರ ಉಳಿದ ಸುಖಭೋಗಗಳಿಗಾಗಿ ಇರತಕ್ಕ ಪ್ರದೇಶಗಳು; ಭೌಮಾನಿ ಸ್ವರ್ಗಪದಾನಿ ವ್ಯಪದಿಶಂತಿ = ಅವುಗಳನ್ನು ಭೂಲೋಕದ ಸ್ವರ್ಗ ಸದೃಶ ಸ್ಥಾನಗಳೆಂದು ಹೇಳುವರು.

ಭಾರತ ದೇಶದಲ್ಲಿ ಆಚರಿಸಿದ ಪುಣ್ಯಪಾಪಗಳಿಂದ ಸ್ವರ್ಗ ನರಕ ಭೋಗಗಳೂ, ಆ ಪುಣ್ಯಪಾಪಗಳಿಂದ ಉಳಿದ ಕರ್ಮಾಚರಣೆಗಾಗಿ ಪುನರ್ಜನ್ಮಗಳೂ ಉಂಟಾಗುವುದ ರಿಂದ ಇದನ್ನು ಕರ್ಮಕ್ಷೇತ್ರ ಎನ್ನುವರು – ಈ ಮಾತು ನಾವು ವಾಸಮಾಡುವ ಭೂಗೋಳಕ್ಕೆ (ಭರತ ಖಂಡಕ್ಕೆ) ಅನ್ವಯಿಸುವಂತಹುದು. ಬೃಹತ್ ಹಿಮಾಲಯ ದವರೆಗಿನ ಭರತ ವರ್ಷದ ಇತರ ಭಾಗಗಳಲ್ಲೆಲ್ಲಾ ನರನಾರಾಯಣರ ತಪಶ್ಚರ್ಯೆ ಯನ್ನು ಅನುಸರಿಸಿ ತಪೋನಿರತರಾದ ಋಷಿಮುನಿಗಳು ತುಂಬಿರುವರು. ಅವರೆಲ್ಲಾ ಬಹುಮಟ್ಟಿಗೆ ಪುಣ್ಯಜೀವಿಗಳು.

ಇತರ ಎಂಟು ವರ್ಷಗಳಲ್ಲಿ, ಸ್ವರ್ಗಲೋಕದಲ್ಲಿನಷ್ಟು ಸುಖ ಸಂಭ್ರಮವಿಲ್ಲದಿದ್ದರೂ, ದುಃಖರಹಿತವಾದ ಸುಖವೇ ಅಲ್ಲುಂಟು. ಆದುದರಿಂದ ಆ ವರ್ಷಗಳು ಭೂಲೋಕದ ಸ್ವರ್ಗಗಳಂತಿವೆ. ಆದುದರಿಂದ, ಅವುಗಳನ್ನು ಭೋಗಭೂಮಿಗಳೆಂದೂ, ಭರತವರ್ಷವನ್ನು ಕರ್ಮ ಭೂಮಿಯೆಂದೂ ವ್ಯವಹರಿಸುತ್ತಾರೆ.

**ಏಷು ಪುರುಷಾಣಾಮಯುತ ಪುರುಷಾಯುರ್ವರ್ಷಾಣಾಂ**
**ದೇವಕಲ್ಪಾನಾಂ ನಾಗಾಯುತ ಪ್ರಾಣಾನಾಂ ವಜ್ರಸಂಹನನ**
**ಬಲವಯಮೋದ ಪ್ರಮುದಿತ ಮಹಾಸೌರತ ಮಿಥುನ**

ವ್ಯವಾಯಾಪವರ್ಗ ವರ್ಷಧೃತ್ಯೈಕಗರ್ಭಕಲತ್ರಾಣಾಂ ತತ್ರತು
ತ್ರೇತಾಯುಗಸಮಃ ಕಾಲೋ ವರ್ತತೇ ||೧೨||

ಏಷು = ಈ ಎಂಟು ವರ್ಷಗಳಲ್ಲಿ; ಅಯುತ ಪುರುಷಾಯುರ್ವರ್ಷಾಣಾಂ = ಮಾನವ ಮಾನದ ಹತ್ತುಸಾವಿರ ವರ್ಷ ಜೀವಿಸಿರುವ; ದೇವಕಲ್ಪಾನಾಂ = ದೇವತಾ ಸದೃಶರಾದ; ನಾಗಾಯುತ ಪ್ರಾಣಾನಾಂ = ಹತ್ತು ಸಾವಿರ ಆನೆಗಳ ಬಲವುಳ್ಳ; ವಜ್ರಸಂಹನನ, ಬಲ, ವಯೋಮೋದ, ಪ್ರಮುದಿತ ಮಹಾಸೌರತ = ವಜ್ರಸದೃಶ ದೃಢಕಾಯ, ವೀರ್ಯ, ಯೌವನ ಮತ್ತು ಸುರತಸುಖಾತಿಶಯ, ಹೊಂದಬಲ್ಲ; ಮಿಥುನ ವ್ಯವಾಯ ಅಪವರ್ಗ ವರ್ಷೇ = ಬಹುವರ್ಷಗಳ ಕಾಲ ಮಿಥುನೀ ಭಾವ ಸುಖವನ್ನು ಅನುಭವಿಸಿದ ನಂತರ; ಏಕಗರ್ಭಕಲತ್ರಾಣಾಂ = ಒಂದು ಶಿಶುವನ್ನು ಮಾತ್ರ ಪ್ರಸವಿಸುವ ಪತ್ನಿಯರನ್ನುಳ್ಳ; ಪುರುಷಾಣಾಂ = ಪುರುಷರಿಗೆ; ತತ್ರತು = ಅಲ್ಲಿಯಾದರೋ; ತ್ರೇತಾಯುಗ ಸಮಕಾಲಃ ವರ್ತತೇ = ತ್ರೇತಾಯುಗ ಕಾಲದ ಲಕ್ಷಣಗಳು ಇರುತ್ತವೆ.

ದೀರ್ಘಕಾಲದ ಸುಖಜೀವನ, ಹೆಚ್ಚಿನ ಬಲಶೌರ್ಯ ಧೈರ್ಯಗಳು, ಧರ್ಮ ಶ್ರದ್ಧೆ ಮುಂತಾದವು ತ್ರೇತಾಯುಗದ ಲಕ್ಷಣಗಳು.

ನವಸ್ವಪಿ ವರ್ಷೇಷು ಭಗವಾನ್ನಾರಾಯಣೋ ಮಹಾಪುರುಷಃ
ಪುರುಷಾಣಾಂ ತದನುಗ್ರಹಾಯಾತ್ಮತತ್ವವ್ಯೂಹೇನಾತ್ಮನಾದ್ಯಾಪಿ
ಸನ್ನಿಧೀಯತೇ ||೧೪||

ನವಸು ಅಪಿ ವರ್ಷೇಷು = ಜಂಬೂದ್ವೀಪದ ಒಂಭತ್ತು ವರ್ಷಗಳಲ್ಲಿಯೂ; ಮಹಾಪುರುಷಃ = ಪುರುಷಪ್ರವರನಾದ; ಭಗವಾನ್ ನಾರಾಯಣಃ =, ಸಂಪೂರ್ಣ ಗುಣೈಶ್ವರ್ಯ ಸಂಪನ್ನನಾದ ಶ್ರೀಮನ್ನಾರಾಯಣನು; ತತ್‌ಪುರುಷಾಣಾಂ ಅನುಗ್ರಹಾಯ = ಆ ವರ್ಷಗಳ ಪ್ರಜೆಗಳಲ್ಲಿ ತನ್ನ ಅನುಗ್ರಹವನ್ನು ಬೀರುವುದಕ್ಕಾಗಿ; ಆತ್ಮತತ್ತ್ವವ್ಯೂಹೇನ ಆತ್ಮನಾ = ತನ್ನ ವಾಸುದೇವಾದಿ ರೂಪಗಳ ರೂಪಾಂತರಗಳಿಂದ; ಅದ್ಯಾಪಿ ಸನ್ನಿಧೀಯತೇ = ಈಗಲೂ ಆ ವರ್ಷಗಳಲ್ಲಿ ಸನ್ನಿಹಿತನಾಗಿದ್ದಾನೆ.

ಇದರ ವಿವರಗಳು ಮುಂದೆ ವಿಶದವಾಗಿ ನೀಡಲ್ಪಡುತ್ತವೆ.

ಇಲಾವೃತೇತು ಭಗವಾನ್ ಭವ ಏಕಏವ ಪುಮಾನ್ನಹ್ಯನ್ಯಸ್ತತ್ರಾಪರೋ
ನಿರ್ವಿಶತಿ ಭವಾನ್ಯಾಃ ಶಾಪನಿಮಿತ್ತಜ್ಞೋ ಯತ್ಪ್ರವೇಕ್ಷ್ಯತಃ
ಸ್ತ್ರೀಭಾವಸ್ತತ್ಪಶ್ಚಾದ್ವಕ್ಷ್ಯಾಮಿ ||೧೫||

ಇಲಾವೃತೇತು = ಇಳಾವೃತ ವರ್ಷದಲ್ಲಿ ಯಾದರೋ; ಭಗವಾನ್ ಭವಃ ಏಕಏವ ಪುಮಾನ್ = ರುದ್ರ ಭಗವಾನನೊಬ್ಬನೇ ಪುರುಷನಾಗಿರುವವನು; ಭವಾನ್ಯಾಃ ಶಾಪ ನಿಮಿತ್ತಜ್ಞಃ = ಭವಾನೀದೇವಿಯ ಶಾಪದ ವಿಚಾರವನ್ನು ಬಲ್ಲ; ಅಪರಃ ಅನ್ಯಃ = ಬೇರೊಬ್ಬ ಪುರುಷನು; ತತ್ರ ನನಿರ್ವಿಶತಿ ಹಿ = ಅಲ್ಲಿ ಪ್ರವೇಶ ಮಾಡುವುದೇ ಇಲ್ಲ; ಯತ್ ಪ್ರವೇಕ್ಷ್ಯತಃ = ಯಾವ ಅಲ್ಲಿ ಪ್ರವೇಶ ಮಾಡುವುದರಿಂದ; ಸ್ತ್ರೀಭಾವಃ = ಹೆಣ್ಣು ರೂಪ ಉಂಟಾಗಿಬಿಡುತ್ತದೆ; ತತ್ ಪಶ್ಚಾತ್ ವಕ್ಷ್ಯಾಮಿ = ಅದನ್ನು ಕುರಿತು ಆ ಮೇಲೆ ಹೇಳುತ್ತೇನೆ.

ಮೇರು ಪರ್ವತದಸುತ್ತಲಿನ ಪ್ರದೇಶದಲ್ಲಿ ಹತ್ತು ಕೋಟಿ ಸ್ತ್ರೀ ಸೇವಕಿಯರಿಂದ ಪರಿಚರ್ಯೆಯನ್ನು ಕೈಗೊಂಡು, ಪಾರ್ವತೀ ಪರಮೇಶ್ವರರು ಮಾತ್ರ ವಿಹರಿಸುತ್ತಿರುತ್ತಾರೆ. ಅದು ಅನ್ಯ ಪುರುಷರು ಪ್ರವೇಶ ಮಾಡಬಾರದ ಪ್ರದೇಶ. ಮನುಪುತ್ರನಾದ ಐಲನು ಅತಿಕ್ರಮಪ್ರವೇಶ ಮಾಡಿದುದರಿಂದ ಭವಾನೀದೇವಿಯ ಶಾಪಕ್ಕೆ ಗುರಿಯಾಗಿ ಸ್ತ್ರೀರೂಪವನ್ನು ಹೊಂದಿಬಿಟ್ಟನು. ಆನಂತರ, ವರಪ್ರಸಾದಿತನಾಗಿ, ಒಂದು ತಿಂಗಳು ಗಂಡಸಾಗಿಯೂ, ಇನ್ನೊಂದು ತಿಂಗಳು ಹೆಂಗಸಾಗಿಯೂ – ಹೀಗೆ ಪರ್ಯಾಯ ಕ್ರಮದಿಂದ ಬಾಳುವಂತಾಯಿತು. ಗಂಡುರೂಪವಿದ್ದ ತಿಂಗಳು ಮಾತ್ರ ಆತನು ರಾಜನಾಗಿ ಕಾಣಿಸಿಕೊಳ್ಳುತ್ತಿದ್ದ. ಇಲ್ಲಿ ಸೂಚಿತವಾಗಿರುವ ಕಥೆ, ಇದು.

> ಭವಾನೀನಾಥೈಃ ಸ್ತ್ರೀಗಣಾರ್ಬುದ ಸಹಸ್ರೈರವರುಧ್ಯಮಾನೋ
> ಭಗವತಶ್ಚತುರ್ಮೂರ್ತೇರ್ಮಹಾಪುರುಷಸ್ಯ ತುರೀಯಾಂ ತಾಮಸೀಂ
> ಮೂರ್ತಿಂ ಪ್ರಕೃತಿಮಾತ್ಮನಃ ಸಂಕರ್ಷಣ ಸಂಜ್ಞಾಮಾತ್ಮ
> ಸಮಾಧಿರೂಪೇಣ ಸನ್ನಿಧಾಪ್ಯೈತದಭಿಗೃಣನ್ ಭವ ಉಪಧಾವತಿ
> ॥೧೬॥

ಭವಾನೀ ನಾಥೈಃ = ಭವಾನೀ ದೇವಿಯ ಯಾಜಮಾನ್ಯಕ್ಕೆ ಒಳಗಾದ; ಸ್ತ್ರೀಗಣ ಅರ್ಬುದ ಸಹಸ್ರೈಃ = ೧೦ ಕೋಟಿ ಸಂಖ್ಯೆಯ ಸ್ತ್ರೀಪರಿವಾರದಿಂದ; ಅವರುಧ್ಯಮಾನಃ = ಸೇವಿತರಾಗಿ; ಭವಃ = ರುದ್ರದೇವರು; ಭಗವತಃ ಮಹಾಪುರುಷಸ್ಯ = ಪುರುಷೋತ್ತಮನಾದ ಭಗವಂತನ; ಚತುರ್ಮೂರ್ತೇಃ ತುರೀಯಾಂ = ವಾಸುದೇವ ಸಂಕರ್ಷಣ–ಪ್ರದ್ಯುಮ್ನ–ಅನಿರುದ್ಧ ಎಂಬ ನಾಲ್ಕು ರೂಪಗಳಲ್ಲಿ ಒಂದಾದ; ಸಂಕರ್ಷಣ ಸಂಜ್ಞಾಂ = ಸಂಕರ್ಷಣ ಎಂಬ ಹೆಸರುಳ್ಳ; ಆತ್ಮನಃ ಪ್ರಕೃತಿಂ = ತನ್ನ ಸ್ವಭಾವವನ್ನು ವ್ಯಕ್ತಪಡಿಸುವ; ತಮಸೀಂ ಮೂರ್ತಿಂ = ತಮೋಗುಣದ ವ್ಯಾಪಾರವನ್ನು ನಡೆಸುವ ಮೂರ್ತಿಯನ್ನು; ಆತ್ಮಸಮಾಧಿರೂಪೇಣ ಸನ್ನಿಧಾಪ್ಯ = ಬಾಹ್ಯವನ್ನು ಮರೆತು

ನಿಧಿಧ್ಯಾಸನ ರೂಪವಾದ ಅಂತರಂಗ ಧ್ಯಾನದಿಂದ; ಏತತ್ ಅಭಿಗೃಣನ್ = ಈ ಮುಂದೆ ಹೇಳುವ ಮಂತ್ರವನ್ನು ಜಪಿಸುತ್ತಾ; ಉಪಧಾವತಿ = ಅರ್ಚಿಸುತ್ತಾರೆ.

ರುದ್ರದೇವರು ಪಾರ್ವತೀ ಪ್ರಿಯರಾಗಿ ಸದಾವಿಹರಿಸುತ್ತಿದ್ದರೂ, ಅಹಂಕಾರತತ್ವಕ್ಕೆ ಯಜಮಾನರಾಗಿ ಎಲ್ಲರನ್ನೂ ಆ ತತ್ವದ ಮೋಹಕ್ಕೆ ಒಳಪಡಿಸುವ ತಾವು ಮಾತ್ರ ಅದಕ್ಕೆ ವಶರಾಗದೆ, ತಮ್ಮ ಸ್ವರೂಪವನ್ನು ವ್ಯಕ್ತಪಡಿಸುವ ಸಂಕರ್ಷಣ ಮೂರ್ತಿಯ ಧ್ಯಾನದಲ್ಲಿ ನಿರತರಾಗಿಯೇ ಇರುತ್ತಾರೆ. ದಂಪತಿಗಳಾದ ತಮ್ಮಲ್ಲಿ ಜಯಾ (ಲಕ್ಷ್ಮೀ) ಸಂಕರ್ಷಣರೇ ದಾಂಪತ್ಯ ಸುಖ ನೀಡುವವರೆಂದು ನೆನಪಿನಲ್ಲಿಟ್ಟುಕೊಂಡಿರುತ್ತಾರೆ. ಮೈಥುನ ಕ್ರಿಯೆಯು 'ವಾಮದೇವ ಯಜ್ಞ'ವೆಂಬುದನ್ನು ಚೆನ್ನಾಗಿ ಬಲ್ಲವರು ಅವರು.

**"ಓಂ ನಮೋ ಭಗವತೇ ಮಹಾಪುರುಷಾಯ ಸರ್ವಗುಣಸಂಖ್ಯಾನಾಯಾನನ್ತಾಯಾವ್ಯಕ್ತಾಯ ನಮ ಇತಿ."** ||೧೭||

ಇದು ಶ್ರೀ ಸಂಕರ್ಷಣ ಮೂರ್ತಿಯನ್ನು ಕುರಿತ ಧ್ಯಾನ ಮಂತ್ರ.

**"ಶ್ರೀಕೃಷ್ಣಾರ್ಪಣಮಸ್ತು"**

---

# ಶ್ರೀಮದ್ಭಾಗವತ

# ಅಧ್ಯಾಯ ಹದಿನೆಂಟು

(ಈ ಅಧ್ಯಾಯದಲ್ಲಿ ಆಯ್ದ ಶ್ಲೋಕಗಳು ಮಾತ್ರ ಇವೆ)

**ತಥಾಚ ಭದ್ರಾಶ್ವಾನಾಮ ಧರ್ಮಸುತಸ್ತತ್ಕುಲಪತಯಃ ಪುರುಷಾ ಭದ್ರಾಶ್ವವರ್ಷೇ ಸಾಕ್ಷಾದ್ಭಗವತೋ ವಾಸುದೇವಸ್ಯ ಪ್ರಿಯಾಂ ತನುಂ ಧರ್ಮಮಯೀಂ ಹಯಶೀರ್ಷಾಭಿಧಾನಾಂ ಪರಮೇಣ ಸಮಾಧಿನಾ ಸನ್ನಿಧಾಪ್ಯೇದಮಭಿಗೃಣಂತ ಉಪಧಾವಂತಿ ॥೧॥**

ತಥಾಚ = ಅದೇ ರೀತಿಯಾಗಿ; ಭದ್ರಾಶ್ವವರ್ಷೇ = ಭದ್ರಾಶ್ವವರ್ಷದಲ್ಲಿ; ಧರ್ಮಸುತಃ = ಭದ್ರಾಶ್ವನೆಂಬ ಧರ್ಮತನಯನೂ; ತತ್ಕುಲಪತಯಃ ಪುರುಷಾಃ = ಅಲ್ಲಿನ ಇತರ ಮುಖಂಡರೂ; ಸಾಕ್ಷಾತ್ ಭಗವತಃ ವಾಸುದೇವಸ್ಯ = ಭಗವಂತನಾದ ವಾಸುದೇವನ ರೂಪವೇ ಆದ; ಧರ್ಮಮಯೀಂ = ಧರ್ಮಸ್ವರೂಪವೇ ಆದ; ಹಯಶೀರ್ಷ ಅಭಿದಾನಾಂ = ಹಯಗ್ರೀವ ನಾಮಕವಾದ; ಪ್ರಿಯಾಂ ತನುಂ = ಬಹು ಪ್ರಿಯವಾದ ಭಗವದ್ರೂಪವನ್ನು; ಪರಮೇಣ ಸಮಾಧಿನಾ = ಗಾಢವಾದ ಧ್ಯಾನಯೋಗದಿಂದ; ಸನ್ನಿಧಾಪ್ಯ = ನಿಧಿಧ್ಯಾಸನಕ್ಕೆ ಅಳವಡಸಿಕೊಂಡು; ಇದಂ ಅಭಿಗೃಣಂತಃ = ಮುಂದೆ ಹೇಳುವ ಮಂತ್ರವನ್ನು ಪಠಿಸುತ್ತಾ; ಉಪಧಾವಂತಿ = ಪೂಜಿಸುತ್ತಾರೆ.

ಸಂಕರ್ಷಣ ಮೂರ್ತಿಯು ತಮೋಗುಣ ಪ್ರವರ್ತಕನಾದರೆ, ಹಯಗ್ರೀವ ಮೂರ್ತಿಯು ಸತ್ವಗುಣ ಪ್ರೇರಕನಾಗಿ ಜ್ಞಾನೋಪದೇಶಕರ್ತಾಗಿದ್ದಾನೆ. ಭದ್ರಾಶ್ವವರ್ಷದ ಪ್ರಜೆಗಳು ಪರಮ ಸಾತ್ವಿಕರು ಎಂದ ಹಾಗಾಯಿತು.

**"ಓಂ ನಮೋಭಗವತೇ ಧರ್ಮಾಯಾತ್ಮವಿಶೋಧನಾಯ ನಮ ಇತಿ"** ಇದು ಹಯಗ್ರೀವೋಪಾಸನೆಯ ಮಂತ್ರ. "ಆತ್ಮವಿಶೋಧನಾಯ, ಧರ್ಮಾಯ" ಎಂಬ ಪದಗಳು ಅರ್ಥಪೂರ್ಣವಾದುವು. ಧರ್ಮವೆಂಬುದು ಕೇವಲ ಸಾಮಾನ್ಯ ಧರ್ಮವಲ್ಲ, ಅದು ಜೀವರ ಸ್ವರೂಪ ಧರ್ಮಗಳನ್ನೂ ನಿರ್ದೇಶಿಸವುದು. ಅಂತಹ ಸ್ವರೂಪ ಯೋಗ್ಯತೆಗಳಿಗೆ ತಕ್ಕಂತಹ ಆಚರಣೆಗಳನ್ನು ಬೋಧಿಸುವುದು. (ಆತ್ಮ ವಿದ್ಯೆಯನ್ನು ಪ್ರಕಟಿಸುವುದು, ಹಯಗ್ರೀವರೂಪ. ಆ ರೂಪೋಪಾಸನೆಯಿಂದ ವಾಕ್ಪಟುತ್ವವೂ ಸಿದ್ಧಿಸುವುದು.

ಬ್ರಹ್ಮದೇವರ ದಿನಕಲ್ಪಾಂತರದಲ್ಲಿ ನಿದ್ರಿಸಲು ಅನುವಾದ ಅವರ ಶ್ವಾಸರೂಪವಾಗಿ ಹೊರಬಿದ್ದ ವೇದಗಳನ್ನು ತಮನೆಂಬ ರಾಕ್ಷಸ ಅಪಹರಿಸಿ ರಸಾತಳ ಲೋಕದಲ್ಲಿ ಬಚ್ಚಿಟ್ಟುಕೊಂಡ. ಅವನನ್ನು ಕೊಂದು, ವೇದಗಳನ್ನು ಪುನಃ ಬ್ರಹ್ಮದೇವರಿಗೆ ತಂದುಕೊಟ್ಟುದು ಈ ಹಯಗ್ರೀವ ರೂಪವೇ.

**ಹರಿವರ್ಷೇಚಾಪಿ ಭಗವಾನ್ನರಹರಿ ರೂಪೇಣಾಸ್ತೇ ತದ್ಧಯಿತಂ ರೂಪಂ**
**ಮಹಾಪುರುಷಗುಣಭಾಜನೋ ಮಹಾಭಾಗವತೋ ದೈತ್ಯದಾನವಕುಲ**
**ತೀರ್ಥೀಕರಣ ಶೀಲಾಚರಿತಃ**
**ಪ್ರಹ್ಲಾದೋವ್ಯವಧಾನಾನನ್ಯಭಕ್ತಿಯೋಗೇನ ಸಹತದ್ವರ್ಷ**
**ಪುರುಷೈರುಪಾಸ್ತೇ ಇದಂಚೋದಾಹರತಿ** ॥೭॥

ಹರಿವರ್ಷೇ ಅಪಿಚ = ಹರಿವರ್ಷದಲ್ಲಿಯೂ ಕೂಡ; ಭಗವಾನ್ =ಭಗವಂತನು; ನರಹರಿರೂಪೇಣ ಆಸ್ತೇ = ನರಸಿಂಹ ರೂಪದಿಂದ ಸನ್ನಿಹಿತನಾಗಿದ್ದಾನೆ; ಮಹಾಪುರುಷಗುಣಭಾಜನಃ = ಮಹಾಪುರುಷಲಕ್ಷಣ ಯುಕ್ತರಾದ; ಮಹಾಭಾಗವತಃ = ಪರಮಭಗವದ್ಭಕ್ತರಾದ; ದೈತ್ಯದಾನವಕುಲ ತೀರ್ಥೀಕರಣ ಶೀಲಾಚರಿತಃ = ದೈತ್ಯಕುಲದಾನವ ಕುಲದಲ್ಲಿ ಕರ್ಮವಶಾತ್ ಹುಟ್ಟಿದ ಸಜ್ಜೀವಿಗಳನ್ನು ಪವಿತ್ರಗೊಳಿಸುವ ಸಚ್ಚರಿತ್ರರಾದ; ಪ್ರಹ್ಲಾದಃ = ಪ್ರಹ್ಲಾದರಾಜರು; ಅವ್ಯವಧಾನ ಅನನ್ಯ ಭಕ್ತಿಯೋಗೇನ = ನಿರಂತರವಾದ ಏಕಾಂತ ಭಕ್ತಿಯಿಂದ; ಸಹ ತದ್ವರ್ಷ ಪುರುಷೈಃ = ಆ ಹರಿವರ್ಷದ ಪ್ರಜೆಗಳಿಂದ ಕೂಡಿ; ಉಪಾಸ್ತೇ = ಉಪಾಸಿಸುತ್ತಾರೆ; ಇದಂಚ ಪಠತಿ = ಮುಂದೆ ಹೇಳುವ ಮಂತ್ರವನ್ನು ಜಪಿಸುತ್ತಾರೆ.

(ದಿತೀದೇವಿಯ ಮಕ್ಕಳು ದೈತ್ಯರು. ದನೂದೇವಿಯ ಮಕ್ಕಳು ದಾನವರು.)

**ಓಂ ನಮೋ ಭಗವತೇ ನರಸಿಂಹಾಯ ನಮಸ್ತೇಜಸ್ತೇಜಸೇ**
**ಆವಿರಾವಿರ್ಭವ ವಜ್ರನಖವಜ್ರದಂಷ್ಟ್ರ ಕರ್ಮಾಶಯಾನ್ ರಂಧಯ**
**ನಮೋಗ್ರಸಗ್ರಸ ಓಂ ಸ್ವಾಹಾ** ॥೮॥

'ತೇಜಸೇ ತೇಜಃ' ಎಂದರೆ ಜ್ಞಾನಿವರೇಣ್ಯ ಎಂದರ್ಥ. 'ಆವಿರ್ಭವ' = ಕಂಭದಿಂದ ಒಡಮೂಡಿಬಂದಂತೆ ನಮ್ಮ ಅಜ್ಞಾನಾವರಕವನ್ನು ಸೀಳಿಕೊಂಡು ಬಾ; ಸ್ವರೂಪಮನಸ್ಸಿಗೆ ಗೋಚರನಾಗು. ಕರ್ಮಾಶಯಾನ್ ರಂಧಯ = ಲಿಂಗಶರೀರಗತ ಕರ್ಮ ಬೀಜಗಳನ್ನು ನಾಶಪಡಿಸು.

ಕೇತುಮಾಲೇಪಿ ಭಗವಾನ್ ಕಾಮದೇವಸ್ವರೂಪೇಣ ಲಕ್ಷ್ಮ್ಯಾಃ
ಪ್ರಿಯಚಿಕೀರ್ಷಯಾ ಪ್ರಜಾಪತೇರ್ದುರ್ಹಿತೄಣಾಂ ಪುತ್ರಾಣಾಂ
ತದ್ವರ್ಷಪತೀನಾಂ ಪುರುಷಾಯುಷಾಹೋರಾತ್ರ ಪರಿಸಂಖ್ಯಾನಾನಾಂ
ಯಾಸಾಂ ಗರ್ಭಾ ಮಹಾಪುರುಷಮಹಾಸ್ತ್ರತೇಜಸೋದ್ವೇಜಿತ
ಮನಸಾಂ ವಿಧ್ವಸ್ತಾವ್ಯಸವಃ ಸಂವತ್ಸರಾಂತೇ ವಿನಿಪತಂತಿ ||೧೫||

ಕೇತುಮಾಲೇ ಅಪಿ = ಕೇತು. ಮಾಲಾವರ್ಷದಲ್ಲಿಯೂ ಕೂಡ; ಭಗವಾನ್ = ಭಗವಂತನು; ಕಾಮದೇವ ಸ್ವರೂಪದಿಂದ ಲಕ್ಷ್ಮ್ಯಾಃ = ಲಕ್ಷ್ಮೀದೇವಿಯ ಮತ್ತು; ತದ್ವರ್ಷಪತೀನಾಂ = ಕೇತುಮಾಲಾವರ್ಷದ ನಾಯಕರಾದ; ಪುರುಷಾಯುಷ ಅಹೋರಾತ್ರ ಸಂಖ್ಯಾನಾಂ = ಮಾನವರಾಯುಷ್ಯದ ಅಹೋರಾತ್ರಿಗಳ ಸಂಖ್ಯೆಯ; ಪ್ರಜಾಪತೇ = ಪ್ರಜಾಪತಿಗಳ; ದುಹಿತೄಣಾಂ = ಹೆಣ್ಣುಮಕ್ಕಳ, ಮತ್ತು; ಪುತ್ರಣಾಂ = ಗಂಡುಮಕ್ಕಳ; ಪ್ರಿಯ ಚಿಕೀರ್ಷಯಾ = ಒಳಿತಿಗಾಗಿ; (ಆಸ್ತೇ = ಸನ್ನಿಹಿತನಾಗಿ ಇರುವನು;) ಮಹಾಪುರುಷ ಮಹಾತೇಜಸಾ = ಕಾಲಸ್ವರೂಪಿಯಾದ ಆ ಭಗವಂತನ ತೇಜಸ್ಸಿನ ಪ್ರಭಾವದಿಂದ; ಉದ್ವೇಜಿತ ಮನಸಾಂ = ಉದ್ವೇಗಗೊಂಡ ಮನಸ್ಸಿನ ದೆಸೆಯಿಂದ; ಯಾಸಾಂ = ಯಾವ ಆಹೆಣ್ಣುಮಕ್ಕಳ; ಗರ್ಭಾಃ = ತುಂಬಿದ ಗರ್ಭಗಳು; ವಿಧ್ವಸ್ತವ್ಯಸವಃ = ಪ್ರಾಣಗಳನ್ನು ಕಳೆದುಕೊಂಡು; ಸವತ್ಸರಾಂತೇ = ವರ್ಷದ ಕಡೆಯಲ್ಲಿ; ವಿನಿಪತಂತಿ = ಬಿದ್ದು ಹೋಗುತ್ತವೆ.

ಸಾಕ್ಷಾನ್ಮನ್ಮಥ ಮನ್ಮಥಃ ಎಂದು ಸ್ತುತ್ಯನಾದ ಭಗವಂತನ ಪ್ರದ್ಯುಮ್ನ ರೂಪವು ಪುತ್ರನಾದ ಕಾಮದೇವನಲ್ಲಿ ಕಂಡುಬರುವುದು. ಕೇತುಮಾಲಾ ವರ್ಷದಲ್ಲಿರವುದು ಸ್ವಯಂ ಆ ಪ್ರದ್ಯುಮ್ನರೂಪ, ಮನ್ಮಥನ ಕಾರ್ಯ ಮನಸ್ಸನ್ನು ಕಾಮೇಚ್ಛೆಯಲ್ಲಿ ತೊಡಗಿಸುವುದು. ಎಲ್ಲಾ ಬಗೆಯ ಜೀವಿತಾಪೇಕ್ಷೆಗಳಿಗೂ ಕಾಮ ಎಂತಲೇ ಹೆಸರು.ಪ್ರಜಾಪತಿಯ ಗಂಡು ಸಂತಾನದ ಸಂಖ್ಯ 360x 100 = 36000. ಹೆಣ್ಣುಮಕ್ಕಳ ಸಂಖ್ಯೆಯೂ ಅಷ್ಟೇ. ನಮ್ಮ ಶರೀರಗಳಲ್ಲಿ 72000 ಮುಖ್ಯ ನರತಂತುಗಳಿರುವುವು ಬ್ರಹ್ಮದೇವರಿಂದ ಜನಿಸಿದ ಈ ಗಂಡು ಮಕ್ಕಳು (ದೇವತೆಗಳು) ಬಲಭಾಗದ ನಾಡಿಗಳಲ್ಲಿಯೂ, ಹೆಣ್ಣುಮಕ್ಕಳು ಎಡಭಾಗದ ನಾಡಿಗಳಲ್ಲಿಯೂ ಇದ್ದು ದೇಹಿಗಳ ಇಚ್ಛೆಗಳನ್ನು ಪೂರೈಸುವರು. ಒಂದೊಂದು ವರ್ಷದಲ್ಲಿಯೂ ಇಚ್ಛಾಪ್ರೇರಿತ ಕರ್ಮಗಳಿಂದಲೂ ಫಲಭೋಗಗಳಿಂದಲೂ ಉಂಟಾದ ಸಂಸ್ಕಾರ ಸಂಗ್ರಹವೇ ಗರ್ಭಧಾರಣೆಯ ಸಂಕೇತ. ಗರ್ಭಪಾತ ಎಂದರೆ, ಆ ಸಂಸ್ಕಾರ ಸಂಗ್ರಹಗಳನ್ನು ಅದರ ಲೆಕ್ಕಿಗರಿಗೆ ಒಪ್ಪಸಿ ಬಿಡುವುದು ಮತ್ತೆ ಹೊಸಲೆಕ್ಕ ಪ್ರಾರಂಭವಾಗುವುದು.

ಅಹಂಕಾರ ತತ್ತ್ವದ ಅಂಗವಾದ ಸ್ಮರಣಶಕ್ತಿಯು ಶೇಷದೇವರ ವಶವಾಗಿರುವುದು. ಸಂಸ್ಕಾರಗಳ ಲೆಕ್ಕಿಗರು ಅವರೇ ಸರಿ ಜನ್ಮಾಂತರ ಸಮಯದಲ್ಲಿ ಈ ಸಂಗ್ರಹದ ಲೆಕ್ಕವು ಲಿಂಗಶರಿರದ ಮನಸ್ಸಿನಲ್ಲಿ ಸೇರಿಕೊಳ್ಳುವುದು.

**ಅತಿಸುಲಲಿತ ಗತಿವಿಲಾಸ ವಿಲಸಿತ**
**ರುಚಿರಹಾಸಲೇಶಾವಲೋಕಲೀಲಯಾ ಕಿಂಚಿದುತ್ತಂಭಿತ ಸುಂದರ**
**ಭ್ರೂಮಂಡಲ ಸುಭಗವದನಾರವಿಂದಶ್ರಿಯಾ ರಮಾಂ**
**ರಮಯನ್ನಿಂದ್ರಿಯಾಣಿ ರಮಯತೇ ||೧೬||**

ಅತಿ ಸುಲಲಿತವಿಲಾಸ ವಿಲಸಿತ ರುಚಿರಹಾಸಲೇಶ ಅವಲೋಕ ಲೀಲಯಾ, ಕಿಂಚಿತ್ ಉತ್ತಂಭಿತ ಸುಂದರ ಭ್ರೂಮಂಡಲ ಸುಭಗವದನಾರವಿಂದಶ್ರಿಯಾ, ರಮಾಂ ರಮಯನ್, ಇಂದ್ರಿಯಾಣಿ ರಮಯತೇ = ಅತಿಮನೋಹರವಾದ ನಡೆನುಡಿಗಳ ಕ್ರೀಡೆಯಿಂದ ವಿಜೃಂಭಿಸುವ ಹೃದಯಂಗಮವಾದ ಮುಗುಳ್ನಗೆಯಿಂದ ಕೂಡಿ ಕುಡಿನೋಟವನ್ನು ಬೀರುತ್ತಾ, ಸ್ವಲ್ಪಮಾತ್ರ ಮೇಲೇರಿಸಿದ ಹುಬ್ಬುಗಳ ವೈಖರಿಯುಳ್ಳ ಸುಂದರ ವದನಾರವಿಂದದಿಂದ ರಮಾದೇವಿಯರಿಗೆ ಆನಂದ ಪ್ರದನಾಗುತ್ತಾ ಇಂದ್ರಿಯಗಳಿಗೆ ಸುಖಪ್ರದವಾಗುತ್ತಾನೆ.

ಕಾಮನಾಮಕ ಪರಮಾತ್ಮ ಕೇತುಮಾಲಾ ವರ್ಷದಲ್ಲಿರಲು, ಎಲ್ಲಿ ಯಾರ ಇಂದ್ರಿಯಗಳಿಗೆ ಸುಖಪ್ರದನಾಗುತ್ತಾನೆ. ಎಂದು ಕೇಳಬಹುದು. ಸುಖಪ್ರದನಾಗುವುದು ರಮಾದೇವಿಯ ಇಂದ್ರಿಯಗಳಿಗೋ, ಕೇತುಮಾಲಾವರ್ಷದ ಸ್ತ್ರೀ ಪುರುಷರಿಗೋ ಅಥವಾ ನಮಗೋ? ಇಲ್ಲಿ ಹೇಳಿದ ಎಲ್ಲರಿಗೂ ಸುಖಪ್ರದನೆಂಬುದು ಉತ್ತರ. ಆ ಭಗವಂತ ಸರ್ವವ್ಯಾಪಿ. ಅವನು ರಮಾದೇವಿಯರಲ್ಲಿ ಬಿಂಬನಾಗಿ, ರಮದೇವಿಯಂತೆ ಪ್ರತಿಬಿಂಬಭಾವವನ್ನು ನಟಿಸಿ, ಆಕೆಗೆ ಸುಖ ಪ್ರದನಾಗುತ್ತಾನೆ. ರಮಾದೇವಿಯ ಸಹಿತನಾಗಿ ಆ ವರ್ಷದ ಸ್ತ್ರೀ ಪುರುಷರಿಗೆ ಸುಖ ಕೊಡುತ್ತಾನೆ. ಅವರಲ್ಲಿ ನಿಂತು ರಮಾನಾರಾಯಣರು ನಮ್ಮ ನರನಾಡಿಗಳಿಗೆ ಪ್ರೇರಕರಾಗಿ ನಮಗೂ ಸುಖದಾಯಕರಾಗಿದ್ದಾರೆ. ನಾಡ್ಯಭಿಮಾನಿ ದೇವತೆಗಳು ಕೇತುಮಾಲಾ ವರ್ಷದಲ್ಲಿ ರಮಾನಾರಾಯಣರನ್ನು ಪೂಜಿಸುತ್ತಾ, ಇಲ್ಲಿ ನಮ್ಮ ಶರೀರಗಳಲ್ಲಿ ಇದ್ದು ತಮ್ಮ ಕಾರ್ಯನಿರ್ವಹಣೆ ಮಾಡುತ್ತಾರೆ.

**ತದ್ಭಗವತೋ ಮಾಯಾಮಯಂ ರೂಪಂ ಪರಮಸಮಾಧಿಯೋಗೇನ**
**ರಮಾದೇವೀ ಸಂವತ್ಸರಸ್ಯ ರಾತ್ರಿಷು**
**ಪ್ರಜಾಪತೇರ್ದುಹಿತೃಭಿರುಪೇತಾಹಸ್ಸು ಚ ತದ್ಭರ್ತೃಭಿರುಪಾಸ್ತೇ**
**ಇದಂಚೋದಾಹರತಿ ||೧೭||**

ರಮಾದೇವೀ = ಲಕ್ಷ್ಮೀದೇವಿಯು; ತತ್ ಭಗವತಃ ಮಾಯಾಮಯಂ ರೂಪಂ = ಆ ಭಗವಂತನ ಅದ್ಭುತಶಕ್ತಿಸಂಪನ್ನವಾದ ರೂಪವನ್ನು; ಪರಮಸಮಾಧಿಯೋಗೇನ = ಅಗಾಧವಾದ ಭಾವಪರವಶತೆಯಿಂದ; ಸಂವತ್ಸರಸ್ಯ ರಾತ್ರಿಷು = ಸಂವತ್ಸರಾಂಗಗಳಾದ ರಾತ್ರಿಯಕಾಲಗಳಲ್ಲಿ; ಪ್ರಜಾಪತೇರ್ದುಹಿತೃಭಿಃ ಉಪೇತಾ = ಪ್ರಜಾಪತಿಗಳ ಹೆಣ್ಣುಮಕ್ಕಳೊಡಗೂಡಿ; ಅಹಸ್ಸು = ಹಗಲಿನ ವೇಳೆಗಳಲ್ಲಿ; ತದ್ಭರ್ತೃಭಿಃ = ಅವರ ಪತಿಗಳಲ್ಲಿ ಸನ್ನಿಹಿತಳಾಗಿದ್ದು; ಉಪಾಸ್ತೇ = ಉಪಾಸನೆ ಮಾಡುತ್ತಾಳೆ; ಇದಂಚ ಉದಾಹರತಿ = ಈ ಮುಂದಿನ ಮಂತ್ರವನ್ನು ಪಠಿಸುತ್ತಾಳೆ.

ಇಲ್ಲಿ ಸನ್ನಿಧಾನವೆಂದರೆ ಲಕ್ಷ್ಮೀನಾರಾಯಣರಿಬ್ಬರನ್ನೂ ಚಿಂತಿಸಬೇಕು. ಏಕೆಂದರೆ, ಅವನೊಬ್ಬನೇ ಸ್ವತಂತ್ರಕರ್ತಾ.

**ಓಂಹ್ರಾಂಹ್ರೀಂ ಹ್ರೂಂ ಓಂ ನಮೋ ಭಗವತೇ ಹೃಷೀಕೇಶಾಯ**
**ಸರ್ವಗುಣವಿಶೇಷೈರ್ವಿಲಕ್ಷಿತಾತ್ಮನೇ ಆಕೂತೀನಾಂ ಚಿತ್ತೀನಾಂ**
**ಚೇತಸಾಂ ವಿಶೇಷಾಂಚಾಧಿಪತಯೇ**
**ಷೋಡಶಕಲಾಯಚ್ಛಂದೋಮಯಾಯಾನ್ನಮಯಾ**
**ಯಾಮೃತಮಯಾಯ ಸಹಸೇ ಓಜಸೇ ಬಲಾಯ ಕಾಂತಾಯ**
**ಕಾಮಾಯ ನಮಸ್ತೇ ಉಭಯತ್ರ ಭೂಯಾತ್** ॥೧೮॥

'ಹೃಷೀಕೇಶ' ಎಂದರೆ, ಇಂದ್ರಿಯಗಳಿಗೆ ಯಜಮಾನ; ಆಕೂತೀನಾಂ = ಕ್ರಿಯಾಕಲಾಪಗಳಿಗೆ; ಚಿತ್ತೀನಾಂ = ಮನೋವ್ಯಾಪಾರಗಳಿಗೆ; ಚೇತಸಾಂ = ಪ್ರಾಣಶಕ್ತಿಗಳಿಗೆ; ವಿಶೇಷಾಣಾಂ = ದೈಹಿಕ ಶಕ್ತಿಗಳಿಗೆ; ಅಧಿಪತಯೇ = ಒಡೆಯನಾದ; ಷೋಡಶಕಲಾಯ ಪಂಚಭೂತಗಳ(೫), ದಶೇಂದ್ರಿಯಗಳ (೧೦) ಮತ್ತು ಮನಸ್ಸಿನ(೧) ವ್ಯಾಪಾರಗಳಿಗೆ ಕಾರಣನಾದ; ಛಂದೋಮಯಾಯ = ವೇದಸ್ವರೂಪನಾದ; ಅನ್ನಮಯಾಯ = ಭುಜಿಸುವ ಆಹಾರ ಪದಾರ್ಥಗಳಲ್ಲಿ ತತ್ತದ್ರೂಪನಾಗಿರುವ; ಅಮೃತಮಯಾಯ = ಅಮೃತಪ್ರಾಯನಾದ; ಸಹಸೇ = ಕ್ಷಮಾಶೀಲನಾದ; ಓಜಸೇ = ಬುದ್ಧಿಪ್ರದನಾದ; ಬಲಾಯ = ಬಲಪ್ರದನಾದ; ಕಾಂತಾಯ = ಮನೋಹರನಾದ; ಕಾಮಾಯ = ಇಷ್ಟಪ್ರದನಾದ; ತೇಭಗವತೇ = ಭಗವಂತನಾದ ನಿನಗೆ; ನಮಃ = ನಮಸ್ಕಾರ; ಉಭಯತ್ರ = ಇಹಪರ ಗಳೆರಡರಲ್ಲಿಯೂ; ಭೂಯಾತ್ = ನಿನ್ನ ಅನುಗ್ರಹವುಂಟಾಗಲಿ.

'ಹ್ರಾಂಹ್ರೀಂಹ್ರೂಂ' ಎಂಬುವು ದುಷ್ಟಶಕ್ತಿನಿವಾರಕಗಳೂ ಇಷ್ಟಪ್ರಾಪಕಗಳೂ ಆದ ಬೀಜಮಂತ್ರಗಳು.

ರಮ್ಯಕೇಚ ಭಗವತಃ ಪ್ರಿಯತಮಂ ಮಾತ್ಸ್ಯಮವತಾರರೂಪಂ ತದ್ವರ್ಷ ಪುರುಷಸ್ಯ ಮನೋಃ ಪ್ರಾಕ್ಪ್ರದರ್ಶಿತಂ ಸ ಇದಾನೀಮಪಿ ಮಹತಾ ಭಕ್ತಿಯೋಗೇನಾರಾಧಯತೀದಂ ಚೋದಾಹರತಿ ||೨೪||

ರಮ್ಯಕೇ ಚ = ರಮ್ಯಕ ವರ್ಷದಲ್ಲಿಯೂ; ತದ್ವರ್ಷ ಪುರುಷಸ್ಯ = ಆವರ್ಷದ ಅಧಿಪತಿಯಾದ್ದ; ಮನೋಃ = ಮನುಚಕ್ರವರ್ತಿಗೆ; ಪ್ರಾಕ್ದರ್ಶಿತಂ = ಹಿಂದೆ ಜಲಪ್ರಳಯ ಕಾಲದಲ್ಲಿ ತೋರಿಸಿದ; ಪ್ರಿಯತಮಂ = ಅತ್ಯಂತ ಭಕ್ತಿ ಪ್ರಚೋದಕವಾದ; ಮಾತ್ಸ್ಯಂ ಅವತಾರ ರೂಪಂ = ಮಾತ್ಸ್ಯವತಾರ ರೂಪಿಯಾದ ಭಗವಂತನನ್ನು; ಸಃ = ಆ ಮನು ಚಕ್ರವರ್ತಿಗಳು; ಇದಾನೀಂ ಅಪಿ = ಈಗಲೂ ಕೂಡ; ಮಹತಾ ಭಕ್ತಿಯೋಗೇನ =ಅತ್ಯಂತ ಭಕ್ತಿಭಾವದಿಂದ; ಆರಾಧಯತಿ = ಪೂಜಿಸುತ್ತಾರೆ; ಇದಂಚ ಉದಾಹರತಿ = ಈ ಮಂತ್ರವನ್ನು ಜಪಿಸುತ್ತಾರೆ.

"ಓಂ ನಮೋ ಭಗವತೇ ಮುಖ್ಯತಮಾಯ ನಮಃ ಸತ್ವಾಯ ಪ್ರಾಣಾಯೌಜಸೇ ಸಹಸೇ ಬಲಾಯ ಮಹಾ ಮತ್ಸ್ಯಾಯ ನಮ ಇತಿ" ||೨೫||

ಈ ಮನುಚಕ್ರವರ್ತಿಗಳು ಮತ್ಸ್ಯಮೂರ್ತಿಯ ಧ್ಯಾನನಿರತರಾಗಿ ರಮ್ಯಕ ವರ್ಷದಲ್ಲಿದ್ದರೂ, ರೂಪಾಂತರಗಳಿಂದ ಭರತವರ್ಷದಲ್ಲಿ ಕಾಲೋಚಿತ ಧರ್ಮಪ್ರವರ್ತಕರಾಗಿದ್ದಾರೆ.

ಭವಾನ್ ಯುಗಾಂತಾರ್ಣವ ಊರ್ಮಿಮಾಲಿನಿ
ಕ್ಷೋಣೀಮಿಮಾಮೋಷಧಿ ವೀರುಧಾಂ ನಿಧಿಂ ।
ಮಯಾ ಸಹೋರುಕ್ರಮ ಊಹ ಓಜಸಾ ತಸ್ಮೈ
ಜಗತ್ಪ್ರಾಣಗಣಾತ್ಮನೇ ನಮಃ ಇತಿ ||೨೬||

ಭವಾನ್ = ಸ್ವಾಮೀ, ನೀನು; ಯುಗಾಂತಾರ್ಣವ ಊರ್ಮಿಮಾಲಿನಿ = ಯುಗಪ್ರಳಯ ಕಾಲದಲ್ಲುಬ್ಬಿದ ಸಮುದ್ರದಲೆಗಳ ಸಂದಣಿಯಲ್ಲಿ; ಓಷಧಿ ವೀರುಧಾಂನಿಧಿಂ = ಆಹಾರ ಸಸ್ಯಗಳ ಮತ್ತು ವನಸ್ಪತಿಗಳ ನಿಧಿಯಾದ; ಇಮಾಂ ಕ್ಷೋಣೀಂ = ಈ ಭೂಮಿಯನ್ನು; ಮಯಾಸಹ = ನನ್ನೊಡನೆ; ಹೇ ಉರುಕ್ರಮ = ಮಹಾ ಪರಾಕ್ರಮಶಾಲಿಯಾದ ನೀನು; ಓಜಸಾ = ನಿನ್ನ ಪ್ರಭಾವದಿಂದ; ಊಹ = ಎತ್ತಿಹಿಡಿದಿದ್ದೆ; ಜಗತ್ಪ್ರಾಣಾತ್ಮನೇ = ಜಗತ್ತಿನ ಪ್ರಾಣಿಗಳಿಗೆಲ್ಲಾ ಪ್ರಾಣಾಧಾರ ಸ್ವರೂಪನಾದವನೇ; ತಸ್ಮೈ = ಆ ನಿನಗೆ; ನಮಃ = ನಮಸ್ಕಾರ; ಇತಿ = ಹೀಗೆಂದು ಸ್ತುತಿಸುತ್ತಾರೆ.

ಈಗಿನ ಏಷ್ಯಾಮೈನರ್ ಪ್ರದೇಶವೇ ನೌಕೆಯ ರೂಪವನ್ನು ತಾಳಿ ಮತ್ಸ್ಯ ಮೂರ್ತಿಯಿಂದ ರಕ್ಷಿತವಾದುದು.

**ಹಿರಣ್ಮಯೇಪಿ ಭಗವಾನ್ನಿವಸತಿ ಕೂರ್ಮತನುಂ ಭಿಭ್ರಾಣಸ್ತಸ್ಯ**
**ತತ್ಪ್ರಿಯತಮಾಂ ತನುಮರ್ಯಮಾ ಸಹವರ್ಷಪುರುಷೈಃ**
**ಪಿತೃಗಣಾಧಿಪತಿರುಪಧಾವತಿ ಮಂತ್ರಮಿಮಂಚಾನುಜಪತಿ ॥೨೯॥**

ಹಿರಣ್ಮಯೇ ಅಪಿ = ಅದೇ ರೀತಿಯಾಗಿ ಹಿರಣ್ಮಯ ವರ್ಷದಲ್ಲಿ; ಭಗವಾನ್ = ಭಗವಂತನು; ಕೂರ್ಮತನುಂ ಬಿಭ್ರಾಣಃ = ಕೂರ್ಮರೂಪವನ್ನು ತಾಳಿ; ನಿವಸತಿ = ಸನ್ನಿಹಿತನಾಗಿದ್ದಾನೆ; ಪಿತೃಗಣಾಧಿಪತಿಃ ಅರ್ಯಮಾ = ಪಿತೃದೇವತೆಗಳ ಗುಂಪಿಗೆ ಯಜಮಾನರಾದ ಅರ್ಯಮರು; ಸಹವರ್ಷಪುರುಷೈಃ = ಹಿರಣ್ಮಯ ವರ್ಷದ ಪ್ರಜೆಗಳಿಂದ ಕೂಡಿ; ತತ್ ಪ್ರಿಯತಮಾಂ ತನುಂ = ಬಹುಪ್ರಿಯವಾದ ಆ ಕೂರ್ಮರೂಪೀ ಪರಾತ್ಮನನ್ನು; ಉಪಧಾವತಿ = ಪೂಜಿಸುತ್ತಾರೆ; ಇಮಂ ಮಂತ್ರಂಚ ಅನುಜಪತಿ = ಈ ಮಂತ್ರವನ್ನು ಶ್ರದ್ಧೆಯಿಂದ ಜಪಿಸುತ್ತಾರೆ.

ನೀರು ಸರ್ವರಿಗೂ ಪ್ರಾಣಾಧಾರ. ಜಲಚರ ಪ್ರಾಣಿಯಂತೆ ತೋರಿಕೊಂಡ ಮತ್ಸ್ಯರೂಪೀ ಪರಮಾತ್ಮ ಎಲ್ಲರಿಗೂ ಪ್ರಾಣಾಧಾರ. ಆಮೆಯು ತನ್ನ ಅವಯವಗಳನ್ನು ಚಿಪ್ಪಿನೊಳಗೆಳೆದುಕೊಂಡು ತನ್ನನ್ನು ರಕ್ಷಿಸಿಕೊಳ್ಳುತ್ತದೆ. ಅದರಂತೆ ಕೂರ್ಮರೂಪೀ ಪರಮಾತ್ಮನು ಜೀವರಿಗೆ ರಕ್ಷಕನಾಗಿದ್ದಾನೆ. ಜೀವಂತರಾದ ಜನರನ್ನೂ, ಅವರ ಪಿತೃಗಳನ್ನೂ ರಕ್ಷಿಸಲು ಸಿದ್ಧರಾಗಿರುವವರು ಪಿತೃ ದೇವತೆಗಳು. ಆದುದದರಿಂದ ಅವರು ಸರ್ವರಕ್ಷಕನಾದ ಕೂರ್ಮವತಾರಿಯನ್ನು ಭಜಿಸುತ್ತಾರೆ.

ಮಂತ್ರ :– **"ಓಂ ನಮೋ ಭಗವತೇ ಅಕೂಪಾರಾಯ ಸರ್ವಸತ್ವ ಗುಣವಿಶೇಷಣಾಯಾನುಪಲಕ್ಷಿತ ಸ್ಥಾನಾಯ ನಮೋ ವರ್ಷ್ಮಣೇ ನಮೋ ಭೂಮ್ನೇ ನಮೋ ನಮೋವಸ್ಥಾನಾಯ ನಮಸ್ತೇ"** ಅಕೂಪಾರ = ಆಮೆ; ವರ್ಷ್ಮಣೇ = ಕಾಲಾತೀತನಾದವನಿಗೆ. ॥೩೦॥

**ಉತ್ತರೇಷುಚ ಕುರುಷು ಭಗವಾನ್ ಯಜ್ಞಪುರುಷಃ ಕೃತವರಾಹರೂಪ**
**ಅಸ್ತೇ ತಂತು ದೇವೀಹೈಷಾ ಭೂಃ ಸಹಕುರುಭಿರಸ್ಖಲಿತ**
**ಭಕ್ತಿಯೋಗೇನೋಪಧಾವತಿ ಇಮಾಂ ಚ**
**ಪರಮಾಮುಪನಿಷದಮಾವರ್ತಯತಿ ॥೩೪॥**

ಉತ್ತರೇಷು ಕುರುಷುಚ = ಉತ್ತರ ಕುರುವರ್ಷದಲ್ಲಿಯೂ; ಕೃತವರಾಹರೂಪಃ = ವರಾಹರೂಪಧಾರಿಯಾದ; ಭಗವಾನ್ ಯಜ್ಞಪುರುಷಃ = ಯಜ್ಞಸ್ವರೂಪಿಯಾದ

ಭಗವಂತನು; ಆಸ್ತೇ = ಪ್ರಕಟನಾಗಿದ್ದಾನೆ; ತಂತು = ಆ ರೂಪದಿಂದಿರುವ ಭಗವಂತನ್ನೇ; ದೇವೀ = ಭೂದೇವಿಯು; ಸಹ ಕುರುಭಿಃ = ಕುರುವರ್ಷದ ಪ್ರಜೆಗಳಿಂದ ಕೂಡಿ; ಅಸ್ಖಲಿತ ಭಕ್ತಿಯೋಗೇನ = ಏಕಪ್ರಕಾರವಾದ ಭಕ್ತಿಭಾವದಿಂದ; ಉಪಧಾವತಿ ಹ = ಉಪಾಸನೆ ಮಾಡುತ್ತಿರುವಳೆಂಬುದು ಸತ್ಯ ಸಂಗತಿ; ಇಮಾಂ ಪರಮಾಂ ಉಪನಿಷದಂ ಚ ಆವರ್ತಯತಿ = ಉಪನಿಷದ್ರಹಸ್ಯ ಯುಕ್ತವಾದ ಈ ಮಂತ್ರವನ್ನು ಜಪಿಸುತ್ತಾಳೆ.

ಯಜ್ಞ ಸಾಮಗ್ರಿಗಳೆಲ್ಲದರ ಉತ್ಪತ್ತಿಸ್ಥಾನ, ಶ್ರೀವರಾಹರೂಪಿಯ ದೇಹ; ಯಜ್ಞಕ್ರಿಯೆಗಳು ನಡೆಯುವುದು ಆ ಮಹಾನುಭಾವನ ಪ್ರೇರಣೆಯಿಂದ; ಯಜ್ಞ ಫಲವನ್ನು ಸ್ವೀಕಾರ ಮಾಡಿ ಯಜ್ಞಕರ್ತರಿಗೆ ಫಲನೀಡುವವನೂ ಅವನೇ ಆದುದರಿಂದ ವರಾಹರೂಪೀ ಪರಮಾತ್ಮ ಯಜ್ಞಪುರಷ ಎನಿಸಿದ್ದಾನೆ.

ಮಂತ್ರ:- **"ಓಂ ನಮೋಭಗವತೇ ಮಂತ್ರತತ್ತ್ವಲಿಂಗಾಯ ಯಜ್ಞಕ್ರತವೇ ಮಹಾಧ್ವರಾವಯವಾಯ ಮಹಾಪುರಷಾಯ ನಮಃ ಕರ್ಮಶುಕ್ಲಾಯ ತ್ರಿಯುಗಾಯ ನಮಸ್ತೇ" ||೩೫||**

ಮೇಲೆ ವಿವರಿಸಿರುವುದು ಈ ಮಂತ್ರಾರ್ಥವೇ ಆಗಿದೆ. ಮಂತ್ರತತ್ತ್ವಲಿಂಗ = ಮಂತ್ರ ಸ್ವರೂಪ; ಕರ್ಮ ಶುಕ್ಲ = ಪರಿಶುದ್ಧ ಕರ್ಮಸ್ವರೂಪ; ತ್ರಿಯುಗ = ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಮಾತ್ರ ಅವತಾರಗಳನ್ನು ಸ್ವೀಕರಿಸುವವನು.

ಸ್ತೋತ್ರ : **ಪ್ರಮಥ್ಯ ದೈತ್ಯಂ ಪ್ರತಿವಾರಣಂ ಮೃಧೇ ಯೋಮಾಂರಸಾಯಾ ಜಗದಾದಿಸೂಕರಃ । ಕೃತ್ವಾಗ್ರದಂಷ್ಟ್ರೇ ನಿರಗಾದುದನ್ವತಃ ಕ್ರೀಡನ್ನಿವೇಭಃ ಪ್ರಣಾತಾಸ್ಮಿತಂ ವಿಭುಂ, ಇತಿ ||೩೬||**

ಪ್ರತಿವಾರಣಂ = ಎದುರಿಸಿದ; ದೈತ್ಯಂ = ರಕ್ಕಸನನ್ನು; ಮೃಧೇ = ಕಳಗದಲ್ಲಿ; ಪ್ರಮಥ್ಯ = ಧ್ವಂಸಮಾಡಿ; ಯಃ ಜಗಾದಾದಿ ಸೂಕರಃ = ಯಾವ ಆದಿವರಾಹ ರೂಪೀ ಭಗವಂತ; ರಸಾಯಾಃ = ರಸಾತಳ ಲೋಕದಿಂದ; ಮಾಂ = ನನ್ನನ್ನು; ದ್ರಂಷ್ಟಾಗ್ರೇ ಕೃತ್ವಾ = ಕೋರೆದಡೆಯ ತುದಿಯಂದ ಎತ್ತಿಕೊಂಡು; ಕ್ರೀಡನ್ ಇಭಃ ಇವ = ಆಟದಲ್ಲಿ ತೊಡಗಿದ ಆನೆಯಂತೆ; ಉದನ್ವತಃ = ಸಮುದ್ರದೊಳಗಿಂದ; ನಿರಗಾತ್ = ಹೊರಬಂದನೋ ಅಂತಹ; ತಂ ವಿಭುಂ = ಆ ಸರ್ವೇಶ್ವರನನ್ನು; ಪ್ರಣತಾಸ್ಮಿ = ನಮಸ್ಕರಿಸುತ್ತೇನೆ; ಇತಿ = ಹೀಗೆಂದು ಭೂದೇವಿಯು ಸ್ತೋತ್ರ ಮಾಡುವಾಗ ಹಿರಣ್ಯಾಕ್ಷ ವಧೆಯ ಚರಿತ್ರೆಯನ್ನೆಲ್ಲಾ ಸ್ಮರಿಸಿಕೊಂಡು ಶ್ರೀಹರಿಯ ಮಹಿಮೆಯನ್ನು ಕುರಿತು ಧ್ಯಾನಮಾಡುತ್ತಾ ಹಿಗ್ಗುವಳು.

## ೧೮ನೇ ಅಧ್ಯಾಯ ಮುಗಿಯಿತು.

# ಶ್ರೀಮದ್ಭಾಗವತ
## ಅಧ್ಯಾಯ - ಹತ್ತೊಂಭತ್ತು

**ಕಿಂಪುರುಷೇ ವರ್ಷೇ ಭಗವಂತಮಾದಿ ಪುರುಷಂ ಲಕ್ಷ್ಮಣಾಗ್ರಜಂ**
**ಸೀತಾಭಿರಾಮಂ ರಾಮಂ ತಚ್ಚರಣ ಸನ್ನಿಕರ್ಷಾಭಿರತಃ**
**ಪರಮಭಾಗವತೋ ಹನುಮಾನ್**
**ಸಹಕಿಂಪುರುಷವರ್ಷೈರವಿರತಭಕ್ತಿರುಪಾಸ್ತೇ**

ಕಿಂಪುರುಷವರ್ಷೇ = ಕಿಂಪುರುಷ ವರ್ಷದಲ್ಲಿ; ಲಕ್ಷ್ಮಣಾಗ್ರಜಂ ಲಕ್ಷ್ಮಣನಣ್ಣನಾದ; ಸೀತಾಭಿರಾಮಂ = ಸೀತಾದೇವಿಗೆ ಪ್ರಿಯನಾದ; ಆದಿಪುರುಷಂ = ಆದ್ಯರಿಗೆಲ್ಲಾ ಆದಿ ಪುರುಷನಾದ; ಭಗವಂತಂ ರಾಮಂ = ಭಗವಂತನಾದ ಶ್ರೀರಾಮಚಂದ್ರನನ್ನು; ತಚ್ಚರಣ ಸನ್ನಿಕರ್ಷ ಅಭಿರತಃ = ಆ ಮಹಾನುಭಾವನ ಚರಣ ಸಾಮೀಪ್ಯದಿಂದ ಭಾವಪರವಶನಾದ; ಪರಮಭಾಗವತಃ = ಭಾಗವತೋತ್ತಮನಾದ; ಹನುಮಾನ್ = ಹನುಮಂತ ದೇವರು; ಕಿಂಪುರುಷವರ್ಷೈಃ ಸಹ = ಕಿಂಪುರುಷ ವರ್ಷದ ಪ್ರಜೆಗಳಿಂದೊಡಗೂಡಿ; ಅವಿರತ ಭಕ್ತಿಃ = ನಿಲುಗಡೆ ಇಲ್ಲದ ನಿರಂತರ ಭಕ್ತಿಯಿಂದ; ಉಪಾಸ್ತೇ = ಉಪಾಸಿಸುತ್ತಾರೆ.

ಕಿಂಪುರುಷ ವರ್ಷೇ ಪ್ಲಕ್ಷಖಂಡೇ, ಎಂದು ಪುರಾಣಾಂತರದಲ್ಲಿ ಹೇಳಿರುವ ಮಾತು ಗಮನಾರ್ಹವಾದುದು. ಖಂಡ ಎಂಬುದು, ವಿಶಾಲವಾದ ವರ್ಷದ ಒಂದು ಭಾಗ ಮಾತ್ರ. ಪ್ಲಕ್ಷಖಂಡದಲ್ಲಿ, ಪಾರಿಜಾತರುಮೂಲದಲ್ಲಿ ಕುಳಿತು ಹನುಮಂತ ದೇವರು ರಾಮಧ್ಯಾನ ಪರಾಯಣರಾಗಿದ್ದಾರೆ.

ಇದರಂತೆ ಭರತಖಂಡ ಎಂಬುದು 9000 ಯೋಜನ (55000 ಮೈಲಿ) ವಿಸ್ತಾರವಾದ ಭರತವರ್ಷದ ಒಂದು ಗೋಳಾಕೃತಿಯ ತುಂಡು ಮಾತ್ರ. ಅದೇ ನಮ್ಮ ಭೂಗೋಳ.

**ಆರ್ಷ್ಟಿಷೇಣೇನ ಸಹ ಗಂಧರ್ವೈರನುಗೀಯಮಾನಾಂ ಪರಮಕಲ್ಯಾಣೀಂ**
**ಭರ್ತೃ ಭಗವತ್ಕಥಾಂ ಸಮುಪಶೃಣೋತಿ ಸ್ವಯಂಚ ಇದಂ ಗಾಯತಿ**
**॥೨॥**

ಆರ್ಷ್ಟಿಷೇಣೇನ ಸಹ = ಕಿಂಪುರವರ್ಷದ ಪ್ರಧಾನಪುರುಷನಾದ ಆರ್ಷ್ಟಿಷೇಣ ನೊಡನೆ; ಗಂಧರ್ವೈಃ = ಗಾನವಿಶಾರದರಾದ ಗಂಧರ್ವ ಕುಲದವರಿಂದ; ಗೀಯಮಾನಾಂ = ಹಾಡಲ್ಪಡುವ; ಪರಮಕಲ್ಯಾಣೀಂ = ಬಹು ಮಂಗಳದಾಯಕವಾದ; ಭರ್ತೃಭಗವತ್ಕಥಾಂ = ತನ್ನೊಡೆಯನಾದ ಭಗವಾನ್ ಶ್ರೀ ರಾಮಚಂದ್ರನ ದಿವ್ಯ ಚರಿತ್ರೆಯನ್ನು; ಸಮುಪಶೃಣೋತಿ = ಆನಂದದಿಂದ ಆಲಿಸುತ್ತಾರೆ; ಸ್ವಯಂ = ತಾವು; ಇದಂ ಚ ಗಾಯತಿ = ಮುಂದೆ ಹೇಳುವ ಮಂತ್ರವನ್ನು ಪಠಿಸುತ್ತಾರೆ.

**"ಓಂ ನಮೋ ಭಗವತೇ ಉತ್ತಮ ಶ್ಲೋಕಾಯ ನಮ ಆರ್ಯ**
**ಲಕ್ಷಣ ಶೀಲವ್ರತಾಯ ನಮ ಉಪಶಿಕ್ಷಿತಾತ್ಮನ ಉಪಾಸಿತ**
**ಲೋಕಾಯ ನಮಃ ಸಾಧುವಾದ ನಿಕಷಣಾಯ ನಮೋ ಬ್ರಹ್ಮಣ್ಯ**
**ದೇವಾಯ ಮಹಾಪುರುಷಾಯ ಮಹಾರಾಜಾಯ ನಮ" ಇತಿ ।।೩।।**

ಉತ್ತಮ ಶ್ಲೋಕಾಯ = ದಿವ್ಯ ಕೀರ್ತಿಶಾಲಿಯಾದವನಿಗೆ; ಆರ್ಯಲಕ್ಷಣ ಶೀಲವ್ರಾತಯ = ವೈದಿಕ ಮಾರ್ಗಾನುಸರಣೆಯೇ ವ್ರತವಾಗಿ ಉಳ್ಳವನಿಗೆ; ಉಪಶಿಕ್ಷಿತಾತ್ಮನೇ = ಗುರುಕುಲವಾಸದ ರೀತಿನೀತಿಗಳಿಗೆ ಆದರ್ಶಪ್ರಾಯನಾದ; ಬ್ರಹ್ಮಣ್ಯದೇವಾಯ = ಬ್ರಾಹ್ಮಣರನ್ನು ದೇವರಂತೆ ಕಾಣುವ; ಸಾಧುವಾದ ನಿಕಷಣಾಯ = ಸತ್ಪುರುಷರೆನ್ನುವವರಿಗೆ ಒರೆಗಲ್ಲಿನಂತಿರುವ;

"ನರವತ್ಪ್ರವೃತ್ತಿಯ ತೋರಿದನು ಜಗಕೆ" ಎಂಬ ಉಕ್ತಿಯು ಇಲ್ಲಿ ಸಾರ್ಥಕವಾಗಿದೆ. ಮಾನವರಾಗಿ ಜನಿಸಿದ ಸಾಮಾನ್ಯರಿಗೂ ರಾಜಮಹಾರಾಜರಿಗೂ ಆದರ್ಶಪ್ರಾಯನಾಗಿ ಶ್ರೀರಾಮಚಂದ್ರನು ಬಾಳಿದನು, ಆಳಿದನು ಎಂಬುದು ಈ ಮಂತ್ರದಲ್ಲಿ ಅಡಕವಾಗಿದೆ. ಇದನ್ನು ಪಠಿಸುವವರು ಆದರ್ಶಪುರುಷರಾಗುತ್ತಾರೆ. ಸಕಲ ಸನ್ಮಂಗಳಗಳನ್ನೂ ಪಡೆಯುತ್ತಾರೆ.

ಮುಂದಿನ ಶ್ಲೋಕವು ಈ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತದೆ.

**ಮರ್ತ್ಯಾವತಾರ ಸ್ತ್ವಿಹ ಮರ್ತ್ಯ ಶಿಕ್ಷಣಂ ರಕ್ಷೋವಧ್ಯಾಯೈವ ನ**
**ಕೇವಲಂ ವಿಭೋಃ। ಕುತೋನ್ಯಥಾಸ್ಯಾದ್ರಮತಃ ಸ್ವ ಆತ್ಮನಃ**
**ಸೀತಾಕೃತಾನಿ ವ್ಯಸಾನೀಶ್ವರಸ್ಯ ।।೪।।**

ಇಹ ವಿಭೋಃ ಮರ್ತ್ಯಾವತಾರಃ ತು = ಸರ್ವಸಮರ್ಥನಾದ ಭಗವಂತನು ನರರಂತೇ ಶ್ರೀರಾಮ ರೂಪದಿಂದ ಅವತರಿಸಿದುದು; ಕೇವಲ ರಕ್ಷೋವಧಾಯ ಏವನ = ಕೇವಲ ರಾಕ್ಷಸರ ಸಂಹಾರಕ್ಕಾಗಿ ಮಾತ್ರವಲ್ಲ; ಸ್ವ ಆತ್ಮನಃ ರಮತಃ =



ಭರತವರ್ಷ-ಭರತಖಂಡ (ನಮ್ಮ ಭೂಗೋಳ)
Bharata Varsha–Bharata Khanda (our Globe)



ನಮ್ಮ ಭೂಗೋಳದ ಬೃಹಚ್ಚಿತ್ರ – Our Globe (enlarged picture)

ಅನ್ಯಾಪೇಕ್ಷೆ ಇಲ್ಲದೆ ತನ್ನಲ್ಲಿ ತಾನು ರಮಿಸತಕ್ಕ; ಈಶ್ವರಸ್ಯ =ಸ್ವಾಮಿಗೆ; ಸೀತಾಕೃತಾನಿ = ಸೀತಾ ದೇವಿಯ ನಿಮಿತ್ತದಿಂದ ಆದ; ವ್ಯಸನಾನಿ =ದುಃಖ ಮೊದಲಾದವು; ಕುತಃ ಅನ್ಯಥಾಸ್ಯಾತ್ = ಬೇರೆ ಯಾವ ಕಾರಣದಿಂದ ತಾನೇ ಉಂಟಾದೀತು?

ಸೀತಾಪಹರಣ, ಹುಡುಕುವಿಕೆ, ಶತ್ರುವಧೆ ಮುಂತಾದುವು ಜನಸಾಮಾನ್ಯರಿಗೆ ಉಂಟಾಗಬಹುದಾದ ಉಪಟಳಗಳು. ಅಂತಹ ಸಂದರ್ಭಗಳು ಜನರು ಹೇಗೆ ವರ್ತಿಸಬಹುದು, ವರ್ತಿಸಬೇಕು ಎಂಬುದನ್ನು ಶ್ರೀರಾಮಚಂದ್ರನು ತನ್ನ ಆದರ್ಶದಿಂದ ತಿಳಿಸಿಕೊಟ್ಟಿದ್ದಾನೆ.

**ಭಾರತೇಪಿ ವರ್ಷೇ ಭಗವಾನ್ನರ ನಾರಾಯಣಾಖ್ಯ**
**ಆಕಲ್ಪಾಂತಮುಪಚಿತ ಧರ್ಮಜ್ಞಾನ**
**ವೈರಾಗ್ಯೈಶ್ವರ್ಯೋಪಶಮೋಪರಮಾತ್ಮೋಪಲಂಭನ**
**ಮನುಗ್ರಹಾಯಾತ್ಮವತಾಮನುಕಂಪಯಾ ತಪೋವ್ಯಕ್ತಗತಿಶ್ಚರತಿ ॥೯॥**

ಭಾರತೇವರ್ಷೇ ಅಪಿ = ಭಾರತ ವರ್ಷದಲ್ಲಿಯೂ; ಅವ್ಯಕ್ತಗತಿಃ = ಇತರರು ಕಾಣಲಾಗದ ಸ್ವರೂಪ ವ್ಯಾಪಾರವುಳ್ಳ; ಭಗವಾನ್ = ಕಲ್ಯಾಣ ಗುಣಪೂರ್ಣನಾದ ಶ್ರೀಹರಿಯು; ನರನಾರಾಯಣ ಆಖ್ಯಃ = ನರ–ನಾರಾಯಣ ಎಂಬ ಹೆಸರುಳ್ಳವನಾಗಿ; ಆಕಲ್ಪಾಂತಂ = ಈ ಮನುಕಲ್ಪ ಮುಗಿಯವವರೆಗೆ; ಉಪಚಿತ = ದಿನದಿನಕ್ಕೂ ಅಭಿವೃದ್ಧಿಯಾಗುವ; ಧರ್ಮ = ಧರ್ಮಾಚರಣೆ; ಜ್ಞಾನ = ತತ್ತ್ವಜ್ಞಾನ; ವೈರಾಗ್ಯ = ಪ್ರಪಂಚದಲ್ಲಿ ನಿಸ್ಸಾರಬುದ್ಧಿ; ಐಶ್ವರ್ಯ = ಅಣಿಮಾದಿ ಐಶ್ವರ್ಯ; ಉಪಶಮ = ಶಾಂತಿ; ಉಪರಮ = ಲೌಕಿಕ ಹವ್ಯಾಸಗಳ ನಿವೃತ್ತಿ; ಆತ್ಮೋಪಲಂಭನಂ = ಆತ್ಮ ನಿಷ್ಠೆ, ಮುಂತಾದ ಲಕ್ಷಣಗಳಿಂದ ಕೂಡಿದ; ತಪಃ =ತಪಶ್ಚರ್ಯೆಯನ್ನು; ಅನುಕಂಪಯಾ = ಕರುಣೆಯಿಂದ; ಆತ್ಮವತಾಂ ಅನುಗ್ರಹಾಯ = ಆತ್ಮವಂತರಾದ ಸುಜನರಲ್ಲಿ ಅನುಗ್ರಹವನ್ನು ಬೀರುವುದಕ್ಕಾಗಿ; ಚರತಿ =ಆಚರಿಸುತ್ತಿದ್ದಾನೆ.

ಭಗವಂತನಿಗೆ ತಪಶ್ಚರ್ಯೆಯ ಆಗತ್ಯವಿಲ್ಲ. ಯೋಗ್ಯರಾದ ಸುಜನರಿಗೆ ತಪಶ್ಚರ್ಯೆಯ ವಿಧಾನವನ್ನು ಕಲಿಸಿ ಅವರನ್ನು ಉದ್ಧರಿಸುವುದಕ್ಕಾಗಿ ತಪಶ್ಚರ್ಯೆಯನ್ನು ಆಚರಿಸಿ ತೋರಿಸುತ್ತಿದ್ದಾನೆ. 'ನಾರಾಯಣ' ಎಂಬ ರೂಪದಲ್ಲಿರುವುದು ಸಾಕ್ಷಾತ್ ಶ್ರೀಹರಿಯೆ. 'ನರ' ಎಂಬ ರೂಪದಲ್ಲಿರುವುದು ಶೇಷದೇವರಲ್ಲಿ ಶ್ರೀಹರಿಯ ವಿಶೇಷಾಂಶ. ಅಲ್ಲಿ ಬಿಂಬನಾಗಿ ಶ್ರೀಹರಿಯು ತಪಸ್ಸನ್ನಾಚರಿಸುತ್ತಿರಲು, ಶೇಷದೇವರು ಪ್ರತಿಬಿಂಬತ್ವೇನ ತಪಸ್ಸಿನ ಪೂರ್ಣಫಲಭಾಗಿಗಳಾಗುವರು.

**ತಂ ಭಗವಾನ್ನಾರದೋ ವರ್ಣಾಶ್ರಮವತೀಭಿರ್ಭಾರತೀಭಿಃ**
**ಪ್ರಜಾಭಿರ್ಭಗವತ್ಪ್ರೋಕ್ತಾಭ್ಯಾಂ ಸಾಂಖ್ಯಯೋಗಾಭ್ಯಾಂ ಭಗವದನು**

ಭಾವೋಪವರ್ಣನಂ ಸಾವರ್ಣೇರುಪದೇಕ್ಷ್ಯಮಾಣಃ
ಪರಮಭಕ್ತಿಭಾವೇನೋಪಸರತಿ ಇದಂ ಚಾಭಿಗೃಣಾತಿ ॥೧೦॥

ಭಗವಾನ್ ನಾರದಃ = ಪರಮಜ್ಞಾನ ಸಂಪನ್ನರಾದ ನಾರದರು; ವರ್ಣಾಶ್ರಮ ವತೀಭಿಃ = ಚಾತುರ್ವರ್ಣ್ಯ ಚತುರಾಶ್ರಮಗಳ ನಿಯಮಗಳಿಂದ ಬದ್ಧರಾದ; ಭಾರತೀಭಿಃ ಭರತವರ್ಷದ ಯೋಗ್ಯ ಪ್ರಜೆಗಳಿಂದ ಕೂಡಿಕೊಂಡು; ಭಗವತ್ ಪ್ರೋಕ್ತಾಭ್ಯಾಂ =ಭಗವಂತನಿಂದ ಉಪದೇಶಿಸಲ್ಪಡುವ; ಸಾಂಖ್ಯಯೋಗಾಭ್ಯಾಂ = ಜ್ಞಾನ ಮಾರ್ಗ ಯೋಗ(ಕರ್ಮ) ಮಾರ್ಗಗಳ ತಿಳಿವಳಿಕೆಯಿಂದ; ಭಗವದನುಭಾವ ಉಪವರ್ಣನಂ = ಆತ್ಮದಲ್ಲಿ ಅಂತರಾತ್ಮನನ್ನು ಕಾಣುವ ಬಗೆಯ ವರ್ಣನೆಯನ್ನು; ಸಾವರ್ಣೇಃ = ಮುಂದಿನ ಕಲ್ಪದಲ್ಲಿ 'ಮನು' ಪದವಿಗೆ ಬರುವ ಸಾವರ್ಣಿ ಎಂಬುವರಿಗೆ; ಉಪದೇಕ್ಷ್ಯಮಾಣಃ = ಉಪದೇಶಿಸುತ್ತಾ; ಪರಮಭಕ್ತಿಭಾವೇನ = ಅತ್ಯಂತ ಭಕ್ತಿಯಂದ; ಉಪಸರತಿ = ನರ–ನಾರಾಯಣರ ಸೇವೆ ಮಾಡುತ್ತಾರೆ. (ಶಿಷ್ಯವೃತ್ತಿಯನ್ನು ನಡೆಸುತ್ತಾರೆ); ಇದಂಚ ಅಭಿಗೃಣಾತಿ = ಈ ಮಂತ್ರವನ್ನು ಜಪಿಸುತ್ತಾರೆ.

"ಸಮ್ಯಕ್ ಖ್ಯಾತಂ ಸಾಂಖ್ಯಂ" –ಜಗತ್ ಸೃಷ್ಟ್ಯಾದಿಗಳ ತತ್ತ್ವವನ್ನು ಅರ್ಥಪೂರ್ಣವಾಗಿ ವರ್ಣಿಸುವುದು ಸಾಂಖ್ಯಶಾಸ್ತ್ರ (ಉತ್ತರ ಮೀಮಾಂಸಾ – ಉಪನಿಷದ್ರೂಪ) ಕರ್ಮಾಚರಣೆಯ ಹಾಗೂ ಕರ್ಮದಿಂದ ಜ್ಞಾನಸಿದ್ಧಿಯ ವಿಧಾನವನ್ನು ತಿಳಿಸುವುದು ಯೋಗಶಾಸ್ತ್ರ. 'ಯೋಗ' ಎಂದರೆ, ಆತ್ಮನಿಗೆ ಪರಾತ್ಮನೊಡನೆ ಇರುವ, ಇರಬೇಕಾದ ಸಂಬಂಧವನ್ನು ತಿಳಿಸಿಕೊಡುವುದು. ಸಂಬಂಧದ ತಿಳಿವಳಿಕೆ, ಜ್ಞಾನ; ಸಂಬಂಧ ಸಿದ್ಧಿಯ ಮಾರ್ಗ (ಉಪಾಯ), ಯೋಗ ಎರಡೂ ಒಂದಕ್ಕೊಂದು ಸಂಬಂಧಿಸಿರುವುದರಿಂದ 'ಸಾಂಖ್ಯಯೋಗ' ಎಂತಲೂ ಹೇಳಬಹುದು.

ಮಂತ್ರ: "ಓಂ ನಮೋ ಭಗವತೇ ಉಪಶಮಶೀಲಾಯೋಪರತಾನಾತ್ಮ್ಯಾಯ ನಮೋಽಕಿಂಚನವಿತ್ತಾಯ ಋಷಿಋಷಭಾಯ ನರನಾರಾಯಣಾಯ ಪರಮವಿತ್ತಾಯ ಪರಮಹಂಸ ಪರಮಗುರವೇ ಆತ್ಮಾರಾಮಾಧಿಪತಯೇ ನಮೋನಮ" ಇತಿ ॥೧೧॥

ಭಾರತೇಸ್ಮಿನ್ ವರ್ಷೇ ಸರಿಚ್ಛೈಲಾಃಸಂತಿ ಬಹವೋ
ಮಲಯೋಮಂಗಲ ಪ್ರಸ್ಥೋಮೈನಾಕಸ್ತ್ರಿಕೂಟ ಋಷಭ ಕಟಕ
ಕೋಲ್ಲಕಃ ಸಹ್ಯೋದೇವಗಿರಿಃ ಋಷ್ಯಮೂಕಃ ಶ್ರೀ ಶೈಲೋವೇಂಕಟೋ
ಮಹೇಂದ್ರೋ ನೀಲೋ ಗೋಕಾಮುಖ ಇಂದ್ರಕೀಲಃ

**ಕಾಮಗಿರಿರಿತಿಚಾನ್ಯೇ ಚ ಶತಸಹಸ್ರಶಃ ಶೈಲಾಸ್ತೇಷಾಂ ನಿತಂಬ**
**ಪ್ರಭವಾ ನದ್ಯಶ್ಚ ಸಂತ್ಯಸಂಖ್ಯಾತಾಃ ॥೧೬॥**

ಅಸ್ಮಿನ್ ಭಾರತೇವರ್ಷೇ = ನಮ್ಮ ಈ ಭರತವರ್ಷದಲ್ಲಿ; ಬಹವಃ ಸರಿತ್ ಶೈಲಾಃ ಸಂತಿ = ಅನೇಕ ನದಿಗಳೂ ಪರ್ವತಗಳೂ ಇರುತ್ತವೆ; ಆ ಪರ್ವತಗಳ ಹೆಸರುಗಳು ಮಲಯ, ಮಂಗಳಪ್ರಸ್ಥ, ಮೈನಾಕ, ತ್ರಿಕೂಟ, ಋಷಭ, ಕೋಲ್ಲಕ(ಕೋಲ), ಸಹ್ಯ, ದೇವಗಿರಿ, ಋಷ್ಯಮೂಕ, ಶ್ರೀಶೈಲ, ವೇಂಕಟಾದ್ರಿ, ಮಹೇಂದ್ರ, ವಾರಿಧಾರಾ, ವಿಂಧ್ಯ, ಶುಕ್ತಿಮಾನ್, ಋಕ್ಷಗಿರಿ, ಪಾರಿಯಾತ್ರ, ದ್ರೋಣ, ಚಿತ್ರಕೂಟ, ಗೋವರ್ಧನ, ರೈವತಕ, ಕಕುಭ, ನೀಲ, ಗೋಕಾಮುಖ, ಇಂದ್ರಕೀಲ, ಕಾಮಗಿರಿ; ಇತಿ ಚ ಅನ್ಯೇಚ = ಹೀಗೆ ಅನೇಕಾನೇಕ; ಶೈಲಾಃ = ಪರ್ವತಗಳು; ಶತಸಹಸ್ರಶಃ = ನೂರಾರು, ಸಾವಿರಾರು ಇರುತ್ತವೆ; ತೇಷಾಂ ನಿತಂಬ ಪ್ರಭವಾಃ = ಅವುಗಳ ನಡುವಿನಿಂದ ಹುಟ್ಟಿದ; ನದ್ಯಃ ಚ = ನದಿಗಳೂ ಕೂಡ; ಅಸಂಖ್ಯಾತಾಃ ಸಂತಿ = ಅಗಣಿತವಾಗಿವೆ.

ಇಲ್ಲಿ ಹೇಳಿರುವುವೆಲ್ಲಾ ಕೇವಲ ಭಾರತ ದೇಶದ ನದಿಗಳೇ ಆಗಿವೆ. ವರ್ಷ, ಖಂಡ, ದೇಶ ಎಂಬ ಪದಗಳನ್ನು ಪರ್ಯಾಯ ಪದಗಳಂತೆ ಅನೇಕ ಕಡೆಗಳಲ್ಲಿ ಬಳಸಿರುವುದು ಸಂಶಯಕ್ಕೆ ಕಾರಣವಾಗಿದೆ. ಆದರೆ, ಭರತವರ್ಷದಲ್ಲಿ ಭರತಖಂಡವೂ, ಭರತ ಖಂಡದಲ್ಲಿ ಭಾರತ ದೇಶವೂ ಪ್ರಧಾನಗಳಾಗಿರುವುದರಿಂದ, ಇಲ್ಲಿ ಹೇಳಿರುವುದು ಅತಿಮುಖ್ಯವಾದ, ಭಾರತದೇಶದ ವಿಚಾರ ಮಾತ್ರ ಎಂಬುದು ಒಂದು ಸಮಾಧಾನ ಕರವಾದ ಉತ್ತರ. ಒಂದೇ ಹೆಸರಿನ ಗಿರಿನದಿಗಳು ವಿಶಾಲ ಭಾರತವರ್ಷದಲ್ಲಿಯೂ ಇರಬಹುದೆಂಬುದು ಇನ್ನೊಂದು ಉತ್ತರ – ಭೂಲಂಕೆ, ಪಾತಾಳ ಲಂಕೆ ಎಂದಹಾಗೆ.

**ಏತಾಸಾಮಪೋ ಭಾರತ್ಯಃ ಪ್ರಜಾ ನಾಮಭಿರೇವ ಪುನಂತೀನಾಮಾತ್ಮ**
**ನಾಚೋಪಸ್ಪೃಶಂತಿ ॥೧೭॥**

ನಾಮಭಿಃ ಏವ ಪುನಂತೀನಾಂ = ಹೆಸರುಗಳನ್ನು ಸ್ಮರಿಸುವ ಮಾತ್ರದಿಂದ ಪಾವನಗೊಳಿಸುವ; ಏತಾಸಾಂ ಅಪಃ = ಈ ನದಿಗಳ ಉದಕಗಳನ್ನು; ಭಾರತ್ಯಃ = ಭಾರತ ದೇಶದ ಜನರು; ಆತ್ಮನಾಚ ಉಪಸ್ಪೃಶಂತಿ = ದೈಹಿಕವಾಗಿಯೂ ಸ್ನಾನ ಪಾನಗಳಿಂದ ಸೇವಿಸಿ ಧನ್ಯರಾಗುತ್ತಾರೆ.

**ಚಂದ್ರವಸಾತಾಮ್ರಪರ್ಣೀ ಅವಟೋದಾಕೃತಮಾಲಾ ವೈಹಾಯಸೀ**
**ಕಾವೇರೀ ವೇಣೀ ಪಯಸ್ವಿನೀ ಶರ್ಕರಾವರ್ತಾ ತುಂಗಭದ್ರಾ**

ಕೃಷ್ಣಾವೇಣೀ ಭೀಮರಥೀ ಗೋದಾವರೀ ಚರ್ಮಣ್ವತೀ ಸಿಂಧು ಅಂಧಃ
ಶೋಣಃ ಚ ನದೌ (ಅಂಧಃ ಮತ್ತು ಶೋಣಾ ಎಂಬುವು ನದಿಗಳು)
ಮಹಾನದೀ ವೇದಸ್ಮೃತೀ ಋಷಿಕುಲ್ಯಾ ತ್ರಿಸಾಮಾಕೌಶಕೀ
ಮಂದಾಕಿನೀಯಮುನಾ ಸರಸ್ವತೀ ದೃಷದ್ವತೀ ಗೋಮತೀಸರಯೂ
ರೋಧಸ್ವತೀ ಸಪ್ತವತೀ ಸುಷೇಮಾ ಶತದ್ರೂಃ ಚಂದ್ರಭಾಗಾ
ಮರುದ್ವೃಧಾ ವಿತಸ್ತಾ ಅಸಿಕ್ನೀ ವಿಶ್ವಾ ಇತಿ ಮಹಾನದ್ಯಃ ||೧೮||

ಇಲ್ಲಿ ಹೇಳಿರುವ ಪರ್ವತಗಳು ಮತ್ತು ನದಿಗಳು ಕ್ರಮವಾಗಿ ಭಾರತದ ದಕ್ಷಿಣ, ಮಧ್ಯ ಮತ್ತು ಉತ್ತರ ಭಾಗಗಳಲ್ಲಿ ಇರತಕ್ಕವು.

ಅಸ್ಮಿನ್ನೇವ ವರ್ಷೇ ಪುರುಷೈರ್ಲಬ್ಧಜನ್ಮಭಿಃ ಶುಕ್ಲಲೋಹಿತ
ಕೃಷ್ಣವರ್ಣೇನ ಸ್ವಾರಬ್ಧೇನ ಕರ್ಮಣಾ ದಿವ್ಯ ಮಾನುಷನಾರಕಗತಯೋ
ಬಹ್ವ್ಯ ಆತ್ಮನ ಆನುಪೂರ್ವ್ಯೇಣ ಸರ್ವಾಹ್ಯೇವ ಸರ್ವೇಷಾಂ
ವಿಧೀಯಂತೇ ಯಥಾವರ್ಣವಿಧಾನಮ ಪವರ್ಗಶ್ಚಾಪಿ ಭವತಿ ||೧೯||

ಅಸ್ಮಿನ್ ವರ್ಷೇ ಏವ = ಈ ಭರತ ವರ್ಷದಲ್ಲಿಯೇ; ಲಬ್ಧ ಜನ್ಮಭಿಃ ಪುರುಷೈಃ = ಜನ್ಮವನ್ನು ಪಡೆದ ಪುರುಷರಿಂದ; ಶುಕ್ಲಲೋಹಿತ ಕೃಷ್ಣವರ್ಣೇನ =ಸಾತ್ವಿಕ ರಾಜಸಮಸ ಗುಣಗಳ ಪ್ರಭಾವಕ್ಕೆ ಅನುಗುಣವಾಗಿ; ಸುಆರಬ್ಧ ಕರ್ಮಣಾ =ವಿಧ್ಯುಕ್ತ ರೀತಿಯಲ್ಲಿ ಆಚರಿಸಿದ ಕರ್ಮಗಳ ದೆಸೆಯಿಂದ; ದಿವ್ಯ ಮಾನುಷ ನಾರಕಗತಯಃ = ಸ್ವರ್ಗ ಭೂನರಕಗಳಲ್ಲಿ ಸಂಚಾರವು; ಬಹ್ವ್ಯಃ = ಅನೇಕ ರೀತಿಗಳಲ್ಲಿ ಉಂಟಾಗುವುದು – ಶ್ರದ್ಧಾಪೂರ್ವಕ ಸತ್ಕರ್ಮದಿಂದ ಸ್ವರ್ಗಲಾಭ, ಉದಾಸೀನ ಕರ್ಮಗಳಿಂದ ಮತ್ತೆ ಮತ್ತೆ ಭೂಲೋಕದಲ್ಲಿ ಜನ್ಮ, ವಿಧಿಯನ್ನು ಮೀರಿದ ಕರ್ಮಗಳಿಂದ ನರಕ ಪ್ರಾಪ್ತಿ; ಆತ್ಮನಃ ಆನುಪೂರ್ವ್ಯೇಣ = ಅವರವರ ಸ್ವಭಾವಗಳಿಗೆ ತಕ್ಕಂತೆ; ವರ್ಣಾಶ್ರಮ ವಿಧಾನಂ ಯಥಾ = ಬ್ರಾಹ್ಮಣಾದಿ ವರ್ಣಗಳು, ಬ್ರಹ್ಮಚರ್ಯಾದಿ ಆಶ್ರಮಗಳು ವೇದೋಕ್ತರೀತಿಯಲ್ಲಿ; ಸರ್ವೇಷಾಂ = ಎಲ್ಲರಿಗೂ; ವಿಧೀಯಂತೇ = ಗೊತ್ತು ಪಡಿಸಲ್ಪಟ್ಟಿರುತ್ತವೆ; ಅಪವರ್ಗಃ ಚ ಅಪಿ ಭವತಿ = ವರ್ಣಾಶ್ರಮ ಧರ್ಮಗಳನ್ನು ಸುಜ್ಞಾನ ಪೂರ್ವಕವಾಗಿ ಆಚರಿಸುವುದರಿಂದ ಮುಕ್ತಿಯೂ ಲಭಿಸುತ್ತದೆ.

ಐವತ್ತು ಕೋಟಿಯೋಜನ ವಿಸ್ತಾರವಾದ ಬ್ರಹ್ಮಾಂಡದಲ್ಲಿ, ಒಂದು ಲಕ್ಷ ಯೋಜನ ಮಾತ್ರ ವಿಸ್ತಾರವಾದ ಜಂಬೂದ್ವೀಪದ ಸಣ್ಣ ಒಂದು ಭಾಗವಾದ ಭರತವರ್ಷವು, ಅದರಲ್ಲಿಯೂ, ಭರತಖಂಡವು ಜೀವರ ಸಾಧನೆಗೆ ಮೀಸಲಾಗಿರವುದು. ಋತುಮಾನಗಳು, ಯುಗಲಕ್ಷಣಗಳು, ವರ್ಣಾಶ್ರಮ ಧರ್ಮಗಳು ಇಲ್ಲಿಗೆ ಮಾತ್ರ

ಸೀಮಿತವಾಗಿವೆ. ಇಲ್ಲಿ ಆಚರಿಸಿದ ಪುಣ್ಯ ಪಾಪಗಳಿಂದ ಕರ್ಮಕ್ಷಯವಾಗಿ, ಜ್ಞಾನಾಭಿವೃದ್ಧಿಯಿಂದ ಜೀವರ ಸಾಧನೆ ಮುಂದೆ ಮುಂದೆ ಸಾಗುತ್ತದೆ. ಇತರ ಭಾಗಗಳಲ್ಲಿ ಕೇವಲ ಕರ್ಮಫಲಭೋಗವೇ ಹೊರತು, ಸ್ವರೂಪ ವಿಕಾಸಕ್ಕೆ ಬೇಕಾದ ಸಾಧನೆಯು ಮುಂದುವರಿಯುವುದಿಲ್ಲ.

ಭರತಖಂಡದಲ್ಲಿ ಭಾರತ ದೇಶವು ಮಾತ್ರ ಕರ್ಮ ಭೂಮಿಯೆಂದೂ, ಯೂರೋಪ್ ಅಮೆರಿಕಾ ಮೊದಲಾದವು ಭೋಗಭೂಮಿಗಳೆಂದೂ ಹೇಳುವುದುಂಟು. ಕೃತಾದಿಯುಗಗಳಲ್ಲಿ ಆ ಪ್ರದೇಶಗಳೂ ವಿಧ್ಯುಕ್ತಕರ್ಮಾಚರಣೆಗೆ ಯೋಗ್ಯವಾಗಿದ್ದುವೆಂಬುದು ಅಲ್ಲಿನ ಭೂಗತ ಅವಶೇಷಗಳ ವೀಕ್ಷಣೆಯಿಂದ ತಿಳಿದು ಬರುವುದು. ಈಗ ಅಲ್ಲಿ ಅಂತಹ ಅವಕಾಶಗಳು ಕಾಲಗತಿಯಿಂದ ತಪ್ಪಿಹೋಗಿವೆ. ಆದರೂ ಅವು ಕರ್ಮಭೂಮಿಗಳೇ ಹೊರತು ಭೋಗ ಭೂಮಿಗಳಲ್ಲ. ಆ ಪ್ರದೇಶಗಳಲ್ಲಿಯೂ ಕಾಲಕ್ಕೆ ತಕ್ಕ ಧರ್ಮಗಳು ಪ್ರಕಟವಾಗಿ, ಪುಣ್ಯ ಪಾಪಗಳ ವಿಚಾರವನ್ನು ತಿಳಿಸುತ್ತಿವೆ. ವೈದಿಕಧರ್ಮದ ಅನುಕರಣೆಗಳೇ ಆದ ಅವು ಮೂಲದಷ್ಟು ಪ್ರಭಾವಶಾಲಿಗಳಾಗದೆ ಇರಬಹುದು, ಅಷ್ಟೇ ಅಲ್ಲದೆ, ಕಾಲಕ್ಕೆ ತಕ್ಕಂತೆ ಅಲ್ಲಿ ಹೋಗಿ ವಸತಿ ಹೂಡಬೇಕಾದ ಭಾರತೀಯರು ಶ್ರಮವಹಿಸಿ, ಭಾರತದ ಉತ್ತಮ ಸನ್ನಿವೇಶಗಳನ್ನು ಅಲ್ಲಿ ಕಲ್ಪಿಸಿಕೊಳ್ಳಬಹುದು. ಇನ್ನು ಮುಂದೆ ಹಾಗೆ ಮಾಡದಿದ್ದರೆ ವಿಧಿಯಿಲ್ಲ. "Adapt or Perish" ಎಂಬುದು ಕಲಿಯುಗದ ಕಟ್ಟುಪಾಡು!

**ಯೋಽಸೌ ಭಗವತಿ ಸರ್ವಭೂತಾತ್ಮನ್ಯನಾತ್ಮೇಽನಿರುಕ್ತೇಽ ನಿಲಯನೇ ಪರಮಾತ್ಮನಿ ವಾಸುದೇವೇನನ್ಯನಿಮಿತ್ತಭಕ್ತಿಯೋಗ ಲಕ್ಷಣೋ ನಾನಾಗತಿ ನಿಮಿತ್ತಾವಿದ್ಯಾಗ್ರಂಥಿ ರಂಧನ ದ್ವಾರೇಣ ಯದಾಹಿ ಮಹಾಪುರುಷ ಪ್ರಸಂಗಃ ॥೨೦॥**

ನಾನಾಗತಿ ನಿಮಿತ್ತ = ಬಗೆಬಗೆಯ ಯೋನಿಗಳಲ್ಲಿ ಜನ್ಮಕ್ಕೆ ಕಾರಣವಾದ; ಅವಿದ್ಯಾಗ್ರಂಥಿ ರಂಧನ ದ್ವಾರೇಣ = ಅಜ್ಞಾನಕ್ಕೆ ಕಾರಣವಾಗಿ ಹೃದಯವನ್ನು ಬಂಧಿಸಿರುವ ಲಿಂಗಶರೀರವೆಂಬ ಗಂಟನ್ನು ಛೇದಿಸುವುದರ ಮೂಲಕ; ಭಗವತಿ = ಭಗವಂತನಾದ; ಸರ್ವಭೂತಾತ್ಮನಿ = ಸಕಲ ಜೀವಗಳ ಅಂತರ್ಯಾಮಿಯಾದ; ಅನಾತ್ಮನಿ = ಜಡಜೀವಗಳಿಂದ ಭಿನ್ನನಾಗಿ, ಅಭಿಮಾನರಹಿತವಾದ; ಅನಿರುಕ್ತೇ = ವರ್ಣನಾತೀತವಾದ; ಅನಿಲಯನೇ = ಅನ್ಯಾಶ್ರಮವನ್ನು ಅಪೇಕ್ಷಿಸದಿರುವ; ಪರಮಾತ್ಮನಿ = ಪುರುಷೋತ್ತಮನಾದ; ವಾಸುದೇವೇ = ಮುಕ್ತಿ ಪ್ರದನಾದ ವಾಸುದೇವನಾಮಕದಲ್ಲಿ; ಅನನ್ಯ ನಿಮಿತ್ತ ಭಕ್ತಿಯೋಗ ಲಕ್ಷಣಃ = ಫಲಾಪೇಕ್ಷೆ ಇಲ್ಲದೇ ಶ್ರೀಹರಿಯಲ್ಲಿಯೇ ಮಾಡುವ ಭಕ್ತಿಯೋಗವೆಂಬುದು; ಯಃ ಅಸೌ =

ಯಾವುದುಂಟೋ ಅದು; ಮಹಾಪುರುಷಪುರುಷ ಪ್ರಸಂಗಃ = ಭಗವದ್ಭಕ್ತರಾದ ಸತ್ಪುರುಷರ ಸಹವಾಸವು; ಯದಾಹಿ = ಯಾವಾಗ ಲಭಿಸುವುದೋ ಆಗಮಾತ್ರ ಸಾಧ್ಯ.

ನುರಿತ ಏಕಾಂತಭಕ್ತರ ಸಹವಾಸವು ದೊರೆಯುವುದು ಭಾರತದೇಶದಲ್ಲಿ ಮಾತ್ರ ಎಂದು ತಿಳಿಸುವುದು ಈ ಗ್ರಂಥದ ಅಭಿಪ್ರಾಯ. ಕರ್ಮಭೂಮಿಯಲ್ಲಿ ಭಾರತದೇಶದ ವೈಶಿಷ್ಟ್ಯವು ಇದರಿಂದ ವ್ಯಕ್ತಾಗುತ್ತದೆ.

ಏತದೇವಹಿ ದೇವಾಗಾಯನ್ತಿ-( = ದವತೆಗಳು ಹೀಗೆ ಕೀರ್ತಿಸುತ್ತಾರೆ)

**ಅಹೋ ಬತ್ಯೈಷಾಂ ಕಿಮಕಾರಿ ಶೋಭನಂ ಪ್ರಸನ್ನ ಏಷಾಂ ಸ್ವಿದುತ**
**ಸ್ವಯಂಹರಿಃ ಯೈರ್ಜನ್ಮ ಲಬ್ಧಂ ನೃಷು ಭಾರತಾಜಿರೇ ಮುಕುಂದ**
**ಸೇವೌಪಯಿಕಂ ಸ್ಪೃಹಾಹಿನಃ ॥**

ಯೈಃ = ಯಾರಿಂದ; ಭಾರತಾಜಿರೇ = ಭರತದೇಶದಲ್ಲಿ; ಮುಕುಂದ ಸೇವೌಪಯಿಕಂ = ಮೋಕ್ಷಪ್ರದನಾದ ಶ್ರೀಹರಿಯನ್ನು ಭಕ್ತಿಯಿಂದ ಸೇವಿಸಲು ಉಪಯುಕ್ತವಾದ; ನೃಷು ಜನ್ಮ ಲಬ್ಧಂ = ಮಾನವರಲ್ಲಿ ಜನ್ಮ ಲಭಿಸಿತೋ ಅಂತಹ; ಏಷಾಂ = ಭಾರತೀಯರಾದ ಇವರ ಕಡೆಯಿಂದ; ಕಿಂ ಶೋಭನಂ ಅಕಾರಿ = ಯಾವ ಮಹಾಪುಣ್ಯಕರ್ಮವು ಆಚರಿಸಲ್ಪಟ್ಟಿತು? ಏಷಾಂ = ಇವರ ವಿಷಯದಲ್ಲಿ; ಹರಿಃ = ಶ್ರೀಹರಿಯು; ಸ್ವಯಂ = ತಾನಾಗಿಯೇ; ಪ್ರಸನ್ನಃ ಉತಸ್ವಿತ್ = ಪ್ರಸನ್ನನಾಗಿರಬಹುದೇ? ನಃ ಸ್ಪೃಹಾ ಹಿ = ನಮಗೂ ಇಂತಹ ಭಾರತದೇಶದಲ್ಲಿ ಜನ್ಮ ಪಡೆಯಬೇಕೆಂಬ ಆಸೆಯುಂಟು.

**ನಯತ್ರವೈಕುಂಠ ಕಥಾಸುಧಪಗಾ ನಸಾಧವೋ**
**ಭಾಗವತಾಸ್ತದಾಶ್ರಯಾಃ ನಯತ್ರಯಜ್ಞೇಶ ಮಖಾ ಮಹೋತ್ಸವಾಃ**
**ಸುರೇಶಲೋಕೋಪಿ ನವೈಸಸೇವ್ಯತಾಂ ॥೨೪॥**

ಯತ್ರ = ಎಲ್ಲಿ; ವೈಕುಂಠ ಕಥಾ ಸುಧಾಪಗಾ ನ = ವೈಕುಂಠನಾಮಕನಾದ ಶ್ರೀಹರಿಯ ಕಥಾ ರೂಪವಾದ ಜಲಪ್ರವಾಹವಿರುವುದಿಲ್ಲವೋ; ಯತ್ರ = ಎಲ್ಲಿ; ಭಾಗವತಾಃ = ಭಗವತ್ಪರಾಯಣರೂ; ತದಾಶ್ರಯಾಃ = ಅವರನ್ನು ಆಶ್ರಯಿಸಿದ ಭಗವದ್ಭಕ್ತರೂ ಆದವರು; ಯಜ್ಞೇಶಮಖಾ ಮಹೋತ್ಸವಾಃ = ಅಗ್ನ್ಯಂತರ್ಗತ ಪರಮಾತ್ಮನಿಗೆ ಪ್ರಿಯವಾದ ಯಜ್ಞಯಾಗಾದಿ ಸಮಾರಂಭಗಳು; ನ =ಇರುವುದಿಲ್ಲವೋ, ಅಂತಹ; ಸುರೇಶ ಲೋಕಃ ಅಪಿ = ದೇವೇಂದ್ರನ ಲೋಕವೂ

ಕೂಡ; ಸಃ ನವ್ವೈಸೇವ್ಯತಾಂ = ಅದು ಉಪಭೋಗಕ್ಕೆ ಅರ್ಹವಾದುದು ಅಲ್ಲವೇ ಅಲ್ಲ.

ಸ್ವರ್ಗಲೋಕದ ಸುಖಗಳು ಭೂಲೋಕದ ಸುಖಕ್ಕಿಂತ ಹೆಚ್ಚು ಆಕರ್ಷಕವೇ ಆದರೂ, ಅವು ಮುಗಿದುಹೋಗತಕ್ಕವೇ ಹೊರತು, ಶಾಶ್ವತವಾದವುಗಳಲ್ಲ; ಮುಂದಿನ ಸಾಧನೆಗೆ ಅನುಕೂಲವಾದವೂ ಅಲ್ಲ. ಶ್ರೀಹರಿಗೆ ಅರ್ಪಿತಗಳಾದ ಯಜ್ಞಯಾಗಾದಿ ಸತ್ಕರ್ಮಗಳು ಮತ್ತು ಭಗವತ್ಕಥಾ ಕಾಲಕ್ಷೇಪಗಳು ಮಾತ್ರವೇ ಮುಕ್ತಿಗೆ ಸಾಧಕಗಳಾದವು.

ಪ್ರಾಪ್ತಾ ನೃಜಾತಿಂತ್ವಿಹ ಯೇಚ ಜಂತವ್ವೋ ಜ್ಞಾನ ಕ್ರಿಯಾದ್ರವ್ಯ
ಕಲಾಪಸಂಭೃತಾಂ। ನವ್ವೈ ಯತೇರನ್ನಪುನರ್ಭವಾಯ
ಭೂಯೋವನೌಕಾ ಇವ ಯಾಂತಿ ಬಂಧನಂ ॥೨೪॥

ಜ್ಞಾನ ಕ್ರಿಯಾ ದ್ರವ್ಯ ಕಲಾಪ ಸಂಭೃತಾಂ = ಜ್ಞಾನಪೂರ್ವಕವಾಗಿ ಮಾಡುವ ಸತ್ಕರ್ಮಗಳಿಗೆ ಅನುಕೂಲವಾದ ದ್ರವ್ಯಗಳಿಂದ ಸಮೃದ್ಧವಾದ; ಇಹ = ಈ ಭಾರತ ದೇಶದಲ್ಲಿ; ನೃಜಾತಿಂ ಪ್ರಪ್ತಾಃಚ = ಮಾನವ ಜನ್ಮವನ್ನು ಪಡೆದೂ ಕೂಡ; ಯೇ ಜಂತವಃ = ಯಾವ ಜೀವಿಗಳು; ಅಪುನರ್ಭವಾಯ = ಸಂಸಾರದಿಂದ ಬಿಡುಗಡೆ ಹೊಂದುವುದಕ್ಕೆ; ನವ್ವೈಯತೇರನ್ = ಪ್ರಯತ್ನ ಮಾಡುವುದೇ ಇಲ್ಲವೋ; ತೇ = ಅವರು; ಭೂಯಃ = ಪುನಃ; ವನೌಕಾ ಇವ = ಕಾಡು ಪ್ರಾಣಿಗಳಂತೆ; ಬಂಧನಂ ಯಾಂತಿ = ಸಂಸಾರ ಬಂಧನಕ್ಕೆ ಒಳಗಾಗುತ್ತಾರೆ.

ಮಾನವ ಜನ್ಮ ಲಭಿಸುವುದೇ ದುರ್ಲಭ. ಅಂತಹ ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳದವರು ಕಾಡು ಪ್ರಾಣಿಗ್ಳಳಿಗೆ ಸಮಾನರೇ ಸರಿ.

ಯದ್ಯತ್ರ ನಃ ಸ್ವರ್ಗಸುಖಾವಶೇಷಿತಂ ಸ್ವಿಷ್ಟಸ್ಯ ಸೂಕ್ತಸ್ಯ ಕೃತಸ್ಯ
ಶೋಭನಂ। ತೇನಾಜನಾಭೇ ಸ್ಮೃತಿಮಜ್ಜನ್ಮನಃಸ್ಯಾತ್
ವರ್ಷೇಹರಿರ್ಯದ್ಭಜತಾಂ ಶಂ ತನೋತಿ ॥೨೮॥

ಅತ್ರ ನಃ = ಸ್ವರ್ಗವಾಸಿಗಳಾದ ನಮ್ಮ;. ಸ್ವಿಷ್ಟಸ್ಯ = ಹಿಂದೆ ಭಾರತ ದೇಶದಲ್ಲಿ ಯಜ್ಞಗಳನ್ನಾಚರಿಸಿದುದರಿಂದ; ಸೂಕ್ತಸ್ಯ = ವೈದಿಕ ವಿದ್ಯಾಭ್ಯಾಸದಿಂದ; ಶೋಭನಂ ಕೃತಸ್ಯ = ಪುಣ್ಯ ಕರ್ಮಗಳನ್ನು ಆಚರಿಸಿದುದರಿಂದ; ಸ್ವರ್ಗ ಸುಖಾವಶೇಷಿತಂ ಯದಿ = ಸ್ವರ್ಗದಲ್ಲಿ ಅನುಭವಿಸಬಹುದಾದ ಸುಖಪ್ರಾಪ್ತಿಯು ಏನಾದರೂ ಉಳಿದಿದ್ದರೆ; ತೇನ = ಅದರ ನಿಮಿತ್ತದಿಂದ; ಯತ್ = ಎಲ್ಲಿ; ಭಜತಾಂ = ಸೇವಿಸುವ ಜನರಿಗೆ;

ಹರಿಃ = ಶ್ರೀಹರಿಯು; ಶಂತನೋತಿ = ಮಂಗಳವನ್ನುಂಟು ಮಾಡುವನೋ, ಅಂತಹ; ಅಜನಾಭೇಃ ವರ್ಷೇ = ಅಜನಾಭಿ ವರ್ಷದಲ್ಲಿ; ಸ್ಮೃತಿಮತ್ ಜನ್ಮ = ಶ್ರೀಹರಿಯ ಸ್ಮರಣೆ ಇರುವಂತಹ ಜನ್ಮವು; ಸ್ಯಾತ್ = ಉಂಟಾಗಲಿ.

ಭರತವರ್ಷ ಎಂಬ ಹೆಸರು ಬರುವುದಕ್ಕೆ ಮುಂಚೆ ನಾಭಿವರ್ಷ ಎಂಬ ಹೆಸರಿದ್ದಿತು.

**ಶ್ರೀ ಶುಕ ಉವಾಚಃ** – ಶುಕಾಚಾರ್ಯರು ನುಡಿದರು.

**ಜಂಬೂದ್ವೀಪಸ್ಯಚ ರಾಜನ್ನುಪದ್ವೀಪಾನ್ಯಷ್ಟೌ ಹೈಕ ಉಪದಿಶಂತಿ**
**ಸಗರಾತ್ಮಜೈರಶ್ವಾನ್ವೇಷಣ ಇಮಾಂ ಮಹೀಂ ಪರಿತೋ**
**ನಿಖನದ್ಭಿರುಪಕಲ್ಪಿತಾನ್ ॥೨೯॥**

**ತದ್ಯಥಾ ಸ್ವರ್ಣಪ್ರಸ್ಥ ಚಂದ್ರಶುಕ್ಲ ಆವರ್ತನೋ ರಮಣಕೋ**
**ಮಂದರಹರಿಣಃ ಪಾಂಚಜನ್ಯಃ ಸಿಂಹಳೋ ಲಂಕೇತಿ ॥೩೦॥**

ಅಶ್ವಾನ್ವೇಷಣೇ = ಯಜ್ಞಾಶ್ವವನ್ನು ಹುಡುಕುವ ಸಮಯದಲ್ಲಿ; ಸಗರಾತ್ಮಜೈಃ = ಪರಿವಾರ ಸಮೇತರಾದ ೬೦,೦೦೦ ಮಂದಿ ಮಕ್ಕಳಿಂದ; ಪರಿತಃ ಇಮಾಂ ಮಹೀಂ ನಿಖನದ್ಭಿಃ = ಎಲ್ಲಾಕಡೆಗಳಲ್ಲಿಯೂ ಈ ಭೂಮಿಯನ್ನು ಅಗೆಯುತ್ತಿರುವಾಗ; ಉಪಕಲ್ಪಿತಾನ್ = ಭೂರಾಶಿಗಳಿಂದ ಉಂಟಾದ; ಜಂಬೂದ್ವೀಪಸ್ಯ = ಜಂಬೂ ದ್ವೀಪದ; ಅಷ್ಟೌಉಪದ್ವೀಪಾನ್ ಹಿ = ಎಂಟು ಉಪದ್ವೀಪಗಳನ್ನು; ಯೇಕೇ = ಬಲ್ಲವರು ಕೆಲವರು; ಉಪದಿಶಂತಿ = ಗುರುತಿಸಿ ಹೇಳುತ್ತಾರೆ. ॥೨೯॥

ತತ್ ಯಥಾ = ಹೇಗೆ ಎಂಟು ದ್ವೀಪಗಳೆಂದರೆ, ಅವು; ಸ್ವರ್ಣಪ್ರಸ್ಥ, ಚಂದ್ರಶುಕ್ಲ, ಆವರ್ತನ, ರಮಣಕ, ಮಂದರ ಹರಿಣ, ಪಾಂಚಜನ್ಯ, ಸಿಂಹಳ, ಲಂಕಾ; ಇತಿ = ಎಂಬುದಾಗಿ.

ಭೌಗೋಳಿಕ ಕಾರಣಗಳಿಂದ ಬದಲಾಗಿರುವ ಈಗಿನ ಪರಿಸ್ಥಿತಿಯಲ್ಲಿ ಈ ದ್ವೀಪಗಳನ್ನು ಗುರುತಿಸುವುದು ಕಷ್ಟವೇ ಸರಿ, ಸ್ವರ್ಣ ಪ್ರಸ್ಥ, ಚಂದ್ರಶುಕ್ಲ, ಆವರ್ತನ ಎಂಬುವು ಅಟ್ಲಾಂಟಿಕ್ ಸಾಗರದದ್ವೀಪಗಳಾಗಿರಬಹುದು. ರಮಣಕ, ಮಂದರ ಹರಿಣ ಮತ್ತು ಪಾಂಚಜನ್ಯಗಳು ಪ್ಯಾಸಿಫಿಕ್ ಸಾಗರದ ದ್ವೀಪಗಳು. ಸಿಂಹಳ ಎಂಬುದು ಈಗಿನ ಸಿಲೋನ್. ಲಂಕಾ ಎಂಬುದು ಕನ್ಯಾಕುಮಾರಿಗೆ ನೈಋತ್ಯ ದಿಕ್ಕಿನಲ್ಲಿ ಸುಮಾರು ೬೦೦ ಮೈಲಿಗಳ ದೂರದಲ್ಲಿದ್ದು, ಶ್ರೀರಾಮನ ಆಶೀರ್ವಾದ ಬಲದಿಂದ ಅದೃಶ್ಯವಾಗಿದೆ. ವಿಭೀಷಣರು ಈಗಲೂ ಅಲ್ಲಿರುವರೆಂಬುದು ಪುರಾಣಪ್ರಸಿದ್ಧ.

ಬ್ರಹ್ಮಾಂಡ ಪುರಾಣದಲ್ಲಿ, ಭರತವರ್ಷವೆಂಬುದು (೧) ಕನ್ಯಾಕುಮಾರಿಯಿಂದ ಗಂಗಾಮೂಲದ ವರೆಗೆ; (೨) ಅದರ ವಿಸ್ತಾರ ೧೦೦೦೦ ಯೋಜನ, (೩) ವಿಸ್ತಾರ, ೯೦೦೦ ಯೋಜನ ಎಂಬುದಾಗಿ ಮೂರು ಬಗೆಯಾಗಿ ಹೇಳಲಾಗಿದೆ. ವಿಸ್ತಾರ ೧೦೦೦೦ ಯೋಜನ ಎಂದಾಗ, ಅದು ಯೂರೇಷಿಯಾ ಭೂಪ್ರದೇಶವನ್ನೆಲ್ಲಾ ಕುರಿತು ಹೇಳಿದ ಮಾತು. ೯೦೦೦ ಯೋಜನ ಎಂದಾಗ, ಜಂಬೂ ದ್ವೀಪದ ದಕ್ಷಿಣದ ಅಂಚಿನಿಂದ ಬೃಹತ್ ಹಿಮಾಲಯದ ವರೆಗಿನ ವಿಸ್ತಾರವಾದ ಭರತವರ್ಷ. ಭಾರತ ದೇಶದ ಪ್ರಾಮುಖ್ಯತೆಯನ್ನು ಕುರಿತು. ಚಕ್ರವರ್ತಿಗಳು ಸಪ್ತ ದ್ವೀಪಾಧಿಪತಿಗಳಾಗಿದ್ದಾಗಲೂ, ರಾಜಧಾನಿಯಾಗಿದ್ದುದು ಭಾರತದೇಶದ ಕುರುಕ್ಷೇತ್ರ (ಹಸ್ತಿನಾವತಿ – ಈಗಿನ ದೆಹಲಿ)

ಮೇಲೆ ಹೇಳಿದ ಎಂಟು ದ್ವೀಪಗಳು ಜಂಬೂ ದ್ವೀಪದ ಉಪದ್ವೀಪಗಳು ಎಂದು ಹೇಳಿದಾಗ, ಜಂಬೂದ್ವೀಪವೆಂದರೆ ನಮ್ಮ ಭೂಗೋಳವು (ಭರತಖಂಡವು) ಮಾತ್ರ ಎಂಬ ಸಂಶಯ ಮೂಡಬಹುದು. ಆದರೆ, ಭಾರತದ ನೈಋತ್ಯ ದಿಕ್ಕಿನಲ್ಲಿ ರಾವಣನ ಲಂಕೆ ಇರಲಾಗಿ, ಜಂಬೂ ದ್ವೀಪದ ದಕ್ಷಿಣದಂಚಿನಲ್ಲಿ, ನಮ್ಮ ಭೂಗೋಳದಿಂದ ಸುಮಾರು ೭ಲಕ್ಷ ಮೈಲಿ ಕೆಳಗೆ, ಮಹಿರಾವಣನ ಪಾತಾಳಲಂಕೆ ಇದ್ದಿತೆಂಬ ಮಾತನ್ನು ನೆನಪಿನಲ್ಲಿಟ್ಟುಕೊಂಡರೆ, ಅದೇ ಹೆಸರಿನ ದ್ವೀಪಗಳು ಜಂಬೂದ್ವೀಪದ ಕೆಳಗಿನ ವಿಸ್ತೃತ ಭಾಗಗಳಲ್ಲಿಯೂ ಇರಬಹುದೆಂದು ಊಹಿಸಬಹುದು.

ಈಗಿನ ಆಸ್ಟ್ರೇಲಿಯಾ ಖಂಡದ ಈಶಾನ್ಯದಿಕ್ಕಿನಲ್ಲಿಯೂ, ಉತ್ತರ ಅಮೇರಿಕಾದ ಪೂರ್ವ ಭಾಗದಲ್ಲಿಯೂ ಕಂಡುಬರುವ ಅಚ್ಚರಿಯ ಸಮುದ್ರ ಭಾಗಗಳು ಸಗರ ಚಕ್ರವರ್ತಿಯ ಮಕ್ಕಳು ಭೂಮಿಯನ್ನು ಅಗೆದುದಕ್ಕೆ ಸಾಕ್ಷಿಯಾಗಿವೆ. ಬಹುಶಃ ಹಡಗುಗಳನ್ನೂ, ಮೇಲೆ ಹಾರುವ ವಿಮಾನಗಳನ್ನೂ ಸೆಳೆದು ನುಂಗಿಬಿಡುವ ಆ ಸಮುದ್ರ ಪ್ರದೇಶಗಳಲ್ಲಿ ಪಾತಾಳಾದಿ ಲೋಕಗಳಿಗೆ ಹೋಗುವ ಸುರಂಗಮಾರ್ಗಗಳು ಇದ್ದಿರಬಹುದು.

**ಏವಂ ತವ ಭಾರತೋತ್ತಮ ಜಂಬೂದ್ವೀಪ ವರ್ಷವಿಭಾಗೋ**
**ಯಥೋಪದೇಶಮುಪವರ್ಣಿತ ಇತಿ ॥೩೧॥**

ಭಾರತೋತ್ತಮ = ಭರತಕುಲಮಣಿಯಾದ ಅಯ್ಯಾ ಪರೀಕ್ಷಿದ್ರಾಜಾ; ಏವಂ = ಇದವರೆಗೆ ಹೇಳಿದ ಪ್ರಕಾರವಾಗಿ; ಜಂಬೂ ದ್ವೀಪ ವರ್ಷ ವಿಭಾಗಃ = ಜಂಬೂ ದ್ವೀಪದ ಭರತವರ್ಷವೆಂಬ ವಿಭಾಗವು; ಯಥೋಪದೇಶಂ = ನಮ್ಮ ತಂದೆಯಾದ ವೇದವ್ಯಾಸದೇವರು ನನಗೆ ಉಪದೇಶ ಮಾಡಿದಂತೆ; ಉಪವರ್ಣಿತಃ = ಯಥಾರೀತಿಯಲ್ಲಿ ವರ್ಣಿಸಲ್ಪಟ್ಟಿತು; ಇತಿ = ಹೀಗೆಂಬುದು ಪುರಾಣೋಕ್ತಿ.

---

# ಶ್ರೀಮದ್ಭಾಗವತ
## ಅಧ್ಯಾಯ – ಇಪ್ಪತ್ತು

**ಅತಃ ಪರಂ ಪ್ಲಕ್ಷಾದೀನಾಂ ಪ್ರಮಾಣ ಲಕ್ಷಣ ಸಂಸ್ಥಾನತೋ**
**ವರ್ಷವಿಭಾಗ ಉಪವರ್ಣ್ಯತೇ ।।೧।।**

ಅತಃ ಪರಂ = ಇನ್ನು ಮುಂದೆ; ಪ್ಲಕ್ಷಾದೀನಾಂ = ಪ್ಲಕ್ಷಮೊದಲಾದ ಇನ್ನುಳಿದ ಆರು ದ್ವೀಪಗಳ; ವರ್ಷವಿಭಾಗಃ = ಒಂದೊಂದೂ ಏಳೇಳು ಭಾಗಗಳಾಗಿ ವಿಂಗಡವಾಗಿರುವುದು; ಪ್ರಮಾಣ ಲಕ್ಷಣ ಸಂಸ್ಥಾನತಃ = ಅಳತೆ, ಲಕ್ಷಣ ಮತ್ತು ಇರುವಿಕೆಗಳ ವರ್ಣನೆಯಿಂದ; ಉಪವರ್ಣ್ಯತೇ = ವರ್ಣಿಸಲ್ಪಡುತ್ತದೆ.

**ಜಂಬೂದ್ವೀಪೋಽಯಂ ಯಾವತ್ಪ್ರಮಾಣವಿಸ್ತಾರಸ್ತಾವತಾ**
**ಕ್ಷಾರೋದಧಿನಾ ಪರಿವೇಷ್ಟಿತೋ ಯಥಾ ಮೇರುರ್ಜಂಬ್ವಾಖ್ಯೇನ**
**ಲವಣೋದಧಿರಪಿ ತತೋ ದ್ವಿಗುಣ ವಿಶಾಲೇನ ಪ್ಲಕ್ಷಾಖ್ಯೇನ**
**ಪರಿಕ್ಷಿಪ್ತೋ ಯಥಾ ಪರಿಖಾ ಬಾಹ್ಯೋಪವನೇನ। ಪ್ಲಕ್ಷೋ ಜಂಬೂ**
**ಪ್ರಮಾಣೋ ದ್ವೀಪಾಖ್ಯಾಕರೋ ಹಿರಣ್ಮಯ ಉತ್ಥಿತೋ**
**ಯತ್ರಾಗ್ನಿರುಪಾಸ್ತೇ ಸಪ್ತಜಿಹ್ವಸ್ತಸ್ಯಾಧಿಪತಿಃ ಪ್ರಿಯವ್ರತಾತ್ಮಜ**
**ಇಧ್ಮಜಿಹ್ವಃ ಸ್ವಂ ದ್ವೀಪಂ ಸಪ್ತವರ್ಷಾಣಿ ವಿಭಜ್ಯ ಸಪ್ತವರ್ಷನಾಮಭ್ಯ**
**ಆತ್ಮಜೇಭ್ಯ ಆಕಲಯ್ಯ ಸ್ವಯಮಾತ್ಮಯೋಗೇನೋಪರರಾಮ ।।೨।।**

ಅಯಂ ಜಂಬೂ ದ್ವೀಪಃ = ಈ ಜಂಬೂ ದ್ವೀಪವು; ಯಾವತ್ ಪ್ರಮಾಣ ವಿಸ್ತಾರಃ = ಎಷ್ಟು ಅಳತೆಯ ವಿಸ್ತಾರವುಳ್ಳದ್ದೋ; ತಾವತಾ = ಅಷ್ಟೇ ಪ್ರಮಾಣದಿಂದ (ಒಂದು ಲಕ್ಷ ಯೋಜನ ವಿಸ್ತಾರವುಳ್ಳ); ಕ್ಷಾರೋದಧಿನಾ = ಲವಣ ಸಮುದ್ರದಿಂದ; ಪರಿವೇಷ್ಟಿತಃ = ಸುತ್ತುವರಿಯಲ್ಪಟ್ಟಿದೆ; ಮೇರುಃ = ಮೇರುಪರ್ವತವು; ಜಂಬ್ವಾಖ್ಯೇನ ಯಥಾ = ಜಂಬೂದ್ವೀಪದಿಂದ ಹೇಗೆ ಸುತ್ತುವರಿಯಲ್ಪಟ್ಟಿರುವುದೋ ಹಾಗೆ; ಲವಣೋದಧಿಃ ಅಪಿ = ಲವಣಸಮುದ್ರವೂ ಕೂಡ; ತತಃ ದ್ವಿಗುಣ ವಿಶಾಲೇನ = ಅದಕ್ಕಿಂತ ಎರಡರಷ್ಟು ಹೆಚ್ಚು ವಿಶಾಲವಾದ; ಪ್ಲಕ್ಷಾಖ್ಯೇನ = ಪ್ಲಕ್ಷವೆಂದು ಹೆಸರುಳ್ಳ ದ್ವೀಪದಿಂದ; ಪರಿಖಾ ಬಾಹ್ಯವನೇನ ಯಥಾ = ಕೋಟೆಯ ಸುತ್ತಲಿನ ಕಂದಕವು

ಬಾಹ್ಯ ಉದ್ಯಾನದಿಂದ ಆವೃತವಾಗಿರುವಂತೆ; ಪರಿಕ್ಷಿಪ್ತಃ = ಆವರಿಸಲ್ಪಟ್ಟಿದೆ; ದ್ವೀಪಾಖ್ಯಕರಃ = ದ್ವೀಪದ ಹೆಸರಿಗೆ ಕಾರಣವಾಗಿರುವ; ಹಿರಣ್ಮಯಃ = ಬಂಗಾರ ಸದೃಶವಾದ; ಪ್ಲಕ್ಷಃ = ಪ್ಲಕ್ಷವೃಕ್ಷವು; ಜಂಬೂಪ್ರಮಾಣಃ ಉತ್ಥಿತಃ = ಜಂಬೂವೃಕ್ಷದಷ್ಟೇ ಎತ್ತರ, ವಿಸ್ತಾರ, ದಪ್ಪಗಳುಳ್ಳದ್ದಾಗಿ ಬೆಳೆದು ನಿಂತಿದೆ; (ನೂರು ಯೋಜನ ದಪ್ಪ, ಸಾವಿರದ ನೂರು ಯೋಜನ ಎತ್ತರ, ಅಷ್ಟೇ ವಿಸ್ತಾರ.); ಯತ್ರ = ಯಾವ ಪ್ಲಕ್ಷದ್ವೀಪದಲ್ಲಿ; ಸಪ್ತಜಿಹ್ವಃ ಅಗ್ನಿಃ = ಸಪ್ತಜಿಹ್ವನಾದ ಅಗ್ನಿದೇವನು; ಉಪಾಸ್ತೇ = ಸನ್ನಿಹಿತನಾಗಿದ್ದಾನೆ; ತಸ್ಯ ಅಧಿಪತಿಃ = ಆ ಪ್ಲಕ್ಷದ್ವೀಪದ ಅಧಿಪತಿಯಾದ; ಪ್ರಿಯವ್ರತಾತ್ಮಜಃ ಇಧ್ಮ ಜಿಹ್ವಃ =ಪ್ರಿಯ ವ್ರತರಾಯನ ಮಗನಾದ ಇಧ್ಮಜಿಹ್ವನು; ಸ್ವಂ ದ್ವೀಪಂ = ತನ್ನ ಆಧಿಪತ್ಯಕ್ಕೆ ಒಳಪಟ್ಟ ಆ ದ್ವೀಪವನ್ನು; ಸಪ್ತ ವರ್ಷಾಣಿ ವಿಭಜ್ಯ = ಏಳು ವರ್ಷಗಳಾಗಿ ವಿಭಾಗಿಸಿ; ಸಪ್ತ ವರ್ಷ ನಾಮಭ್ಯಃ = ದ್ವೀಪಗಳ ಹೆಸರಿನ ತನ್ನ ಏಳು ಜನ ಮಕ್ಕಳಿಗೆ; ಆಕಲಯ್ಯ = ವಹಿಸಿಕೊಟ್ಟು; ಸ್ವಯಂ = ತಾನು; ಆತ್ಮಯೋಗೇನ = ಆತ್ಮಧ್ಯಾನಯೋಗದಿಂದ; ಉಪರರಾಮ =ನಿವೃತ್ತಿ ಹೊಂದಿದನು.

**ಶಿವಂ ಯವಸಂ ಸುಭದ್ರಂ ಶಾಂತಂ ಕ್ಷೇಮಮ್ಮೃತಮಭಯಮಿತಿ**
**ವರ್ಷಾಣಿ ತೇಷು ಗಿರಯೋನದ್ಯಶ್ಚ ಸಪ್ತೈವಾಭಿಜ್ಞಾತಾಃ ॥೩॥**

ಶಿವ, ಯವಸ, ಸುಭದ್ರ, ಶಾಂತ, ಕ್ಷೇಮ, ಅಮೃತ, ಅಭಯ, ಇತಿ =ಎಂದು; ವರ್ಷಾಣಿ = ಏಳು ವರ್ಷಗಳು; ತೇಷು = ಆ ವರ್ಷಗಳಲ್ಲಿ; ಗಿರಯಃ = ಪರ್ವತಗಳು; ಚ = ಮತ್ತು; ನದ್ಯಃ = ನದಿಗಳು; ಸಪ್ತೈವ ಅಭಿಜ್ಞಾತಾಃ = ಏಳು ಏಳೇ ಆಗಿವೆ.

**ಮಣಿಕೂಟೋ ವಜ್ರಕೂಟ ಇಂದ್ರಸೇನೋ ಜ್ಯೋತಿಷ್ಮಾನ್**
**ಸುಪರ್ಣೋ ಹಿರಣ್ಯಷ್ಠೀವೋ ಮೇಘಮಾಲ ಇತಿ ಸೇತುಶೈಲಾಃ ।**
**ಅರುಣಾ ನೃಮ್ಣಾಽಙ್ಗಿರಸೀ ಸಾವಿತ್ರೀ ಸುಪ್ರಭಾತಾ ಋತಂಭರಾ**
**ಸತ್ಯಂಭರಾ ಇತಿ ಮಹಾನದ್ಯಃ । ಯಾಸಾಂ ಜಲೋಪಸ್ಪರ್ಶನ**
**ವಿಧೂತರಜಸ್ತಮಸೋ ಹಂಸ ಪತಂಗೋರ್ಧ್ವಾಯನ ಸತ್ಯಾಂಗ**
**ಸಂಜ್ಞಾಶ್ಚತ್ವಾರೋ ವರ್ಣಾಃ ಸಹಸ್ರಾಯುಷೋ ವಿಬುಧೋಪಮ**
**ಸಂದರ್ಶನ ಪ್ರಜನನಾಃ ಸ್ವರ್ಗದ್ವಾರಂ ತ್ರಯ್ಯಾ ವಿದ್ಯಯಾ ಭಗವಂತಂ**
**ತ್ರಯೀಮಯಂ ಸೂರ್ಯಮಾತ್ಮಾನಂ ಯಜಂತೇ ॥೪॥**

ಮಣಿಕೂಟ, ವಜ್ರಕೂಟ, ಇಂದ್ರಸೇನ, ಜ್ಯೋತಿಷ್ಮಾನ್, ಸುಪರ್ಣ, ಹಿರಣ್ಯಷ್ಠೀವ, ಮೇಘಮಾಲ, ಇತಿ ಸೇತುಶೈಲಾಃ = ಹೀಗೆ ಪ್ಲಕ್ಷದ್ವೀಪದಲ್ಲಿ ಏಳು ಮರ್ಯಾದಾ ಪರ್ವತಗಳಿವೆ. ಅರುಣಾ, ನೃಮ್ಣಾ, ಅಂಗಿರಸೀ, ಸಾವಿತ್ರೀ, ಸುಪ್ರಭಾತಾ,

ಋತಂಭರಾ, ಸತ್ಯಂಭರಾ; ಇತಿ ಮಹಾನದ್ಯಃ = ಹೀಗೆ ಏಳು ಮಹಾನದಿಗಳು ಇರುತ್ತವೆ.; ಯಾಸಾಂ = ಯಾವ ಆ ನದಿಗಳ; ಜಲೋಪಸ್ಪರ್ಶನ = ನೀರನ್ನು ಉಪಯೋಗಿಸುವುದರಿಂದ; ವಿಧೂತ ರಜಸ್ತಮಸಃ = ರಜೋಗುಣ ತಮೋಗುಣಗಳ ಕಾಟದಿಂದ ವಿಮುಕ್ತರಾದ; ಹಂಸ, ಪತಂಗ, ಊರ್ಧ್ವಾಯನ, ಸತ್ಯಾಂಗ ಎಂಬ, ಸಂಜ್ಞಾಃ = ಹೆಸರುಗಳುಳ್ಳ; ಚತ್ವಾರಃ ವರ್ಣಾಃ = ನಾಲ್ಕು ಬಗೆಯ ಭಗವದ್ಭಕ್ತರು; ಸಹಸ್ರಾಯುಷಃ = ಸಾವಿರ ವರ್ಷ ಆಯುಃಪ್ರಮಾಣ ಉಳ್ಳವರಾಗಿ; ವಿಬುಧೋಪಮ ಸಂದರ್ಶನ ಪ್ರಜನನಾಃ = ದೇವತಾ ಪುರುಷರನ್ನು ಹೋಲುವ ಪುತ್ರ ಸಂತಾನವುಳ್ಳವರಾಗಿ; ತ್ರಯ್ಯಾ ವಿದ್ಯಯಾ = ವೇದವಿಹಿತ ರೀತಿಯಿಂದ; ಸ್ವರ್ಗದ್ವಾರಂ = ಊರ್ಧ್ವ ಲೋಕಗಳ ಗಮನಕ್ಕೆ ದ್ವಾರದೋಪಾದಿಯಲ್ಲಿರುವ; ತ್ರಯೀಮಯಂ = ವೇದಮಂತ್ರಮಯನಾದ; ಭಗವಂತಂ = ಗುಣ ವಿಶಿಷ್ಟನಾದ; ಸೂರ್ಯಮಾತ್ಮಾನಂ = ಸೂರ್ಯನಾರಾಯಣನನ್ನು; ಯಜಂತೇ = ಪೂಜಿಸುತ್ತಾರೆ.

> ಪ್ರತ್ನಸ್ಯ ವಿಷ್ಣೋರೂಪಂ ಯತ್ಸತ್ಯಸ್ಯರ್ತಸ್ಯ ಬ್ರಹ್ಮಣಃ ।
> ಅಮೃತಸ್ಯ ಚ ಮೃತ್ಯೋಶ್ಚ ಸೂರ್ಯ ಮಾತ್ಮಾನಮೀಮಹಿ ಇತಿ ॥೫॥

ಪ್ರತ್ನಸ್ಯ = ಆದ್ಯರಿಗೆಲ್ಲಾ ಆದ್ಯಪುರುಷನಾದ; ಸತ್ಯಸ್ಯ = ಪ್ರತ್ಯಕ್ಷ ಸತ್ಯಕ್ಕೂ; ಋತಸ್ಯ = ಅಪ್ರತ್ಯಕ್ಷ ವೇದೋಕ್ತ ಸತ್ಯಕ್ಕೂ; ಬ್ರಹ್ಮಣಃ = ಸೃಷ್ಟಿಕರ್ತನಿಗೂ; ಚ = ಮತ್ತು; ಅಮೃತಸ್ಯ = ಮುಕ್ತಿ ಸಾಮ್ರಾಜ್ಯಕ್ಕೂ; ಚ = ಮತ್ತು; ಮೃತ್ಯೋಃ = ಮರಣಾದಿ ಪರಿಣಾಮಗಳಿಗೂ; ಯತ್ ವಿಷ್ಣೋಃ ರೂಪಂ = ಯಾವ ವಿಷ್ಣುಪರಮಾತ್ಮನ ರೂಪವು ಕಾರಣರೂಪವೋ, ಅಂತಹ; ಸೂರ್ಯಮಾತ್ಮಾನಂ = ಆತ್ಮರಿಗೆಲ್ಲಾ ಆತ್ಮನಾದ ಸೂರ್ಯನಾರಾಯಣನನ್ನು; ಈಮಹಿ = ಶರಣು ಹೋಗುತ್ತೇವೆ; ಇತಿ = ಹೀಗೆಂದು ಧ್ಯಾನಮಾಡುತ್ತಾರೆ.

> ಪ್ಲಕ್ಷಾದಿಷು ಪಂಚಸು ಪುರುಷಾಣಾಮಾಯುರಿಂದ್ರಿಯ ಮೋಜಃ
> ಸಹೋಬಲಂ ಬುದ್ಧಿ ವಿಕ್ರಮ ಇತಿ ಚ ಸರ್ವೇಷಾಮೌತ್ಪತ್ತಿಕೀ
> ಸಿದ್ಧಿರವಿಶೇಷಣ ವರ್ತತೇ ॥೬॥

ಪ್ಲಕ್ಷಾದಿಷು ಪಂಚಸು = ಪ್ಲಕ್ಷವೇ ಮೊದಲಾದ ಐದು ದ್ವೀಪಗಳಲ್ಲಿ; ಪುರುಷಾಣಾಂ ಆಯುಃ = ಸ್ತ್ರೀ ಪುರುಷರ ಆಯುಷ್ಯ; ಇಂದ್ರಿಯ = ಇಂದ್ರಿಯಗಳ ಪಟುತ್ವ; ಓಜಃ = ದೇಹ ಕಾಂತಿ; ಸಹಃ = ಸಹನ ಶಕ್ತಿ; ಬಲಂ = ದೇಹಬಲ; ಬುದ್ಧಿಃ = ಮೇಧಾಶಕ್ತಿ; ವಿಕ್ರಮಃ = ಕಾರ್ಯ ಜಯ; ಇತಿ ಚ = ಹೀಗೆಂಬುವು;

ಸರ್ವೇಷಾಂ = ಎಲ್ಲರಿಗೂ; ಅವಿಶೇಷೇಣ = ತಾರತಮ್ಯ ವಿಲ್ಲದೆ; ಔತ್ಪತ್ತಿಕೀ ಸಿದ್ಧಿಃ = ಹುಟ್ಟಿನಿಂದಲೇ ಪ್ರಾಪ್ತವಾದ ಗುಣ ವಿಶೇಷವು; ವರ್ತತೇ = ಇರುತ್ತದೆ.

ಪ್ಲಕ್ಷಃ ಸ್ವಸಮಾನೇನೇಕ್ಷುರಸೋದೇನಾವೃತೋ ಯಥಾ ತಥಾ
ದ್ವೀಪೋಽಪಿ ಶಾಲ್ಮಲೋ ದ್ವಿಗುಣ ವಿಶಾಲಃ ಸಮಾನೇನ
ಸುರೋದೇನಾವೃತಃ ಪರಿವೃಙ್ಕ್ತೇ ॥೭॥

ಪ್ಲಕ್ಷಃ = ಪ್ಲಕ್ಷದ್ವೀಪವು; ಸ್ವಸಮಾನೇನ = ತನ್ನಷ್ಟೇ ವಿಶಾಲವಾದ (ನಾಲ್ಕು ಲಕ್ಷ ಯೋಜನ); ಯಥಾ ಆವೃತಃ = ಹೇಗೆ ಆವರಿಸಲ್ಪಟ್ಟಿರುವುದೋ; ತಥಾ = ಹಾಗೆಯೇ; ಶಾಲ್ಮಲಃ ದ್ವಿಗುಣವಿಶಾಲಃ = ಎರಡರಷ್ಟು (ಎಂಟು ಲಕ್ಷ ಯೋಜನ) ವಿಶಾಲವಾಗಿದ್ದು; ಸಮಾನೇನ ಸುರೋದೇನ = ತನ್ನಷ್ಟೇ ವಿಶಾಲವಾದ ಸುರಾಸಮುದ್ರದಿಂದ; ಆವೃತಃ ಪರಿವೃಙ್ಕ್ತೇ = ಸುತ್ತುವರಿಯಲ್ಪಟ್ಟು ಇರುತ್ತದೆ.

ಸುರಾಸಮುದ್ರ ಎಂದರೆ ಮಾದಕ ದ್ರವ್ಯದಿಂದ ಕೂಡಿರುವುದಲ್ಲ. ಆದರೆ ಸಾತ್ವಿಕರೀತಿಯಲ್ಲಿ ಮತ್ತುಬರಿಸುವ ಗುಣ ಆ ನೀರಿನಲ್ಲಿದೆ ಎಂದು ತಿಳಿಯಬೇಕು.

ಯತ್ರಹವೈಶಾಲ್ಮಲೀ ಪ್ಲಕ್ಷಾಯಾಮಾ ಯಸ್ಯಾಂ ವಾವ ಕಿಲ
ನಿಲಯಮಾಹುರ್ಭಗವತಶ್ಛಂದಸ್ತುತಃ ಪತತ್ರಿ ರಾಜಸ್ಯ ಸಾ
ದ್ವೀಪಹೂತಯೇ ಉಪಲಕ್ಷ್ಯತೇ ॥೮॥

ಯತ್ರ ಹ ವೈ = ಯಾವ ಆ ದ್ವೀಪದಲ್ಲಿಯಾದರೋ; ಶಾಲ್ಮಲೀ = ಶಾಲ್ಮಲೀವೃಕ್ಷವು; ಪ್ಲಕ್ಷಾಯಾಮಾ = ಪ್ಲಕ್ಷವೃಕ್ಷದಷ್ಟೇ ಪ್ರಮಾಣಗಳುಳ್ಳದ್ದಾಗಿದೆ; ಯಸ್ಯಾಂ = ಯಾವ ಆ ವೃಕ್ಷದಲ್ಲಿ; ವಾವ ಕಿಲ = ನಿಜವಾಗಿಯೂ; ಛಂದಸ್ತುತಃ = ವೇದ ವಿಖ್ಯಾತರಾದ; ಭಗವತಃ ಪತತ್ರಿರಾಜಸ್ಯ = ಭಗವಾನ್ ಗರುಡದೇವರ; ನಿಲಯಂ = ಆವಾಸಸ್ಥಾನವು ಎಂದು; ಆಹುಃ = ತಿಳಿದವರು ಹೇಳುತ್ತಾರೆ; ಸಾ = ಆ ಶಾಲ್ಮಲೀವೃಕ್ಷವು; ದ್ವೀಪಹೂತಯೇ ಉಪಲಕ್ಷ್ಯತೇ = ಶಾಲ್ಮಲ ದ್ವೀಪವೆಂಬ ಹೆಸರಿಗೆ ಉಪಲಕ್ಷಣವಾಗಿದೆ.

ಇಂದ್ರಾದಿ ದೇವತೆಗಳು ತಮ್ಮತಮ್ಮ ಸ್ಥಾನಮಾನಗಳಿಗೆ ಅನುಗುಣವಾಗಿ ವೇದಪ್ರತಿಪಾದ್ಯರಾಗಿರುವಂತೆ ಗರುಡದೇವರು ಇನ್ನೂ ಹೆಚ್ಚಿನ ರೀತಿಯಲ್ಲಿ ವೇದಪ್ರತಿಪಾದ್ಯರಾಗಿದ್ದಾರೆ. ಅವರ ರೆಕ್ಕೆಯ ಬಡಿತದಿಂದ ಬರುವ ಶಬ್ದವಾಹಿನಿಯು ವೇದಮಂತ್ರಗಳ ರೂಪದಲ್ಲಿರುತ್ತದೆ. ಒಂದಂಶದಿಂದ ಅವರು ಶಾಲ್ಮಲೀ ದ್ವೀಪದಲ್ಲಿರುತ್ತಾರೆ.

ತದ್ವಿೀಪಾಧಿಪತಿಃ ಪ್ರಿಯವ್ರತಾತ್ಮಜೋ ಯಜ್ಞಬಾಹುಃ ಸ್ವಸುತೇಭ್ಯಃ ಸಪ್ತಭ್ಯಸ್ತನ್ನಾಮಾನಿ ಸಪ್ತವರ್ಷಾಣಿ ವ್ಯಭಜತ್ಸುರೋಚನಂ ಸೌಮನಸ್ಯಂ ರಮಣಕಂ ದೇವವರ್ಷಂ ಪಾರಿಭದ್ರಮಾಪ್ಯಾಯನಮವಿಜ್ಞಾತಮಿತಿ ||೯||

ತತ್ ದ್ವೀಪಾಧಿಪತಿಃ = ಆ ದ್ವೀಪಕ್ಕೆ ಅಧಿಪತಿಯಾದ; ಪ್ರಿಯವ್ರತಾತ್ಮಜಃ ಯಜ್ಞಬಾಹುಃ = ಪ್ರಿಯವ್ರತ ಪುತ್ರನಾದ ಯಜ್ಞಬಾಹುವು; ಸ್ವಸುತೇಭ್ಯಃ ಸಪ್ತಭ್ಯಃ = ತನ್ನ ಏಳುಜನ ಮಕ್ಕಳಿಗೆ; ತನ್ನಾಮಾನಿ = ಅವರ ಹೆಸರುಗಳಿಂದಲೇ ಶೋಭಿಸುವ; ಸುರೋಚನ, ಸೌಮನಸ್ಯ, ರಮಣಕ, ದೇವವರ್ಷ, ಪಾರಿಭದ್ರ, ಆಪ್ಯಾಯನ, ಅವಿಜ್ಞಾತ, ಇತಿ ಹೀಗೆ ಏಳು ವರ್ಷಗಳನ್ನಾಗಿ; ವ್ಯಭಜತ್ = ವಿಭಾಗ ಮಾಡಿ ಕೊಟ್ಟನು.

ತೇಷುವರ್ಷಾದ್ರಯೋ ನದ್ಯಶ್ಚ ಸಪ್ತೈವಾಭಿಜ್ಞಾತಾಃ ಸ್ವರಸಃ ಶತಶೃಂಗೋ ವಾಮದೇವಃ ಕುಂದೋಮುಕುಂದಃ ಪುಷ್ಪವರ್ಷಃ ಸಹಸ್ರಶ್ರುತಿರಿತಿ।

ಅನುಮತಿಃ ಸಿನೀವಾಲೀ ಸರಸ್ವತೀ ಕುಹೂ ರಜನೀ ನಂದಾ ರಾಕೇತಿ ||೧೦||

ಆ ದ್ವೀಪವನ್ನು ವರ್ಷಗಳಾಗಿ ವಿಭಾಗಿಸುವ ಪರ್ವತಗಳು ಸ್ವರಸ, ಶತಶೃಂಗ, ವಾಮದೇವ, ಕುಂದ, ಮುಕುಂದ, ಪುಷ್ಪವರ್ಷ, ಸಹಸ್ರಶ್ರುತಿ; ನದಿಗಳು– ಅನುಮತಿ, ಸಿನೀವಾಲೀ, ಸರಸ್ವತೀ, ಕುಹೂ, ರಜನೀ, ನಂದಾ, ರಾಕಾ.

ತದ್ವರ್ಷ ಪುರುಷಾಃ ಶ್ರುತಧರ ವೀರ್ಯಧರ ವಸುಂಧರೇಷಂಧರ ಸಂಜ್ಞಾ ಭಗವಂತಂ ವೇದಮಯಂ ಸೋಮಮಾತ್ಮಾನಂ ವೇದೇನ ಯಜಂತೇ ||೧೧||

ಇಲ್ಲಿನ ನಾಲ್ಕು ಬಗೆಯ ಭಗವದ್ಭಕ್ತರು – ಶ್ರುತಧರ, ವೀರ್ಯಧರ, ವಸುಂಧರ, ಈಷಂಧರ. ಸೋಮಾಂತರ್ಗತ ಭಗವಂತನನ್ನು ವೇದಮಂತ್ರಗಳಿಂದ ಪೂಜಿಸುತ್ತಾರೆ.

ಏವಂ ಸುರೋದಾದ್ಬಹಿಃ ತದ್ವಿಗುಣಃ ಸಮಾನೇನಾವೃತೋ ಘೃತೋದೇನ ಯಥಾಪೂರ್ವಃ ಕುಶದ್ವಿಪೋ ಯಸ್ಮಿನ್ ಕುಶಸ್ತಂಭೋ ದೇವಕೃತಸ್ತದ್ವಿೀಪಾಖ್ಯಾಕರೋ ಜ್ವಲನ ಇವಾಪರಃ ಸ್ವಶಷ್ಪರೋಚಿಷಾ ದಿಶೋ ವಿರಾಜಯತಿ ||೧೨||

ಏವಂ = ಇದೇ ರೀತಿಯಾಗಿ; ಸುರೋದಾತ್ ಬಹಿಃ = ಸುರಾಸಮುದ್ರದ ಹೊರಗೆ; ತದ್ದ್ವಿಗುಣಃ = ಶಾಲ್ಮಲ ದ್ವೀಪಕ್ಕೆ, ಅಂತೆಯೇ ಸುರಾಸಮುದ್ರಕ್ಕೆ ಎರಡರಷ್ಟು ಪ್ರಮಾಣವುಳ್ಳದ್ದಾಗಿ; ಯಥಾಪೂರ್ವಃ = ಶಾಲ್ಮಲ ದ್ವೀಪದಂತೆ; ಘೃತೋದೇನ ಆವೃತಃ = ಘೃತಸಮುದ್ರದಿಂದ ಆವೃತವಾಗಿ; ಕುಶದ್ವೀಪಃ = ಕುಶದ್ವೀಪವು ಇದೆ; ಯಸ್ಮಿನ್ = ಯಾವ ಆ ದ್ವೀಪದಲ್ಲಿ; ದೇವಕೃತಃ = ಭಗವಂತನಿಂದ ನಿರ್ಮಿತವಾದ; ತದ್‌ದ್ವೀಪ ಆಖ್ಯಾಕರಃ = ಆ ದ್ವೀಪದ ಹೆಸರಿಗೆ ಕಾರಣವಾದ; ಅಪರಃ ಜ್ವಲನಃ ಇವ =ಎರಡನೆಯ ಅಗ್ನಿಯೋ ಎಂಬಂತಿರುವ; ಕುಶಸ್ತಂಭಃ = ಅತ್ಯಂತ ಎತ್ತರವಾದ ಕುಶಸ್ತಂಭವು; ಸ್ವಶಷ್ಪರೋಚಿಷಾ = ತನ್ನ ಎಸಳುಗಳ ಕಾಂತಿಯಿಂದ; ದಿಶಃ ವಿರಾಜಯತಿ = ದಿಕ್ಕುಗಳನ್ನು ಪ್ರಕಾಶಗೊಳಿಸುತ್ತದೆ.

ಕುಶದ್ವೀಪದ ವಿಸ್ತಾರ, ಎಂಟು ಲಕ್ಷಯೋಜನ; ಘೃತಸಮುದ್ರವೂ ಅಷ್ಟೇ ವಿಸ್ತಾರ. ಕುಶಸ್ತಂಭ ಎಂಬುದು ಗುಂಪಾಗಿ ಬೆಳೆದ ದರ್ಭೆಯ ಹುಲ್ಲಿನ ಸಮೂಹ ಸಕಲ ವೈದಿಕ ಕಾರ್ಯಗಳಲ್ಲಿಯೂ ಉಪಯೋಗಿಸಬೇಕಾಗಿರುವ ದರ್ಭೆಯ ಪಾವಿತ್ರ್ಯತೆಯು ಅದರ ಕಾಂತಿಯಿಂದ ಇಲ್ಲಿ ಪ್ರಕಟವಾಗಿದೆ.

**ತದ್‌ದ್ವೀಪಪತಿಃ ಪ್ರೈಯವ್ರತೋರಾಜನ್ ಹಿರಣ್ಯರೇತಾ ನಾಮ ಸ್ವಂ ದ್ವೀಪಂ ಸಪ್ತಭ್ಯಃ ಸ್ವಪುತ್ರೇಭ್ಯೋ ಯಥಾ ಭಾಗಂ ವಿಭಜ್ಯ ಸ್ವಯಂ ತಪ ಆತಿಷ್ಠತ ವಸು ವಸುದಾನ ದೃಢರುಚಿ ನಾಭಿಗುಪ್ತಸ್ತುತ್ಯವ್ರತ ವಿವಿಕ್ತ ವಾಮದೇವ ನಾಮಭ್ಯಃ ॥೧೪॥**

ರಾಜನ್ = ಅಯ್ಯಾ ಪರೀಕ್ಷಿದ್ರಾಜಾ; ಪ್ರೈಯವ್ರತಃ = ಪ್ರಿಯವ್ರತ ಪುತ್ರನಾದ; ತದ್‌ದ್ವೀಪ ಪತಿಃ = ಆ ಕುಶದ್ವೀಪದ 'ಅಧಿಪತಿಯಾದ; ಹಿರಣ್ಯರೇತಾ ನಾಮ = ಹಿರಣ್ಯರೇತನೆಂಬ ರಾಜನು; ಸ್ವಂ ದ್ವೀಪಂ = ತನ್ನ ಅಧಿಪತ್ಯಕ್ಕೊಳಗಾದ ದ್ವೀಪವನ್ನು; ವಸು, ವಾಸುದಾನ, ದೃಢರುಚಿ ನಾಭಿಗುಪ್ತಸ್ತುತ್ಯವ್ರತ ವಿವಿಕ್ತ ವಾಮದೇವ ನಾಮಭ್ಯಃ

ವಸು, ವಸುದಾನ, ದೃಢರುಚಿ, ನಾಭಿಗುಪ್ತ, ಸ್ತುತ್ಯವ್ರತ, ವಿವಿಕ್ತ, ವಾಮದೇವ; ನಾಮಭ್ಯಃ = ಎಂಬ ಹೆಸರುಗಳುಳ್ಳ; ಸಪ್ತಭ್ಯಃ ಸ್ವಪುತ್ರೇಭ್ಯಃ = ತನ್ನ ಏಳು ಜನ ಮಕ್ಕಳಿಗೆ; ಯಥಾಭಾಗಂ ವಿಭಜ್ಯ = ಯುಕ್ತರೀತಿಯಲ್ಲಿ ಹಂಚಿಕೊಟ್ಟು; ಸ್ವಯಂ = ತಾನು; ತಪ ಆತಿಷ್ಠತ = ತಪೋನಿರತಾದನು. ॥೧೪॥

ಕುಶದ್ವೀಪದ ಏಳು ಸೀಮಾಪರ್ವತಗಳು – ಚಕ್ರ, ಚತುಃಶೃಂಗ, ಕಪಿಲ, ಚಿತ್ರಕೂಟ, ದೇವಾನೀಕಾ, ಊರ್ಧ್ವರೋಮಾ, ದ್ರವಿಣ.

ನದಿಗಳು- ರಸಕುಲ್ಯಾ, ಮಧುಕುಲ್ಯಾ, ಮಿತ್ರವಿಂದಾ, ಶ್ರುತವಿಂದಾ, ದೇವಗರ್ಭಾ, ಘೃತಚ್ಯುತಾ, ಮಂತ್ರಮಾಲಾ.

ಪ್ರಜೆಗಳು- ಕುಶಲ, ಕೋವಿದ, ಅಭಿಯುಕ್ತ, ಕುಲಕ. ಇವರು ಕರ್ಮಕೌಶಲ ದಿಂದ ಅಗ್ನ್ಯಂತರ್ಗತ ಭಗವಂತನನ್ನು ಆರಾಧಿಸುತ್ತಾರೆ.

**ತಥಾಘೃತೋದಾದ್ಬಹಿಃ ಕ್ರೌಂಚ ದ್ವೀಪೋ ದ್ವಿಗುಣಃ ಸ್ವಮಾನೇನ**
**ಕ್ಷೀರೋದೇನ ಪರಿತ ಉಪಕ್ಲೃಪ್ತೋವೃತೋ ಯಥಾಕುಶದ್ವೀಪೋ**
**ಘೃತೋದೇನ ಯಸ್ಮಿನ್ ಕ್ರೌಂಚೋನಾಮ ಪರ್ವತ ರಾಜೋ**
**ದ್ವೀಪನಾಮ ನಿರ್ವರ್ತಕ ಆಸ್ತೇ ||೧೮||**

ತಥಾ = ಹಾಗೆಯೇ; ಘೃತೋದಾದ್ಬಹಿಃ = ಘೃತಸಮುದ್ರದ ಹೊರಗೆ; ಕ್ರೌಂಚ ದ್ವೀಪಃ ದ್ವಿಗುಣಃ = ಎರಡರಷ್ಟು ಹೆಚ್ಚು ವಿಸ್ತಾರವಾದ ಕ್ರೌಂಚದ್ವೀಪವು; ಯಥಾ ಕುಶದ್ವೀಪಃ ಘೃತೋದೇನವೃತಃ = ಕುಶದ್ವೀಪವು ಘೃತಸಮುದ್ರದಿಂದ ಆವೃತವಾಗಿರುವಂತೆ; ಸ್ವಸಮಾನೇನ = ತನ್ನಷ್ಟೇ ವಿಸ್ತಾರವಾದ; ಕ್ಷೀರೋದೇನ =ಕ್ಷೀರ ಸಮುದ್ರದಿಂದ; ಪರಿತಃ ಉಪಕ್ಲೃಪ್ತಃ = ಸುತ್ತುವರಿಯಲ್ಪಟ್ಟಿದೆ; ಯಸ್ಮಿನ್ = ಯಾವ ಆ ಕ್ರೌಂಚದ್ವೀಪದಲ್ಲಿ; ದ್ವೀಪನಾಮ ನಿರ್ವರ್ತಕಃ = ದ್ವೀಪಕ್ಕೆ ಹೆಸರನ್ನು ಒದಗಿಸಿರುವ; ಕ್ರೌಂಚೋನಾಮ ಪರ್ವತರಾಜಃ = ಕ್ರೌಂಚವೆಂಬ ಪರ್ವತ ಶ್ರೇಷ್ಠವು; ಆಸ್ತೇ =ಇರುವುದು.

ಈ ದ್ವೀಪದ ವಿಸ್ತಾರ 16ಲಕ್ಷಯೋಜನ. ಕ್ಷೀರಸಮುದ್ರದ ವಿಸ್ತಾರವೂ ಅಷ್ಟೇ.

ಘೃತಸಮುದ್ರವಾದಮೇಲೆ ಇರುವುದು ದಧಿ ಸಮುದ್ರ. ಆದರೆ, ಇಲ್ಲಿ ಕ್ಷೀರ ಸಮುದ್ರ ಎಂದು ಹೇಳಿದೆ. ಇದನ್ನೇ ದಧಿ ಸಮುದ್ರವೆಂದೂ, ಮುಂದೆ ಹೇಳುವ ದಧಿ ಸಮುದ್ರವನ್ನು ಕ್ಷೀರ ಸಮುದ್ರವೆಂದೂ ತಿಳಿಯಬೇಕೆಂದು ಶ್ರೀಮನ್ ಮಧ್ವಾಚಾರ್ಯರು ಯುಕ್ತಿಯುಕ್ತವಾಗಿ ಹೇಳಿದ್ದಾರೆ.

"ಅನಾವಿಲ್ಲಂತು ದಧಿಕ್ಷೀರಂ, ಸಾಂದ್ರಂಕ್ಷೀರಂ ದಧಿಸ್ಮೃತಂ" ಪ್ರಿಯವ್ರತಪುತ್ರನಾದ ಘೃತಪೃಷ್ಠನ ಮಕ್ಕಳಾದ ಏಳು ಮಂದಿ ವರ್ಷಾಧಿಪತಿಗಳು- ಆಮ, ಮಧುರುಹ, ಮೇಘಪೃಷ್ಠ ಸುಧಾಮಾ, ಭ್ರಾಜಿಷ್ಠ, ಲೋಹಿತಾರ್ಣ, ವನಸ್ಪತಿ.

ಪರ್ವತಗಳು-ಶುಕ್ಲ, ವರ್ಧಮಾನ, ಭೋಜನ, ಉಪಬರ್ಹಣ, ನಂದ, ನಂದನ, ಸರ್ವತೋಭದ್ರ.

ನದಿಗಳು–ಅಭಯಾ, ಅಮೃತೌಘಾ, ಆರ್ಯಕಾ, ತೀರ್ಥವತೀ, ರೂಪವತೀ, ಪವಿತ್ರವತೀ, ಶುಕ್ಲಾ.

ಅಲ್ಲಿನ ಪುರುಷರು– ಪುರುಷ, ಋಷಭ, ದ್ರವಿಣ, ದೇವಕ.

**ಏವಂ ಪುರಸ್ತಾತ್ ಕ್ಷೀರೋದಾತ್ಪರಿತ ಉಪವೇಶಿತಃ ಶಾಕ ದ್ವೀಪೋ ದ್ವಾತ್ರಿಂಶಲ್ಲಕ್ಷ ಯೋಜನಾಯಾಮಃ ಸಮಾನೇನಚ ದಧಿಮಂಡೋದೇನ ಪರಿತೋ ಯಸ್ಮಿನ್ ಶಾಕೋನಾಮ ಮಹೀರುಹಃ ಸ್ವಕ್ಷೇತ್ರ ವ್ಯಪದೇಶಕೋ ಯಸ್ಯಹ ಮಹಾಸುರಭಿಗಂಧಸ್ತಂ ದ್ವೀಪಮನುವಾಸಯತಿ ॥೨೪॥**

ಏವಂ = ಇದೇ ರೀತಿಯಾಗಿ; ಪರಸ್ತಾತ್ = ಅಲ್ಲಿಂದ ಮುಂದೆ; ಕ್ಷೀರೋದಾತ್ ಪರಿತಃ = ಕ್ಷೀರಸಮುದ್ರದ (ದಧಿ ಸಮುದ್ರದ) ಸುತ್ತಲೂ; ಶಾಕದ್ವೀಪಃ ಉಪವೇಶಿತಃ = ಶಾಕದ್ವೀಪವು ಕಲ್ಪಿತವಾಗಿದೆ; ದ್ವಾತ್ರಿಂಶಲ್ಲಕ್ಷ ಯೋಜನಾಯಮಃ = ಅದರ ವಿಸ್ತಾರ ೩೨ ಲಕ್ಷ ಯೋಜನ; ಪರಿತಃ = ಸುತ್ತಲೂ; ಸಮಾನೇನಚ =ಅಷ್ಟೇ ವಿಸ್ತಾರವುಳ್ಳ; ದಧಿ ಮಂಡೋದೇನ = ದಧಿ(ಕ್ಷೀರ) ಸಮುದ್ರದಿಂದ (ಆವೃತವಾಗಿದೆ); ಯಸ್ಮಿನ್ = ಯಾವ ಆದ್ವೀಪದಲ್ಲಿ; ಶಾಕಃ = ಶಾಕ ಎಂಬ ಹೆಸರಿನ ವೃಕ್ಷವು; ಸ್ವಕ್ಷೇತ್ರವ್ಯ ಪದೇಶಕಃ ನಾಮ ಮಹೀರುಹಃ = ತಾನಿರುವ ದ್ವೀಪದ ಹೆಸರನ್ನು ಸೂಚಿಸುತ್ತದೆ; ಯಸ್ಯಹ = ಪ್ರಸಿದ್ಧವಾಗಿರುವಂತೆ, ಯಾವ ಆ ವೃಕ್ಷದ; ಮಹಾ ಸುರಭಿಗಂಧಃ = ಅತ್ಯಂತ ಸಮೀಚೀನವಾದ ಸುಗಂಧವು; ತಂ ದ್ವೀಪಂ ಅನುವಾಸಯತಿ = ಆ ದ್ವೀಪವನ್ನೆಲ್ಲಾ ಸುಗಂಧಯುಕ್ತವನ್ನಾಗಿ ಮಾಡುತ್ತದೆ.

ವೃತ್ತಾಕಾರವಾದ ಈ ದ್ವೀಪದ ಒಂದು ದಿಕ್ಕಿನಿಂದ ಅದಕ್ಕೆ ಅಭಿಮುಖವಾದ ದಿಕ್ಕಿನವರೆಗೆ, (1½+4+8+16+32)x2 ಲಕ್ಷ ಯೋಜನಗಳ ಅಂತರವಾಗುತ್ತದೆ. ಇದನ್ನೆಲ್ಲಾ ಒಂದೇ ವೃಕ್ಷವು ಸುವಾಸನೆಯಿಂದ ತುಂಬುತ್ತದೆ ಎನ್ನುವುದಕ್ಕೆ ಬದಲಾಗಿ, ಅಂತಹ ವೃಕ್ಷಗಳು ಅಲ್ಲಲ್ಲಿ ಅನೇಕವಾಗಿವೆ ಎಂದು ಹೇಳಬಹುದು.

ಅಲ್ಲಿನ ಅಧಿಪತಿಯಾಗಿದ್ದ ಪ್ರಿಯವ್ರತ ಪುತ್ರರು– ಮೇದಾತಿಥಿ. ಏಳುಮಂದಿ ಮಕ್ಕಳು– ಪುರೋಜವ, ಮನೋಜವ, ಪವಮಾನ, ಧೂಮ್ರಾನೀಕ, ಚಿತ್ರರೇಫ, ಬಹುರೂಪ, ವಿಶ್ವಧಾರ. (ಈ ಹೆಸರುಗಳನ್ನೂ, ಹಿಂದೆ ಹೇಳಿದ ಹೆಸರುಗಳನ್ನೂ ವಿಮರ್ಶೆಮಾಡಿ ನೋಡಿದರೆ, ಅವು ಬಹು ಅರ್ಥಗರ್ಭಿತವಾಗಿದ್ದು, ಭಗವಂತನ ಸಂಕಲ್ಪದಂತೆ ವಿಶ್ವದ ವಿವಿಧ ಕಾರ್ಯಾಚರಣೆಗಳಲ್ಲಿ ತೊಡಗಿರುವವರು ಆ ಮಹಾ ಪುರುಷರು ಎಂದು ಭಾಸವಾಗುತ್ತದೆ. ಇದರಂತೆ ಪರ್ವತಗಳ ಮತ್ತು ನದಿಗಳ ಹೆಸರುಗಳೂ ಕೂಡ)

ಪರ್ವತಗಳು– ಈಶಾನ, ಉರುಶೃಂಗ, ಬಲಭದ್ರ, ಶತಕೇಸರ, ಸಹಸ್ರಸ್ರೋತ, ದೇವಪಾಲ, ಮಹಾನಸ.

ನದಿಗಳು– ಅನಘಾ, ಆಯುರ್ದಾ, ಉಭಯ ಸ್ಪೃಷ್ಟಿ, ಅಪರಾಜಿತಾ, ಪಂಚಪದೀ, ಸಹಸ್ರಸ್ರುತಿ, ನಿಜಧೃತಿ.

ಅಲ್ಲಿನ ಪುರುಷರು – ಋತವ್ರತ, ಸತ್ಯವ್ರತ, ದಾನವ್ರತ, ಅನುವ್ರತ, (ಈ ರೀತಿಯ ಹೆಸರುಗಳೂ ಕೂಡ ಬಹು ಅರ್ಥಗರ್ಭಿತವಾಗಿವೆ. ಋತವ್ರತ = ವೈದಿಕ ಮನೋವೃತ್ತಿಯ ಬ್ರಾಹ್ಮಣರಂತಹವರು; ಸತ್ಯವ್ರತ = ದೃಶ್ಯಮಾನ ಸತ್ಯಕ್ಕನುಗುಣವಾಗಿ ಜೀವನ ವ್ಯವಸ್ಥೆಗೊಳಿಸುವ ಕ್ಷತ್ರಿಯರಂತಹವರು; ದಾನವ್ರತ = ಗಳಿಸಿದ ದ್ರವ್ಯಗಳನ್ನು ಹಂಚಿಕೊಡುವ ವೈಶ್ಯರಂತಹವರು; ಅನುವ್ರತ = ಮೇಲೆ ಹೇಳಿದ ಮಾವರನ್ನು ಅನುಸರಿಸಿ ಬಾಳುವ ಶೂದ್ರರಂತಹವರು.)

**ಅಂತಃ ಪ್ರವಿಶ್ಯ ಭೂತಾನಿ ಯೋಬಿಭರ್ತ್ಯಾತ್ಮಕೇತುಭಿಃ ।**
**ಅಂತರ್ಯಾಮೀಶ್ವರಃ ಸಾಕ್ಷಾತ್ಪಾತು ನೋಯದ್ವಶೇ ಸ್ಫುಟಂ ॥೨೮॥**

ಭೂತಾನಿ = ಜಗದ್ವಸ್ತುಗಳನ್ನೂ, ಜೀವರನ್ನೂ; ಅಂತಃ ಪ್ರವಿಶ್ಯ = ಒಳಹೊಕ್ಕು ನಿಂತು; ಯಃ = ಯಾವ ಮಹಾನುಭಾವನು; ಆತ್ಮಕೇತುಭಿಃ = ತನ್ನ ಸನ್ನಿಧಾನ ವಿಶೇಷಗಳಿಂದ; ಬಿಭರ್ತಿ = ವಹಿಸಿರಕ್ಷಿಸುತ್ತಿರುವನೋ; ಸ್ಫುಟಂ = ಪ್ರತ್ಯಕ್ಷ ಆಗಮ ಅನುಮಾನಗಳಿಂದ ಸ್ಪಷ್ಟವಾಗಿ ತಿಳಿದುಬರುವಂತೆ; ಯದ್ವಶೇ = ಎಲ್ಲವೂ ಯಾರ ವಶದಲ್ಲಿದೆಯೋ; ಸಾಕ್ಷಾತ್ ಅಂತರ್ಯಾಮಿ ಈಶ್ವರಃ = ನಮ್ಮ ಹೃದಯಗಳಲ್ಲಿ ಅಂತರ್ಯಾಮಿಯಾಗಿದ್ದು ಅಪರೋಕ್ಷದಿಂದ (ಪ್ರತ್ಯಕ್ಷವಾಗಿ = ಒಳಗಣ್ಣಿಗೆ ಗೋಚರಿಸಿ) ಕಂಡುಬರುವನೋ ಅಂತಹ ಜಗದೊಡೆಯನು; ನಃ = ನಮ್ಮನ್ನು; ಪಾತು = ರಕ್ಷಿಸಲಿ.

ಜಗತ್ತಿನಲ್ಲಿರುವ ಸಕಲರನ್ನೂ ರಕ್ಷಿಸಲಿ ಎಂಬುದು ಪ್ರಾರ್ಥನೆಯ ಉದ್ದೇಶ.

ಕೋಟಿ ಕೋಟಿ ಕೋಟಿ ಸಂಖ್ಯೆಯಲ್ಲಿ ಗುಂಪುಗುಂಪಾಗಿ ಕೋಟಿಕೋಟಿ ಕಿ.ಮೀ.ಗಳ ಅಂತರದಲ್ಲಿರುವ ನಕ್ಷತ್ರಗಳನ್ನು ಕುರಿತು ಹೇಳುವ ಈಗಿನ ವಿಜ್ಞಾನಿಗಳು ಅವುಗಳು ಹೇಗೆ ಉಂಟಾದುವು, ಏಕೆ ಎಂಬುದನ್ನರಿಯರು. ಸೃಷ್ಟಿಯ ವ್ಯವಸ್ಥೆಯನ್ನೂ, ಸೌಂದರ್ಯವನ್ನೂ, ಉದ್ದೇಶವನ್ನು ಹೇಳಲಾರದ ಅವರೆಂತಹ ವಿಜ್ಞಾನಿಗಳು?

ಕೋಟಿ ಕೋಟಿ ಯೋಜನಗಳ ದೂರಗಳಲ್ಲಿರುವ ತಾರೆಗಳು (ನಕ್ಷತ್ರಗಳಂತೆ ಕಾಣುವ ದೇವತಾಯಾನಗಳು) ಕೋಟಿ ಕೋಟಿ ಸಂಖ್ಯೆಗಳಲ್ಲಿ ಧ್ರುವನಕ್ಷತ್ರದ ಕೆಳಗೂ ಮೇಲೂ ಇರವುವೆಂದು ಪುರಾಣಗಳು ಸ್ಪಷ್ಟವಾಗಿ ಹೇಳುತ್ತವೆ. ಜಂಬೂದ್ವೀಪದ

ನವವರ್ಷಗಳು, ಸಪ್ತ ದ್ವೀಪ ಸಪ್ತ ಸಾಗರಗಳು, ಅಲ್ಲಿನ ನಿವಾಸಿಗಳು – ಈ ಎಲ್ಲಾ ಸರ್ವತ್ರ ವ್ಯಾಪ್ತನೂ, ಸರ್ವರಂತರ್ಯಾಮೀಯೂ ಆದ ಜಗದೀಶ್ವರನಿಂದ ವ್ಯವಸ್ಥಿತವಾಗಿ, ಬಹು ಸುಂದರವಾಗಿ, ಜೀವರ ಉದ್ಧಾರಾರ್ಥವಾಗಿ ಏರ್ಪಟ್ಟಿರುವು ವೆಂಬುದನ್ನು ಮೇಲೆ ಉದಾಹರಿಸಿದ ಪ್ರಾರ್ಥನೆಯು ತಿಳಿಸುತ್ತದೆ. ಈ ಅಭಿಪ್ರಾಯ ವನ್ನು ಶ್ರೀಮದಾನಂದತೀರ್ಥರು ತಮ್ಮ ದ್ವಾದಶ ಸ್ತೋತ್ರದಲ್ಲಿ ಈ ರೀತಿಯಾಗಿ ಮೂಡಿಸಿದ್ದಾರೆ.

> ಬಹುಚಿತ್ರಜಗತ್ ಬಹುಧಾಕರಣಾತ್ ಪರಶಕ್ತಿರನಂತ ಗುಣಃ ಪರಮಃ।
> ಸುಖರೂಪಮಮುಷ್ಯಪದಂ ಪರಮಂ ಸ್ಫುಟಮೇಷ್ಯತಿ
> ತತ್ಕಿಮಾಷಾಕ್ರಿಯತೇ ॥
>
> ಯದಿನಾಮ ಪರೋನಭವೇತ್ಸಹರಿಃ ಕಥಮಸ್ಯವಶೇ
> ಜಗದೇತದಭೂತ್।
> ಯದಿನಾಮನತಸ್ಯವಶೇ ಸಕಲಂ ಕಥಮೇವತು ನಿತ್ಯಸುಖಾನಭವೇತ್॥

(ನಮ್ಮ ಜಗತ್ತು ಬಹುಚಿತ್ರವಿಚಿತ್ರವಾಗಿ, ಬಗೆಬಗೆಯ ವೈವಿಧ್ಯಗಳಿಂದ ಮನೋಹರವಾಗಿದೆ. ಇಂತಹ ಜಗತ್ತನ್ನು ಸೃಷ್ಟಿಸಿದ ಭಗವಂತ ಅಮಿತ ಶಕ್ತಿ ಪೂರ್ಣ, ಅನಂತ ಸುಗುಣನಿಧಿ, ಸರ್ವೋತ್ತಮ. ಅವನಿರುವ ಮುಕ್ತಿಸ್ಥಾನ ನಿತ್ಯ ನಿರ್ದುಷ್ಟ ಸುಖದಾಯಕವಾದುದು. ಹೀಗಿರುವಾಗ, ಮಾನವರಾಗಿ ಹುಟ್ಟಿದವರು ವೈಕುಂಠ ಪದಪ್ರಾಪ್ತಿಗಾಗಿ ಏಕೆ ಪ್ರಯತ್ನಿಸುವುದಿಲ್ಲ?

ಶ್ರೀಹರಿಯು ಅನಂತ ಶಕ್ತಿಯುತನೂ, ಗುಣಪೂರ್ಣನೂ, ಸರ್ವೋತ್ತಮನೂ ಆಗಿರದಿದ್ದ ಪಕ್ಷದಲ್ಲಿ ಜಗತ್ತು ಏಕೆ ಅವನ ವಶದಲ್ಲಿರುವುದು? ಅದು ಅವನ ವಶವಾಗಿಲ್ಲದೆ ನಾವು ಸ್ವತಂತ್ರರಾಗಿದ್ದರೆ, ನಮಗೆ ಯವಾಗಲೂ ಸುಖಪ್ರಾಪ್ತಿಯೇ ಏಕೆ ಆಗುವುದಿಲ್ಲ?)

ಭರತವರ್ಷಕ್ಕೆ ಜಂಬೂದ್ವೀಪದ ಬೆಂಬಲ. ಜಂಬೂದ್ವೀಪಕ್ಕೆ ಇತರ ಆರುದ್ವೀಪ ಸಮುದ್ರಗಳ ಬೆಂಬಲ. ಹದಿನಾಲ್ಕು ಲೋಕಗಳನ್ನೂ ಒಳಗೊಂಡ ಬ್ರಹ್ಮಾಂಡಕ್ಕೆ ನವಾವರಣಗಳ, ಬೆಂಬಲ, ಈ ಎಲ್ಲಕ್ಕೂ ಆಧಾರ, ಶ್ರೀಮನ್ನಾರಾಯಣ.

ಏವಮೇವ ದಧಿ ಮಂಡೋದಾತ್ಪರತಃ ಪುಷ್ಕರ ದ್ವೀಪಸ್ತತೋ
ದ್ವಿಗುಣಾಯಮಃ ಸಮಂತತ ಉಪಕಲ್ಪಿತಃಸಮಾನೇನ ಸ್ವಾದೂದಕೇನ
ಸಮುದ್ರೇಣ ಬಹಿರಾವೃತೋ ಯಸ್ಮಿನ್ಬೃಹತ್ಪುಷ್ಕರಂ ಜ್ವಲನ
ಶಿಖಾಮಲಕನಕಪತ್ರಾಯುತಾಯುತಂ ಭಗವತಃ
ಕಮಲಾಸನಸ್ಯಾಧ್ಯಾಸನಂ ಪರಿಕಲ್ಪಿತಂ ||೨೯||

ಏವಂ ಏವ = ಹಿಂದೆ ಹೇಳಿದ ದ್ವೀಪಸಮುದ್ರಗಳಂತೆಯೇ; ದಧಿಮಂಡೋದಾತ್ ಪರತಃ = ದಧಿಸಮುದ್ರದ (ಕ್ಷೀರ ಸಮುದ್ರದ) ಹೊರಗೆ; ತತಃ ದ್ವಿಗುಣಾಯಾಮಃ = ಕ್ಷೀರ ಸಮುದ್ರಕ್ಕೆ ಎರಡರಷ್ಟುವಿಸ್ತಾರವಾಗಿ (೬೪ ಲಕ್ಷ ಯೋಜನ ವಿಸ್ತಾರವಾಗಿ); ಪುಷ್ಕರ ದ್ವೀಪಃ = ಪುಷ್ಕರ ದ್ವೀಪವು; ಸಮಂತತಃ =ಸುತ್ತಲೂ; ಉಪಕಲ್ಪಿತಃ = ಸೃಷ್ಟವಾಗಿದೆ; ಸಮಾನೇನ = ಅದರಷ್ಟೇ ವಿಸ್ತಾರವಾದ; ಸ್ವದೂದಕೇಣ ಸಮುದ್ರೇಣ = ಶುದ್ಧೋದಕ ಸಮುದ್ರದಿಂದ; ಬಹಿಃ ಆವೃತಃ =ಹೊರಗೆ ಆವೃತವಾಗಿದೆ; ಯಸ್ಮಿನ್ = ಯಾವ ಆಸ್ವಾದೂದಕ ಸಮುದ್ರದಲ್ಲಿ; ಜ್ವಲನ ಶಿಖಾಮಲ = ಅಗ್ನಿ ಜ್ವಾಲೆಯಂತೆ ಹೊಳೆಯುವ; ಕನಕಪತ್ರಅಯುತಾಯುತಂ = ಹತ್ತು ಕೋಟಿ ಬಂಗಾರದ ದಳಗಳುಳ್ಳ; ಕಮಲಾಸನಸ್ಯ ಅಧ್ಯಾಸನಂ = ಕಮಲಪೀಠಸ್ಥಿತನಾದ ಬ್ರಹ್ಮದೇವನಿಗೆ ಆಸನ ರೂಪವಾದ; ಬೃಹತ್ ಪುಷ್ಕರಂ = ಬಹು ದೊಡ್ಡದಾದ ಕಮಲ ಪುಷ್ಪವು; ಪರಿಕಲ್ಪಿತಂ = ಸೃಷ್ಟವಾಗಿದೆ.

ತದ್ವೀಪ ಮಧ್ಯೇ ಮಾನಸೋತ್ತರ ನಾಮ್ಯೈಕ ಏವಾರ್ವಾಚೀನ
ಪರಾಚೀನ
ವರ್ಷಯೋರ್ಮರ್ಯಾದಾಚಲೋಯುತಯೋಜನೋಚ್ಛ್ರಾಯಾಯಾಮೋ
ಯತ್ರತು ಚತಸ್ರುಷು ದಿಕ್ಷು ಚತ್ವಾರಿ ಪುರಾಣಿ
ಲೋಕಪಾಲಾನಾಮಿಂದ್ರಾದೀನಾಂ ಯದುಪರಿಷ್ಟಾತ್ಸೂರ್ಯ ರಥಸ್ಯ
ಮೇರು ಪರಿಭ್ರಮತಃ ಸಂವತ್ಸರಾತ್ಮಕಂ ಚಕ್ರಂ
ದೇವಾನಾಮಹೋರಾತ್ರಾಭ್ಯಾಂಪರಿಭ್ರಮತಿ ||೩೦||

ತದ್ವೀಪ ಮಧ್ಯೇ = ಆ ಪುಷ್ಕರ ದ್ವೀಪದ ನಟ್ಟನಡುವೆ; ಮಾನಸೋತ್ತರ ನಾಮಾ = ಮಾನಸೋತ್ತರ ಎಂಬ ಹೆಸರಿನ; ಪ್ರಾಚೀನ ಪರಾಚೀನ ವರ್ಷಯೋಃ = ಹೊರಗಡೆಯ ಮತ್ತು ಒಳಗಡೆಯ ಎರಡು ವರ್ಷಗಳಿಗೆ; ಮರ್ಯಾದಾಚಲಃ =ಮೇರೆಯಾಗಿರುವ ಪರ್ವತವು; ಏಕ ಏವ = ಒಂದೇ ಒಂದು ಆಗಿದೆ; ಅಯುತಯೋಜನ ಉಚ್ಛ್ರಾಯ ಆಯಾಮಃ = ಅದರ ಎತ್ತರ ಮತ್ತು ಅಗಲಗಳು

ಹತ್ತು ಹತ್ತು ಸಾವಿರಯೋಜನಗಳಾಗಿವೆ; ಯತ್ರತು = ಯಾವ ಆ ಪರ್ವತದ ಮೇಲೆ; ಚತಸ್ರುಷು ದಿಕ್ಷು = ನಾಲ್ಕು ದಿಕ್ಕುಗಳಲ್ಲಿ; ಇಂದ್ರಾದೀನಾಂ ಲೋಕಪಾಲಾನಾಂ = ಇಂದ್ರಾದಿ ಲೋಕಪಾಲಕರ; ಚತ್ವಾರಿ ಪುರಾಣಿ = ನಾಲ್ಕು ಪಟ್ಟಣಗಳು ಇರುತ್ತವೆ; ಯದುಪರಿಷ್ಟಾತ್ = ಯಾವ ಆ ಪರ್ವತಕ್ಕಿಂತ ಸ್ವಲ್ಪ ಮೇಲೆ; ಮೇರುಂ ಪರಿಭ್ರಮತಃ = ಮೇರುಪರ್ವತಕ್ಕೆ ಪ್ರದಕ್ಷಿಣೆಯಾಗಿ ಸುತ್ತುವ; ಸೂರ್ಯರಥಸ್ಯ = ಸೂರ್ಯದೇವನ ರಥದ; ಸಂವತ್ಸರಾತ್ಮಕಂಚಕ್ರಂ = ಸಂವತ್ಸರದ ಕಾಲಮಾನವನ್ನು ಅಳೆದು ತೋರುವ ಚಕ್ರವು; ದೇವಾನಾಂ ಅಹೋರಾತ್ರಾಭ್ಯಾಂ =ದೇವತೆಗಳಿಗೆ ಉತ್ತರಾಯಣ ದಕ್ಷಿಣಾಯನಗಳಿಂದ ಹಗಲು ರಾತ್ರಿಗಳನ್ನು ಕಲ್ಪಿಸುತ್ತಾ; ಪರಿಭ್ರಮತಿ = ಸುತ್ತುತ್ತದೆ.

ಪ್ಲಕ್ಷಾದಿ ಐದು ದ್ವೀಪಗಳಲ್ಲಿ ಏಳೇಳು ವರ್ಷವಿಭಾಗಗಳಿರಲು, ಪುಷ್ಕರ ದ್ವೀಪದಲ್ಲಿ ಮಾನಸೋತ್ತರ ಪರ್ವತದಿಂದವಿಂಗಡವಾದ ಎರಡು ವರ್ಷಗಳು ಮಾತ್ರ ಇರುತ್ತವೆ.

ಮಾನಸೋತ್ತರ ಪರ್ವತದ ಮೇಲೆ, ಭೂಮಿಗೆ ಸಮಾನಾಂತರವಾದ ಕಾಲಚಕ್ರದ ಮುಖ್ಯ ಪಟ್ಟಿ ಇದೆ. ಆದರ ಮೇಲೆ ಒಂದೇ ಚಕ್ರವುಳ್ಳ ಸೂರ್ಯರಥದ ಸಂಚಾರ. ಕಾಲಚಕ್ರವು ೩೬೦ ಸುತ್ತು ಸುತ್ತಿದರೆ ಒಂದು ವರ್ಷವಾಗುತ್ತದೆ. ಕಾಲಚಕ್ರವನ್ನು ನಿಯಂತ್ರಿಸುವ ಶಿಂಶುಮಾರಮೂರ್ತಿಯು ಆ ಚಕ್ರವನ್ನು ಆರು ತಿಂಗಳ ಕಾಲ ಎತ್ತುತ್ತಾ, ಆರುತಿಂಗಳ ಕಾಲ ಇಳಿಸುವುದರಿಂದ ಉತ್ತರಾಯಣ ದಕ್ಷಿಣಾಯನಗಳು ಸಂಭವಿಸುತ್ತವೆ. ಉತ್ತರಾಯಣ ಕಾಲವು ದೇವತೆಗಳಿಗೆ ಹಗಲು; ದಕ್ಷಿಣಾಯನ ಕಾಲವು ರಾತ್ರಿ. ಇದರ ವಿಚಾರ ಮುಂದೆ ವಿಸ್ತಾರವಾಗಿ ತಿಳಿದು ಬರುವುದು.

**ತದ್ದ್ವೀಪಸ್ಯಾಪ್ಯಧಿಪತಿಃ ಪ್ರೈಯವ್ರತೋ**
**ವೀತಿಹೋತ್ರೋನಾಮೈತಸ್ಯಾತ್ಮಜೌ ರಮಣಕ ಧಾತಕಿ**
**ನಾಮಾನೌವರ್ಷಪತೀನಿಯುಜ್ಯ ಸ ಸ್ವಯಂ ಪೂರ್ವಜವದ್ಭಗವತ್ಕರ್ಮ**
**ಶೀಲ ಏವಾಸ್ತೇ ॥೩೧॥**

ತತ್ ದ್ವೀಪಸ್ಯ ಅಧಿಪತಿಃ = ಆ ಪುಷ್ಕರ ದ್ವೀಪದ ಅಧಿಪತಿಯಾದ; ಪ್ರೈಯವ್ರತಃ = ಪ್ರಿಯವ್ರತ ಪುತ್ರನಾದ; ವೀತಿಹೋತ್ರಃ ನಾಮ = ವೀತಿ ಹೋತ್ರ ಎಂಬ ಹೆಸರುಳ್ಳಾತ; ಏತಸ್ಯ ಆತ್ಮಜೌ = ಆತನ ಇಬ್ಬರುಮಕ್ಕಳು; ರಮಣಕ ಧಾತಕಿ ನಾಮಾನೌ = ರಮಣಕ ಧಾತಕಿ ಎಂಬ ಹೆಸರಿನವರು; ವರ್ಷಪತೀ ನಿಯುಜ್ಯ = ಅವರನ್ನು ಪುಷ್ಕರ ದ್ವೀಪದ ಎರಡು ವರ್ಷಗಳಿಗೆ ಅಧಿಪತಿಗಳನ್ನಾಗಿ ಮಾಡಿ; ಸಃ ಸ್ವಯಂ = ತಾನು; ಪೂರ್ವಜವತ್ = ಹಿಂದಿನ ಅಧಿಪತಿಗಳಂತೆ; ಭಗವತ್ಕರ್ಮ ಶೀಲಃ ಏವ ಆಸ್ತೇ = ಭಗವದ್ಧ್ಯಾನಪರನಾಗಿಯೇ ತಪಸ್ಸಿನಲ್ಲಿ ನಿರತನಾಗಿದ್ದಾನೆ.

ಇಧ್ಮಜಿಹ್ವಾ, ಯಜ್ಞಬಾಹು, ಹಿರಣ್ಯರೇತಾ, ಘೃತಪೃಷ್ಠ, ಮೇಧಾತಿಥಿ, ವೀತಿಹೋತ್ರ ಎಂಬ ಪ್ರಿಯವ್ರತರಾಯರ ಮಕ್ಕಳ ಹೆಸರುಗಳು, ಅವರು ಅಗ್ನಿಪುತ್ರರೆಂದೂ, ವೇದೋಕ್ತ ಯಜ್ಞಗಳಿಂದ ಯಜ್ಞಪುರುಷನನ್ನಾರಾಧಿಸುತ್ತಾ ವಿಶ್ವದಕ್ಷೇಮ ಚಿಂತನೆಯಲ್ಲಿರುವವರೆಂದೂ ತಿಳಿಸುತ್ತವೆ.

**ತದ್ವರ್ಷಪುರುಷಾ ಭಗವಂತಂ ಬ್ರಹ್ಮರೂಪಿಣಂ ಸಕರ್ಮಕೇನ**
**ಕರ್ಮಣಾ ಆರಾಧಯಂತೀದಂಚೋದಾಹರಂತಿ ॥೩೨॥**

ತದ್ವರ್ಷಪುರುಷಾಃ = ಪುಷ್ಕರ ದ್ವೀಪದ ಪ್ರಜೆಗಳು; ಬ್ರಹ್ಮರೂಪಿಣಂ ಭಗವಂತಂ = ಬ್ರಹ್ಮದೇವರಲ್ಲಿ ಅವರಂತೆ ಪ್ರತಿಬಿಂಬ ಭಾವದಿಂದಿರುವ ಭಗವಂತನನ್ನು; ಸಕರ್ಮಕೇನ ಕರ್ಮಣಾ = ವೇದೋಕ್ತ ಕರ್ಮಗಳಿಂದ; ಆರಾಧಯಂತಿ = ಪೂಜಿಸುತ್ತಾರೆ; ಇದಂ ಚ ಉದಾಹರಂತಿ = ಈ ಮಂತ್ರವನ್ನು ಜಪಿಸುತ್ತಾರೆ.

**ಮಂತ್ರ:-**

**ಯತ್ತತ್ಕರ್ಮಮಯಂ ಲಿಂಗಂ ಬ್ರಹ್ಮಲಿಂಗಂ ಜನೋರ್ಚಯೇತ್।**
**ಏಕಾಂತಮದ್ವಯಂ ಶಾಂತಂ ತಸ್ಮೈ ಭಗವತೇ ನಮಃ – ಇತಿ ॥೩೩॥**

ಕರ್ಮಮಯಂ ಲಿಂಗಂ ಜಗತ್ಸೃಷ್ಟ್ಯಾದಿ ಕರ್ಮಲಕ್ಷಣವುಳ್ಳ ರೂಪ; ಏಕಾಂತಂ = ಸರ್ವತ್ರ ವ್ಯಾಪ್ತವಾಗಿ ಭಿನ್ನ ಭಿನ್ನವಾಗಿ ಕಂಡರೂ ಏಕರೂಪವಾದುದು; ಅದ್ವಯಂ ಸಮರಹಿತ ಮತ್ತು ಅನ್ಯಾಪೇಕ್ಷೆ ಇಲ್ಲದಿರುವುದು.

**ತತಃ ಪರಸ್ತಾಲ್ಲೋಕಾಲೋಕನಾಮಾಚಲೋ ಲೋಕಾ**
**ಲೋಕಯೋರಂತರಾಲೇ ಪರಿತ ಉಪಕ್ಷಿಪ್ತಃ ॥೩೪॥**

ಶೋದ್ಧೋದಕ ಸಮುದ್ರದಿಂದಾಚೆ ಲೋಕಾಲೋಕವೆಂಬ ಪರ್ವತವು ಬೆಳಕಿನ ಮತ್ತು ಕತ್ತಲೆಯ ಪ್ರದೇಶಗಳನಡುವೆ ಸೃಷ್ಟವಾಗಿದೆ.

**ಯಾವನ್ಮಾನಸೋತ್ತರ ಮೇರ್ವೋರಂತರಂ ತಾವತೀ ಭೂಮಿಃ**
**ಕಾಂಚನ್ಯನ್ಯಾ ದರ್ಶತಲೋಪಮಾಯಸ್ಯಾಂ ಪ್ರಹಿತಃಪದಾರ್ಥೋ ನ**
**ಕಥಂಚಿತ್ಪುನಃ ಪ್ರತ್ಯುಪಲಭ್ಯತೇ ತಸ್ಮಾತ್ ಸರ್ವಸತ್ವ ಪರಿಹೃತಾಸೀತ್**
**॥೩೫॥**

ಮಾನಸೋತ್ತರ ಮೇರ್ವೋಃ ಅಂತರಂ ಯಾವತ್ = ಮಾನಸೋತ್ತರ ಪರ್ವತದಿಂದ (ಪುಷ್ಕರ ದ್ವೀಪದಿಂದ) ಮೇರು ಪರ್ವತದ ಪರ್ಯಂತ; ತಾವತೀ

ಭೂಮಿಃ ಅಷ್ಟುಮಾತ್ರ ಪ್ರಜಾವಾಸ ಯೋಗ್ಯವಾದ ಭೂಮಿ; ಅನ್ಯಾಕಾಂಚನೀ =ಶುದ್ಧೋದಕ ಸಮುದ್ರದಿಂದ ಹೊರಗೆ ಲೋಕಾಲೋಕ ಪರ್ವತದವರೆಗೆ ಇರುವುದು ಸ್ವರ್ಣಭೂಮಿ; ಆದರ್ಶತಲೋಪಮಾ = ಅದು ಕನ್ನಡಿಯಂತೆ ಹೊಳೆಯುವುದು; ಯಸ್ಯಾಂ = ಯಾವ ಆಸ್ವರ್ಣಭೂಮಿಯಲ್ಲಿ; ಪ್ರಹಿತಃ = ಹಾಕಿದ; ಪದಾರ್ಥಃ =ಭೂಭಾಗದ ಪದಾರ್ಥವು; ಕಥಂಚಿತ್ = ಯಾವಉಪಾಯದಿಂದಲೂ; ಪುನಃ = ಮತ್ತೆ; ನ ಉಪಲಭ್ಯತೇ ಪಡೆಯಲಾಗುವುದಿಲ್ಲ; ತಸ್ಮಾತ್ = ಆದುದರಿಂದ; ಸರ್ವಸತ್ವ ಪರಿಹೃತಾ ಆಸೀತ್ = ಅದು ಸರ್ವ ಪದಾರ್ಥಗಳನ್ನೂ ತನ್ನಲ್ಲಿ ಲೀನ ಮಾಡಿಕೊಳ್ಳುವಂತಹುದು.

ಬಂಗಾರವೆಂಬುದು ತೇಜಃ ಪ್ರಧಾನವಾದ ವಸ್ತು. ಪಂಚತನ್ಮಾತ್ರಗಳ ಪಂಚೀಕರಣದಿಂದಾದ (ವೈಕೃತ) ಪಂಚಮಹಾಭೂತಗಳಲ್ಲಿ ಭೂಮಿ ಮತ್ತು ನೀರು ಹೆಚ್ಚು ಸ್ಥೂಲವಾದುವು. ಅಗ್ನಿಯು ಸೂಕ್ಷ್ಮತರವಾದುದು.ಆಕಾಶ, ವಾಯು, ಅಗ್ನಿಗಳ ನೆರವಿನಿಂದ ನೀರು ಮತ್ತು ಭೂಮಿಗಳ ಉತ್ಪತ್ತಿ. ಅವು ಅಗ್ನ್ಯಾದಿಗಳಲ್ಲಿ ಲಯಹೊಂದುವುವು. ಆದುದರಿಂದ ಸ್ವರ್ಣಭೂಮಿಯಲ್ಲಿ ಲಯ ಹೊಂದಿದ ವಸ್ತುಗಳನ್ನು ಮತ್ತೆ ಪಡೆಯಲಾಗುವುದಿಲ್ಲ. ಆ ಸ್ವರ್ಣಭೂಮಿ ಇರುವುದು ಭೂ ಜಲಗಳ ಸಮೃದ್ಧಿಗಾಗಿ (Re-imbursement of used-up parts). ಸ್ವರ್ಣಭೂಮಿಯ ವಿಸ್ತಾರ, ೬೪ ಲಕ್ಷ ಯೋಜನ. ಅದರ ಸುತ್ತಲೂ ೪೨ ಲಕ್ಷ ಯೋಜನವಿಸ್ತಾರವಾದ ವಜ್ರ ಭೂಮಿ ಇರುವುದು ಪುರಾಣಾಂತರಗಳಿಂದ ತಿಳಿದುಬರುವುದು.

**ಸಲೋಕತ್ರಯಾಂತೇ ಪರಿತ ಈಶ್ವರೇಣ ವಿಹಿತೋ**
**ಯಸ್ಮಾತ್ಸೂರ್ಯಾದೀನಾಂ ಧ್ರುವಾಪವರ್ಗಾಣಾಂಜ್ಯೋತಿರ್ಗಣಾನಾಂ**
**ಗಭಸ್ತಯೋಽರ್ವಾಚೀನಾಂ ಸ್ತ್ರೀನ್ಲೋಕಾನಾವಿತನ್ವಾನಾ**
**ನಕದಾಚಿತ್ಪರಾಚೀನಾಭವಿತು ಮುತ್ಸಹಂತೇ ತಾವದುನ್ನಹನಾಯಾಮಃ**
**॥೩೬॥**

ಸಃ = ಆ ಲೋಕಾಲೋಕ ಪರ್ವತವು; ಲೋಕತ್ರಯಾಂತೇ = ಭೂಲೋಕ ಭುವರ್ಲೋಕ ಸ್ವರ್ಲೋಕಗಳಹೊರಗೆ; ಪರಿತಃ = ಸುತ್ತಲೂ; ಈಶ್ವರೇಣ = ಸೃಷ್ಟಿಕರ್ತನಾದ ಭಗವಂತನಿಂದ; ವಿಹಿತಃ = ಸ್ಥಾಪಿತವಾಗಿದೆ; ಯಸ್ಮಾತ್ = ಯಾವ ಆ ಕಾರಣದಿಂದ; ಸೂರ್ಯಾದಿನಾಂ = ಸೂರ್ಯ, ಚಂದ್ರಾದಿ ಗ್ರಹಗಳ ಮತ್ತು ನಕ್ಷತ್ರಗಳ, ಹಾಗೂ; ಧ್ರುವಾಪವರ್ಗಾಣಾಂ = ಧ್ರುವ ನಕ್ಷತ್ರದ ಮತ್ತು ಸ್ವರ್ಗಲೋಕದ ಬಳಿಯ ತಾರೆಗಳ; ಜ್ಯೋತಿರ್ಗಣಾನಾಂ ಗಭಸ್ತಯಃ = ಆ ಪ್ರಕಾಶಮಯವಾದ ವಸ್ತುಗಳ ಕಿರಣಗಳು; ಅರ್ವಾಚೀನಾನ್ತ್ರೀನ್‌ಲೋಕಾನ್ = ಲೋಕಾಲೋಕ

ಪರ್ವತದ ಒಳಭಾಗದಲ್ಲಿರುವ ಮೂರು ಲೋಕಗಳನ್ನು; ಆವಿತನ್ವಾನಾ = ಆವರಿಸಿರತಕ್ಕವು; ಕದಾಚಿತ್ = ಯಾವಾಗಲಾದರೂ; ಪರಾಚೀನಾ ಭವಿತುಂ = ಆ ಪರ್ವತದ ಹೊರಭಾಗಕ್ಕೆಪ್ರವೇಶಿಸಲು; ನ ಉತ್ಸಹಂತೇ =ಸಮರ್ಥವಾಗುವುದಿಲ್ಲ; ತಾವತ್ ಉನ್ನಾಹ ಆಯಾಮಃ = ಆ ಪರ್ವತವು ಅಷ್ಟು ಎತ್ತರವಾಗಿಯೂ ವಿಸ್ತಾರವಾಗಿಯೂ ಇದೆ. (ಎತ್ತರ, 51 ಲಕ್ಷ ಯೋಜನ; ಅಗಲ, 6¼ ಕೋಟಿ ಯೋಜನ)

**ಏತಾವಾನ್ಲೋಕವಿನ್ಯಾಸೋ ಮಾನಲಕ್ಷಣ ಸಂಸ್ಥಾನಾಭಿರ್ವಿಚಿಂತಿತಃ**
**ಕವಿಭಿಃ ಸತು ಪಂಚಾಶತ್ಕೋಟಿ ಗಣಿತಸ್ಯಭೂಗೋಲಸ್ಯ ತುರೀಯ**
**ಭಾಗೋಯಂ ಲೋಕಾಲೋಕಾಚಲಃ ||೩೭||**

ಲೋಕ ವಿನ್ಯಾಸಃ ಏತಾವಾನ್ = ಭೂರ್ಭುವಸ್ವರ್ಲೋಕಗಳ ವ್ಯವಸ್ಥೆಯು; ಇಲ್ಲಿಯ ಪರ್ಯಂತ (ಲೋಕಾಲೋಕಪರ್ವತದವರೆಗೆ); ಸತು ಕವಿಭಿಃ ಮಾನಲಕ್ಷಣ ಸಂಸ್ಥಾನಾಭಿಃ ವಿಚಿಂತಿತಃ = ಅಳತೆ, ಜೀವನದ ರೀತಿ, ಇರುವಸ್ಥಾನ ಇವುಗಳು ಜ್ಞಾನಿಗಳಿಂದ ತಿಳಿದು ವಿವರಿಸಲ್ಪಟ್ಟಿವೆ; ಅಯಂ ಲೋಕಾಲೋಕಾಚಲಃ = ಈ ಲೋಕಾಲೋಕಾಪರ್ವತವು; ಪಂಚಾಶತ್ಕೋಟಿ ಗಣಿತಸ್ಯ ಐವತ್ತು ಕೋಟಿ ಯೋಜನ ವಿಸ್ತಾರವಾಗಿರುವ; ಭೂಗೋಲಸ್ಯ ಭೂಗೋಳದ; ತುರೀಯ ಭಾಗಃ ನಾಲ್ಕನೆಯ ಒಂದು ಭಾಗವಾಗಿದೆ. (ಮೇರು ಪರ್ವತ ಪೂರ್ವಕ್ಕೂ ಪಶ್ಚಿಮಕ್ಕೂ ಇರುವ ಪರ್ವತದ ವಿಸ್ತಾರ – 6¼ + 6¼ = 12½ ಕೋಟಿ ಯೋಜನ).

**ತದುಪರಿಷ್ಟಾಚ್ಚತುಸ್ರ್ವಾಶಾಸ್ವಾತ್ಮಯೋನಿನಾಖಿಲಜಗದ್ಗುರುಣಾಧಿ**
**ನಿವೇಶಿತಾ ದ್ವಿರದಪತಯ ಋಷಭಃ**
**ಪುಷ್ಕರಚೂಡೋವಾಮನೋಪರಾಜಿತ ಇತಿ ಸಕಲ ಲೋಕಸ್ಥಿತಿ**
**ಹೇತವಃ ||೩೮||**

ತದುಪರಿಷ್ಟಾತ್ ಚ = ಆ ಲೋಕಾಲೋಕಾಕ ಪರ್ವತದ ಮೇಲೆ; ಚತುಸ್ರುಷು ಆಶಾಸು = ನಾಲ್ಕೂದಿಕ್ಕುಗಳಲ್ಲಿ; ಆತ್ಮಯೋನಿನಾ ಜಗದ್ಗುರುಣಾ = ಬ್ರಹ್ಮಾಂತರ್ಯಮಿಯಾದ ಜಗದ್ಗುರು ಶ್ರೀಮನ್ನಾರಾಯಣನಿಂದ; ಅಧಿನಿವೇಶಿತಾಃ = ನಿಲ್ಲಿಸಲ್ಪಟ್ಟ; ಋಷಭ, ಪುಷ್ಕರಚೂಡ, ವಾಮನ ಅಪರಾಜಿತ (ಇತಿ) ಎಂಬ ದ್ವಿರದ ಪತಯಃ = ಗಜರಾಜರು; ಸಕಲ ಲೋಕಸ್ಥಿತಿ ಹೇತವಃ = ಎಲ್ಲಾ ಲೋಕಗಳ ಸ್ವಸ್ಥ ಸ್ಥಿತಿಗೆ ಕಾರಣರಾಗಿದ್ದಾರೆ.

ಆನೆಗಳೆಂದರೆ ಅವು ಕೇವಲ ಆನೆಗಳಲ್ಲ; ಆ ರೂಪದಲ್ಲಿರುವ ದೇವತೆಗಳು.

ಹಿರಣ್ಯಾಕ್ಷನಂತಹ ದೈತ್ಯರು ಮತ್ತೆಭೂಮಿಯನ್ನು ಸುರುಳಿಯಾಗಿ ಸುತ್ತಲಾಗದಂತೆ ಈ ಗಜರಾಜರು ಭಾರವಾಗಿ ನಿಂತಿದ್ದಾರೆ. ದೈತರುಸುಳಿದಾಡಿದಾಗ, ಭಗವತ್ಸಂಕಲ್ಪವನ್ನರಿತು, ತಮ್ಮ ಪ್ರಭಾವದಿಂದ ಅವರನ್ನು ಹೊಡೆದಟ್ಟುತ್ತಾರೆ. ಅವರು ಕಾವಲಿನಭಟರಂತಿದ್ದಾರೆ.

**ತೇಷಾಂ ಸ್ವವಿಭೂತೀನಾಂ ಲೋಕಪಾಲಾನಾಂ ಚ ವಿವಿಧ**
**ವೀರ್ಯೋಪಬೃಂಹಣಾಯ ಭಗವಾನ್ ಪರಮಮಹಾಪುರುಷೋ**
**ಮಹಾವಿಭೂತಿಪತಿರಂತರ್ಯಾಮ್ಯಾತ್ಮನೋ ವಿಶುದ್ಧಸತ್ವಂ**
**ಧರ್ಮಜ್ಞಾನವೈರಾಗ್ಯೈಶ್ವರ್ಯಾದ್ಯಷ್ಟ ಮಹಾಸಿದ್ಧ್ಯುಪಲಕ್ಷಣಂ**
**ವಿಷ್ವಕ್ಸೇನಾದಿಭಿಃ ಸ್ವಪಾರ್ಷದ ಪ್ರವರೈಃ**
**ಪರಿವಾರಿತೋನಿಜವರಾಯುಧೋಪಶೋಭಿತೈರ್ನಿಜಭುಜದಂಡೈಃ**
**ಸಂಧಾರಯಮಾಣಸ್ತಸ್ಮಿನ್ ಗಿರಿವರೇ ಸಮಂತಾತ್ಸಕಲ ಲೋಕಸ್ವಸ್ತಯ**
**ಆಸ್ತೇ ॥೩೮॥**

ತೇಷಾಂ = ಆ ಗಜಪತಿಗಳಿಗೂ; ಚ = ಮತ್ತು; ವಿಭೂತೀನಾಂ ಲೋಕಪಾಲಾನಾಂ = ತನ್ನವಿಭೂತಿರೂಪಗಳಿಂದ ತೇಜಸ್ವಿಗಳಾದ ದಿಕ್ಪಾಲಕರಿಗೂ; ವಿವಿಧ ವೀರ್ಯೋಪಬೃಂಹಣಾಯ = ಬಗೆಬಗೆಯಶಕ್ತಿ ವಿಶೇಷಗಳನ್ನು ದಯಪಾಲಿಸು ವುದಕ್ಕಾಗಿ; ಭಗವಾನ್ = ಸಕಲೈಶ್ವರ್ಯ ಸಂಪನ್ನನಾದ; ಪರಮಮಹಾಪುರುಷಃ = ಸರ್ವೋತ್ತಮೋತ್ತಮನಾದ; ಮಹಾವಿಭೂತಿಃ = ಅದ್ಭುತ ಶಕ್ತಿ ಸಂಪನ್ನನಾದ; ಆತ್ಮನಃಅಂತರ್ಯಾಮೀ = ಜೀವಾತ್ಮರ ಹೃದಯಗಳಂತರ್ವರ್ತಿಯಾದ; ವಿಶುದ್ಧ ಸತ್ವಂ = ಶುದ್ಧಜ್ಞಾನಾನಂದಸ್ವರೂಪನಾದ; ಧರ್ಮಜ್ಞಾನ ವೈರಾಗ್ಯೈಶ್ವರ್ಯಾದ್ಯಷ್ಟ ಮಹಾಸಿದ್ಧ್ಯಪ ಲಕ್ಷಣಂ = ಸ್ವಭಾವ ಧರ್ಮ, ಸಮ್ಯಜ್ಞಾನ, ವೈರಾಗ್ಯ, ವಿವಿಧ ಐಶ್ವರ್ಯ ಮತ್ತು ಅಣಿಮಾದಿ ಅಷ್ಟಸಿದ್ಧಿಗಳನ್ನು ಪ್ರಕಟಿಸುವ ಲಕ್ಷಣಗಳುಳ್ಳ ಶ್ರೀಹರಿಯು; ಸ್ವಪಾರ್ಷದೈಃ ತನ್ನ ಪರಿವಾರದವರಾದ; ವಿಷ್ವಕ್ಸೇನಾದಿಭಿಃ = ವಿಷ್ವಕ್ಸೇನ ಮೊದಲಾದವರಿಂದ; ಪರಿವಾರಿತಃ = ಕೂಡಿಕೊಂಡು; ನಿಜವರಾಯುಧೋಪಶೋಭಿತ್ಯೈಃ = ತನ್ನ ಅಮೋಘ ಆಯುಧಗಳಿಂದ ಶೋಭಿಸುವ; ನಿಜಭುಜದಂಡೈಃ ಸಂಧಾರಯಮಾಣಃ = ಬಾಹುದಂಡಗಳುಳ್ಳವನಾಗಿ; ತಸ್ಮಿನ್ ಗಿರಿವರೇ = ಆಶ್ರೇಷ್ಠವಾದ ಲೋಕಾಲೋಕಪರ್ವತದಲ್ಲಿ; ಸಕಲ ಲೋಕಸ್ವಸ್ತಯೇ = ಮೂರು ಲೋಕಗಳ ಕ್ಷೇಮ ನಿರ್ವಾಹಕ್ಕಾಗಿ; ಆಸ್ತೇ = ಇರುವನು.

ಲೋಕರಕ್ಷಣೆಗಾಗಿ ನಿಯಮಿತರಾದ ಅಷ್ಟದಿಕ್ಪಾಲಕರೇ ಮೊದಲಾದ ದೇವತೆಗಳು ಲೋಕಾಲೋಕ ಪರ್ವತದಲ್ಲಿದರ್ಶನ ನೀಡುವ ಪರಮಾತ್ಮನ ಪ್ರಸಾದಕ್ಕೆ ಪಾತ್ರರಾಗಿ ತಮ್ಮ ತಮ್ಮ ಕಾರ್ಯಗಳನ್ನು ಎಚ್ಚರದಿಂದ ನಿರ್ವಹಿಸುತ್ತಾರೆ.

**ಯೋಽಂತರ್ವಿಸ್ತಾರ ಏತೇನಹ್ಯಲೋಕ ಪರಿಮಾಣಂಚ ವ್ಯಾಖ್ಯಾತಂ**
**ಯದ್ಬಹಿರ್ಲೋಕಾಲೋಕಾಚಲಾತ್।**
**ತತಃ ಪರಸ್ತಾದ್ಯೋಗೇಶ್ವರ ಗತಿಂ ವಿಶುದ್ಧಾಮುದಾಹರಂತಿ ॥೪೦॥**

ಯಃ ಅಂತರ್ವಿಸ್ತಾರಃ ಏತೇನ = ಲೋಕಾಲೋಕಾಚಲದ ಒಂದು ತುದಿಯಿಂದ ಆದರ ಎದುರುಗಡೆಯ ಇನ್ನೊಂದು ತುದಿಯವರೆಗೆ ಭೂಮಂಡಲದ ವಿಸ್ತಾರವು ಎಷ್ಟೆಂದು ಹೇಳಿರುವುದೋ, ಆದರಿಂದ; ಲೋಕಾಲೋಕಾಚಲಾತ್ ಬಹಿಃ = ಲೋಕಾಲೋಕ ಪರ್ವತದ ಹೊರಗೆ; ಯತ್ ಅಲೋಕ ಪರಿಮಾಣಂ = ತಮೋಭಾಗದ ವಿಸ್ತಾರವೆಂಬುದು ಯಾವುದುಂಟೋ ಅದು; ವ್ಯಾಖ್ಯಾತಂ = ಹೇಳಲ್ಪಟ್ಟಿತು. ತತಃ ಪರಸ್ತಾತ್ = ತಮೋಭಾಗದಿಂದ ಹೊರಗೆ; ವಿಶುದ್ಧಾಂ ಯೋಗೇಶ್ವರ ಗತಿಂ ಉದಾಹರಂತಿ = ಶುದ್ಧಯೋಗ ಸಾಮರ್ಥ್ಯವುಳ್ಳವರು ಮಾತ್ರ ಹೋಗಿಬರಬಹುದಾದ ಪ್ರದೇಶವೆಂದು ಬಲ್ಲವರು ಹೇಳುತ್ತಾರೆ.

ಭೂ ಭಾಗ –

| | | | |
|---|---|---|---|
| ೧. ಜಂಬೂ ದ್ವೀಪ – | ೧ ಲಕ್ಷ | ೫. ಕ್ರೌಂಚ ದ್ವೀಪ ೧೬+೧೬ | ೩೨ ಲಕ್ಷ |
| ಲವಣ ಸಮುದ್ರ ೧।೧ | ೨ ಲಕ್ಷ | ದಧಿ ಸಮುದ್ರ ೧೬।೧೬ | ೩೨ ಲಕ್ಷ |
| ೨. ಪ್ಲಕ್ಷ ದ್ವೀಪ ೨।೨ | ೪ ಲಕ್ಷ | ೬. ಶಾಕ ದ್ವೀಪ ೩೨।೩೨ | ೬೪ ಲಕ್ಷ |
| ಇಕ್ಷು ಸಮುದ್ರ ೨।೨ | ೪ ಲಕ್ಷ | ಕ್ಷೀರ ಸಮುದ್ರ ೩೨।೩೨ | ೬೪ ಲಕ್ಷ |
| ೩. ಶಾಲ್ಮಲ ದ್ವೀಪ ೪।೪ | ೮ ಲಕ್ಷ | ೭. ಪುಷ್ಕರ ದ್ವೀಪ ೬೪।೬೪ | ೧೨೮ ಲಕ್ಷ |
| ಸುರಾ ಸಮುದ್ರ ೪।೪ | ೮ ಲಕ್ಷ | ಶುದ್ಧೋದ ಸಮುದ್ರ ೬೪।೬೪ | ೧೨೮ ಲಕ್ಷ |
| ೪. ಕುಶ ದ್ವೀಪ ೮।೮ | ೧೬ ಲಕ್ಷ | ಸ್ವರ್ಣಭೂಮಿ ೧೨೮ | |
| ಘೃತ ಸಮುದ್ರ ೮।೮ | ೧೬ ಲಕ್ಷ | ವಜ್ರಭೂಮಿ ೬೪ | ೧೯೨ ಲಕ್ಷ |
| | | | ೬.೯೯ ಲಕ್ಷ |

ಒಟ್ಟು ೭ ಕೋಟಿ ಯೋಜನ (ಸ್ಥೂಲವಾದ ಲೆಕ್ಕ)

ಶ್ರೀ ವಾದಿರಾಜ ಗುರು ಸಾರ್ವಭೌಮರು ತಮ್ಮ 'ಭೂಗೋಳ ವರ್ಣನೆ' ಎಂಬ ಗ್ರಂಥದಲ್ಲಿ ಕರಾರುವಾಕ್ಕಾದ ಅಳತೆಗಳನ್ನು ಹೀಗೆ ಕೊಟ್ಟಿದ್ದಾರೆ.–

| ವಿಭಾಗ | ಯೋಜನ | ಕ್ರೋಶ | ದಂಡ | ಹಸ್ತ | ಅಂಗುಲ | ವ್ರೀಹಿ | ಸರ್ಷಪ(ಸಾಸುವೆ) |
|---|---|---|---|---|---|---|---|
| ಭೂಭಾಗ | 7,14,28,571 | -1½ | - 214 | - 1 | - 3 | - 1 | - 2 |
| ತಮೋಭಾಗ | 14,28,57,142 | -3 | - 428 | - 2 | - 6 | - 2 | - 4 |
| ಘನೋದಕ | 28,57,14,284 | -6 | - 856 | - 4 | - 12 | - 4 | - 8 |

3 ಸರ್ಷಪ (ಸಾಸುವೆ) = 1 ವ್ರೀಹಿ (ಗೋಧಿ ಅಥವಾ ಭತ್ತದ ಕಾಳು – ಕೃತಯುಗದ್ದು); 3 ವ್ರೀಹಿ = 1 ಅಂಗುಲ; 24 ಅಂಗುಲ = 1 ಹಸ್ತ; 4 ಹಸ್ತ = 1 ದಂಡ; 1000 ದಂಡ = 1 ಕ್ರೋಶ; 4 ಕ್ರೋಶ = 1 ಯೋಜನ. (6.06 ಮೈಲಿ – 9.9 ಕಿ.ಮೀ.)

**ಅಂಡಮಧ್ಯಗತಃ ಸೂರ್ಯೋ ದ್ಯಾವಾಭೂಮ್ಯೋರ್ಯದಂತರಂ ।**
**ಸೂರ್ಯಾಂಡ ಗೋಳಯೋರ್ಮಧ್ಯೇ ಕೋಟ್ಯಃ ಸ್ಯುಃಪಂಚವಿಂಶತಿಃ ॥೪೧॥**

ಯತ್ ದ್ಯಾವಾಪೃಥಿವ್ಯೋಃ ಅಂತರಂ = ಭುವರ್ಲೋಕ ಭೂಲೋಕಗಳ ನಡುವೆ ಇರುವ ಪ್ರದೇಶಗಳಲ್ಲಿ; ಸೂರ್ಯಃ = ಸೂರ್ಯನು; ಅಂಡ ಮಧ್ಯಗತಃ = ಬ್ರಹ್ಮಾಂಡ ಕಟಾಹದ ನಟ್ಟನಡುವೆ ಇದ್ದಾನೆ; ಸೂರ್ಯಅಂಡಗೋಳಯೋಃ ಮಧ್ಯೇ = ಸೂರ್ಯನಿಗೂ ಬ್ರಹ್ಮಾಂಡ ಗೋಳದ ಮೇಲ್ಭಾಗಕ್ಕೂ ನಡುವೆ; ಪಂಚವಿಂಶತಿಕೋಟ್ಯಃಸ್ಯುಃ = ೨೫ ಕೋಟಿ ಯೋಜನಗಳ ಅಂತರವಿರುವುದು.

**ಮೃತೇಂಡ ಏತಸ್ಮಿನ್ ಯದಭೂತ್ತತೋ ಮರ್ತಾಂಡ ಇತಿ ವ್ಯಪದೇಶಃ।**
**ಹಿರಣ್ಯಗರ್ಭ ಇತಿ ಯದ್ಧಿರಣ್ಯಾಂಡ ಸಮುದ್ಭವಃ ॥೪೨॥**

ಮೃತೇಃ ಅಂಡೇ = ಭೂ ಆವರಣವೆನಿಸುವ ಬ್ರಹ್ಮಾಂಡದಿಂದ; ಯತ್ ಅಭೂತ್ = ಉಂಟಾದುದರಿಂದ; ಮಾರ್ತಾಂಡಃ ಇತಿ = ಮಾರ್ತಾಂಡ ಎಂದು; ವ್ಯಪದೇಶಃ = ಸೂರ್ಯನಿಗೆ ಹೆಸರು; ಯತ್ಹಿರಣ್ಯಾಂಡ ಸಮುದ್ಭವಃ = ಸುವರ್ಣ ಮಾಯವಾದ ಬ್ರಹ್ಮಾಂಡದಿಂದ ಜನಿಸಿದುದರಿಂದ; ಹಿರಣ್ಯಗರ್ಭಃ ಇತಿ = ಹಿರಣ್ಯ ಗರ್ಭ ಎಂದು ಹೆಸರು.

ಈಗಿನವರು ಹೇಳುವಂತೆ ಹೊಗೆಯಂತಹ ಅನಿರ್ದಿಷ್ಟ ವಸ್ತು (Nebula) ವಿಶ್ವದ ಸೃಷ್ಟಿಗೆ ಕಾರಣವಲ್ಲ. ನವಾವರಣಗಳ ನಂತರ ಭೂ ಆವರಣ ಸೃಷ್ಟಿಯಾಯಿತು. ಅದರಿಂದ ಅದ್ಭುತವಾದ ಸೂರ್ಯಗೋಳದ ಸೃಷ್ಟಿ. ಅದರಿಂದ ಸಿಡಿದ ವಸ್ತುಗಳಿಂದ ವಿಶ್ವದ ಸೃಷ್ಟಿ.

**ಸೂರ್ಯೇಣಹಿ ವಿಭಜ್ಯಂತೇ ದಿಶಃ ಖಂ ದ್ಯೌರ್ಮಹೀಭಿದಾ ।**
**ಸ್ವರ್ಗಾಪವರ್ಗೌ ನರಕಾ ರಸೌಕಾಂಸಿಚ ಸರ್ವಶಃ ॥೪೩॥**

ದಿಶಃ = ದಿಕ್ಕುಗಳು; ಖಂ = ಆಕಾಶವು; ದ್ಯೌಃ = ಅಂತರಿಕ್ಷ ಕಾಯಗಳು; ಮಹೀ = ಭೂಮಂಡಲವು;ಸ್ವರ್ಗ ಅಪವರ್ಗೌ = ಸ್ವರ್ಗಾದಿ ಲೋಕಗಳು ಮತ್ತು ವೈಕುಂಠ ಲೋಕವು; ನರಕಾಃ = ನರಕ ಸ್ಥಾನಗಳು; ಚ = ಮತ್ತು; ರಸೌಕಾಂಸಿ = ರಸಾತಳ ಮೊದಲಾದ ಅಧೋ ಲೋಕಗಳು; ಸರ್ವಶಃ = ಎಲ್ಲಾ ರೀತಿಗಳಿಂದಲೂ; ಸೂರ್ಯೇಣಹಿ = ಸೂರ್ಯನಿಂದಲೇ; ವಿಭಜ್ಯಂತೇ = ಪರಸ್ಪರ ಬೇರೆ ಬೇರೆ ಸ್ಥಾನಗಳಲ್ಲಿರುವುವೆಂದು (ಪೂರ್ವ, ಪಶ್ಚಿಮ, ಮೇಲೆ, ಕೆಳಗೆ ಇತ್ಯಾದಿಯಾಗಿ ಗ್ರಹಿಸಲ್ಪಡುತ್ತವೆ.)

ಆಧುನಿಕ ಸಾಪೇಕ್ಷತಾವಾದವು (Einstein's theory of relativity) ಇಲ್ಲಿ ಸೂಚಿತವಾಗಿದೆ.

**ದೇವತಿರ್ಯಙ್ಮನುಷ್ಯಾಣಾಂ ಸರೀಸೃಪ ಸವೀರುಧಾಂ ।**
**ಸರ್ವಜೀವ ನಿಕಾಯಾನಾಂ ಸೂರ್ಯ ಆತ್ಮಾ ದೃಗೀಶ್ವರಃ ॥೪೩॥**

ದೇವತೆಗಳಿಗೂ, ಮೃಗಗಳಿಗೂ, ಮನುಷ್ಯರಿಗೂ, ಹರಿದಾಡುವ ಪ್ರಾಣಿಗಳಿಗೂ, ಸಸ್ಯಜೀವಿಗಳಿಗೂ, ಎಲ್ಲಾಬಗೆಯ ಜೀವ ಸಮುದಾಯಕ್ಕೂ ಸೂರ್ಯನೇ ಪ್ರಾಣಪ್ರದನೂ, ಜ್ಞಾನಪ್ರದನೂ, ಒಡೆಯನೂ ಆಗಿದ್ದಾನೆ.

ಸೂರ್ಯಬಿಂಬದಲ್ಲಿ ಹನ್ನೆರಡು ಮಂದಿ ಸೂರ್ಯನಾಮಕರಿದ್ದು, ಒಂದೊಂದು ತಿಂಗಳಲ್ಲಿ ಒಬ್ಬೊಬ್ಬರು ಸರದಿಯಪ್ರಕಾರ ಕಾರ್ಯನಿರ್ವಾಹ ಮಾಡತ್ತಾರೆ. ಲೋಕಕ್ಕೆಲ್ಲಾ ಸೂರ್ಯನು ಆಧಾರಭೂತನಾದರೆ, ಅವನು ತನ್ನಂತರ್ಯಾಮಿಯಾದ ಶ್ರೀಮನ್ ನಾರಾಯಣನ ಅಧೀನ. ನಾವು ಗಾಯತ್ರೀ ಮಂತ್ರದಿಂದ ಪ್ರಾರ್ಥನೆ ಯನ್ನು ಸಲ್ಲಿಸುವುದು ಸೂರ್ಯನಾರಾಯಣನಿಗೆ. ಆ ಪ್ರಭುವಿಗೆ ಸೂರ್ಯ (ಸೃಷ್ಟಿಸುವವನು), ಆದಿತ್ಯ (ಕೊಟ್ಟುಕೊಳ್ಳುವವನು) ಮತ್ತು ಘೃಣಿ (ಕರುಣಾಮೂರ್ತಿ) ಎಂಬ ಹೆಸರುಗಳು ಪ್ರಸಿದ್ಧವಾಗಿವೆ. ಸೂರ್ಯನೇ ಸೃಷ್ಟಿಸ್ಥಿತಿ ಲಯ ಕರ್ತಾ ಎಂದ ಹಾಗಾಯಿತಲ್ಲವೇ!

ನಕ್ಷತ್ರಗಳ ಕಾಂತಿ ಮತ್ತು ಬಣ್ಣಗಳ ಲಕ್ಷಣದಿಂದ, ನಕ್ಷತ್ರಗಳು ಆರು ದರ್ಜೆಯವುಗಳಾಗಿರುವುವೆಂದೂ, ನಮ್ಮ ಸೂರ್ಯನು ಮಧ್ಯಮ ದರ್ಜೆಯ ನಕ್ಷತ್ರವೆಂದೂ ಈಗಿನ ವಿಜ್ಞಾನಿಗಳು ಹೇಳುವುದು ಹಾಸ್ಯಾಸ್ಪದವಾದ ಊಹೆಯು ಮಾತ್ರ; ಹಗ್ಗವನ್ನು ಕಂಡು ಹಾವೆಂದ ಹಾಗೆ ಕೇವಲ ಭ್ರಾಂತಿ.

ಹಾಗೆಂದ ಮಾತ್ರಕ್ಕೆ ಅವರು ಹೇಳುವುದೆಲ್ಲಾ ತಪ್ಪು ಎನ್ನಲಾಗುವುದಿಲ್ಲ. ಕೆಲವು ವಿಷಯಗಳಲ್ಲಿ ಅವರ ಬುದ್ಧಿವಂತಿಕೆಯ ಊಹೆಗಳು ಸತ್ಯಕ್ಕೆ ಸಮೀಪವಾದುವು. ಮಹಾಸ್ಫೋಟ (Big bang) ಎಂಬುದು ಅಂತಹ ಒಂದು ಊಹೆ.

ಬ್ರಹ್ಮಾಂಡದಿಂದ ಸುರಿದ ವಸ್ತುಗಳು ಭೂಮಂಡಲವಾಗಿ ಪರಿವರ್ತಿತ ವಾಗುತ್ತಿರುವಾಗ, ಭೂಭಾಗದಿಂದ ಸಿಡಿದುದು ಮಂಗಳ ಗ್ರಹ. ಅದಕ್ಕೆ ಭೂಪುತ್ರ ಎಂದೇ ಹೆಸರು. ಬ್ರಹ್ಮಾಂಡದ ತೇಜೋ ವಿಶೇಷಗಳಿಂದ ಮೊದಲು ಮೂಡಿಬಂದ ಆಕಾಶಕಾಯ ಸೂರ್ಯನ ಬೃಹನ್ಮಂಡಲ. ಅದರಿಂದ ಸಿಡಿದು ಬೇರೆಯಾದವು ಇಪ್ಪತ್ತೇಳು ನಕ್ಷತ್ರರಾಶಿಗಳು ಮತ್ತು ಗ್ರಹಗಳು. ಸೂರ್ಯನಿಂದ ಸಿಡಿದ ನಮ್ಮ ಚಂದ್ರಗ್ರಹದ ತುಣುಕು ಬುಧಗ್ರಹ. ಬೇರೆ ಗ್ರಹಗಳಿಂದ ಸಿಡಿದ ತುಣುಕುಗಳನ್ನು ಅವುಗಳ ಚಂದ್ರಗಳೆಂದು ಈಗಿನವರು ಊಹಿಸುತ್ತಾರಷ್ಟೇ. ನಕ್ಷತ್ರಗಳ ಗುಂಪಿಗೆ ಸೇರಿದುವು ಸಪ್ತಋಷಿ ಮಂಡಲ, ಧೃವನಕ್ಷತ್ರ ಮತ್ತು ಇನ್ನು ಕೆಲವು ನಕ್ಷತ್ರಗಳು. ಉಳಿದುವೆಲ್ಲಾ ನಕ್ಷತ್ರಗಳ ರೂಪದಲ್ಲಿರುವ ತಾರೆಗಳು – ಸಿದ್ಧರು, ಸಾಧ್ಯರು ಮೊದಲಾದ ದಿವ್ಯ ಪುರುಷರ ಆಕಾಶಯಾನಗಳು. ಈ ಎಲ್ಲವೂ ಕಾಲಚಕ್ರವನ್ನು ಆಧರಿಸಿ ಸುತ್ತುವುವೆಂಬ ವಿಷಯವನ್ನು ಮುಂದಿನ ಅಧ್ಯಾಯದಲ್ಲಿ ನೋಡಬಹುದು.

ಸೂರ್ಯಬಿಂಬವನ್ನು ಗ್ರಹಗಳಲ್ಲಿ ಒಂದೆಂದು ಪರಿಗಣಿಸಿದರೂ, ಅದು ಗ್ರಹ ರಾಜ. ಅಷ್ಟೇ ಅಲ್ಲ; ಅಂತರಿಕ್ಷದ ಸಾರ್ವಭೌಮ. "ಭೂರ್ಭುವಸ್ವಃ" ಎಂಬ ವ್ಯಾಹೃತಿ ಮಂತ್ರದ ವಿಸ್ತಾರವು ಈ ಮಾತನ್ನು ಸ್ಪಷ್ಟಪಡಿಸುತ್ತದೆ. ಪುರಾಣಾಂತರಗಳ ಈ ಮಾತುಗಳನ್ನೂ ಗಮನಿಸಿ –

(i) **ಕೂರ್ಮಪೂರಾಣದಲ್ಲಿ–**

**"ಸೂರ್ಯ ಏವತ್ರಿಲೋಕಸ್ಯಮೂಲಂ ಪರಮದ್ದೈವತಂ"**
**ಏವಂ ಸೂರ್ಯಪ್ರಭಾವೇನ ಸರ್ವಾನಕ್ಷತ್ರತಾರಕಾಃ ।**
**ವರ್ಧಂತೇ ವರ್ಧಿತಾನಿತ್ಯಂ ನಿತ್ಯಮಾಪ್ಯಾಯಯಂತಿಚ ॥**

**ದಿವ್ಯಾನಾಂ ಪಾರ್ಥಿವಾನಾಂಚ ನೈಶಾನಾಂಚೈವ ಸರ್ವಶಃ ।**
**ಆದಾನಾನ್ನಿತ್ಯಮಾದಿತ್ಯಃ ತೈಜಸಾಂ ತಮಸಃ ಪ್ರಭುಃ ॥ (ಅಧ್ಯಾಯ೪೧)**

(ii) **ವಾಯು ಪುರಾಣದಲ್ಲಿ –**

**"ಯಶ್ಚಾಸೌತಪತೇ ಸೂರ್ಯೋ ಪಿಬನ್ನಂಭೋಕಗಭಸ್ತಿಭಿಃ ।**
**ಪಾರ್ಥಿವೋಹಿ ವಿಮಿಶ್ರೋಸೌ ದಿವ್ಯಃ ಶುಚಿರಿತಿ ಸ್ಮೃತಃ ॥"**

"ಸಹಸ್ರಪಾದಃ ಸೋಗ್ನಿಸ್ತು ವೃತ್ತಃ ಕುಂಭನಿಭಃ ಶುಭಃ ॥"
"ಋತೇ ತನ್ಮಂಡಲಂ ಶುಕ್ಲಂ ಭಾಸ್ವರಂ ಸೂರ್ಯ ಸಂಜ್ಞಿತಂ ।
ನಕ್ಷತ್ರ ಗ್ರಹ ಸೋಮಾನಾಂ ಪ್ರತಿಷ್ಠಾ ಯೋನಿರೇವಚ ॥"

(ಅಧ್ಯಾಯ೫೩)

ತಾತ್ಪರ್ಯ –

(i) ಮೂರು ಲೋಕಗಳ ಉತ್ಪತಿಗೆ ಸೂರ್ಯನೇ ಮೂಲ ಕಾರಣ; ಅವನೇ ಅಧಿಪತಿ. ಸೂರ್ಯನ ಪ್ರಭಾವದಿಂದಲೇ ಎಲ್ಲ ನಕ್ಷತ್ರಗಳೂ ತಾರೆಗಳೂ ವರ್ಧಿಸಲ್ಪಟ್ಟು ವೃದ್ಧಿ ಹೊಂದುತ್ತವೆ; ಲೋಕಗಳನ್ನು ತಣಿಸುತ್ತವೆ. ಸುರಲೋಕಗಳಿಗೂ, ಭೂಲೋಕಕ್ಕೂ, ರಾತ್ರಿಯಲ್ಲಿ ಬೆಳಗುವ ತೇಜೋಮಯ ಕಾಯಗಳಿಗೂ ತನ್ನ ಪ್ರಭೆಯನ್ನುದಾನ ಮಾಡುವುದರಿಂದ ಆದಿತ್ಯನೆಂದು ಹೆಸರು. ಸೂರ್ಯನೇ ತೇಜೋವಸ್ತುಗಳಿಗೂ, ಕತ್ತಲೆಗೂ ಯಜಮಾನ.

(ii) ತನ್ನ ಕಿರಣಗಳಿಂದ ಬೆಳಗುವ ಸೂರ್ಯನು ಬ್ರಹ್ಮಾಂಡದ ಪೃಥಿವೀ ತತ್ವಾತ್ಮಕ ಸುವರ್ಣದಿಂದ ಜನ್ಮತಾಳಿದವನು; ಪಂಚಭೂತಗಳ ಮಿಶ್ರಣವನ್ನು ಹೊಂದಿರುವವನು. ಆದರೂ, ತನ್ನ ತೇಜ ಪ್ರಭಾವದಿಂದ ದಿವ್ಯಸ್ವರೂಪವುಳ್ಳವನು ಮತ್ತು ಶುದ್ಧ ತೇಜವನ್ನು ಪ್ರಕಟಿಸುವವನು. ತನ್ನ ಕಿರಣಗಳಿಂದ ಸಮುದ್ರಗಳ ಉದಕವನ್ನು ಸಂಗ್ರಹಿಸಿ, ಮಳೆಯ ರೂಪದಲ್ಲಿ ಬಿಡಲು ಕಾರಣನಾದವನು.

ಅಗ್ನಿಗೆ ಆಕರನಾದ ಸೂರ್ಯನು ಸಹಸ್ರ ಬಗೆಯ ಪರಿಣಾಮಗಳಿಗೆ ಆಶ್ರಯನಾದವನು. ಸೂರ್ಯ ಮಂಡಲವು ಮಡಕೆಯಂತೆ ದುಂಡಾಗಿದೆ; ಲೋಕಗಳಿಗೆ ಮಂಗಳಪ್ರದವಾಗಿದೆ.

ನಿಜವಾಗಿಯೂ ಸೂರ್ಯಮಂಡಲವು ತೇಜಸ್ಸಿನ ಪ್ರಭಾವದಿಂದ ಬೆಳ್ಳಗೆ ಕಾಣುವುದು. ಅದು, ನಕ್ಷತ್ರಗಳಿಗೂ, ಗ್ರಹಗಳಿಗೂ, ಚಂದ್ರನಿಗೂ ಆಶ್ರಯಭೂತವಾದುದು ಮತ್ತು ಜನ್ಮದಾತೃವಾದುದು.

"ಶ್ರೀಕೃಷ್ಣಾರ್ಪಣಮಸ್ತು"

---

# ಅಧ್ಯಾಯ – ಇಪ್ಪತ್ತೊಂದು

ಶ್ರೀ ಶುಕ ಉವಾಚಃ  ಶುಕಾಚಾರ್ಯರು ಪರೀಕ್ಷದ್ರಾಜನನ್ನು, ಕುರಿತು ಹೇಳಿದರು.

**ಏತಾವಾನೇವ ಭೂವಲಯಸ್ಯ ಸನ್ನಿವೇಶಃ ಪ್ರಮಾಣ ಲಕ್ಷಣತೋ ವ್ಯಾಖ್ಯಾತಃ ॥೧॥**

ಈ ಹಿಂದೆ ಹೇಳಿದಷ್ಟೇ ಭೂಮಂಡಲದ ಸನ್ನಿವೇಶ ಮತ್ತು ಲಕ್ಷಣಗಳು (ಲೋಕಾಲೋಕ ಪರ್ವತದಒಳಭಾಗಕ್ಕೆ ಸೀಮಿತವಾದುದು.)

ಏತೇನ ಹಿ = ಭೂಮಂಡಲದ ಸನ್ನಿವೇಶವನ್ನು ತಿಳಿಸಿದುದರಿಂದಲೇ; ದಿವಃ ಮಂಡಲ ಮಾನಂ = ಅಂತರಿಕ್ಷಪ್ರದೇಶದ ವಿಸ್ತಾರವನ್ನು; ತದ್ವಿದಃ ಉಪದಿಶಂತಿ = ಅದನ್ನು ಅರಿತವರು ತಿಳಿಯಹೇಳುತ್ತಾರೆ. ದ್ವಿದಳಾನಾಂನಿಷ್ಪಾವ ಆದೀನಾಂ ಯಥಾ = ದ್ವಿದಳ ಧಾನ್ಯಗಳ ಎರಡು ಭಾಗಗಳ ನಡುವಿನ ಅಂತರವಿದ್ದಂತೆ; ಅಂತರಿಕ್ಷಂ ಅಂತರಿಕ್ಷ ಲೋಕವು; ತದುಭಯ ಅಂತರಿಕ್ಷೇಣ ಸಂಧಿತಂ = ಭೂಲೋಕ ಸ್ವರ್ಲೋಕಗಳ ಆಂತರಿಕ ಆಕಾಶದಿಂದ, ಅವೆರಡಕ್ಕೂ ಸಂಬಂಧ ಹೊಂದಿದೆ.

**ಯನ್ಮಧ್ಯಗತೋ ಭಗವಾಂಸ್ತಪತಾಂಪತಿಸ್ತಪನ ಆತಪೇನ ತ್ರಿಲೋಕೀಂ ಪ್ರತಪತ್ಯವಭಾಸಯತ್ಯಾತ್ಮಭಾಸಾ ಸಏಷ ಉದಗಯನ ದಕ್ಷಿಣಾಯನ ವೈಷುವತ ಸಂಜ್ಞಾಭಿರ್ಮಾಂದ್ಯ ಶೈಘ್ರ್ಯ ಸಮಾನಾಭಿರ್ಗತಿಭಿರಾರೋಹಣಾವರೋಹಣ ಸಮಾನ ಸ್ಥಾನೇಷು ಯಥಾಸವನ ಮಭಿಪದ್ಯಮಾನೋ ಮಕರಾದಿಷು ರಾಶಿಷ್ವ ಹೋರಾತ್ರಾಣಿ ದೀರ್ಘಹ್ರಸ್ವ ಸಮಾನಾನಿ ವಿಧತ್ತೇ ॥೩॥**

ಯತ್‌ಮಧ್ಯಗತಃ = ಯಾವ ಅಂತರಿಕ್ಷದ ಮಧ್ಯಭಾಗದಲ್ಲಿರುವ; ತಪತಾಂ ಪತಿಃ = ಶಾಖದಾಯಕಗಳಾದನಕ್ಷತ್ರಗಳಿಗೆಲ್ಲಾ ರಾಜನಾದ; ಭಗವಾನ್ ತಪನಃ =ಸೂರ್ಯ ಭಗವಾನನು; ಆತಪೇನ = ತನ್ನ ಶಾಖಪ್ರಸಾರದಿಂದ; ತ್ರಿಲೋಕೀಂ =ಭೂಲೋಕ, ಭುವರ್ಲೋಕ ಸ್ವರ್ಲೋಕಗಳನ್ನು; ಪ್ರತಪತಿ = ಶಾಖವುಳ್ಳವುಗಳನ್ನಾಗಿ ಮಾಡುತ್ತಾನೆ; ಆತ್ಮಭಾಸಾ = ತನ್ನ ಕಾಂತಿಯಿಂದ; ಅವಭಾಸಯತಿ = ಬೆಳಗುತ್ತಾನೆ. ಸಃಏಷಃ = ಅಂತಹ ಈ ಸೂರ್ಯನು; ಉದಗಯನ ದಕ್ಷಿಣಾಯನ ವೈಷುವತ ಸಂಜ್ಞಾಭಿಃ = ಉತ್ತರಾಯಣ, ದಕ್ಷಿಣಾಯನ, ವಿಷುವದ್ರೇಖೆಯ ಸಂಕ್ರಮಣಗಳೆಂಬ

ಕ್ರಮಗಳಿಂದ; ಮಾಂದ್ಯ ಶೈಘ್ರ್ಯ ಸಮಾನಾಭಿಃ ಗತಿಭಿಃ = ಮಂದ, ಶೀಘ್ರ ಮತ್ತು ಸಮಗತಿಗಳಿಂದ; ಆರೋಹಣ ಅವರೋಹಣ ಸಮಾನ ಸ್ಥಾನೇಷು = ಕರ್ಕಾಟಕ ಸಂಕ್ರಾಂತಿ ವೃತ್ತದವರೆಗೆ ಮೇಲೇರುವುದು, ಮಕರಸಂಕ್ರಾಂತಿ ವೃತ್ತದವರೆಗೆ ಕೆಳಗಿಳಿಯುವುದು ಮತ್ತು ವಿಷುವದ್ರೇಖೆಯ ಬಳಿಯಲ್ಲಿ ಸಮಸ್ಥಾನದಲ್ಲಿರುವುದು- ಈ ಪ್ರಕಾರಗಳಿಂದ; ಯಥಾಸವನಂ ಅಭಿಪದ್ಯಮಾನಃ = ಆಯಾಕಾಲಗಳಿಗೆ ತಕ್ಕಂತೆ ಅಲ್ಲಲ್ಲಿ ಕಂಡುಬರುತ್ತಾ; ಮಕರಾದಿಷು ರಾಶಿಷು = ಮಕರ ಮೊದಲಾದ ರಾಶಿಗಳಲ್ಲಿ ಪ್ರವೇಶಿಸುತ್ತಾ; ಅಹೋರಾತ್ರಾಣಿ = ಹಗಲು ರಾತ್ರಿಗಳನ್ನು; ದೀರ್ಘ ಹ್ರಸ್ವ ಸಮಾನಾನಿವಿಧತ್ತೇ = ಹಗಲು ಹೆಚ್ಚು ರಾತ್ರಿ ಕಡಿಮೆ, ರಾತ್ರಿ ಹೆಚ್ಚು ಹಗಲು ಕಡಿಮೆ, ಎರಡೂ ಸಮ ಎಂಬ ವ್ಯತ್ಯಾಸಗಳನ್ನು ಉಂಟುಮಾಡುತ್ತಾನೆ.

ಇಲ್ಲಿ ನಾವು ಚೆನ್ನಾಗಿ ಗಮನಿಸಬೇಕಾದ ಅನೇಕ ಅಂಶಗಳು ತುಂಬಿಕೊಂಡಿವೆ.

(೧) ಬೆಳಕಿನ ಪ್ರಖರತೆ ಮತ್ತು ಬಣ್ಣಗಳ ವ್ಯತ್ಯಾಸದಿಂದ ಪ್ರತಿಯೊಂದು ನಕ್ಷತ್ರವೂ ಒಂದೊಂದು ಸೂರ್ಯ, ಅವುಗಳಲ್ಲಿ ನಮ್ಮ ಸೂರ್ಯನಿಗಿಂತಲೂ ಹೆಚ್ಚು ಗಾತ್ರದ ಸೂರ್ಯಗಳಿವೆ ಎಂದು ಈಗಿನವರು ಹೇಳುವುದು ಕೇವಲ ಊಹೆಯ ಮಾತು. ಪೂರ್ಣ ಮಾಹಿತಿಯಿಲ್ಲದೆ, ದೂರ ದೂರದ ವಸ್ತುಗಳನ್ನು ಕುರಿತು ಊಹಿಸಿ ಹೇಳುವ ಮಾತುಗಳು ವೈಜ್ಞಾನಿಕವೆಂದಿಗೂ ಅಲ್ಲ.

(೨) ಒಂದೊಂದು ನಕ್ಷತ್ರವೂ, ತನಗೆ ಸಂಬಂಧಿಸಿದ ಗ್ರಹಗಳಿಂದ ಕೂಡಿ ಒಂದೊಂದು ಸೌರವ್ಯೂಹವಾಗಿದೆ ಎಂದು ಹೇಳುವ ಮಾತಂತೂ ಕೇವಲ ಅವೈಜ್ಞಾನಿಕ. ಕಾಣದಿರುವುದನ್ನು ಕಂಡವರಿಗಿಂತಲೂ ಹೆಚ್ಚು ನಂಬಿಕೆಯಿಂದ ವರ್ಣಿಸುವುದು ವಿಜ್ಞಾನಿಗಳಿಗೆ ಭೂಷಣವೆ?

(೩) ಬೇರೆ ಬೇರೆ ಗ್ರಹಗಳನ್ನು ದೂರದರ್ಶಕದಲ್ಲಿ ವೀಕ್ಷಿಸಿ, ಭೂಮಿಯನ್ನೂ ಗ್ರಹವೆಂದೆಣಿಸಿ, ಅದು ತನ್ನ ಅಕ್ಷವನ್ನು $23\frac{1}{2}^{0}$ ಓರೆಯಾಗಿ ಮಾಡಿಕೊಂಡು ಸೂರ್ಯನಿಗೆ ಪ್ರದಕ್ಷಿಣೆಯಾಗಿ ಸುತ್ತುವುದರಿಂದ ಋತುಮಾನಗಳು ಸಂಭವಿಸುತ್ತವೆ ಎಂದು ಹೇಳುವ ಈಗಿನವರ ಊಹೆ ನಿರಾಧಾರವಾದುದು; ಕೇವಲ ಅನುಕೂಲ ಸಿಂಧುವಾದ ಗಣಿತ ಪ್ರಪಂಚ. ಸೂರ್ಯನಿಗೆ ವಿಮುಖವಾಗಿ ಬಾಗಿದ ಭೂಮಿಯ ಅಕ್ಷವು, ಮೂರು ತಿಂಗಳ ವೇಳೆಗೆ ನೆಟ್ಟಗಾಗುವುದೆಂದೂ, ಇನ್ನು ಮೂರು ತಿಂಗಳು ಕಳೆಯುವಷ್ಟರಲ್ಲಿ ಅದು ಸೂರ್ಯನಿಗೆ ಅಭಿಮುಖವಾಗುವುದೆಂದೂ, ಇನ್ನಾರು ತಿಂಗಳಲ್ಲಿ ಮತ್ತೆ ನೆಟ್ಟಗಾಗಿ, ಕ್ರಮವಾಗಿ ವಿಮುಖವಾಗುವುದೆಂದೂ ಹೇಳಿದ ಕೋಪರ್ನಿಕಸ್ಸನ ಮಾತನ್ನು ಸತ್ಯವೆನಿಸುವುದಕ್ಕಾಗಿ ಭೂಮಿಯು ಅವನ ಇಚ್ಛಾನುಸಾರ ವರ್ತಿಸುವ ತಲೆಕೆಟ್ಟವ್ಯಕ್ತಿಯೆ?






(೪) ಭೂಮಿಯು ತನ್ನ ಅಕ್ಷದ ಮೇಲೆ ಎಡಸುತ್ತು ಸುತ್ತುವುದರಿಂದ ಹಗಲು ರಾತ್ರಿಗಳಾಗುತ್ತವೆಯಂತೆ. ಎಡಸುತ್ತು ತನಗೆ ತಾನೇ ಪ್ರದಕ್ಷಿಣೆ ಮಾಡುವ ವಸ್ತುವಾಗಲೀ, ವ್ಯಕ್ತಿಯಾಗಲೀ ಬಲಸುತ್ತಿನಿಂದ ಇನ್ನೊಂದು ವಸ್ತುವಿಗೆ ಪ್ರದಕ್ಷಿಣೆ ಮಾಡುವುದು ಸಾಧ್ಯವೇ ?

ಇಂತಹ ಕ್ರಿಯೆಯನ್ನು ಪ್ರಯೋಗದಿಂದ ಸಾಧಿಸದೆ, ಅದೇ ಸರಿಯೆಂದು ಹೇಳುವುದು ಎಂತಹ ವಿಜ್ಞಾನ?

(೫) ತನ್ನ ಅಕ್ಷದ ಮೇಲೆ ಗಂಟೆಗೆ 1000 ಮೈಲಿ ತಿರುಗುವ ಭೂಮಿಯು, ಸೂರ್ಯನಿಗೆ ಪ್ರದಕ್ಷಿಣೆ ಮಾಡುವಾಗ ಸೆಕೆಂಡಿಗೆ 18 ಮೈಲಿ ವೇಗದಲ್ಲಿ ಚಲಿಸುವುದು ಯಾವ ಯಕ್ಷಿಣೀಗಾರನ ತಂತ್ರ?

(೬) ಈಗಿನವರು ಹೇಳುವಂತೆ, ಒಂದು ಕಡೆ ಗ್ರಹ 'ನಕ್ಷತ್ರಗಳ' ಸೆಳೆತ, ಇನ್ನೊಂದು ಕಡೆ ಸೂರ್ಯನ ಆಕರ್ಷಣೆ ಇರುವುದರಿಂದಲ್ಲವೆ ಭೂಮಿಯು ತನ್ನ ಪಥದಲ್ಲಿ ಸುತ್ತುವುದು? ಹಾಗೆ ಎರಡು ಸೆಳೆತಗಳಿಗೆ ಸಿಕ್ಕಿದವಸ್ತುವು ಸ್ಥಿರವೇಗವನ್ನು ಪಡೆದಿರುವುದು ಹೇಗೆ ಸಾಧ್ಯ?

**ಶ್ರೀಮದ್ಭಾಗವತದ ವಿವರಣೆ:-**

ಬುಟ್ಟಿಯಾಕಾರದ ಜಂಬೂದ್ವೀಪದ ದಕ್ಷಿಣದಂಚಿನಲ್ಲಿ ನಮ್ಮ ಭರತಖಂಡವು ಸ್ಥಿರವಾಗಿ, ನೆಟ್ಟಗೆ ನಿಂತಿದೆ. ಆದ್ವೀಪದ ಮಧ್ಯದಲ್ಲಿ ಎದ್ದು ನಿಂತಿರುವ ಮೇರು ಪರ್ವತಕ್ಕೆ ಪ್ರದಕ್ಷಿಣೆಯಾಗಿ ಸೂರ್ಯನು ತಿರುಗುವುದರಿಂದ, ಭರತಖಂಡಕ್ಕೆ (ನಮ್ಮ ಭೂಗೋಳಕ್ಕೆ) ಹಗಲು ರಾತ್ರಿಗಳಾಗುತ್ತವೆ. ಮೇರು ಪರ್ವತದ ನೇರದಲ್ಲಿ, ಮೇಲೆ,

ತಲೆಕೆಳಗಾಗಿ ನಿಂತಿರುವ ವೃಶ್ಚಿಕರೂಪೀ ಪರಮಾತ್ಮನು (ಶಿಂಶುಮಾರ ಮೂರ್ತಿಯು) ಕಾಲಚಕ್ರವನ್ನು ಆರು ತಿಂಗಳಕಾಲ ಮೇಲಕ್ಕೆ ಎತ್ತುತ್ತಲೂ, ಇನ್ನಾರು ತಿಂಗಳ ಕಾಲ ಕೆಳಕ್ಕೆ ಇಳುಸುತ್ತಲೂ ಇರುವುದರಿಂದ ಋತುಮಾನಗಳು ಸಂಭವಿಸುತ್ತವೆ. ಶಿಂಶುಮಾರ ಮೂರ್ತಿಯು ಕಾಲಚಕ್ರವನ್ನು ಮೇರು ಪರ್ವತಕ್ಕೆ ಪ್ರದಕ್ಷಿಣಾಕಾರವಾಗಿ ಸುತ್ತಿಸುತ್ತಿರುವುದರಿಂದ, ಗ್ರಹ ನಕ್ಷತ್ರ ತಾರೆಗಳು ಕಾಲಚಕ್ರದ ವಿವಿಧ ಪಥಗಳಲ್ಲಿ ತಮತಮಗೆ ಅನುಗುಣ ವೇಗಗಳಿಂದ ಸುತ್ತುತ್ತಲಿವೆ.

**ಯದಾ ಮೇಷತುಲಯೋರ್ವರ್ತತೇ ತದಾಹೋರಾತ್ರಾಣಿ ಸಮಾನಾನಿ ಭವಂತಿ ಯದಾ ವೃಷಾಭಾದಿಷುಪಂಚಸು ಚ ರಾಶಿಷು ಚರತಿ ತದಾಹಾನ್ಯೇವ ವರ್ಧಂತೇ ಹ್ರಸತಿಚ. ಮಾಸಿ ಮಾಸ್ಯೈಲ್ಕೈಕಾ ಘಟಿಕಾ ರಾತ್ರಿಷು ॥೪॥**

ಯದಾ ಮೇಷತುಲಯೋಃ ವರ್ತತೇ ತದಾ = ಸೂರ್ಯನು ಮೇಷ ಮತ್ತು ತುಲಾರಾಶಿಗಳಲ್ಲಿ ಸಂಚರಿಸುವಾಗ; ಅಹೋ ರಾತ್ರಾಣಿ ಸಮಾನಿ ಭವಂತಿ = ಹಗಲು ರಾತ್ರಿಗಳು ಸಮವಾಗಿರುತ್ತವೆ; ಯದಾ ವೃಷಭಾದಿಷುಪಂಚಸುಚ ರಾಶಿಷು ಚರತಿ ತದಾ = ವೃಷಭವೇ ಮೊದಲಾದ ಐದು ಉತ್ತರದ ಕಡೆಗಿರುವ ರಾಶಿಗಳಲ್ಲಿ ಸಂಚರಿಸುವಾಗ; ಆಹಾನಿ ಏವ ವರ್ಧಂತೇ = ಹಗಲುಗಳ ಪ್ರಮಾಣ ಹೆಚ್ಚುತ್ತಾ ಹೋಗುತ್ತದೆ; ರಾತ್ರಿಷು = ರಾತ್ರಿಯ ಕಾಲಗಳಲ್ಲಿ; ಮಾಸಿ ಮಾಸಿ = ತಿಂಗಳು ತಿಂಗಳಿಗೆ; ಏಕೈಕಾ ಘಟಿಕಾ = ಒಂದೊಂದು ಘಳಿಗೆಯಂತೆ; ಹ್ರಸತಿಚ = ರಾತ್ರಿಯ ಅವಧಿಯು ಕಡಿಮೆಯಾಗುತ್ತಾ ಹೋಗುತ್ತದೆ.

ಹಿಂದಿನ ವಿಭಾಗದಲ್ಲಿ ಸೂರ್ಯನ ಶೀಘ್ರಗತಿ, ಮಾಂದ್ಯಗತಿ ಮತ್ತು ಸಮಗತಿಗಳನ್ನು ಕುರಿತು ಹೇಳಿ,' ಇಲ್ಲಿ, ಹಗಲು ಹೆಚ್ಚುವ ಮತ್ತು ರಾತ್ರಿ ಕಡಿಮೆಯಾಗುವ ವಿಚಾರವನ್ನು ಹೇಳಿದ್ದಾರೆ. ಸೂರ್ಯನ ಗತಿಯನ್ನು ಕುರಿತು ಹೇಳಿದಾಗ, ಸೂರ್ಯರಥ ಸಂಚಾರ ವೇಗದಲ್ಲಿ ಹೆಚ್ಚು ಕಡಿಮೆಗಳಾಗುವೆಂದು ತಿಳಿಯಬಾರದು. ನಮ್ಮ ಭರತಖಂಡವು (ಭೂಗೋಳವು) ಸ್ವಲ್ಪ ಹೆಚ್ಚು ಕಡಿಮೆ ಚಂಡಿನಂತೆ ಗುಂಡಗಿರುವುದರಿಂದ, ಭೂಮಧ್ಯರೇಖೆಯಿಂದ ಉತ್ತರಕ್ಕೆ ಹೋದಂತೆಲ್ಲಾ ವೃತ್ತಭಾಗವು ಸಂಕುಚಿಸುತ್ತಾ ಹೋಗುವುದು. ಆದುದರಿಂದ, ಸೂರ್ಯನು ಉತ್ತರದ ಕಡೆಗೆ ಸಾಗಿದಂತೆಲ್ಲಾ, ಸೂರ್ಯೋದಯವು ಬೇಗಬೇಗನೆ ಆಗಿ, ಸೂರ್ಯಾಸ್ತಮಾನವು ನಿಧಾನವಾಗುವುದು. ಹಗಲಿನ ಪ್ರಮಾಣ ಹೆಚ್ಚುವುದರಿಂದ, ಸೂರ್ಯರಥವು ನಿಧಾನವಾಗಿ ಚಲಿಸುವುದೇನೋ ಎಂಬ ಭಾವನೆಯೇ ಹೊರತು ರಥದ ವೇಗ ಕಡಿಮೆಯಾಗುವುದಿಲ್ಲ.

> ಯದಾವೃಶ್ಚಿಕಾದಿಷು ಪಂಚಸುವರ್ತತೇ ತದಾಹೋರಾತ್ರಾಣಿ
> ವಿಪರ್ಯಯಾನಿ ಭವಂತಿ ॥೫॥

ವೃಶ್ಚಿಕ ಮೊದಲಾದ ದಕ್ಷಿಣದ ಕಡೆಯ ಐದು ರಾಶಿಗಳಲ್ಲಿ ಸೂರ್ಯನು ಸಂಚರಿಸುವಾಗ, ಮೇಲೆ ಹೇಳಿದ ಹಗಲು ರಾತ್ರಿಗಳ ಪ್ರಮಾಣಗಳು ತಿರುಗು ಮುರುಗಾಗುತ್ತವೆ.

ನಮ್ಮ ಭಾರತ ದೇಶವಿರುವುದು ಭೂಮಧ್ಯ ರೇಖೆಯ ಉತ್ತರಕ್ಕೆ: ಆದುದರಿಂದ ದಕ್ಷಿಣದ ಅಕ್ಷಾಂಶಗಳಲ್ಲಿ ಸೂರ್ಯನ ಸಂಚಾರವಿರುವಾಗ, ನಮ್ಮ ದೃಷ್ಟಿಯಿಂದ ಸೂರ್ಯೋದಯವಾಗುವುದು ನಿಧಾನ; ಮುಳುಗುವುದುಬೇಗ. ಆದುದರಿಂದ ಹಗಲಿನ ಪ್ರಮಾಣ ಕಡಿಮೆಯಾಗುತ್ತಾ ಹೋಗುವುದು; ರಾತ್ರಿಯ ಪ್ರಮಾಣ ಹೆಚ್ಚುತ್ತಾ ಹೋಗುವುದು.

ನಮ್ಮ ಭೂಗೋಳವು ಚೆಂಡಿನಂತೆ ಗುಂಡಾದ ಆಕೃತಿಯುಳ್ಳದೆಂಬುದನ್ನೂ, ಅದರ ಅಕ್ಷಾಂಶ ರೇಖಾಂಶಗಳ ವಿಚಾರವನ್ನು ಪುರಾಣಜ್ಞರು ಬಲ್ಲವರಾಗಿದ್ದಾರೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

> ಯಾವದ್ದಕ್ಷಿಣಾಯನಮಹಾನಿ ವರ್ಧಂತೇ ಯಾವದುದ ಗಯನಂ
> ರಾತ್ರಯಃ ॥೬॥

ಮಕರ ಸಂಕ್ರಾಂತಿ ವೃತ್ತದಿಂದ ಕರ್ಕಾಟಕ ಸಂಕ್ರಾಂತಿ ವೃತ್ತದವರೆಗೆ ಸೂರ್ಯರಥವು ಮೇಲಕ್ಕೇರುವುದು ಉತ್ತರಾಯಣ. ಕರ್ಕಾಟಕದಿಂದ ಮಕರದವರೆಗೆ ಇಳಿಯುವುದು ದಕ್ಷಿಣಾಯನ, ಉತ್ತರಾಯಣದಲ್ಲಿ, ದಕ್ಷಿಣಾಯನ ಪ್ರಾರಂಭವಾಗುವವರೆಗೆ ಹಗಲು ಹೆಚ್ಚುತ್ತಾ ಹೋಗುವುದು. ದಕ್ಷಿಣಾಯನ ಪ್ರಾರಂಭವಾಯಿತೆಂದರೆ ರಾತ್ರಿ ಹೆಚ್ಚುತ್ತಾಹೋಗುವುದು.

> ಏವಂ ನವಕೋಟಯ ಏಕಪಂಚಾಶಲ್ಲಕ್ಷಾಣಿ ಯೋಜನಾನಾಂ
> ಮಾನಸೋತ್ತರಗಿರಿ ಪರಿವರ್ತನಸ್ಯೋಪದಿಶಂತಿತಸ್ಮಿನ್ನೈಂದ್ರೀಂ ಪುರೀಂ
> ಪೂರ್ವಾಸ್ಮಾನ್ಮೇರೋರ್ದೇವಧಾನೀಂ ನಾಮ ದಕ್ಷಿಣತೋ ಯಾಮ್ಯಾಂ
> ಸಂಯಮನೀಂನಾಮ ಪಶ್ಚಾದ್ವಾರುಣೀಂ ನಿಮ್ಲೋಚನೀಂ ನಾಮ
> ಉತ್ತರತಃ ಸೌಮ್ಯಾಂ ವಿಭಾವರೀಂ ನಾಮ
> ತಾಸೂದಯಮಧ್ಯಾಹ್ನಾಸ್ತಮಯ ನಿಶೀಥಾನೀತಿ ಭೂತಾನಾಂ ಪ್ರವೃತ್ತಿ
> ನಿವೃತ್ತಿ ನಿಮಿತ್ತಾನಿ ಸಮಯ ವಿಶೇಷೇಣ ಮೇರೋಶ್ಚತುರ್ದಿಶಂ ॥೭॥

ಏವಂ = ಹೀಗೆ; ಮಾನಸೋತ್ತರ ಗಿರಿ ಪರಿವರ್ತನಸ್ಯ = ಮಾನಸೋತ್ತರ ಪರ್ವತದ ಸುತ್ತಳತೆಯನ್ನು ಕುರಿತು; ನವ ಕೋಟಯಃ ಏಕ ಪಂಚಾಶಲ್ಲಕ್ಷಾಣಿ =೯ ಕೋಟಿ ೫೧ ಲಕ್ಷಯೋಜನವೆಂದು; ಉಪದಿಶಂತಿ = ತಿಳಿಸುತ್ತಾರೆ; ತಸ್ಮಿನ್ = ಆ ಪರ್ವತದ ಮೇಲೆ; ಮೇರೋಃ ಪೂರ್ವಸ್ಮಾತ್ = ಮೇರುಪರ್ವತದ ಪೂರ್ವ ದಿಕ್ಕಿನಲ್ಲಿ; ಐಂದ್ರೀಂಪುರೀಂ ದೇವಧಾನೀಂ ನಾಮ = ಇಂದ್ರದೇವರ ದೇವಧಾನಿ ಎಂಬ ಪಟ್ಟಣವನ್ನೂ; ದಕ್ಷಿಣತಃ = ದಕ್ಷಿಣ ದಿಕ್ಕಿನಲ್ಲಿ; ಯಾಮ್ಯಾಂ ಸಂಯಮನೀಂ ನಾಮ = ಯಮದೇವರ ಸಂಯಮನೀ ಎಂಬ ಪಟ್ಟಣವನ್ನೂ; ಪಶ್ಚಾತ್ =ಪಶ್ಚಿಮ ದಿಕ್ಕಿನಲ್ಲಿ; ವಾರುಣೀಂ ನಿಮ್ಲೋಚನೀಂ ನಾಮ = ವರುಣ ದೇವರ ನಿಮ್ಲೋಚನೀ ಎಂಬ ಪಟ್ಟಣವನ್ನೂ; ಉತ್ತರತಃ = ಉತ್ತರ ದಿಕ್ಕಿನಲ್ಲಿ; ಸೌಮ್ಯಾಂ ವಿಭಾವರೀಂ ನಾಮ = ಚಂದ್ರದೇವರ ವಿಭಾವರೀ ಎಂಬ ಪಟ್ಟಣವನ್ನೂ; ಉಪದಿಶಂತಿ = ಇರುವುವುವೆಂದು ಹೇಳುತ್ತಾರೆ; ತಾಸು  ಆಪಟ್ಟಣಗಳಿರುವಲ್ಲಿ; ಉದಯ ಮಧ್ಯಾಹ್ನ, ಅಸ್ತಮಯ ನಿಶೀಥಾನಿ = ಸೂರ್ಯೋದಯ, ಮಧ್ಯಾಹ್ನ, ಅಸ್ತಮಾನ, ಮಧ್ಯರಾತ್ರಗಳು; ಭೂತಾನಾಂ = ಪ್ರಾಣಿಗಳ; ಪ್ರವೃತ್ತಿ ನಿವೃತ್ತಿ ನಿಮಿತ್ತಾನಿ = ಚಟುವಟಿಕೆಗಳ ಮತ್ತು ವಿಶ್ರಾಂತಿಯ ನಿಮಿತ್ತವಾಗಿ; ಇತಿ = ಎಂದು; ಸಮಯ ವಿಶೇಷೇಣ = ಕಾಲಗತಿಯ ಲಕ್ಷಣದಿಂದ; ಮೇರೋಃಚತುರ್ದಿಶಂ = ಮೇರುಪರ್ವತದ ನಾಲ್ಕೂ ಕಡೆಗಳನ್ನೂ ಕುರಿತು; ಉಪದಿಶಂತಿ = ನಿರ್ದೇಶನ ಮಾಡಿಹೇಳುತ್ತಾರೆ.

ಈ ರೀತಿಯಾಗಿ ದಿಗ್ದರ್ಶನ ಮಾಡಿರುವುದು, ಪ್ರಮುಖ ಕರ್ಮ ಭೂಮಿಯಾದ ಭಾರತ ದೇಶದ ದೃಷ್ಟಿಯಿಂದ, ವಿಶ್ವದ ಎಲ್ಲಾ ಪ್ರದೇಶಗಳಿಗೂ ಮೇರುವು ಉತ್ತರ ದಿಕ್ಕಿನಲ್ಲಿರುವುದೆಂದು ಹೇಳುವುದೂ ಉಂಟು.

**ತತ್ರತ್ಯಾನಾಂ ದಿವಸಮಧ್ಯಂಗತ ಏವ ಸದಾದಿತ್ಯಸ್ತಪತಿ ಸವ್ಯೇನಾಚಲಂ ದಕ್ಷಿಣೇನ ಕರೋತಿ ||೮||**

ಸದಾ = ಯಾವಾಗಲೂ; ತತ್ರತ್ಯಾನಾಂ = ದೇವಧಾನಿ ಮೊದಲಾದ ನಾಲ್ಕು ಪಟ್ಟಣಗಳಲ್ಲಿರುವವರಿಗೆ; ಆದಿತ್ಯಃ = ಸೂರ್ಯನು; ದಿವಸ ಮಧ್ಯಂಗತಃ ಏವ = ನೆತ್ತಿಯ ಮೇಲೆ ಕಾಣುವಾಗ ಮಾತ್ರ; ತಪತಿ = ತನ್ನಕಿರಣಗಳ ಪ್ರಭಾವವನ್ನು ಚೆನ್ನಾಗಿ ಬೀರುತ್ತಾನೆ; ಸವ್ಯೇನ ಅಚಲಂ = ಎಡ ಭಾಗದಲ್ಲಿ ಕಾಣುವ ಪರ್ವತವನ್ನು; ದಕ್ಷಿಣೇನ ಕರೋತಿ = ಬಲಭಾಗಕ್ಕಿರುವಂತೆ ಮಾಡಿಕೊಳ್ಳುತ್ತಾನೆ.

ದಿಕ್ಪಾಲಕರ ಪಟ್ಟಣಗಳಿರುವುದು ಮಾನಸೋತ್ತರ ಪರ್ವತದ ಮೇಲೆ. ಕಾಲಚಕ್ರದ ಮುಖ್ಯ ಪಥವಿರುವುದೂ ಆಪರ್ವತದ ಮೇಲೆಯೇ. ಆದುದರಿಂದ ನೆತ್ತಿಯ ಮೇಲೆ

ಬಂದಾಗ ಎಂದು ಹೇಳಿದೆ. ಸೂರ್ಯನು ಮೇರುವಿಗೆ ಪ್ರದಕ್ಷಿಣೆ ಮಾಡುವಾಗ ಆ ಪರ್ವತವು ಸೂರ್ಯನ ಬಲಭಾಗದ ಕಡೆಗೇ ಇರುತ್ತದೆ. ರಾಶಿಗಳ ದೃಷ್ಟಿಯಿಂದ ಸೂರ್ಯರಥವು ದಿನದಿನವೂ ಒಂದೊಂದು ಅಂಶ ಹಿಂದೆ ಬೀಳುವಾಗ, ಮೇರುವು ಅದರ ಎಡದ ಕಡೆಗೆ ಇದ್ದ ಹಾಗಾಯಿತು.

**ಯತ್ರೋದೇತಿ ತಸ್ಯಹ ಸಮಾನ ಸೂತ್ರ ನಿಪಾತೇ ನಿಮ್ಲೋಚತಿ**
**ಯತ್ರಕ್ವಚನ ಸ್ಯಂದೇನಾಭಿತಪತಿ ತಸ್ಯಹೈಷಸಮಾನಸೂತ್ರನಿಪಾತೇ**
**ಪ್ರಸ್ವಾಪಯತಿ ತತ್ರಗತಂ ನಪಶ್ಯಂತಿ ಯೋ. ತಮನುಪಶ್ಯೇರನ್ ॥೯॥**

ಯತ್ರ ಉದೇತಿ = ಸೂರ್ಯನು ಎಲ್ಲಿ ಉದಯಿಸುವನೋ (ಮೊದಲು ಕಾಣುವನೋ); ತಸ್ಯಹ ಸಮಾನಸೂತ್ರೇ = ನೇರವಾಗಿ ಅದರ ಎದುರು ಭಾಗದಲ್ಲಿ; ನಿಮ್ಲೋಚತಿ = ಅದೃಶ್ಯನಾಗುತ್ತಾನೆ; ಯತ್ರಕ್ವಚನ = ಯಾವ ಸ್ಥಾನದಲ್ಲಿರುವಾಗ; ಸ್ಯಂದೇನ ಅಭಿತಪತಿ = ಬೆವರು ಸುರಿಯುವಂತೆ (ಮಧ್ಯಾಹ್ನ ಕಾಲದಲ್ಲಿ) ತಾಪವನ್ನುಂಟುಮಾಡುವನೋ; ತಸ್ಯಹ ಸಮಾನಸೂತ್ರೇ = ಅದಕ್ಕೆ ನೇರವಾಗಿ ಎದುರು ಭಾಗದಲ್ಲಿ; ಎಷಃ ಈ ಸೂರ್ಯನು; ಪ್ರಸ್ವಾಪಯತಿ = ಜನರಿಗೆ ಗಾಢನಿದ್ರೆಯ ಕಾಲವನ್ನುಂಟು ಮಾಡುತ್ತಾನೆ. (ಮಧ್ಯರಾತ್ರಿಯಾಗಿರುತ್ತದೆ.) ಯೇ ಸಮನುಪಶ್ಯಂತಿ = ಹಗಲು ಹೊತ್ತಿನಲ್ಲಿ ಚೆನ್ನಾಗಿ ನೋಡುತ್ತಿದ್ದವರು; ತತ್ರಗತಂ ತಂ = ಆಸ್ಥಾನದಲ್ಲಿರುವ ಸೂರ್ಯನನ್ನು; ನ ಪಶ್ಯಂತಿ = ಕಾಣುವುದಿಲ್ಲ.

ನಮ್ಮ ಭೂಭಾಗವು ಗೋಳಾಕಾರವಾಗಿರುವುದನ್ನೂ, ರೇಖಾಂಶಗಳಿಗನು ಗುಣವಾಗಿ ಉದಯಾಸ್ತಗಳಾಗುವುದನ್ನೂ, ಪೌರಾಣಿಕರು ಬಲ್ಲವರೆಂಬುದು ಇದರಿಂದ ಸಿದ್ಧವಾಯಿತು.

**ಯದಾಚೈಂದ್ರ್ಯಾಃ ಪೂರ್ಯಾಃ ಪ್ರಚಲತೇ ಪಂಚದಶ**
**ಘಟಿಕಾಭಿರ್ಯಾಮ್ಯಾಂ ಸಪಾದಕೋಟಿದ್ವಯಂಯೋಜನಾನಾಂ**
**ಸಾರ್ಧದ್ವಾದಶ ಲಕ್ಷಾಣಿ ಸಾಧಿಕಾನಿ ಚೋಪಯಾತಿ ॥೧೦॥**

ಯದಾಚ ಐಂದ್ರ್ಯಾಃ ಪುರ್ಯಾಃ ಪ್ರಚಲತೇ = ಸೂರ್ಯರಥವು ಇಂದ್ರ ದೇವರ ದೇವದಾನಿಯನ್ನು ಬಿಟ್ಟುಹೊರಟ ಮೇಲೆ; ಪಂಚದಶ ಘಟಿಕಾಭಿಃ = 15 ಘಳಿಗೆಗಳ ಅವಧಿಯಲ್ಲಿ; ಯಾಮ್ಯಾಂ = ಯಮಧರ್ಮರಾಯರ ಸಂಯಮನೀ ಪುರವನ್ನು ಕುರಿತು; ಸಪಾದ ಕೋಟಿದ್ವಯಂ ಯೋಜನಾನಾಂ ಸಾರ್ಧದ್ವಾದಶಲಕ್ಷಾಣಿ ಸಾಧಿಕಾನಿ ಚ = 2 ಕೋಟಿ, ಇಪ್ಪತ್ತೈದು ಲಕ್ಷ +12 ಲಕ್ಷ, 50 ಸಾವಿರ + ಸ್ವಲ್ಪ ಹೆಚ್ಚು ಯೋಜನಗಳಷ್ಟು ದೂರವನ್ನು; ಉಪಯಾತಿ = ಕ್ರಮಿಸುತ್ತದೆ.

ಒಂದು ಘಳಿಗೆ =24 ನಿಮಿಷ. ಒಂದು ದಿನಕ್ಕೆ 60 ಘಳಿಗೆ ಅಥವಾ 24 ಘಂಟೆ. ಒಂದು ಮುಹೂರ್ತ 2½ ಘಳಿಗೆ ಅಥವಾ 1 ಘಂಟೆ.

ಸ್ವಲ್ಪ ಹೆಚ್ಚು ಎಂದಾಗ 25000 ಎಂದು ಇಲ್ಲಿ ತಿಳಿಯಬೇಕು. 15 ಘಳಿಗೆಯಲ್ಲಿ 23750000+25000=23775000 60 ಘಳಿಗೆಯಲ್ಲಿ 23775000x4 = 95100000 ಯೋಜನ.

ಮಾನಸೋತ್ತರದ ಮೇಲಿನ ಸುತ್ತಳತೆ 95100000 ಯೋಜನ. ಎಂದರೆ, ಪ್ರತಿದಿವಸ ಸೂರ್ಯರಥವು ಯಾವ ರೇಖಾಂಶದಿಂದ ಹೊರಡುವುದೋ, ಆ ದಿವಸದ 24 ಘಂಟೆಗಳು ಮುಗಿಯುವ ವೇಳೆ ಮತ್ತೆ ಅದೇ ರೇಖಾಂಶವನ್ನು ತಲುಪಿರುವುದು.

ಸೂರ್ಯರಥವು ಯಾವ ಕಾಲಚಕ್ರದ ಮುಖ್ಯ ಪಟ್ಟಿಯ ಮೇಲೇ ಚಲಿಸುವುದೋ, ಆ ಪಟ್ಟಿಯು ಮಾತ್ರ ನಕ್ಷತ್ರಗಳ ಸಹಿತವಾಗಿ ಸೂರ್ಯರಥಕ್ಕಿಂತ ಒಂದು ಅಂಶದಷ್ಟು ಮುಂದೆ ಸಾಗಿರುವುದು. ಕಾಲಚಕ್ರದ ವಿಷಯಬಂದಾಗ ಈ ವಿಚಾರವನ್ನು ಹೆಚ್ಚು ಸ್ಪಷ್ಟಪಡಿಸಲಾಗುವುದು.

**ಏವಂತತೋವಾರುಣೀಂ ಸೌಮ್ಯಾಂ ಐಂದ್ರೀಂ ಚ ಪುನಃ ತಥಾ**
**ಅನ್ಯೇಚಗ್ರಹಾಃ ಸೋಮಾದಯೋ ನಕ್ಷತ್ರೈಃ ಸಹಜ್ಯೋತಿಶ್ಚಕ್ರೇ**
**ಸಮಭ್ಯುದ್ಯಂತಿ ಸಹವಾ ನಿಮ್ಲೋಚಂತಿ ॥೧೧॥**

ಏವಂ = ಈ ಪ್ರಕಾರವಾಗಿ; ವಾರುಣೀಂ ಸೌಮ್ಯಾಂ ಉಪಯಾತಿ = ಸೂರ್ಯನು ವರುಣನನಿಮ್ಲೋಚನಿಯನ್ನೂ, ಚಂದ್ರನ ವಿಭಾರಿಯನ್ನೂ ಕುರಿತು ಪ್ರಯಾಣ ಮಾಡುತ್ತಾನೆ; ಪುನಃ ಚ ಐಂದ್ರೀಂಉಪಾಯತಿ = ಮತ್ತೆ ಇಂದ್ರನ ದೇವಾಧಾನಿಯನ್ನು ತಲುಪುತ್ತಾನೆ; ಅನ್ಯೇ ಸೋಮಾದಯಃ ಗ್ರಹಾಃ ಚ = ಚಂದ್ರನೇ ಮೊದಲಾದ ಇತರ ಗ್ರಹಗಳೂ ಕೂಡ; ನಕ್ಷತ್ರೈಃ ಸಃ = ನಕ್ಷತ್ರಗಳಿಂದಲೂ ಸಹಿತವಾಗಿ; ಜ್ಯೋತಿಶ್ಚಕ್ರೇ = ಜ್ಯೋತಿಶ್ಚಕ್ರವೆಂದು ಕರೆಸಿಕೊಳ್ಳುವ ಕಾಲಚಕ್ರದ ತಮ್ಮ ತಮ್ಮ ಪಥಗಳಲ್ಲಿ; ಸಮಭ್ಯುದ್ಯಂತಿ = ಚರಿಸುತ್ತಾ ಉದಯಿಸಿ ನಮಗೆ ಗೋಚರವಾಗುತ್ತವೆ; ವಾ = ಮತ್ತು; ಸಹ = ಕಾಲಚಕ್ರದ ಗತಿಯೊಂದಿಗೇ; ನಿಮ್ಲೋಚಂತಿ = ಅಸ್ತಂಗತ ವಾಗುತ್ತವೆ. (ನಮ್ಮ ದೃಷ್ಟಿಗೆ ಅಗೋಚರವಾಗುತ್ತವೆ)

**ಏವಂ ಮುಹೂರ್ತೇನ ಚತುಸ್ತ್ರಿಂಶಲಕ್ಷ ಯೋಜನಾನ್ಯಷ್ಟ ಶತಾಧಿಕಾನಿ**
**ಸೌರೋರಥಸ್ತ್ರಯೀಮಯೋಸೌ ಚತುಸ್ರುಷು ಪರಿವರ್ತತೇಪುರೀಷು ॥೧೨॥**

ಏವಂ ಈ ಪ್ರಕಾರವಾಗಿ; ತ್ರಯೀಮಯಃ ಅಸೌ ಸೌರಃರಥಃ = ವೇದ ಮಂತ್ರಗಳ ಪ್ರತಿರೂಪವಾಗಿರುವ ಸೂರ್ಯರಥವು; ಮುಹೂರ್ತೇನ 2½ ಘಳಿಗೆ ಅಥವಾ ಒಂದು ಘಂಟೆಯ ಅವಧಿಯಲ್ಲಿ; ಅಷ್ಟಶತಾಧಿಕಾನಿ ಚತುಸ್ತ್ರಿಂಶ ಲಕ್ಷ ಯೋಜನಾನಿ 34,00800 ಯೋಜನಗಳ ದೂರವನ್ನು ಕ್ರಮಿಸುತ್ತಾ; ಚತುಸ್ರುಷು ಪುರೀಷು = ಮಾನಸೋತ್ತರ ಪರ್ವತದ ಮೇಲಿನ ನಾಲ್ಕು ಪಟ್ಟಣಗಳ ಮೇಲೆ; ಪರಿವರ್ತತೇ = ತಿರುಗುತ್ತದೆ.

**ಯಸ್ಯೈಕಂ ಚಕ್ರಂ ದ್ವಾದಶಾರಂ ಷಣ್ಣೇಮಿ ತ್ರಿಣಾಭಿ ಸಂವತ್ಸರಾತ್ಮಕಂ**
**ಸಮಾಮನಂತಿ ತಸ್ಯಾಕ್ಷೋಮೇರೋರ್ಮೂರ್ಧನಿ ಕೃತೋ**
**ಮಾನಸೋತ್ತರೇ ಕೃತೇತರ ಭಾಗೋ ಯತ್ರ ಪ್ರೋತಂ ರವಿರಥ**
**ಚಕ್ರಂತೈಲಯಂತ್ರ ಚಕ್ರವದ್ಭ್ರಮನ್ಮಾನಸೋತ್ತರ ಗಿರೌ ಪರಿಭ್ರಮತಿ**
**॥೧೩॥**

ಯಸ್ಯ = ಯಾವ ಸೂರ್ಯದೇವನ ರಥಕ್ಕೆ; ಏಕಂ ಚಕ್ರಂ = ಇರುವುದು ಒಂದೇ ಚಕ್ರ; ದ್ವಾದಶಾರಂ = ಅದಕ್ಕೆ ಹನ್ನೆರಡು ಅಡ್ಡಪಟ್ಟಿಗಳಿವೆ; ಷಣ್ಣೇಮಿ = ಚಕ್ರದ ಸುತ್ತಿನ ಆರು ಭಾಗಗಳಿವೆ; ತ್ರಿಣಾಭಿ = ಅದರ ಕುಂಭಪ್ರದೇಶದಲ್ಲಿ ಮೂರು ಖಂಡಗಳಿವೆ; ಸಂವತ್ಸರಾತ್ಮಕಂ ಸಮಾಮನಂತಿ = ಅದು ಸಂವತ್ಸರದ ಅವಯವಗಳಾದ ಹನ್ನೆರಡು ರಾಶಿಗಳನ್ನೂ, ಆರು ಋತುಗಳನ್ನೂ, ಮೂರು ಚಾತುರ್ಮಾಸ್ಯಗಳನ್ನೂ ಸೂಚಿಸುವ ಅಳತೆಯ ಸಾಧನವಾಗಿದೆ ಎಂದು ಹೇಳುತ್ತಾರೆ; ತಸ್ಯ ಅಕ್ಷಃ = ಅದರ ಅಚ್ಚು; ಮೇರೋಃ ಮೂರ್ಧನಿ ಕೃತಃ = ಮೇರು ಪರ್ವತದ ಮೇಲ್ಭಾಗದಲ್ಲಿ ಸ್ಥಾಪಿತವಾಗಿದೆ; ಇತರ ಭಾಗಃ = ಅಚ್ಚಿನ ಇನ್ನೊಂದು ಕೊನೆಯು;ಮಾನಸೋತ್ತರೇ ಕೃತಃ = ಮಾನಸೋತ್ತರ ಪರ್ವತದ ಮೇಲೆ ಸ್ಥಾನವನ್ನು ಹೊಂದಿದೆ; ಯತ್ರ = ಅಚ್ಚಿನ ಯಾವ ಆ ತುದಿಯಲ್ಲಿ; ರವಿರಥ ಚಕ್ರಂ = ಸೂರ್ಯರಥದ ಚಕ್ರವು; ತೈಲ ಯಂತ್ರ ಚಕ್ರವತ್ = ಎಣ್ಣೆಯಗಾಣದ ಚಕ್ರವು ಹೇಗೋ ಹಾಗೆ; ಪ್ರೋತಂ = ಸಂಬಂಧಿತವಾಗಿದೆ; ಮಾನಸೋತ್ತರ ಗಿರೌ = ಮಾನಸೋತ್ತರ ಪರ್ವತದ ಮೇಲೆ; ಪರಿಭ್ರಮತಿ = ತಿರುಗುತ್ತದೆ.

ಸೂರ್ಯರಥವೆಂಬುದು ರೂಪಕಾಲಂಕಾರದಿಂದ ಹೇಳಿರುವ ವರ್ಣನೆಯೆಂದು ಆಧುನಿಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ; ಅದು ಸರಿಯಲ್ಲ. ನಮಗೆ ಕಾಣದಿದ್ದರೂ ಆ ರಥದ ನಾನಾ ಭಾಗಗಳು ಅರ್ಥಪೂರ್ಣವಾಗಿ ರಚಿತವಾಗಿವೆ.

ಆ ರಥದ ಏಕೈಕ ಚಕ್ರವೂ ಕೂಡ ಕಾಲದ ಗತಿಯನ್ನು ಹೆಜ್ಜೆ ಹೆಜ್ಜೆಗೂ ಅಳೆಯುವ ಸಾಧನವಾಗಿದೆ.



ತಸ್ಮಿನ್ನಕ್ಷೇ ಕೃತಮೂಲೋ ದ್ವಿತಿಯೋಕ್ಷಸ್ತುರ್ಯಮಾನೇನ
ಸಮ್ಮಿತಸ್ತೈಲ ಯಂತ್ರಾಕ್ಷವತ್ ಧೃವೇಕೃತೋಪರಿಭಾಗಃ ||೧೪||

ತಸ್ಮಿನ್ ಅಕ್ಷೇಕೃತಮೂಲಃ = ಸೂರ್ಯರಥ ಚಕ್ರದಿಂದ ಪ್ರಾರಂಭವಾಗಿ; ತೈಲಯಂತ್ರಾಕ್ಷವತ್ = ಎಣ್ಣೆಯಗಾಣದೊರಳಿಗೆ ಪ್ರದಕ್ಷಿಣೆಯಾಗಿ ಸುತ್ತುವ ಚಕ್ರಮಧ್ಯದಿಂದ, ಒರಳಿನೊಳಗಿನ ಕೊರಡಿನ ತುದಿಗೆಸಂಬಂಧಿತವಾಗಿರುವ ಸರಪಳಿಯಂತೆ; ತುರ್ಯಮಾನೇನ ಸಮ್ಮಿತಃ = ಮೊದಲನೆಯ ಅಚ್ಚಿಗಿಂತ ¼ ಭಾಗಹೆಚ್ಚು ನೀಳವಾಗಿರುವ; ದ್ವಿತೀಯಃ ಅಕ್ಷಃ = ಇನ್ನೊಂದು ಕೊನೆಯು; ಧೃವೇಕೃತ ಉಪರಿಭಾಗಃ = ಧೃವಸ್ಥಾನದಲ್ಲಿ ತನ್ನ ಮೇಲ್ಭಾಗವನ್ನು ಹೊಂದಿದೆ. (ಮೊದಲನೇ ಚಿತ್ರದ ಅ1 ಎಂಬುದನ್ನು ಎರಡನೇ ಚಿತ್ರದ ಅ2 ಎಂಬುದಕ್ಕೆ ಹೋಲಿಸಿ ನೋಡಿ. ಧೃವನಕ್ಷತ್ರದಿಂದ ಹೊರಡುವ ಅಚ್ಚುಗಳು 'ವಾಯು ಪಾಶ'ಗಳ ರೂಪದಲ್ಲಿರುವುವು.

ಮೇರುವಿನ ಮೇಲ್ಭಾಗದಿಂದ ಸೂರ್ಯರಥ ಚಕ್ರಕ್ಕಿರುವ ದೂರ.9,51,00000 ಯೋಜನ. ಆದುದರಿಂದ ಸೂರ್ಯರಥದ ಚಕ್ರಕ್ಕೆ ಸಂಬಂಧಿಸಿದ ವಾಯುಪಾಶದ ಉದ್ದ 9,51,00000+23775000 ಯೋಜನ(ಒಂದು ತ್ರಿಕೋಣದಲ್ಲಿ, ಸಮಕೋನಕ್ಕೆ ಎದುರಾಗಿರುವ ಬಾಹುವಿನಂತೆ).

ರಥನೀಡಸ್ತು ಷಟ್ತ್ರಿಂಶಲ್ಲಕ್ಷ ಯೋಜನಾಯತಸ್ತತ್ತುರೀಯ ಭಾಗ
ವಿಶಾಲಸ್ತಾವಾನ್ ರವಿರಥಯುಗೋ ಯತ್ರಹಯಾಶ್ಛಂದೋನಾಮಾನಃ
ಸಪ್ತಾರುಣಯೋಜಿತಾ ವಹಂತಿ ದೇವಮಾದಿತ್ಯಂ ||೧೫||

ರಥನೀಡಃತು = ಸೂರ್ಯರಥದ ಪೀಠಭಾಗವು; ಷಟ್ತ್ರಿಂಶಲಕ್ಷ ಯೋಜನ ಆಯತಃ = 36 ಲಕ್ಷ ಯೋಜನ ಉದ್ದವಾದುದು; ತುರೀಯ ಭಾಗ ವಿಶಾಲಃ =

ಒಂಭತ್ತು ಲಕ್ಷ ಯೋಜನ ಅಗಲವಾದುದು; ತಾವಾನ್‌ರವಿರಥಯುಗಃ = ಅಷ್ಟೇ ಅಳತೆಯುಳ್ಳದು ಸೂರ್ಯ ರಥದ ನೊಗದ ಭಾಗ; ಯತ್ರ = ಯಾವ ಆನೊಗದಲ್ಲಿ; ಅರುಣ ಯೋಜಿತಾಃ ಅರುಣನಿಂದ ನಿಯಂತ್ರಿಸಲ್ಪಡುವ; ಛಂದೋ ನಾಮಾನಃ ಗಾಯತ್ರೀ, ಅನುಷ್ಟಪ್, ಉಷ್ಣಿಕ್, ಜಗತೀ, ತ್ರಿಷ್ಟುಪ್, ಪಜ್ಞ್ತಿ, ಬೃಹತೀ ಎಂಬ ವೇದ ಮಂತ್ರಗಳ ಛಂದೋರೂಪಗಳಾಗಿರುವ; ಸಪ್ತ ಹಯಾಃ = (ಏಳು ಬಣ್ಣಗಳ) ಏಳು ಕುದುರೆಗಳು; ದೇವಂ ಆದಿತ್ಯಂ ವಹಂತಿ = ಸೂರ್ಯದೇವನನ್ನು; ಕರೆದೊಯ್ಯುತ್ತವೆ.

ಹಿಂದೆಯೇ ಹೇಳಿದಂತೆ, ಇದು ಕೇವಲ ರೂಪಕವಲ್ಲ. ರಥ, ಕುದುರೆ, ಸಾರಥಿ – ಈ ಎಲ್ಲಾ ಇರುವುದುನಿಜ; ಅವು ವೇದಮಂತ್ರವಾಹಕಗಳಾಗಿರುವುದೂ ನಿಜ. ನಮ್ಮ ಶರೀರಗಳೂ ರಥಗಳೇ ಆಗಿರುವುವು. ಈ ಶರೀರಭಾಗಗಳಲ್ಲಿ ತತ್ವಾಭಿಮಾನಿ ದೇವತೆಗಳಿದ್ದು, ಅವರ ವಿವಧ ಮಂತ್ರೋಚ್ಚಾರ ಪ್ರಭಾವದಿಂದಲೇ ನಮ್ಮ ದೇಹಯಂತ್ರಗಳು ನಡೆಯುತ್ತಿರುವುವು.

**ಪುರಸ್ತಾತ್ ಸವಿತುರರುಣಃ ಪಶ್ಚಾಚ ನಿಯುಕ್ತಃ**
**ಸೌತ್ಯೇಕರ್ಮಣಿಕಿಲಾಸ್ತೇ** ॥೧೬॥

ಅರುಣಃ = ಅರುಣನು; ಸವಿತುಃ ಪುರಸ್ತಾತ್ = ಸೂರ್ಯದೇವನ ಮುಂದುಗಡೆ; ಪಶ್ಚಾತ್ ಚ = ಕುದುರೆಗಳ ಹಿಂದುಗಡೆ; ನಿಯುಕ್ತಃ = ಕುಳಿತಿರತಕ್ಕವನಾಗಿ; ಸೌತ್ಯೇಕರ್ಮಣಿ ಆಸ್ತೇಕಿಲ = ರಥ ನಡೆಸುವ ಕೆಲಸದಲ್ಲಿ ನಿರತನಾಗಿದ್ದಾನೆ.

"ಸೌತ್ಯೇ ಪುರಸ್ತಾದ್ ಪಶ್ಚಾತ್‌ಚ ನಿಯುಕ್ತಃ" ಎಂಬುದಕ್ಕೆ ಮುನ್ನಡೆಯ ಮತ್ತು ಹಿಂದೆ ಬೀಳುವ ಎರಡೂದೃಷ್ಟಿಯಿಂದ ರಥಿಕನಾಗಿದ್ದಾನೆ ಎಂದೂ ಅರ್ಥವಾಗುತ್ತದೆ.

**ತಥಾವಾಲಖಿಲ್ಯಾ ಋಷಯೋಂಗುಷ್ಠಪರ್ವಮಾತ್ರಾಃ ಷಷ್ಟಿ–ಸಹಸ್ರಾಣಿ**
**ಪುರತಃ ಸೂರ್ಯಂ ಸೂಕ್ತ ವಾಕಾಯನಿಯುಕ್ತಾಃ**
**ಸಂಸ್ತುವಂತಿ** ॥೧೭॥

ತಥಾ = ಅದೂ ಅಲ್ಲದೆ; ವಾಲಖಿಲ್ಯಾಃ = ವಾಲಖಿಲ್ಯರೆಂಬ; ಅಂಗುಷ್ಠ ಪರ್ವ ಮಾತ್ರಾಃ = ಹೆಬ್ಬೆರಳಿನ ಅಗ್ರಭಾಗದಷ್ಟೇ ಎತ್ತರವುಳ್ಳ; ಋಷಯಃ = ಋಷಿಗಳು; ಷಷ್ಟಿಸಹಸ್ರಾಣಿ = 60 ಸಾವಿರ ಮಂದಿ; ಪುರತಃ = ರಥದ ಮುಂಬದಿಯಲ್ಲಿ; ಸೂಕ್ತವಾಕಾಯ ನಿಯುಕ್ತಾಃ = ವೇದಘೋಷಕ್ಕಾಗಿ ನಿಯುಕ್ತರಾದವರು;

ಸೂರ್ಯಂಸಂಸ್ತುವಂತಿ = ಸೂರ್ಯನಾರಾಯಣನ ಮಹಿಮೆಯನ್ನು ವೇದಮಂತ್ರ ಗಳಿಂದ ಹೊಗಳುತ್ತಾರೆ.

**ತಥಾನ್ಯೇಚ ಋಷಯೋ ಗಂಧರ್ವಾಪ್ಸರಸೋನಾಗಾ**
**ಗ್ರಾಮಣ್ಯೋಯಾತುಧಾನಾ ದೇವಾ ಇತ್ಯೇಕೈಕಶೋ**
**ಗಣಾಃಸಪ್ತಚತುರ್ದಶ ಮಾಸಿ ಮಾಸಿ ಭಗವಂತಂ ಸೂರ್ಯಮಾತ್ಮಾನಂ**
**ನಾನಾ ನಾಮಾನಂ ಪೃಥಙ್ನಾನಾ ನಾಮಾನಃ ಪೃಥಕ್ಕರ್ಮಭಿರ್ದ್ವಂದ್ವಶ**
**ಉಪಾಸತೇ ॥೧೮॥**

ತಥಾಚ = ಅದೂ ಅಲ್ಲದೆ; ಅನ್ಯೇಚ = ಬೇರೆಯವರಾದ; ಋಷಯಃ = ಋಷಿಗಳು; ಗಂಧರ್ವಾಃ = ಗಂಧರ್ವರು; ಅಪ್ಸರಸಃ = ಅಪ್ಸರ ಸ್ತ್ರೀಯರು; ನಾಗಾಃ = ನಾಗದೇವತೆಗಳು; ಗ್ರಾಮಣ್ಯಃ = ಯಕ್ಷರು; ಯಾತುಧಾನಾಃ = ಯಾತುಧಾನರೆಂಬ ದೇವಗಣದವರು; ದೇವಾಃ = ಇತರ ಸಣ್ಣ ಪುಟ್ಟ ದೇವತೆಗಳು; ಇತಿ = ಹೀಗೆ; ಏಕೈಕಶಃ = ಬೇರೆ ಬೇರೆ; ಸಪ್ತ ಗಣಾಃ = ಏಳು ಗುಂಪುಗಳವರು; ಚತುರ್ದಶ = ಹದಿನಾಲ್ಕು ಸಂಖ್ಯೆಯಲ್ಲಿದ್ದು; ಪೃಥಕ್ ನಾನಾ ನಾಮಾನಃ = ವೈಯಕ್ತಿಕವಾಗಿ ಬೇರೆ ಬೇರೆ ಹೆಸರುಗಳುಳ್ಳವರು; ಪೃಥಕ್‌ಕರ್ಮಭಿಃ = ಅವರವರಿಗೆ ವಹಿಸಿದ ಕರ್ಮಗಳಿಂದ; ದ್ವಂದ್ವಶಃ = ಜೊತೆ ಜೊತೆಯಾಗಿ; ಪೃಥಾಙ್ನಾಮಾನಂ = ಬೇರೆ ಬೇರೆ ಹೆಸರುಗಳುಳ್ಳ; ಭಗವಂತಂ ಸೂರ್ಯಂ ಆತ್ಮಾನಂ = ಸರ್ವರಂತರ್ಯಾಮಿಯಾದ ಭಗವಾನ್ ಸೂರ್ಯನಾರಾಯಣನನ್ನು; ಮಾಸಿ ಮಾಸಿ = ಪ್ರತಿ ತಿಂಗಳಲ್ಲಿಯೂ; ಉಪಾಸತೇ = ಸೇವಿಸುತ್ತಾರೆ.

ಒಂದೊಂದು ಗುಂಪಿನವರೂ ಎರಡೆರಡು ತಂಡಗಳಲ್ಲಿರುವುದರಿಂದ, ಒಟ್ಟು ಹದಿನಾಲ್ಕು ತಂಡಗಳು; ಎರಡೆರಡುತಂಡಗಳು ಕೂಡುವುದರಿಂದ ಏಳು ಎಂಬ ಗಣನೆ. ಈ ಗುಂಪುಗಳವರು ತಮತಮಗೆ ಉಚಿತವಾದ ವೇದಮಂತ್ರ ಗಳನ್ನುಚ್ಚರಿಸುತ್ತಾ, ಕಾಲಕಾಲಕ್ಕೆ ಸೆಕೆ, ಮಳೆ, ಹಿಮ, ಮಂಜುಗಳು ಸಂಭವಿಸುವಂತೆ ಮಾಡುತ್ತಾರೆ. ಸೂರ್ಯಕಿರಣಗಳ ಕಾರ್ಯಗಳು ಅಸಂಖ್ಯಾತವಾದುದರಿಂದ, ಆ ಮಹಾನುಭಾವನಿಗೆ ಅನೇಕ ಹೆಸರುಗಳುಂಟು.

**ಲಕ್ಷೋತ್ತರಂ ಸಾರ್ಧನವಕೋಟಿ ಯೋಜನ ಪರಿಮಂಡಲಂ**
**ಭೂವಲಯಸ್ಯ ಕ್ಷಣೇನ ಸಗವ್ಯೂತ್ಯುತ್ತರಂ**
**ದ್ವಿಸಹಸ್ರಯೋಜನಾನಿಸಭುಂಕ್ತೇ ॥೧೯॥**

ಭೂಮಂಡಲದ ಸುತ್ತಳತೆ 9,51,00000 ಯೋಜನವಾಗಿರಲು, ಕೇವಲ ಒಂದು ಕ್ಷಣದಲ್ಲಿ ಸೂರ್ಯರಥವು 2000 ಯೋಜನ ಮತ್ತು 2 ಕ್ರೋಶದಷ್ಟು ದೂರವನ್ನು ಕ್ರಮಿಸುವುದು. (12,000 ಮೈಲಿ)

"ಶ್ರೀಕೃಷ್ಣಾರ್ಪಣಮಸ್ತು"

---

# ಶ್ರೀಮದ್ಭಾಗವತ
# ಅಧ್ಯಾಯ ಇಪ್ಪತ್ತೆರಡು

ರಾಜೋವಾಚಃ :- ಪರೀಕ್ಷಿದ್ರಾಜರು ಕೇಳಿದರು.

ಯದೇತದ್ಭಗವತ ಆದಿತ್ಯಸ್ಯ ಮೇರುಂ ಧ್ರುವಂಚ ಪ್ರದಕ್ಷಿಣೇನ
ಪರಿಕ್ರಮತೋ ರಾಶೀನಾಮಭಿಮುಖಂಪ್ರಚಲಿತಂಚಾಪ್ರದಕ್ಷಿಣಂ
ಭಗವತೋಪವರ್ಣಿತಮಮುಷ್ಯ ವಯಂಕಥಮನುಮೀ ಮಹೀತಿ ॥೧॥

ಮೇರುಂ ಧ್ರುವಂಚ = ಮೇರು ಪರ್ವತವನ್ನೂ, ಅದರ ಮೇಲೆ ಶಿಂಶುಮಾರ ಮೂರ್ತಿಯ ಬಾಲಾಗ್ರಹದಲ್ಲಿರುವ ಧ್ರುವ ನಕ್ಷತ್ರವನ್ನೂ; ಪ್ರದಕ್ಷಿಣೇನ ಪರಿಕತ್ರಮತಃ = ಬಲಸುತ್ತಿನಿಂದ ಬಳಸಿ ಬರುತ್ತಿರುವ; ಭಗವತಃ ಆದಿತ್ಯಸ್ಯ = ಆದಿತ್ಯಭಗವಾನನ; ಯತ್ ರಾಶೀನಾಂ ಅಭಿಮುಖಂ ಪ್ರಚಲಿತಂ = ರಾಶಿಗಳಿಗೆ ಅಭಿಮುಖವಾಗಿ ಚಲಿಸುವುದು ಯಾವುದುಂಟೋ; ಭಗವತಃ ಉಪವರ್ಣಿತಂ ಅಮುಷ್ಯ = ಭಗವತ್ಪಾದರಾದ ತಮ್ಮಿಂದ ವರ್ಣಿಸಲ್ಪಟ್ಟ ಆ ವಿಷಯವನ್ನು; ವಯಂ = ನಾವು; ಕಥಂ ಅನುಮೀಮಹಿ; = ಹೇಗೆ ಅರ್ಥಮಾಡಿಕೊಳ್ಳಬೇಕು? ಇತಿ = ಹೀಗೆಂದು ಪರೀಕ್ಷಿದ್ರಾಜರು ಶ್ರೀ ಶುಕಾಚಾರ್ಯರನ್ನು ಕೇಳಿದರು.

ಈ ಪ್ರಶ್ನೆಯು ಅನೇಕರ ತಲೆಗಳಲ್ಲಿ ಸುಳಿದು ಭ್ರಮೆಯುಂಟು ಮಾಡುವಂತಹುದು. ಸೂರ್ಯರಥವು ಮುಂದೆಮುಂದೆ ಹೋಗುತ್ತಾ ಹಿಂದೆ ಹಿಂದೆ ಹೋಗುವುದು ಹೇಗೆ? ಹಾಗಲ್ಲಡ ಪಕ್ಷಕ್ಕೆ, ಪ್ರತಿತಿಂಗಳೂ ಸೂರ್ಯನು ಹಿಂದೆ ಹಿಂದಿನ ರಾಶಿಗಳಲ್ಲಿ ಕಂಡುಬರುವುದು ಹೇಗೆ?

ಸಹೋವಾಚಃ :- ಶ್ರೀ ಶುಕಾಚಾರ್ಯರು ಹೇಳಿದರು

ಯಥಾಕುಲಾಲ ಚಕ್ರೇಣ ಭ್ರಮತಾಂ ತದಾಶ್ರಯಾಣಾಂ
ಪಿಪೀಲಿಕಾದೀನಾಂ
ಗತಿರನ್ಯೈವಪ್ರದೇಶಾಂತರೇಷ್ವಪ್ಯುಪಲಭ್ಯಮಾನತ್ವಾದೇವಂ ನಕ್ಷತ್ರ
ರಾಶಿಭಿರುಪಲಕ್ಷಿತೇನ ಪರಿಧಾವತಾ ಸಹಪರಿಧಾವಮಾನಾನಾಂ
ತದಾಶ್ರಯಾಣಾಂ ಸೂರ್ಯಾದೀನಾಂ ಗ್ರಹಾಣಾಂ ಗತಿರನ್ಯೈವ
ನಕ್ಷತ್ರಾಂತರೇ ರಾಶ್ಯಂತರೇಚೋಪಲಭ್ಯ ಮಾನತ್ವಾತ್ ॥೨॥

ಯಥಾ = ಹೇಗೆ; ಕುಲಾಲ ಚಕ್ರೇಣ ಭ್ರಮತಾಂ = ಕುಂಬಾರನ ಚಕ್ರದೊಡನೆ ಸುತ್ತುತ್ತಿರುವ; ತದಾಶ್ರಯಾಣಾಂ = ಅದರ ಮೇಲೆಯೇ ಇರುವ; ಪಿಪೀಲಿಕಾದೀನಾಂ = ಇರುವೆ ಮೊದಲಾದ ಜಂತುಗಳ; ಗತಿಃ ಅನ್ಯೈವ = ಚಲನೆಯು ಪ್ರತ್ಯೇಕವೇ ಆಗಿರುತ್ತದೆ, ಏಕೆಂದರೆ; ಪ್ರದೇಶಾಂತರೇಷು ಅಪಿ ಉಪಲಭ್ಯಮಾನತ್ವಾತ್ = ಅವು, ಸುತ್ತುವ ಆ ಚಕ್ರದ ಬೇರೆ ಬೇರೆ ಪ್ರದೇಶಗಳಲ್ಲಿ ಕಂಡುಬರುವುದರಿಂದ; ಏವಂ = ಇದೇ ರೀತಿಯಾಗಿ; ನಕ್ಷತ್ರರಾಶಿಭಿಃ ಉಪಲಕ್ಷಿತೇನ = ನಕ್ಷತ್ರಗಳಿಂದಲೂ ಅವುಗಳಲ್ಲಿನ ರಾಶಿಗಳಿಂದಲೂ ತಿಳಿಯಬಹುದಾದ; ಧ್ರುವಂಮೇರುಂಚ ಪ್ರದಕ್ಷಿಣೇನ ಪರಿಧಾವತಾ = ಧ್ರುವನಕ್ಷತ್ರವನ್ನೂ ಮೇರುಪರ್ವತವನ್ನೂ ಪ್ರದಕ್ಷಿಣೆಯಾಗಿ ಸುತ್ತುತ್ತಿರುವ; ಕಾಲಚಕ್ರೇಣ ಸಹ = ಕಾಲಚಕ್ರದೊಡನೆ; ಪರಿಧಾವಮಾನಾನಾಂ = ಚಲಿಸುತ್ತಿರುವ; ತದಾಶ್ರಯಾಣಾಂ = ಅದರ ಪಟ್ಟಿಗಳ ಆಧಾರದ ಮೇಲೆಯೇ ಚಲಿಸುವ; ಸೂರ್ಯಾದೀನಾಂ ಗ್ರಹಾಣಾಂ = ಸೂರ್ಯನೇ ಮೊದಲಾದ ಗ್ರಹಗಳ; ಗತಿಃ =ಚಲನೆಯು; ಅನ್ಯೈವ = ಬೇರೆಯೇ ಆಗಿದೆ, ಏಕೆಂದರೆ; ನಕ್ಷತ್ರಾಂತರೇ ರಾಶ್ಯಂತರೇ ಚ ಉಪಲಭ್ಯಮಾನತ್ವಾತ್ = ಅವು ಬೇರೆ ಬೇರೆ ನಕ್ಷತ್ರಗಳ ಮತ್ತು ರಾಶಿಗಳ ನೇರಗಳಲ್ಲಿ ಕಂಡುಬರುವುದರಿಂದ.

ಕುಂಬಾರನ ಚಕ್ರವೂ ಚಲಿಸುತ್ತಿರುತ್ತದೆ; ಅದರ ಮೇಲೆ ಇರುವೆ ಮೊದಲಾದವೂ ಚಲಿಸುತ್ತಿರುತ್ತವೆ. ಆದರೆ ಚಕ್ರದ ಚಲನೆಯ ವೇಗವೇ ಬೇರೆ; ಅದರ ಮೇಲೆ ಚಲಿಸುವ ಜಂತುಗಳ ಚಲನೆಯ ವೇಗವೇ ಬೇರೆ.

ಈಗಿನವರಿಗೆ ಅರ್ಥವಾಗುವಂತೆ ಇನ್ನೊಂದು ಉದಾಹರಣೆಯನ್ನು ಕೊಡಬಹುದು. ಸುಮಾರು ಇಪ್ಪತ್ತು ಗಾಡಿಗಳನ್ನು ಜೋಡಿಸಿದ ರೈಲುಗಾಡಿಯಲ್ಲಿ, ಕೊನೆಯ ಗಾಡಿಯಿಂದ ಇಂಜನ್ನಿನವರೆಗೆ ಹೋಗಲು ಸೌಕರ್ಯವಿರುವಲ್ಲಿ, ರೈಲುಗಾಡಿ ಚಲಿಸುತ್ತಿರುವಾಗ ಹಾಗೆ ಯಾರಾದರೂ ಇಂಜನ್ನಿನ ಕಡೆಗೆ ಹೆಜ್ಜೆಹಾಕುತ್ತಾಹೋದರೆ – ಗಾಡಿಯ ಮತ್ತು ವ್ಯಕ್ತಿಯ ಚಲನೆಗಳು ಬೇರೆ ಬೇರೆ ಅಲ್ಲವೆ? ಕ್ರಮಿಸುವ ಅಂತರಗಳೂ ಬೇರೆಬೇರೆ ಅಲ್ಲವೆ?

ಕಾಲಚಕ್ರದ ವೇಗಕ್ಕಿಂತ ಸೂರ್ಯರಥದ ವೇಗವು ಕಡಿಮೆಯಾಗಿರುವುದರಿಂದ, ಕಾಲಚಕ್ರದೊಡನೆಯೇ ತಿರುಗುವ ನಕ್ಷತ್ರ–ರಾಶಿಗಳು ಚಲಿಸುವಷ್ಟು ದೂರ ಸೂರ್ಯರಥವು ಚಲಿಸುವುದಿಲ್ಲ. ದಿನದಿನವೂ ಒಂದೊಂದು ಅಂಶ ಹಿಂದೆ ಬೀಳುವುದು; ರಾಶಿಗಳು ಅಷ್ಟೇ ದೂರ ಮುಂದೆ ಸಾಗಿರುವುವು. ಸೂರ್ಯರಥವು ಕಾಲಚಕ್ರದೊಡನೆಯೇ ಸಾಗುತ್ತಿರುವುದರಿಂದ, ಧ್ರುವ–ಮೇರುಗಳು ಆ ರಥದ ಬಲಗಡೆಗೆ ಇರುವುವು. ಪ್ರತಿದಿವಸವೂ ಕಾಲಚಕ್ರದೊಡನೆಯೇ ತಿರುಗುವ ನಕ್ಷತ್ರಗಳ ದೃಷ್ಟಿಯಿಂದ

ಹಿಂದೆ ಬೀಳುವ ಸೂರ್ಯರಥವು ಧ್ರುವ-ಮೇರುಗಳನ್ನು ಎಡಗಡೆಯಲ್ಲಿಟ್ಟು-ಕೊಂಡಂತಾಯಿತೇ ಹೊರತು, ಅದು ಹಿಂದಕ್ಕೆ ಚಲಿಸುವುದಿಲ್ಲ.

ಸ ಏಷ ಭಗವಾನಾದಿ ಪುರುಷ ಏವ ಸಾಕ್ಷಾನ್ನಾರಾಯಣೋ
ಲೋಕಾನಾಂ ಸ್ವಸ್ತಯ ಆತ್ಮಾನಂ
ತ್ರಯೀಮಯಂಕರ್ಮವಿಶುದ್ಧಿನಿಮಿತ್ತಂ ಕವಿಭಿರಪಿ ಚ ವೇದೇನ
ವಿಜಿಜ್ಞಾಸ್ಯಮಾನೋ ದ್ವಾದಶಧಾ ವಿಭಜ್ಯಷಟ್ಸುವಸಂತಾದಿಷ್ವೃತುಷು
ಯಥೋಪಜೋಷಮೃತುಗುಣಾನ್ ವಿದಧಾತಿ ॥೩॥

ಸಃ ಏಷಃ ಆದಿಪುರುಷಃ = ವೇದಪ್ರತಿಪಾದ್ಯನಾದ, ಆದ್ಯರಿಗೆಲ್ಲಾ ಆದಿಪುರುಷನಾದ; ಭಗವಾನ್ = ದಿವ್ಯೈಶ್ವರ್ಯಪರಿಪೂರ್ಣನಾದ; ಸಾಕ್ಷಾತ್ ನಾರಾಯಣಃ ಏವ = ಸ್ವಯಂ ಶ್ರೀಮನ್ನಾರಾಯಣನೇ; ಕವಿಭಿಃ = ಜ್ಞಾನಿಗಳಿಂದ; ವೇದೇನ ವಿಜಿಜ್ಞಾಸ್ಯಮಾನಃ ಅಪಿ = ವೇದೋಕ್ತ ರೀತಿಯಲ್ಲಿ ಚರ್ಚೆಗೆ ಆಸ್ಪದನಾಗಿಯೂ; ಲೋಕಾನಾಂ ಸ್ವಸ್ತಯೇ = ಲೋಕದ ಜನರ ಒಳಿತಿಗಾಗಿ; ತ್ರಯೀಮಯಂ ಆತ್ಮಾನಂ = ವೇದಾರ್ಥ ಪ್ರತಿಪಾದ್ಯನಾದ ತನ್ನನ್ನು; ಕರ್ಮವಿಶುದ್ಧಿನಿಮಿತ್ತಂ = ಯೋಗ್ಯ ಜನರು ಆಚರಿಸುವ ಸತ್ಕರ್ಮಗಳ ಶುದ್ಧಿಗಾಗಿ; ದ್ವಾದಶಧಾವಿಭಾಜ್ಯ = ಹನ್ನೆರಡು ತಿಂಗಳುಗಳ ವೈಶಿಷ್ಟ್ಯಗಳನ್ನು ಬೇರುವ ಹನ್ನೆರಡು ಭಾಗಗಳಾಗಿ; ವಿಭಜ್ಯ = ವಿಭಾಗಮಾಡಿದಂತೆ ತೋರಿಕೊಂಡು; ವಸಂತಾದಿಷು ಷಟ್ಸು ಋತುಷು = ವಸಂತಾದಿ ಆರು ಋತುಗಳಲ್ಲಿ; ಯಥೋಪಜೋಷಂ = ಜನರಿಗೆ ಹಿತವಾಗುವಂತೆ; ಋತು ಗುಣಾನ್ = ಋತು ಧರ್ಮಗಳನ್ನು; ವ್ಯದಧಾತಿ ಉಂಟುಮಾಡುತ್ತಾನೆ.

ಭಗವಂತನಾದ ಶ್ರೀಮನ್ನಾರಾಯಣನಿಗೆ 'ಅಚ್ಯುತ' ಎಂದು ಹೆಸರು. ಏಕೆಂದರೆ, ಅವನು ಯಾವರೀತಿಯಿಂದಲೂ ವಿಕಾರಗಳಿಗೆ ಒಳಗಾಗದ ಕೇವಲ ಜ್ಞಾನಾನಂದ ಸ್ವರೂಪಿ. ಆ ಮಹಾನುಭಾವನು ತಿಂಗಳುಗಳ ಕಾಲರೂಪದಲ್ಲಿ ತನ್ನನ್ನು ತಾನು ವಿಭಾಗ ಮಾಡಿಕೊಳ್ಳುವುದೆಂದರೆ, ಅದು ಕೇವಲ ಅವನ ಸಂಕಲ್ಪ ರೂಪವೇಹೊರತು, ನಿಜವಾಗಿ ವಸ್ತುವಿನಂತೆ ಭಿನ್ನ ಭಿನ್ನವಾಗಿ ಮಾಡಲ್ಪಡುವುದಲ್ಲ. ಅವನ ಸಂಕಲ್ಪವು ಇತರ ಕಾಲಾಭಿಮಾನಿ ದೇವತೆಗಳ ಮುಖಾಂತರ ಫಲಪ್ರದವಾಗುವುದು.

ಸೂರ್ಯ ಚಂದ್ರ ನಕ್ಷತ್ರಾದಿಗಳನ್ನು ಸೃಷ್ಟಿಸಿ, ಅವುಗಳ ಚಲನೆಗಳ ಕಾಲಮಾನಗಳಿಗನುಸಾರವಾಗಿ ಸರ್ವಜೀವಿಗಳಹಿತವನ್ನು ಕಾಲ ನಾಮಕನಾದ ಪರಮಾತ್ಮನು ಹೇಗೆ ಉಂಟುಮಾಡುತ್ತಿರುವನೆಂಬುದನ್ನು ತಿಳಿಸುವುದಕ್ಕಾಗಿ ಕಾಲಚಕ್ರದ ವಿಚಾರವು ಶ್ರೀಮದ್ಭಾಗವತದಲ್ಲಿ ಪ್ರಸ್ತಾಪಿಸಲ್ಪಟ್ಟಿದೆ.

ಜೀವಿಗಳು ತ್ರಿವಿಧರಾಗಿದ್ದಾರೆ. ಒಬ್ಬೊಬ್ಬರ ಸ್ವಭಾವವೂ ಬೇರೆ ಬೇರೆಯೇ ಆಗಿದೆ. ಕಾಲದ ಸೂಕ್ಷ್ಮಾತಿಸೂಕ್ಷ್ಮ ಭಾಗಗಳಲ್ಲಿಯೂ, ದಿವಸ–ಪಕ್ಷ–ಮಾಸ–ವತ್ಸರ–ಯುಗ–ದಿನಕಲ್ಪ–ಮಹಾಕಲ್ಪ ಎಂಬ ಸ್ಥೂಲ ಅವಯವಗಳಲ್ಲಿಯೂ ಬೇರೆ ಬೇರೆ ನಾಮ ರೂಪಗಳಿಂದಿದ್ದು, ಪಕೃತಿಧರ್ಮ, ವರ್ಣಾಶ್ರಮಧರ್ಮ ಮತ್ತು ಅನಂತಾನಂತ ಜೀವರ ಪ್ರತ್ಯೇಕ ಪ್ರತ್ಯೇಕ ಸ್ವಭಾವ ಧರ್ಮಗಳನ್ನು ನಡೆಸಿಕೊಡುತ್ತಾ, ಜೀವರ ಸ್ವರೂಪೋದ್ಧಾರವನ್ನು ಮಾಡುತ್ತಿರುವ ಜಗನ್ನಿಯಾಮಕನು ಪರಮ ಕರುಣಾಶಾಲಿ. ಈ ಕಾಲನಿಯಾಮಕನ ಅಗಣಿತ ಚರ್ಯೆಗಳನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳುವುದು ಅಸಾಧ್ಯ. ಒಬ್ಬ ಆಂಗ್ಲ ಕವಿಯು ಈ ಮಹತ್ವವನ್ನು ಕೆಲವೇ ಮಾತುಗಳಲ್ಲಿ ಸೂತ್ರರೂಪವಾಗಿ ಹೇಳಿರುವುದು ಅಚ್ಚರಿ ಎನಿಸುತ್ತದೆ. He sees a hero fall and a sparrow die. "ಒಬ್ಬ ಮಹಾನಾಯಕನು ಮಡಿದು ಬೀಳುವುದೂ, ಒಂದು ಗುಬ್ಬಚಿ ಸತ್ತು ಹೋಗುವುದೂ ಅವನ ದಿವ್ಯದೃಷ್ಟಿಗೆ ಅಗೋಚರವಲ್ಲ."

ಕಾಲಾವಯವಗಳ ಉಪಯೋಗವನ್ನು ಒಬ್ಬೊಬ್ಬರು ಒಂದೊಂದು ರೀತಿಯಾಗಿ ಮಾಡಿಕೊಳ್ಳುತ್ತಾರೆ. ಮುಕ್ತಿಯೋಗ್ಯ ಜೀವರು ವರ್ಣಾಶ್ರಮಧರ್ಮಗಳ ಆಚರಣೆಯಿಂದ ಅದನ್ನು ಸಾರ್ಥಕಪಡಿಸಿಕೊಳ್ಳುತ್ತಾರೆ. ಜ್ಞಾನಿಗಳು ಶ್ರೀಹರಿಯ ಸಂಕಲ್ಪಾನುಸಾರ ತಮ್ಮ ಸ್ವಭಾವ ಧರ್ಮಗಳಿಗನುಸಾರವಾಗಿ ವರ್ಣಾಶ್ರಮಧರ್ಮಗಳನ್ನು ಯಥೋಚಿತವಾಗಿ ಬಳಸಿಕೊಂಡು ಉದ್ಧಾರವಾಗುತ್ತಾರೆ.

**ತಮೇತಮಿಹ ಪುರುಷಾಸ್ತ್ರಯ್ಯಾ ವಿದ್ಯಯಾ**
**ವರ್ಣಾಶ್ರಮಾಚಾರಾನುಪಥಾ ಉಚ್ಚಾವಚೈಃ**
**ಕರ್ಮಭಿರಾಮ್ನಾತೈರ್ಯೋಗವಿತಾನೈಶ್ಚ ಶ್ರದ್ಧಯಾ**
**ಯಜಂತೋಂಜಸಾಶ್ರೇಯಃ ಸಮಧಿಗಚ್ಛಂತಿ** ||೪||

ಇಹ ಪುರುಷಾಃ = ಸಾಧನೆಗಾಗಿ ಇಲ್ಲಿ ಜನ್ಮವೆತ್ತಿ ಬಂದಿರುವವರು; ತ್ರಯ್ಯಾವಿದ್ಯಯಾ = ವೇದೋಕ್ತ ಕ್ರಮದಿಂದ; ವರ್ಣಾಶ್ರಮಾಚಾರಾನುಪಥಾ = ವರ್ಣಾಶ್ರಮಧರ್ಮಗಳಿಗೆ ಅನುಗುಣವಾಗಿ; ಉಚ್ಚಾವಚೈಃ ಕರ್ಮಭಿಃ = ಬ್ರಾಹ್ಮಣ, ಕ್ಷತ್ರಿಯ, ವೈಶ, ಶೂದ್ರರಿಗೆ ಉಚಿತವಾದ ಕರ್ಮಗಳಿಂದ; ಆಮ್ನಾತೈಃ = ಉಪದಿಷ್ಟ ಮಾರ್ಗದಿಂದ; ಯೋಗವಿತಾನೈಃ ಚ = ಭಗವದ್ದರ್ಶನ ಯೋಗ್ಯವಾದ ಯೋಗಾಭ್ಯಾಸಗಳಿಂದ; ತಂ = ಆ ಕಾಲಪುರುಷನನ್ನು; ಶ್ರದ್ಧಯಾ ಯಜಂತಃ = ಶ್ರದ್ಧೆಯಿಂದ ಪೂಜುಸುತ್ತಾ; ಅಂಜಸಾ = ಶೀಘ್ರವಾಗಿ; ಶ್ರೇಯಃ ಸಮಧಿಗಚ್ಛಂತಿ = ಮುಕ್ತಿರೂಪವಾದ ಶ್ರೇಯಸ್ಸನ್ನು ಪಡೆಯುತ್ತಾರೆ.

ಅಭ್ಯಾಸದ ಆರಂಭದ ಹಂತಗಳಲ್ಲಿರುವವರು ಚೆನ್ನಾಗಿ ವರ್ಣಾಶ್ರಮ ಧರ್ಮಗಳನ್ನು ಅನುಸರಿಸುವುದರಿಂದಲೇ ಶ್ರೇಯಸ್ಸನ್ನು ಪಡೆಯುತ್ತಾರೆ. ವಿಹಿತ ಕರ್ಮಗಳಿಂದ ಜ್ಞಾನಸಂಪನ್ನರಾಗಿ ಮುಂದುವರಿದ ಜೀವಿಗಳು, ಗುರೂಪದೇಶ ಹೊಂದಿ, ಕೃಷ್ಣಾರ್ಪಣ ಬುದ್ಧಿಯಿಂದ ಸ್ವಭಾವ ಕರ್ಮಗಳನ್ನಾಚರಿಸುತ್ತಾ ಪಾರಾಗುವರು. ಯೋಗವೆಂದರೆ ಕೇವಲ ಅಷ್ಟಾಂಗ ಯೋಗವೇ ಅಲ್ಲ. "ಯೋಗಃ ಕರ್ಮಸು ಕೌಶಲಂ" ಎಂಬ ಶ್ರೀಕೃಷ್ಣನ ಉಪದೇಶದಂತೆ, ಶ್ರೀಹರಿಯ ಸ್ವತಂತ್ರ ಕರ್ತೃತ್ವವನ್ನೂ ಜೀವನ ಪರಾಧೀನತ್ವವನ್ನೂ ನೆನಪಿನಲ್ಲಿಟ್ಟುಕೊಂಡು ಸಕಲಕರ್ಮಗಳನ್ನೂ ಶ್ರೀಕೃಷ್ಣನಿಗರ್ಪಿಸಿ ನಿಶ್ಚಿಂತರಾಗುವುದು ಯೋಗ ಎನಿಸಿಕೊಳ್ಳುತ್ತದೆ. ಇದನ್ನೇ ಶ್ರೀಮನ್ಮಧ್ವಾಚಾರ್ಯರು "ಸ್ಮರ್ತವ್ಯಃ ಸತತಂವಿಷ್ಣುಃ ವಿಸ್ಮರ್ತವ್ಯೋನಜಾತುಚಿತ್ । ಸರ್ವೇ ವಿಧಿನಿಷೇಧಾಸ್ಯುಃ ಏತಯೋರೇವ ಕಿಂಕರಾಃ ।।" ಎಂದು ತಿಳಿಸಿದ್ದಾರೆ.

> ಅಥಸ ಏಷ ಆತ್ಮಾ ಲೋಕಾನಾಂ ದ್ಯಾವಾ ಪಥಿವ್ಯೋರಂತರೇಣ
> ನಭೋವಲಯಸ್ಯ ಕಾಲಚಕ್ರಗತೋ ದ್ವಾದಶಮಾಸಾನ್ ಭುಂಕ್ತೇ ರಾಶಿ
> ಸಂಜ್ಞಾನ್ ಸಂವತ್ಸರಾವಯವಾನ್ ಸಹ ಪಕ್ಷದ್ವಯಂ
> ದಿವಾನಕ್ತಂಚೇತಿಸಪಾದರ್ಕ್ಷದ್ವಯ ಮುಪದಿಶಂತಿ
> ಯಾವತಾಷಷ್ಠಮಂಶಂ ಭುಂಚೀತ ಸವೈ ಋತುರಿತ್ಯುಪದಿಶ್ಯತೇ
> ಸಂವತ್ಸರಾವಯವಃ ।।೫।।

ಅಥ = ಹೀಗಿರುವುದರಿಂದ; ಏಷಃ ಸಃ ಲೋಕಾನಾಂ ಆತ್ಮಾ = ಸರ್ವಾಂತರ್ಯಾಮಿಯಾದ ಈ ಭಗವಾನ್ ಸೂರ್ಯನಾರಾಯಣನು; ದ್ಯಾವಾಪೃಥಿವ್ಯೋಃ ಅಂತರೇಣ = ಸ್ವರ್ಲೋಕ ಭೂಲೋಕಗಳ ನಡುವೆ ಇರುವ; ನಭೋವಲಯಸ್ಯ = ಆಕಾಶದಲ್ಲಿ ತಿರುಗುವ; ಕಾಲಚಕ್ರಗತಃ = ಕಾಲಚಕ್ರದ ಮೇಲೆ ಸಂಚರಿಸುತ್ತಾ; ಸಂಜ್ಞಾನ್= ರಾಶಿಗಳಲ್ಲಿ ಸೂರ್ಯ ಸಂಚಾರದ ಕಾಲಗತಿಯಿಂದ ಎಣಿಸಲ್ಪಡುವ; ಸಹ ಪಕ್ಷದ್ವಯಂ = ಶುಕ್ಲ ಮತ್ತು ಕೃಷ್ಣ ಎಂಬ ಎರಡು ಪಕ್ಷಗಳಿಂದ ಕೂಡಿದ; ದ್ವಾದಶ ಮಾಸಾನ್ = ಹನ್ನೆರಡು ತಿಂಗಳುಗಳೆಂಬ; ಸಂವತ್ಸರಾವಯವಾನ್ = ಸಂವತ್ಸರದ ವಿಭಾಗಗಳನ್ನು; ಭುಂಕ್ತೇ = ಕ್ರಮಿಸಿ ಮುಗಿಸುತ್ತಾನೆ; ದಿವಾ ನಕ್ತಂ ಇತಿಚ ಉಪದಿಶಂತಿ = ಎರಡು ಪಕ್ಷಗಳು ಪಿತೃಗಳಿಗೆ ಹಗಲು ರಾತ್ರಿಗಳು ಎಂದು ಹೇಳುತ್ತಾರೆ; ಸಪಾದಋಕ್ಷದ್ವಯಂ ಉಪದಿಶಂತಿ = ಆ ಅವಧಿಯು·ಎರಡೂ ಕಾಲು ನಕ್ಷತ್ರಗಳ ದೂರವನ್ನು ಅತಿಕ್ರಮಿಸುವಿಕೆ ಎನ್ನುತ್ತಾರೆ.; ಯಾವತಾಷಷ್ಠಂ ಅಂಶಂ ಭುಂಜೀಥ = ಹೀಗೆ, ವೃತ್ತದ ಆರನೇ ಒಂದು ಭಾಗವಾದ ಎರಡು ರಾಶಿಗಳನ್ನು ಅಥವಾ 4½ ನಕ್ಷತ್ರಗಳ ಅಂತರವನ್ನು ಕ್ರಮಿಸುವ ಕಾಲವನ್ನು; ಸಂವತ್ಸರಾವಯವಃ

= ಸಂವತ್ಸರದ ಒಂದು ಭಾಗವಾದ; ಋತುಃ = ಋತುವು ಎಂದು; ಉಪದಿಶಂತಿ = ಹೇಳುತ್ತಾರೆ.

ಮಾನಸೋತ್ತರ ಪರ್ವತದ ಸುತ್ತಲೂ ಇರುವ ನಕ್ಷತ್ರಗಳನ್ನು 27 ಗುಂಪುಗಳಾಗಿ ವಿಭಾಗಿಸಿದ್ದಾರೆ. ಅಲ್ಲದೆ ಆ 27 ನಕ್ಷತ್ರಗಳಲ್ಲಿ ಮೇಷ, ವೃಷಭ ಮೊದಲಾದ ಹನ್ನೆರಡು ರಾಶಿಗಳನ್ನು ಗುರುತಿಸಿದ್ದಾರೆ. ಒಂದೊಂದು ರಾಶಿಯೂ 2¼ ನಕ್ಷತ್ರಗಳ ಅಂತರವನ್ನು ಆಕ್ರಮಿಸಿರುತ್ತದೆ. ಕಾಲಚಕ್ರದ ಮೇಲೆ ಪ್ರದಕ್ಷಿಣಾಕಾರವಾಗಿ ಮುಂದೆಮುಂದೆಯೇ ಚಲಿಸುವ ಸೂರ್ಯನು, ತನ್ನ ರಥದ ವೇಗಕ್ಕಿಂತ ಹೆಚ್ಚು ವೇಗವಾಗಿ ಚಲಿಸುವ ನಕ್ಷತ್ರ ರಾಶಿಗಳ ದೃಷ್ಟಿಯಿಂದ ಹಿಂದೆ ಹಿಂದೆ ಬೀಳುತ್ತಾ, ತನಗಿಂತ ಹಿಂದಿರುವ ಒಂದೊಂದು ರಾಶಿಯನ್ನೂ ಒಂದೊಂದು ತಿಂಗಳಲ್ಲಿ ಅಥವಾ ಎರಡೆರಡು ಪಕ್ಷಗಳಲ್ಲಿ ಅತಿಕ್ರಮಿಸುತ್ತಾನೆ.

ಶುಕ್ಲಪಕ್ಷದಲ್ಲಿ ಚಂದ್ರನು ವೃದ್ಧಿಯಾಗುವ ತನ್ನ ಕಳೆಗಳಿಂದ ದೇವತೆಗಳಿಗೆ ಅಮೃತವನ್ನುಣಿಸುತ್ತಾನೆ; ಕೃಷ್ಣಪಕ್ಷದಲ್ಲಿ ಪಿತೃದೇವತೆಗಳಿಗೆ ಅನ್ನವನ್ನೊದಗಿಸುತ್ತಾನೆ. ಚಾಂದ್ರಪಕ್ಷ ಸೌರಪಕ್ಷಗಳ ದಿನಸಂಖ್ಯೆಯಲ್ಲಿ ವ್ಯತ್ಯಾಸವಿರುವುದನ್ನು ಅಧಿಕ ಚಾಂದ್ರಮಾಸಗಳನ್ನು ಐದು ವರ್ಷಗಳಲ್ಲಿ ಎರಡು ಬಾರಿ ಕೂಡಿಸುವುದರಿಂದ ಸರಿಪಡಿಸುತ್ತಾರೆ. ವೈದಿಕ ಕರ್ಮಾಚರಣೆಗೆ ಚಾಂದ್ರಮಾನವು ಅಗತ್ಯ. ಕಾಲದ ಮತ್ತು ಆಯುರ್ಮಾನದ ಎಣಿಕೆಗೆ ಸೌರಮಾನವು ಅಗತ್ಯ.

**ಅಥಚ ಯಾವತಾರ್ಧೇನ ನಭೋವೀಥ್ಯಾಂ ಪ್ರಚರತಿ ತಂ**
**ಕಾಲಮಯನಮಾಚಕ್ಷತೇ ॥೬॥**

ಅಂತರಿಕ್ಷ ಮಾರ್ಗದಲ್ಲಿ ಅರ್ಧವೃತ್ತವನ್ನು ಸೂರ್ಯರಥವು ಕ್ರಮಿಸುವ ಕಾಲವನ್ನು ಅಯನ ಎಂದು ಕರೆಯುತ್ತಾರೆ.

**ಅಥ ಚ ಯಾವನ್ನಭೋ ಮಂಡಲಂ ಸಹ ದ್ಯಾವಾ ಪೃಥಿವ್ಯೋರ್ಮಂ**
**ಡಲಾಭ್ಯಾಂ ಕಾರ್ತ್ಸ್ನ್ಯೇನ ಸಹ ಭಂಜೀತತಂ ಕಾಲಂ ಸಂವತ್ಸರಂ**
**ಪರಿವತ್ಸರಂ ಇಡಾವತ್ಸರಮನುವತ್ಸರಂ ವತ್ಸರಮಿತಿ ಭಾನೋರ್ಮಾಂದ್ಯ**
**ಶೈಘ್ರ್ಯಸಮಗತಿಭಿಃ ಸಮಾಮನಂತಿ ॥೭॥**

ಅಥ ಚ = ಅದೂ ಅಲ್ಲದೆ; ದ್ಯಾವಾಪೃಥಿವ್ಯೋಃ ಮಂಡಲಾಭ್ಯಾಂ ಸಹ = ಸ್ವರ್ಲೋಕದ ಕಡೆಯ ಮತ್ತು ಭೂಲೋಕದ ಕಡೆಯ ಮಂಡಲಾಕಾರದ ಪಥಗಳಲ್ಲಿ ಸಂಚರಿಸುತ್ತಾ; ನಭೋಮಂಡಲಂ ಕಾರ್ತ್ಸ್ನ್ಯೇನ ಯಾವತ್‌ಭುಂಜೀತ = ಅವೆರಡರ

ಮಧ್ಯಗತ ಆಕಾಶದಲ್ಲಿ, ಉತ್ತರಕ್ಕೊಮ್ಮೆ ದಕ್ಷಿಣಕ್ಕೊಮ್ಮೆ ಪೂರ್ತಿಯಾಗಿ ಸಂಚರಿಸಿದಾಗ ಹಿಡಿಸುವ; ತಂ ಕಾಲಂ = ಆ ಕಾಲದ ಅವಧಿಯನ್ನು; ಭಾನೋಃ = ಸೂರ್ಯನ; ಮಾಂದ್ಯ ಶೈಘ್ರ್ಯಸಮಗತಿಭಿಃ = ಮಂದ, ಶೀಘ್ರ ಮತ್ತು ಸಮಗತಿಗಳ ದೃಷ್ಟಿಯಿಂದ; ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ,ವತ್ಸರ, ಇತಿ = ಹೀಗೆ ಐದು ವಿಧವಾಗಿ; ಸಮಾಮನಂತಿ = ತಿಳಿದವರು ಎಣಿಕೆ ಮಾಡುತ್ತಾರೆ.

ನಮ್ಮ ಭೂಗೋಳದ ಕರ್ಕಾಟಕ ಸಂಕ್ರಾಂತಿ ವೃತ್ತವು ಉತ್ತರಧ ಕಡೆಗೆ, ಎಂದರೆ, ಸ್ವರ್ಲೋಕದ ಕಡೆಗಿದೆ; ಮಕರಸಂಕ್ರಾಂತಿ ವೃತ್ತವು ದಕ್ಷಿಣದ ಅಥವಾ ಭೂಮಂಡಲದ ಕಡೆಗಿದೆ. ಶಿಂಶುಮಾರ ಮೂರ್ತಿಯು ಕಾಲಚಕ್ರವನ್ನು ಈಎರಡು ವೃತ್ತಗಳ ನಡುವಿನ ಆಕಾಶ ಮಂಡಲದಲ್ಲಿ ಏರಿಸಿ, ಇಳಿಸುವನು. ಹಿಂದೆಯೇ ಹೇಳಿರುವಂತೆ, ಭೂಮಧ್ಯ ರೇಖೆಯಿಂದ ಕಾಲಚಕ್ರವು ಮೇಲಕ್ಕೇರುವಾಗ, ಸೂರ್ಯೋದಯ ಸೂರ್ಯಾಸ್ತಗಳು ನಿಧಾನವಾಗಿ ಆಗುವುದರಿಂದ ಅದನ್ನು ಮಂದಗತಿ ಎನ್ನುತ್ತಾರೆ. ಆ ಅಂತರದಲ್ಲಿ ನಾಗವೀಧಿ, ಗಜವೀಧಿ, ಐರಾವತವೀಧಿ ಎಂದು – ಮಂದ, ಮಂದತರ, ಮಂದತಮ ಗತಿಗಳನ್ನು ಗುರುತಿಸುತ್ತಾರೆ (ಭೂಮಧ್ಯರೇಖೆಯಿಂದ ಉತ್ತರಕ್ಕೆ$5^0$-$10^0$, $11^0$-$15^0$, $16^0$-$23½^0$,) $5^0$ ಉತ್ತರ ಮತ್ತು $5^0$ ದಕ್ಷಿಣಗಳ ಅಂತರದಲ್ಲಿ ರಥವೀಧಿ(ಸಮಗತಿ; $5^0$ ದಕ್ಷಿಣದಿಂದ $23½^0$ ದಕ್ಷಿಣದವರೆಗೆ ಅಜವೀಧಿ (ಮೇಕೆಯಂತೆ ಶೀಘ್ರಗತಿ)

ರಥ ವೀಧಿಯಲ್ಲಿ – ಆರ್ಷಭ, ರಥ, ಜಾರದ್ಗವ ಎಂದು ಮೂರು ವಿಧ. ಅಜ ವೀಧಿಯಲ್ಲಿ – ಅಜ, ಮೃಗ, ವೈಶ್ವಾನರ (ಶೀಘ್ರ, ಶೀಘ್ರತರ, ಶೀಘ್ರತಮ)

ಸಂವತ್ಸರ ಎಂಬುದು ಸಮಗತಿಯ ದೃಷ್ಟಿಯಿಂದ; ಪರಿವತ್ಸರ ಇಡಾವತ್ಸರಗಳು ಮಂದಗತಿಯ ದೃಷ್ಟಿಯಿಂದ; ಅನುವತ್ಸರ ವತ್ಸರಗಳು ಶೀಘ್ರಗತಿಯ ದೃಷ್ಟಿಯಿಂದ.

ವೈದಿಕ ಕರ್ಮಗಳನ್ನಾಚರಿಸಲು, ಸೂರ್ಯೋದಯ ಸೂರ್ಯಾಸ್ತಗಳ ಕಾಲಭೇದಗಳನ್ನು ಗಮನಿಸಬೇಕಾದುದರಿಂದ ಮೇಲೆ ಹೇಳಿದ ವಾರ್ಷಿಕ ನಾಮ ಭೇದಗಳು ಉಕ್ತವಾಗಿವೆ.

ಸೂರ್ಯ, ಚಂದ್ರ, ಗುರು, ಶನಿ, – ಇವರುಗಳ ಗತಿಭೇದಗಳಿಂದ ಐದು ಬಗೆಯ ವತ್ಸರಗಳನ್ನು ಹೆಸರಿಸುವ ಇನ್ನೊಂದು ಕ್ರಮವೂ ಇದೆ.

**ಏವಂ ಚಂದ್ರಮಾ ಅರಕಗಭಸ್ತಿಭ್ಯಃ ಉಪರಿಷ್ಟಾಲ್ಲಕ್ಷ ಯೋಜನತ ಉಪಲಭ್ಯಮಾನೋಽರ್ಕಸ್ಯ ಸಂವತ್ಸರಭುಕ್ತಿಂಪಕ್ಷಭ್ಯಾಂ ಮಾಸಭುಕ್ತಿಂ**

ಸಪಾದರ್ಕ್ಷಾಭ್ಯಾಂ ದಿನೇನೈವ ಪಕ್ಷಭುಕ್ತಿಂಅಗ್ರಚರೀದ್ರುತತರಗಮನೋ.
ಭುಂಕ್ತೇ ॥೮॥

ಏವಂ = ಇದೇ ರೀತಿಯಾಗಿ; ಅರ್ಕಗಭಸ್ತಿಭ್ಯಃ ಉಪರಿಷ್ಟಾತ್ = ಸೂರ್ಯಕಿರಣಗಳ ಮೇಲೆ; ಲಕ್ಷಯೋಜನತಃ ಉಪಲಭ್ಯಮಾನಃ = ಒಂದು ಲಕ್ಷ ಯೋಜನದ ಎತ್ತರದ ಮೇಲಿರುವ; ಚಂದ್ರಮಾ = ಚಂದ್ರನು; ಆರ್ಕಸ್ಯ ಸಂವತ್ಸರ ಭುಕ್ತಿಂ = ಸೂರ್ಯನ ಒಂದು ಸಂವತ್ಸರದ ಕಾಲಾವಧಿಯನ್ನು; ಪಕ್ಷಾಭ್ಯಾಂ = ಶುಕ್ಲಕೃಷ್ಣಪಕ್ಷಗಳಿಂದ; ಮಾಸಭುಕ್ತಿಂ = ಒಂದು ತಿಂಗಳ ಕಾಲಾವಧಿಯನ್ನು; ಸಪಾದಋಕ್ಷಾಭ್ಯಾಂ = 2¼ ನಕ್ಷತ್ರಗಳನ್ನು ಕ್ರಮಿಸುವಷ್ಟು ಕಾಲದಿಂದ; ಪಕ್ಷಭುಕ್ತಿಂ = ಸೂರ್ಯನು 15 ದಿನಗಳಲ್ಲಿ ಕ್ರಮಿಸುವಷ್ಟು ಕಾಲವನ್ನು; ದಿನೇನೈವ = ಒಂದೇ ದಿವಸದ ಅವಧಿಯಿಂದ; ದ್ರುತತರಗಮನಃ = ಸೂರ್ಯನಿಗಿಂತ ಹೆಚ್ಚು ವೇಗದಿಂದ ಚಲಿಸುವವನಾಗಿ; ಭುಂಕ್ತೇ = ಕ್ರಮಿಸಿಬಿಡುತ್ತಾನೆ.

ಇಲ್ಲಿ ನಾವು ಗಮನಿಸಬೇಕಾದ ಅತಿ ಮುಖ್ಯವಾದ ಅಂಶಗಳೆರಡಿವೆ.

(೧) ಪುರಾಣಗಳನ್ನು ಮಾತ್ರ ಬಲ್ಲವರು ಸಾಮಾನ್ಯವಾಗಿ ತಿಳಿದಿರುವಂತೆ ಚಂದ್ರನಿರುವುದು ಸೂರ್ಯಬಿಂಬದ ನೆತ್ತಿಯ ಮೇಲೆ ಒಂದು ಲಕ್ಷಯೋಜನದ ಎತ್ತರದಲ್ಲಲ್ಲ.

ಅರ್ಕಗಭಸ್ತಿಭ್ಯಃ ಉಪರಿಷ್ಟಾತ್ = ಎಂಬಲ್ಲಿ "ಗಭಸ್ತಿಭ್ಯಃ" ಎಂಬುದನ್ನು ಅವರು ಗಮನಿಸದಿರುವುದು ಆಚ್ಚರಿಯೇಸರಿ. ರಥದ ಮೇಲೆ ಸೂರ್ಯ ಬಿಂಬವಿರುವುದು ಭೂಮಾನದಿಂದ ಒಂದು ಲಕ್ಷಯೋಜನದೆತ್ತರದಲ್ಲಿ. ಅಂದರೆ,ಒಂದು ಲಕ್ಷ ಯೋಜನದೆತ್ತರವಿರುವ ನಮ್ಮ ಭೂಗೋಳದ ಸಮಭಾಜಕ ವೃತ್ತಕ್ಕೆ ಸರಿಯಾಗಿ ಸೂರ್ಯಬಿಂಬದ ಸಮಭಾಜಕ ವೃತ್ತ ವಿರುವುದು. ಸೂರ್ಯಬಿಂಬದ ತಳ ಭಾಗದಿಂದ ಹೊರಡುವ ನೇರವಾದ ಕಿರಣಗಳು ಪುಷ್ಕರ ದ್ವೀಪದ ಭೂಮಾನದಿಂದ ಒಂದು ಲಕ್ಷ ಯೋಜನದ ಮೇಲಿರುವುವು. ಅವು ಜಂಬೂ ದ್ವೀಪದ ತಳವನ್ನು ಮುಟ್ಟುವುವು. ಅದಕ್ಕಿಂತ ಒಂದು ಲಕ್ಷ ಯೋಜನದ ಮೇಲೆ ಎಂದಾಗ, ಚಂದ್ರ ಬಿಂಬವು ಭೂಗೋಳ ಮತ್ತು ಸೂರ್ಯ ಬಿಂಬಗಳ ನಡುವೆ, ಸ್ವಲ್ಪ ಹೆಚ್ಚು ಕಡಿಮೆ ಅವುಗಳ ನೇರದಲ್ಲಿಯೇ ಇದ್ದ ಹಾಗಾಯಿತು.

ಗಂಗಾವತರಣ ಪ್ರಸಂಗದಲ್ಲಿ, "ಇಂದು ಮಂಡಲಮಾವಾರ್ಯ ಬ್ರಹ್ಮ ಸದನೇ ನಿಪತತಿ" ಎಂದು ಹೇಳಲಾಗಿದೆ. ಶಾತಕೌಂಭಿ ಎಂಬ ಬ್ರಹ್ಮ ಸದನವಿರುವುದು ಜಂಬೂದ್ವೀಪದ ಮಧ್ಯಗತವಾದ ಮೇರು ಪರ್ವತದ ಮೇಲೆ. ಆದುದರಿಂದ ಚಂದ್ರ

ಮಂಡಲವು ಆ ಪರ್ವತದ ಸಮೀಪದಲ್ಲಿಯೇ ಇರಬೇಕು. ಅಲ್ಲದೆ, "ಚಂದ್ರ ದ್ವೀಪ ಮಿತಿಖ್ಯಾತಂ ಚಂದ್ರ ಮಂಡಲ ಸಂಸ್ಥಿತಂ । ಸಹಸ್ರ ಯೋಜನಾನಾಂತು ಸರ್ವತಃ ಪರಿಮಂಡಲಂ ।। ಚತುರ್ಯೋಜನ ಸಾಹಸ್ರಂ ಸಮತೀತ್ಯ ಮಹೋದಧಿಂ ।।" ಎಂದು ವಾಯುಪುರಾಣದಲ್ಲಿ ಹೇಳಿದೆ. ಜಂಬೂ ದ್ವೀಪದ ಸುತ್ತಲಿನ ಮಹಾ ಲವಣ ಸಮುದ್ರದಲ್ಲಿ, ಅದಕ್ಕೆ 4000 ಯೋಜನ ದೂರದಲ್ಲಿ, 1000 ಯೋಜನ ವಿಸ್ತಾರವಾದ ಚಂದ್ರ ದ್ವೀಪವಿದೆ; ಅದು ಚಂದ್ರ ಮಂಡಲದ ಪರಿಸರದಲ್ಲಿದೆ, ಎಂದಾಗ, ಚಂದ್ರ ಬಿಂಬವು, ಸೂರ್ಯ ಕಿರಣಗಳ ನೇರಕ್ಕಿಂತ ಒಂದು ಲಕ್ಷ ಯೋಜನದೆತ್ತರದಲ್ಲಿ, ನಮ್ಮ ಭೂಗೋಳಕ್ಕೆ ಸಮೀಪದಲ್ಲಿಯೇ (2ಲಕ್ಷ ಯೋಜನ ದೂರದಲ್ಲಿ) ಇದೆ ಎಂದು ಹೇಳಬೇಕು. ಈಗಿನವರ ಲೆಕ್ಕಾಚಾರಕ್ಕೆ ಅದು ಸಂಪೂರ್ಣವಾಗಿ ಹೊಂದಿಕೊಳ್ಳುತ್ತದೆ.

ಆದುದರಿಂದ ಚಂದ್ರಮಂಡಲಕ್ಕೆ ಹೋಗಿ ಬರುವುದು ಅಸಾಧ್ಯವಲ್ಲ. ದೇವತಾ ಶರೀರಗಳು ಅದೃಶ್ಯವಾದುದರಿಂದ ಅಲ್ಲಿ ಹೋದವರಿಗೆ ಅವರು ಕಾಣುವುದಿಲ್ಲ. 2¼ ನಕ್ಷತ್ರ ಎಂದರೆ, ಒಂದು ರಾಶಿಯ ವಿಸ್ತಾರದ ಪ್ರಮಾಣ. ಅಂತಹ ಒಂದೊಂದು ರಾಶಿಯನ್ನು ಹಿಂದೆ ಬೀಳುತ್ತಾ ಅತಿಕ್ರಮಿಸಲು ಸೂರ್ಯನಿಗೆ ಒಂದು ತಿಂಗಳು ಬೇಕು; ಚಂದ್ರನಿಗೆ ಎರಡು ದಿನಗಳೇ ಸಾಕು. ಹದಿನೈದು ದಿನಗಳಲ್ಲಿ ಸೂರ್ಯನು ಅರ್ಧ ರಾಶಿಯಷ್ಟು ಹಿಂದಾಗಿರುತ್ತಾನೆ; ಚಂದ್ರನು ಆ ಅಂತರವನ್ನು ಒಂದೇ ದಿವಸದಲ್ಲಿ ಕ್ರಮಿಸುತ್ತಾನೆ. ಎಂದರೆ, ಹಿಂದೆ ಬೀಳುವುದರಲ್ಲಿ ಸೂರ್ಯನ ವೇಗಕ್ಕಿಂತ ಚಂದ್ರನ ವೇಗ ಹೆಚ್ಚು.

**ಅಥ ಚಾಪೂರ್ಯಮಾಣಾಭಿಶ್ಚ ಕಲಾಭಿರಮರಾಣಾಂ**
**ಕ್ಷೀಯಮಾಣಾಭಿಶ್ಚ ಕಲಾಭಿಃಪಿತೃಣಾಮಹೋರಾತ್ರಾಣಿ ವಿತನ್ವಾನಃ**
**ಸರ್ವಜೀವ ನಿವಹ ಪ್ರಾಣೋ ಜೀವಶ್ಚೈಕಮೇಕಂ ನಕ್ಷತ್ರಂ ತ್ರಿಂಶತಾ**
**ಮುಹೂರ್ತೈರ್ಭುಂಕ್ತೇ ।।೯।।**

ಅಥ ಚ = ಹೀಗೆ ಚರಿಸುತ್ತಾ; ಅಪೂರ್ಯಮಾಣಾಭಿಃ ಕಲಾಭಿಃ = ವೃದ್ಧಿ ಹೊಂದುತ್ತಿರುವ ಕಳೆಗಳಿಂದ; ಅಮರಾಣಾಂ = ದೇವತೆಗಳಿಗೂ; ಕ್ಷೀಯಮಾಣಾಭಿಃ ಕಲಾಭಿಃ = ಕ್ಷಯಿಸುತ್ತಿರುವ ಕಳೆಗಳಿಂದ; ಪಿತೃಣಾಂ = ಪಿತೃದೇವತೆಗಳಿಗೂ; ಪೂರ್ವಾಪರ ಪಕ್ಷಾಭ್ಯಾಂ ಅಹೋರಾತ್ರಾಣಿ ವಿತನ್ವಾನಃ = ಶುಕ್ಲಪಕ್ಷ ಕೃಷ್ಣಪಕ್ಷಗಳಿಂದ ಕ್ರಮವಾಗಿ ಹಗಲು ರಾತ್ರಿಗಳನ್ನುಂಟು ಮಾಡುತ್ತಾ; ಸರ್ವಜೀವ ನಿವಹ ಪ್ರಾಣಃ ಜೀವಃ ಚ = ಸಕಲ ಜೀವರಿಗೂ ಪ್ರಾಣಾಧಾರನೂ ಜೀವನದಾತನೂ ಆಗಿದ್ದು; ಏಕಮೇಕಂ ನಕ್ಷತ್ರಂ = ಒಂದೊಂದು ನಕ್ಷತ್ರವನ್ನು; ತ್ರಿಂಶತಾಮುಹೂರ್ತೈಃ =

ಮೂವತ್ತು ಮುಹೂರ್ತಗಳ. (ಘಂಟೆಗಳ) ಅವಧಿಯಲ್ಲಿ; ಭುಂಕ್ತೈ = ಅತಿಕ್ರಮಿಸುವನು.

ಶುಕ್ಲಪಕ್ಷವು ದೇವತೆಗಳಿಗೆ ಹಗಲು, ಪಿತೃಗಳಿಗೆ ರಾತ್ರಿ. ಕೃಷ್ಣಪಕ್ಷವು ಪಿತೃಗಳಿಗೆ ಹಗಲು, ದೇವತೆಗಳಿಗೆ ರಾತ್ರಿ. ಇಡಾನಾಡಿಗೆ ಚಂದ್ರನು ಅಭಿಮಾನಿಯಾಗಿದ್ದು ಶ್ವಾಸೋಚ್ಛ್ವಾಸ ಕಾರ್ಯಕ್ಕೆ ಸಹಕಾರಿಯಾಗಿರುವುದರಿಂದ, ಸೂರ್ಯನಂತೆ ಪ್ರಾಣಾಧಾರವಾಗಿರುವನು; ಬೆಳೆಗಳಿಗೆ ಪೋಷಕನಾಗಿರುವುದರಿಂದ ಅನ್ನದಾತಾ, ಜೀವನಾಧಾರ.

ಒಂದೊಂದು ರಾಶಿಯಲ್ಲಿ 2¼ ನಕ್ಷತ್ರಗಳಿರುವುದರಿಂದ, ಇಲ್ಲಿ ಒಂದು ನಕ್ಷತ್ರ ಎಂದಾಗ, 1⅛ ನಕ್ಷತ್ರ ಎಂದು ಭಾವಿಸಬೇಕು. ಆರು ರಾಶಿಗಳಿಗೆ 13½ ನಕ್ಷತ್ರಗಳೆಂದು ಲೆಕ್ಕ ಸಿಗುವುದು. 1⅛ ನಕ್ಷತ್ರ ದೂರಕ್ರಮಿಸಲು 30 ಮುಹೂರ್ತಗಳಾದರೆ 13½ ನಕ್ಷತ್ರಗಳ ದೂರಕ್ರಮಿಸಲು 360 ಮುಹೂರ್ತ ಅಥವಾ 15 ದಿನಗಳು ಬೇಕಾಗುವುದು. ಇದು ಒಂದು ಪಕ್ಷದ ಅವಧಿ.

**ಸ ಏಷ ಷೋಡಶಕಲಃ ಪುರುಷೋ ಭಗಗವಾನ್ಮನೋಮಯೋನ್ನ**
**ಮಯೋಮೃತಮಯೋ ದೇವಪಿತೃಮನುಷ್ಯಭೂತ ಪಶುಪಕ್ಷಿ**
**ಸರೀಸೃಪವೀರುಧಾಂ ಪ್ರಾಣಾಪ್ಯಾಯನ ಶೀಲತ್ವಾತ್ಸರ್ವಮಯ ಇತಿ**
**ವರ್ಣಯಂತಿ ॥೧೦॥**

ಸಃ ಏಷಃ = ಸುಪ್ರಸಿದ್ಧನಾದ ಈ; ಷೋಡಶ ಕಲಃ = ಪೃಥಿವ್ಯಾದಿ ಪಂಚಕ, ದಶೇಂದಿಯ ಮತ್ತು ಮನಸ್ಸುಗಳೆಂಬ ಹದಿನಾರು ಶಕ್ತಿಗಳಿಗೆ ಆಧಾರಭೂತನಾದ; ಭಗವಾನ್ = ಐಶ್ವರ್ಯವಂತನಾದ; ಪುರುಷಃ = ಚಂದ್ರನಾಮಕ ದೇವತೆಯು; ಮನೋಮಯಃ = ಮನೋನಿಯಾಕನಾಗಿರುವನು; ಅನ್ನಮಯಃ = ಅನ್ನರಸಗಳಿಗೆ ಆಧಾರಭೂತನಾಗಿರುವನು; ಅಮೃತಮಯಃ = ದೇವತೆಗಳ ಪಾನೀಯವಾದ ಅಮೃತಕ್ಕೆ ಅಭಿಮಾನಿದೇವತೆಯಾಗಿರುವನು; ಆದುದರಿಂದ; ದೇವ ಪಿತೃ ಮನುಷ್ಯಭೂತ ಪಶುಪಕ್ಷಿ ಸರೀಸೃಪ ವೀರುಧಾಂ = ದೇವತೆಗಳಿಗೆ, ಪಿತೃದೇವತೆಗಳಿಗೆ, ಮಾನವರಿಗೆ, ಭೂತಗಣಗಳಿಗೆ, ಪಶುಪಕ್ಷಿಗಳಿಗೆ, ಹರಿದಾಡುವ ಪ್ರಾಣಿಗಳಿಗೆ, ಸಸ್ಯವರ್ಗಗಳಿಗೆ; ಪ್ರಾಣಾಪ್ಯಾಯನ ಶೀಲತ್ವಾತ್ = ಪ್ರಾಣಾಧಾರಗಳಾದ ಆಹಾರಗಳನ್ನು ಒದಗಿಸಿ ಸಂತೋಷಗೊಳಿಸುವುದರಿಂದ; ಸರ್ವಮಯಃ ಇತಿ = "ಸರ್ವತ್ರವ್ಯಾಪಕನೆಂದು; ವರ್ಣಯಂತಿ = ತಿಳಿದವರು ವರ್ಣಿಸುತ್ತಾರೆ.

ದೇವತೆಗಳು ಸಹಸ್ರಾರು ಅಂಶಗಳಿಂದ ತಮ್ಮ ತಮ್ಮ ಕ್ಷೇತ್ರಗಳಲ್ಲಿ ವ್ಯಾಪ್ತರಾಗಿ ವ್ಯಾಪಾರಗಳನ್ನು ನಡೆಸುವರು.

ಜಗತ್ತಿನ ಜೀವನದ ಮೇಲೆ ಚಂದ್ರಕಿರಣಗಳ ಪ್ರಭಾವವೆಷ್ಟೆಂಬುದು ಇದರಿಂದ ತಿಳಿದು ಬರುತ್ತದೆ. ವಿಜ್ಞಾನಿಗಳು ಈಗ ಹೇಳಿದ ವಿಷಯಗಳಲ್ಲಿ ಕೆಲವನ್ನಾದರೂ ಪ್ರಯೋಗಗಳಿಂದ ಪರೀಕ್ಷಿಸಿ ತಿಳಿಯಲು ಪ್ರಯತ್ನಿಸಲಿ.

**ತತ ಉಪರಿಷ್ಟಾದ್ದ್ವಿಲಕ್ಷ ಯೋಜನತೋ ನಕ್ಷತ್ರಾಣಿ ಮೇರುಂ**
**ದಕ್ಷಿಣೇನ್ಯೆವ ಕಾಲಾಯನ ಈಶ್ವರಯೋಜಿತಾನಿಸಹಾಭಿಜಿತಾಷ್ಟಾವಿಂಶತಿಃ**
**॥೧೧॥**

ತತಃ ದ್ವಿಲಕ್ಷಯೋಜನತಃ ಉಪರಿಷ್ಟಾತ್ = ಚಂದ್ರನಿಗಿಂತ ಎರಡು ಲಕ್ಷಯೋಜನಗಳ ಮೇಲೆ (ಕಾಲಚಕ್ರದ ಧಾರಾಂತರಗಳಲ್ಲಿ); ನಕ್ಷತ್ರಾಣಿ = ನಕ್ಷತ್ರಗಳು; ಕಾಲಾಯನ ಈಶ್ವರಯೋಜಿತಾನಿ = ಕಾಲನಿಯಾಮಕ ಪರಮಾತ್ಮನ ಸಂಕಲ್ಪಾನುಸಾರವಾಗಿ; ಮೇರುಂ ದಕ್ಷಿಣೇನ್ಯೆವ = ಮೇರುಪರ್ವತವನ್ನು ಬಲಗಡೆಗಿಟ್ಟು ಕೊಂಡೇಪ್ರದಕ್ಷಿಣೆಯಾಗಿ ಚರಿಸುತ್ತವೆ; ಸಹ ಅಭಿಜಿತಾ ಅಷ್ಟಾವಿಂಶತಿಃ = ಅವು ಅಭಿಜಿತ್ ನಕ್ಷತ್ರ ಸಂಧಿಸಹಿತವಾಗಿ ಇಪ್ಪತ್ತೆಂಟು ಎಂದು ಗಣಿಸಲ್ಪಡುತ್ತವೆ.

ಮೇರು ಕೇಂದ್ರದ ಸುತ್ತಲೂ ಇರುವ ನಕ್ಷತ್ರಗಳನ್ನು ಇಪ್ಪತ್ತೇಳು ಗುಂಪುಗಳಾಗಿ ವಿಂಗಡಿಸಿ, ಹಸ್ತಾ, ಚಿತ್ತಾಮೊದಲಾದ ಇಪ್ಪತ್ತೇಳು ಹೆಸರುಗಳಿಂದ ಗುರುತಿಸುತ್ತಾರೆ. ಅಭಿಜಿತ್ ಎಂಬುದು ಮೊದಲ ಮತ್ತು ಕಡೆಯ ನಕ್ಷತ್ರಗಳ ಸಂಧಿಸ್ಥಾನ.

**ತತ ಉಪರಿಷ್ಟಾದುಶನಾ ದ್ವಿಲಕ್ಷಯೋಜನತ ಉಪಲಭ್ಯತೇ ಪುರತಃ**
**ಪಶ್ಚಾತ್ಸಹೈವವಾರ್ಕಸ್ಯ ಶೈಘ್ರ್ಯಮಾಂದ್ಯಸಾಮ್ಯಭಿರ್ಗತಿಭಿರರ್ಕವಚ್ಚರತಿ**
**ಲೋಕಾನಾಂ ನಿತ್ಯದಾನುಕೂಲ ಏವಪ್ರಾಯೇಣ**
**ವರ್ಷಯಂಶ್ಚಾರೇಣಾನುಮೀಯತೇ ವೃಷ್ಟಿವಿಷ್ಟಂಭಗ್ರಹೋಪಶಮನಃ**
**॥೧೨॥**

ತತಃ ಉಪರಿಷ್ಟಾತ್ = ನಕ್ಷತ್ರಗಳ ಪಥಗಳ ಮೇಲೆ ಎರಡು ಲಕ್ಷ ಯೋಜನದೆತ್ತರದಲ್ಲಿ; ಉಶನಾ = ಶುಕ್ರಗ್ರಹವು; ಉಪಲಭ್ಯತೇ = ಕಂಡುಬರುತ್ತದೆ; ಅರ್ಕಸ್ಯ ಪುರತಃ, ಪಶ್ಚಾತ್, ಸಹೈವ = ಸೂರ್ಯನಿಗಿಂತ ಮುಂದೆ ಅಥವಾ ಹಿಂದೆ ಅಥವಾ ಜೊತೆಜೊತೆಯಾಗಿಯೇ ಚಲಿಸುತ್ತಾ; ಶೈಘ್ರ್ಯ ಮಾಂದ್ಯ ಸಮಾನಾಭಿಃ = ಶೀಘ್ರಗತಿ, ಮಂದಗತಿ, ಸಮಗತಿಗಳಿಂದ; ಅರ್ಕವತ್ ಚರತಿ = ಸೂರ್ಯನಂತೆಯೇ ಸಂಚರಿಸುತ್ತದೆ; ಪ್ರಾಯೇಣ = ಬಹಳಮಟ್ಟಿಗೆ; ಲೋಕಾನಾಂ = ಜನರಿಗೆ; ಅನುಕೂಲಃ ಏವ = ಒಳ್ಳೆಯ ಪರಿಣಾಮವನ್ನೇ ಉಂಟುಮಾಡುತ್ತದೆ; ವರ್ಷಯನ್ ಚಾರೇಣ

ಅನುಮೀಯತೇ = ಮಳೆಯ ಬರುವಿಕೆಯಿಂದ ಅದರ ಪರಿಣಾಮವು ತಿಳಿಯಲ್ಪಡುವುದು; ವೃಷ್ಟಿ ವಿಷ್ಟಂಭ ಗ್ರಹೋಪಶಮನಃ = ಶುಕ್ರಗ್ರಹವು ತನ್ನ ಚಲನೆಗಳ ಸಂಬಂಧದಿಂದ ಮಳೆಗೆ ಅಡ್ಡಿಯನ್ನೊಡ್ಡುವ ಅಂಗಾರಕ ಗ್ರಹದಂತಹ ಗ್ರಹಗಳ ದುಷ್ಪರಿಣಾಮವನ್ನು ಉಪಶಮನಗೊಳಿಸುತ್ತದೆ.

ಕಾಲಚಕ್ರದೊಡನೆ ಮೇಲೇರಿ ಕೆಳಗಿಳಿಯುವ ಸೂರ್ಯರಥದಂತೆ ಶುಕ್ರಗ್ರಹವೂ ಮೇಲೇರಿ ಕೆಳಗಿಳಿಯುವುದರಿಂದ ಶೀಘ್ರಗತಿ, ಮಂದಗತಿ, ಸಮಗತಿಗಳಿಗೆ ಕಾರಣವಾಗುತ್ತದೆ. ಶುಕ್ರಗ್ರಹದ ಮುಂದೋಟದ ವೇಗವು ಕಡಿಮೆಯಾದುದರಿಂದ ಅದು ಕೆಲವೊಮ್ಮೆ ಸೂರ್ಯನ ಮುಂದೆ, ಹಿಂದೆ ಅಥವಾ ಜೊತೆಜೊತೆಯಾಗಿ ಕಂಡುಬರುವುದು.

**ಉಶನಸಾ ಬುಧಃ ವ್ಯಾಖ್ಯಾತಸ್ತತ ಉಪರಿಷ್ಟಾತ್ ದ್ವಿಲಕ್ಷಯೋಜನತೋ**
**ಬುಧಃ ಸೋಮಸುತಉಪಲಭ್ಯಮಾನಃ ಪ್ರಾಯೇಣ**
**ಶುಭಕೃದ್ಯದಾರ್ಕಾತ್ ವ್ಯತಿರಿಚ್ಯೇತ**
**ತದಾತಿವಾತಾಭ್ರಪ್ರಾಯಾನಾವೃಷ್ಟ್ಯಾದಿಭಯಮಾಶಂಸತಿ ॥೧೩॥**

ಉಶನಸಾ = ಶುಕ್ರಗ್ರಹದ ವಿಚಾರ ಹೇಳಿದುದರಿಂದ; ಬುಧಃ ವ್ಯಾಖ್ಯಾತಃ= ಬುಧಗ್ರಹದ ವಿಚಾರವನ್ನೂ ಹೇಳಿದಂತಾಯಿತು – ಸೂರ್ಯನ ಮುಂದೆ, ಹಿಂದೆ ಅಥವಾ ಜೊತೆಜೊತೆಗೆ ಚಲಿಸುವುದರಿಂದ; ತತಃಉಪರಿಷ್ಟಾತ್ = ಶುಕ್ರಗ್ರಹಕ್ಕಿಂತ ಮೇಲೆ; ದ್ವಿಲಕ್ಷಯೋಜನತಃ ಉಪಲಭ್ಯಮಾನಃ = ಎರಡು ಲಕ್ಷಯೋಜನದೆತ್ತರದಲ್ಲಿ ಕಂಡುಬರುವ; ಸೋಮಸುತಃ = ಚಂದ್ರನ ಪುತ್ರನಾದ; ಬುಧಃ = ಬುಧಗ್ರಹವು; ಪ್ರಾಯೇಣ ಶುಭಕೃತ್ = ಸಾಮಾನ್ಯವಾಗಿ ಶುಭವನ್ನೇ ಉಂಟುಮಾಡುವುದು; ಯದಾ = ಯಾವಾಗ; ಅರ್ಕಾತ್ವ್ಯತಿರಿಚ್ಯೇತ = ಸೂರ್ಯಗತಿಗೆ ವಿರುದ್ಧವಾಗಿ ಚಲಿಸುವುದೋ; ತದಾ = ಆಗ; ಅತಿವಾತ ಅಭ್ರಪ್ರಾಯ ಅನಾವೃಷ್ಟ್ಯಾದಿ = ವಿಪರೀತ ಗಾಳಿ, ಕೇವಲ ಮೋಡಗಳ ಚಲನೆ ಇವುಗಳಿಂದ ಅನಾವೃಷ್ಟಿ ಮೊದಲಾದ; ಭಯಂ ಆಶಂಸತೇ = ಭಯವನ್ನು ಸೂಚಿಸುತ್ತದೆ.

**ಅತಊರ್ಧ್ವಮಂಗಾರಕೋಪಿ ಯೋಜನ ಲಕ್ಷದ್ವಿತಯ**
**ಉಪಲಭ್ಯಮಾನಸ್ತ್ರಿಭಿಸ್ತ್ರಿಭಿಃ ಪಕ್ಷೈರೇಕೈಕಶೋರಾಶೀನ್ದ್ವಾದಶಾನುಭುಂಕ್ತೇ**
**ಯದಿ ನವಕ್ರೇಣಾಭಿವರ್ತತೇ ಪ್ರಾಯೇಣಾಶುಭಗ್ರಹೋಽಘ ಶಂಸಃ**
**॥೧೪॥**

ಅತಃಊರ್ಧ್ವಂ = ಬುಧಗ್ರಹದ ಮೇಲೆ; ಯೋಜನ ಲಕ್ಷದ್ವಿತಯೇ = ಎರಡು ಲಕ್ಷಯೋಜನದೆತ್ತರದ ಮೇಲೆ; ಉಪಲಭ್ಯಮಾನಃ = ಕಂಡುಬರುವ; ಅಂಗಾರಕಃ

ಅಪಿ = ಅಂಗಾರಕ ಗ್ರಹವೂ ಕೂಡ; ತ್ರಿಭಿಃ ತ್ರಿಭಿಃ ಪಕ್ಷೈಃ = ಮೂರು ಮೂರು ಪಕ್ಷಗಳಲ್ಲಿ; ದ್ವಾದಶಾನ್ ರಾಶೀನ್ = ಹನ್ನೆರಡು ರಾಶಿಗಳನ್ನು; ಏಕೈಕಶಃ = ಒಂದೊಂದನ್ನಾಗಿ; ಅನುಭುಂಕ್ತೇ = ಕ್ರಮಿಸುತ್ತದೆ; ಯದಿವಕ್ರೇಣ ನ ಅಭಿವರ್ತತೇ = ವಕ್ರಗತಿಯಿಂದಚರಿಸದಿದ್ದಾಗ; ಪ್ರಾಯೇಣ ಅಶುಭಗ್ರಹಃ = ಬಹಳಮಟ್ಟಿಗೆ ಅಶುಭ ಫಲಗಳನ್ನುಂಟುಮಾಡುವ ಗ್ರಹವಾಗಿದೆ; ಅಘಶಂಸಃ = ಪಾಪಕಾರ್ಯಗಳಲ್ಲಿ ತೊಡಗಿಸುತ್ತದೆ.

ಹಿಂದೋಟದಿಂದ ಮಂಗಳಗ್ರಹವು ಒಂದೊಂದು ರಾಶಿಯನ್ನು ದಾಟಲು ಒಂದೂವರೆ ತಿಂಗಳ ಕಾಲಬೇಕಾಗುವುದು. ಇತರ ಶುಭಗ್ರಹಗಳೊಡನೆ ಚರಿಸಿದಾಗ ವಕ್ರಗತಿ ಎನಿಸುವುದಿಲ್ಲ.

> ತತ ಉಪರಿಷ್ಟಾತ್ ದ್ವಿಲಕ್ಷಯೋಜನಾಂತರಗತೋ ಭಗವಾನ್
> ಬೃಹಸ್ಪತಿರೇಕೈಕಸ್ಮಿನ್ ರಾಶೌಪರಿವತ್ಸರಂಪರಿವತ್ಸರಂಚರತಿ ಯದಿ ನ
> ವಕ್ರಃ ಸ್ಯಾತ್ಪ್ರಾಯೇಣಾನುಕೂಲೋ ಬ್ರಾಹ್ಮಣಕುಲಸ್ಯ ॥೧೫॥

ತತಃ ಉಪರಿಷ್ಟಾತ್ = ಮಂಗಳಗ್ರಹಕ್ಕಿಂತ ಮೇಲೆ; ದ್ವಿಲಕ್ಷಯೋಜನಾಂತರ ಗತಃ = ಎರಡು ಲಕ್ಷಯೋಜನಗಳ ಅಂತರದಲ್ಲಿರುವ; ಭಗವಾನ್ ಬೃಹಸ್ಪತಿಃ = ಗುಣಾಢ್ಯರಾದ ಬೃಹಸ್ಪತಿಗಳಿಂದ ಅಧಿಷ್ಠಿತವಾದ ಗುರುಗ್ರಹವು; ಏಕೈಕಸ್ಮಿನ್ ರಾಶೌ = ಒಂದೊಂದು ರಾಶಿಯಲ್ಲಿ; ಪರಿವತ್ಸರಂ ಪರಿವತ್ಸರಂ = ಪರಿವತ್ಸರದ ಒಂದೊಂದು ವಿಭಾಗದಷ್ಟು ಕಾಲ; ಚರತಿ = ಸಂಚರಿಸುತ್ತದೆ; ಯದಿ ನ ವಕ್ರಃ ಸ್ಯಾತ್ = ವಕ್ರಗತಿಯಿಂದ ಚರಿಸದಿದ್ದಾಗ; ಪ್ರಾಯೇಣ = ಬಹಳವಾಗಿ; ಬ್ರಾಹ್ಮಣ ಕುಲಸ್ಯ ಅನುಕೂಲಃ = ಬ್ರಾಹ್ಮಣ ವರ್ಗಕ್ಕೆ ಶುಭಫಲಪ್ರದವಾದುದು.

ಗುರುಗ್ರಹವು ಒಂದೊಂದು ರಾಶಿಯನ್ನು ಅತಿಕ್ರಮಿಸಲು ಸೌರಮಾನದ ಎರಡೆರಡು ತಿಂಗಳ ಕಾಲ ಹಿಡಿಸುವುದು. ಅಂದರೆ, ಒಮ್ಮೆ ದ್ವಾದಶ ರಾಶಿಗಳನ್ನು ಅತಿಕ್ರಮಿಸಲು ಸೌರಮಾನದ ಎರಡು ವರ್ಷ ಬೇಕಾಗುವುದು. ಈ ಅವಧಿಯನ್ನು ಪರಿವತ್ಸರ ಎಂದು ಇಲ್ಲಿ ಭಾವಿಸಬೇಕು. ಗುರುಗ್ರಹದ ಮುಂದೋಟದ ವೇಗ, ಸೂರ್ಯರಥದ ವೇಗದ ಅರ್ಧದಷ್ಟು ಎಂದಹಾಗಾಯಿತು.

> ತತ ಉಪರಿಷ್ಟಾದ್ಯೋಜನ ದ್ವಯಾತ್ಪ್ರತೀಯಮಾನಃ ಶನೈಶ್ವರ
> ಏಕೈಕಸ್ಮಿನ್ರಾಶೌತ್ರಿಂಶನ್ಮಾಸಾನ್
> ವಿಲಂಬಮಾನಃಸರ್ವಾನೇವಾನುಪರ್ಯೇತಿ ತಾವದ್ಭಿರನುವತ್ಸರೈಃ
> ಪ್ರಾಯೇಣಹಿ ಸರ್ವೇಷಾಮಶಾಂತಿ ಕರಃ ॥೧೬॥

ತತಃ ಉಪರಿಷ್ಟಾತ್ = ಗುರುಗ್ರಹಕ್ಕಿಂತ ಮೇಲೆ; ಯೋಜನದ್ವಯಾತ್ ಪ್ರತೀಯಮಾನಃ = ಎರಡು ಲಕ್ಷಯೋಜನದೆತ್ತರದಲ್ಲಿ ಗುರುತಿಸಲ್ಪಡುವ; ಶನೈಶ್ಚರಃ = ಶನಿಗ್ರಹವು; ಏಕೈಕಸ್ಮಿನ್ ರಾಶೌ = ಒಂದೊಂದು ರಾಶಿಯಲ್ಲಿ; ತ್ರಿಂಶತ್ ಮಾಸಾನ್ ವಿಲಂಬಮಾನಃ = ಮೂರು ಮೂರು ತಿಂಗಳ ಕಾಲ ನಿಧಾನವಾಗಿ ಚರಿಸುತ್ತಾ; ಸರ್ವಾನ್ ಏವ = ಎಲ್ಲಾ ರಾಶಿಗಳನ್ನೂ; ತಾವದ್ಭಿಃ ಅನುವತ್ಸರೈಃ = ಹನ್ನೆರಡು ಅನುವತ್ಸರಗಳಷ್ಟು ಕಾಲದಲ್ಲಿ; ಅನುಪರ್ಯೇತಿ = ಕ್ರಮವಾಗಿ ಅತಿಕ್ರಮಿಸುತ್ತದೆ; ಪ್ರಾಯೇಣ ಹಿ = ಸಾಮಾನ್ಯವಾಗಿ; ಸರ್ವೇಷಾಂ = ಎಲ್ಲರಿಗೂ, ಅಶಾಂತಿಕರಃ = ಪಾಪ ಫಲಗಳನ್ನುಣಿಸುತ್ತಾ ಶಾಂತಿಭಂಗವನ್ನುಂಟು ಮಾಡುವುದು.

ಶನಿಗ್ರಹದ ದೃಷ್ಟಿಯಿಂದ, ಸೌರಮಾನದ ಮೂರು ವರ್ಷಗಳಷ್ಟು ಕಾಲ, ಅನುವತ್ಸರವೆಂಬ ಒಂದು ವರ್ಷವಾಗುವುದು.

ಶನಿಗ್ರಹಕ್ಕೆ 'ಸೌರಿ' ಅಥವಾ ಸೂರ್ಯಪುತ್ರ ಎಂಬ ಹೆಸರುಂಟು. ಆದುದರಿಂದ ಅದು ಸೂರ್ಯಮಂಡಲದಿಂದ ನೇರವಾಗಿ ಸಿಡಿದುಬಂದ ಗ್ರಹ.

ತತಉತ್ತರಸ್ಮಾದೃಷಯ ಏಕಾದಶ ಲಕ್ಷ ಯೋಜನಾನಂತರ
ಉಪಲಭ್ಯಂತೇ ಯ ಏವ ಲೋಕಾನಾಂಶಮನುಭಾವಯಂತೋ
ಭಗವತೋ ವಿಷ್ಣೋರ್ಯತ್ಪರಮಂ ಪದಂ ಪ್ರದಕ್ಷಿಣಂ ಪ್ರಕ್ರಮಂತಿ
॥೧೭॥

ತತಃ ಉತ್ತರಸ್ಮಾತ್ = ಶನಿಗ್ರಹದ ಅನಂತರ; ಋಷಯಃ = ಸಪ್ತಋಷಿಗಳ ಸಾನ್ನಿಧ್ಯವುಳ್ಳ ಏಳು ನಕ್ಷತ್ರಗಳು; ಏಕಾದಶಲಕ್ಷ ಯೋಜನಾನಂತರೇ = ಹನ್ನೊಂದು ಲಕ್ಷ ಯೋಜನದ ಮೇಲೆ; ಉಪಲಭ್ಯಂತೇ = ಕಂಡುಬರುತ್ತವೆ; ಯೇ ಏವ = ಆ ಋಷಿಗಳಾದರೋ; ಲೋಕಾನಾಂ = ಎಲ್ಲಾ ಲೋಕಗಳವರಿಗೆ; ಶಂ ಅನುಭಾವಯಂತಃ = ಶುಭವನ್ನು ಹಾರೈಸುತ್ತಾ; ಭಗವತಃ ವಿಷ್ಣೋಃ = ವಿಷ್ಣುಭಗವಾನನ; ಯತ್ ಪರಮಂಪದಂ = ಯಾವುದು ವೈಕುಂಠ ಸದೃಶ ಸ್ಥಾನವಾಗಿರುವುದೋ ಅಂತಹ ಧ್ರುವ ನಕ್ಷತ್ರವನ್ನು; ಪ್ರದಕ್ಷಿಣಂ ಪ್ರಕ್ರಮಂತಿ = ಪ್ರದಕ್ಷಿಣೆಯಾಗಿ ಬಳಸಿ ಬರುತ್ತಾರೆ.

ಈ ವರ್ಣನೆಯಲ್ಲಿ ಧ್ರುವರಾಯರ ತಪಸ್ಸಿಗೆ ಒಲಿದು ಬಂದ ಶ್ರೀಹರಿಯು ಅವರಿಗೆ, ಒಂದು ಮನುಕಲ್ಪಪರ್ಯಂತ, ಎಂತಹ ಉತ್ತಮ ಸ್ಥಾನವನ್ನು ಕರುಣಿಸಿರುವನೆಂಬುದು ಗಮನಾರ್ಹ.

ಸಪ್ತಋಷಿ ಮಂಡಲವೂ ಅದರ ಸಮೀಪದ ತಾರೆಗಳೂ ಪ್ರತಿನಿತ್ಯ ಧ್ರುವಸ್ಥಾನಕ್ಕೆ ಪ್ರದಕ್ಷಿಣೆಯಾಗಿ ಬರುವುದನ್ನು ಗಮನಿಸಿದರೆ, ಇಡೀ ಕಾಲಚಕ್ರಗತ ತೇಜಃ ಕಾಯಗಳು,

ಆ ಕಾಲಚಕ್ರವನ್ನು ನಿಯಂತ್ರಿಸುವ ಶಿಂಶುಮಾರಮೂರ್ತಿಯ ಪ್ರಭಾವದಿಂದ, ಮೇರುಕೇಂದ್ರದ ಸುತ್ತಲೂ ಪ್ರತಿನಿತ್ಯ ಪ್ರದಕ್ಷಿಣೆಯಾಗಿ ಬರುವುದನ್ನು ಪ್ರತ್ಯಕ್ಷ ಪ್ರಮಾಣದಿಂದ ತಿಳಿಯಬಹುದು. ಇದು ನಿಜವಾದ ವಿಜ್ಞಾನವೋ, ಆಧುನಿಕರ ಊಹೆಗಳ ವಿಜ್ಞಾನವೋ ಬಲ್ಲವರು ಹೇಳಲಿ.

ಶಿಂಶುಮಾರಮೂರ್ತಿಯ ಪ್ರಭಾವವನ್ನು ಕುರಿತು ಶ್ರೀಮಧ್ವಾಚಾರ್ಯರು ಬ್ರಹ್ಮಾಂಡ ಪುರಾಣದ ಈ ಶ್ಲೋಕವನ್ನು ಉದ್ಧರಿಸಿ ಹೇಳಿದ್ದಾರೆ.

**ಜ್ಞಾನಾನಂದಾತ್ಮನೋ ವಿಷ್ಣೋಃ ಶಿಂಶುಮಾರವಪುಷ್ಯಥ ।**
**ಊರ್ಧ್ವಲೋಕೇಷು ಸವ್ಯಾಪ್ತ ಆದಿತ್ಯಾದ್ಯಾಸ್ತದಾಶ್ರಯಾಃ ॥**

**"ಶ್ರೀಕೃಷ್ಣಾರ್ಪಣಮಸ್ತು"**

# ಶ್ರೀಮದ್ಭಾಗವತ
# ಅಧ್ಯಾಯ – ಇಪ್ಪತ್ಮೂರು
# ಶಿಂಶುಮಾರ ಪ್ರಭಾವಃ

ಅಥ ತಸ್ಮಾತ್ಪರತಸ್ತ್ರಯೋದಶ ಲಕ್ಷ ಯೋಜನಾಂತರತೋ
ಯತ್ತದ್ವಿಷ್ಣೋಃ ಪರಮಂಪದಮಭಿವದಂತಿ ಯತ್ರಹಮಹಾಭಾಗವತೋ
ಧ್ರುವ ಔತ್ತಾನಪಾದಿರಗ್ನಿನೇಂದ್ರೇಣ ಪ್ರಜಾಪತಿನಾ ಕಶ್ಯಪೇನ
ಧರ್ಮೇಣಚ ಸಮಕಾಲಯುಗ್ಭಿಃಸಬಹುಮಾನಂ ದಕ್ಷಿಣತಃ ಕ್ರಿಯಮಾಣ
ಇದಾನೀಮಪಿ ಕಲ್ಪ ಜೀವನಾಮಾಜೀವ್ಯ ಉಪಾಸ್ತೇ ತಸ್ಯೇಹಾನುಭಾವ
ಉಪವರ್ಣಿತಃ ॥೧॥

ಅಥತಸ್ಮಾತ್ ಪರತಃ = ಸಪ್ತಋಷಿ ಮಂಡಲದ ಮೇಲೆ; ತ್ರಯೋದಶ ಲಕ್ಷ ಯೋಜನಾಂತರತಃ = ಹದಿಮೂರು ಲಕ್ಷ ಯೋಜನದಂತರದಲ್ಲಿ; ಯತ್ = ಯಾವುದನ್ನು; ಪರಮಂ ಪದಂ ಅಭಿವದಂತಿ = ಮಹಾವಿಷ್ಣುವಿನ ವೈಕುಂಠ ಸದೃಶ ಸ್ಥಾನವೆಂದು ಹೇಳುವರೋ; ತತ್ = ಅದು ಇರತಕ್ಕದ್ದಾಗಿದೆ; ಯತ್ರ ಹ = ಆ ದಿವ್ಯಸ್ಥಾನದಲ್ಲಿಯಾದರೋ; ಮಹಾ ಭಾಗವತಃ = ಪರಮಭಾಗವತರಾದ; ಔತ್ತಾನಪಾದಿಃ ಧ್ರುವಃ = ಉತ್ತಾನಪಾದರಾಜನ ಪುತ್ರರಾದ ಧ್ರುವರಾಯರು; ಸಮಕಾಲಯುಗ್ಭಿಃ = ಈ ತಮ್ಮ ಮನ್ವಂತರಾವಧಿಗೆ ಸೇರಿದವರಾದ; ಅಗ್ನಿನಾ = ಅಗ್ನಿದೇವನಿಂದ; ಇಂದ್ರೇಣ = ದೇವೇಂದ್ರನಿಂದ; ಪ್ರಜಾಪತಿನಾ = ಪ್ರಜಾಪತಿಯಿಂದ; ಕಶ್ಯಪೇನ = ಕಶ್ಯಪರಿಂದ; ಧರ್ಮೇಣ ಚ = ಧರ್ಮ ದೇವತೆಯಿಂದಲೂ; ಸಬಹುಮಾನಂ = ಗೌರವ ಪುರಸ್ಸರವಾಗಿ; ದಕ್ಷಿಣತಃ ಕ್ರಿಯಮಾಣಃ = ಪ್ರದಕ್ಷಿಣೆ ನಮಸ್ಕಾರಗಳನ್ನು ಕೈಗೊಳ್ಳುತ್ತಾ; ಇದಾನೀಂ ಅಪಿ = ಈಗಲೂ ಕೂಡ; ಕಲ್ಪಜೀವಿನಾಂ ಆಜೀವ್ಯಃ = ಈ ಕಲ್ಪದ ಜೀವಿಗಳಿಗೆ ಆಶ್ರಯದಾತರಾಗಿ; ಉಪಾಸ್ತೇ = ಇದ್ದಾರೆ; ತಸ್ಯ = ಆ ಧ್ರುವರಾಯರ; ಅನುಭಾವಃ = ಮಹಾತ್ಮ್ಯವು; ಇಹ ಉಪವರ್ಣಿತಃ = ಈ ಹಿಂದೆಯೇ ವರ್ಣಿತವಾಗಿದೆ. (ನಾಲ್ಕನೇ ಸ್ಕಂಧದಲ್ಲಿ).

ತಾರತಮ್ಯದಲ್ಲಿ ಇಂದ್ರಾದಿಗಳು ಧ್ರುವರಾಯರಿಗಿಂತ ದೊಡ್ಡವರು. ಆದರೆ, ನಿಜಭಗವದ್ಭಕ್ತರಲ್ಲಿ ಭಗವಂತನ ವಿಶೇಷ ಸನ್ನಿಧಾನವಿರುವುದನ್ನು ಗಮನಿಸಿ ಗೌರವವನ್ನು ಸಲ್ಲಿಸುತ್ತಾರೆ.

ಸಹಿ ಸರ್ವೇಷಾಂ
ಜ್ಯೋತಿರ್ಗಣಾನಾಂಗ್ರಹನಕ್ಷತ್ರಾದೀನಾಮನಿಮಿಷೇಣಾವ್ಯಕ್ತ ರಂಹಸಾ
ಭಗವತಾ ಕಾಲೇನ ಭ್ರಾಮ್ಯಮಾಣಾನಾಂ ಸ್ಥಾಣುರಿವಾವಷ್ಟಂಭ
ಈಶ್ವರೇಣ ವಿಹಿತಃ ಶಶ್ವದವಭಾಸತೇ ॥೨॥

ಸಃಹಿ = ಆ ಧ್ರುವ ಸ್ಥಾನೀಯರಾದ ಧ್ರುವರಾಯರು; ಅವ್ಯಕ್ತರಂಹಸಾ = ಅಗೋಚರ ಶಕ್ತಿಯಿಂದ; ಅನಿಮಿಷೇಣ = ಕಣ್ಣುರೆಪ್ಪೆ ಹಾಕದೆ ಸದಾ ಎಚ್ಚೆತ್ತಿರುವ; ಭಗವತಾ ಕಾಲೇನ = ಕಾಲರೂಪೀ ಭಗವಂತನಿಂದ; ಭ್ರಾಮ್ಯಮಾಣಾನಾಂ = ತಿರುಗಿಸಲ್ಪಡುತ್ತಿರುವ; ಸರ್ವೇಷಾಂ ಜ್ಯೋತಿರ್ಗಣಾನಾಂ = ಎಲ್ಲಾ ತಾರೆಗಳಿಗೂ; ಗ್ರಹನಕ್ಷತ್ರಾದೀನಾಂ = ಗ್ರಹ ನಕ್ಷತ್ರಾದಿಗಳಿಗೂ; ಅವಷ್ಟಂಭಸ್ಥಾಣುರಿವ = ಆಧಾರ ಸ್ತಂಭದಂತೆ; ಈಶ್ವರೇಣವಿಹಿತಃ = ಸರ್ವೇಶ್ವರನಿಂದ ನಿಯಮಿತರಾಗಿ; ಶಶ್ವತ್ = ಏಕಪ್ರಕಾರವಾಗಿ; ಅವಭಾವಸತೇ = ಪ್ರಕಾಶಮಾನರಾಗಿರುವರು.

ಯಥಾ ಮೇಢೀಸ್ತಂಭ ಆಕ್ರಮಣ ಪಶವಃ ಸಂಯೋಜಿತಾಸ್ತ್ರೀಭಿಃ ತ್ರಿಭಿಃ
ಸವನ್ಯೈರ್ಯಥಾಸ್ಥಾನಂ ಮಂಡಲಾನಿಚರಂತ್ಯೇವಂ ಭಗಣಾಗ್ರಹಾದಯ
ಏತ ಸ್ಮಿನ್ನಂತರ್ಬಹಿಯೋರ್ಗೇನ ಕಾಲಚಕ್ರ ಆಯೋಜಿತಾ
ಧ್ರುವಮೇವಾವಲಂಬ್ಯ ವಾಯುನೋದೀರ್ಯಮಾಣಾ ಆಕಲ್ಪಾಂತಂ
ಪರಿಚಂಕ್ರಮಂತಿ ನಭಸಿ ಯಥಾ ಮೇಘಾಃ
ಶ್ಯೇನಾದಯೋವಾಯುವಶಾಃ ಕರ್ಮಸಾರಥಯಃ ಪರಿವರ್ತಂತೇ ಏವಂ
ಜ್ಯೋತಿರ್ಗಣಾಃ ಪ್ರಕೃತಿಪುರುಷಸಂಯೋಗಾನುಗೃಹೀತಾಃ
ಕರ್ಮನಿರ್ಮಿತಗತಯೋ ಭುವಿ ನ ಪತಂತಿ ॥೩॥

ಯಥಾ = ಯಾವ ರೀತಿಯಾಗಿ; ಮೇಢೀಸ್ತಂಭ ಆಕ್ರಮಣ ಪಶವಃ = ಕಣದ ಮಧ್ಯೆ ನಟ್ಟಿರುವ ಕಂಭವನ್ನು ಸುತ್ತುವರಿಯುವ ಎತ್ತುಗಳು; ತ್ರಿಭಿಃ ತ್ರಿಭಿಃ ಸಂಯೋಜಿತಾನಿ = ಮೂರು ಮೂರನ್ನು ಜೊತೆಯಾಗಿ ಕಟ್ಟಿರಲು; ಸವನ್ಯೈಃ = ಸರದಿಯ ಪ್ರಕಾರ; ಯಥಾಸ್ಥಾನಂ ಮಂಡಲಾನಿ ಚರಂತಿ = ತಮ್ಮ ತಮ್ಮ ಪಥಗಳಲ್ಲಿ ಸುತ್ತಿ ಸುತ್ತಿಬರುವಂತೆ; ಏವಂ = ಅದೇ ರೀತಿಯಾಗಿ; ಭಗಣಾಃ = ನಕ್ಷತ್ರಗಳ ಗುಂಪುಗಳು; ಗ್ರಹಾದಯಃ = ಗ್ರಹಗಳು, ತಾರೆಗಳು ಮೊದಲಾದವು; ಕಾಲಚಕ್ರೇ ಆಯೋಜಿತಾಃ = ಕಾಲಚಕ್ರದ ಪಥಗಳಲ್ಲಿ ನಿಯುಕ್ತವಾಗಿ; ಏತಸ್ಮಿನ್ ಈ ಕಾಲಚಕ್ರದಲ್ಲಿ; ಅಂತರ್ಬಹಿಯೋರ್ಗೇನ = ಒಳಗೊಳಗೆ, ಹೊರಗೆ ಹೊರಗೆ ಸ್ಥಾನಗಳನ್ನು ಹೊಂದಿ; ಧ್ರುವಮೇವ ಅವಲಂಬ್ಯ = ಧ್ರುವ ನಕ್ಷತ್ರವನ್ನೇ ಅವಲಂಬಿಸಿ;

ವಾಯುನಾ ಉದೀರ್ಯಮಾಣಾಃ =ವಾಯುಪಾಶಗಳಿಂದ ಚಾಲಿತಗಳಾಗಿ; ಆಕಲ್ಪಾಂತಂ = ಬ್ರಹ್ಮದೇವರ ದಿನಕಲ್ಪ ಮುಗಿಯುವವರೆಗೆ; ಪರಿಚಂಕ್ರಮಂತಿ = ಸುತ್ತುತ್ತಿರುತ್ತವೆ; ನಭಸಿ = ಆಕಾಶದಲ್ಲಿ; ಮೇಘಾಃ ಯಥಾ = ಮೇಘಗಳಂತೆ; ವಾಯುವಶಾಃ ಶ್ಯೇನಾದಯಃ = ಗಾಳಿಯು ತಳ್ಳಿದಂತೆ ಸುಳಿದಾಡುವ ಗಿಡಗ, ಹದ್ದು ಮೊದಲಾದ ಪಕ್ಷಿಗಳು; ಕರ್ಮಸಾರಥಯಃ = ತಮ್ಮ ತಮ್ಮ ಕಾರ್ಯಗಳಿಗಾಗಿ; ಯಥಾ ಪರಿವರ್ತಂತೇ = ಹೇಗೆ ಸುತ್ತುವುವೋ; ಏವಂ = ಅದೇ ರೀತಿಯಾಗಿ; ಜ್ಯೋತಿರ್ಗಣಾಃ = ತೇಜಃಕಾಯಗಳು; ಪ್ರಕೃತಿಪುರುಷ ಸಂಯೋಗ ಅನುಗೃಹೀತಾಃ = ಪ್ರಕೃತ್ಯಭಿಮಾನಿ ಲಕ್ಷ್ಮೀದೇವಿಯ ಮತ್ತು ಪುರುಷ ಪ್ರವರನಾದ ಶ್ರೀಹರಿಯ ಸಹವರ್ತನೆಯ ಅನುಗ್ರಹಬಲದಿಂದ; ಕರ್ಮನಿರ್ಮಿತಗತಯಃ = ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿ; ಭುವಿ ನ ಪತಂತಿ = ಪಥಗಳನ್ನು ಬಿಟ್ಟುಕೆಳಗೆ ಬಿದ್ದುಹೋಗುವುದಿಲ್ಲ.

ಮುಖ್ಯಾಂಶಗಳು – ಕೇವಲ ಜಡಪ್ರಕೃತಿಯ ಪರಿಣಾಮಗಳಿಂದಲೇ ಜಗತ್ತಿನ ವ್ಯಾಪಾರಗಳೆಲ್ಲಾ ನಡೆಯುತ್ತಿರುವುವೆಂದು ಆಧುನಿಕ ವಿಜ್ಞಾನಿಗಳಲ್ಲಿ ಅನೇಕರು ತಿಳಿದಿರುವರು. ಅದು, ಹೇಗೆ ಸಾಧ್ಯ ಎಂದು ಕೇಳಿದರೆ ಅವರಿಂದ ಉತ್ತರ ಸಿಗುವುದಿಲ್ಲ. "ನಮಗೆ ಕಂಡುಬಂದಷ್ಟನ್ನು ಮಾತ್ರ ನಾವು ಸರಿಯೆಂದು ಒಪ್ಪುತ್ತೇವೆ. ಕಂಡುಬಾರದ ವಿಚಾರಗಳನ್ನು ಹೇಳುವ ಪುರಾಣಾದಿಗಳನ್ನು ನಾವು ನಂಬುವುದಿಲ್ಲ" ಎನ್ನುತ್ತಾರೆ, ಅವರು ವೈಜ್ಞಾನಿಕವಾಗಿ ಕಂಡುಹಿಡಿದ ವಿಚಾರಗಳೇ ಪುರಾಣಾದಿಗಳಲ್ಲಿ ಕಂಡು ಬರುತ್ತಿದ್ದರೂ, ಅವುಗಳ ಕಡೆಗೆ ಅವರು ಗಮನಹರಿಸುವುದಿಲ್ಲ. ಭಾರತದ ಋಷಿಮುನಿಗಳಿಗೆ ಅನುಭವವೇದ್ಯವಾಗಿದ್ದು, ಈಗಲೂ ಅನುಭವಕ್ಕೆ ತಂದುಕೊಳ್ಳಬಹುದಾದ ವಿಷಯಗಳನ್ನು ಪರೀಕ್ಷಿಸದೆ ನಿರಾಕರಿಸುವುದು ಕೇವಲ ಮೊಂಡುತನ.

ದೇಹದ ಜಡಯಂತ್ರಗಳನ್ನು ನಿಯಂತ್ರಿಸಬಲ್ಲ ಮನಸ್ಸೆಂಬ ಸೂಕ್ಷ್ಮತಂತ್ರದ ವಿಚಾರವನ್ನೇ ಸರಿಯಾಗಿ ತಿಳಿಯಲಾರದ ಅವರು ವೇದಗಳನ್ನೂ ಭಗವಂತನನ್ನೂ ನಿರಾಕರಿಸುವ ನಾಸ್ತಿಕರು.

ಜ್ಞಾನವೇ ಸ್ವರೂಪವಾಗಿ ಉಳ್ಳ ಚೇತನ ವಸ್ತುವಿನ ಸಂಕಲ್ಪದಿಂದ ಮಾತ್ರ ಜಡಕಾರ್ಯಗಳು ನಡೆಯುವುವೆಂದು ಬುದ್ಧಿವಂತರಾದ ಯಾರಾದರೂ ಒಪ್ಪಲೇಬೇಕು. ಲಕ್ಷ್ಮೀನಾರಾಯಣರ ಪ್ರೇರಣೆಯಿಂದ ಕಾಲಚಕ್ರಗತ ತೇಜೋವಸ್ತುಗಳು ಭ್ರಮಿಸುತ್ತಿರುವುವು ಎಂದು ಇಲ್ಲಿ ಹೇಳಿರುವುದನ್ನು ನೆನಪಿನಲ್ಲಿಡಬೇಕು.

ಕಣದಲ್ಲಿ ಧಾನ್ಯಗಳನ್ನು ವಿಂಗಡಿಸಲು ಎತ್ತುಗಳನ್ನು ಕಟ್ಟಿ ತುಳಿಸುವಾಗ, ಕಂಭಕ್ಕೆ ಸಮೀಪವಾದ ಎತ್ತಿನ ನಡಿಗೆನಿಧಾನ ಮತ್ತು ಪರಿಕ್ರಮಣ ದೂರ ಬಹಳ ಕಡಿಮೆ.

ಎರಡನೇ ಎತ್ತಿನ ನಡಿಗೆಯ ವೇಗ ಸ್ವಲ್ಪ ಹೆಚ್ಚು, ಪರಿಕ್ರಮಣ ದೂರವೂ ಹೆಚ್ಚು. ಮೂರನೇ ಎತ್ತಿನ ನಡಿಗೆಯ ವೇಗ ಮತ್ತು ಪರಿಕ್ರಮಣ ದೂರಗಳು ಇನ್ನೂ ಹೆಚ್ಚು. ಇದರಂತೆ ಗ್ರಹ ನಕ್ಷತ್ರ ತಾರೆಗಳ ವೇಗ ಮತ್ತು ದೂರಗಳು ಹೆಚ್ಚು ಕಡಿಮೆಯಾಗಿರುವುವೆಂದು ಊಹಿಸಬೇಕು.

ಗುರುತ್ವಾಕರ್ಷಣದ ನಿಯಮಗಳನ್ನು ಗುರುತಿಸಿದ ನ್ಯೂಟನ್ನನಾಗಲೀ, ಸಾಪೇಕ್ಷವಾದವನ್ನು ಮಂಡಿಸಿದ ಐನ್‌ಸ್ಟೀನನಾಗಲೀ ದೈವೀಶಕ್ತಿಯನ್ನು ತೆಗಳಿದವರಲ್ಲ. ಅವರು ಕಂಡಷ್ಟನ್ನೂ, ಇನ್ನೂ ಹೆಚ್ಚಿನ ವಿಷಯಗಳನ್ನೂ ನಾವು ಪುರಾಣಾದಿ ವೈದಿಕ ಗ್ರಂಥಗಳಲ್ಲಿ ನೋಡಬಹುದು.

ಧ್ರುವ ನಕ್ಷತ್ರದಿಂದ ಕೆಳಗಿನ ಸ್ಥೂಲಕಾಯಗಳೆಲ್ಲಾ ಭೂಮಂಡಲದ ಕಡೆಗೆ ಸೆಳೆಯಲ್ಪಡುವುವೆಂದೂ, ಕಾಲನಾಮಕ ಪರಮಾತ್ಮನ ಪ್ರೇರಣೆಗೊಳಗಾಗಿ ನಿರಂತರ ತಿರುಗುವ ಅವು ಕೆಳಗೆ ಬೀಳದೆ ಇರುವುವೆಂದೂ ಇಲ್ಲಿ ಹೇಳಿದ್ದಾರೆ.

ಸ್ವರ್ಗಾದಿ ಲೋಕಗಳಿಗೆ ಸಂಬಂಧಿಸಿದ ವಸ್ತುಗಳ ಗುರುತ್ವಾಕರ್ಷಣೆಯು ಮೇಲ್ಮುಖವಾಗಿ ವೈಕುಂಠದ ಕಡೆಗಿರುವುವೆಂದೂ ಶಾಸ್ತ್ರಗಳು ಹೇಳುತ್ತವೆ. ಸ್ವರ್ಗಾದಿ ಲೋಕಗಳ ಜೀವಿಗಳ ತಲೆಗಳು ತಲೆಕೆಳಗಾಗಿರುವಂತೆ ನಮಗೆ ಕಾಣುವುವು. ಕಾಣುವ ಸಾಮರ್ಥ್ಯವಿದ್ದರೆ!

**ಕೇಚನೈತಜ್ಜ್ಯೋತಿರನೀಕಂ ಶಿಂಶುಮಾರ ಸಂಸ್ಥಾನೇನ ಭಗವತೋ**
**ವಾಸುದೇವಸ್ಯಯೋಗಧಾರಣಾಯಾಮನುವರ್ಣಯಂತಿ ।।೪।।**

ಕೇಚಿತ್ = ಕೆಲವರು ವಿದ್ವಾಂಸರು; ಏತತ್ ಜ್ಯೋತಿರನೀಕಂ = ಜ್ಯೋತೀರ್ಮಯಗಳಾದ ಈ ಆಕಾಶಕಾಯಗಳ ಸಮೂಹವನ್ನು; ಶಿಂಶುಮಾರ ಸಂಸ್ಥಾನೇನ = ಶಿಂಶುಮಾರ ರೂಪೀ ಭಗವಂತನಲ್ಲಿ ಸ್ಥಾನಗಳನ್ನು ಹೊಂದಿರುವುದರಿಂದ; ಭಗವತಃ ವಾಸುದೇವಸ್ಯ = ವಾಸುದೇವರೂಪೀ ಭಗವಂತನ; ಯೋಗಧಾರಣಾಯಾಂ = ಸಾಮರ್ಥ್ಯ ವಿಶೇಷ ಸಂಬಂಧವುಳ್ಳವುಗಳೆಂದು; ಅನುವರ್ಣಯಂತಿ = ಕ್ರಮಬದ್ಧವಾಗಿ ವರ್ಣಿಸುತ್ತಾರೆ.

ಭಗವಂತನ ರೂಪರೂಪಾಂತರಗಳಲ್ಲಿ ಪರಸ್ಪರ ಯಾವ ಭೇದವೂ ಇಲ್ಲ. ಆದರೆ, ಬೇರೆ ಬೇರೆ ಕಾರ್ಯಾಚರಣೆಗಳ ದೃಷ್ಟಿಯಿಂದ ಭೇದವಿದ್ದಂತೆ ತೋರಿಕೊಳ್ಳುವುದು ಆ ಭಗವಂತನ ಒಂದು ವೈಶಿಷ್ಟ್ಯ. ಇದನ್ನೇ ವಿಶೇಷವೆಂಬ ಲಕ್ಷಣವೆಂದು ಶ್ರೀಮಧ್ವಾಚಾರ್ಯರು ಪರಿಗಣಿಸಿದ್ದಾರೆ.

ವೃಶ್ಚಿಕರೂಪದಿಂದ ಕಾಲಚಕ್ರಗತಿಯನ್ನು ನಿಯಂತ್ರಿಸುತ್ತಿರುವ ವಾಸುದೇವ ಮೂರ್ತಿಯು ಜ್ಯೋತಿರ್ಮಂಡಲದಲ್ಲಿ ಸರ್ವತ್ರ ವ್ಯಾಪ್ತನಾಗಿದ್ದಾನೆ. ನಿಯಂತ್ರಿಸುವವನೂ ಅವನೇ ; ನಿಯಂತ್ರಣಕ್ಕೆ ಒಳಪಟ್ಟಂತೆ ಗ್ರಹನಕ್ಷತ್ರಾದಿಗಳಲ್ಲಿದ್ದು, ತಾನು ಚಲಿಸಿ ಅವುಗಳಿಗೆ ಚಲನೆಯನ್ನು ಕೊಡುವವನೂ ಅವನೇ.

ಹೀಗೆ ಸರ್ವತ್ರ ಇರುವ ಏಕೈಕ ಪುರುಷನ ವಿವಿಧ ವ್ಯಾಪಾರಗಳಿಂದಲೇ ಭಿನ್ನಭಿನ್ನಗಳಾದ ಜಡವಸ್ತುಗಳೂ, ತಮ್ಮತಮ್ಮಲ್ಲಿ ವೈವಿಧ್ಯಗಳುಳ್ಳ ದೇವತಾ ಪುರುಷರೂ, ಒಂದುಗೂಡಿ ಜಗತ್ತಿನ ಸ್ಥಿತಿಗತಿಗಳಿಗೆ ಕಾರಣರಾಗಿದ್ದಾರೆ.

ವಿಜ್ಞಾನಿಗಳೇ, ಇಲ್ಲಿದೆ ನೋಡಿ, ಸಂಘಟಕಶಕ್ತಿ 'Co-ordinating factor'.

ಶಿಂಶುಮಾರಮೂರ್ತಿಯು ತನ್ನ ಅವಯವಗಳಲ್ಲಿ ಗ್ರಹನಕ್ಷತ್ರಾದಿಗಳ ಅಭಿಮಾನ ದೇವತೆಗಳಿಗೆ ಅಂಶತ್ವೇನ ಸ್ಥಾನಮಾನಗಳನ್ನು ಕೊಟ್ಟು, ಅವರಿಗೂ ಆಕಾಶಕಾಯಗಳಿಗೂ ಶಕ್ತಿಧಾರಾ ಸಂಬಂಧಗಳನ್ನು ಕಲ್ಪಿಸಿ, ಆ ಕಾಯಗಳು ಕ್ರಮಬದ್ಧವಾಗಿ ಚರಿಸುವಂತೆ ಮಾಡುತ್ತಾನೆ. ಇದನ್ನೊಂದು ಬಗೆಯ 'Remote Control' (ದೂರವಸ್ತು ನಿಯಂತ್ರಣ) ಎನ್ನಬಹುದು.

**ಯಸ್ಯಪುಚ್ಛಾಗ್ರೇರ್ವಾಕ್ ಶಿರಸಃ ಕುಂಡಲೀಭೂತ ದೇಹಸ್ಯ ಧ್ರುವ**
**ಉಪಕಲ್ಪಿತಸ್ತಸ್ಯ ಲಾಂಗೂಲೇ ಪ್ರಜಾಪತಿರಗ್ನಿರಿಂದ್ರೋ ಧರ್ಮ ಇತಿ**
**ಪುಚ್ಛಮೂಲೇ ಧಾತಾವಿಧಾತಾ ಚ ಕಟ್ಯಾಂ ಸಪ್ತರ್ಷಯಃ ।**
**ತಸ್ಯದಕ್ಷಿಣಾವರ್ತ ಕುಂಡಲೀಭೂತ ಶರೀರಸ್ಯ ಯಾನ್ಯುದಗಯನಾನಿ**
**ದಕ್ಷಿಣಪಾರ್ಶ್ವೇತು ನಕ್ಷತ್ರಾಣ್ಯುಪಕಲ್ಪಯಂತಿ ದಕ್ಷಿಣಾಯನಾನಿ ತು**
**ಸವ್ಯೇ। ಯಥಾ ಶಿಂಶುಮಾರಸ್ಯ ಕುಂಡಲಾಭೋಗ**
**ಸನ್ನಿವೇಶಸ್ಯಪಾರ್ಶ್ವಯೋರುಭಯೋರಪ್ಯವಯವಾಃ ಸಮಸಂಖ್ಯಾ**
**ಭವಂತಿ । ಪೃಷ್ಠೇತ್ವಜವೀಧೀ ಆಕಾಶಗಂಗಾಚೋದರತಃ ।।೫।।**

= ತಲೆಕೆಳಗಾಗಿ ನಿಂತಿರುವ, ಉಂಗುರಗಳಂತೆ ದೇಹಭಾಗಗಳುಳ್ಳ ಶಿಂಶುಮಾರಮೂರ್ತಿಯ ಬಾಲದ ತುದಿಯಲ್ಲಿ ಧ್ರುವಸ್ಥಾನ; ಬಾಲದ (ಕೊಂಡಿಯ) ಭಾಗದಲ್ಲಿ ಪ್ರಜಾಪತಿ, ಇಂದ್ರ, ಅಗ್ನಿ ಮತ್ತು ಧರ್ಮದೇವತೆ; ಕೊಂಡಿಯ ಬುಡಭಾಗದಲ್ಲಿ ಧಾತಾ ಮತ್ತು ವಿಧಾತಾ; ಕೊಂಡಿಗಳು ಪ್ರಾರಂಭವಾಗುವ ಕಟಿ ಪ್ರದೇಶದಲ್ಲಿ ಸಪ್ತಋಷಿಗಳು. ಉಂಗುರಗಳಂತೆ ಇರುವ ಬಲಸುತ್ತಿನ ದೇಹದ ಬಲಭಾಗದಲ್ಲಿ ಉತ್ತರಾಯಣಕ್ಕೆ ಸಂಬಂಧಿಸಿದ ನಕ್ಷತ್ರಗಳು; ಎಡಭಾಗದಲ್ಲಿ ದಕ್ಷಿಣಾಯನಕ್ಕೆ ಸಂಬಂಧಿಸಿದ ನಕ್ಷತ್ರಗಳು; ಉಂಗುರಾಕಾರಗಳ

ಸಂಖ್ಯೆಗಳಿಗನುಗುಣವಾಗಿ ಉಭಯಪಾರ್ಶ್ವಗಳಲ್ಲಿ ಅವಯುವಗಳು ಸಮಸಂಖ್ಯಾಕಗಳಾಗಿರುತ್ತವೆ. ಬೆನ್ನಿನ ಭಾಗದಲ್ಲಿ ಅಜವೀಥಿಯ ಸ್ಥಾನ; ಉದರ ಭಾಗವಲ್ಲಿ ಆಕಾಶಗಂಗಾ ದೇವತೆಯ ಸ್ಥಾನ.

ಇಲ್ಲಿ ಹೇಳಿದ ದೇವತಾಂಶರು, ತಮತಮಗೆ ಸಂಬಂಧಿಸಿದ ತಾರೆಗಳ ಮತ್ತು ನಕ್ಷತ್ರಗಳ ಕಾರ್ಯಗಳು ತಮಗೆ ಆಧಾರಭೂತನಾದ ಶಿಂಶುಮಾರಮೂರ್ತಿಯೇ ನಡೆಸುವುದನ್ನು ನೋಡುತ್ತಾ, ಆ ಸ್ವಾಮಿಯ ಬಿಂಬಿಕಾರ್ಯದರ್ಶನದಿಂದ ಸ್ವರೂಪಾನಂದಭರಿತರಾಗಿ ನಲಿಯುವರು.

ಅಶ್ವಿನಿ, ಭರಣಿ ಮೊದಲಾದ 27 ಗುಂಪಿಗೆ ಸೇರಿದುವು ನಕ್ಷತ್ರಗಳು. ಉಳಿದವು ಸಾಮಾನ್ಯವಾಗಿ ತಾರೆಗಳು. ಆಕಾಶಗಂಗೆ ಎಂಬ ನಿಬಿಡವಾದ ನಕ್ಷತ್ರಗಳ ಪಟ್ಟಿಯು (Milky way belt) ತಾರೆಗಳ ಗುಂಪಿಗೆ ಸೇರಿದುದು. ಅವುಗಳಲ್ಲಿ ಗಂಗಾದೇವಿಯ ಸಾನ್ನಿಧ್ಯವಿದ್ದು ಲೋಕದ ಜನರಿಗೆ ಆಪ್ಯಾಯನಕಾರಿಯಾಗಿರುವುದು.

> ಪುನರ್ವಸು ಪುಷ್ಯೌದಕ್ಷಿಣ ವಾಮಯೋಃ
> ಶ್ರೋಣಯೋರಾರ್ದ್ರಾಶ್ಲೇಷೇಚ ದಕ್ಷಿಣವಾಮಯೋಃ ಪಶ್ಚಿಮಯೋಃ
> ಪಾದಯೋರಭಿಜಿದುತ್ತರಾಷಾಢೇ ದಕ್ಷಿಣ
> ವಾಮಯೋರ್ನಾಸಿಕಯೋರ್ಯಥಾಸಂಖ್ಯಂ ಶ್ರವಣ ಪೂರ್ವಾಷಾಢೇ
> ದಕ್ಷಿಣ ವಾಮಯೋರ್ಲೋಚನಯೋರ್ಧನಿಷ್ಠಾ ಮೂಲಂ ಚ ದಕ್ಷಿಣ
> ವಾಮಯೋಃ ಕರ್ಣಯೋರ್ಮಘಾದೀನ್ಯಷ್ಟನಕ್ಷತ್ರಾಣಿ ದಕ್ಷಿಣಾಯನಾನಿ
> ವಾಮಪಾರ್ಶ್ವ ವಂಕ್ರಿಷುಯುಂಜೀತ ತಥೈವ
> ಮೃಗಶೀರ್ಷಾದೀನ್ಯುದಗಯನಾನಿ ದಕ್ಷಿಣಪಾರ್ಶ್ವ ವಂಕ್ರಿಷು
> ಪ್ರಾತಿಲೋಮ್ಯೇನ ಪ್ರಯುಂಜೀತ ಶತಭಿಷಾ ಜ್ಯೇಷ್ಠೇ
> ಸ್ಕಂಧಯೋರ್ದಕ್ಷಿಣವಾಮಯೋರ್ನ್ಯಸೇತ್ ॥೬॥

= ಸೊಂಟದ ಬಲ ಎಡಭಾಗಗಳಲ್ಲಿ ಪುನರ್ವಸು, ಪುಷ್ಯಾ ನಕ್ಷತ್ರಗಳು; ಬಲಗಡೆ ಎಡಗಡೆಯ ಹಿಂಬದಿಯ ಪಾದಗಳಲ್ಲಿ ಆರ್ದ್ರಾ ಮತ್ತು ಆಶ್ಲೇಷಾ ನಕ್ಷತ್ರಗಳು; ಬಲ ಎಡಭಾಗಗಳ ಮೂಗಿನ ಹೊಳ್ಳೆಗಳಲ್ಲಿ ಅಭಿಜಿತ್ ಮತ್ತು ಉತ್ತರಾಷಾಢಾ; ಸಂಖ್ಯಾನುಗುಣವಾಗಿ ಬಲ ಎಡ ಕಣ್ಣುಗಳಲ್ಲಿ ಶ್ರವಣ ಮತ್ತು ಪೂರ್ವಾಷಾಢಾ; ಬಲ ಎಡ ಕಿವಿಗಳಲ್ಲಿ ಧನಿಷ್ಠಾ ಮತ್ತು ಮೂಲಾ ನಕ್ಷತ್ರಗಳು; ದಕ್ಷಿಣಾಯನಕ್ಕೆ ಸಂಬಂಧಪಟ್ಟ ಮಘಾ ಮೊದಲಾದ ಎಂಟು ನಕ್ಷತ್ರಗಳು ಎಡಪಕ್ಕೆಯಲ್ಲಿರುವುವೆಂದು ಭಾವಿಸಬೇಕು. ಅದೇ ರೀತಿಯಾಗಿ ಮೃಗಶಿರಾ ಮೊದಲಾದ ಉತ್ತರಾಯಣ ಸಂಬಂಧವುಳ್ಳ

ನಕ್ಷತ್ರಗಳನ್ನು ಬಲ ಪಕ್ಕೆಯಲ್ಲಿ ಆರೋಹಣ ಕ್ರಮದಿಂದ ಭಾವಿಸಬೇಕು. ಕುತ್ತಿಗೆಯ ಬಲ ಎಡ ಭಾಗಗಳಲ್ಲಿ ಶತಭಿಷಾ ಮತ್ತು ಜ್ಯೇಷ್ಠಾ ನಕ್ಷತ್ರಗಳನ್ನು ಗುರುತಿಸಬೇಕು.

**ಉತ್ತರಾ ಹನಾವಗಸ್ತಿರಧರಾ ಹನೌ ಯಮೋ, ಮುಖೇಚಾಂಗಾರಕಃ**
**ಶನೈಶ್ಚರ ಉಪಸ್ಥೇ ಬೃಹಸ್ಪತಿಃ ಕಕುದಿ ವಕ್ಷಸ್ಯಾದಿತ್ಯೋ ಹೃದಯೇ**
**ನಾರಾಯಣೋ ಮನಸಿ ಚಂದ್ರೋ ನಾಭ್ಯಾಮುಶನಾಸ್ತನಯೋರಶ್ವಿನೌ**
**ಬುಧಃ ಪ್ರಾಣಾಪಾನಯೋ ರಾಹುರ್ಗಲೇ ಕೇತವಃ ಸರ್ವಾಂಗೇಷು**
**ರೋಮಸು ಸರ್ವೇ ತಾರಾಗಣಾಃ ॥೭॥**

= ಮುಸುಡಿಯ ಮೇಲ್ಭಾಗದಲ್ಲಿ ಅಗಸ್ತ್ಯರು; ಕೆಳಭಾಗದಲ್ಲಿ ಯಮರಾಯರು; ಬಾಯೊಳಗೆ ಅಂಗಾರಕ; ಜನನೇಂದ್ರಿಯದಲ್ಲಿ ಶನೈಶ್ಚರ; ಬೆನ್ನಿನ ಡುಬ್ಬಿನಲ್ಲಿ ಬೃಹಸ್ಪತಿಗಳು; ಎದೆಯ ಭಾಗದಲ್ಲಿ ಆದಿತ್ಯ (ಸೂರ್ಯ); ಹೃದಯದಲ್ಲಿ ಸ್ವಯಂ ನಾರಾಯಣ ರೂಪ; ಮನಸ್ಸಿನಲ್ಲಿ ಚಂದ್ರ; ನಾಭಿ ಪ್ರದೇಶದಲ್ಲಿ ಶುಕ್ರಾಚಾರ್ಯ; ಎದೆಯ ಉಬ್ಬಿದ ಭಾಗಗಳಲ್ಲಿ ಅಶ್ವಿನೀ ದೇವತೆಗಳು; ಪ್ರಾಣ ಅಪಾನ ವಾಯುಗಳ ಸ್ಥಾನಗಳಲ್ಲಿ ಬುಧ; ಕತ್ತಿನಲ್ಲಿ ರಾಹು (ರಾಹು ಕೇತುಗಳು); ಸರ್ವಾಂಗಗಳಲ್ಲಿಯೂ ಧೂಮಕೇತುಗಳು; ರೋಮಕೂಪಗಳಲ್ಲಿ ತಾರಾರೂಪದಜ್ಯೋತಿರ್ಗಣಗಳ ಸಿದ್ಧಗಂಧರ್ವಾದಿಗಳು – ಹೀಗೆ ಭಾವಿಸಬೇಕು.

**ಏತದು ಹೈವ ಭಗವತೋ ವಿಷ್ಣೋಃ ಸರ್ವದೇವತಾಮಯಂ**
**ರೂಪಮಹರಹಃ ಸಂಧ್ಯಾಯಾಂ ಪ್ರಯತೋ ವಾಗ್ಯತೋ ನಿರೀಕ್ಷಮಾಣ**
**ಉಪತಿಷ್ಠೇತ ನಮೋ ಜ್ಯೋತಿರ್ಲೋಕಾಯ**
**ಕಾಲಾಯನಾಯಾನಿಮಿಷಾಂ ಪತಯೇ ಮಹಾಪುರುಷಾಯಾ**
**ಭಿಧೀಮಹೀತಿ ॥೮॥**

ಏತತ್ ಉ ಹ ಏವ = ಸತ್ಯವಾಗಿಯೂ ಇದೇನೇ; ಭಗವತಃ ವಿಷ್ಣೋಃ = ಸಕಲೈಶ್ವರ್ಯ ಸಂಪೂರ್ಣನಾದ ಮಹಾ ವಿಷ್ಣುವಿನ; ಸರ್ವದೇವತಾಮಯಂ = ಸಕಲ ದೇವತೆಗಳಿಗೂ ಆಶ್ರಯಸ್ಥಾನೀಯವಾದ; ರೂಪಂ = ಧ್ಯಾನಾರ್ಹವಾದ ರೂಪವು; ಅಹರಹಃ = ಪ್ರತಿನಿತ್ಯವೂ; ಸಂಧ್ಯಾಯಾಂ = ಸಂಧ್ಯಾಕಾಲಗಳಲ್ಲಿ; ಪ್ರಯತಃ = ಶ್ರದ್ಧಾಪೂರ್ವಕವಾಗಿ; ವಾಗ್ಯತಃ = ಮಂತ್ರಾಕ್ಷರಗಳ ಉಚ್ಚಾರ ಪೂರ್ವಕವಾಗಿ; ನಿರೀಕ್ಷಮಾಣಃ = ಮನಸ್ಸಿನಲ್ಲಿ ಭಾವಿಸುತ್ತಾ; ಉಪತಿಷ್ಠೇತ = ಧ್ಯಾನಮಾಡಬೇಕು; ಜ್ಯೋತಿರ್ಲೋಕಾಯ = ಜ್ಯೋತಿರ್ಗಣಗಳನ್ನೊಳಗೊಂಡು ಅವುಗಳ ಮೊತ್ತದಂತೆ ರೂಪಧಾರಣೆ ಮಾಡಿರುವ; ಕಾಲಾಯನಾಯ = ಕಾಲಪ್ರವರ್ತಕನಾದ; ಅನಿಮಿಷಾಂ

ಪತಯೇ = ದೇವೋತ್ತಮನಾದ; ಮಹಾಪುರುಷಾಯ ನಮಃ = ಪುರುಷೋತ್ತಮನಿಗೆ ನಮಸ್ಕಾರ; ಅಭಿಧೀಮಹಿ = ಧ್ಯಾನಿಸೋಣ; ಇತಿ = ಹೀಗೆಂದು.

ಇದನ್ನು ಗಾಯತ್ರೀ ಮಂತ್ರದ ರೂಪಾಂತರವೆಂದು ಭಾವಿಸಬಹುದು. ಗಾಯತ್ರೀಮಂತ್ರ ಜಪಕ್ಕೆ ಅಳವಡಿಸುವ ಧ್ಯಾನ ಶ್ಲೋಕ, "ಧ್ಯೇಯಸ್ಸದಾ ಸವಿತೃಮಂಡಲ ಮಧ್ಯವರ್ತೀ ನಾರಾಯಣಃ ..." ಕಾಲಚಕ್ರದ ಮುಖ್ಯವೃತ್ತಿ ಸೂರ್ಯರಥದ ಸಂಚಾರ. ಆ ಸೂರ್ಯ ನಾರಾಯಣನೇ ಶಿಂಶುಮಾರ ಮೂರ್ತಿ. ಅದರ ದ್ಯೋತಕವಾಗಿ, ಶಿಂಶುಮಾರ ಮೂರ್ತಿಯ ಹೃದಯದಲ್ಲಿ ಶ್ರೀಮನ್ನಾರಾಯಣ ಎಂದಿದ್ದಾರೆ. ಸಂಧ್ಯಾವಂದನೆಯನ್ನು ಮಾಡುವವರು ಗಾಯತ್ರೀಜಪದ ನಂತರ ಪ್ರಾತಃಕಾಲ ಸಾಯಂಕಾಲಗಳಲ್ಲಿ ಪಠಿಸುವ ಮತ್ತು ಮಧ್ಯಾಹ್ನಕಾಲದಲ್ಲಿ ಅರ್ಘ್ಯಪ್ರದಾನಾನಂತರ ಪಠಿಸುವ ವೇದಮಂತ್ರಗಳನ್ನು ಉಚ್ಚರಿಸುವಾಗ ಶಿಂಶುಮಾರಮೂರ್ತಿಯ ರೂಪವನ್ನು ಧ್ಯಾನಕ್ಕೆ ತಂದುಕೊಳ್ಳುವುದು ಅತ್ಯಂತ ಉಚಿತ. ಶಿಂಶುಮಾರ ಮೂರ್ತಿ, ಸೂರ್ಯಾಂತರ್ಗತಘೃಣಿ ಮತ್ತು ಸ್ವರೂಪಬಿಂಬನ ಐಕ್ಯಚಿಂತನೆ ಮಾಡುವುದು ಸರ್ವೋತ್ತಮ.

ಗ್ರಹರ್ಕ್ಷ ತಾರಾಮಯ ಮಾಧಿದೈವಿಕಂ ಪಾಪಾಪಹಂ
ಮಂತ್ರಕೃತಾಂತ್ರಿಕಾಲಂ ।
ನಮಸ್ಯತಃ ಸ್ಮರತೋವಾತ್ರಿಕಾಲಂ ನಶ್ಯೇತ ತತ್ಕಾಲಜಮಾಶುಪಾಪಂ
॥೯॥

ಗ್ರಹ ಋಕ್ಷ ತಾರಾಮಯಂ = ಗ್ರಹ ನಕ್ಷತ್ರ ತಾರೆಗಳನ್ನೊಳಗೊಂಡು, ಅವುಗಳಲ್ಲಿ ಬಿಡಿಬಿಡಿಯಾಗಿಯೂ ಒಟ್ಟಾಗಿಯೂ ರೂಪುತಾಳಿರುವ; ಆಧಿ ದೈವಿಕಂ = ಅಧಿದೈವ ಪ್ರಪಂಚದಲ್ಲಿ ತದ್ರೂಪನಾಗಿರುವ; ಮಂತ್ರಕೃತಾಂ = ಹಿಂದೆ ಹೇಳಿದ ಮಂತ್ರವನ್ನು ಜಪಿಸುವವರ; ಪಾಪಾಪಹಂ = ಸಕಲ ಪಾಪಗಳನ್ನು ಪರಿಹರಿಸುವ ಶಿಂಶುಮಾರಮೂರ್ತಿಯನ್ನು; ತ್ರಿಕಾಲಂ ಪ್ರಾತಃ = ಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ; ನಮಸ್ಯತಃ = ಭಕ್ತಿಪುರಸ್ಸರವಾಗಿ ನಮಸ್ಕರಿಸುವವರ; ವಾ = ಅಥವಾ; ಸ್ಮರತಃ = ಸ್ಮರಿಸುವವರ; ತತ್ಕಾಲಜಂ ಪಾಪಂ = ಆಯಾ ಕಾಲಗಳಲ್ಲಿ ಮಾಡಿದ ಪಾಪವು; ಆಶು = ಕೂಡಲೇ; ನಶ್ಯೇತ = ನಾಶವಾಗಿ ಬಿಡುತ್ತದೆ.

"ಯದಹ್ನಾತ್ ಕುರುತೇ ಪಾಪಂ ತದಹ್ನಾತ್ ಪ್ರತಿಮುಚ್ಯತೇ, ಯದ್ರಾತ್ರ್ಯಾತ್ಕುರುತೇ ಪಾಪಂ ತದ್ರಾತ್ರ್ಯಾತ್‌ಪ್ರತಿಮುಚ್ಯತೇ" ಎಂಬ ಸಂಧ್ಯಾವಂದನೆಯ ಮಂತ್ರವು ಇದಕ್ಕೆ ಸಂವಾದಿಯಾಗಿದೆ.

"ಶ್ರೀಕೃಷ್ಣಾರ್ಪಣಮಸ್ತು"



ಸೂರ್ಯಗ್ರಹಣ-ಚಂದ್ರಗ್ರಹಣ – Solar eclipse & Lunar eclipse

## ಶ್ರೀಮದ್ಭಾಗವತ

# ಅಧ್ಯಾಯ – ಇಪ್ಪತ್ನಾಲ್ಕು

# ಅಧೋ ಲೋಕಗಳು

ಅಧಸ್ತಾತ್ಸವಿತುರ್ಯೋಜನಾಯುತೇ ಸ್ವರ್ಭಾನುರ್ನಕ್ಷತ್ರವತ್
ಚರತೀತ್ಯೇಕೇ ಯೋಽಸಾವಮರತ್ವಂ ಗ್ರಹತ್ವಂ
ಚಾಲಭತಭಗವದನುಕಂಪಯಾ ಸ್ವಯಮಸುರಾಪಸದಃ
ಸೈಂಹಿಕೇಯೋಽಹ್ಯತದರ್ಹಸ್ತಸ್ಯ ತಾತ
ಜನ್ಮಕರ್ಮಾಣಿಚೋಪರಿಷ್ಟಾದ್ವಕ್ಷ್ಯಾಮಃ ॥೧॥

ಸವಿತುಃ ಅಧಸ್ತಾತ್ = ಸೂರ್ಯಬಿಂಬದ ಕೆಳಗೆ; ಯೋಜನ ಅಯುತೇ = ಹತ್ತು ಸಾವಿರ ಯೋಜನದ ಅಂತರದಲ್ಲಿ; ಸ್ವರ್ಭಾನುಃ = ರಾಹುವು; ನಕ್ಷತ್ರವತ್ ಚರತಿ = ನಕ್ಷತ್ರದಂತೆ ಕಾಲಚಕ್ರದ ತನ್ನ ಪಥದ ಮೇಲೆ ಸಂಚರಿಸುವನು ಎಂದು; ಯೇಕೇ = ಕೆಲವರು ಗುರುತಿಸಿ ಹೇಳುತ್ತಾರೆ; ಯಃ ಅಸೌ = ಯಾವ ಈ ರಾಹುವು; ಸ್ವಯಂ ಅಸುರಾಪಸದಃ = ಸ್ವರೂಪತಃ ಅಸುರಾಧಮನಾದರೂ; ಭಗವದನುಕಂಪಯಾ = ಭಗವಂತನ ದಯೆಯಿಂದ; ಅಮರತ್ವಂ = ಕಲ್ಪಾಂತದವರೆಗೆ ಮರಣವಿಲ್ಲದಿರುವಿಕೆಯನ್ನೂ; ಗ್ರಹತ್ವಂ ಚ = ಗ್ರಹದಸ್ಥಾನಮಾನವನ್ನೂ; ಅಲಭತ = ಹೊಂದಿದನು; ಅವನು, ಸೈಂಹಿಕೇಯಃ = ಸಿಂಹಿಕೆಯೆಂಬ ದೈತ್ಯಳ ಪುತ್ರನು; ಅತದರ್ಹಃ = ಅಮರತ್ವಕ್ಕೂ ಗ್ರಹಸ್ಥಾನಕ್ಕೂ ಅರ್ಹನಲ್ಲದವನು; ತಾತ = ಅಯ್ಯಾ ಪರೀಕ್ಷಿದ್ರಾಜಾ; ತಸ್ಯ ಜನ್ಮಕರ್ಮಾಣಿ ಚ = ಅವನ ಜನ್ಮ ಕರ್ಮಗಳ ವಿಷಯವನ್ನು; ಉಪರಿಷ್ಟಾತ್ ವಕ್ಷ್ಯಾಮಃ = ಇನ್ನು ಮುಂದೆ ಹೇಳೋಣ.

ರಾಹು ಗ್ರಹ ಎಂದಾಗ ರಾಹುಕೇತುಗಳಿಬ್ಬರನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಒಂದೇ ಗ್ರಹದ ಮುಂಬದಿಯಲ್ಲಿ ಸಿಂಹದ ತಲೆಯಂತೆ ರಾಹು ಇರುವನು; ಹಿಂಬದಿಯಲ್ಲಿ ನೂರಾರು ಹಾವಿನ ಬಾಲಗಳಂತೆ ಕೇತು ಇರುವನು. ರಾಹುಗ್ರಹದ ಬಣ್ಣ ಕಪ್ಪು; ಕೇತುವಿನದು ಕಂದು ಬಣ್ಣ. ಚಂದ್ರಗ್ರಹಣ ಕಾಲಗಳಲ್ಲಿ ಈ ವ್ಯತ್ಯಾಸವನ್ನು ಸುಲಭವಾಗಿ ಯಾರಾದರೂ ಕಾಣಬಹುದು. "ಸ್ವಭಾಸಾ ನುದತೇ ಯಸ್ಮಾತ್ ಸ್ವರ್ಭಾನುರಿತಿ ಕಥ್ಯತೇ" ಎಂಬ ವಿವರಣೆಯಂತೆ, ತನ್ನ ಕಪ್ಪು ಕಿರಣಗಳಿಂದ

ಸೂರ್ಯಕಿರಣಗಳನ್ನು ಅಥವಾ ಚಂದ್ರಕಿರಣಗಳನ್ನು ಮುಸುಕಿ ತೊಂದರೆ ಕೊಡುವುದರಿಂದ ರಾಹುವಿಗೆ ಸ್ವರ್ಭಾನು ಎಂದು ಹೆಸರು. ಇಲ್ಲೊಂದು ವಿಚಾರವನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಗ್ರಹಣಗಳಿಂದ ತೊಂದರೆಯಾಗುವುದು ನಮಗೇ ಹೊರತು ಸೂರ್ಯಚಂದ್ರರಿಗಲ್ಲ. ದ್ವಾದಶಾರ್ಕರ ಮಂಡಲವೂ, ಚಂದ್ರಮಂಡಲವೂ ನಮ್ಮ ನಮ್ಮ ಹೃದಯಕಮಲಗಳನ್ನು ಬಳಸಿರುವುದರಿಂದ, ಗ್ರಹಣ ಕಾಲಗಳಲ್ಲಿ ಹೊರಗಿನ ಸೂರ್ಯಮಂಡಲ ಅಥವಾ ಚಂದ್ರಮಂಡಲದ ಸಂಪರ್ಕ ತಪ್ಪಿಹೋಗುವುದರಿಂದ ನಮ್ಮ ಮನಸ್ಸುಗಳ ಮೇಲೆ, ದೇಹಾರೋಗ್ಯದ ·ಮೇಲೆ ವಿಕೃತ ಪರಿಣಾಮಗಳುಂಟಾಗುವುವು. ಅದನ್ನು ತಪ್ಪಿಸುವ ನೆವದಿಂದಲಾದರೂ ಸ್ನಾನ ಜಪತಪ ದಾನ ಧರ್ಮಾದಿ ಪುಣ್ಯಕಾರ್ಯಗಳನ್ನು ಜನರು ಮಾಡಿ ಉದ್ಧೃತರಾಗಲಿ ಎಂಬುದು ಶಾಸ್ತ್ರವಚನಗಳ ಸದುದ್ದೇಶ.

ದೈತ್ಯಾಧಮರಿಗೆ ಅಮರತ್ವ ಗ್ರಹತ್ವಗಳನ್ನು ಭಗವಂತ ಕುರಣಿಸಿದನೇ ಎಂಬುದು ವಿಚಾರಾರ್ಹ ಸಂಗತಿ. ಸಾಮಾನ್ಯರಿಗೆ ಇದರ ಉತ್ತರ ತಿಳಿಯದು. 'ಜೀವದ್ವಯಾವೇಶ' ಎಂದು ಶ್ರೀಮಧ್ವಾಚಾರ್ಯರು ಹೇಳಿರುವ ಮಾತಿನಲ್ಲಿ ಉತ್ತರದ ರಹಸ್ಯ ಅಡಗಿದೆ. ಧರ್ಮರಾಯರ ಪ್ರಶ್ನೆಗೆ ನಾರದರು ಹೇಳಿದ ಉತ್ತರವೇ ಆ ರಹಸ್ಯ.

"ಶ್ರೀಹರಿಯನ್ನು ನಿಂದಿಸಿದ ಶಿಶುಪಾಲ, ಚಕ್ರಾಯುಧದಂದ ತಲೆಕತ್ತಿರಿಸಿ ಬಿದ್ದಾಗ, ಅವನ ಆತ್ಮತೇಜಸ್ಸು ಕೃಷ್ಣನ ಹೃದಯವನ್ನು ಸೇರಿತು; ಶ್ರೀಹರಿದ್ವೇಷಿಯಾದ ವೇನ ತಮಸ್ಸಿನ ಪಾಲಾದ. ಇದು ಹೇಗೆ?" ಎಂದು ಧರ್ಮರಾಯರು ಪ್ರಶ್ನೆ ಮಾಡಿದರು. "ಶಿಶುಪಾಲನಲ್ಲಿ ಹಿರಣ್ಯಕಶಿಪುವೆಂಬ ದೈತ್ಯಜೀವ, ವೈಕುಂಠದ ದ್ವಾರಪಾಲಕನಾಗಿದ್ದ ಜಯನ ಜೀವ – ಈ ಎರಡೂ ಆಶ್ರಯ ಹೊಂದಿದ್ದುವು. ದ್ವೇಷ ರೂಪವಾದ ಭಕ್ತಿಯಿಂದ ಜಯನ ಜೀವ ಶ್ರೀಕೃಷ್ಣನಲ್ಲಿ ಸೇರಿಕೊಂಡಿತು. ಮೂಲದೈತ್ಯ ಹಿರಣ್ಯಕಶಿಪುವು ತಮಸ್ಸಿನ ಪಾಲೇ ಆದ." ಇದು ನಾರದರ ಉತ್ತರದ ಸಾರಾಂಶ. (ಶ್ರೀಮದ್ಭಾಗವತ – ಸಪ್ತಮಸ್ಕಂಧದ ಆರಂಭವನ್ನು ನೋಡಿ).

ಈ ನ್ಯಾಯಾನುಸಾರ, ರಾಹು ಕೇತುಗಳಲ್ಲಿ ಅದೇ ಹೆಸರಿನ ದೇವತೆಗಳೂ ಇದ್ದು ಈಗಲೂ ರಾಹುಕೇತುಗಳ ಹೆಸರಿನಲ್ಲಿ ಪೂಜೆಯನ್ನು ಕೈಗೊಂಡು ಸತ್ಫಲಗಳನ್ನು ನೀಡುವವರು ಅವರು. ಆ ಗ್ರಹಗಳಲ್ಲಿ ಸ್ಥಾನಪಡೆದಿರುವ ದೈತ್ಯರು ದೀರ್ಘಕಾಲ ಸೂರ್ಯಚಂದ್ರರ ಮೇಲೆ ದ್ವೇಷ ಸಾಧಿಸಿ, ಲೋಕ ಕಂಟಕರಾಗಿ, ತಮ್ಮ ಪಾಪದ ಚೀಲಗಳನ್ನು ತುಂಬಿಕೊಳ್ಳುತ್ತಿರುವರು.

ಯದದಸ್ತರಣೇರ್ಮಂಡಲಂ ಪ್ರತಪತಸ್ತದ್ವಿಸ್ತಾರತೋ ಯೋಜನಾಯುತ ಮಾಚಕ್ಷತೇ ದ್ವಾದಶ ಸಹಸ್ರಂ ಸೋಮಸ್ಯ ತ್ರಯೋದಶ ಸಹಸ್ರಂ ರಾಹೋರ್ಯಃ ಪರ್ವಣಿ ತದ್ವ್ಯವಧಾನಕೃದ್ವೈರಾನುಬಂಧಃ ಸೂರ್ಯ ಚಂದ್ರಮಸಾವಭಿಧಾವತಿ ॥೨॥

ಯತ್ ಪ್ರತಪತಃ ತರಣೇಃ ಅದಃ ಮಂಡಲಂ = ಪ್ರಕಾಶದಾಯಕವಾದ ಯಾವ ಪ್ರಸಿದ್ಧ ಸೂರ್ಯನಮಂಡಲವುಂಟೋ; ತತ್ ವಿಸ್ತರತಃ ಯೋಜನ ಅಯುತಂ ಅಚಕ್ಷತೇ = ಅದರ ವಿಸ್ತಾರವು ಹತ್ತು ಸಾವಿರಯೋಜನವೆಂದು ಹೇಳುತ್ತಾರೆ; ಸೋಮಸ್ಯ = ಚಂದ್ರಮಂಡಲದ ವಿಸ್ತಾರವು ದ್ವಾದಶ ಸಹಸ್ರಂ (ದ್ವಿದಶಸಹಸ್ರಂ) = ಇಪ್ಪತ್ತು ಸಾವಿರ ಯೋಜನವೆಂದು ಹೇಳುತ್ತಾರೆ; ರಾಹೋಃ = ರಾಹುಮಂಡಲದ ವಿಸ್ತಾರವು; ತ್ರಯೋದಶ ಸಹಸ್ರಂ (ತ್ರಿದಶಸಹಸ್ರಂ) = ಮೂವತ್ತು ಸಾವಿರ ಯೋಜನ; ಯಃ = ಯಾವ ಆ ರಾಹುವು; ಪರ್ವಣಿ = ಹುಣ್ಣಿಮೆ ಮತ್ತು ಅಮಾವಾಸ್ಯೆಗಳ ಪರ್ವಕಾಲಗಳಲ್ಲಿ; ತತ್‌ವ್ಯವಧಾನ ಕೃತ್ = ಮಂಡಲದ ವಿಸ್ತಾರವನ್ನು ಬಳಸಿಕೊಂಡು; ವೈರಾನುಬಂಧಃ = ಸೂರ್ಯ ಚಂದ್ರರ ಮೇಲಿನ ಹಗೆತನದಿಂದ; ಸೂರ್ಯ ಚಂದ್ರಮಸೌ = ಸೂರ್ಯಚಂದ್ರರನ್ನು; ಅಭಿಧಾವತಿ = ಅಟ್ಟಿಸಿಕೊಂಡು ಹೋಗುತ್ತಾನೆ.

"ಅತ್ರ ಯೋಜನಾಭೇದತಃ" ಎಂದು ಶ್ರೀಮಧ್ವಾಚಾರ್ಯರು ತಿಳಿಸಿರುವಂತೆ, 'ದ್ವಾದಶ' ಎಂಬುದನ್ನು 'ದ್ವಿದಶ' ಎಂದೂ, 'ತ್ರಯೋದಶ' ಎಂಬುದನ್ನು 'ತ್ರಿದಶ' ಎಂದೂ ಅರ್ಥೈಸಬೇಕೆಂದು ಶ್ರೀವಿಜಯಧ್ವಜಾಚಾರ್ಯರು ಸ್ಪಷ್ಟಪಡಿಸಿದ್ದಾರೆ.

ಇಲ್ಲಿ 'ಮಂಡಲ' ಎಂಬ ಶಬ್ದದ ಅರ್ಥವನ್ನು ತಪ್ಪಾಗಿ ಗ್ರಹಿಸಿ, ಸೂರ್ಯಬಿಂಬ ಕ್ಕಿಂತ ಚಂದ್ರಬಿಂಬವು ಎರಡರಷ್ಟು ದೊಡ್ಡದೆಂದೂ, ರಾಹುಗ್ರಹವು ಮೂರರಷ್ಟು ದೊಡ್ಡದೆಂದೂ ಕೆಲವರು ಹೇಳುತ್ತಾರೆ. ಅದುಸರಿಯಲ್ಲ.

ಕಾಲಚಕ್ರದ ಸೂರ್ಯಪಥವು ಉತ್ತರಾಯಣ ದಕ್ಷಿಣಾಯನಗಳಲ್ಲಿ ಏರಿ ಇಳಿಯುವ ಅವಧಿ ಹತ್ತುಸಾವಿರಯೋಜನ ಎಂದು ತಿಳಿಯಬೇಕು. ನಮ್ಮ ಭೂಮಧ್ಯ ರೇಖೆಯ ದೃಷ್ಟಿಯಿಂದ ಐದುಸಾವಿರ ಯೋಜನದೆತ್ತರಕ್ಕೆ ಹೋದಾಗ ಅದು ಕರ್ಕಾಟಕ ಸಂಕ್ರಾಂತಿ ವೃತ್ತದ ನೇರದಲ್ಲಿರುತ್ತದೆ, ಭೂಮಧ್ಯರೇಖೆಯ ದೃಷ್ಟಿಯಿಂದ ಐದುಸಾವಿರಯೋಜನ ದಕ್ಷಿಣಕ್ಕೆ ಇಳಿದರೆ, ಆಗ ಅದು ಮಕರ ಸಂಕ್ರಾಂತಿ ವೃತ್ತದ ನೇರದಲ್ಲಿರುತ್ತದೆ. ಚಂದ್ರಬಿಂಬವು ಸೂರ್ಯಬಿಂಬದ ೪೪೦ ಪಾಲಿನಲ್ಲಿ ಒಂದು ಪಾಲಿನಷ್ಟು ಚಿಕ್ಕದು. ರಾಹುಗ್ರಹವು ಇನ್ನೂ ಚಿಕ್ಕದು. ಆದುದರಿಂದ, ಸೂರ್ಯಪಥದ (ಮಂಡಲದ) ಜೊತೆ ಜೊತೆಯಾಗಿ ಸಂಚರಿಸಲು ಚಂದ್ರರಥದ ಪಥವು

ಭೂಮಧ್ಯರೇಖೆಯ ದೃಷ್ಟಿಯಿಂದ ೧೦,೦೦೦ ಯೋಜನ ಉತ್ತರಕ್ಕೂ, ೧೦,೦೦೦ ಯೋಜನ ದಕ್ಷಿಣಕ್ಕೂ ಏರಿ ಇಳಿಯಬೇಕು. ಅದರಂತೆ ರಾಹುಗ್ರಹವು ೧೩,೦೦೦ ಯೋಜನ ಮೇಲಕ್ಕೂ, ೧೩,೦೦೦ ಯೋಜನ ಕೆಳಕ್ಕೂ ಏರಿ ಇಳಿಯಬೇಕು.

ರಾಹು, ಚಂದ್ರ, ಸೂರ್ಯರ ಸಂಚಾರದ ವೇಗಗಳಲ್ಲಿ ಹೆಚ್ಚು ಕಡಿಮೆಗಳಿರುವುದರಿಂದ, ಒಂದೇ ರೇಖಾಂಶದನೇರಕ್ಕೆ ಈ ಮೂರುಗ್ರಹಗಳೂ ಬಂದಾಗ ಗ್ರಹಣಗಳು ಸಂಭವಿಸುತ್ತವೆ. "ಯದ್ಯೆಕರಾಶೌ ಯೋಗಸ್ಸ್ಯಾತ್ತದಾ ಹುರ್ಗ್ರಹಣಂ ಬುಧಾಃ" ಎಂದು ಶ್ರೀ ವಾದಿರಾಜ ಗುರುಸಾರ್ವಭೌಮರು ತಮ್ಮ 'ಭೂಗೋಳ ವರ್ಣನಂ' ಎಂಬ ಗ್ರಂಥದಲ್ಲಿ ಹೇಳಿದ್ದಾರೆ.

ಏಕರೇಖಾಂಶದ ಬಳಿಗೆ ಬಂದಾಗ ರಾಹುಕೇತುಗಳು ಸೂರ್ಯನನ್ನಾಗಲೀ ಚಂದ್ರನನ್ನಾಗಲೀ ಅಟ್ಟಿಸಿಕೊಂಡು ಹೋದಂತೆ ಭಾಸವಾಗುವುದು. ಆ ರೇಖಾಂಶದ ಸಾಮೀಪ್ಯವನ್ನು ದಾಟಿದಾಗ, ವಿಷ್ಣು ಚಕ್ರಕ್ಕೆ ಹೆದರಿ ಓಡಿಹೋದಂತೆ ಕಾಣುವುದು.

ಅಂತೂ, ದೈತ್ಯರಾದ ರಾಹುಕೇತುಗಳಿಗೆ ಗ್ರಹಸ್ಥಾನ ದೊರೆತರೂ ದುಃಖಾನುಭವ ಮತ್ತು ದ್ವೇಷಸಾಧನೆಗಳೇ ಹೊರತು, ಅದು ದೈವಭಕ್ತಿಗೆ ಕಾರಣವಲ್ಲ. ದೈತ್ಯರನ್ನು ತಮೋಯೋಗ್ಯರೆಂದು ಹೇಳುವುದು ಈ ಕಾರಣದಿಂದಲೇ.

**ತತೋಧಸ್ತಾತ್ಸಿದ್ಧ ಚಾರಣ ವಿದ್ಯಾಧರಾಣಾಂ ಸದನಾನಿ ತಾವನ್ಮಾತ್ರ ಏವ ||೪||**

ತತಃ ಅಧಸ್ತಾತ್ = ರಾಹು ಮಂಡಲಕ್ಕಿಂತ ಕೆಳಗೆ; ಸಿದ್ಧಚಾರಣ ವಿದ್ಯಾಧರಾಣಾಂ ಸದನಾನಿ = ಸಿದ್ಧಚಾರಣ ವಿದ್ಯಾಧರರ ನಕ್ಷತ್ರಗಳಂತಹ ಸ್ಥಾನಗಳಿವೆ; ತಾವನ್ಮಾತ್ರ ಏವ = ಇಂತಹ ತೇಜಃ ಕಾಯಗಳು ಅಲ್ಲಿಯವರೆಗೆ ಮಾತ್ರ.

ಈ ಅಂತರಿಕ್ಷ ಕಾಯಗಳನ್ನೇ ದಕ್ಷಿಣದ ನಕ್ಷತ್ರಗಳೆಂದು ಈಗಿನವರು ಭ್ರಮಿಸಿದ್ದಾರೆ. ಅವೂ ಸಹ ದಕ್ಷಿಣ ಅಕ್ಷಾಂಶ ೬೦ರವರೆಗೆ ಮಾತ್ರ ಇರುವುವೆಂಬುದನ್ನು ಗಮನಿಸಿದಾಗ, ಈಗಿನವರ ಭ್ರಮೆ ಮತ್ತು ಮೋಸಗಾರಿಕೆ ಎಂತಹುದೆಂಬುದು ವೇದ್ಯವಾಗುವುದು. ನಕ್ಷತ್ರ ಪುಂಜಗಳ (galaxies) ಸಾಗರದಲ್ಲಿ ನಮ್ಮ ಆಕಾಂಶ ಗಂಗೆ(Milky Way) ಒಂದು ತುಣುಕು ಎಂದು ಹೇಳುವ ಮಾತು ಅರ್ಥವಿಹೀನವಾಗುವುದು.

**ತತೋಧಸ್ತಾದ್ಯಕ್ಷರಕ್ಷ ಪಿಶಾಚಪ್ರೇತಭೂತಗಣಾನಾಂ ವಿಹಾರಾಜಿರಮಂತರಿಕ್ಷಂ ಯಾವದ್ವಾಯುಃ ಪ್ರವಾತಿ ಯಾವನ್ಮೇಘಾ ಉಪಲಭ್ಯಂತೇ ||೫||**

ತತಃ ಅಧಸ್ತಾತ್ = ಸಿದ್ಧಾಚಾರಣಾದಿಗಳ ಸದನಗಳಿಗಿಂತ ಕೆಳಗೆ; ಯಕ್ಷ ರಕ್ಷ ಪಿಶಾಚಪ್ರೇತಭೂತಗಣಾನಾಂ = ಗುಂಪುಗಳ; ವಿಹಾರ ಅಜಿರಂ = ಕ್ರೀಡಾಂಗಣವಾದ; ಅಂತರಿಕ್ಷಂ = ಆಕಾಶವು ಉಂಟು; ಯಾವತ್ = ಯಾವ ಅಲ್ಲಿಯವರೆಗೆ ಮಾತ್ರ; ವಾಯುಃ ಪ್ರವಾತಿ = ಗಾಳಿಯು ಬೀಸುತ್ತದೆ; ಯಾವತ್ = ಯಾವ ಅಲ್ಲಿಯವರೆಗೆ ಮಾತ್ರ; ಮೇಘಾಃ ಉಪಲ್ಯಭಂತೇ = ಮೋಡಗಳು ಕಂಡುಬರುತ್ತವೆ.

ಇದು ಬುಟ್ಟಿಯಾಕಾರದ ಜಂಬೂದ್ವೀಪದ ತಳಭಾಗ ಪ್ರದೇಶದ ವರ್ಣನೆ. ಪ್ರಸಿದ್ಧ ಲವಣಸಮುದ್ರದಲ್ಲಿ ಚಾಚಿಕೊಂಡಿರುವ ಆ ತಳಪ್ರದೇಶಗಳಲ್ಲಿ ಆಫ್ರಿಕಾದ ಪಿಗ್ಮಿಗಳಂತಹ ವಿಚಿತ್ರ ಪುರುಷರು ಇರುವರೆಂದು ಪುರಾಣಾಂತರದಲ್ಲಿ ವರ್ಣನೆ ಇದೆ. ಇಲ್ಲಿ ಗಾಳಿ ಬೀಸುವುದು, ಮೋಡಗಳು ಚಲಿಸುವುದು ಸಹಜವೇ ಸರಿ.

**ತತೋಧಸ್ತಾಚ್ಛತ ಯೋಜನಾಂತರ ಇಯಂ ಪೃಥಿವೀ**
**ಯಾವದ್ಧಂಸಭಾಸಶ್ಯೇನ ಸುಪರ್ಣಾದಯಃ ಪತತ್ರಿಪ್ರವರಾಉತ್ಪತಂತೀತಿ**
**॥೬॥**

ತತಃ ಅಧಸ್ತಾತ್ = ಪಿಶಾಚ ಪ್ರೇತಭೂತಾದಿಗಳ ಕ್ರೀಡಾಂಗಣಕ್ಕಿಂತ ಕೆಳಗೆ; ಶತಯೋಜನಾಂತರೇ = ನೂರುಯೋಜನಗಳಷ್ಟರವರೆಗೆ ಮಾತ್ರ; ಇಯಂ ಪೃಥಿವೀ = ಜಂಬೂದ್ವೀಪದ ತಳಭಾಗದ ಭೂಭಾಗಗಳು ಇರುತ್ತವೆ; ಯಾವತ್ = ಯಾವ ಇಲ್ಲಿಯವರೆಗೆ; ಹಂಸ, ಭಾಸ ಶ್ಯೇನ, ಸುಪರ್ಣ (ಗರುಡ); ಆದಯಃ = ಮೊದಲಾದ; ಪತತ್ರಿಪ್ರವರಾಃ = ಬಲಿಷ್ಠ ಪಕ್ಷಿಗಳು; ಉತ್ಪತಂತಿ ಇತಿ = ಹಾರಾಡುತ್ತವೆ ಎಂದು ಹೇಳುತ್ತಾರೆ.

'ಇತಿ' ಎಂಬ ಮಾತು ಅರ್ಥಪೂರ್ಣವಾದುದು. 'ಕಂಡು ಬಲ್ಲವರು ಹೇಳುತ್ತಾರೆ; ಆ ಪ್ರದೇಶಗಳಿಗೆ ಜನಸಾಮಾನ್ಯರು ಹೋಗಿ ಬರಲಾರರು' ಎಂಬುದು ಅದರ ಅರ್ಥ.

ಉಪವರ್ಣಿತಂ ಭೂಮೇರ್ಯಥಾ ಸನ್ನಿವೇಶಾವಸ್ಥಾನಮವನೇರಪ್ಯಧಸ್ತಾತ್ ಸಪ್ತಭೂವಿವರಾ ಏಕೈಕಶೋಯೋಜನಾಯುತಾಂತರೇಣಾಯಾಮ ವಿಸ್ತಾರೇಣೋ ಪಕ್ಲೃಪ್ತಾ ಅತಲಂ ವಿತಲಂ ಸುತಲಂ ತಲಾತಲಂ ಮಹಾತಲಂ ರಸಾತಲಂ ಪಾತಾಲಮಿತಿ ॥೭॥

ಭೂಮೇಃ ಯಥಾಸನ್ನಿವೇಶ ಅವಸ್ಥಾನಂ = ಪ್ರಾಕೃತ ಸನ್ನಿವೇಶಗಳು ಮತ್ತು ಜೀವನಿಯಾಕದ ವಾಸಸ್ಥಾನಗಳೊಂದಿಗೆ ಭೂಮಿಯ ವಿಚಾರವು; ಉಪವರ್ಣಿತಂ = ಇದುವರೆಗೆ ವರ್ಣಿಸಲ್ಪಟ್ಟಿತು; ಅವನೇಃ ಅಪಿ ಅಧಸ್ತಾತ್ = ಭೂಮಂಡಲದ

ಸನ್ನಿವಶಕ್ಕಿಂತಲೂ ಕೆಳಗೆ; ಏಕೈಕಶಃ = ಒಂದೊಂದು; ಯೋಜನ ಅಯುತ ಅಂತರೇಣ ಆಯಾಮ ವಿಸ್ತಾರೇಣ = ಹತ್ತು ಸಾವಿರಯೋಜನ ವಿಸ್ತಾರ ಮತ್ತು ಎತ್ತರಗಳುಳ್ಳವುಗಳಾಗಿ; ಅತಲಂ, ವಿತಲಂ, ಸುತಲಂ, ತಲಾತಲಂ, ಮಹಾತಲಂ, ರಸಾತಲಂ, ಪಾತಾಲಂ, ಇತಿ = ಎಂದು; ಸಪ್ತ ಭೂ ವಿವರಾಃ = ಭೂಮ್ಯಂತರಾಳದಲ್ಲಿನ ಡೊಗರುಗಳು; ಉಪಕ್ಲೃಪ್ತಾಃ = ಏರ್ಪಟ್ಟಿವೆ.

ಇದು ಪಾತಾಲಾದಿ ಸಪ್ತ ಅದೋಲೋಕಗಳ ಸನ್ನಿವೇಶ ವರ್ಣನೆ. ಜಂಬೂದ್ವೀಪದ ಮಧ್ಯಗತವಾದ ಇಳಾವೃತವರ್ಷದಲ್ಲಿ ನಟ್ಟನಡುವೆ ನಿಂತಿರುವ ಮೇರುಪರ್ವತದ ತಳಭಾಗವು ೧೬,೦೦೦ ಯೋಜನದವರೆಗೆ ಭೂಮ್ಯಂತರಾಳದಲ್ಲಿ ಇಳಿದಿದೆ. ಅದಕ್ಕಿಂತ ಕೆಳಗೆ ಅತಲ ವಿತಲಾದಿ ಲೋಕಗಳು ನಿರ್ಮಿತವಾಗಿವೆ. ಒಂದೊಂದರನಡುವೆ ೫೦೦ ಯೋಜನಗಳ ಅಂತರವಿದೆ. ಅಂದರೆ ಮೇರುವಿನ ಬುಡದಿಂದ ಪಾತಾಲದ ತಲದವರೆಗೆ, 10,000x7+500x6= ಒಂದು ಲಕ್ಷಯೋಜನದಷ್ಟು ಪಾತಾಲಾದಿ ವಿವರಗಳನ್ನೊಳಗೊಂಡ ಅಗೋಚರ ಭೂಭಾಗವಿದೆ ಎಂದ ಹಾಗಾಯಿತು.

ಇದಕ್ಕೂ ಕೆಳಗೆ ಅಷ್ಟದಿಗ್ಗಜಗಳಿರುವುವೆಂದೂ, ಅವುಗಳ ನೆಲೆಗೆ ಆಧಾರವಾದ ಭೂಭಾಗವನ್ನು ತನ್ನ ಸಾವಿರ ಹೆಡೆಗಳಲ್ಲಿ ಒಂದರ ಮೇಲೆ ಆದಿಶೇಷನು ಧರಿಸಿರುವನೆಂದೂ ಪುರಾಣಾಂತರಗಳಿಂದ ತಿಳಿದು ಬರುತ್ತದೆ.

**ಏತೇಷು ಹಿ ಬಿಲಸ್ವರ್ಗೇಷು ಸ್ವರ್ಗಾದಪ್ಯಧಿಕ**
**ಕಾಮಭೋಗೈಶ್ವರ್ಯಾನಂದ ಭೂತಿ ವಿಭೂತಿಭಿಃ**
**ಸುಸಮೃದ್ಧಭವನೋದ್ಯಾನಕ್ರೀಡಾ ವಿಹಾರೇಷು ದೈತ್ಯದಾನವ**
**ಕಾದ್ರವೇಯಾ**
**ನಿತ್ಯಪ್ರಮುದಿತಾನುರಕ್ತಕಲತ್ರಾಪತ್ಯಬಂಧುಸುಹೃದನುಚರಾಗೃಹಪತಯ**
**ಈಶ್ವರಾದಪ್ಯಪ್ರತಿಹತ ಕಾಮಾ ಮಾಯಾವಿನೋದಾ ನಿವಸಂತಿ ||೮||**

ಹಿ = ನಿಜವಾಗಿ; ಏತೇಷು ಬಿಲಸ್ವರ್ಗೇಷು = ಸ್ವರ್ಗಸದೃಶಗಳಾದ ಈ ಭೂವಿವರಗಳಲ್ಲಿ; ಸ್ವರ್ಗಾದಪಿ = ಸ್ವರ್ಗಕ್ಕಿಂತಲೂ ಅಧಿಕವಾದ; ಕಾಮ, ಭೋಗ, ಐಶ್ವರ್ಯ, ಆನಂದ, ಮೊದಲಾದ; ವಿಭೂತಿಭಿಃ = ಸುಖಸಾಧನಗಳಿಂದ; ಸುಸಮೃದ್ಧ = ಚೆನ್ನಾಗಿ ತುಂಬಿರುವ; ಭವನ = ವಾಸಗೃಹಗಳು; ಉದ್ಯಾನ = ವನಪ್ರದೇಶಗಳು; ಕ್ರೀಡಾವಿಹಾರೇಷು = ಮುಂತಾದ ಕ್ರೀಡಾಸ್ಥಾನಗಳಲ್ಲಿ; ದೈತ್ಯ, ದಾನವ, ಕಾದ್ರವೇಯಾಃ = ದಿತೀದೇವಿಯ ಮಕ್ಕಳಾದ ದೈತ್ಯರು, ದನೂದೇವಿಯ ಮಕ್ಕಳಾದ ದಾನವರು

ಮತ್ತು ಕದ್ರೂದೇವಿಯಮಕ್ಕಳಾದ ಸರ್ಪಜಾತಿಯವರು; ನಿತ್ಯಪ್ರಮುದಿತ = ಹಗಲುರಾತ್ರಿಗಳೆನ್ನದೆ ಸದಾ ಸಂತೋಷಭರಿತರಾದ; ಅನುರಕ್ತ = ಪ್ರೇಮಾನು ಬಂಧಿಗಳಾದ; ಕಲತ್ರ ಅಪತ್ಯ ಬಂಧು ಸುಹೃತ್ ಅನುಚರಾಃ = ಪತ್ನೀಪುತ್ರ ಬಂಧುಸುಹೃಜ್ಜನರಿಂದ ಸೇವಿತರಾದ; ಗೃಹಪತಯಃ = ಯಜಮಾನರಾದ ಪುರುಷರು; ಈಶ್ವರಾತ್ ಅಪಿ ಅಪ್ರತಿಹತಕಾಮಾಃ = ತಮಗಿಂತಲೂ ಬಲಿಷ್ಠರಾದ ದೇವತೆಗಳಿಂದಲೂ ತಡೆಗೆಈಡಾಗದ ಕಾಮಭೋಗಗಳುಳ್ಳವರಾಗಿ;. ಮಾಯಾ ವಿನೋದಾಃ = ಬಗೆಬಗೆಯ ಮಾಯೆಗಳಿಂದ (ಅತೀಂದ್ರಿಯ ಶಕ್ತಿಗಳಿಂದ) ನಿರ್ಮಿತಗಳಾದ ವಿನೋದ ವಿಹಾರಗಳಲ್ಲಿ ಆಸಕ್ತರಾಗಿ; ನಿವಸಂತಿ = ವಾಸಿಸುತ್ತಾರೆ.

ಸ್ವರ್ಗವಾಸಿಗಳಿಗೆ ಸುಖಸಾಮ್ರಾಜ್ಯದ ನಡುನಡುವೆ ಜಗದೀಶ್ವರನ ಸ್ಮರಣೆಗೆ ಅವಕಾಶವುಂಟು; ಬಿಲ ಸ್ವರ್ಗಗಳಲ್ಲಿ ಅದಿಲ್ಲ; ಕೇವಲ ಗ್ರಾಮ್ಯಸುಖಾನುಭವ.

**ಏಷು ಮಹಾರಾಜ ಮಯೇನ ಮಾಯಾವಿನಾ ವಿನಿರ್ಮಿತಾಃ ಪುರಾ**
**ನಾನಾಮಣಿಪ್ರವರ ಪ್ರವೇಕವಿರಚಿತ ವಿಚಿತ್ರಭವನ ಪ್ರಾಕಾರ ಗೋಪುರ**
**ಸಭಾಚೈತ್ಯ ಚತ್ವರಾಯತನಾದಿಭಿರ್ನಾಗಾಸುರಮಿಥುನ ಪಾರಾವತ**
**ಶುಕಸಾರಿಕಾಕೀರ್ಣ ಕೃತ್ರಿಮಭೂಮಿಭಿರ್ವಿವರೇಶ್ವರ ಗೃಹೋತ್ತಮೈಃ**
**ಸಮಲಂಕೃತಾಶ್ಚಕಾಸಂತಿ ॥೯॥**

ಏಷು = ಯಾವ ಬಿಲಸ್ವರ್ಗಗಳಲ್ಲಿ; ಮಹಾರಾಜ = ಅಯ್ಯಾ ಪರೀಕ್ಷಿದ್ರಾಜಾ; ಮಾಯಾವಿನಾ = ಅತೀಂದ್ರಿಯಶಕ್ತಿಯುತನಾದ; ಮಯೇನ = ಅಸುರಶಿಲ್ಪಿಯಾದ ಮಯನಿಂದ; ವಿನಿರ್ಮಿತಾಃ = ನಿರ್ಮಿಸಲ್ಪಟ್ಟ; ಪುರಾಃ = ಪಟ್ಟಣಗಳು; ನಾನಾ ಮಣಿಪ್ರವರ ಪ್ರವೇಕವಿರಚಿತ = ಬಗೆ ಬಗೆಯ ಶ್ರೇಷ್ಠ ಮಣಿಗಳ ಸಮೂಹಗಳಿಂದ ರಚಿಸಲ್ಪಟ್ಟ; ಭವನ = ವಾಸಗೃಹ; ಪ್ರಾಕಾರ = ಸುತ್ತು ಗೋಡೆ; ಗೋಪುರ = ಶಿಖರ; ಸಭಾ = ಕೂಟಗೃಹ; ಚೈತ್ಯ = ಚಿತ್ರರಚನೆ; ಚತ್ವರ ಆಯತನ ಆದಿಭಿಃ = ಅಂಗಳದ ನಡುಮನೆ ಮುಂತಾದವುಗಳಿಂದ; ನಾಗ ಅಸುರಮಿಥುನ = ನಾಗಗಳ ಮತ್ತು ಅಸುರರ ಕೂಟ ಚಿತ್ರಗಳಿಂದ; ಪಾರಾವತ ಶುಕ ಸಾರಿಕಾ ಆಕೀರ್ಣ = ಪಾರಿವಾಳಗಳು, ಗಿಳಿಗಳು ಮತ್ತು ಮೈನಾಪಕ್ಷಿಗಳಿಂದ ತುಂಬಿದ; ಕೃತ್ರಿಮ ಭೂಮಿಭಿಃ = ಮಾಯಾಕಲ್ಪಿತ ಭೂಮಿಗಳುಳ್ಳ; ವಿವರೇಶ್ವರ ಗೃಹೋತ್ತ ಮೈಃ = ಆಯಾ ಲೋಕಗಳ ಅಧಿಪತಿಗಳ ಅರಮನೆಗಳಿಂದ; ಸಮಲಂಕೃತಾಃ = ಸುಂದರವಾಗಿ ಅಲಂಕರಿಸಲ್ಪಟ್ಟು; ಚಕಾಸಂತಿ = ಪ್ರಕಾಶಿಸುತ್ತವೆ.

ಉದ್ಯಾನಾನಿಚಾತಿತರಾಂ ಮನ ಇಂದ್ರೀಯಾನಂದಿಭಿಃ ಕುಸುಮ ಫಲಸ್ತಬಕ ಸುಭಗಕಿಸಲಯಾವನತ ರುಚಿರವಿಟಪವಿಟಪಿನಾಂ ಲತಾಂಗಾಲಿಂಗಿತಾನಾಂ ಶ್ರೀಭಿಃ ಸಮಿಥುನ ವಿವಿಧವಿಹಂಗಮ ಜಲಾಶಯಾನಾಮಮಲಜಲಪೂರ್ಣಾನಾಂ ಝುಷಕುಲೋಲ್ಲಂಘನ ಕ್ಷುಭಿತ ನೀರ ನೀರಜಕುಮುದ ಕುವಲಯಕಲ್ಹಾರ ನೀಲೋತ್ಪಲಲೋಹಿತಶತಪತ್ರಾದಿ ವನೇಷು ಕೃತನಿಕೇತನಾನಾಮೇಕ ವಿಹಾರಾಕುಲ ಮಧುರ ವಿವಿಧಸ್ವನಾದಿಭಿರಿಂದ್ರಿಯೋತ್ಸವೈರಮರಲೋಕ ಶ್ರಿಯಮತಿ ಶಯಿತಾನಿ ||೧೦||

= ಅಲ್ಲಿನ ಉದ್ಯಾನಗಳು ಮನಸ್ಸಿಗೂ ಇಂದ್ರೀಯಗಳಿಗೂ ಅತಿ ಹೆಚ್ಚಿನ ಆನಂದವನ್ನುಂಟುಮಾಡುವ ಪುಷ್ಪಗುಚ್ಛಗಳಿಂದಲೂ ಹಣ್ಣುಗಳ ಗೊಂಚಲುಗಳಿಂದಲೂ, ಕಾಂತಿಯುಕ್ತವಾಗಿ ರಂಜಿಸುವ ಚಿಗುರೆಲೆಗಳಿಂದಲೂ ಕೆಳಗೆ ಬಾಗಿರುವ ರೆಂಬೆಗಳುಳ್ಳ ಮತ್ತು ಲತೆಗಳಿಂದ ಆಲಿಂಗಿಸಲ್ಪಟ್ಟ ವೃಕ್ಷಗಳ ವೈಭವದಿಂದಲೂ, ನಿರ್ಮಲಜಲದಿಂದ ತುಂಬಿ ಗಂಡುಹೆಣ್ಣು ನೀರುಹಕ್ಕಿಗಳು ಜೊತೆಜೊತೆಯಾಗಿ ನಲಿದಾಡುವ ಸರೋವರಗಳಿಂದಲೂ, ಮೀನುಗಳು ಕುಪ್ಪಳಿಸಿ ಎದ್ದು ಬಿದ್ದಾಗ ಅಲ್ಲೋಲಕಲ್ಲೋಲವಾದ ನೀರಿನಲ್ಲಿ ಅಲುಗಾಡಿ ನಲಿಯುವ ಕಮಲ, ಕುಮುದ, ಕುವಲಯ, ಕಲ್ಹಾರ, ನೀಲೋತ್ಪಲ, ಕೆಂಪು ಶತಪತ್ರ ಕಮಲ ಮುಂತಾದ ಪುಷ್ಪಗಳುಳ್ಳ ವನಪ್ರದೇಶಗಳಲ್ಲಿ ಮನೆಮಾಡಿಕೊಂಡು ಕೇವಲ ವಿಹಾರನಿರತವಾಗಿ ಮಧುರ ಧ್ವನಿಗಳಿಂದ ಸಂತಸವನ್ನುಂಟುಮಾಡುವ ಪಕ್ಷಿ ನಿವಹದಿಂದ, ಇಂದ್ರಿಯಗಳನ್ನು ತಣಿಸುವ ಸನ್ನಿವೇಶಗಳಿಂದ ದೇವಲೋಕದ ಐಶ್ವರ್ಯವನ್ನು ಮೀರಿದವುಗಳಾಗಿವೆ.

ಯತ್ರಹವಾವ ನಭಯಮಹೋರಾತ್ರಾದಿಭಿಃ ಕಾಲವಿಭಾಗೈರುಪ ಲಕ್ಷ್ಯತೇ ||೧೧||

= ಈ ಲೋಕಗಳಲ್ಲಿ (ಸೂರ್ಯಚಂದ್ರನಕ್ಷತ್ರಾದಿಗಳ ಸಂಚಾರವಿಲ್ಲದಿರುವದರಿಂದ), ಹಗಲು ರಾತ್ರಿಗಳೆಂಬ ಕಾಲವಿಭಾಗಗಳ ಭಯವು ಇಲ್ಲವೇ ಇಲ್ಲ.

ಯತ್ರಹಿ ಮಹಾಹಿಪ್ರವರ ಶಿರೋಮಣಯಃ ಸರ್ವಂತಮಃ ಪ್ರಬಾಧಂತೇ ||೧೨||

ಅಲ್ಲಿ, ಸರ್ಪಶ್ರೇಷ್ಠಗಳ ಶಿರೋರತ್ನಗಳು ಕತ್ತಲೆಯನ್ನೆಲ್ಲಾ ಇಲ್ಲವಾಗಿಸುತ್ತವೆ.

ನವಾ ಏತೇಷು ವಸತಾಂ ದಿವ್ಯೌಷಧಿ ರಸರಸಾಯನಾನ್ನ ಪಾನಸ್ನಾನಾ
ದಿಭಿರಾಧಯೋವ್ಯಾಧಯೋವಲೀಪಲಿತಜರಾದಯಶ್ಚ ದೇಹ ವೈವರ್ಣ್ಯ
ದೌರ್ಗಂಧ್ಯ ಸ್ವೇದ ಕ್ಲಮಗ್ಲಾನಿರಿತಿ ವಯೋವಸ್ಥಾನಭವಂತಿ ॥೧೩॥

= ಈ ಬಿಲ ಸ್ವರ್ಗಗಳಲ್ಲಿ ವಾಸಮಾಡುವವರಿಗೆ, ಅಲೌಕಿಕ ಔಷಧಿರಸ ರಸಾಯನ ಅನ್ನಪಾನ ಸ್ನಾನಾದಿಗಳ ಕಾರಣದಿಂದ ಆಧಿವ್ಯಾಧಿಗಳೂ, ನರೆಗೂದಲು ಚರ್ಮದ ಸುಕ್ಕು ಮುಪ್ಪು ಮೊದಲಾದವುಗಳೂ, ದೇಹದಲ್ಲಿ ಬೆವರಿನ ದುರ್ವಾಸನೆ ದೆಹಾಯಾಸ ಮನೋಗ್ಲಾನಿ ಮುಂತಾದ ವಯೋನಿಮಿತ್ತ ಅವಸ್ಥೆಗಳು ಉಂಟಾಗುವುದೇ ಇಲ್ಲ.

ನಹಿ ತೇಷಾಂ ಕಲ್ಯಾಣಾನಾಂ ಪ್ರಭವತಿ ಕುತಶ್ಚ ನ ಮೃತ್ಯುರ್ವಿನಾ
ಭಗವತ್ತೇಜಸಶ್ಚಕ್ರಾಪದೇಶಾತ್ ॥೧೪॥

ಅಲ್ಲಿನವರಿಗೆ, ಭಗವಂತನ ಸುದರ್ಶನಚಕ್ರದ ಸಂಕೇತದಂತೆ ಮೃತ್ಯುವಿನ ಭಯವಲ್ಲದೆ, ಆವರ ಸುಖಪ್ರಾಪ್ತಿಗೆ ಬೇರೆ ಯಾವ ಅಡ್ಡಿಯೂ ಇರುವುದಿಲ್ಲ.

ದಡ್ಡರು, ಸ್ವರ್ಗಸುಖವನ್ನೂ ಮೀರಿಸಿದ ಇಲ್ಲಿನ ಸುಖಭೋಗಗಳಿಗಾಗಿ ಆಸೆಪಡಬಹುದು. ಆದರೆ, ಕರ್ಮದ ಮಿತಿ ಒದಗಿದಾಗ ಮರಣಹೊಂದಿ ಮತ್ತೆ ಸಂಸಾರಕ್ಕೆ ಬರಲೇಬೇಕು. ಪಾಶ್ಚಿಮಾತ್ಯರ ಸುಖಜೀವನದ ಬೇಟೆ ಇದರಂತೆಯೇ ಸರಿ. ಇಂತಹ ಜೀವನಕ್ಕಾಗಿ ಹಾತೊರೆಯುವ ಕಲಿಯುಗದ ಭಾರತೀಯರ ಸ್ಥಿತಿ ಅತ್ಯಂತ ಶೋಚನೀಯವಾದುದು.

ಯಸ್ಮಿನ್ಪ್ರವಿಷ್ಟೇ ಸುರವಧೂನಾಂ ಪ್ರಾಯಃ ಪುಂಸವನಾನಿ
ಭಯಾದೇವ ಸ್ರವಂತಿ ಪತಂತಿಚ ॥೧೫॥

= ಸುದರ್ಶನಚಕ್ರವು ಈ ಲೋಕಗಳಲ್ಲಿ ಕಾಣಿಸಿಕೊಂಡಾಗ, ಪ್ರಾಯಶಃ ಅಸುರವನಿತೆಯರ ಗರ್ಭಗಳು ಭಯದಿಂದ ಜಾರಿ ಬಿದ್ದುಹೋಗುತ್ತವೆ.

ಅಥಾತಲೇ ಮಯಪುತ್ರೋಽಸುರೋ ಬಲೋ ನಿವಸತಿ ಯೇನಹ ವಾ
ಇಹ ಸೃಷ್ಟಾಃ ಷಣ್ಣವತಿರ್ಮಾಯಾಃ ಕಾಶ್ಚನಾದ್ಯಾಪಿ ಮಾಯಾವಿನೋ
ಧಾರಯಂತಿ ಯಸ್ಯಚ ಜೃಂಭಮಾಣಸ್ಯ ಮುಖತಸ್ತ್ರಯಃ ಸ್ತ್ರೀಗಣಾ
ಉಪಪದ್ಯಂತಸ್ವೈರಿಣ್ಯಃ ಕಾಮಿನ್ಯಃ ಪುಂಶ್ಚಲ್ಯ ಇತಿ ಯಾವೈ
ಬಿಲಾಯನಂ ಪ್ರವಿಷ್ಟಂ ಪುರುಷಂ ರಸೇನ ಹಾಟಕಾಖ್ಯೇನಸಾಧಯಿತ್ವಾ

ಸ್ವವಿಲಾಸಾವಲೋಕನಾನುರಾಗಸ್ಮಿತ ಸಂಲಾಪೋಪಗೂಹನಾದಿಭಿಃ
ಸ್ವೈರಂಕಿಲ ರಮಯಂತಿ ಯಸ್ಮಿನ್ನುಪಯುಕ್ತೇ ಪುರುಷ ಈಶ್ವರೋಹಂ
ಸಿದ್ಧೋಹಮಿತ್ಯಯುತ
ಮಹಾಗಜಬಲಮಾತ್ಮಾನಮಭಿಮನ್ಯಮಾನಃಕಥ್ಯತೇ ಮದಾಂಧ ಇವ
॥೧೬॥

ಅಥ = ಈಗ; ಅತಲ ಲೋಕದ ವೈಶಿಷ್ಟ್ಯ ವರ್ಣನೆ – ಅತಲ ಲೋಕದಲ್ಲಿ ಮಯಾಸುರಪುತ್ರನಾದ ಬಲ ಎಂಬುವನು ತೊಂಭತ್ತಾರು ಬಗೆಯ ಮಾಯಾ ವಿದ್ಯೆಗಳನ್ನು ಪ್ರದರ್ಶಿಸಿದ್ದಾನೆ. ಅವುಗಳಲ್ಲಿ ಕೆಲವನ್ನು ಮಾಯಾಮಾಟಗಾರರು ಈಗಲೂ ಪ್ರಯೋಗದಲ್ಲಿಟ್ಟುಕೊಂಡಿದ್ದಾರೆ. ಮಾಯಾವಿಯಾದ ಬಲನು ಆಕಳಿಸಿದಾಗ ಮೂರು ಬಗೆಯ ಸ್ತ್ರೀಯರು ಉತ್ಪನ್ನರಾದರು – ಸ್ವೈರಿಣಿ, ಕಾಮಿನಿ, ಪುಂಶ್ಚಲೀ ಎಂದು. ಆ ಸ್ತ್ರೀಯರು, ಕಾರಣಾಂತರದಿಂದ ಅತಲಲೋಕಕ್ಕೆ ಬಂದ ಪುರುಷನನ್ನು ಹಾಟಕವೆಂಬ ರಸಪಾನದಿಂದ ವಶಪಡಿಸಿಕೊಂಡು, ತಮ್ಮ ಹಾವಭಾವ ವಿಲಾಸಗಳಿಂದ ರಮಿಸಿ, ಆಲಿಂಗಿಸಿ ಮನಬಂದಂತೆ ರಮಿಸುತ್ತಾರೆ. ಹಾಟಕರಸಪಾನ ಮಾಡಿದ ಪುರುಷನು ತಾನೇ ಈಶ್ವರನೆಂದೂ ಸಿದ್ಧಪುರುಷನೆಂದೂ, ಹತ್ತು ಸಾವಿರ ಆನೆಗಳ ಬಲವುಳ್ಳವನೆಂದೂ ಮದಾಂಧನಾಗಿರುತ್ತಾನೆಂದು ಹೇಳುವರು.

ಕಾಮಕ್ರೀಡೆ ಕೊನೆಗೊಂಡಾಗ ತನಗೆ ಒದಗುವ ದುಸ್ಥಿತಿಯನ್ನು ಅರಿಯದ ಅವನು ಮಹಾಮೂಢ.

ತತೋಧಸ್ತಾದ್ವಿತಲೇ ಹರೋ ಭಗವಾನ್ ಹಾಟಕೇಶ್ವರಃ ಸ್ವಪಾರ್ಷದ
ಭೂತಗಣಾವೃತಃ ಪ್ರಜಾಪತಿಸರ್ಗೋಪಬೃಂಹಣಾಯ ಭವೋ
ಭವಾನ್ಯಾಸಹ ಮಿಥುನೀ ಭೂತ ಆಸ್ತೇ; ಯತಃ ಪ್ರವೃತ್ತಾ
ಸರಿತ್ಪ್ರವರಾಹಾಟಕೀನಾಮ ಭವಯೋರ್ವೀರ್ಯೇಣ ಯತ್ರಥ
ಚಿತ್ರಭಾನುರ್ಮಾತರಿಶ್ವನಾ ಸಮಿಧ್ಯಮಾನ ಓಜಸಾ ಪಿಬತಿಯತ್ರ
ತನ್ನಿಷ್ಟ್ಯುತಂ ಹಾಟಕಾಖ್ಯಂ ಸುವರ್ಣಂ
ಭೂಷಣೇನಾಸುರೇಂದ್ರಾವವರೋಧೇಷು ಪುರುಷಾಃ
ಸಹಪುರಷೀಭಿರ್ಧಾರಯಂತಿ ॥೧೭॥

= ಅತಲ ಲೋಕದ ಕೆಳಗಿರುವ ವಿತಲ ಲೋಕದಲ್ಲಿ ಶ್ರೀ ಹರಭಗವಾನನು, ಹಾಟಕೇಶ್ವರನೆಂಬ ಹೆಸರಿನಿಂದ, ತನ್ನ ಸೇವಕರಾದ ಭೂತಗಣಗಳಿಂದ ಸೇವೆಯನ್ನು ಕೈಗೊಳ್ಳುತ್ತಾ, ಬ್ರಹ್ಮದೇವರಿಂದ ಸೃಷ್ಟಿಸಲ್ಪಡುವ ಪ್ರಜಾಭಿವೃದ್ಧಿಗಾಗಿ ಭವಾನೀ

ದೇವಿಯೊಡನೆ ರತಿಕ್ರೀಡೆಯಲ್ಲಿ ನಿರತರಾಗಿ ಇರುವನು. ಈ ಈರ್ವರ ಪ್ರೇಮರಸ ಪ್ರವಾಹವು ಹಾಟಕೀ ಎಂಬ ದಿವ್ಯನದಿಯಾಗಿ ಹರಿಯುತ್ತಿದೆ. ವಾಯುವಿನಿಂದ ಸಹಕೃತನಾದ ಅಗ್ನಿಯು ಈ ದ್ರವವನ್ನು ಶೋಷಿಸುವುದರಿಂದ ಅತ್ಯಂತ ತೇಜಃಪುಂಜವಾದ ಹಾಟಕವೆಂಬ ಬಂಗಾರವು ಅಸುರೇಂದ್ರರ ಭವನಗಳಲ್ಲಿ ಸ್ತ್ರೀಪುರುಷರಿಗೆ ಆಭರಣಗಳಾಗಲು ಅನುವಾಗುವುದು.

ತತೋಧಸ್ತಾತ್ಸುತಲೇ ಉದಾರಶ್ರವಾಃ ಪುಣ್ಯಶ್ಲೋಕೋ
ವಿರೋಚನಾತ್ಮಜೋ ಬಲಿರ್ಭಗವತಾ ಮಹೇಂದ್ರಸ್ಯ ಪ್ರಿಯಂ
ಚಿಕೀರ್ಷಮಾಣೇನಾದಿತೇರ್ಲಬ್ಧಕಾಯೋ ಭೂತ್ವಾ ವಟುವಾಮನ
ರೂಪೇಣ ಪರಾಕ್ಷಿಪ್ತ ಲೋಕತ್ರಯೋಭಗವದನುಕಂಪಯೈವ ಪುನಃ
ಪ್ರವೇಶಿತ ಇಂದ್ರಾದಿಷ್ವವಿದ್ಯಮಾನಯಾ ಸುಸಮೃದ್ಧಯಾ
ಶ್ರಿಯಾಭಿಜುಷ್ಟಃ ಸ್ವಧರ್ಮೇಣಾರಾಧಯಂ ಸ್ತಮೇವ
ಭಗವಂತಮಾರಾಧನೀಯಮಪಗತಸಾಧ್ವಸ ಆಸ್ತೇಽಧುನಾಪಿ ॥೧೮॥

ತತಃ ಅಧಸ್ತಾತ್ = ವಿತಲ ಲೋಕದ ಕೆಳಗೆ; ಸುತಲೇ = ಸುತಲ ಲೋಕದಲ್ಲಿ; ಉದಾರಶ್ರವಾಃ = ವಿಶಾಲಕೀರ್ತಿವಂತನಾದ; ಪುಣ್ಯ ಶ್ಲೋಕಃ = ಪುಣ್ಯಚರಿತ್ರನಾದ; ವಿರೋಚನಾತ್ಮಜಃ ಬಲಿಃ = ವಿರೋಚನಪುತ್ರನಾದ ಬಲಿಮಹಾರಾಜನು; ಮಹೇಂದ್ರಸ್ಯಪ್ರಿಯಂ ಚಿಕೀರ್ಷಮಾಣೇನ = ದೇವೇಂದ್ರನಿಗೆ ಉಪಕಾರ ಮಾಡಲಿಚ್ಛಿಸಿದ; ಭಗವತಾ = ಭಗವಂತನಿಂದ; ಅದಿತೇಃ ಲಬ್ಧಕಾಯಃ ಭೂತ್ವಾ = ಅದಿತೀದೇವಿಯ ಗರ್ಭಸಂಭೂತನೆನಿಸಿದ; ವಟು ವಾಮನರೂಪೇಣ = ವಾಮನ ಬ್ರಹ್ಮಚಾರಿ ರೂಪದಿಂದ; ಪರಾಕ್ಷಿಪ್ತ ಲೋಕತ್ರಯಃ = ತ್ರಿಲೋಕಾಧಿಪತ್ಯವನ್ನು ಕಳೆದುಕೊಂಡನು; ಪುನಃ = ಮತ್ತೆ; ಭಗವದನುಕಂಪಯಾ ಏವ = ಭಗವಂತನ ಕಾರುಣ್ಯದಿಂದಲೇ; ಇಂದ್ರಾದಿಷು ಅವಿದ್ಯಮಾನಯಾ = ಇಂದ್ರಲೋಕಾದಿಗಳಲ್ಲಿಯೂ ಸಿಗಲಾರದಂತಹ; ಸುಸಮೃದ್ಧಯಾ ಪ್ರವೇಶಿತಃ = ಸುಖಸಮೃದ್ಧಿಯಿಂದ ಕೂಡಿದ ಸುತಲ ಲೋಕದಲ್ಲಿ ಪ್ರವೇಶಗೊಳಿಸಲ್ಪಟ್ಟವನಾಗಿ; ಶ್ರಿಯಾ ಅಭಿಜುಷ್ಟಃ = ಐಶ್ವರ್ಯ ಸಂಪನ್ನನಾಗಿ; ಆರಾಧನೀಯಂ = ಸರ್ವರಿಂದಲೂ ಆರಾಧ್ಯನಾದ; ತಂ ಭಗವಂತಂ ಏವ = ಆ ಭಗಂವತನನ್ನೇ; ಸ್ವಧರ್ಮೇಣ ಆರಾಧಯನ್ = ತನಗೆ ಯೋಗ್ಯವಾದ ರೀತಿಯಲ್ಲಿ ಆರಾಧಿಸುತ್ತಾ; ಅಪಗತ ಸಾಧ್ವಸಃ = ನಿರ್ಭಯನಾಗಿ; ಅಧುನಾ ಅಪಿ ಆಸ್ತೇ = ಈಗಲೂ ಇದ್ದಾನೆ.

ತತೋಧಸ್ತಾತ್ತಲಾತಲೇ ಮಯೋನಾಮ ದಾನವೇಂದ್ರಸ್ತ್ರಿಪುರಾಧಿಪತಿ
ರ್ಭಗವತಾ ಪುರಾರಿಣಾ ತ್ರಿಲೋಕೀಶಂ ಚಿಕೀರ್ಷುಣಾ ನಿರ್ದಗ್ಧ

ಸ್ವಪುರತ್ರಯ ಸ್ತತ್ಪ್ರಸಾದಾಲ್ಲಬ್ಧಪದೋ ಮಾಯಾವಿನಾಮಾಚಾರ್ಯೋ
ಮಹಾದೇವೇನ ಪರಿರಕ್ಷಿತೋ ವಿಗತಸುದರ್ಶನ ಭಯೋ ಮಹೀಯತೇ
॥೧೯॥

ತತಃ ಅಧಸ್ತಾತ್ = ಸುತಲ ಲೋಕದ ಕೆಳಗೆ; ತಲಾತಲೇ = ತಲಾತಲ ಲೋಕದಲ್ಲಿ; ಮಯಃ ನಾಮ ದಾನವೇಂದ್ರಃ = ಮಯನೆಂಬ ಹೆಸರುಳ್ಳ ದಾನವೇಶ್ವರನು ತ್ರಿಪುರಾಧಿಪತಿಃ = ತಾನು ನಿರ್ಮಿಸಿದ ಮೂರುಪುರಗಳಿಗೆ ಸ್ವಾಮಿಯಾಗಿದ್ದು; ತ್ರಿಲೋಕೀ ಶಂ ಚಿಕೀರ್ಷುಣಾ = ಮೂರು ಲೋಕಗಳಿಗೂ ಮಂಗಳವನ್ನುಂಟುಮಾಡಲು ಬಯಸಿದ; ಭಗವತಾ ಪುರಾರಿಣಾ = ಪುರಾರಿಯೆಂಬ ಬಿರುದನ್ನು ಹೊತ್ತ ಭಗವಾನ್ ರುದ್ರದೇವರಿಂದ; ನಿರ್ದಗ್ಧಸ್ವಪುರತ್ರಯಃ = ತನ್ನ ಮೂರು ಪಟ್ಟಣಗಳು ಪೂರ್ಣವಾಗಿ ಭಸ್ಮವಾಗಿ ಬಿಡಲು; ತತ್ ಪ್ರಸಾದಾತ್ ಲಬ್ಧಪದಃ = ಶಿವನಪ್ರಸಾದದಿಂದ ತಲಾತಲ ಲೋಕದಲ್ಲಿ ಸ್ಥಾನವನ್ನು ಪಡೆದು; ಮಾಯಾವಿನಾಂ ಆಚಾರ್ಯಃ = ಮಾಯಾವಿಗಳಿಗೆಲ್ಲಾ ಗುರುವಾದ ಮಯನು; ಮಹಾದೇವೇನ ಪರಿರಕ್ಷಿತಃ = ಮಹಾರುದ್ರದೇವರಿಂದ ರಕ್ಷಣೆಯನ್ನು ಪಡೆದು; ವಿಗತ ಸುದರ್ಶನ ಭಯಃ = ಸುದರ್ಶನದಿಂದ ಮರಣಭಯವಿಲ್ಲದೆ; ಮಹೀಯತೇ = ನೆಮ್ಮದಿಯಿಂದ ಇದ್ದಾನೆ.

ತ್ರಿಪುರಾಸುರರಿಗೆ ಮೂರು ಪಟ್ಟಣಗಳನ್ನು ಕಟ್ಟಿಕೊಟ್ಟ ಮಯನು ತಾನು ಅದರ ಅಧಿಪತಿಯಾಗಿದ್ದ. ತ್ರಿಪುರಾಸುರರಿಂದ ಲೋಕಕ್ಕೆ ಉಂಟಾಗುತ್ತಿದ್ದ ಅಮಂಗಳವನ್ನು ಪರಿಹರಿಸಲು ರುದ್ರ ದೇವರು ಆ ಮೂರು ಪಟ್ಟಣಗಳನ್ನು ದಹಿಸಿ ಪುರಾರಿ ಎನಿಸಿದರು. ಅನಂತರ ಮಯನ ಪ್ರಾರ್ಥನೆಯನ್ನು ಮನ್ನಿಸಿ, ತಲಾತಲದಲ್ಲಿ ಅವನಿಗೆ ನಿರ್ಭಯ ಸ್ಥಾನವನ್ನು ಕಲ್ಪಿಸಿಕೊಟ್ಟರು. ಸರ್ವತಂತ್ರ ಸ್ವತಂತ್ರನಾದ ಮಹಾವಿಷ್ಣುವೇ ಶಿವನಲ್ಲಿ ಪರಶಿವನಾಗಿದ್ದು ವರದಾನ ಮಾಡಿದವನಾದುದರಿಂದ ಮಯನಿಗೆ ಸುದರ್ಶನದಿಂದ ಮರಣಭಯವಿಲ್ಲದಂತಾಯಿತು ಎಂದು ತಿಳಿಯಬೇಕು.

ತತೋಧಸ್ತಾನ್ಮಹಾತಲೇ ಕಾದ್ರ್ರವೇಯಾಣಾಂ ಸರ್ಪಾಣಾಂ
ನೈಕಶಿರಸಾಂ ಕ್ರೋಧವಶೋ ನಾಮಗಣಃ ಕುಹಕತಕ್ಷಕ
ಕಾಲಿಯಸುಷೇಣಾದಿ ಪ್ರಧಾನಾ ಮಹಾಭೋಗವಂತಃ ಪತತ್ರಿ
ರಾಜಾಧಿಪತೇಃ ಪುರುಷವಾಹಾದನವರತಮುದ್ವಿಜ ಮಾನಾಃ
ಸ್ವಕಲತ್ರಾಪತ್ಯ ಸುಹೃತ್ಕುಟುಂಬ ಸಂಗೇನ ಕ್ವಚಿತ್ಪ್ರಮತ್ತಾ ವಿಹರಂತಿ
॥೨೯॥

ತತಃ ಅಧಸ್ತಾತ್ = ತಲಾತಲ ಲೋಕಕ್ಕಿಂತ ಕೆಳಗೆ; ಮಹಾತಲೇ = ಮಹಾತಲ ಲೋಕದಲ್ಲಿ; ನೈಕಶಿರಸಾಂ = ಅನೇಕ ಹೆಡೆಗಳುಳ್ಳ; ಕಾದ್ರವೇಯಾಣಾಂ ಸರ್ಪಾಣಾಂ = ಕದ್ರೂದೇವಿಯಿಂದ ಜನಿಸಿದ ಸರ್ಪಗಳ; ಕ್ರೋಧವಶೋ ನಾಮಗಣಃ = ಅತಿ ಕೋಪವೇ ಸ್ವಭಾವವಾಗಿ ಉಳ್ಳ ಸಮೂಹವು ಇದೆ; ಕುಹಕ, ತಕ್ಷಕ, ಕಾಲಿಯ, ಸುಷೇಣ; ಆದಿ ಪ್ರಧಾನಾಃ = ಈ ಮೊದಲಾದವರು ಪ್ರಧಾನರಾಗಿರುವರು; ಮಹಾಭೋಗವಂತಃ = ಅವರು ದೊಡ್ಡ ದೊಡ್ಡ ಹೆಡೆಗಳುಳ್ಳವರು; ಪುರುಷವಾಹಾತ್ = ಶ್ರೀಮನ್ನಾರಾಯಣನಿಗೆ ವಾಹನವಾದ; ಪತತ್ರಿರಾಜಾಧಿಪತೇಃ = ಪಕ್ಷಿನಾಯಕರಿಗೆಲ್ಲಾ ಅಧಿಪತಿಯಾದ ಗರುಡದೇವನ ದೆಸೆಯಿಂದ; ಉದ್ವಿಜಮಾನಾಃ = ಭಯಕ್ಕೆ ಒಳಗಾಗಿರುತ್ತಾ; ಸಕಲತ್ರ ಅಪತ್ಯಸುಹೃತ್ ಕುಟುಂಬ ಸಂಗೇನ = ಪತ್ನೀಪುತ್ರ ಬಾಂಧವ ಕುಟುಂಬದಿಂದ ಕೂಡಿಕೊಂಡು; ಕ್ವಚಿತ್ = ಕೆಲವೊಮ್ಮೆ; ಪ್ರಮತ್ತಾಃ = ಮೈಮರೆತು; ವಿಹರಂತಿ = ವಿಹರಿಸುತ್ತಾರೆ.

ಇವರಿಗೆ ಸುಖದ ಕಡೆಗೆ ಗಮನವೇ ಹೊರತು ವಿಪತ್ತಿನಿಂದ ಪಾರಾಗುವುದು ಹೇಗೆಂಬ ಯೋಚನೆ ಇಲ್ಲದಿರುವುದೇ ಮಹಾದೋಷ. ನಮ್ಮ ಈ ಲೋಕದ ಜನರೂ ಬಹಳ ಮಟ್ಟಿಗೆ ಹೀಗೆಯೇ ಅಲ್ಲವೇ!

**ತತೋಽಧಸ್ತಾತ್ ರಸಾತಲೇ ದೈತೇಯಾ ದಾನವಾಃ ಪಣಯೋ ನಾಮ ನಿವಾತಕವಚಾಃ ಕಾಲೇಯಾಹಿರಣ್ಯಪುರವಾಸಿನ ಇತಿ ವಿಬುಧ ಪ್ರತ್ಯನೀಕಾ ಉತ್ಪತ್ತ್ಯಾಮಹೌಜಸೋ ಮಹಾ ಸಾಹಸಿನೋ ಭಗವತಃಸಕಲಲೋಕಾನುಭಾವಸ್ಯ ಹರೇರೇವ ತೇಜಸಾ ಪ್ರತಿಹತ ಬಲಾವಲೇಪಾ ಬಿಲೇಶಯಾ ಇವ ವಸಂತಿ ಯೋ ವೈಸಾರಮೇಯೇಂದ್ರದೂತ್ಯಾ ವಾಗ್ಭಿರ್ಮಂತ್ರ ವರ್ಣಾಭಿರಿಂದ್ರಾದ್ಬಿಭ್ಯತಿ ||೨೧||**

= ಮಹಾತಲಕ್ಕಿಂತ ಕೆಳಗೆ, ರಸಾತಲ ಲೋಕದಲ್ಲಿ ದಿತೀದೇವಿಯ ಮತ್ತು ದನೂದೇವಿಯ ಮಕ್ಕಳಾದ, ಪಣಿಗಳೆಂದು ಕರೆಸುವ ನಿವಾತಕವಚರು, ಕಾಲೇಯರು, ಹಿರಣ್ಯಪುರ ನಿವಾಸಿಗಳು ಎಂಬ ಅಸುರ ಜೀವಿಗಳು ದೇವತೆಗಳ ಶತ್ರುಗಳಾಗಿದ್ದು, ಹುಟ್ಟಿನಿಂದಲೇ ಮಹಾ ಬಲಾಢ್ಯರೂ ಮಹಾ ಸಾಹಸಿಗಳೂ ಆಗ್ಗಿ, ಸಕಲಲೋಕ ನಾಯಕನಾದ ಭಗವಾನ್ ಶ್ರೀಹರಿಯ ಸುದರ್ಶನದ ತೇಜಸ್ಸಿನಿಂದ ತಮ್ಮ ಬಲವು ಕುಗ್ಗಿದವರಾಗಿ, ಬಿಲವಾಸಿಗಳಾದ ಸರ್ಪಗಳಂತೆ ಅಡಗಿ ಜೀವಿಸುವರು. ಇಂದ್ರನ ದೂತಿಯಾದ ಸಾರಮೇಯ ಎಂಬಾಕೆಯು ಉಚ್ಚರಿಸುವ ಮಂತ್ರಗಳ ಪ್ರಭಾವದಿಂದ ಅವರು ದೇವೇಂದ್ರನಿಗೆ ಹೆದರಿಕೊಂಡಿದ್ದಾರೆ.

ಸಾರಮೇಯಾ ಎಂಬುದು ಹೆಣ್ಣು ನಾಯಿಯ ರೂಪ. ರಸಾತಲಲೋಕದಲ್ಲಿ ಶ್ರೀಹರಿಯು ಶ್ವಾನರೂಪದಿಂದ ಪೂಜೆಗೊಳ್ಳುವನೆಂದು ಪುರಾಣಾಂತರದಿಂದ ತಿಳಿದು ಬರುವುದು.

ಅಧೋಲೋಕಗಳಲ್ಲಿ ಶ್ರೀಹರಿಯನ್ನು ಪೂಜಿಸುವವರೂ ಇರುವರೆಂದಾಗ, ಆ ಲೋಕಗಳಲ್ಲಿ ಅಸುರ ಜೀವಿಗಳ ಸಂಖ್ಯೆಯೇ ಹೆಚ್ಚಾದರೂ, ಮುಕ್ತಿ ಯೋಗ್ಯರಾದ ಸುಜೀವಿಗಳೂ ಕೆಲವರು ಅಲ್ಲಿರುವರು ಎಂದಹಾಗಾಯಿತು.

> ತತೋಧಸ್ತಾತ್ಪಾತಾಲೇ ನಾಗಲೋಕಪತಯೋ ವಾಸುಕಿಪ್ರಮುಖಾಃ
> ಶಂಖ ಕುಲಿಕ ಮಹಾಶಂಖ ಶ್ವೇತ ಧನಂಜಯಧೃತರಾಷ್ಟ್ರ ಶಂಖಚೂಡ
> ಕಂಬಲಾಶ್ವತರ ದೇವದತ್ತಾದಯೋ ಮಹಾಭೋಗಿನೋ ಮಹಾಮರ್ಷಾ
> ನಿವಸಂತಿತೇಷಾಮು ಹವೈ ಪಂಚಸಪ್ತ ದಶ ಶತ ಸಹಸ್ರ ಶೀರ್ಷಾಣಾಂ
> ಫಣಾಸು ವಿರಚಿತಾ ಮಹಾಮಣಯೋರೋಚಿಷ್ಣವಃ ಪಾತಾಲವಿವರ
> ತಿಮಿರನಿಕರಂ ಸ್ವರೋಚಿಷಾ ವಿಧಮಂತಿ ॥೨೨॥

= ರಸಾತಲಕ್ಕಿಂತ ಕೆಳಗೆ ಪಾತಾಳ ಲೋಕದಲ್ಲಿ; ವಾಸುಕಿ ಪ್ರಮುಖಾಃ = ವಾಸುಕಿಯ ನಾಯಕತ್ವದಲ್ಲಿ; ಮಹಾಭೋಗಿನಃ = ವಿಸ್ತಾರಗಳಾದ ಹೆಡೆಗಳುಳ್ಳ, ಮಹಾಮರ್ಷಾಃ = ಮಹಾಕೋಪಸ್ವಭಾವಿಗಳಾದ; ಶಂಖ,ಕುಲಿಕ, ಮಹಾಶಂಖ, ಶ್ವೇತ, ಧನಂಜಯ, ಧೃತರಾಷ್ಟ್ರ, ಶಂಖಚೂಡ, ಕಂಬಲಾಶ್ವತರ, ದೇವದತ್ತ, ಆದಯಃ ಇವರೇ ಮೊದಲಾದ; ನಾಗಲೋಕಪತಯಃ = ನಾಗಲೋಕಗಳ ನಾಯಕರು; ನಿವಸಂತಿ = ಇದ್ದಾರೆ; ಯೇಷಾಂಉಹ ವೈ = ಈ ಸರ್ಪಗಳ; ಪಂಚ, ಸಪ್ತ, ದಶ, ಶತ, ಸಹಸ್ರ ಶೀರ್ಷಾಣಾಂ = ಐದು, ಏಳು, ಹತ್ತು, ನೂರು, ಸಾವಿರ ಹೆಡೆಗಳುಳ್ಳವುಗಳ; ಫಣಾಸು = ಹೆಡೆಗಳಲ್ಲಿ; ವಿರಚಿತ = ಉಂಟಾಗಿರುವ; ರೋಚಿಷ್ಣವಃ = ಕಾಂತಿಯುಕ್ತಗಳಾದ; ಮಹಾಮಣಯಃ = ಅನರ್ಘ್ಯರತ್ನಗಳು; ಸ್ವರೋಚಿಷಾ = ತಮ್ಮ ಕಾಂತಿಯಿಂದ; ಪಾತಾಲವಿವರತಿಮಿರನಿಕರಂ = ಪಾತಾಳಲೋಕದ ಕತ್ತಲೆಯ ಸಮೂಹವನ್ನು; ವಿಧಮಂತಿ = ನಾಶಗೊಳಿಸುತ್ತವೆ.

**"ಶ್ರೀಕೃಷ್ಣಾರ್ಪಣಮಸ್ತು"**

# ಶ್ರೀಮದ್ಭಾಗವತ

## ಅಧ್ಯಾಯ – ಇಪ್ಪತ್ತೈದು

## ಸಂಕರ್ಷಣ ಮೂರ್ತಿ

ತಸ್ಯ ಮೂಲದೇಶೇ ತ್ರಿಂಶದ್ಯೋಜನ ಸಹಸ್ರಾಂತರ ಆಸ್ತೇ ಯಾವೈಕಲಾ ಭಗವತಸ್ತಾಮಸೀ ಸಮಾಖ್ಯಾತಾನಂತ ಇತಿಸಾತ್ವತೀಯಾ ದ್ರಷ್ಟ್ರು ದೃಶ್ಯಯೋಃ ಸಂಕರ್ಷಣಮಹಮಿತ್ಯಭಿಮಾನಲಕ್ಷಣಂ ಯಂ ಸಂಕರ್ಷಣ ಮಿತ್ಯಾಚಕ್ಷತೇ ॥೧॥

ತಸ್ಯ ಮೂಲದೇಶೇ = ಪಾತಾಳದ ಕೆಳಗಿನ ಪ್ರದೇಶದಲ್ಲಿ; ತ್ರಿಂಶದ್ಯೋಜನ ಸಹಸ್ರಾಂತರೇ = ಮೂವತ್ತು ಸಾವಿರ ಯೋಜನದಂತರದಲ್ಲಿ; ಯಾಕಲಾ ವೈ ಭಗವತಃ ತಾಮಸೀ ಸಮಾಖ್ಯಾತಾ = ಯಾವುದು (ಸಂಕಲ್ಪಮಾತ್ರದಿಂದ) ಭಗವಂತನ ತಾಮಸಗುಣಾಂಶವೆನಿಸುವುದೋ; ಅದು; ಅನಂತಃ ಇತಿ = ಅನಂತ ಎಂಬ ಹೆಸರಿನ ರೂಪವಾಗಿದೆ; ದ್ರಷ್ಟ್ರು ದೃಶ್ಯಯೋಃ = ಸಾಕ್ಷಿ ಎನಿಸುವ ಜೀವನಿಗೂ ಬಾಹ್ಯ ಪ್ರಪಂಚಕ್ಕೂ; ಸಂಕರ್ಷಣಂ = ಸಂಬಂಧವನ್ನೇರ್ಪಡಿಸುವ; ಅಹಂ ಇತಿ ಅಭಿಮಾನ ಲಕ್ಷಣಂ = ನಾನು ಎಂಬ ಭ್ರಾಂತಿ ಜ್ಞಾನವನ್ನು ಹುಟ್ಟಿಸುವ; ಯಂ = ಯಾವ ಈ ರೂಪವನ್ನು; ಸಾತ್ವತೀಯಾಃ = ಜ್ಞಾನಿಗಳು; ಸಂಕರ್ಷಣಂ ಇತಿ ಆಚಕ್ಷತೇ = ಸಂಕರ್ಷಣಮೂರ್ತಿ ಎಂದು ಹೆಸರಿಸುತ್ತಾರೆ.

ಅವ್ಯಕ್ತದಿಂದ ತ್ರಿಗುಣಗಳೂ, ಅವುಗಳ ಬೆರಕೆಯಿಂದ ಸತ್ವಾಧಿಕವಾದ ಮಹತ್ತತ್ವವೂ, ಅದರೊಡನೆ ಬೆರಕೆಯಿಂದ ತಮೋಧಿಕವಾದ ಅಹಂಕಾರ ತತ್ವವೂ ಉಂಟಾಗುವುವು. ಅಹಂಕಾರ ತತ್ವದ ಅಭಿಮಾನಿ ರುದ್ರದೇವರು. ಅವರ ಅಂತರ್ಯಾಮಿಯಾಗಿ ಜೀವರಿಗೆ ನಾನು ಎಂಬ ಅಹಂಕಾರವನ್ನುಂಟು ಮಾಡುವವನು ಸಂಕರ್ಷಣ ಮೂರ್ತಿ. ತಮೋಗುಣ ಅವನದಲ್ಲ; ಆದರೆ ಅವನು ಅದರ ಪ್ರವರ್ತಕನಷ್ಟೇ. ಆದಿಶೇಷನ ಅಂತರ್ಯಾಮಿಯಾಗಿ ಸರ್ಪರೂಪದಲ್ಲಿರುವ ಈ ಸ್ವಾಮಿಗೆ ಅನಂತ ಎಂಬ ಹೆಸರೂ ಉಂಟು. ರುದ್ರ ದೇವರೇ ಶೇಷ ಪದವಿಗೆಬರುವವರು. ಆದುದರಿಂದ ಸಂಕರ್ಷಣ ಮೂರ್ತಿಯು ಶೇಷಾಂತರ್ಗತನೂ ಹೌದು; ರುದ್ರಾಂತರ್ಗತನೂ ಹೌದು.

**ಯಸ್ಯೇದಂ ಕ್ಷಿತಿಮಂಡಲಂ ಭಗವತೋಽನಂತಮೂರ್ತೇಃ ಸಹಸ್ರಶಿರಸ ಏಕಸ್ಮಿನ್ನೇವ ಶೀರ್ಷಣಿ ಧ್ರಿಯಮಾಣಂಸಿದ್ಧಾರ್ಥ ಇವ ಲಕ್ಷ್ಯತೇ ॥೨॥**

ಸಹಸ್ರ ಶಿರಸಃ = ಸಾವಿರ ಹೆಡೆಗಳುಳ್ಳ; ಯಸ್ಯ ಭಗವತೋ ಅನಂತಮೂರ್ತೇಃ = ಶೇಷಾಂತರ್ಗತ ಅನಂತಭಗವಾನನ; ಏಕಸ್ಮಿನ್ನೇವ ಶಿರ್ಷಣಿ = ಒಂದೇ ಹೆಡೆಯ ಮೇಲೆ; ಧ್ರಿಯಮಾಣಂ = ಧರಿಸಲ್ಪಟ್ಟಿರುವ; ಇದಂಕ್ಷಿತಿಮಂಡಲಂ = ಈ ಭೂಮಂಡಲವು; ಸಿದ್ಧಾರ್ಥ ಇವ ಲಕ್ಷ್ಯತೇ = ಒಂದು ಸಾಸುವೆ ಕಾಳಿನಷ್ಟು ಹಗುರವೆನಿಸುತ್ತದೆ.

ಪಾತಾಳ ಲೋಕಕ್ಕೂ ಅನಂತ ಮೂರ್ತಿಯ ಶಿರಸ್ಥಾನಕ್ಕೂ 30,000 ಯೋಜನದಂತರವಿದೆ ಎಂದುಹೇಳಲಾಗಿದೆ. ಈ ಅಂತರದಲ್ಲಿ ಅಷ್ಟದಿಗ್ಗಜಗಳೂ, ಅವುಗಳು ನಿಂತ ಭೂಮಿಯೂ ಇರುವದನ್ನು ಪುರಾಣಾಂತರದಿಂದ ತಿಳಿಯಬೇಕು.

**ಯಸ್ಯಹವಾ ಇದಂ ಕಾಲೇನೋಪಸಂಜಿಹೀರ್ಷತೋಽಮರ್ಷವಿರಚಿತ ರುಚಿರಭ್ರಮದ್ಭ್ರುವೋರಂತರೇಣಸಾಂಕರ್ಷಣೋ ನಾಮ ರುದ್ರ ಏಕಾದಶವ್ಯೂಹಸ್ತ್ರ್ಯಕ್ಷ ಸ್ತ್ರಿಶಿಖಂ ಶೂಲಮುತ್ತಂಭಯನ್ನುದತಿಷ್ಠತ್ ॥೩॥**

ಇದಂ = ಸೃಷ್ಟವಾಗಿ ಸ್ಥಿತಿಯಲ್ಲಿರುವ ಈ ವಿಶ್ವವನ್ನು; ಕಾಲೇನ = ಮಹಾಪ್ರಳಯಕಾಲ ಸಮೀಪಿಸಿದಾಗ; ಉಪಜೀಹೀರ್ಷತಃ = ಲಯಕಾರ್ಯವನ್ನು ಮಾಡಲಿಚ್ಛಿಸಿದ; ಯಸ್ಯಹವಾ = ಯಾವ ಈ ಸಂಕರ್ಷಮೂರ್ತಿಯ; ಅಮರ್ಷವಿರಚಿತ ರುಚಿರಭ್ರಮತ್ ಭ್ರುವೋಃ ಅಂತರೇಣ = ಕೋಪದಿಂದಲೋ ಎಂಬಂತೆ, ಆದರೂ ಮನೋಹರವಾಗಿ ಚಲಿಸುವ ಹುಬ್ಬುಗಳ ಮಧ್ಯಪ್ರದೇಶದಿಂದ; ಸಾಂಕರ್ಷಣಃ ನಾಮ = ಸಂಕರ್ಷಣಮೂರ್ತಿಯ ಸನ್ನಿಧಾನದಿಂದ ಸಂಕರ್ಷಣನೆಂದೇ ಕರೆಸುವ; ರುದ್ರಃ = ರುದ್ರದೇವನು; ಏಕಾದಶವ್ಯೂಹಃ = ಏಕಾದಶ ರುದ್ರಗಣದಲ್ಲಿ ಪ್ರಮುಖನಾಗಿ; ತ್ರ್ಯಕ್ಷಃ = ಮೂರು ಕಣ್ಣುಗಳುಳ್ಳವನಾಗಿ; ತ್ರಿಶಿಖಂಶೂಲಂ ಉತ್ತಂಭಯನ್ = ಮೂರು ಅಲಗುಗಳುಳ್ಳ ಶೂಲವನ್ನು (ತ್ರಿಶೂಲವನ್ನು) ಎತ್ತಿ ಹಿಡಿದು; ಉದತಿಷ್ಠತ್ = ಆವಿರ್ಭವಿಸಿದನು.

ಪ್ರತಿ ಮಹಾ ಪ್ರಳಯಕಾಲದಲ್ಲಿಯೂ ಹೀಗೆ ನಡೆಯುವುದರಿಂದ, ಹಿಂದೆಯೂ ಪ್ರಳಯಗಳು ನಡೆದು ಹೋದುದರಿಂದ, ಆವಿರ್ಭವಿಸಿದನು ಎಂದು ಹೇಳಲಾಗಿದೆ.

**ಯಸ್ಯಾಂಘ್ರಿ ಕಮಲಯುಗಲಾರುಣ ವಿಶದ ನಖಮಣಿಷಂಡ ಮಂಡಲೇಷ್ವಹಿ ಪತಯಃ**

ಸಹಸಾತ್ವತರ್ಷಭೈರೇಕಾಂತಭಕ್ತಿಯೋಗೇನಾವನಮಂತಃ ಸ್ವವದನಾನಿ
ಪರಿಸ್ಫುರತ್ಕುಂಡಲ ಪ್ರಭಾಮಂಡಿತ ಗಂಡಸ್ಥಲಾನ್ಯತಿಮನೋಹರಾಣಿ
ಪ್ರಮುದಿತ ಮನಸಃ ಖಲುವಿಲೋಕಯಂತಿ ॥೪॥

ಯಸ್ಯ = ಯಾವ ಅನಂತಮೂರ್ತಿಯ; ಅಂಘ್ರಿಕಮಲ = ಪಾದಕಮಲಗಳ; ಅರುಣ = ನಸುಗೆಂಪಾದ; ವಿಶದ = ವಿಶಾಲವಾದ; ನಖಮಣಿಷಂಡಮಂಡಲೇಷು = ಮಣಿಸದೃಶಗಳಾದ ನಖಗಳ ಪಂಕ್ತಿಯಲ್ಲಿ; ಅಹಿಪತಯಃ = ಸರ್ಪನಾಯಕರು; ಸಾತ್ವತರ್ಷಭೈಃ ಸಹ = ನಾರಾದಾದಿ ಭಕ್ತವರೇಣ್ಯರೊಡಗೂಡಿ; ಏಕಾಂತಭಕ್ತಿ ಯೋಗೇನ = ಅನನ್ಯ ಭಕ್ತಿಭಾವದಿಂದ; ಅವನಮಂತಃ = ಬಾಗಿ ನಮಿಸುವಾಗ; ಪರಿಸ್ಫುರತ್‌ಕುಂಡಲ ಪ್ರಭಾಮಂಡಿತ ಅತಿಮನೋಹರಾಣಿ ಗಂಡಸ್ಥಲಾನಿ = ಹೊಳೆಯುವ ಕರ್ಣಕುಂಡಲಗಳಿಂದ ಅಲಂಕೃತಗಳಾಗಿ ಅತಿ ಮನೋಹರವಾಗಿ ಕಾಣುವ ತಮ್ಮ ಕಪೋಲಗಳನ್ನು; ಪ್ರಮುದಿತಮನಸಃ = ಆನಂದ ತುಂದಿಲ ಮಾನಸರಾಗಿ; ವಿಲೋಕಯಂತಿ ಖಲು = ನೋಡಿಕೊಳ್ಳುತ್ತಾರೆಂಬುದು ನಿಜ.

ಪಾದಕಮಲಗಳ ವರ್ಣನೆ ಇರುವುದರಿಂದ, ನರಸಿಂಹನಂತೆ ಸಂಕರ್ಷಮೂರ್ತಿಯು ನರನಾಗನೆಂದು ಭಾವಿಸಬೇಕು. ಸಂಕರ್ಷಣ ಮೂರ್ತಿಯ ಕನ್ನಡಿಯಂತಹ ಉಗುರುಗಳಲ್ಲಿ ಭಕ್ತರು ತಮ್ಮ ಸುಂದರ ವದನಾರವಿಂದಗಳನ್ನು ಕಂಡು ಹೆಮ್ಮೆ ಪಡುವರೆಂದು ತಿಳಿಯಬಾರದು. ಆ ದಿವ್ಯ ಮೂರ್ತಿಯ ನಖದ ಪ್ರಭಾವವು ತಮ್ಮ ಸ್ವರೂಪಗಳನ್ನು ತೋರಿಸಿಕೊಡುವ ಬಿಂಬ ಕಾರ್ಯವೆಂದರಿತು, ಹೆಚ್ಚಿನ ಭಕ್ತಿಯಿಂದ ನಲಿದಾಡುವರೆಂಬುದು ನಿಜವಾದ ಅರ್ಥ.

ಸ ಏವ ಭಗವಾನನಂತೋಽನಂತಗುಣಾರ್ಣವ ಆದಿದೇವಃ
ಉಪಸಂಹೃತಾಮರ್ಷರೋಷವೇಗೋ ಲೋಕಾನಾಂಸ್ವಸ್ತಯ ಆಸ್ತೇ ॥೬॥

= ಪ್ರಳಯಕಾಲದಲ್ಲಿ ಕೋಪರೋಷಗಳನ್ನು ಪ್ರದರ್ಶಿಸಿದ ಆ ಅನಂತ ಗುಣಪೂರ್ಣನೂ ಆದಿದೇವನೂ ಆದ ಅನಂತಮೂರ್ತಿಯೇ, ಸ್ಥಿತಿಕಾಲದಲ್ಲಿ ರೋಷ ಕೋಪಗಳನ್ನು ಬಿಟ್ಟು ಲೋಕಗಳ ಕಲ್ಯಾಣವನ್ನು ಬಯಸುತ್ತಾ ಇದ್ದಾನೆ. ಈಗ.

ಪ್ರಳಯಕಾಲದಲ್ಲಿ ಕೋಪ ರೋಷಗಳು ಯಾರ ಮೇಲೆ? ಸುಜೀವಗಳ ದುರಹಂಕಾರವನ್ನು ಯಾವ ದೈತ್ಯರ ಮುಖಾಂತರ ಏರ್ಪಡಿಸಿದ್ದನೋ, ಆ ದೈತ್ಯರ ಮೇಲೆ.

ಸ ಏಷ ಏವಮನುಶ್ರುತೋ ಧ್ಯಾಯಮಾನೋ ಮುಮುಕ್ಷೂಣಾಮನಾದಿ
ಕಾಲಕರ್ಮವಾಸನಾಗ್ರಥಿತಮವಿದ್ಯಾಮಯಂ ಹೃದಯಗ್ರಂಥಿಂ

ಸತ್ವರಜಸ್ತಮೋ ಮಯಮಂತರ್ಹೃದಯಂ ಗತ ಆಶು
ನಿರ್ಭಿನತ್ತಿತಸ್ಯಾನುಭಾವಾನ್ ಭಗವಾನ್ ಸ್ವಾಯಂಭುವೋ ನಾರದಃ
ಸಹ ತುಂಬುರುಣಾ ಸಭಾಯಾಂ ಬ್ರಹ್ಮಣಃಸಂಶ್ಲೋಕಯಾ ಮಾಸ ॥೮॥

= ಈ ಸಂಕರ್ಷಣ ಮೂರ್ತಿಯೇ, ತನ್ನ ಮಹಿಮೆಯನ್ನು ಕೇಳಿತಿಳಿದು ಧ್ಯಾನಮಾಡುವ ಮುಕ್ತಿಯೋಗ್ಯ ಜೀವರ ಅನಾದಿಕಾಲದ ಕರ್ಮಸಂಬಂಧಿಯಾದ ಅವಿದ್ಯಾರೂಪ ಹೃದಯದೊಳಹೊಕ್ಕು, ಆ ತ್ರಿಗುಣಸಂಬಂಧಿಯಾದ ಗಂಟನ್ನು ಬಿಚ್ಚಿ ಹಾಕುತ್ತಾನೆ; ಜೀವರನ್ನು ಬಂಧನಮುಕ್ತರನ್ನಾಗಿ ಮಾಡುತ್ತಾನೆ. ಆ ಮಹಾನುಭಾವನ ಈ ದಿವ್ಯ ಅನುಗ್ರಹದ ಪರಿಯನ್ನು ಕುರಿತು, ಬ್ರಹ್ಮ ಮಾನಸಪುತ್ರರಾದ ನಾರದರು ತಂಬುರರೊಡಗೂಡಿ ಬ್ರಹ್ಮದೇವರ ಸಭೆಯಲ್ಲಿ ಹಾಡಿ ಹೊಗಳಿರುವರು.

ಮೂರ್ಧನ್ಯರ್ಪಿತಮಣುವತ್ಸಹಸ್ರ ಮೂರ್ಧ್ನೋ
ಭೂಗೋಳಂ ಸಗಿರಿ ಸರಿತ್ಸಮುದ್ರ ಸತ್ವಂ ।

ಆನಂತ್ಯಾದನಿಮಿತ ವಿಕ್ರಮಸ್ಯಭೂಮ್ನಃ
ಕೋ ವೀರ್ಯಾಣ್ಯಧಿಗಣಯೇತ್ಸಹಸ್ರ ಜಿಹ್ವಃ ॥೧೨॥

ಸಹಸ್ರಮೂರ್ಧ್ನೋಃ = ಸಹಸ್ರ ಹೆಡೆಗಳುಳ್ಳ; ಮೂರ್ಧನಿ = ಅನಂತನ ಒಂದು ಹೆಡೆಯ ಮೇಲೆ; ಸಗಿರಿಸರಿತ್ಸಮುದ್ರ ಸತ್ವಂ = ಪರ್ವತಗಳು, ನದಿಗಳು, ಸಮುದ್ರಗಳು ಮತ್ತು ಜೀವಕೋಟಿಗಳಿಂದ ತುಂಬಿದ; ಭೂಗೋಳಂ = ಬ್ರಹ್ಮಾಂಡವು; ಅಣುವತ್ ಅರ್ಪಿತಂ = ಅತ್ಯಲ್ಪವಾದ ಅಣುವಿನಂತೆ ನಿಂತಿದೆ; ಆನಂತ್ಯಾತ್ ಗಣನೆಗೆ ಸಿಗದಿರುವ; ಭೂಮ್ನಃ = ಅಣು ಮಹತ್ತುಗಳಲ್ಲಿ ಪೂರ್ಣತ್ವದಿಂದಲೇ ಇರುವ; ಅಮಿತ ವಿಕ್ರಮಸ್ಯ = ಅಗಣಿತ ವಿಜಯಶಾಲಿಯಾದವನ; ವಿರ್ಯಾಣಿ ಗುಣವಿಶೇಷಗಳನ್ನೂ; ಸಹಸ್ರಜಿಹ್ವಃ = ಸಾವಿರಾರು ನಾಲಗೆಗಳುಳ್ಳವನಾದರೂ; ಕಃ ಅಧಿಗಣಯೇತ್ = ಯಾವನು ತಾನೇ ಎಣಿಸಿ ಹೇಳಬಲ್ಲ?

ಹಿಂದೆ, ಭೂಮಂಡಲವು ಒಂದೇ ಹೆಡೆಯ ಮೇಲೆ ಕೇವಲ ಸಾಸುವೆ ಕಾಳಿನಷ್ಟು ಹಗುರವಾಗಿರುವುದೆಂದು ಹೇಳಿ, 'ಭೂಗೋಳವು' ಅನಂತನ ಒಂದು ಹೆಡೆಯ ಮೇಲೆ ಅಣುವಿನಂತೆ ಇರುವುದೆಂದು ಇಲ್ಲಿ ವರ್ಣಿಸಿರುವುದು ರಹಸ್ಯ ಪೂರ್ಣವಾಗಿದೆ. ಅನಂತನಿಂದ ಅಭಿನ್ನನಾದ ಕೂರ್ಮರೂಪೀ ವಿಷ್ಣುವು, ಇಡೀ ಬ್ರಹ್ಮಾಂಡವನ್ನು ಅಣುಕಣೋಪಮವಾಗಿ ತನ್ನ ಬೆನ್ನಿನ ಮೇಲೆ ಹೊತ್ತಿರುವನೆಂದು ಇಲ್ಲಿ ವರ್ಣಿಸಿದ್ದಾರೆ.

ಇದೇ ರೀತಿಯಿಂದ, ಬ್ರಹ್ಮಾಂಡದ ಒಳಗೆ, ಅನಂತನ ಕೃಪಾಕಟಾಕ್ಷಪಾತ್ರನಾದ ಆದಿಶೇಷನಿಗೆ ಆಧಾರವಾಗಿ ಕೂರ್ಮರೂಪೀ ಮುಖ್ಯಪ್ರಾಣನಿರುವನೆಂದೂ, ಅವನಿಗೆ

ಆಧಾರವಾಗಿ ಆದಿ ಶಕ್ತಿ ಇರುವಳೆಂದೂ ಅವಳಿಗೂ ಆಧಾರನಾಗಿ ಆದಿವರಾಹ ನಿರುವನೆಂದೂ ಪುರಾಣಾಂತರಗಳ ವರ್ಣನೆಯಿಂದ ಭಾವಿಸಬೇಕು.

**ಏತಾಹ್ಯೇವ ನೃಭಿರುಪಗಂತವ್ಯಾ ಗತಯೋ ಯಥಾಕರ್ಮವಿನಿರ್ಮಿತಾ**
**ಯಥೋಪದೇಶ ಮನುವರ್ಣಿತಾಃ ಕಾಮಾನ್ ಕಾಮಯಮಾನೈಃ**
**॥೧೪॥**

ಕಾಮಾನ್ ಕಾಮಯಮಾನೈಃ ನೃಭಿಃ = ಮಾನವರಾಗಿ ಜನಿಸಿ ಬಗೆಬಗೆಯ ಅಪೇಕ್ಷೆಗಳನ್ನು ಹೊಂದಿರುವರಿಂದ; ಉಪಗಂತವ್ಯಾಃ = ತಿಳಿಯಲ್ಪಡಬೇಕಾದ ವಿಷಯಗಳು; ಏತಾಹಿ ಏವ = ಇದುವರೆಗೆ ಹೇಳಿದವುಗಳು ಮಾತ್ರವೇ; ಕರ್ಮವಿನಿರ್ಮಿತಾಗತಯಃ = ಕರ್ಮಾನುಸಾರವಾಗಿ ಹೋಗಿಬರಬೇಕಾದ ಭೂಸ್ವರ್ಗ ನರಕಾದಿ ಸ್ಥಾನಮಾನಗಳು; ಯಥಾ ಉಪದೇಶಂ = ನಮ್ಮ ತಂದೆಯಿಂದ ನನಗೆ ಉಪದೇಶವಾದಂತೆ; ವರ್ಣಿತಾಃ = ವಿವರಿಸಲ್ಪಟ್ಟವು. ವಿಶ್ವದ ರಹಸ್ಯವನ್ನು ಕುರಿತಾಗಿ, ಮಾನವರು ಎಷ್ಟೇ ಬುದ್ಧಿವಂತರಾದರೂ, ಅವರ ಕಲ್ಪನೆಗಳು ಭ್ರಾಂತಿ ಮೂಲವಾಗಿರುತ್ತವೆ. ಆದುದರಿಂದ, ವೇದವ್ಯಾಸದೇವರಿಂದ ನೇರವಾಗಿ ಉಪದೇಶ ಪಡೆದ ಶ್ರೀ ಶುಕಾಚಾರ್ಯರ ಮಾತುಗಳನ್ನೇ ನಂಬುವುದು ನಿಜವಾದ ಬುದ್ಧಿವಂತಿಕೆ.

**ಏತಾವತೀರ್ಹಿ ರಾಜನ್ ಪುಂಸಃ ಪ್ರವೃತ್ತಿ ಲಕ್ಷಣಸ್ಯಧರ್ಮಸ್ಯ**
**ವಿಪಾಕಗತಯ ಉಚ್ಚಾವಚಾ ವಿಸದೃಶಾ ಯಥಾಪ್ರಶ್ನಂ ವ್ಯಾಚಖ್ಯೇ**
**ಕಿಮನ್ಯತ್ಕಥಯಾಮ ಇತಿ ॥೧೫॥**

ರಾಜನ್ = ಅಯ್ಯಾ ಪರೀಕ್ಷಿದ್ರಾಜಾ; ಪುಂಸಃ = ಪುರುಷನ; ಪ್ರವೃತ್ತಿ ಲಕ್ಷಣಸ್ಯ ಧರ್ಮಸ್ಯ = ಆಯಾ ಜನ್ಮದ ಅಪೇಕ್ಷೆಗಳಿಗನುಗುಣವಾಗಿ ಆಚರಿಸುವ ಪ್ರವೃತ್ತಿ ಧರ್ಮವೆಂಬುದರ; ಉಚ್ಚಾವಚಾಃ = ಉತ್ತಮವಾದ ಅಥವಾ ನೀಚವಾದ; ವಿಸದೃಶಾಃ = ಪರಸ್ಪರ ಭಿನ್ನಗಳಾದ; ವಿಪಾಕಗತಯಃ = ಸಾಧನೆಗಳಿಗೆ ತಕ್ಕಂತೆ ಹೋಗಿಬರಬಹುದಾದ ಸ್ಥಾನಗಳ ವಿಚಾರವನ್ನು; ಯಥಾಪ್ರಶ್ನಂ = ನಿನ್ನ ಪ್ರಶ್ನೆಗಳಿಗೆ ಅನುಗುಣವಾಗಿ; ವ್ಯಾಚಖ್ಯೇ = ವಿವರಿಸಿದೆನು; ಕಿಂ ಅನ್ಯತ್ ಕಥಯಾಮಃ = ಇನ್ನೂ ಏನನ್ನು ಹೇಳೋಣ; ಇತಿ = ಹೀಗೆಂದು ಶುಕಾಚಾರ್ಯರು ನುಡಿದರು.

**"ಶ್ರೀಕೃಷ್ಣಾರ್ಪಣಮಸ್ತು"**

---

# ಶ್ರೀಮದ್ಭಾಗವತ
# ಅಧ್ಯಾಯ – ಇಪ್ಪತ್ತಾರು
# ನರಕಗಳ ವರ್ಣನೆ ಮತ್ತು ಉಪಸಂಹಾರ

**ರಾಜೋವಾಚ:–** ಪರೀಕ್ಷಿದ್ರಾಜರು ಕೇಳಿದರು.

**ಮಹರ್ಷ ಏತದ್ವೈಚಿತ್ರ್ಯಂ ಲೋಕಸ್ಯ ಕಥಮಿತಿ** ॥೧॥

ಮಹರ್ಷೇ = ಶುಕಮಹಾಮುನಿಗಳೇ; ಲೋಕಸ್ಯ = ಲೋಕದಲ್ಲಿ ಕಂಡುಬರುವ; ಏತತ್ ವೈಚಿತ್ರ್ಯಂ = ಜನರ ನಡವಳಿಕೆಗಳಲ್ಲಿನ ಚಿತ್ರವಿಚಿತ್ರ ಬಗೆಗಳು; ಕಥಂ = ಯಾವ ಕಾರಣದಿಂದ? ಇತಿ = ಹೀಗೆಂದು ಕೇಳಬಯಸುತ್ತೇನೆ.

ಪ್ರವೃತ್ತಿ ಲಕ್ಷಣಧರ್ಮಗಳು, ಕರ್ಮವಿಪಾಕ ಗತಿಗಳು, ಎಂದು ಈ ಹಿಂದೆ ಹೇಳಿದ ವಿಷಯವನ್ನೇ ವಿಶದವಾಗಿ ತಿಳಿಸಬೇಕೆಂದು ಪರೀಕ್ಷಿದ್ರಾಜರು ಕೇಳಿದ್ದಾರೆ.

**ಋಷಿರುವಾಚ:–** ಶುಕಮಹರ್ಷಿಗಳು ಹೇಳಿದರು.

**ತ್ರಿಗುಣತ್ವಾತ್ಕರ್ತುಃ ಶ್ರದ್ಧಯಾಕರ್ಮಗತಯಃ ಪೃಥಗ್ವಿಧಾಃ ಸರ್ವಾ ಏವ ಸರ್ವಸ್ಯ ತಾರತಮ್ಯೇನ ಭವಂತಿ** ॥೨॥

ಕರ್ತುಃ = ತನಗೆ ಇಷ್ಟ ಬಂದಂತೆ ಮಾಡಬಲ್ಲೆನೆಂದು ಕ್ಕೊಂಡಿರುವ ಜೀವನ ನಡತೆಯು; ತ್ರಿಗುಣತ್ವಾತ್ = ಸ್ವಾತಿಕ, ರಾಜಸ, ತಾಮಸಗಳೆಂಬ ತ್ರಿವಿಧಗುಣಗಳ ಪ್ರಾಬಲ್ಯಕ್ಕನುಗುಣವಾಗಿರುವುದರಿಂದ; ಶ್ರದ್ಧಯಾ = ಆಯಾಕಾಲದ ಕರ್ಮಕ್ಕನು ಗುಣವಾಗಿ ಶ್ರದ್ಧೆಯು ಪ್ರಕಟವಾಗುವುದರಿಂದ; ಸರ್ವಾಃ ಕರ್ಮಗತಯಃ = ಪ್ರತಿಯೊಂದು ಕರ್ಮವೂ; ಪೃಥಗ್ವಿಧಾಃ ಏವ = ಬೇರೆ ಬೇರೆ ಬಗೆಯದೇ ಆಗಿರುತ್ತದೆ; ಸರ್ವಸ್ಯ = ಎಲ್ಲರಿಗೂ; ತಾರತಮ್ಯೇನ ಭವಂತಿ = ಅವರವರ ಕರ್ಮದ ಮೂಲ ಮತ್ತು ತಾತ್ಕಾಲಿಕ ಶ್ರದ್ಧೆಗಳಿಗನುಗುಣವಾಗಿ ಮೇಲುಕೀಳು, ಸುಖಕರ ಹೆಚ್ಚು, ಸುಖಕರ, ದುಃಖಕರ, ಹೆಚ್ಚು ದುಃಖಕರ ಮುಂತಾದ ವ್ಯತ್ಯಾಸಗಳಿಂದ ಕೂಡಿರುತ್ತವೆ.

ಭಗವದ್ಗೀತೆಯಲ್ಲಿ, "ಯೋಯಚ್ಛ್ರದ್ಧಃ ಸ ಏವಸಃ" ಎಂದು ಹದಿನೆಂಟನೇ ಶ್ರದ್ಧಾತ್ರಯ ವಿಭಾಗ ಯೋಗದಲ್ಲಿ ಹೇಳಿರುವ ಮಾತನ್ನು ಇಲ್ಲಿ ಅನ್ವಯಿಸಬೇಕು.

ಜೀವರು ಅವರವರ ಶ್ರದ್ಧೆಗಳಿಗೆ ತಕ್ಕಂತೆ ಸಾತ್ವಿಕರು (ಮುಕ್ತಿಯೋಗ್ಯರು), ರಾಜಸರು (ನಿತ್ಯ ಸುಖದುಃಖಭಾಗಿಗಳು) ಮತ್ತು ತಾಮಸರು (ನಿತ್ಯನಿರಯಭಾಗಿಗಳು) ಎಂದು ತ್ರಿವಿಧರಾಗಿರುವರು ಈ ಜೀವತ್ರೈವಿಧ್ಯವೆಂಬುದು ಭಗವದ್ಗೀತೆಯ 16, 17, 18ನೇ ಅಧ್ಯಾಗಳಲ್ಲಿ ಸ್ಪಷ್ಟಪಡಿಸಿರುವ ಅಂಶವೇ ಹೊರತು ಅದು ಶ್ರೀ ಮಧ್ವಾಚಾರ್ಯರ ಕಪೋಲಕಲ್ಪಿತವಲ್ಲ. ಇದು ಒಂದು ಮುಖ್ಯಾಂಶ. ಎರಡನೆಯದಾಗಿ, ಸಕಲಜೀವರೂ ಅನಾದಿ ಲಿಂಗಶರೀರಬದ್ಧರು. ರಮಾನಾರಾಯಣರು ಮಾತ್ರವೇ ನಿತ್ಯಮುಕ್ತರು. ಲಿಂಗಶರೀರಗಳು ತ್ರಿಗುಣಾತ್ಮಕಗಳಾಗಿದ್ದು, ಆ ಗುಣಗಳಿಗೆ ತಕ್ಕಂತೆ ಕರ್ಮಗಳನ್ನೆಸಗುವ ಲಕ್ಷಣಗಳು (ಕರ್ಮಬೀಜಗಳು) ಅಲ್ಲಿ ಅಡಗಿವೆ.

ಮೊಳೆಯುವ ಕರ್ಮಗಳಿಗೆ ಅನುಗುಣವಾಗಿಯೂ, ಆಯಾಕಾಲದ ಶ್ರದ್ಧೆಗೆ ಅನುಗುಣವಾಗಿಯೂ ಕರ್ಮಗತಿಗಳಲ್ಲಿ, ಫಲಾನುಭವಗಳಲ್ಲಿ ವ್ಯತ್ಯಾಸಗಳೂ, ತಾರತಮ್ಯಗಳೂ ಉಂಟೆಂದು ಶ್ರೀಶುಕಾಚಾರ್ಯರು ಹೇಳಿರುವರು.

ಜೀವರು ಅಸ್ವತಂತ್ರರು. ಕರುಣಾಶಾಲಿಯೂ ಸರ್ವತಂತ್ರ ಸ್ವತಂತ್ರನೂ ಆದ ಪರಮಾತ್ಮ, ಜೀವರನ್ನು ಸೃಷ್ಟಿಯಲ್ಲಿತರುವಾಗ, ಅವರಲ್ಲಿ ಅವರಂತೆ ತಾನು ತೋರಿಕೊಳ್ಳುತ್ತಾ, ಅವರಿಗೆ ಸುಖದುಃಖಗಳ ಅನುಭವ ಕೊಡುವುದಕ್ಕಾಗಿ ತಾನು ಸಂಕರ್ಷಣರೂಪದಿಂದ ಅಹಂಕಾರ ತತ್ತ್ವಕ್ಕೆ ಯಜಮಾನನಾಗಿ, 'ನಾನು' ಎಂಬುದಾಗಿ ತಾನೆಂದು, ಜೀವರು 'ನಾನು' ಎಂಬ ಅನುಭವ ಪಡೆಯುವ ಹಾಗೆ ಮಾಡುತ್ತಾನೆ. "ದೃಷ್ಟೃ ದೃಶ್ಯಯೋಃ ಸಂಕರ್ಷಣಮಭಿಮಾನಲಕ್ಷಣಂ ಯಂ ಸಂಕರ್ಷಣ ಮಿತ್ಯಾಚಕ್ಷತೇ" ಎಂದು ಇಪ್ಪತ್ತೈದನೇ ಅಧ್ಯಾಯದ ಆರಂಭದಲ್ಲಿ ಹೇಳಿರುವುದನ್ನು ಇಲ್ಲಿ ಅನ್ವಯಿಸಿ ತಿಳಿಯಬೇಕು. ಇದನ್ನೇ ಪರಮಾತ್ಮನ ಬಂಧಕ ಶಕ್ತಿ ಎನ್ನುವುದು. ಭವಬಂಧ ಮೋಚಕನೂ ಅವನೇ ಎಂಬುದನ್ನು ಅದೇ ಅಧ್ಯಾಯದ ೮ನೇ ಗದ್ಯದಲ್ಲಿ ಹೇಳಿರುವ ಮಾತುಗಳಿಂದ ಗ್ರಹಿಸಬಹುದು.

ಜೀವರ ಮೂಲಸ್ವಭಾವಗಳು ಹೇಗೇ ಇದ್ದರೂ, ಆಯಾಕಾಲದ ಸ್ವಾತಿಕ, ರಾಜಸ, ತಾಮಸ ಅಥವಾ ಮಿಶ್ರಕರ್ಮಗಳಿಗನುಗುಣವಾಗಿಯೂ, ತತ್ತತ್ಕಾಲದ ಶ್ರದ್ಧೆಗೆ ಅನುಗುಣವಾಗಿಯೂ ಕರ್ಮಗಳ ವೈವಿಧ್ಯವೂ, ಫಲತಾರತಮ್ಯವೂ ಏರ್ಪಡುವುದು.

ವೇನ, ದುರ್ಯೋಧನ, ಹಿರಣ್ಯಕಶಿಪು, ಬಲಿಚಕ್ರವರ್ತಿ, ದೂರ್ವಾಸರು, ಅಶ್ವತ್ಥಾಮಾಚಾರ್ಯರು, ಶುಕಾಚಾರ್ಯರು, ಧ್ರುವರಾಯರು, ಪ್ರಹ್ಲಾದರು ಮುಂತಾದವರು ಚರಿತ್ರೆಗಳನ್ನು ಪರಿಶೀಲಿಸಿದಾಗ ಕರ್ಮವೈವಿಧ್ಯಗಳೂ, ಶ್ರದ್ಧಾ ಭೇದಗಳೂ ಅವುಗಳ ಪರಿಣಾಮಗಳೂ ನಮಗೆ ಚೆನ್ನಾಗಿ ಗೋಚರಿಸುತ್ತವೆ.

ಅಥೇದಾನೀಂ ಪ್ರತಿಷಿದ್ಧ ಲಕ್ಷಣ ಸ್ಯಾಧರ್ಮಸ್ಯ ತಥೈವ ಕರ್ತುಃ
ಶ್ರದ್ಧಯಾ ವೈಸಾದೃಶ್ಯಾತ್ಕರ್ಮಫಲಂ ವಿಸದೃಶಂಭವತಿ
ಯಾಹ್ಯನಾದ್ಯವಿದ್ಯಯಾ ಕೃತಕಾಮಾನಾಂ ತತ್ಪರಿಣಾಮ ಲಕ್ಷಣಾಃ
ಸೃತಯಃ ಸಹಸ್ರಶಃ ಪ್ರವೃತ್ತಾಸ್ತಾಸಾಂ ಪ್ರಚುರ್ಯೇಣಾನು
ವರ್ಣಯಿಷ್ಯಾಮಃ ॥೩॥

ಪ್ರತಿಷಿದ್ಧಲಕ್ಷಣಸ್ಯ = ಶಾಸ್ತ್ರವಿರುದ್ಧಗಳಾದ; ಅಧರ್ಮಸ್ಯ = ಅಧರ್ಮ ಕಾರ್ಯಗಳ; ತಥಾ ಏವ = ಅದರಂತೆಯೇ; ಕರ್ತುಃ = ಜೀವನ; ಶ್ರದ್ಧಯಾ = ಶ್ರದ್ಧೆ, ಅಶ್ರದ್ಧೆ, ಔದಾಸೀನ್ಯ ಇತ್ಯಾದಿ ಕಾರಣಗಳಿಂದ; ವೈಸಾದೃಶ್ಯಾತ್ = ಕರ್ಮ ಗಳಲ್ಲಿ ವೈವಿಧ್ಯಗಳಿರುವುದರಿಂದ; ಫಲಂ = ಕರ್ಮಾನುಗುಣವಾಗಿ ಅನುಭವಿಸ ಬೇಕಾದಫಲವು; ವಿಸದೃಶಂ ಭವತಿ = ಬೇರೆ ಬೇರೆ ಬಗೆಯದೇ ಆಗಿರುತ್ತದೆ; ಯಾಃ ಹಿ ಅನಾದ್ಯವಿದ್ಯಾಯಾ ಕೃತ ಕಾಮಾನಾಂ = ಅನಾದಿಯಾಗಿ ಅಂಟಿರುವ ಅವಿದ್ಯೆಯ ಪರಿಣಾಮವಾಗಿ ಮಾಡಿದ ಯಾವ ಐಚ್ಛಿಕ ಕರ್ಮಗಳ; ಮತ್ತು, ತತ್ಪರಿಣಾಮ ಲಕ್ಷಣಾಃ ಯಾಃ ಸೃತಯಃ = ಅವುಗಳ ಪರಿಣಾಮವಾಗಿ ಅನುಭವಿಸಬೇಕಾದ ನರಕಯಾತನೆಗಳು ಯಾವುವು ಉಂಟೋ; ಸಹಸ್ರಶಃ ಪ್ರವೃತ್ತಾಃ = ಅವು ಸಹಸ್ರಾರು ಬಗೆಯಾಗಿವೆ; ತಾಸಾಂ = ಅವುಗಳನ್ನು ಕುರಿತು; ಅಥ ಇದಾನೀಂ ಪ್ರಾಚುರ್ಯೇಣ ಅನುವರ್ಣಯಿಷ್ಯಾಮಃ = ಈಗ ಮುಖ್ಯ ಮುಖ್ಯವಾದವುಗಳನ್ನು ಕುರಿತು ಮಾತ್ರ ವಿವರಿಸುತ್ತೇವೆ.

ನಾವು ಮಾಡಿದ ಪುಣ್ಯಪಾಪಗಳ ಫಲಗಳಲ್ಲಿ ಕೆಲವನ್ನು ನಾವು ಇಲ್ಲಿಯೇ ಅನುಭವಿಸುತ್ತೇವೆ; ಕೆಲವು ಮುಂದಿನ ಜನ್ಮಕ್ಕೆ ಕಾರಣವಾಗಿ ಆಗ ಫಲರೂಪಕ್ಕೆ ಬರುತ್ತವೆ. "ಅಂತಃ ಪ್ರಚ್ಛನ್ನ ಪಾಪಾನಾಂ ಶಾಸ್ತಾ ವೈವಸ್ವತೋಯಮಃ" ಎಂದ ಹಾಗೆ, ಗುಪ್ತವಾಗಿರುವ ಕೆಲವು ಪಾಪಗಳಿಗೆ ನರಕಯಾತನೆಯ ಶಿಕ್ಷೆ ನಿಗದಿಯಾಗಿರುತ್ತದೆ. ದುಃಖಾನುಭವದಿಂದ ಮುಕ್ತಿಯೋಗ್ಯರು ಬುದ್ಧಿ ಕಲಿಯಲಿ ಎಂಬುದು ಅದರ ಉದ್ದೇಶ.

ನಿಜವಾಗಿಯೂ ಬುದ್ಧಿವಂತರಾದವರು, ನರಕಯಾತನೆಯ ವರ್ಣನೆಯನ್ನು ಕೇಳಿಯೇ ಭಯಪಟ್ಟು, ಮುಂದೆ ಪಾಪಕಾರ್ಯಗಳನ್ನು ಮಾಡಬಾರದೆಂದು ಸಂಕಲ್ಪಿಸುವುದಲ್ಲದೆ, ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತಗಳನ್ನಾಚರಿಸಿ, ಪಾಪಫಲ ವಿಮುಕ್ತರಾಗುತ್ತಾರೆ.

**ರಾಜೋವಾಚ:**– ಪರೀಕ್ಷಿದ್ರಾಜರು ಕೇಳಿದರು.

**ನರಕಾನಾಮ ಭಗವನ್ ಕಿಂ ದೇಶ ವಿಶೇಷಾ ಅಥವಾ ಬಹಿಸ್ತ್ರೀಲೋಕ್ಯಾ**
**ಅಹೋಸ್ವಿದಂತರಾಲ ಇತಿ ||೪||**

ಭಗವನ್ = ಶುಕಮಹಾಮುನಿಗಳೇ; ನರಕಾನಮ ಕಿಂ ದೇಶ ವಿಶೇಷಾಃ = ನರಕಗಳೆಂಬುವು ಯಾವ ಪ್ರದೇಶಗಳಲ್ಲಿವೆ? ತ್ರಿಲೋಕ್ಯಾಃ ಬಹಿಃ, ಅಥವಾ, ಅಂತರಾಲೇ ಅಹೋ ಸ್ವಿತ್ = ಮೂರು ಲೋಕಗಳ ಒಳಗೇ ಇವೆಯೋ, ಅಥವಾ ಅವುಗಳಿಂದ ಹೊರಗೋ?

ಋಷಿರುವಾಚ:– ಶುಕಮುನೀಂದ್ರರು ಹೇಳಿದರು.

**ಅಂತರಾಲ ಏವತ್ರಿಜಗತ್ಯಾಂ**
**ದಿಶಿದಕ್ಷಿಣಸ್ಯಾಮಧಸ್ತಾದ್ಭೂಮೇರುಪರಿಷ್ಟಾಚ್ಚ**
**ಜಲಾದ್ಯಸ್ಯಾಮಗ್ನಿಷ್ವಾತ್ತಾದಯಃ ಪಿತೃಗಣಾ ದಿಶಿಸ್ವಾನಾಂ ಗೊತ್ರಾಣಾಂ**
**ಪರಮೇಣ ಸಮಾಧಿನಾ ಸತ್ಯಾಏವಾಶಿಷ ಆಶಾಸಾನಾ ನಿವಸಂತಿ ||೫||**

ದಕ್ಷಿಣಸ್ಯಾಂ ದಿಶಿ = ದಕ್ಷಿಣ ದಿಕ್ಕಿನಲ್ಲಿ; ತ್ರಿಜಗತ್ಯಾಂ ಅಂತರಾಲೇ ಏವ = ಮೂರು ಲೋಕಗಳ ಅಂತರ್ಗತವಾಗಿಯೇ; ಭೂಮೇಃ ಅಧಸ್ತಾತ್ = ಪಾತಾಳ ಲೋಕದ ಭೂಮಿಗಿಂತ ಕೆಳಗೆ; ಜಲಾತ್‌ಉಪರಿಷ್ಠಾತ್ ಚ = ಗರ್ಭೋದಕದ ಮಟ್ಟಕ್ಕಿಂತ ಮೇಲೆ, ನರಕ ಲೋಕಗಳು ಇವೆ. ಅಗ್ನಿಷ್ವಾತ್ತ ಆದಯಃ ಪಿತೃಗಣಾಃ = ಅಗ್ನಿಷ್ವಾತ್ತರೇ ಮೊದಲಾದ ಪಿತೃದೇವತಾ ಗಣಗಳವರು; ಸ್ವಾನಾಂ ಗೋತ್ರಾಣಾಂ ದಿಶಿ = ತಮ್ಮ ಗೋತ್ರಜರು ನರಕಯಾತನೆಗಳನ್ನು ಅನುಭವಿಸುವ ಕಡೆಗಳಲ್ಲಿ; ಪರಮೇಣ ಸಮಾಧಿನಾ = ಭಗವದ್ಧ್ಯಾನ ಪರರಾಗಿ; ಸತ್ಯಾಶಿಷಃ ಆಶಾಸಾನಾ ಏವ = ಶುಭವನ್ನು ಹಾರೈಸುತ್ತಲೇ; ನಿವಸಂತಿ = ಆ ಬಳಿಯಲ್ಲಿ ಇರುತ್ತಾರೆ.

ನಮಗೆ ಏನಾದರೂ ವಿಶೇಷ ಪುಣ್ಯಫಲ ದೊರೆತಾಗ, 'ಅದು ನಮ್ಮ ಹಿರಿಯರ ಆಶೀರ್ವಾದ ಫಲ' ಎಂದು ಹೇಳುವ ರೂಢಿಯುಂಟಲ್ಲವೇ! ಆಯಾ ಪಿತೃವರ್ಗದ ಗೋತ್ರೋತ್ಪನ್ನರಾದವರಲ್ಲಿ ಅವರಿಗೆ ಮಮತೆ ಇರುವಂತೆ ಮಾಡಿರುವ ಭಗವಂತನ ಕಾರುಣ್ಯವು ಸ್ಮರಣೀಯವೇ ಸರಿ. ನರಕಯಾತನೆಯ ಬಿಸಿ ಕಡಿಮೆಯಾಗಲಿ, ಶಿಕ್ಷೆಯಿಂದ ಬೇಗ ಬಿಡುಗಡೆಯಾಗಲಿ ಎಂದು ಪಿತೃದೇವತೆಗಳು ಹಾರೈಸುವರಂತೆ. ಇದರ ಪರಿಣಾಮ, ಸದ್ಬುದ್ಧಿಯ ಉದಯ.

**ಯತ್ರಹವಾವ ಭಗವಾನ್ ಪಿತೃರಾಜೋ ವೈವಸ್ವತಃ ಸ್ವವಿಷಯಂ**
**ಪ್ರಾಪಿತೇಷು ಸ್ವಪುರುಷೈರ್ಜಂತುಷುಯಥಾಕರ್ಮಾವದ್ಯಂ**

ದೋಷಮೇವಾನುಲ್ಲಂಘಿತ ಭಗವಚ್ಛಾಸನಃ ಸಗಣೋದಮಂ ಧಾರಯತಿ ॥೬॥

ಯತ್ರಹವಾವ = ಶಾಸ್ತ್ರೋಕ್ತಿಗಳಂತೆ ನಿಜವಾಗಿಯೂ ಯಾವ ಆ ಪ್ರದೇಶದಲ್ಲಿ; ವೈವಸ್ವತಃ = ವಿವಸ್ವಾನ್ನಾಮಕ ಸೂರ್ಯಪುತ್ರನಾದ; ಭಗವಾನ್ ಪಿತೃರಾಜಃ = ಪಿತೃಗಳಿಗೆಲ್ಲಾ ಅಧಿಪತಿಯೂ ಗುಣವಿಶಿಷ್ಟನೂ ಆದ ಯಮಧರ್ಮರಾಯನು; ಸ್ವಪುರುಷೈಃ ಪ್ರಾಪಿತೇಷು = ತನ್ನ ದೂತರಿಂದ ಕರೆತರಲ್ಪಟ್ಟ; ಸಂಪರೇತೇಷು ಜಂತುಷು = ಮರಣ ಹೊಂದಿದ ಜೀವರಲ್ಲಿ; (ದೇಹಕ್ಕೆ ಮರಣ-ಜೀವರಿಗಲ್ಲ); ದೋಷಂ ಅವದ್ಯಂ ಕರ್ಮ ಯಥಾತಥಾ = ಮಾಡಬಾರದ ದುಷ್ಟ ಕರ್ಮಗಳನ್ನು ಮಾಡಿದುದಕ್ಕೆ ತಕ್ಕಂತೆ; ಅನುಲ್ಲಂಘಿತ ಭಗವತ್ ಶಾಸನಃ ಏವ = ಭಗವಂತನು ಏರ್ಪಡಿಸಿದ ಕಟ್ಟಳೆಗಳನ್ನು ಮೀರದೆಯೇ; ಸಗಣಃ = ತನ್ನ ಪರಿವಾರದವರ ಮೂಲಕ; ದಮಂ ಧಾರಯತಿ = ಶಿಕ್ಷೆಗಳನ್ನು ವಿಧಿಸುತ್ತಾನೆ.

ಪುಷ್ಕರ ದ್ವೀಪದ ಮಾನಸೋತ್ತರ ಪರ್ವತದ ಮೇಲೆ, ದಕ್ಷಿಣದಿಕ್ಕಿನಲ್ಲಿ ಯಮಧರ್ಮರಾಯರ ರಾಜಧಾನಿಯಾದ ಸಂಯಮನೀ ಪುರವಿರುವುದು. ಆ ದ್ವೀಪದಂಚಿನಲ್ಲಿ ಒಂದು ಮಹಾಗರ್ತವು ಅಷ್ಟದಿಗ್ಗಜಗಳ ಪಂಕ್ತಿಯ ನೇರಕ್ಕೆ ಇಳಿದಿರುವುದು. ಅಲ್ಲೊಂದು ಕಡೆ ಯಮಸದನವಿರುವುದು. ಆ ಪ್ರದೇಶದಿಂದ ಮುಂದೆ, ಅದೇ ನೇರದಲ್ಲಿ ಇಪ್ಪತ್ತೆಂಟು ಪ್ರಸಿದ್ಧ ನರಕಗಳು ದಕ್ಷಿಣ ದಿಕ್ಕಿನಲ್ಲಿ ಹಬ್ಬಿರುವುವು. ಸ್ವರ್ಗಲೋಕದಲ್ಲಿಯೂ ಪುಣ್ಯಜೀವಿಗಳನ್ನು ಸ್ವಾಗತಿಸುವುದಕ್ಕೆ ಯಮಧರ್ಮರಾಯರ ಪಟ್ಟಣವೊಂದು ಇರುವುದಂತೆ.

ತತ್ರಹೈಕೇ ನರಕಾನೇಕವಿಂಶತಿಂ ಗಣಯಂತಿ ಅಥ ತಾಂಸ್ತೇ
ರಾಜನ್ನಾಮರೂಪಲಕ್ಷಣತೋಽನುಕ್ರಮಿಷ್ಯಾಮಸ್ತಾಮಿಸ್ರೋಽನ್ಧತಾಮಿಸ್ರೋ
ರೌರವೋ ಮಹಾರೌರವಃ ಕುಂಭೀಪಾಕಃ ಕಾಲಸೂತ್ರಮಸಿಪತ್ರವನಂ
ಸೂಕರಮುಖಮಂಧಕೂಪಃ ಕೃಮಿಭೋಜನಃ
ಸಂದಂಶಸ್ತಪ್ತಸೂರ್ಮಿರ್ವಜ್ರ ಕಂಟಕಶಾಲ್ಮಲೀ ವೈತರಣೀಪೂಯೋದಃ
ಪ್ರಾಣರೋಧೋ ವಿಶಸನಂ ಲಾಲಾಭಕ್ಷಃ
ಸಾರಮೇಯಾದನಮವೀಚಿರಯಃ ಪಾನಮಿತಿ । ಕಿಂಚಕ್ಷಾರಕರ್ದಮೋ
ರಕ್ಷೋಗಣ ಭೋಜನಃ ಶೂಲಪ್ರೋತೋ
ದಂದಶೂಕೋಽವಟನಿರೋಧನಃ ಪರ್ಯಾವರ್ತನಃ ಸೂಚೀ
ಮುಖಮಿತ್ಯಷ್ಟಾವಿಂಶತಿರ್ನರಕಾಃ ವಿವಿಧಯಾತನಾಭೂಮಯಃ ॥೭॥

= ಕೆಲವರು ನರಕಗಳು ಇಪ್ಪತ್ತೊಂದು ಎಂದು ಹೇಳುವರು ಅವು ಯಾವುವೆಂದರೆ (೧) ತಾಮಿಸ್ರ (೨) ಅಂಧತಾಮಿಸ್ರ (೩) ರೌರವ (೪) ಮಹಾರೌರವ (೫) ಕುಂಭೀಪಾಕ (೬) ಕಾಲಸೂತ್ರ (೭) ಅಸಿಪತ್ರವನ (೮) ಸೂಕರಮುಖ (೯) ಅಂಧಕೂಪ (೧೦) ಕೃಮಿಭೋಜನ (೧೧) ಸಂದಂಶ (೧೨) ಸಪ್ತಸೂರ್ಮಿ (೧೩) ವಜ್ರಕಂಟಕ ಶಾಲ್ಮಲೀ (೧೪) ವೈತರಣೀ (೧೫) ಪೂಯೋದಾ (೧೬)ಪ್ರಾಣರೋಧ (೧೭) ವಿಶಾಸನ (೧೮) ಲಾಲಾಭಕ್ಷ (೧೯) ಸಾರಮೇಯಾದನ (೨೦) ಅವೀಚಿ (೨೧) ಅಯಃಪಾನ.

ಇವುಗಳಲ್ಲದೆ, (೨೨) ಕ್ಷಾರಕರ್ದಮ (೨೩) ರಕ್ಷೋಗಣಭೋಜನ (೨೪) ಶೂಲಪ್ರೋತ (೨೫) ದಂದಶೂಕ (೨೬) ಅವಟ ನಿರೋಧನ (೨೭) ಪರ್ಯಾವರ್ತನ (೨೮) ಸೂಚೀಮುಖ.

ಹೀಗೆ ಇಪ್ಪತ್ತೆಂಟು ಪ್ರಸಿದ್ಧ ಯಾತನಾಭೂಮಿಗಳುಂಟು.

**ಏವಂ ವಿಧಾ ನರಕಾಯಮಾಲಯೇ ಸಂತಿ ಶತಶಃ ಸಹಸ್ರಶಸ್ತೇಷು**
**ಸರ್ವೇಷುಚ ಸರ್ವಏವಾಧರ್ಮವರ್ತಿನೋ ಯೇ ಕೇಚಿದಿಹೋದಿತಾ**
**ಅನುದಿತಾಶ್ಚಾವನಿಪತೇ ಪರ್ಯಾಯೇಣ ವಿಶಂತಿ ತಥೈವ**
**ಧರ್ಮಾನುವರ್ತಿನ ಇತರತ್ರ ಇಹತು ಪುನರ್ಭವೇ ತ**
**ಉಭಯಶೇಷಾಭ್ಯಾಂ ನಿವಿಶಂತಿ ॥೩೭॥**

ಅವನಿಪತೇ = ಪರೀಕ್ಷಿದ್ರಾಜಾ; ಏವಂ ವಿಧಾ ನರಕಾಃ = ಬಗೆಬಗೆಯ ಯಾತನೆಗಳನ್ನು ಕೊಡುವ ನರಕಗಳು; ಯಮಾಲಯೇ = ಯಮಲೋಕದಲ್ಲಿ; ಶತಶಃ ಸಹಸ್ರಶಃ ಸಂತಿ = ನೂರಾರು, ಸಾವಿರಾರು ಇವೆ; ಸರ್ವೇಷುಚ = ಆ ಎಲ್ಲವುಗಳಲ್ಲಿಯೂ; ಸರ್ವೇ ಏವ ಅಧರ್ಮವರ್ತಿನಃ = ಅಧರ್ಮಮಾರ್ಗಾನುವರ್ತಿಗಳಾದ ಎಲ್ಲರೂ; ಯೇ ಕೇಚಿತ್ ಇಹ ಉದಿತಾಃ = ಯಾರ ಯಾರ ವಿಷಯವನ್ನು ೮ರಿಂದ ೩೭ನೇ ಗದ್ಯದವರೆಗೂ ವಿವರಿಸಿದೆಯೋ; ಅನುದಿತಾಃ = ಹೇಳಲ್ಪಡದೇ ಇರುವವರೂ ಕೂಡ; ಪರ್ಯಾಯೇಣ = ಒಂದಾದ ಮೇಲೆ ಒಂದರಂತೆ; ವಿಶಂತಿ = ವಿವಿಧ ನರಕಗಳಲ್ಲಿ ಪ್ರವೇಶಿಸಿ ಯಾತನೆಗಳನ್ನು ಅನುಭವಿಸಲೇಬೇಕು. ತಥೈವ = ಅದೇ ರೀತಿಯಾಗಿ; ಧರ್ಮಾನುವರ್ತಿನಃ = ಪುಣ್ಯಕರ್ಮಗಳನ್ನಾಚರಿಸಿದವರು; ಇತರತ್ರ = ಸ್ವರ್ಗಾದಿಲೋಕಗಳಲ್ಲಿ ಸುಖಭೋಗಗಳನ್ನೂ ಅನುಭವಿಸುವರು; ತೇ = ಪಾಪಕರ್ಮಿಗಳು ಮತ್ತು ಪುಣ್ಯಗಳನ್ನಾಚರಿಸಿದವರು; ಉಭಯ ಶೇಷಾಭ್ಯಾಂ = ನರಕದಲ್ಲಿ ಅಥವಾ ಸ್ವರ್ಗದಲ್ಲಿ

ದುಃಖ ಸುಃಖಗಳನ್ನು ಅನುಭವಿಸಿದ ನಂತರ ಉಳಿದ ಕರ್ಮಗಳನ್ನಾಚರಿಸುವುದಕ್ಕಾಗಿ; ಇಹ = ಈ ಭೂಲೋಕದಲ್ಲಿ; ಪುನರ್ಭವೇ ನಿವಿಶಂತಿ ತು = ಮತ್ತೆ ಜನ್ಮವೆತ್ತಿ ಬರಲೇಬೇಕು.

ಅನುಭವದಿಂದ ಬುದ್ಧಿ ತಂದುಕೊಂಡು ಮುಂದಾದರೂ ಧರ್ಮಮಾರ್ಗದಲ್ಲಿ ನಡೆಯುವುದನ್ನು ಕಲಿಯಲಿ ಎಂಬುದು ಪುನರ್ಜನ್ಮಗಳ ಉದ್ದೇಶ. ಜನ್ಮಾಂತರಗಳ ನೆನಪು ಮೇಲ್ನೋಟಕ್ಕೆ ಉಳಿದಿರದಿದ್ದರೂ, ಅದು ಲಿಂಗಶರೀರದ ಮೂಲ ಮನಸ್ಸಿನಲ್ಲಿ ಸಂಗ್ರಹವಾಗಿ ಇದ್ದೇ ಇರುತ್ತದೆ; ಅಗತ್ಯವಾದ ಸಮಯದಲ್ಲಿ ನಮಗೆ ತಿಳಿಯದೆಯೇ ಉಪಯೋಗಕ್ಕೂ ಬರುತ್ತದೆ.

> **ನಿವೃತ್ತಿ ಲಕ್ಷಣ ಮಾರ್ಗ ಆದಾವೇವ ವ್ಯಾಖ್ಯಾತಃ ।। ಏತಾವಾನೇವಾಂಡ**
> **ಕೋಶೋ ಯಶ್ಚತುರ್ದಶಧಾ ಪುರಾಣೇಷು ವಿಕಲ್ಪಿತ ಉಪಗೀಯತೇ**
> **ಯತ್ತದ್ಭಗವತೋ ನಾರಾಯಣಸ್ಯ ಸಾಕ್ಷಾನ್ಮಹಾಪುರುಷಸ್ಯ**
> **ಸ್ಥವಿಷ್ಠಂರೂಪಮಾತ್ಮಮಾಯಾಗುಣಮಯಮನುವರ್ಣಿತಮಾದೃತಃ**
> **ಪಠತಿ ಶೃಣೋತಿಶ್ರಾವಯತಿ ಸ ಉಪಗೇಯಂ**
> **ಭಗವತಃಪರಮಾತ್ಮನೋಽ ಗ್ರಾಹ್ಯಮಪಿಶ್ರದ್ಧಾಭಕ್ತಿ ವಿಶುದ್ಧ ಬುದ್ಧಿರ್ವೇದ**
> **।।೩೮।।**

ನಿವೃತ್ತಿ ಲಕ್ಷಣ ಮಾರ್ಗಃ = ಸಂಸಾರದಲ್ಲಿ ವಿರಕ್ತಿಯನ್ನು ಹೊಂದಿ ಭಗವಂತನಲ್ಲಿ ಭಕ್ತಿಯನ್ನು ವೃದ್ಧಿಪಡಿಸಿಕೊಳ್ಳುವ ಮಾರ್ಗವನ್ನು ಕುರಿತು; ಆದೌ ಏವ ವ್ಯಾಖ್ಯಾತಃ = ಈ ಹಿಂದೆಯೇ (ಮೊದಲ ನಾಲ್ಕು ಸ್ಕಂಧಗಳಲ್ಲಿ) ವಿವರಿಸಲಾಯಿತು. ಏತಾವಾನ್ ಏವ ಅಂಡಕೋಶಃ = ತಿಳಿಯಬಹುದಾದಷ್ಟು ಇದುವರೆಗೆ (ಪಂಚಮಸ್ಕಂಧದಲ್ಲಿ) ಹೇಳಿದುದೆಲ್ಲಾ ಬ್ರಹ್ಮಾಂಡದೊಳಗಿನ ಸೃಷ್ಟಿಯ ವಿಚಾರವೇ ಆಗಿದೆ; ಯಃ = ಯಾವ ಬ್ರಹ್ಮಾಂಡವಿವರವು; ಪುರಾಣೇಷು = ಬೇರೆ ಬೇರೆ ಪುರಾಣಗಳಲ್ಲಿ; ಚತುರ್ದಶಧಾ = ಹದಿನಾಲ್ಕು ಲೋಕಗಳುಳ್ಳದ್ದೆಂಬುದಾಗಿ; ವಿಕಲ್ಪಿತಃ = ವಿಶೇಷರೀತಿಯಿಂದ ಭಾವಿಸಲ್ಪಟ್ಟು; ಉಪಗೀಯತೇ ವರ್ಣಿಸಲ್ಪಡುತ್ತದೆ; ಯತ್ ತತ್ = ಆ ಲೋಕಗಳ ಇರುವಿಕೆಯು; ಸಾಕ್ಷಾತ್ ಮಹಾಪುರುಷಸ್ಯ ಭಗವತೋನಾರಾಯಣಸ್ಯ = ನಾವು ಕಾಣಬಹುದಾದ, ಪುರೋಷೋತ್ತಮನಾದ ಭಗವಾನ್ ನಾರಾಯಣನ; ಸ್ಥವಿಷ್ಠಂರೂಪಂ = ಪ್ರಕೃತ್ಯಾತ್ಮಕ ರೂಪವು (ವಿರಾಡ್ರೂಪವು); ಆತ್ಮ ಮಾಯಾಗುಣಮಯಂ = ಮೇಲ್ನೋಟಕ್ಕೆ ಕೇವಲ ಜಡಾಕಾರದಿಂದ ಕಂಡರೂ, ನಿಜವಾಗಿ ಅದು ಆ ಭಗವಂತನ ಸಂಕಲ್ಪ ಶಕ್ತಿರೂಪವೇ

ಆಗಿರುವುದು; ಅನುವರ್ಣಿತಂ = ಇದುವರೆಗೆ ವರ್ಣಿಸಿದ ಆ ರೂಪವನ್ನನು ಕುರಿತು; ಆದೃತಃ ಪಠತಿ = ಯಾರು ಆದರ ಪೂರ್ವಕವಾಗಿ ಓದುವರೋ; ಶ್ರುಣೋತಿ = ಪುರಾಣಜ್ಞರಿಂದ ಕೇಳುವರೋ; ಶ್ರಾವಯತಿ = ಶ್ರವಣಮಾಡಿಸುವರೋ, ಅವರು; ಭಗವತಃ ಪರಮಾತ್ಮನಃ = ಸಕಲ ಗುಣಸಂಪನ್ನನಾದ ಪರಮಪುರುಷನ; ಉಪಗೇಯಂ = ಮಹಿಮೆಯನ್ನು; ಅಗ್ರಾಹ್ಯಂ ಅಪಿ = ಅದು ತಿಳಿಯಲು ಕಷ್ಟಸಾಧ್ಯವಾದರೂ; ಶ್ರದ್ಧಾಭಕ್ತಿ ವಿಶುದ್ಧ ಬುದ್ಧಿಃ = ಶ್ರದ್ಧೆ, ಭಕ್ತಿ ಮತ್ತು ವಿಜ್ಞಾನತತ್ವದಿಂದ ನಿರ್ಣೀತವಾದ ಬುದ್ಧಿಯುಳ್ಳವನಾದರೆ; ವೇದ = ಬಲ್ಲವನಾಗುತ್ತಾನೆ.

ಪಂಚಮಸ್ಕಂಧ ಭಾವತದಲ್ಲಿ ಭೂಲೋಕ, ಅಂತರಿಕ್ಷ ಲೋಕ ಮತ್ತು ಪಾತಾಳಾದಿ ಅಧೋಲೋಕಗಳನ್ನು ಕುರಿತವರ್ಣನೆಯು ಮಾತ್ರ ಇದೆ. ಸ್ವರ್ಗಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕಗಳ ವರ್ಣನೆ ಕಂಡುಬರುವುದಿಲ್ಲ. ಪುರಾಣಾಂತರಗಳಲ್ಲಿ ಹದಿನಾಲ್ಕು ಲೋಕಗಳ ವಿಚಾರ ವಿವರಗಳಿವೆ ಎಂಬುದನ್ನು, "ಪುರಾಣೇಷು ವಿಕಲ್ಪಿತಃ" ಎಂಬ ಮಾತಿನಿಂದ ತಿಳಿಸಿದ್ದಾರೆ. ಸಂಕಲ್ಪ ಮಾತ್ರದಿಂದ ಭಗವಂತನು ಬ್ರಹ್ಮಾಂಡಗತಲೋಕಗಳ ರೂಪವನ್ನು ತನ್ನಲ್ಲಿ ಕಲ್ಪಿಸಿಕೊಂಡು ಜಡರೂಪಗಳಲ್ಲಿ ಪ್ರವಿಷ್ಟನಾಗಿರುವುದರಿಂದ ಅವು ಇರತಕ್ಕವುಗಳಾಗಿವೆ.

ಮುಖ್ಯ ಪ್ರಾಣದೇವರು ವಿಜ್ಞಾನತತ್ತ್ವದ ಯಜಮಾನರು. ಅವರ ಅನುಗ್ರಹಕ್ಕೆ ಪಾತ್ರರಾದವರು ವಿಶುದ್ಧಬುದ್ಧಿಯುಳ್ಳವರು. ಜಡಗಳಂತರ್ಯಾಮಿಯಾದ ಭಗವದ್ರೂಪವನ್ನೂ ಸದ್ಬುದ್ಧಿಪ್ರೇರಕರಾದ ಅವರೇ ಕಂಡುಕಾಣಿಸಬೇಕು.

**ಶ್ರುತ್ವಾಸ್ಥೂಲಂ ತಥಾ ಸೂಕ್ಷ್ಮಂ ರೂಪಂ ಭಗವತೋ ಯತಿಃ ।**
**ಸ್ಥೂಲೇ ನಿರ್ಜಿತ ಮಾತ್ಮಾನಂ ಶನೈಃ ಸೂಕ್ಷ್ಮಂ ಧಿಯಾನಯೇದಿತಿ ॥೩೯॥**

ಭಗವತಃ = ಗುಣಪೂರ್ಣನಾದ ಪರಮಾತ್ಮನ; ಸ್ಥೂಲರೂಪಂ= ಜಗದ್ರೂಪವಾದ ಜಡಾತ್ಮಕರೂಪವನ್ನು ಕುರಿತು; ತಥಾ = ಅದೇ ರೀತಿಯಾಗಿ; ಸೂಕ್ಷ್ಮಂ ರೂಪಂ = ತನ್ನ ಸ್ವರೂಪಭೂತವೇ ಆದ ಸಂಕಲ್ಪಿತ ಜಗದ್ರೂಪವನ್ನು ಕುರಿತು; ಶ್ರುತ್ವಾ = ತಿಳಿದವರಿಂದ ಕೇಳಿ; ಯತಿಃ = ಸಾಧಕನಾದವನು; ಸ್ಥೂಲೇ ನಿರ್ಜಿತಂ ಆತ್ಮಾನಂ = ಸ್ಥೂಲ ರೂಪವರ್ಣನೆಯನ್ನು ಗ್ರಹಿಸಿ ಉತ್ತೀರ್ಣವಾದ ಮನಸ್ಸನ್ನು; ಶನೈಃ = ಕ್ರಮಕ್ರಮವಾಗಿ; ಸೂಕ್ಷ್ಮಂ =ಸಾಕ್ಷಾತ್ ಭಗವದ್ರೂಪವನ್ನು ಗ್ರಹಿಸಲು; ಧಿಯಾನಯೇತ್ = ನಿಶ್ಚಯಾತ್ಮಕ ಬುದ್ಧಿಯ ಬಲದಿಂದ ನಿಯೋಗಿಸಬೇಕು.

ಆ ಸೂಕ್ಷ್ಮರೂಪವು ಪಿಂಡಾಂಡರೂಪವಾದ ಸ್ವದೇಹದಲ್ಲಿಯೇ ಸಂಗ್ರಹವಾಗಿರುವುದನ್ನು ಚೆನ್ನಾಗಿ ಚಿಂತನೆಯಿಂದ ಗ್ರಹಿಸಿ, ಸ್ವಬಿಂಬದೊಡನೆ ಐಕ್ಯಚಿಂತನೆ ಮಾಡಿ, ಧ್ಯಾನಕ್ಕೆ ಅಳವಡಿಸಿಕೊಳ್ಳಬೇಕು. ಇದೇ ಸಾಧನೆಯು ಪರಮಪ್ರಯೋಜನ.

ಭೂ ದ್ವೀಪವರ್ಷಸರಿದದ್ರಿನಭಃ ಸಮುದ್ರ
ಪಾತಾಲ ದಿಙ್ನರಕ ಭಾಗಣ ಲೋಕಸಂಸ್ಥಾ ।
ಗೀತಾಮಯಾ ತವನೃಪಾದ್ಭುತ ಮೀಶ್ವರಸ್ಯ
ಸ್ಥೂಲಂ ವಪುಃ ಸಕಲಜೀವನಿಕಾಯಧಾಮ ॥೪೦॥

= ಅಯ್ಯಾ, ಪರೀಕ್ಷಿದ್ರಾಜಾ, ಭೂಮಂಡಲ, ಅದರ ಸಪ್ತ ದ್ವೀಪಗಳು, ವರ್ಷವಿಭಾಗಗಳು, ಅಲ್ಲಿನ ನದಿಗಳು, ಪರ್ವತಗಳು, ಆಕಾಶದ ಅವಧಿ, ಸಪ್ತಸಮುದ್ರಗಳು, ಪಾತಾಳಾದಿ ಲೋಕಗಳು, ದಿಕ್ಕುಗಳನ್ನು ಗುರುತಿಸುವ ಸಾಧನ, ನರಕಗಳ ಸನ್ನಿವೇಶ, ನಕ್ಷತ್ರ ಲೋಕದ ಸ್ಥಿತಿಗತಿಗಳಿಗೆ ಆಧಾರವಾದ ಕಾಲಚಕ್ರ – ಇವುಗಳು ಜಗದೀಶ್ವರನ ಸ್ಥೂಲಶರೀರಪ್ರಾಯವಾದುವು ಎಂಬ ದೃಷ್ಟಿಯಿಂದ ಇದುವರೆಗೆ ವರ್ಣಿಸಲಾಯಿತು. ಈ ಸ್ಥೂಲಶರೀರವು ಸಕಲಜೀವರಿಗೂ ಆಶ್ರಯ ಕೊಟ್ಟಿರುವ ಸಾಧನ ಭೂಮಿಯಾಗಿದೆ. ಇನ್ನೊಂದು ದೃಷ್ಟಿಯಿಂದ ಹೇಳುವುದಾದರೆ, ಜಗತ್ತಿನ ಸಕಲ ವಸ್ತುಗಳಲ್ಲಿಯೂ, ಸಕಲ ಜೀವರ ಹೃದಯಗಳಲ್ಲಿಯೂ ಆ ಶ್ರೀಹರಿಯು ಮನೆಮಾಡಿಕೊಂಡಿದ್ದಾನೆ.

ಇಲ್ಲಿಗೆ ಶ್ರೀಮದ್ಭಾಗವತ ಪಂಚಮಸ್ಕಂಧ ಸಮಾಪ್ತವಾಯಿತು.

॥ಶ್ರೀಕೃಷ್ಣಾರ್ಪಣಮಸ್ತು॥

ಅಸ್ಮದ್ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ
ಶ್ರೀಗೋಪಾಲಕೃಷ್ಣಃ ಪ್ರೀಯತಾಂಪ್ರೀತೋವರದೋಭವತು ॥

"ಭಗವಾನ್ ಸ್ವಕೃತೇನ ತುಷ್ಯೇತ್"

॥ ಅಸ್ಮದಿಷ್ಟೈಕ ಕಾರ್ಯಾಯ ಪೂರ್ಣಾಯ ಹರಯೇ ನಮಃ ॥

---

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| 259 | 8 | ವ್ಯಧೋಯಾ | ವ್ಯಥೋಯಾ |
| 268 | 27 | ಅಥಾತ್ | ಅರ್ಥಾತ್ |
| 271 | 12 | ವರ್ಜಿ | ವಜ್ರಿ |
| 279 | 10 | ಗೀರ್ಣೆಕ್ಷೇಷ್ವ | ಗೀರ್ಣೇಷ್ವ |
| 283 | 11 | ವ್ರಷಸ್ತ್ರಿಯೋ | ವ್ರಜಸ್ತ್ರಿಯೋ |
| 284 | 6 | ರೂಪೇಷ್ಟಿತರ್ಧೈ | ರೂಪೇಷ್ವಿತರೈ |
| 285 | 2 | ವ್ರಚೇಚ | ವ್ರಜೇಚ |
| 289 | 20 | ಪೋಹದೊಳಿಸು | ಮೋಹಗೊಳಿಸು |
| 289 | 22 | ತಂಡು | ಕಂಡು |
| 299 | 5 | ಗುರುದಕ್ಷಿಯ | ಗುರುದಕ್ಷಿಣೆಯ |
| 299 | 15 | ಸ್ವಯವರ | ಸ್ವಯಂವರ |
| 300 | 16 | ವಜ್ರಾದ್ರವತ್ತಂ | ವಜ್ರ್ಯಾದ್ರವತ್ತಂ |
| 301 | 6 | ಭರಿತ್ರ್ಯಾಃ | ಧರಿತ್ರ್ಯಾಃ |
| 303 | 13 | ಮುಖ್ಯಾಂತರ | ಮುಖಾಂತರ |
| 303 | 22 | ರಾಜಗುರುಗಳನ್ನು | ರಾಜರುಗಳನ್ನು |
| 307 | 11 | ಅಸಕಃ | ಅಸಕ್ತಃ |
| 308 | 3 | ಸಾಹೃದಃ | ಸೌಹೃದಃ |
| 308 | 7 | ಕ್ರೀಡಾಸಕ್ತನೇಂದು | ಕ್ರೀಡಾಸಕ್ತನೆಂದು |
| 310 | 10 | ಸ್ನತ್ವಾ | ಸ್ನಾತ್ವಾ |
| 310 | 26 | ಜಾತ್ಯೇತವಚನ | ಜಾತ್ಯೇಕವಚನ |
| 314 | 7 | ಶ್ರೀನಿಕತಂ | ಶ್ರೀನಿಕೇತಂ |
| 315 | 14 | ಆಸಸಾದ | ಆಸಸಾದ |
| 319 | 21 | ಮಾಡಿಕಟ್ಟು | ಮಾಡಿಕೊಟ್ಟು |
| 320 | 20 | ವೃಜನಂ | ವೃಜಿನಂ |

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| 335 | 21 | ಸಿರೋರತ್ನ | ಶಿರೋರತ್ನ |
| 338 | 4 | ಹಾಕುತ್ತದೆ | ಹಾಕುವನೋ |
| 342 | 4 | ನಿಶ್ರೇಯಸಾಯ = | ——— |
| 342 | 13 | ಆರ್ತನಃ | (ಇದು ಅಧೋಕ್ಷ |
| | | ಜನನಃ ಎಂಬುದರ ಹಿಂದೆ ಇರಬೇಕು) | |
| 370 | 10 | ಮಹತತ್ತ್ವಾದಂಡದಲ್ಲಿ | ಮಹತ್ತತ್ತ್ವಾಂಡದಲ್ಲಿ |
| 372 | 3 | ದರ್ಶವ | ದರ್ಶನ |
| 380 | 27 | ಯಾಜ್ಞಾತಾಃ | ಯಜ್ಞಾತಾಃ |
| 412 | 8 | ಸಾಂಖ್ಯಾನಃ | ಸಾಂಖ್ಯಾಯನಃ |
| 414 | 25 | ಉದೀರಯಾ | ಉದೀರಯಾಣಃ |
| | | ಸುಖಿಯನ್ನಾಗಿ ಮಾಡುತ್ತಾ | ಪ್ರೇರಿಸುತ್ತಾ |
| 417 | 23 | ವಿದ್ಯೂತಯನ್ನರ್ಕ | ವಿದ್ಯೋತಯನ್ನರ್ಕಃ |
| 458 | 2 | ತತ್ವ ವಿನ್ಮತಂ | ತತ್ವವಿನ್ಮತಂ |
| 462 | 17 | ಅಂಭಾಸಾ | ಅಂಭಸಾ |
| 473 | 18 | ಸತ್ತಮಃ | ಸತ್ತಮ |
| 476 | 21 | ದೃಶ್ಯೈತೇ | ದೃಶ್ಯಂತೇ |
| 487 | 19 | 60 ಲಕ್ಷ ಕಿ. ಮೀ | 6 ಲಕ್ಷ ಮೈಲಿ |
| 490 | 7 | ಸಂಮೃದ್ಧ | ಸಮೃದ್ಧ |
| 499 | 11 | ವಿಭೂತಿರೂಪಗಳು | ವಿಭೂತಿರೂಪಗಳ |
| 508 | 5 | ವಿಶೀರ್ಣೌ | ವಿಶೀರ್ಣಾ |
| 515 | 16 | ಲೋಕ ಕೆಳಗಿನ | ಕೆಳಗಿನ ಲೋಕಗಳನ್ನು |
| | | ಮುಟ್ಟಲು | ಮುಟ್ಟಲು |
| 515 | 26 | ಬಾಷ್ಪಕಲಾಯಾ | ಬಾಷ್ಪಕಲಯಾ |
| 516 | 21 | 11 ಲಕ್ಷ | 13 ಲಕ್ಷ |
| 519 | 11 | ವಗರ | ನಗರ |
| 524 | 23 | ಚತುರ್ಮಾರ್ತೇಃ | ಚತುರ್ಮೂರ್ತೇಃ |

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| 528 | 10 | ಪ್ರಜಾಪತೇ | ಪ್ರಜಾಪತೇಃ |
| 528 | 23 | ಮಕ್ಷಳು | ಮಕ್ಕಳು |
| 530 | 5 | ಅಹಸ್ಯು | ಅಹಸ್ಸು |
| 534 | 3 | ಲಕ್ಷಣಾಗ್ರಜಂ | ಲಕ್ಷ್ಮಣಾಗ್ರಜಂ |
| 535 | 24 | ವ್ಯಸಾನೀಶ್ವರಸ್ಯ | ವ್ಯಸನಾನೀಶ್ವರಸ್ಯ |
| 536 | 5 | ಸಂದರ್ಭಗಳು | ಸಂದರ್ಭಗಳಲ್ಲಿ |
| 546 | 23 | ಸಂಜ್ಞಾಶ್ವತ್ವಾರೋ | ಸಂಜ್ಞಾಶ್ಚತ್ವಾರೋ |
| 548 | 6 | ನಾಲ್ಕು ಲಕ್ಷ | ಎರಡು ಲಕ್ಷ |
| 548 | 8 | ಎಂಟು ಲಕ್ಷ | ನಾಲ್ಕು ಲಕ್ಷ |
| 549 | 17 | ಶ್ರುತಥರ | ಶ್ರುತಧರ |
| 553 | 9 | ಮಾವರನ್ನು | ಮೂವರನ್ನು |
| 555 | 2 | ದ್ವಿಗುಣಾಯಮಃ | ದ್ವಿಗುಣಾಯಾಮಃ |
| 555 | 11 | ಸ್ವದೂದಕೇಣ | ಸ್ವಾದೂದಕೇಣ |
| 555 | 22 | ಮೇರು | ಮೇರುಂ |
| 558 | 25 | ಸೂರ್ಯದಿನಾಂ | ಸೂರ್ಯಾದೀನಾಂ |
| 566 | 15 | ರಾರೋಹಣ್ಯೂವರೋಹಣ | ರಾರೋಹಣ್ಯಾವರೋಹಣ |
| 570 | 23 | ಪೂರ್ವಾಸ್ಮಾನ್ಮೇ | ಪೂರ್ವಸ್ಮಾನ್ಮೇ |
| 609 | 6 | ನಿಕೇತನಾನಾಮೇಕ | ನಿಕೇತನಾನಾಮನೇಕ |
| 611 | 19 | ಮಿಧುನೀ | ವಿಥುನೀ |
| 612 | 1 | ನಿರತರಾಗಿ | ನಿರತನಾಗಿ |

- ಸಪ್ತ ದ್ವೀಪ ಸಪ್ತ ಸಾಗರಗಳಲ್ಲಿ, ಜಂಬೂದ್ವೀಪದಂಚಿನಲ್ಲಿ ಭರತಖಂಡ (ನಮ್ಮ ಭೂಗೋಳ) ನಿಂತಿದೆ. ಅದು ಈಗಿನವರು ಹೇಳುವಂತೆ ಗ್ರಹವಲ್ಲ. ಮೇರುವಿಗೆ ಪ್ರದಕ್ಷಿಣೆಯಾಗಿ ಬರುವುದು ಸೂರ್ಯಾದಿ ಗ್ರಹಗಳು.
- ಸೂರ್ಯ, ಗ್ರಹರಾಜ; ಲೋಕಗಳ ಸೃಷ್ಟಿಸ್ಥಿತಿಗಳಿಗೆ ಮೂಲಪ್ರಾಯ.
- ಶಾಸ್ತ್ರಾರ್ಥಗಳ ತತ್ತ್ವನಿರೂಪಣೆ.
- ಎಲ್ಲವೂ ಪರಮ ವೈಜ್ಞಾನಿಕ.